॥ ಓಂ ಶ್ರೀ ಲಕ್ಷ್ಮೀ ತ್ರಿವಿಕ್ರಮಾಯ ನಮಃ ॥

॥ ಶ್ರೀ ರೇಣುಕಾ ದೇವಿ ಪ್ರಸನ್ನ ॥ ಶ್ರೀ ಲಕ್ಷ್ಮೀ ವೆಂಕಟೇಶಾಯ ನಮಃ ॥

# ಬೃಹತ್ ಪರಾಶರ ಹೋರಾಶಾಸ್ತ್ರಮ್

(ಕರ್ನಾಟಕ ಟೀಕಾ ಸಹಿತ)

ಓಂ


ಲೇಖಕರು

**ಜ್ಯೋತಿಷ್ಯ ವಿದ್ವಾನ್ ಶ್ರೀ ಆರ್.ಜೆ. ದೇಶಪಾಂಡೆ(ಕಲೂರ)**

ಎಂ.ಎ. (ಕನ್ನಡ), ಎಂ.ಎ. (ತತ್ವಶಾಸ್ತ್ರ), ಬಿ.ಇಡಿ., ಪಿ.ಜಿ.ಇ.ಡಿ., ಸಿ.ಐ.ಇ.ಎಲ್.ಎಫ್.

(ನಿರ್ದೇಶಕರು, ಅಖಿಲ ಕರ್ನಾಟಕ ಜ್ಯೋತಿರ್ವಿಜ್ಞಾನ ಸಂಸ್ಥೆ, ಬಾಗಲಕೋಟೆ)

ಗದ್ದನಕೇರಿ, ಬಾಗಲಕೋಟೆ - 587 102





ಪ್ರಕಾಶಕರು

**ಶ್ರೀನಿಧಿ ಪ್ರಕಾಶನ**

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

230, ಕಾಟನ್‌ಪೇಟೆ ಮುಖ್ಯರಸ್ತೆ

ಬೆಂಗಳೂರು - 560 053 ದೂರವಾಣಿ - 6800682

**Brihath Parashara Hora Shastram** - A Standard text of Astrology along with Kannada commentary, annotation & editing by **Sri R.J. Deshpande(Keloor)** and Published by Srinidhi Prakashana, Bangalore - 560 053. Phone : 6800682

ಹಕ್ಕುಗಳು : ಪ್ರಕಾಶಕರದ್ದು

ಪ್ರಥಮ ಮುದ್ರಣ : 2004

ಪುಟಗಳು : xx + 1012

ಬೆಲೆ : 325/ರೂ

ಮುಖಪುಟ ವಿನ್ಯಾಸ:
ಹನುಶ್ರೀ ಗ್ರಾಫಿಕ್ಸ್
ಕಾಟನ್‌ಪೇಟೆ, ಬೆಂಗಳೂರು-53 - -51221622

ಅಕ್ಷರ ಜೋಡಣೆ ಮತ್ತು ಪುಟ ವಿನ್ಯಾಸ:
ಅದಮ್ಯ ಡಿ.ಟಿ.ಪಿ. ಮತ್ತು ವೆಬ್ ಪುಟ ವಿನ್ಯಾಸ
ಬೆಂಗಳೂರು - 19.

ಮುದ್ರಕರು :
[illegible] ಪ್ರಿಂಟ್ಸ್
ಸೌರಾಷ್ಟ್ರಪೇಟೆ, ಬೆಂಗಳೂರು - 53

# ಅರ್ಪಣೆ

ನನ್ನ ಶ್ರೇಯೋಭಿವೃದ್ಧಿಗಾಗಿ ಆಶಿಸಿದ

ದಿ|| ಶೇಷಗಿರಿ ಆಚಾರ್ಯ ಕೃ. ಹೊಸೂರ (ಭಾವ)

ದಿ|| ಸುಶೀಲಾ ಬಾಯಿ ಹ. ಪುರೋಹಿತ (ಅತ್ತೆ)

ಹಾಗೂ

ದಿ|| ಸುಧಾ ಜಗನ್ನಾಥರಾವ್ ದೇಶಪಾಂಡೆ (ತಂಗಿ)

ಇವರುಗಳಿಗೆ.

-ಆರ್.ಜಿ. ದೇಶಪಾಂಡೆ

## ನಮ್ಮ ಸಂಸ್ಥೆಯ ಇನ್ನಿತರ ಜನಪ್ರಿಯ ಜ್ಯೋತಿಷ್ಯ ಪ್ರಕಟಣೆಗಳು

| ಪುಸ್ತಕ | ಲೇಖಕರು |
|---|---|
| ಜ್ಯೋತಿಷ್ಯ ಸರ್ವ ವಿಷಯಾಮೃತ | - ವೇ|| ಶ್ರೀ ಕಂತಪ್ಪ ಶಾಸ್ತ್ರಿ |
| ಪಂಚಪಕ್ಷಿ ಪ್ರಶ್ನ ಫಲಶಾಸ್ತ್ರ | - ವೇ|| ಶ್ರೀ ಕಂತಪ್ಪ ಶಾಸ್ತ್ರಿ |
| ಅನುಭವ ಲಗ್ನನಾಡಿ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಮುಹೂರ್ತ ದರ್ಶನ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಮಾಂದಿ ಮತ್ತು ಉಪಗ್ರಹಗಳ ಫಲಾಫಲಗಳು | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಜಾತಕದಲ್ಲಿ ಸೂಕ್ಷ್ಮಾಧಿಪತಿಗಳ ಫಲಾಫಲಗಳು | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಭವಿಷ್ಯ ನುಡಿಯುವ ಸಂಖ್ಯೆಗಳು | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ನಾಡೀ ಜ್ಯೋತಿಷ್ಯದ ಪ್ರಮುಖ ಸೂತ್ರಗಳು | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಗೋಪಾಲ ರತ್ನಾಕರ ಮತ್ತು ಜಾತಕ ಕಲಾನಿಧಿ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಜಾತಕ ಭಾವರತ್ನ ಮತ್ತು ನಾರದ ಜ್ಯೋತಿಷ್ಯ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಅಗಸ್ತ್ಯರ್ ನಾಡಿ ಮತ್ತು ಕಾಶ್ಯಪ ನಾಡಿ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಶುಕನಾಡೀ ಜ್ಯೋತಿಷ್ಯ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಜಾತಕದಲ್ಲಿ ಶನಿಪ್ರಭಾವ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಕೇರಳ ಜ್ಯೋತಿಷ್ಯ ದರ್ಶನ | - ವೇ||ಬ್ರ||ಶ್ರೀ ಗುಂಡೂರು ರಾಮಚಂದ್ರ ಶಾಸ್ತ್ರಿ |
| ಸಂಖ್ಯೆಯಿಂದ ಭವಿಷ್ಯ ತಿಳಿಯಿರಿ | - ಶ್ರೀ ಸುಬ್ರಹ್ಮಣ್ಯ ಶಾಸ್ತ್ರಿ |
| ಜಾತಕಾಮೃತ ರಸಾಯನ | - ಶ್ರೀ ಬಿ. ಮಂಜಯ್ಯ |
| ಕುಂಡಲೀ ಕೌಸ್ತುಭ | - ಶ್ರೀ ಬಿ. ಮಂಜಯ್ಯ |
| ಜ್ಯೋತಿಷ್ಯದ ಪ್ರಕಾರ ವ್ಯಾಪಾರ ವ್ಯವಹಾರ | - ಶ್ರೀ ಎಸ್. ಪ್ರಾಣೇಶ್ |
| ವೈಜ್ಞಾನಿಕ ದೃಷ್ಟಿಯಲ್ಲಿ ಕಾಳಸರ್ಪಯೋಗ | - ಶ್ರೀ ಆರ್.ವಿ. ದೇಶಪಾಂಡೆ |
| ಸಂಸ್ಕೃತ ಮಹೇಂದ್ರಮಾಲಾ | - ಟಿ. ಕೇಶವಯ್ಯ |

# ಕೃತಿಗೆ ಮೊದಲು

ಈ ಗ್ರಂಥದ ಭಾಷಾಂತರಕ್ಕೆ ಪ್ರಮುಖ ಕಾರಣಗಳು:

ಕೃತೆ ತು ಮಾನವೋ ಧರ್ಮಸ್ತ್ರೇತಾಯಾಂ ಗೌತಮಃ ಸ್ಮೃತಃ
ದ್ವಾಪರೆ ಶಾಂಖ ಲಿಖಿತ ಕಲೌ ಪರಾಶರ ಸ್ಮೃತಃ ॥

ಎಂದಿರುವುದರಿಂದ ಕಲಿಯುಗಕ್ಕೆ ಪರಾಶರರ ಸ್ಮೃತಿಯೇ ಮುಖ್ಯ ಎಂದಿರುವುದು.

ಅದರಲ್ಲಿ ಜ್ಯೋತಿಷ್ಯದಲ್ಲಿ ನಾರದ ಸ್ಮೃತಿ.

ಬ್ರಹ್ಮಾಚಾರ್ಯೊ ವಶಿಷ್ಠೋತ್ರಿರ್ಮನುಃ ಪೌಲಸ್ತ್ಯಲೋಮಶೌ ।
ಮರೀಚಿರಂಗಿರಾವ್ಯಾಸೋ ನಾರದೋ ಶೌನಕೋ ಭೃಗುಃ ॥
ಚ್ಯವನೋ ಯವನೋ ಗರ್ಗಃ ಕಶ್ಯಪಶ್ಚ ಪರಾಶರಃ ।
ಅಷ್ಟಾದಶೈತೆ ಗಂಭೀರಾ ಜ್ಯೋತಿಶಾಸ್ತ್ರ ಪ್ರವರ್ತಕಾಃ ॥

-ನಾರದ ಸಂಹಿತೆ 1/2.3.1

ಅದಕ್ಕೇ ಸೂರ್ಯ ಸಿದ್ಧಾಂತದಲ್ಲಿ,

ಸೂರ್ಯಃ ಪಿತಾಮಹೋ ವ್ಯಾಸೋ ವಶಿಷ್ಠೋತ್ರಿಃ ಪರಾಶರಃ...

ಎಂದಿದೆ.

ಹೀಗಾಗಿ ಜ್ಯೋತಿಷ್ಯಪ್ರವರ್ತಕರಾದ ಪರಾಶರರ ಗ್ರಂಥ ಕನ್ನಡದಲ್ಲಿ ಭಾಷಾಂತರವಾಗದಿರುವುದು – ಒಂದು ಮೂಲ ಕಾರಣ.

ಎರಡನೇ ಅಂಶ, ನನ್ನ ಮಿತ್ರರಾದ ಶ್ರೀ ಪ್ರಕಾಶ ಭಟ್ಟ (ಎಸ್.ಬಿ.ಎಚ್., ಬಾಗಲಕೋಟೆ) ಹಾಗೂ ಶ್ರೀ ವಿಜಯ ಮಠ ಹಾಗೂ ಡಾಕ್ಟರ್ ಎಂ.ಡಿ. ಕೋಪ್ಪ, ಶ್ರೀ ಎಂ.ಸಿ. ಪಾಟೀಲರು ನನಗೆ ಯಾವಾಗಲೂ 'ಒಂದೇನಾದರೂ ಮಹತ್ವದ ಕೆಲಸ ಮಾಡಿರಿ' ಎಂದು ಹೇಳುತ್ತಿದ್ದರು. ಜ್ಯೋತಿಷ್ಯ ವಿಷಯದ ಚರ್ಚೆ ನಡೆದಾಗ (ಅವರೆಲ್ಲರೂ ಜ್ಯೋತಿಷಿಗಳೇ) ನಾನು ಪರಾಶರ ಗ್ರಂಥದ ಶ್ಲೋಕ ಉದ್ಧರಿಸುತ್ತಿದ್ದಾಗ ಅದಲ್ಲದೆ ಒಮ್ಮೆ ಜ್ಯೋತಿಷ್ಯ ಸಮ್ಮೇಳನದಲ್ಲಿ ಭಾಷಣಕಾರರೊಬ್ಬರು 'ವರಾಹಮಿಹಿರರನ್ನು ಬಿಟ್ಟು ಯಾವ ಗ್ರಂಥ ಹಿಡಿಯಲಾರೆ' ಎಂದಾಗ ನಾನು ಸಹಜವಾಗಿಯೇ ಹೇಳಿದ್ದೆ – ನನ್ನ ಶಿಷ್ಯನೊಬ್ಬನನ್ನು 'ವರಾಹಮಿಹಿರನನ್ನಾಗಿ ಮಾಡಬಹುದು. ಆದರೆ ಪರಾಶರರನ್ನು ಮಾಡಲು ಸಾಧ್ಯವಿಲ್ಲ.' ಇಲ್ಲಿ ನನ್ನ ಉದ್ದೇಶವಿಷ್ಟೆ: ಪರಾಶರ ಋಷಿಗಳು ಜ್ಞಾನದೃಷ್ಟಿಯಿಂದ ಕಂಡುಕೊಂಡವರು. ಆದರೆ

ವರಾಹಮಿಹಿರಾಚಾರ್ಯರೋ ಅಭ್ಯಾಸ ಮಾಡಿ ಪಂಡಿತರಾದವರು. ಆದರೆ ಅವರ ವಿದ್ಯೆಗೆ ಎದುರಿಲ್ಲವೆಂಬುದು ಅಷ್ಟೇ ಸತ್ಯ. ಹೀಗಾಗಿ 'ಕಲಿಯುಗಕ್ಕೆ' ಪರಾಶರ ಶಾಸ್ತ್ರವೆಂಬುದು, ಅಂಶವಾದರೆ ಅವರ ಗ್ರಂಥ ಕನ್ನಡವಾಗಿಲ್ಲವೆಂಬುದು ಎರಡನೇ ಅಂಶ. ಅದಕ್ಕಾಗಿ ಪರಾಶರ ಹೋರಾಶಾಸ್ತ್ರವನ್ನೇ ಆಯ್ದುಕೊಂಡು ಸಂಶೋಧಿಸಿ ಟೀಕೆ-ಟಿಪ್ಪಣಿಗಳೊಂದಿಗೆ ಕೊಟ್ಟಿದ್ದೇನೆ.

ಪರಾಶರರ ಗ್ರಂಥಕ್ಕೆ (ಬೃಹತ್ ಪರಾಶರ ಹೋರಾಶಾಸ್ತ್ರಕ್ಕೆ) ಜೈಮಿನಿ ಮಹರ್ಷಿಗಳೇ ಉಪದೇಶ ಸೂತ್ರ ಬರೆದಿರುವುದು ಆ ಗ್ರಂಥದ ಮಹತ್ವ ತೋರಿಸುತ್ತದೆ.

ಜೈಮಿನಿ ಮಹರ್ಷಿಗಳೋ ಪರಾಶರರ ಸುತರಾದ ವೇದವ್ಯಾಸರ ಶಿಷ್ಯರು. ಹೀಗಾಗಿ ಕೆಲವರು ಅದು ಪರಾಶರರದೋ ಜೈಮಿನಿಯವರದೋ ಎಂದಿರುವುದು ವಿಸಂಗತವೇ

ಈ ಗ್ರಂಥ ರಚಿಸಲು ಸಹಾಯಕರಾದ ನನ್ನ ಶಿಷ್ಯರಾದ ಶ್ರೀ ಸುನಿಲ ಮುನವಳ್ಳಿ ಹಾಗೂ ನನ್ನ ಚಿರಂಜೀವಿ ಹಾಗೂ ಜ್ಯೋತಿಷಿ ದಿಲೀಪ ದೇಶಪಾಂಡೆ. ಅಂತೇ ನನ್ನ ಹಿರಿಯ ಮಗ ಜಗನ್ನಾಥ ದೇಶಪಾಂಡೆಗೂ ನನ್ನ ಶುಭಕಾಮನೆ ಸಲ್ಲಿಸಬೇಕು ಹಾಗೂ ಈ ಕೆಲಸಕ್ಕೆ ಪ್ರೋತ್ಸಾಹಿಸಿದ ಮೇಲೆ ಉಲ್ಲೇಖಿಸಿದ ನನ್ನ ಎಲ್ಲ ಮಿತ್ರರಿಗೂ ನನ್ನ ನೆನಕೆಗಳು.

ಈ ಗ್ರಂಥ ಪ್ರಕಾಶನ ಕೈಗೆತ್ತಿಕೊಂಡು 'ಮುಂದೆ ಯಾವುದೇ ಉಪಯುಕ್ತ ಗ್ರಂಥ ಬರೆಯಿರಿ, ನಾವು ಪ್ರಕಾಶಿಸುತ್ತೇವೆ' ಎಂದು ಪ್ರೋತ್ಸಾಹಿಸಿದ ಶ್ರೀನಿಧಿ ಪ್ರಕಾಶನದ ಮಾಲೀಕರಾದ ಶ್ರೀ ಪುರುಷೋತ್ತಮ್‌ರವರಿಗೂ ನಾನು ಋಣಿ.

-ವಿದ್ವಾನ್ ಆರ್.ಜಿ. ದೇಶಪಾಂಡೆ

ಗದ್ದನಕೇರಿ

6.3.2003

|| ಹರಿಃ ಓಂ ||

# ಆತ್ಮ ನಿವೇದನೆ

'ವೇದಾದಿಗಳಂತೆ' ಬೃಹತ್ ಪರಾಶರ ಹೋರಾಶಾಸ್ತ್ರವೂ ಮುಹೋದ್ಗತವಾಗಿ ಬಂದುದು. ಸರಕಾರಿ ಸಂಗ್ರಹಾಲಯದಲ್ಲಿಯೂ ಮೂಲಪ್ರತಿ ಉಪಲಬ್ಧವಿಲ್ಲ. ಹೀಗಾಗಿ ಡಾ|| ಪಂಡಿತ ದೇವಚಂದ್ರ ಝಾ (ಎಂ.ಎ. ಡಬ್ಬಲ್ ಜ್ಯೋತಿಷ್ಯ ಆಚಾರ್ಯ, ಪ್ರೊ|| ಧರ್ಮ ಸಮಾಜ ಸರಕಾರಿ ಸಂಸ್ಕೃತ ಕಾಲೇಜು, ಮುಝುಪ್ಪುರ (ಬಿಹಾರ)) ರವರು ಬಿಹಾರ ಮತ್ತು ಉತ್ತರ ಪ್ರದೇಶದ ಪ್ರತಿ ಜ್ಯೋತಿಷ್ಯಾಚಾರ್ಯರ ಮನೆ ಮನೆ ತಿರುಗಿ ಜೀರ್ಣಾವಸ್ಥೆಯ - ಪರಿಷ್ಕರಣ ಸಂಗ್ರಹ ಹಾಗೂ ಕಾಶಿ ವಿಶ್ವವಿದ್ಯಾಲಯದ ಸಂಗ್ರಹ - ಹಾಗೂ ಇತರ ಮೂಲಗಳಿಂದ ಸಂಗ್ರಹಿಸಿದ ಕೃತಿಯಾಗಿದ್ದು, ಸಂಪೂರ್ಣ ಪರಿಷ್ಕರಿಸಿ ಶ್ಲೋಕ ಎತ್ತಿಕೊಳ್ಳಲಾಗಿದೆ ಹಾಗೂ ಜೈಮಿನಿ ಉಪದೇಶ ಸೂತ್ರಗಳಿಂದಲೂ ಶ್ಲೋಕಗಳನ್ನು ಪರಿಷ್ಕರಿಸಿ ತೆಗೆದುಕೊಳ್ಳಲಾಗಿದೆ. ಈ ಅಂಶದಲ್ಲಿ ಕೆಲವು ಶ್ಲೋಕ ಲುಪ್ತವಾಗಿರಲು ಸಾಧ್ಯ – ಮೂಲ ಶ್ಲೋಕ ಆಧಾರಸಹಿತ ಒದಗಿಸಿದರೆ ಮುಂದಿನ ಆವೃತ್ತಿಯಲ್ಲಿ ಸೇರಿಸಲಾಗುವುದು. ಬೇರೆ ಬೇರೆ ಪ್ರಕಾಶಕರ ಗ್ರಂಥದಲ್ಲಿ ಪ್ರಕ್ಷಿಪ್ತ ಭಾಗ ಸೇರಿರುವ ಸಾಧ್ಯತೆಯಿದೆ. ಈಗಿನ ಮಟ್ಟಿಗೆ ದೃಢೀಕರಿಸಿಯೇ ತೆಗೆದುಕೊಳ್ಳಲಾಗಿದೆ.

ನಿವೇದಕ,

ಆರ್.ಜಿ. ದೇಶಪಾಂಡೆ

# ಪ್ರಕಾಶಕರ ನುಡಿ

ಜ್ಯೋತಿಷ್ಯಾಭ್ಯಾಸಿಗಳಿಗೆ ಹಾಗೂ ಆಸ್ತಿಕರಿಗೆ ಹಲವಾರು ಉಪಯುಕ್ತ ಪುಸ್ತಕಗಳನ್ನು ನೀಡಿರುವ ನಮ್ಮ ಪ್ರಕಾಶನದ ಮೂಲಕ ಜ್ಯೋತಿಷ್ಯ ಪಿತಾಮಹರಾದ ಪರಾಶರರ ಸಮಗ್ರ ಹೋರಾಶಾಸ್ತ್ರವನ್ನು ಮೊಟ್ಟ ಮೊದಲ ಬಾರಿಗೆ ಕನ್ನಡದಲ್ಲಿ ಟೀಕಾಸಹಿತ ಪ್ರಕಟಿಸುವುದು ನಮಗೆ ಹೆಮ್ಮೆಯ ವಿಷಯವಾಗಿದೆ.

ಈ ಗ್ರಂಥದ ಮಾರ್ಗದರ್ಶನ ಹಾಗೂ ಆಧಾರಗಳನ್ನು ವರಾಹಮಿಹಿರರ ಬೃಹತ್ ಸಂಹಿತಾ, ಕಲ್ಯಾಣ ವರ್ಮರ ಸಾರಾವಳಿ ಮೊದಲಾದಂತೆ ಹಲವು ಜ್ಯೋತಿಷ್ಯಾಧಾರ ಗ್ರಂಥಗಳಲ್ಲಿ ಕಾಣಬಹುದಾದರೂ ಸಂಪೂರ್ಣವಾದ ಈ ಹೊತ್ತಿಗೆಯು ಕನ್ನಡದಲ್ಲಿ ಇರಲಿಲ್ಲ. ಈ ಕೊರತೆಯನ್ನು ನೀಗಿಸಲು ಬಹಳಷ್ಟು ಶ್ರಮವಹಿಸಿ, ಆಸಕ್ತಿಯುತವಾಗಿ ಈ ಪರಾಶರ ಹೋರಾಶಾಸ್ತ್ರವನ್ನು ಕನ್ನಡೀಕರಿಸಿದ ಶ್ರೀಯುತ ಆರ್.ಜಿ. ದೇಶಪಾಂಡೆಯವರಿಗೆ ನಮ್ಮ ಅಭಿನಂದನೆಗಳು.

ಎಲೆ ಮರೆಯ ಕಾಯಿಯಂತಿದ್ದು, ಜ್ಯೋತಿಷ್ಯ ಕುರಿತಾದ ವಿಷಯದಲ್ಲಿ ವಿಶೇಷವಾದ ಅಧ್ಯಯನ ನಡೆಸಿದ್ದ, ಇವರು ಹಲವಾರು ಬಿಡಿ ಲೇಖನಗಳನ್ನೂ, ಉಪನ್ಯಾಸಗಳನ್ನೂ ಮಾಡಿದ್ದಾರೆ. ಈ ಗ್ರಂಥಕಾರ್ಯವು ಅವರಿಗೆ ಶ್ರೇಯೋಭಿವೃದ್ಧಿ ತರುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ರೀತಿಯಾದ ಇನ್ನೂ ಹಲವಾರು ಮಹತ್ವಪೂರ್ಣ ಕಾರ್ಯಗಳು ಇವರಿಂದ ನೆರವೇರಲೆಂದು ಆಶಿಸಿ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥದ ಅಕ್ಷರಜೋಡಣೆ-ವಿನ್ಯಾಸವನ್ನು ಅಚ್ಚುಕಟ್ಟಾಗಿ ನೆರವೇರಿಸಿದ ಆದಿತ್ಯ ಡಿ.ಟಿ.ಪಿ.ಯವರಿಗೂ, ಸಕಾಲಕ್ಕೆ ಗ್ರಂಥ ಹೊರತರಲು ಸಹಕರಿಸಿದ ಅಚ್ಚುಕೂಟ ಬಳಗದವರಿಗೂ, ಈ ಕಾರ್ಯದಲ್ಲಿ ಸ್ಫೂರ್ತಿದಾಯಕವಾಗಿ ಗ್ರಂಥ ವಿನ್ಯಾಸಗೊಳ್ಳಲು ಸಹಕರಿಸಿದ ಶ್ರೀಯುತ ಅಶ್ವಿನಿ ದತ್ತರವರಿಗೂ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಮಹನೀಯರನ್ನೂ ಇಲ್ಲಿ ಮನಃಪೂರ್ವಕವಾಗಿ ನೆನೆಯುವೆವು.

ಬಹಳ ಎಚ್ಚರಿಕೆಯಿಂದ ಈ ಗ್ರಂಥದ ಕರಡುಪ್ರತಿಯನ್ನು ತಿದ್ದಲಾಗಿದೆಯಾದರೂ ಕಣ್ತಪ್ಪಿನಿಂದಾದರೂ ತಪ್ಪುಗಳು ಮಾನ್ಯ ಓದುಗರಿಗೆ ಕಂಡುಬಂದಲ್ಲಿ ಹಂಸಕ್ಷೀರನ್ಯಾಯದಂತೆ ನಮ್ಮನ್ನು ಮನ್ನಿಸಿ ಅದನ್ನು ತಿದ್ದಿಕೊಂಡು ನಮಗೂ ತಿಳಿಯಪಡಿಸಿದಲ್ಲಿ ಮರುಮುದ್ರಣದಲ್ಲಿ ಸರಿಪಡಿಸಲಾಗುತ್ತದೆ ಎಂದು ಈ ಮೂಲಕ ವಿನಮ್ರತೆಯಿಂದ ಪ್ರಾರ್ಥಿಸುತ್ತೇವೆ.

ಕನ್ನಡಾಂಬೆಯ ಕೊರಳಿನ ಮುತ್ತಿನ ಹಾರಕ್ಕೆ ನಮ್ಮ ಪ್ರಕಾಶನದಿಂದ ಈ ಗ್ರಂಥಮುತ್ತನ್ನು ಪೋಣಿಸುತ್ತಿರುವುದು ನಮ್ಮ ಭಾಗ್ಯವೇ ಸರಿ!

ಜ್ಯೋತಿಷ್ಯಾಭಿಮಾನಿಗಳು ಈ ಗ್ರಂಥವನ್ನು ಸರ್ವತೋಮುಖವಾಗಿ ಬಳಸಿಕೊಂಡು, ಪ್ರಯೋಜನವನ್ನು ಪಡೆದುಕೊಂಡಲ್ಲಿ ನಮ್ಮ ಈ ಶ್ರಮ ಸಾರ್ಥಕ. ನಮ್ಮ ಆದರ ಅಭಿಮಾನಗಳು ಎಂದಿನಂತಿರಲಿ. ಆರೋಗ್ಯಕರ, ಉತ್ತಮ ಸಲಹೆಗಳಿಗೆ ಸದಾ ಸ್ವಾಗತವಿದೆ.

ಕನ್ನಡದ ಸಿರಿದೇವಿ ಭುವನೇಶ್ವರಿಗೆ ಸಾವಿರದ ಸಾವಿರ ನಮನಗಳು.

ಜೈ ಕನ್ನಡಾಂಬೆ

ಟಿ.ಆರ್. ಪುರುಷೋತ್ತಮ್
ಪ್ರಕಾಶಕರು

ಕನ್ನಡ ರಾಜ್ಯೋತ್ಸವ, 2003

# ವಿಷಯಾನುಕ್ರಮಣಿಕೆ

## ಉತ್ತರ ಭಾಗ

## ಉತ್ತರ ಭಾಗ



# ಬೃಹತ್ ಪರಾಶರ ಹೋರಾಶಾಸ್ತ್ರಮ್

ಮುನಿಗೆ ಮುನಿವರಗೆ ದೇವನಿ ಕರಕೆ
ಮುನಿವರ್ಯನಿಗೆ ತಾರತಮ್ಯದಿ ನಮಿಸಿ ಬಳಿಕ ಪೇಳುವೆ ವಿಜಯವಾ ॥

ಕನ್ನಡ ಭಾಷೆಯ ಈ ಹೋರಾಶಾಸ್ತ್ರ ಮಂಗಲದಲ್ಲಿ ಮುನಿಗೆ ಪರಾಶರರಿಗೆ ಮುನಿವರಗೆ ಎಂಬಲ್ಲಿ ತಾರತಮ್ಯದಿಂದ ವಿಷ್ಣುವಿನಿಂದ ವ್ಯಾಸಪರ್ಯಂತ ವಿಷ್ಣುವಿಗೆ ದೇವನಿಕರಕೆ, ಲಕ್ಷ್ಮಿ, ಬ್ರಹ್ಮ, ಸರಸ್ವತಿ, ವಾಯು, ಭಾರತಿ, ಗರುಡ, ಗರುಡಪತ್ನಿ ಶೇಷ ಶೇಷಪತ್ನಿ ರುದ್ರ, ರುದ್ರಪತ್ನಿಯರಾದಿ ಪ್ರಮುಖ ದೇವರಿಗೆ ಗಣಾಧಿಪನಿಗೂ ವಂದಿಸಿ ಮುನಿವರ್ಯನಿಗೆ ಅಂದರೆ ಆನಂದತೀರ್ಥರಿಗೆ ಅವರಿಂದ ಸನಕ, ಸನಂದಾದಿ, ಸ್ತೋತ್ರಮರವರೆಗೆ ನಮಿಸಿ ವಿಜಯ ಭವಿಷ್ಯ ಪೇಳುವುದು ಎಂಬ ಆಶಯ.

## ೧ನೇ ಅಧ್ಯಾಯ

## ಸೃಷ್ಟಿಕ್ರಮ ವರ್ಣನಾಧ್ಯಾಯ

### ಉಪಕ್ರಮ

ಅಥೈಕದಾ ಸುಖಾಸೀನಂ ಪಾರ್ಶ್ವೇ ಹಿಮವತಃ ಶುಭೇ ।
ಮಹರ್ಷಿಪ್ರವರಂ ಪೂಜ್ಯಂ ಪರಾಶರಮುದಾರಧೀಃ ॥೧॥

ಮೈತ್ರೇಯೋ ಹಿ ಮುನಿಹೋರಾಶಾಸ್ತ್ರ ಜಿಜ್ಞಾಸಯಾ ಸ್ವಯಮ್
ಸಾಷ್ಟಾಂಗ ಪ್ರಣಿಪಾತೇನ ಪ್ರಣಮ್ಯೇದಮುವಾಚ ॥೨॥

ಒಮ್ಮೆ ಉದಾರ ವಿಚಾರವಂತರಾದ ಮೈತ್ರೇಯ ಮುನಿಗಳು ಹಿಮಾಲಯದ ಸಮೀಪ ಸುಖಾಸೀನರಾದ ಪರಮಪೂಜ್ಯ ಮಹರ್ಷಿ ಪ್ರವರ ಪರಾಶರರಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ಪವಿತ್ರ ಹೋರಾಶಾಸ್ತ್ರ ತಿಳಿಯಬಯಸುವ ಇಚ್ಛೆ ಪ್ರಕಟಿಸಿದರು.

ಮೈತ್ರೇಯ ಉವಾಚ –

ಭಗವನ್ ಭವತಾ ಲೋಕಕಲ್ಯಾಣಾಯ ಕತೌ ಯುಗೆ ।
ಯಥೋದಿತಾ ಸ್ಮೃತಿಸ್ತದ್ವತ್ ಕೃಪಾಯಾವನತಾಯ ಮೇ ॥೩॥

ಹೋರಾಶಾಸ್ತ್ರಂ ಪ್ರಸಿದ್ಧಂ ಯತ್ ತ್ರಿಸ್ಕಂಧ ಜ್ಯೋತಿಷೇದ್ಭುತವ್
ತದೇವ ದೈವಜ್ಞಮುದೆ ವಿಸ್ತರಾದುಚ್ಯಲೌಮಿಹ ॥೪॥

ಕಥಮಸ್ಯ ಹಿ ವಿಶ್ವಸ್ಯ ಪ್ರಭವೋಥ ಲಯೋ ಭವೇತ್
ನಭಃ ಸ್ಥಾಯಿಗ್ರಹಾಣಾಶ್ಚ ಭೂಯಿಷ್ಪ ಪ್ರಾಣಿನಾಂ ಮಿಥಃ ॥೫॥

ಕಿದ್ರಶೋಸ್ತಿ ಚ ಸಂಬಂದಃ ಫಲಂ ಯೇನ ಪ್ರಜಾಯತೆ
ಏತತ್ಸರ್ವ ಸಮಾಖ್ಯಾಹಿ ತ್ವಂ ದೈವಜ್ಞೆಷು ವಿಶ್ರುತಃ ॥೬॥

ಮೈತ್ರೇಯರು ಹೇಳಿದರು :

ಹೇ ಭಗವಂತನೆ, ಕಲಿಯುಗದಲ್ಲಿ ಲೋಕೋಪಕಾರಕ್ಕಾಗಿ ತಾವೂ ಸ್ಮೃತಿ ಪ್ರತಿಪಾದನೆ ಮಾಡಿರುವಿರೋ (ಕಲಿಯುಗದಲ್ಲಿ ಪರಾಶರ ಸ್ಮೃತಿಯೇ ಆಚರಣ ಯೋಗ್ಯವೆಂದು ಧರ್ಮಶಾಸ್ತ್ರಗಳ ಅಭಿಮತ. ಅನ್ಯ ಸ್ಮೃತಿಗಳು ಬೇರೆ ಬೇರೆ ಯುಗಕ್ಕೆ ಯೋಗ್ಯ) ಅದೇ ರೀತಿ ತ್ರಿಸ್ಕಂದ ಜ್ಯೋತಿಷ್ಯದಲ್ಲಿ ವಿಲಕ್ಷಣಗುಣಪೂರಿತ ಹಾಗೂ ಪ್ರಸಿದ್ಧವಾದ ಹೋರಾಶಾಸ್ತ್ರ ಜ್ಯೋತಿಷ್ಯಗಳ ಪ್ರಸನ್ನತೆಗಾಗಿ (ಅದರ ಉಪಯೋಗಕ್ಕಾಗಿ) ನನಗೆ ವಿಸ್ತಾರಪೂರ್ವಕ ಹೇಳಿರಿ. ಈ ರೀತಿ ವಿನಂತಿಸಿಕೊಂಡು,

ಪ್ರಥಮವಾಗಿ ಸಂಸಾರದ ಉತ್ಪತ್ತಿ ಅದರಂತೆ ಪ್ರಲಯ ಸ್ಥಿತಿ ಹೇಗಿದೆ? ಹಾಗೂ ಆಕಾಶದಲ್ಲಿ (ಅಂತರಿಕ್ಷದಲ್ಲಿ ವೇದ ಪ್ರಾಮಾಣ್ಯ) ಸಂಚರಿಸುವ ಗ್ರಹ, ಆಕಾಶ ಸಂಚಾರಿ ನಕ್ಷತ್ರ ಹಾಗೂ ಪೃಥ್ವಿಯಲ್ಲಿ ವಾಸಿಸುವ ಮನುಷ್ಯನಿಗೂ ಯಾವ ಸಂಬಂಧ ಹಾಗೂ ಗ್ರಹಗಳಿಂದ ಪ್ರಣೀತ ಜ್ಯೋತಿಷ್ಯ ಫಲಾದೇಶ ಯಾವ ರೀತಿ ಸತ್ಯವಾಗುತ್ತದೆ? ಇದನ್ನು ನನ್ನ ಮೇಲೆ ಕೃಪೆ ಮಾಡಿ ವಿಸ್ತಾರಪೂರ್ವಕ ನನಗೆ ತಿಳಿಸಿರಿ. ತಾವೂ ಜ್ಯೋತಿಷ್ಯಶಾಸ್ತ್ರದಲ್ಲಿ ಪ್ರಖ್ಯಾತರು.

ಇಲ್ಲಿ ಮೈತ್ರೇಯರ ಪ್ರಶ್ನೆಯು ವಿಜ್ಞಾನ ಯುಗಕ್ಕಾಗಿಯೇ ಕೇಳಿದ ಪ್ರಶ್ನೆ. ಶ್ರದ್ಧಾಯುಗದಲ್ಲಿ ಎಲ್ಲವೂ ಶ್ರದ್ಧೆಯ ಮೇಲೇ ನಡೆಯುತ್ತಿತ್ತು. ಈಗ ಆಕಾಶದ ನಕ್ಷತ್ರಗಳಿಗೂ ಹಾಗೂ ಅಂತರಿಕ್ಷದ ಗ್ರಹಗಳ ಚಲನವಲನಕ್ಕೂ ಮಾನವನಿಗೂ ಅವನ ಭವಿಷ್ಯಕ್ಕೂ ಏನು ಸಂಬಂಧವೆನ್ನುವುದು. ಇಲ್ಲಿ ಪ್ರಮುಖವಾಗಿ ವೈಜ್ಞಾನಿಕವಾದ ಸಮಸ್ಯೆಯನ್ನು ಪರಿಹರಿಸಲೋಸುಗ ಪರಾಶರ ಹೋರಾಶಾಸ್ತ್ರವೆಂಬುದು ನಿರ್ವಿವಾದ. ಗಣಿತ ಹಾಗೂ ಸಂಹಿತಾ ಸ್ವಯಂ ಸಿದ್ಧವಾದವುಗಳಾದ್ದರಿಂದ

(ಸಂಹಿತಾಕ್ಕೆ ಪ್ರತ್ಯಕ್ಷತೆಯಿದೆ) ಹೋರಾದ (ಫಲ) ಬಗ್ಗೆಯೇ ಮೈತ್ರೇಯರು ಪ್ರಶ್ನಿಸಿದ್ದಾರೆ – ಅದಕ್ಕೆ,

**ಪರಾಶರ ಉವಾಚ –**

ಮುನೇಧನ್ಯೈಷ ತೇ ಪ್ರಶ್ನಾಃ ಕೃತೋ ಲೋಕಹಿತೇಚ್ಛಯಾ
ಅತೋಽಹಂ ಪರಮಂ ಬ್ರಹ್ಮನ್ । ಶಕ್ತಿಮತ್ಪರಮೇಶ್ವರಮ್ ॥೭॥

ಸೂರ್ಯ ನತ್ವಾ ಗ್ರಹಪತಿಂ ಜಗದುತ್ಪತ್ತಿ ಕಾರಣಮ್ ।
ವಕ್ಷ್ಯಾಮಿ ವೇದನಯನಂ ಯಥಾ ಬ್ರಹ್ಮಮುಖಾಚ್ಛ್ರುತಮ್ ॥೮॥

ಶಾಂತಾಯ ಗುರುಭಕ್ತಾಯ ಸದಾ ಸತ್ಪಥಗಾಯಿನೇ ॥
ಆಸ್ತಿಕಾಯ ಪ್ರದಾತವ್ಯಂ ತತಃ ಶ್ರೇಯೋ ಹ್ಯಾವಾಪ್ಸ್ಯತಿ ॥೯॥

ನ ದೇಯಂ ಪರಶಿಷ್ಯಾಯ ನಾಸ್ತಿಕಾಯ ಶಠಾಯಚ ।
ದತ್ತೆ ಪ್ರತಿದಿನಂ ದುಃಖಂ ಜಾಯತೆ ನಾತ್ರ ಸಂಶಯಃ ॥೧೦॥

**ಪರಾಶರರು ನುಡಿದರು :**

ಹೇ ಮುನಿಯೇ, ನಿನ್ನ ಈ ಪ್ರಶ್ನೆ ಲೋಕೋಪಕಾರಿಯಾಗಿ ಕೇಳಲ್ಪಟ್ಟಿದೆ. ಆದ್ದರಿಂದ ಹೇ ಬ್ರಹ್ಮಸ್ವರೂಪನೆ, ಪರಮಶಕ್ತಿಯುತನಾದ ಸಂಸಾರೋತ್ಪತ್ತಿಯ ಕಾರಣನಾದ ಗ್ರಹಗಳ ಸ್ವಾಮಿಯಾದ - ಸ್ವಯಂ ವಿಷ್ಣುಮೂರ್ತಿ(ಬಿಂಬ)ಯಾದ ಸೂರ್ಯನಿಗೆ ನಮಸ್ಕರಿಸಿ ಬ್ರಹ್ಮದೇವರಿಂದ ಕಥಿತವಾದ ಜ್ಯೋತಿಷ್ಯ(ರಹಸ್ಯ)ವನ್ನು ನಿನಗೆ ವಿಶದಪಡಿಸುತ್ತಿದ್ದೇನೆ. ಈ ಜ್ಯೋತಿಷ್ಯ ಉಪದೇಶವೂ, ಗುರುಭಕ್ತ ಶಾಂತಿ, ಸತತ ಸನ್ಮಾರ್ಗದಲ್ಲಿ ಚಲಿಸುವವನು ಹಾಗೂ ಆಸ್ತಿಕನಾದವನಿಗೆ ಉಪದೇಶಿಸಬೇಕು. ಅವನಿಂದ ಜಗತ್‌ಕಲ್ಯಾಣ ಸಾಧ್ಯವಿದೆ. ಇದನ್ನು ನಾಸ್ತಿಕ ಪರಶಿಷ್ಯ ಹಾಗೂ ಕುಟಿಲ ವ್ಯಕ್ತಿಗೆ ನೀಡಬಾರದು. ಆದರಿಂದಲೇ ಜ್ಯೋತಿಷಿಗೆ ಶ್ರೇಯಸ್ಕರ. ಅನಧಿಕಾರಿಗೆ ಉಪದೇಶ ಮಾಡುವವನು ಸದಾ ದುಃಖಿಯಾಗಿರುತ್ತಾನೆ, ಇದರಲ್ಲಿ ಸಂದೇಹವಿಲ್ಲ.

## ಸೃಷ್ಟಿ ಕ್ರಮ ವರ್ಣನೆ

ಏಕೋಽವ್ಯಕ್ತಾತ್ಮಕೋ ವಿಷ್ಣುರನಾದಿಃ ಪ್ರಭುರೀಶ್ವರಃ
ಶುದ್ಧಸತ್ವೋ ಜಗತ್ಸ್ವಾಮೀ ನಿರ್ಗುಣ ಸ್ತ್ರಿಗುಣಾನ್ವಿತಃ ॥೧೧॥

ಸಂಸಾರಕಾರಕಃ ಶ್ರೀಮಾನ್ ನಿಮಿತ್ತಾತ್ಮಾ ಪ್ರತಾಪವಾನ್
ಏಕಾಂಶೇನ ಜಗತ್‌ಸರ್ವಂ ಸೃಜತ್ಯವತಿ ಲೀಲಾಯ ॥೧೨॥

ತ್ರಿಪಾದಂ ತಸ್ಯದೇವಸ್ಯ ಹಾಮ್ಯತಂ ತತ್ತ್ವದರ್ಶಿನಃ
ವಿದಂತಿ ತತ್ರ್ರಮಾಣಾ ಚ ಸಪ್ರಧಾನಂ ತಥೈಕಪಾತ್ ॥೧೩॥

ವ್ಯಕ್ತಾವ್ಯಕ್ತಾತ್ಮಾಕೋ ವಿಷ್ಣುರ್ವಾಸುದೇವಸ್ತು ಗೀಯತೆ
ಯದವ್ಯಕ್ತತ್ಮಕೋ ವಿಷ್ಣುಃ ಶಕ್ತಿದ್ವಯಮನ್ವಿತಃ ॥೧೪॥

ತ್ರಿಶಕ್ತಿಯುಕ್ತೋವ್ಯಕ್ತಾತ್ಮಾ ಗದಿತೋನ್ನತಶಕ್ತಿಭ್ಯುತ್
ಸತ್ವಪ್ರಧಾನಾ ಶ್ರೀಶಕ್ತಿರ್ಭೂಶಕ್ತಿಶ್ಚ ರಜೋಗುಣಾ ॥೧೫॥

ಸರ್ವ ಶಕ್ತಿವಂತನಾದ ಅನಾದಿನಿತ್ಯನಾದ ಅವ್ಯಕ್ತತ್ಮಾ ಶ್ರೀವಿಷ್ಣು, ಶುದ್ಧತ್ವ, ನಿರ್ಗುಣನಾದರೂ ತ್ರಿಗುಣರೂಪವಲ್ಲದೆ ಅನೇಕ ಗುಣಪೂರ್ಣ (ಸತ್ವ ರಜ ತಮ) ಸಮಸ್ತ ಸಂಸಾರದ ಯಜಮಾನನಾದ ವಿಷ್ಣು ತನ್ನ ಒಂದಂಶ ತ್ರಿಪಾದದಲ್ಲಿ (ಒಂದು ಪಾದ) ಸಮಸ್ತ ಸಂಸಾರ ಸೃಷ್ಟಿ ಮಾಡಿ ಲೀಲೆಯಿಂದ ಆಟವಾಡಿಸುತ್ತಿದ್ದಾನೆ.

ಅವನ ತ್ರಿಪಾದಗಳನ್ನು, ಅವು ಅಮೃತಸಮಾನವಾದವುಗಳನ್ನು ತತ್ವಾದರ್ಶಗಳು ಮಾತ್ರ ಕಾಣುತ್ತಾರೆ (ತಿಳಿದಿದ್ದಾರೆ) ಅವನ ಪ್ರಧಾನ(ಪ್ರಕೃತಿ)ಸಹಿತ ಒಂದು ಚರಣದಿಂದ ವ್ಯಕ್ತಾವ್ಯಕ್ತಿತಾತ್ಮಿಕನಾಗಿ, ವಿಷ್ಣು, ವಾಸುದೇವನೆಂದು ಕರೆಯಿಸಿಕೊಳ್ಳುತ್ತಾನೆ. ವಸುದೇವನ ಪುತ್ರನಾಗಿ ವಾಸುದೇವನಲ್ಲಿ ವಸು → ಭೂಮಿಯ ಸೃಷ್ಟಿಕರ್ತನಾಗಿ ವಾಸುದೇವಾತ್ಮಕನಾಗಿದ್ದಾನೆ.

ಆಧ್ಯಾತ್ಮಿಕದಿಂದ ವಿಷ್ಣು ಶಕ್ತಿಯುತನಾಗಿ ಅಲ್ಲದೆ ವ್ಯಕ್ತಾವ್ಯಕ್ತರೂಪನಾಗಿ ತ್ರಿಪಾದಯುಕ್ತನಾಗಿ ಅನಂತ ಕಲ್ಯಾಣಗುಣ ಪರಿಪೂರ್ಣನಾಗಿದ್ದಾನೆ. ಇಲ್ಲಿ ಶಕ್ತಿಗಳಲ್ಲಿ,

ಸತ್ವಪ್ರಧಾನ → ಶ್ರೀಶಕ್ತಿ (ಲಕ್ಷ್ಮಿದೇವಿ)
ರಜಃಪ್ರಧಾನ → ಭೂಶಕ್ತಿ (ಭೂದೇವಿ)
ತಮಃಪ್ರಧಾನ → ಅಂಧಕಾರರೂಪ ನೀಲಸಜ್ಞಕ ಶಕ್ತಿ ಆಗಿದ್ದಾನೆ.

ಶ್ರೀಶಕ್ತಿ ಪ್ರೇರಿತ ವಿಷ್ಣು ಚತುರ್ಥ ಶಕ್ತಿ ವಾಸುದೇವನಾಗಿ ಅತ್ಯದ್ಭುತ ಶಕ್ತಿಯಾಗಿದ್ದಾನೆ.

ಮೇಲಿನ ಈ ಅಂಶಗಳು ಕೆಳಗಿನ ಈ ಶ್ಲೋಕದಲ್ಲಿ ಸ್ಪಷ್ಟ ನಿರೂಪಿತವಾಗಿವೆ.

ಶಕ್ತಿಸ್ತೃತಿಯಾ ಯಾಪ್ರೋಕ್ತಾನೀಲಾಬ್ಯ ಧ್ವಾರಿತ ರೂಪಿಣಿ
ವಾಸುದೇವಶ್ಚತುರ್ಥೆ ಭೂಚ್ಛೀಶಕ್ತಿಯಾ ಪ್ರೇರಿತೋಯದಾ ॥೧೬॥

ಎಂದು,

**ಸಂಕರ್ಷಣಶ್ಚ ಪ್ರದ್ಯುಮ್ನೋನಿರುದ್ಧಃ ಇತಿ ಮೂರ್ತಿಧೃಕ್ ।**

ಈ ಮೂರು ಶಕ್ತಿಗಳು ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ -

ಈ ತ್ರಿಮೂರ್ತಿ ರೂಪಕವಾಗಿವೆ ಅದನ್ನೇ,

**ತಮಃ ಶಕ್ತ್ಯಾನ್ವಿತೋ ವಿಷ್ಣುರ್ದೇವ ಃ ಸಂಕರ್ಷಣಾಭಿ ದಃ ॥೧೭॥**

ನೀಲಸಂಜ್ಞಕ ತಮೋಶಕ್ತಿಯುಕ್ತ ವಿಷ್ಣು (ಸಂಕರ್ಷಣ) ರಜಶಕ್ತಿ ಪ್ರದ್ಯುಮ್ನೇ, ಸತ್ವಶಕ್ತಿಯುಕ್ತ ಅನಿರುದ್ಧನೆನ್ನಿಸಿಕೊಂಡಿದ್ದಾನೆ.

ಎರಡನೇ ಪಾದ 18ನೇ ಶ್ಲೋಕ 1-2-04

**ಪ್ರದ್ಯುಮ್ನ ರಜಸಾ ಶಕ್ತ್ಯಾನಿರುದ್ಧಃ ಸತ್ವಯಾಯುತಃ**
**ಮಹಾನ್ ಸಂಕರ್ಷಣಾಜ್ಜಾತಃ ಪ್ರದ್ಯುಮ್ನೇದ್ ಯದಹಂಗತಿಃ ॥೧೮॥**

ಪ್ರದ್ಯುಮ್ನನ ಮಹತತ್ವ ಅಹಂಕಾರ ಸಂಕರ್ಷಣ

ಮಹತತ್ವ - ಅನಿರುದ್ಧನ ಅಹಂಕಾರ ಮೂರ್ತಿಗಳ ಸಮನ್ವಯದಿಂದ ಬ್ರಹ್ಮಮೂರ್ತಿ ಉತ್ಪತ್ತಿ ಹೇಳಿದೆ–

**ಅನಿರುದ್ಧಾತ್ ಸ್ವಯಂ ಜಾತೋ ಬ್ರಹ್ಮಾಹಂಕಾರ ಮೂರ್ತಿಧೃಕ್**
**ಸರ್ವೇಷು ಸರ್ವಶಕ್ತಿಶ್ಚ ಸ್ವಶಕ್ತ್ಯಾಧಿಕಯಾಯುತಃ ॥೧೯॥**

ಎಲ್ಲದರಲ್ಲೂ ಎಲ್ಲ ಶಕ್ತಿಗಳಿದ್ದರೂ ಎರಡು ಶಕ್ತಿಗಳು ಮಾತ್ರ ವಿಶೇಷವಾಗಿವೆ. ಮುಖ್ಯ ಅಂಶ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ - ಈ ಮೂರು ಶಕ್ತಿಗೇ ಸತ್ತೆ ವಿದ್ದಾಗಲೂ ಕೂಡ ಎರಡು ಶಕ್ತಿ ಅಧಿಕ (ವಿಶೇಷ) ರೂಪದಲ್ಲಿವೆ. ಹೇಗೆಂದರೆ ಸಂಕರ್ಷಣನಲ್ಲಿ ತಮಃ ಶಕ್ತಿ ಪ್ರದ್ಯುಮ್ನನಲ್ಲಿ ಭೂಶಕ್ತಿ ಅದರಂತೆ ಅನಿರುದ್ಧನಲ್ಲಿ ಶ್ರೀ ಶಕ್ತಿ ಮಾತ್ರ ಅಧಿಕವಾಗಿವೆ. ಅಂದರೆ ಸಂಕರ್ಷಣ ಪ್ರದ್ಯುಮ್ನರಲ್ಲಿ ವಿಷ್ಣುವಿನ ಪುರುಷ ಶಕ್ತಿ, ಅನಿರುದ್ಧನಲ್ಲಿ ಸ್ತ್ರೀ ಶಕ್ತಿ ಇವೆರಡೂ ಪ್ರಧಾನಗಳು.

ಇನ್ನೂ ಒಳಭೇದಗಳನ್ನು ಈ ರೀತಿ ಮಾಡಬಹುದು–

**'ಅಹಂಕಾರ ಸ್ತ್ರೀಧಾ ಭೂತ್ವಾ ಸರ್ವಮೇತದ ವಿಸ್ತರಾತ್**
**ಸಾತ್ವಿಕೋ ರಾಜಶ್ಚೈವ ತಾಮಸಶ್ಚೆದಹಂತತಿಃ ॥೨೦॥**

**ದೇವಾ ವೈಕಾರಿಕಾ ಜ್ಞಾತಾತಾಸ್ತೈಜಸಾದಿನಿಂದ್ರಿಯಾಣಿ ಚ**
**ತಾಮಸಾಚ್ಚೈವವ ಭೂತಾನಿ ಖಾದೀನಿ ಸ್ವಸ್ವಶಕ್ತಿಭಿಃ ॥೨೦॥**

ಅಹಂಕಾರದ 3 ಭೇದಗಳು - ಸಾತ್ವಿಕಾಹಂಕಾರ, ರಾಜಸಾಹಂಕಾರ, ತಾಮಸಾಹಂಕಾರ.

ಸಾತ್ವಿಕ ಅಹಂಕಾರ ವೈಕಾಂಕ ಅಹಂ ಎಂದು ದೇವತೆಗಳಲ್ಲಿ ಕಂಡುಬರುವುದು. ರಾಜಸ ಅಹಂಕಾರ ಇಂದ್ರಿಯಗಳಿಂದಾಗುವ ಅಹಂಕಾರ. ತಾಮಸ ಅಹಂಕಾರ ಆಕಾಶಾದಿ ಪಂಚಮಹಾಭೂತಗಳಿಂದ ಆದ ಅಹಂಕಾರ. ಇವು ಮೂರು ತಮ್ಮ ತಮ್ಮ ವಿಶೇಷ ಗುಣದಿಂದ ಮುಕ್ತವಾಗಿವೆ.

ಶ್ರೀಶಕ್ತ್ಯಾ ಸಹಿತೋ ವಿಷ್ಣುಃ ಸದಾ ಪಾತಿ ಜಗತ್ರಯಮ್ ।
ಭೂಶಕ್ತ್ಯಾ ಸೃಜತೆ ಸೃಷ್ಟಾ ನೀಲಶಕ್ತ್ಯಾಹರೋತ್ತಿ ರಿ ॥೨೨॥

ವ್ಯಕ್ತಾವ್ಯಕ್ತಾತ್ಮಕನಾದ ವಿಷ್ಣು – ಯಾರಿಗೆ ವಾಸುದೇವನೆಂದು ಕರೆಯುತ್ತಿವೆಯೋ ಅವನು ಶ್ರೀಶಕ್ತಿ (ಲಕ್ಷ್ಮಿ) ಸಮನ್ವಿತನಾಗಿ – ತ್ರೈಲೋಕ್ಯ ಸಂರಕ್ಷಣೆ ಕಾರ್ಯ. ಭೂಶಕ್ತಿಸಹಿತ ಬ್ರಹ್ಮನಾಮಕನಾಗಿ (ಬ್ರಹ್ಮನಲ್ಲಿ ಬಿಂಬರೂಪಿ ಯಾಗಿದ್ದು) ಸೃಷ್ಟಿನಿರ್ಮಾಣವನ್ನು ಅದೇ ವಿಷ್ಣು ರುದ್ರನ ತಮಶಕ್ತಿಯಾಗಿ ನಿಂತು ಸಂಹಾರ ಕಾರ್ಯವನ್ನು ಮಾಡುತ್ತಾರೆ. ಪರಾಶರರು ಮುಂದುವರಿಯುತ್ತಾ,

ಸರ್ವೇಷು ಚೈವ ಜೀವೇಷು ಪರಮಾತ್ಮಾ ವಿರಾಜತೆ
ಏವಂ ಹಿ ತದಿದಂ ಬ್ರಹ್ಮನ್ । ಸ್ಥಿತಂ ಹಿ ಪರಮಾತ್ಮನಿ ॥೨೩॥

ಸರ್ವೇಷು ಚೈವ ಜೀವೇಷು ಸ್ಥಿತಂ ಹ್ಯಾಂಶದ್ವಯ ಕ್ವಚಿತ್
ಜೀವಾಂಶಕೋಧಿಕಸ್ತದತ್ ಪರಮಾತ್ಮಾಂಶಕಃ ಕ್ವಚಿತ್ ॥೨೪॥

ಸೂರ್ಯೋದಯೇ ಗ್ರಹಾಃ ಸರ್ವೇ ಬ್ರಹ್ಮಕಾಮಃದ್ದಿ ಷಾದಯಃ
ಎತೆ ಚಾನ್ಯೆ ಚ ಬಹವಃ ಪರಮಾತ್ಮಾಂ ಶಪಾಧಿಕಾಃ ॥೨೫॥

ಶಕ್ತಿಯಿ ಶತಥೈತೇ ಪಾಮಧಿಕಾಂಶಃ ಶ್ರೀಯಾದಯಃ
ಸರಕ್ತಯಃ ಸುರಾಶ್ವಾನ್ಯೆ ಜ್ಞೇಯಾ ಜೀವಾಂಶಕಾಧಿಕಃ ॥೨೬॥

ಎಲ್ಲ ಪ್ರಾಣಿಗಳಲ್ಲಿ ಪರಮಾತ್ಮನು ಬಿಂಬ ಪ್ರತಿಬಿಂಬ ರೂಪಕನಾಗಿ ವಿರಾಜ ಮಾನನಾಗಿದ್ದಾನೆ. ಹೇ ಬ್ರಹ್ಮನ್ (ಋಷಿಯೇ), ಸಮಸ್ತ ಜಗತ್ತು ಪರಮಾತ್ಮನಲ್ಲಿ ಸ್ಥಿತವಾಗಿದೆ. ಎಲ್ಲ ಜೀವಿಗಳ ಜೀವಾತ್ಮನಲ್ಲಿ – ಪರಮಾತ್ಮನ ಅಂದರೆ ಜೀವಿ ಗಳಲ್ಲಿ ಜೀವಾತ್ಮ ಪರಮಾತ್ಮರ ಅಂಶ ವಿದ್ಯಮಾನವಾಗಿದೆ. – ತೀನ ತ್ಯಕ್ತೇನ ದತ್ತೇನ ಅಂದರೆ ಕೋಡಲ್ಲಿ ಪಟ್ಟಿ ಕಿಂಚಿತ್ ಸ್ವಾತಂತ್ರ್ಯದಿಂದ – ಪರಮಾತ್ಮನ ಶಕ್ತಿಯೇ ಅತ್ಯಧಿಕವಾಗಿದೆ. ಇದೇ ಪ್ರಕಾರ ಲಕ್ಷ್ಮಿ ಆದಿ ಪ್ರಮುಖ ದೇವತೆ

ಗಳಲ್ಲಿಯೂ ಹರಿ ಕೋಟಿ ಶಕ್ತಿ ಶಕ್ತಿಯೇ ಪ್ರಮುಖವಾದುದು. ಅನ್ಯದೇವಗಣಗಳಲ್ಲಿ ಅದೇ ರೀತಿಯಿದ್ದರೂ ಪರಮಾತ್ಮನು ಲಕ್ಷ್ಮಿ ಆದಿ ಎಲ್ಲ ದೇವತೆಗಳಿಗೂ ದೇವತಾ ಶಕ್ತಿ ವಿಶೇಷವನ್ನು ನೀಡಿದ್ದಾನೆ. ಶಕ್ತಿ ಹಂಚಿಕೊಟ್ಟಿದ್ದಾನೆ. ಹೀಗಾಗಿ ನರರಿಗಿಂತಲೂ ವಿಶೇಷ ಶಕ್ತಿಯುಳ್ಳವರು ದೇವಾಗ್ರಜರಾದವರು (ಗಣ ಗುಂಪು). ಇಲ್ಲಿ ಪರಾಶರರು ತಾರತಮ್ಯ ಎತ್ತಿ ತೋರಿಸಿದ್ದಾರೆ.

## ತಾತ್ವಿಕ ವಿಮರ್ಶೆ (ಲೇಖಕನಿಂದ)

ಇಲ್ಲಿ ಪರಾಶರರು ಅನೀಶ್ವರೀವಾದದ ಹಾಗೂ ಅದಕ್ಕೆ ಪೂರಕವಾದ ಎಲ್ಲ ಅದ್ವೈತ ತತ್ವಗಳನ್ನು ಸಂಪೂರ್ಣವಾಗಿ ಅಲ್ಲಗಳೆದು ಪ್ರಕೃತಿಯನ್ನು ನಿಚ್ಚಳೆಯನ್ನಾಗಿ ಹಾಗೂ ಜಡಳನ್ನಾಗಿ ತೆಗೆದುಕೊಂಡು – ಪುರುಷ(ಆತ್ಮ)ನಿಗೆ ಕಿಂಚಿತ್ ಸ್ವಾತಂತ್ರ್ಯ ವನ್ನು ಕೊಟ್ಟು – ದೇವರನ್ನು ಸರ್ವತಂತ್ರ ಸ್ವತಂತ್ರನನ್ನಾಗಿ – ನಿರ್ದೇಶಿಸಿದುದ ಲ್ಲದೆ, ಎಲ್ಲ ಅಂಶಗಳಲ್ಲಿ ಅವನೇ ಮಾಡಿ ಮಾಡಿಸುವವ ಎಂಬುದನ್ನೇ ಅವನಿಗೆ ಮಾಡಬೇಕಾದುದು ಏನೂ ಇಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಹಾಗೂ ಭಗವಾನ್ ಪರಾಶರರು – ಬಿಂಬ-ಪ್ರತಿಬಿಂಬದ ಸ್ಪಷ್ಟ ಕಲ್ಪನೆ ನೀಡಿ, ವಿಷ್ಣುವೇ ಸೃಷ್ಟಿ-ಸ್ಥಿತಿ-ಲಯಗಳಿಗೆ ಸ್ಥಾಯಿ, ಅವನ ಪ್ರೇರಣೆಯಿಂದಲೇ ಸಮಸ್ತ ಜಗತ್ತು ಚಲಿಸುತ್ತದೆ ಎಂಬುದನ್ನು ವಿವರಿಸಿ,

ವಿಷ್ಣುವನ್ನು ವಾಸುದೇವ ನಾಮದಿಂದ ಪ್ರತಿಪಾದನೆ ಮಾಡಿ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ನಾಮ ವಿಶೇಷದೊಂದಿಗೆ ಕ್ರಿಯಾವಿಶೇಷವಾದ ಸಾತ್ವಿಕ-ರಾಜಸ-ತಾಮಸ ಗುಣಕ್ರಿಯೆಗಳನ್ನು ವಿವರಿಸಿ, ತಾರತಮ್ಯ ದೇವ ಭೂತಾದಿ ದ್ವೈತ ಕಲ್ಪನೆಯನ್ನು ಸ್ಪಷ್ಟಪಡಿಸಿದ್ದಾರೆ.

ಪ್ರಮುಖವಾಗಿ ಸೃಷ್ಟಿಕಾರ್ಯದ ಶ್ರೀಶಕ್ತಿಸಮನ್ವಿತ ವಿಷ್ಣುವನ್ನು ಜಗತ್ಪಾಲಕ ನಾಗಿ – ಭೂಶಕ್ತಿಯುಕ್ತ ಬ್ರಹ್ಮದೇವರಲ್ಲಿ ಜಗತ್ ಸೃಷ್ಟಿಯನ್ನು – ನೀಲಶಕ್ತಿ ಯುಕ್ತ ರುದ್ರದೇವರಲ್ಲಿ ಸಂಹಾರಶಕ್ತಿಯೂ ವಿಷ್ಣುವೇ ಎಂಬುದನ್ನು ಹೇಳಿ 'ವಿಷ್ಣುರೇವಸರ್ವಕರ್ತಾ ರಾಗಮೋದಿತಃ' ಎಂಬುದನ್ನು ದೃಢಪಡಿಸಿದ್ದಾರೆ.

**ಇತಿ ವಿಮರ್ಶಾಸಹಿತ ಬೃಹತ್ ಪರಾಶರ ಹೋರಾಶಾಸ್ತ್ರದ**
**ಸೃಷ್ಟಿಕ್ರಮ ವರ್ಣನಾಧ್ಯಾಯ ಸಮಾಪ್ತಃ**



## ೨ನೇ ಅಧ್ಯಾಯ

# ಅವತಾರಕ್ರಮ ವರ್ಣನಾಧ್ಯಾಯ

### ಮೈತ್ರೇಯ ಉವಾಚ :

ರಾಮಕೃಷ್ಣಾದಯೋ ಯೇ ಯೇ ಹಾವತಾರಾ ರಮಾಪತೇಃ ।
ತೇಪಿ ಜೀವಾಂಶಸಂಯುಕ್ತಾಃ ಕಿಂವಾ ಭ್ರೂಹಿ ಮುನಿಶ್ವರ ॥೧॥

ಮೈತ್ರೇಯರು ಪ್ರಶ್ನಿಸಿದರು :

ಹೇ ಮುನೀಶ್ವರನೇ ! ರಾಮಕೃಷ್ಣಾದಿ ವಿಷ್ಣುವಿನ ಅವತಾರಗಳು ಜೀವಾಂಶ ಸಂಯುಕ್ತವಾಗಿವೆ. ಆದ್ದರಿಂದ ಇವರನ್ನು ಪೂರ್ಣ ವಿಷ್ಣುವೆಂದು ಗಣಿಸುವುದೇ? ನನಗೆ ತಿಳಿಯುವಂತೆ ತಿಳಿಸುವುದು.

### ಪರಾಶರ ಉವಾಚ :

ರಾಮಃ ಕೃಷ್ಣಶ್ಚ ಭೋ ವಿಪ್ರ! ನೃಸಿಂಹಃ ಸೂಕರಸ್ತಥಾ ।
ಎತೆ ಪೂರ್ಣಾವತಾರಾಶ್ಚ ಹಾನ್ಯೆ ಜೀವಾಂಶಕಾನ್ವಿತಾಃ ॥೨॥

ಹೇ ಸದ್ ವಿಪ್ರನೆ! ರಾಮ, ಕೃಷ್ಣ, ನೃಸಿಂಹ ಹಾಗೂ ವರಾಹ ಈ ನಾಲ್ಕು ಅವತಾರಗಳು ಪೂರ್ಣತಃ ಪರಮಾತ್ಮನ ಅವತಾರ ಅಥವಾ ಅಂಶದಿಂದ ಕೂಡಿದ್ದು, ಅನ್ಯ ಅವತಾರಗಳು ಜೀವಾಂಶ ಸಮನ್ವಿತ ಅಥವಾ ಕ್ರಿಯೆ ನಿಮಿತ್ತವಾದವುಗಳು.

ಎಂಬುದನ್ನು ಹೇಳುತ್ತ ವಿಷ್ಣುವಿನ ಉಳಿದ ಅವತಾರಗಳೂ ಪೂರ್ಣವಾದರೂ ಕಾರ್ಯನಿಮಿತ್ತವಾದವುಗಳಾದ್ದರಿಂದ ಅದರ ಕಾರ್ಯ ಮುಗಿದೊಡನೆ ಅವತಾರ ಸಮಾಪ್ತಿ ಎಂದರ್ಥವಲ್ಲದೆ – ಅವು ಜೀವಾಂಶವೆಂದಲ್ಲ. ಹಾಗಾದರೆ ಪರಶು ರಾಮಾವತಾರ ಚಿರಂಜೀವರಾದ್ದರಿಂದ ಅವರ ಅವತಾರ ಸಮಾಪ್ತಿಯನ್ನು ಹೇಗೆ ವಿಶ್ಲೇಷಿಸುವಿರೆಂದರೆ ಪರಾಶರರೇ ಮುಂದಿನ ಶ್ಲೋಕದಲ್ಲಿ ಅದಕ್ಕೆ ಉತ್ತರಿಸು ತ್ತಾರೆ–

ಅವತಾರಾಣ್ಯನೇಕಾನಿ ಹಾಜಸ್ಯ ಪರಮಾತ್ಮನಃ
ಜೀವಾನಾಂ ಕರ್ಮ ಫಲದೋ ಗ್ರಹರೂಪಿ ಜನಾರ್ಧನಃ ॥೩॥

ದೈತ್ಯಾನಾಂ ಬಲನಾಶಾಯ ದೇವಾನಾಂ ಬಲವೃದ್ಧಯೇ ।
ಧರ್ಮಸಂಸ್ಥಾಪನಾರ್ಥಾಯ ಗ್ರಹಾಜ್ಞಾತಃ ಶುಭಃ ಕ್ರಮಾತ್ ॥೪॥

ಜನ್ಮರಹಿತನಾದ ಪರಮಾತ್ಮನಿಗೆ ಅನೇಕ ಅವತಾರಗಳಿವೆ. ಅವುಗಳಲ್ಲಿ ಮೂರು ಅವತಾರ ಹಾಗೂ ಬಿಂಬರೂಪದಿಂದ ದೇವತೆಗಳಲ್ಲಿ ಶಕ್ತಿದರ್ಶನ ಎಂದೇ ಗ್ರಹಿಸುವರು. ಅದಕ್ಕೆ ಸೂರ್ಯಾದಿ ಗ್ರಹರೂಪಿ ಜನಾರ್ಧನನ ಅವತಾರ ಜೀವನಿಗೆ ಶುಭಾಶುಭ ಫಲದಾಯಕವಾಗಿವೆ. ಅದೇ ಶಕ್ತಿ ದೈತ್ಯರಿಗೆ ಬಲನಾಶಕವಾಗಿದೆ. ದೇವತೆಗಳಿಗೆ ಬಲವೃದ್ಧಿ ಹಾಗೂ ದೈತ್ಯರಿಗೆ ಬಲನಾಶ-ಗ್ರಹಗಳ ರೂಪದಿಂದ ಪರಮಾತ್ಮ ಕೊಡುತ್ತಾನೆ. ಧರ್ಮಸಂಸ್ಥಾಪನಾರ್ಥವಾಗಿಯೇ ಗ್ರಹಗಳ ಈ ಅವತಾರ ಲೋಕಕಲ್ಯಾಣಕ್ಕಾಗಿ ಆಗಿವೆ.

## ತದ್ಯಥಾ

ರಾಮೋವತಾರಃ ಸೂರ್ಯಸ್ಯ ಚಂದ್ರಸ್ಯ ಯದುನಾಯಕಃ
ನೃಸಿಂಹೋ ಭೂಮಿಪುತ್ರಸ್ಯ ಬುದ್ಧಃ ಸೋಮಸುತಸ್ಯ ಚ ॥೫॥

ವಾಮನೋ ವಿಭುಧೇಜ್ಯಸ್ಯ ಭಾರ್ಗವೋ ಭಾರ್ಗವಸ್ಯ ಚ
ಕೂರ್ಮೋ ಭಾಸ್ಕರ ಪುತ್ರಸ್ಯ ಸೈಂಹಿ ಕೆಯಸ್ಯ ಸೂಕರಃ ॥೬॥

ಕೇತೋರ್ಮೀನಾವತಾರಶ್ಚಯೇ ಚಾನ್ಯೆ ತೇಪಿ ಖೇಟಿಜಾಃ
ಪರಾತ್ಮಾಂಶೋಧಿಕೋ ಯೇಷುತೆ ಸರ್ವೆ ಖೇಚರಾಭಿಧಾಃ ॥೭॥

ಇಲ್ಲಿ

| | | |
|---|---|---|
| ಸೂರ್ಯಗ್ರಹದ ಅಧಿದೇವತೆ | → | ರಾಮ |
| ಚಂದ್ರ ಗ್ರಹದ ಅಧಿದೇವತೆ | → | ಕೃಷ್ಣ (ಯದುನಾಯಕ) |
| ಮಂಗಳ ಗ್ರಹದ ಅಧಿದೇವತೆ | → | ನೃಸಿಂಹ |
| ಬುಧ ಗ್ರಹದ ಅಧಿದೇವತೆ | → | ಬುದ್ಧ |
| ಗುರು ಗ್ರಹದ ಅಧಿದೇವತೆ | → | ವಾಮನ |
| ಶುಕ್ರ ಗ್ರಹದ ಅಧಿದೇವತೆ | → | ಭಾರ್ಗವರಾಮ |
| ಶನಿ ಗ್ರಹದ ಅಧಿದೇವತೆ | → | ಕೂರ್ಮ |
| ರಾಹು ಗ್ರಹದ ಅಧಿದೇವತೆ | → | ವರಾಹ |
| ಕೇತು ಗ್ರಹದ ಅಧಿದೇವತೆ | → | ಮೀನ |
| ಹರ್ಷಲ (ಇಂದ್ರ)ಗ್ರಹದ ಅಧಿದೇವತೆ<br>ನೆಪ್ಚ್ಯೂನ್ (ವರುಣ) ಗ್ರಹದ ಅಧಿದೇವತೆ | → | ಕಲ್ಕಿ |

ಇದರ ಹೊರತಾಗಿ ಅನ್ಯ ಅವತಾರಗಳು ಅವುಗಳ ಗ್ರಹಗಳಿಂದ ಆಗಿವೆ. ಯಾವ ವ್ಯಕ್ತಿಯಲ್ಲಿ ಪರಮಾತ್ಮನ ವಿಭೂತಿ ಅಂಶ ಹೆಚ್ಚಾಗಿದೆಯೋ ಅವರನ್ನೇ (ಖೇಚರ) ಆಕಾಶದಲ್ಲಿ ಗಮನ ಮಾಡುವ ದೇವತೆಗಳೆಂದೇ ಪರಿಗಣಿಸುತ್ತೇವೆ. ಮುಂದೆ,

ಜೀವಾಂಶಕತಾ ಯೇಷಾ ಜೀವಸ್ತೆ ವೈಪ್ರಕೀರ್ತಿತಾಃ
ಸೂರ್ಯಾದಿಭ್ಯೋ ಗ್ರಹೇಭ್ಯಶ್ಚ ಪರಮಾತ್ಮಾಂಶನಿಃ ಸೃತಾಃ ॥೮॥

ರಾಮಕೃಷ್ಣಾದಯಃ ಸರ್ವೇಹಾವತಾರಾ ಭವಂತಿ ವೈ
ತತ್ರೈವ ತೇ ವಿಲೀಯಂತ ಪುನಃ ಕಾರ್ಯೋತ್ತರೆ ಸದಾ ॥೯॥

ಜೀವಾಂಶನಿಃ ಸೃತಾಸ್ತೇಷಾಂ ತೆಭ್ಯೋಜಾತಾ ನರಾದಯಃ
ತೇಪಿ ತತ್ರೈವ ಲೀಯಂತೆ ತೇವ್ಯಕ್ತಸಮಯಂತ ಹಿ ॥೧೦॥

ಇದೇ ಅಧ್ಯಾಯದ ಮೂರನೇ ಶ್ಲೋಕದಲ್ಲಿ ವಿಶದಪಡಿಸಿದಂತೆ ಶುಭಾಶುಭ ಫಲ ನೀಡಲು ಸಮರ್ಥರು – ಖೇಚರರೆನಿಸಿಕೊಂಡರೆ ಆ ಶಕ್ತಿಯಿಲ್ಲದವರು – ಜೀವಾಂಶವೇ ಹೆಚ್ಚಾಗಿದ್ದವರೂ ಜೀವಿಗಳೆನ್ನಿಸಿಕೊಳ್ಳುವರು – ರಾಮಕೃಷ್ಣಾದಿ ಅವತಾರಗಳು ಪರಮಾತ್ಮಾಂಶದಿಂದ ಆದವುಗಳು – ರಾಮಕೃಷ್ಣಾದಿ ಅವತಾರಗಳಿಂದ ಅವತೀರ್ಣ ಪರಮಾತ್ಮ ತನ್ನ ಅವತಾರ ಕಾರ್ಯ ಪೂರ್ತಿಗೊಳಿಸಿ – ಮತ್ತೆ ಮೂಲರೂಪದಲ್ಲಿ ವಿಲೀನವಾಗುತ್ತದೆ. ಇದೇ ತರಹ ಸೂರ್ಯಾದಿ ಗ್ರಹದಿಂದ ನಿರ್ಗತವಾದ ಜೀವಾಂಶವೂ ಮನುಷ್ಯಾದಿ ಪ್ರಾಣಿ ರೂಪ ಪಡೆಯುತ್ತದೆ. ಅದು ತನ್ನ ಕಾರ್ಯ ಕಾಲ ಸಮಾಪ್ತಿ ನಂತರ ಸ್ವಸ್ಥಾನಕ್ಕೆ ತಿರುಗುತ್ತದೆ (ಆತ್ಮರೂಪಿಯಾಗುತ್ತದೆ) ಪ್ರಳಯಾದಿ ಕಾಲದಲ್ಲಿ (ಮಹಾಪ್ರಳಯ ಎಲ್ಲ ಗ್ರಹಗಳು ಒಂದೇ ಅಂಶದಲ್ಲಿ ಬಂದು ಕೂಟ ಮಾಡಿದಾಗ ಕಲ್ಪದ ಆದಿ, ಅಂತ್ಯದಲ್ಲಿ) ಪರಮಾತ್ಮನಲ್ಲಿ ಅಡಗಿರುತ್ತವೆ ಮತ್ತೆ ಕರ್ಮಾನುಸಾರ ಪ್ರಕಟವಾಗುತ್ತವೆ.

ಇದಂ ತೇ ಕಥಿತಂ ವಿಪ್ರ ಸರ್ವ ಯಸ್ಮಿನ್ ಭವೇದಿತಿ ।
ಭೂತಸ್ಯಾಪಿ ಭವಿಷ್ಯಂತಿ ವೇತ್ತಿಸರ್ವಜ್ಞತಾಮಯಾತ್ ॥೧೧॥

ವಿನಾತಜ್ಜ್ಯೋತಿಷಾಂ ನಾನ್ಯೋಜ್ಞಾತುಂ ಶಕ್ನೋತಿ ಕಹಿಚಿತ್ ।
ತಸ್ಮಾದವಶ್ಯಮ ಧ್ಯೇಯಂ ಬ್ರಾಹ್ಮಣೈಶ್ಚ ವಿಶೇಷತಃ ॥೧೨॥

ಯೋ ನರಃ ಶಾಸ್ತ್ರಮಜ್ಞಾತ್ವಾ ಜ್ಯೋತಿಷಾಂ ಖಲುನಿಂದತಿ
ರೌರವಂ ನರಕಂ ಭುಕ್ತ್ವಾ ಚಾಂಧತ್ವಂ ಚಾನ್ಯಜನ್ಮನಿ ॥೧೩॥

ಹೇ ಮೈತ್ರೇಯನೆ, ನಾನು ಪ್ರಸನ್ನ ಮನಸ್ಸಿನಿಂದ ಸೃಷ್ಟಿ ಪ್ರಲಯ ಅವತಾರ

ಆದಿ ಎಲ್ಲ ವಿಷಯ ನಿನಗೆ ವಿವರಿಸಿದ್ದೇನೆ. ಈ ಎಲ್ಲ ಜ್ಞಾನ ಯಾರಲ್ಲಿರುವುದೋ ಅವನು ಭೂತ, ಭವಿಷ್ಯತ್, ವರ್ತಮಾನ ಎಲ್ಲವನ್ನೂ ತಿಳಿದವನಾಗುವನು ಹಾಗೂ ಸರ್ವಜ್ಞನೆನಿಸಿಕೊಳ್ಳುವನು. ಜ್ಯೋತಿಷ್ಯಶಾಸ್ತ್ರದ ಹೊರತಾಗಿ ಯಾರು ಈ ಎಲ್ಲ ವಿಷಯ ತಿಳಿಯಲಾರರು. ಆದ್ದರಿಂದ ಈ ಶಾಸ್ತ್ರ ವಿಶೇಷತಃ ಬ್ರಾಹ್ಮಣರಿಗೆ ಅವಶ್ಯ, ಅಭ್ಯಸನೀಯವಾಗಿದೆ. ಯಾರು ಈ ವಿಷಯ ತಿಳಿದಿಲ್ಲವೋ ಅವರು ಮಾತ್ರ ಜ್ಯೋತಿಷ್ಯವನ್ನು ನಿಂದಿಸುತ್ತಾರೆ. ಅಂತಹವರು ರೌರವ ನರಕಕ್ಕೆ ಭಾಗೀದಾರ ರಾಗುತ್ತಾರೆ. ಹಾಗೂ ಮುಂದಿನ ಜನ್ಮದಲ್ಲಿ ಅಂಧರಾಗಿ ಜಾತ್ಯಾಂಧರಾಗಿ ಹುಟ್ಟುತ್ತಾರೆ.

**ಟೀಕೆ :** ಇಲ್ಲಿ ರಾಮ, ಕೃಷ್ಣ, ನರಸಿಂಹ, ವರಾಹ – ಈ ನಾಲ್ಕು ಅವತಾರಗಳು ಪೂರ್ಣವೆಂದು ವಿಶದ ಅವತಾರ ಗೌಣವೆಂದು ವಿವರಿಸಿದಂತಾಗಿದ್ದು ಪರಮಾತ್ಮನ ಎಲ್ಲ ಅವತಾರಗಳು ಪರಿಪೂರ್ಣವಿದ್ದು ಯಾವುದು ಹೆಚ್ಚು ಕಡಿಮೆ ಇಲ್ಲವಾಗಲೂ ಒಂದೋದು ಅವತಾರಕ್ಕೂ ಒಂದೊಂದು ವಿಶೇಷತೆಯಿದ್ದು, ಇಲ್ಲಿ ಗ್ರಹಗಳ ಶಕ್ತ್ಯಾನುಸಾರ – ಅಂದರೆ ಸೃಷ್ಟಿಕಾರ್ಯದಲ್ಲಿ ಅವರಿಗೆ ಇತ್ತ ಸ್ವಾತಂತ್ರ್ಯ(ದತ್ತ)ದ ಮೇರೆಗೆ ಮಹತ್ವ ಹೇಳಿದ್ದು ಸೂರ್ಯ, ಚಂದ್ರ, ಮಂಗಳ, ರಾಹು ಗ್ರಹಗಳ ಪ್ರಾಭಲ್ಯಾನುಸಾರ ವಿಶೇಷ ಶಕ್ತಿ ಹೇಳಿ ಅದು ದೇವರೀತ್ತುದೆಂದೆ ಸೃಷ್ಟೀಕರಿಸಿ ಉಳಿದ ಗ್ರಹಗಳ ಶಕ್ತಿ ಬುಧ, ಶನಿ, ನಪುಂಸಕ ಗ್ರಹಗಳಾಗಿದ್ದು – ಶುಕ್ರ ತೇಜಃಪುಂಜ ನಾಗಿದ್ದರೂ – ಕೇವಲ ವಿಲಾಸಿ ಕಾಲ್ಪನಿಕ ಗ್ರಹವಾದ್ದರಿಂದ ಕೇತು ಅಂಜುಗಳ ಗ್ರಹವಾದ್ದರಿಂದ – ಅವುಗಳ ಪ್ರಾಬಲ್ಯ ಕಡಿಮೆಯಾಗುವುದರಿಂದ – ಜೀವಾಂಶ ಹೆಚ್ಚು ಎಂದು ವಿವರಿಸಿದ ಅವತಾರ ಶಕ್ತಿಗೂ, ಗ್ರಹ ಶಕ್ತಿಗೂ ಅಂತರವಿದೆ. ಉಳಿದ 720 ಗ್ರಹಗಳು (ಋಕ್ ಸಂಹಿತೆ 'ಸಪ್ತಶತಾನಿ ವಿಂಶತಿ' ಎಂದು ಸ್ಪಷ್ಟಪಡಿಸಿದೆ. ಅಷ್ಟಕ 2, ಅಧ್ಯಾಯ 3, ಅನುವಾದ 22, ಸೂಕ್ತ 164, ಸೂಕ್ತ 5) ಮನುಷ್ಯನ ಮೇಲೆ ಪ್ರಭಾವ ಬೀರುವಲ್ಲಿ ಶುಭಾಶುಭ ಫಲ ನೀಡುವಲ್ಲಿ – ಅಷ್ಟು ಪ್ರಖರತೆ ಪಡೆಯದಿರುವುದರಿಂದ ಬೇಡವೆಂದು ತಿಳಿಸಿದ್ದು, ಅವತಾರ ವಿಷಯದ ಈ ಅಂಶ ಗ್ರಹಿಸಕೂಡದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅವತಾರ ವರ್ಣನಾಧ್ಯಾಯ ಸಮಾಪ್ತಃ**



## ೩ನೇ ಅಧ್ಯಾಯ

# ಅಥ ಗ್ರಹಸ್ವರೂಪ ವರ್ಣನಾಧ್ಯಾಯಃ

**ಮೈತ್ರೇಯ ಉವಾಚ:**

ಗ್ರಹಾವತಾರೋ ಭಗವಾನ್। ಯಥಾಭೂತ ತತ್ಕೃಪಾಲುನಾ
ಯಥಾವದುಕ್ತಂ ನಿಖಿಲಂ ಶ್ರುತ್ವಾ ಪ್ರೀತೋಽಸ್ಮಿಸಾಪ್ರತಂ ॥೧॥

ಪುನಃ ಪೃಚ್ಛಾಮಿ ಸರ್ವಜ್ಞ । ಭ್ರೂಹಿ ಗ್ರಹಗಣಸ್ಯತು ।
ಗುಣಂ ರೂಪಾದಿಕಂ ಚೈವ ವಿಧಿವತ್ ಪ್ರಣತಾಯಮೆ ॥೨॥

ಕೃಪಾಳುವಾದ ಹೇ ಭಗವನ್, ಗ್ರಹಗಳ ಅವತಾರ ಯಥಾವತ್ ತಮ್ಮ ಮುಖದಿಂದಲೇ ಕೇಳಿ ಸಂಪ್ರೀತನಾದೇನು ಹೇ ಸರ್ವಜ್ಞನೇ. ಮತ್ತೆ ನಾನು ಗ್ರಹಗಳ ಗುಣ, ರೂಪ, ಆದಿ ವಿಷಯತ್, ನಮ್ರತಾದಿಂದ ತಮ್ಮನ್ನು ಪ್ರಶ್ನಿಸುತ್ತೇನೆ. ತಾವು ದಯವಿಟ್ಟು ವಿಧಿವತ್ತ ವಿವರಿಸುವ ಕೃಪೆ ಮಾಡಿರಿ.

**ಪರಾಶರ ಉವಾಚ:**

ನಕ್ಷತ್ರಾಣಾಂ ಗ್ರಹಾಣಾಂ ಚ ಯಾದೃಶಿ ನಭಸಿಸ್ಥಿತಿಃ ।
ಕಥಯಿಷ್ಯಾಮಿ ತಾವಾದೌ ಶಾಂತಚೇತಾ ನಿಶಾಮಯಿ ॥೩॥

ತೇಜಃ ಪುಂಜಾನು ವೀಕ್ಷ್ಯಯಂತೆ ಗಗನೆ ರಜನೀಷುಯೇ
ನಕ್ಷತ್ರ ಸಂಜ್ಞಕಾಸ್ತೆ ತುನ ಕ್ಷರಂತೀತ ನಿಶ್ಚಲಾ ॥೪॥

ವಿಪುಲಾಕಾರವಂತೋಽನ್ಯೋ ಗತಿಮಂತೋ ಗ್ರಹಾಃಕಿಲ ॥
ಸ್ವಗತ್ಯಾ ಭಾನಿ ಗ್ರಹಂತಿ ಯತೋಽತಸ್ತೆ ಗ್ರಹಾಮಿಧಾಃ ॥೫॥

ಪೂರ್ವಮಾಶಾಂ ವ್ರಜಂತೋಽಪಿ ಪ್ರವಹಪ್ರೇರಿತಾಸ್ತುತೇ॥
ಪಶ್ಚಿಮಸ್ಯಾಂ ದಿಶಾ ಸದಾ ಗಚ್ಛಂತ ಇವಭಾಂತಿವೈ ॥೬॥

**ಪರಾಶರ ಹೇಳಿದುದು–**

ಆಕಾಶೀಯ ನಕ್ಷತ್ರ ಅದೇ ರೀತಿ ಅಂತರಿಕ್ಷೀಯಾ ಗ್ರಹಗಳ ಸ್ಥಿತಿಯನ್ನು ವಿವರಿಸುತ್ತೇನೆ – ಶಾಂತಚಿತ್ತನಾಗಿ ಕೇಳುವವನಾಗು – (ಇದು ಗಹನ ವಿಷಯ) ರಾತ್ರಿಯ ಸಮಯ ಆಕಾರದಲ್ಲಿ ತೇಜಃಪುಂಜವಾಗಿ ಕಾಣುವ ನಕ್ಷತ್ರಗಳು ನಿಶ್ಚಲದಲ್ಲಿ ಗಮನಶೀಲವಾಗಿವೆ (ಆಕಾಶದಲ್ಲಿ ಸಾಗುತ್ತಿರುತ್ತವೆ) ಚಲನಶೀಲ ವಾದ್ದರಿಂದಲೇ ನಕ್ಷತ್ರವೆನ್ನುವೆವು. ಉಳಿದ ವಿಪುಲ ಆಕಾರದ ಗತಿಶೀಲ – ತಮ್ಮ

ಗತಿಯಿಂದ ನಕ್ಷತ್ರಗಳನ್ನು ಹಿಡಿದುಕೊಳ್ಳುವ, ಅಂದರೆ ನಕ್ಷತ್ರ ಗ್ರಹ ಭೂಮಿಯ ಸಮ ರೇಖೆಯಲ್ಲಿ ಬರುವುದು, ಅದಕ್ಕೆ ಗ್ರಹವೆನ್ನುವೆವು – ಗ್ರಹಗಳು ಪೂರ್ವಾಭಿ ಮುಖ ಚಲನೆಯಲ್ಲಿದ್ದರೂ ವಾಯುವ್ಯ ಪ್ರವಾಹದಲ್ಲಿ – ಅವನಿಂದ ಪ್ರೇರಿತ ವಾಗೋ ಪಶ್ಚಿಮ ದಿಸೆಯಲ್ಲಿ ಚಲಿಸಿದಂತೆ ಕಾಣುತ್ತವೆ. (ಇದೆ ದೃಗ್ ಹಾಗೂ ಸಿದ್ಧಾಂತ ಗಣಿತ ವ್ಯತ್ಯಾಸ) – ಇಲ್ಲಿ ನಕ್ಷತ್ರ ಗ್ರಹಗಳ ವೈಜ್ಞಾನಿಕ ವಿವರಣೆ ನೀಡಿ ಆಕಾಶ ಅಂತರಿಕ್ಷ ಸ್ಫುಟವಾಗಿ ತೋರಿಸಿದ್ದಾರೆ.

ರಾಶಿಚಕ್ರಸ್ಯ ಯೋ ಭಾಗಃ ಸಮಾಃ ಸಪ್ತದ್ವಿಸಂಖ್ಯಾಕಾಃ
ಅಶ್ವಿನಿ ಭರಣೀತ್ಯಾದಿ ನಾಮ್ನಾ ಖ್ಯಾತಾ ಮಹಿತಲೇ ॥೭॥

ತದರ್ಕಮಿತ ಭಾಗಾಸ್ತು ಜ್ಞೇಯಾ ಮೇಷಾದಿನಾಮಕಾಃ
ರಾಶಯಃ ಸ್ಯುಃ ಸುವಿಧಿತಾ ಗ್ರಹಾಃ ಸೂರ್ಯಾದಿ ಸಂಜ್ಞಕಃ ॥೮॥

ಲಗ್ನ ಭವತಿ ರಾಶಿ ನಾಮುದಯೇ ಯದ್‌ವಶಾದಿಹ ।
ಶುಭಂ ಚಾಪ್ಯಶುಭಂ ಸರ್ವ ಫಲಂ ದದಾತಿ ವೈಗ್ರಹಾಃ ॥೯॥

ವೇದೋಲ್ಲೇಖಿತ ರಾಶಿ ಚಕ್ರಗಳ ಹೊಂದಾಣಿಕೆಯೊಂದಿಗೆ ಎಲ್ಲ ನಕ್ಷತ್ರ ಪುಂಜಗಳ 27 ವಿಭಾಗ – ಅಶ್ವಿನಿ, ಭರಣಿ ಆದಿ 27 ನಕ್ಷತ್ರಗಳು ಪ್ರಸಿದ್ಧವಾಗಿವೆ (ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯಾ, ಆಶ್ಲೇಷಾ, ಮಘಾ, ಪುಬ್ಬಾ, ಉತ್ತರಾ, ಹಸ್ತ, ಚಿತ್ತಾ, ಸ್ವಾತಿ, ವಿಶಾಖ, ಅನುರಾಧ, ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ತರಾಷಾಢ, ಶ್ರವಣ, ಧನಿಷ್ಠ, ಶತಭಿಷ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ) – ಈ ಭಚಕ್ರ ಸಮಾನವಾಗಿ ದ್ವಾದಶ ವಿಭಾಗ ಮಾಡಿದ್ದು ಕ್ರಮಶಃ ಮೇಷ, ವೃಷಭ ಆದಿ 12 ರಾಶಿಗಳು. (ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ, ಮೀನ) ಇಲ್ಲಿ ಕ್ರಮಶಃ ವಿಶೇಷವಾಗಿ ಪರಿಗಣಿಸುವುದು. ವೇದ ಮಂತ್ರಗಳಲ್ಲಿ ಕೃತ್ತಿಕ ಆರಂಭದಲ್ಲಿ ಬಂದುದರಿಂದ ಕೃತ್ತಿಕ ಎಂದು ಗಣಿಸಿದೆ. (ಕಲ್ಪಾದಿ ನಕ್ಷತ್ರವೆಂದು ಚಿತ್ತ, ಧನಿಷ್ಠ, ಚಾಂದ್ರಮಾನ, ಪೌರ್ಣಿಮಾ ನಕ್ಷತ್ರ ಸಂಖ್ಯೆ ಒಂದರ ನಂತರ ಅಂದರೆ ಚಿತ್ತಾ, ಚೈತ್ರ ಒಂದು ಬಿಟ್ಟು (ಸ್ವಾತಿ ಬಿಟ್ಟು) ವಿಶಾಖಿ, ವೈಶಾಖವೆಂದು ಸರಿ ಅರ್ಥ ಬಂದಮೇಲೆ ಪೂರ್ಣಿಮಾ ಹಾಗೂ ನಕ್ಷತ್ರ ಕ್ರಮ ಧನಿಷ್ಠಾದ ನಂತರ ತಪ್ಪುವುದ ರಿಂದ ವಿಶೇಷ ಹೇಳಿದಲ್ಲಿ ರಾಶಿ ಮೇಷವೆಂದೇ ಹೇಳಿದ್ದು ದೃಗ್ ಗಣಿತ ಸುಳ್ಳು ಗೊಂದಲ ತಪ್ಪಿಸಲು ವಿವರಿಸಿದ್ದಿದೆ – ಕೆಲ ಕೇತಕರಾದಿ ಗಣಿತಜ್ಞರು ರಾಶಿ ಪದ್ಧತಿ ಅವೈದಿಕವೆಂದದ್ದು (ಋಗ್‌ವೇದ ಅಷ್ಟಕ 2, ಅಧ್ಯಾಯ 3, ಅನುವಾಕ್ 32, ಸೂಕ್ತ 164, ಮಂತ್ರ 5 'ದ್ವಾದಶಾರಂ ನಹಿ ತಜ್ಜಕಾಯ ವರ್ವರ್ತ ಚಕ್ರಂ...' ಎಂದು ಸ್ಪಷ್ಟ

ಹೇಳಿದ್ದು) ಆ ಗೊಂದಲ ನಿವಾರಿಸಲೆಂದು ಮೇಷಾದಿ ಹೇಳಿ ಕ್ರಮಶಃ ಹೇಳಿದ್ದು ಅದರಂತೆ ಅಶ್ವಿನಿ ಹೇಳಿದ್ದಾರೆ.

ಅದರಂತೆ ಗ್ರಹಗಳ – ಸೂರ್ಯಾದಿ 7 ಹಾಗೂ ರಾಹು, ಕೇತು, ಹರ್ಷಲ, ನೆಪ್ಚ್ಯೂನ್ (ಇಂದ್ರ, ವರುಣ) ಅವು – ರ, ಚಂ, ಮ, ಬು, ಗು, ಶು, ಶ, ರಾ, ಕೇ, ಹ, ನೆ. (ಹರ್ಷಲ, ನೆಪ್ಚ್ಯೂನ್‌ರನ್ನು ಇಂದ್ರ, ವರುಣ) ಅದರಂತೆ ಕ್ಷಿತಿಜದ ಮೇಲೆ ಉದಿತ ರಾಶಿಯನ್ನು ಲಗ್ನವೆಂದು – ಹೇಳಿದ, ಸೂರ್ಯಾದಿ ಗ್ರಹಗಳೆಲ್ಲ ಲಗ್ನದ ಮೇಲಿಂದ ಶುಭಾಶುಭ ಫಲವನ್ನು ಕೊಡುತ್ತದೆ. ಒಟ್ಟಿನಲ್ಲಿ ಲಗ್ನ ಪ್ರಮುಖ ಅಂಶ.

ನಕ್ಷತ್ರಾಣಾಂ ಗ್ರಹಾಣಾಮ ಚ ಸಂಜ್ಞಾ ಗ್ರಂಥಾಂತರಾದ್ ಬುದ್ಯೆ।
ಜ್ಞೇಯಾ, ಗ್ರಹಾ ನವ ಪ್ರೊಕ್ತಾ ಸೂರ್ಯಾದ್ಯಾಸ್ತು ಖಚಾರಿಣಃ ॥೧೦॥

ತತ್ರಾರ್ಕ ಭೌಮಶನಯೋ ರಾಹೂ ಕೇತು ನಿಶಾಧಿಪಃ
ಕ್ಷೀಣ ಸ್ವೈತೆ ಸದಾ ಪಾಪಾಃ ಪಾಪಾಃ ಪಾಪಯುತೇ ಬುಧಃ ॥೧೧॥

ಶೇಷಾಃ ಸೌಮ್ಯ ಗ್ರಹಃ ಸಂತಿ ಸೌಮ್ಯಾಸೌಮ್ಯಾಃ ಶುಭಾಶುಭಾಃ ।
ತ್ರಿಕೋನ ತ್ರಿಷಡಯೇಶಾ ವಿಶೇಷಾತ್ತು ಶುಭಾ ಶುಭಾಃ ॥೧೨॥

ಗ್ರಂಥಾಂತರದಂತೆ ಗ್ರಹ ಹಾಗೂ ನಕ್ಷತ್ರಗಳ ಹೆಸರನ್ನು ತಿಳಿಯುವುದು ಅಂದರೆ ಒಂದೇ ಗ್ರಹ ಹಾಗೂ ನಕ್ಷತ್ರಗಳಿಗೆ ಅನೇಕ ಹೆಸರುಗಳಿರುವುದರಿಂದ ಅವುಗಳನ್ನು ಸರಿಯಾಗಿ ತಿಳಿದುಕೊಳ್ಳುವುದು ಗ್ರಹಗಳನ್ನು ಸೂರ್ಯಾದಿ ನವಗ್ರಹಗಳೆಂದು ಗ್ರಹಿಸುವುದು – ಗ್ರಹಗಳಲ್ಲಿ ಅಂತರಿಕ್ಷ ಚಾರಿಗಳು – ನಕ್ಷತ್ರಗಳು, ಆಕಾಶ ಚಾರಿಣಿಗಳು, ಅಂತರಿಕ್ಷವೂ ಆಕಾಶದ ನಿರ್ದಿಷ್ಟವಾದ ಭಾಗವಾಗಿರುವುದರಿಂದ ವೇದಗಳಿಗೂ ಇವಕ್ಕೂ ವ್ಯತ್ಯಯ ಬರುವುದಿಲ್ಲ. ಇವುಗಳಲ್ಲಿ -

ರವಿ<br>
ಭೌಮ (ಮಂಗಳ, ಕುಜ)<br>
ಶನಿ<br>
ರಾಹು – ಕೇತು<br>
ಕ್ಷೀಣಚಂದ್ರ

} ಪಾಪಗ್ರಹಗಳು

ಈ ಗ್ರಹಗಳಿಂದ ಕೂಡಿದ್ದರೆ ಬುಧನು ಪಾಪಗ್ರಹವೇ. ಶೇಷ – ಬುಧ, ಗುರು, ಶುಕ್ರ, ಪೂರ್ಣಚಂದ್ರ ಶುಭ ಗ್ರಹರು. ಈ ಗ್ರಹಗಳು ಶುಭ ಹಾಗೂ ಅಶುಭ ಫಲ ಕೊಡುವವುಗಳಾಗಿವೆ. ಈ ಗ್ರಹಗಳಿಗೆ ಕಾಲಮಿತಿ ಇದೆ. ಆ ಸಮಯದಲ್ಲಿಯೇ

ಶುಭಾಶುಭ ಫಲವನ್ನು ಕೊಡುತ್ತವೆ.

ಕಾಲಮಿತಿಯಲ್ಲಿ ಅಂದರೆ ತಮ್ಮ ಉದಯ ಕಾಲದಲ್ಲಿ

| ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|
| 22 ರಿಂದ 24 | 24 ರಿಂದ 25 | 28 ರಿಂದ 32 | 32 ರಿಂದ 36 | 16 ರಿಂದ 20 | 25 ರಿಂದ 28 | 36 ರಿಂದ 42 | 42 ರಿಂದ 48 | 49 ರಿಂದ 54 |

ಈ ಅಂಶ ಕೇವಲ ವಿಶೇಷಕ್ಕೆ ತೆಗೆದುಕೊಳ್ಳುವುದು ಒಬ್ಬನ ಕುಂಡಲಿಯಲ್ಲಿ ಮಂಗಳ ಬಲಿಷ್ಠನಾಗಿದ್ದರೆ ಶುಭ ಫಲದಾಯಕನಾಗಿದ್ದರೆ 28ರಿಂದ ಭಾಗ್ಯೋದಯ 32ರವರೆಗೆ ವಿಶೇಷ ಫಲವೆಂಬಲ್ಲಿ ಮಾತ್ರ.

ತ್ರಿಕೋನ (ನವಮ, ಪಂಚಮ) ಅಧಿಪರು ಹಾಗೂ ತ್ರಿಷಡೇಶರು (ತೃತೀಯ ಷಷ್ಠ) ಶುಭ (ತ್ರಿಕೋನ) ಅಶುಭ (ತ್ರಿಷಡೇಶರು) ಫಲದಾಯಕರು – ವಿವರಣೆ ಯೆಂದರೆ ಪಂಚಮ ನವಮಾಧಿಪರು ಶುಭಫಲದಾಯಕರು 3, 6, 11ರ ಅಧಿಪರು ಅಶುಭ ಫಲದಾಯಕರಾಗಿರುತ್ತಾರೆ.

## ಆತ್ಮಾದಿ ಸಂಜ್ಞೆ

### ಪರಾಶರ ಉವಾಚ:

ದಿವಾಕರೋಹಿ ವಿಶ್ವಾತ್ಮಾ ಮನಃ ಕುಮದಬಾಂಧವಃ ।
ಸತ್ವಂ ಕುಜೋ ಬುಧೋ ವಾಣಿದಾಯಕೊ ವಿಬುಧೈಃಸ್ಮೃತಃ ॥೧೩॥

ದೇವೇಜ್ಯೋ ಜ್ಞಾನಸುಖದೋ ಭೃಗುವೀರ್ಯದಾಯಕಃ ।
ಕ್ರೂರದೃಗ್ ವಿಬುಧೈರುಕ್ತಚ್ಛಯಾಸೂನಸ್ತು ದುಃಖದಃ ॥೧೪॥

ನೈಸರ್ಗಿಕ ಕಾರಕತ್ವ – ವೈಯಕ್ತಿಕ ಕಾರಕತ್ವ ಅಂಶಾದಿಗಳ ಮೇಲಿಂದ ಗಣಿಸುವುದು ಒಂದೇ ಆಗಿದ್ದರೆ ವಿಶೇಷ ಫಲ – ಸಮಸ್ತ ಸಂಸಾರದ ಆತ್ಮಾ ಸೂರ್ಯ (ಆತ್ಮಕಾರಕ) ಚಂದ್ರನು 'ಮನ ಚಂದ್ರ'. ಇಲ್ಲಿ ಕುಮುದ ಬಾಂಧವ ಶಬ್ದ ಅತಿ ಯೋಗ್ಯವಾಗಿದೆ. ಕ್ಷೀಣನಾಗುತ್ತಿದ್ದಂತೆ ಆ ಕಂಠಾಸನ ಶುಕ್ಲದಲ್ಲಿ – ವಿಕಸನ (ರವಿಗೆ ಕಮಲ ಆಕುಂಚನ ವಿಕಸನದಂತೆ) ಮಂಗಳ ಸತ್ವಕಾರಕ ಗ್ರಹ – ಇದು ಸತ್ವಕಾರಕ ಗ್ರಹ – ಮಂಗಳ ದೋಷಾದಿಗಳಿಗೆ ಅಷ್ಟು ಸರಿಯಾಗಲಾರದು ಎಂದು ಬಿ.ವಿ. ರಾಮನ್ ಹಾಗೂ ಅವರ ಶಿಷ್ಯರು ಎತ್ತುವ ಆಕ್ಷೇಪ. ಸತ್ವಕಾರಕತ್ವವೆ ಬೇರೆ,

ದುಷ್ಟ ಫಲವೇ ಬೇರೆ ಎಂಬುದು ಚಿಕ್ಕಮಕ್ಕಳಿಗೂ ಅರ್ಥವಾಗುವ ವಿಷಯ. ಸತ್ವ (ಶಕ್ತಿ)ವನ್ನು ನೀಡುವವ – ವೈಧವ್ಯ ಆಗಲಿಕೆ ಕೊಡಬಾರದೆಂದೇನಿಲ್ಲ. ಬುಧವಾಣಿ ಗುರು ಜ್ಞಾನ ಹಾಗೂ ಸುಖದಾಯಕ ಶುಕ್ರವೀರ್ಯ ಆದರಂತೆ ಛಾಯಾಪುತ್ರ (ಶನಿ) ದುಃಖ ಸ್ವರೂಪನು. ಈ ಎಲ್ಲ ಫಲಗಳು ಜನ್ಮಕುಂಡಲಿಯಲ್ಲಿ ಸೂರ್ಯಾದಿ ಗ್ರಹಗಳ ಪ್ರಬಲತೆ ಕಾರಕತ್ವ ಮಾರಕತ್ವದ ಮೇಲಿಂದ ದೊರೆಯುತ್ತದೆಯೇ ಹೊರತು ಕೇವಲ ಗ್ರಹಸ್ವರೂಪದಿಂದಲ್ಲ. ಶನಿ ದುಃಖ ಸ್ವರೂಪನಾದರೂ ವೃಷಭ ಲಗ್ನದಲ್ಲಿ ಸರ್ವಶುಭತ್ವವೂ ಅವನಿಗೆ ಒಪಿಸಿದೆ. ಈ ರೀತಿ ಲಗ್ನ ಕುಂಡಲಿಯ ಮೇಲೆ ವಿಚಾರ ಮಾಡುವುದು. ಈ ಕಾರಕಗಳು ಕೇವಲ ಸಾಮಾನ್ಯ ಹಾಗೂ ನೈಸರ್ಗಿಕ, ವೈಯಕ್ತಿಕ ಕಾರಕಗಳಲ್ಲ.

## ರಾಜಾದಿ ಸಂಜ್ಞೆ

ರಾಜಾನೌ ಭಾನುಹಿಮಗ್ ನೇತಾಜ್ಞೇಯೋ ಧರಾತ್ಮಜಃ ।
ಬುಧೊ ರಾಜಕುಮಾರಶ್ಚ ಸಚಿವೌ ಗುರುಭಾರ್ಗವೌ ॥೧೫॥

ಪ್ರೇಷ್ಯಕೋ ರವಿ ಪುತ್ರಶ್ಚ ಸೇನಾ ಸ್ವರ್ಭಾನುಪುಚ್ಛಕೌ ।
ಏವಂ ಕ್ರಮೇಣ ವೈ ವಿಪ್ರ ಸೂರ್ಯಾದಿಸ್ತು ವಿಚಿಂತಯೇತ್ ॥೧೬॥

ಹೇ ವಿಪ್ರನೇ, ಗ್ರಹಗಳಲ್ಲಿ – ಸೂರ್ಯ, ಚಂದ್ರರು ರಾಜರು. ಮಂಗಳ ಸೇನಾಪತಿ, ಬುಧ ರಾಜಕುಮಾರ, ಗುರು, ಶುಕ್ರರು ಮಂತ್ರಿಗಳು, ಶನಿ ಭೃತ್ಯ, ರಾಹು, ಕೇತು ಸೇನಾ ಸ್ವರೂಪರು.

## ಗ್ರಹವರ್ಣ

ರಕ್ತಶ್ಯಾಮೋ ದಿವಾಧೀಶೋ ಗೌರಗಾತ್ರೋ ನಿಶಾಕರಃ ।
ನಾತಿ ದೀರ್ಘಃ ಕುಜೋ ರಕ್ತೊ ದೂರ್ವ ಶ್ಯಾಮೋ ಬುಧಸ್ತಥಾ ॥೧೭॥

ಗೌರಗಾತ್ರೋ ಗುರುಜ್ಞೇಯಃ ಶುಕ್ರ ಶ್ಯಾಮಸ್ತಥೈವಚ ।
ಕೃಷ್ಣದೇಹೋ ರವೇಃ ಪುತ್ರೋ ಜ್ಞಾಯತೆ ದ್ವಿಜಸತ್ತಮ ॥೧೮॥

ರವಿ ವರ್ಣ ರಕ್ತಶ್ಯಾಮವಾಗಿಯೂ, ಚಂದ್ರ ವರ್ಣ ಬಿಳಿ(ಗೌರ)ವರ್ಣ ವಾಗಿಯೂ, ಮಂಗಲ ರಕ್ತಕೆಂಪಾಗಿಯೂ, ಬುಧ ಹಾಲಿನ ಬಿಳಿ ವರ್ಣದಂತೆ, ಗುರು ಬಿಳಿಯ ವರ್ಣ, ಶುಕ್ರ ಶ್ಯಾಮಲ ವರ್ಣ, ಶನಿ ಕಪ್ಪಾಗಿಯೂ ಇರುತ್ತದೆ. ದ್ವಿಜೋತ್ತಮನೆ.

## ಗ್ರಹ ದೇವತೆಗಳು

ವಹ್ನ್ಯಂಬ್ವಂಬುಶಿಖಿಜಾ ವಿಷ್ಣು-ವಿಡೌಜಃ ಶಚಿಕಾದ್ವಿಜಃ
ಸೂರ್ಯಾದೀನಾಂ ಖಗಾನಾಂ ತು ದೇವಜ್ಞೇಯಾಃ ಕ್ರಮೇಣಚ ॥೧೯॥

ಹೇ ಬ್ರಾಹ್ಮಣನೆ, ಆಕಾಶಕಾಯ(ಖಗಾನಾಂ – ಸೂರ್ಯಾದಿ)ಗಳ ದೇವತೆಗಳು ಈ ರೀತಿ ಕ್ರಮವಾಗಿವೆ. ಸೂರ್ಯ – ಅಗ್ನಿ, ಜಲ – ಚಂದ್ರ, ಮಂಗಳ – ಕಾರ್ತಿಕೇಯ, ಬುಧ – ವಿಷ್ಣು, ಗುರು – ಇಂದ್ರ, ಶುಕ್ರ – ಇಂದ್ರಾಣಿ (ಶನಿ), ಶನಿ – ಬ್ರಹ್ಮದೇವರು ಈ ರೀತಿಯಾಗಿಯೇ ಗ್ರಹಿಸುವುದು – ಹಾಗೂ ರಾಹು – ಕೇತು, ಛಾಯಾ ಗ್ರಹಗಳಾದ್ದರಿಂದ ದೇವತೆ ಹೇಳಿರುವುದಿಲ್ಲ. ಹರ್ಷಲನಿಗೆ ಇಂದ್ರನೆಂದು ನೆಪ್ಚೂನ್(ಸಮರಸ) ನಿಗೆ ವರುಣನೆಂದೆ ಕರೆಯುವುದರಿಂದ ದೇವತೆ ಹೆಸರಿಸಿಲ್ಲ.

## ಗ್ರಹಲಿಂಗ

ಕ್ಲೀಬೌದ್ಯಾ ಸೌಮ್ಯಶೌರೀಚ ಯುವತೀಂದು ಮೃಗೂದ್ವಿಜ ।
ನರಾಃ ಶೇಪಾಶ್ಚ ವಿಜ್ಞೇಯಾ ಭಾನುಭೌಮೋ ಗುರುಸ್ತಥಾ ॥೨೦॥

ಅಗ್ನಿ ಭೂಮಿ–ನಭಸ್ತೋಯ ವಾಯವಃ ಕ್ರಮತೋ ದ್ವಿಜ ।
ಭೌಮಾದೀನಾಂ ಗ್ರಹಾಣಾಂ ತು ತತ್ವಾನ್ಯೇತಾನಿ ವೈ ಕ್ರಮಾತ್ ॥೨೧॥

ಇಲ್ಲಿ ಬುಧ, ಶನಿ, ನಪುಂಸಕ, ಚಂದ್ರ, ಶುಕ್ರ, ಸ್ತ್ರೀ ಹಾಗೂ ಉಳಿದ ರವಿ ಭೌಮ ಗುರು – ಪುರುಷ ಗ್ರಹಗಳು ಹಾಗೂ ರವಿ ಭೌಮ(ಮಂಗಳ) – ಅಗ್ನಿತತ್ವ, ಚಂದ್ರ, ಶುಕ್ರ – ಜಲ ತತ್ವ ಬುಧ, ಭೂಮಿ, ಗುರು – ಆಕಾಶ, ಶನಿ – ವಾಯು ತತ್ವದವರು ಹೇ ದ್ವಿಜನೆ.

## ಗ್ರಹ ವರ್ಣ ಗುಣ

ಗುರು ಶುಕ್ರಾ ವಿಪ್ರವರ್ಣೋ ಕುಜಾರ್ಕೋ ಕ್ಷತ್ರಿಯಯೌ ದ್ವಿಜ ।
ಶಶಿಸೌಮ್ಯೌ ವೈಶ್ಯ ವರ್ಣೋ ಶನಿಃ ಶೂದ್ರೋ ದ್ವಿಜೋತ್ತಮ ॥೨೨॥

ಸಾತ್ವಿಕಾ ಭಾನು ಚಂದ್ರೇಜ್ಯ ರಾಜಸೌ ಸೌಮ್ಯ ಭಾರ್ಗವೌ ।
ತಾಮಸೌ ಕುಜಮಂದೌ ತು ಜ್ಞೇಯ ವಿದ್ವದ್ವರ್ಯೈಃ ಸದಾ ॥೨೩॥

ಗುರು, ಶುಕ್ರರು ಬ್ರಾಹ್ಮಣ ವರ್ಣದವರಾಗಿಯೂ ಸೂರ್ಯ, ಮಂಗಳರು ಕ್ಷತ್ರಿಯ ವರ್ಣದವರಾಗಿ, ಚಂದ್ರ, ಬುಧ ವೈಶ್ಯ ವರ್ಣದವರಾಗಿ ಹಾಗೂ ಶನಿ ಶೂದ್ರ ವರ್ಣದವನಾಗಿರುವನು ಹೇ ದ್ವಿಜೋತ್ತಮನೇ. ಅದರಂತೆ ಸೂರ್ಯ,

ಚಂದ್ರ, ಗುರು ಸಾತ್ವಿಕರಾಗಿ, ಬುಧ, ಶುಕ್ರ ರಾಜಸರಾಗಿ, ಶನಿ, ಮಂಗಳರು ತಾಮಸ ಗುಣದವರಾಗಿರುವರು ದ್ವಿಜೋತ್ತಮನೆ. ರಾಹು – ಕೇತುಗಳ ವಿವರವಿಲ್ಲದಾಗಲೂ ಅವರನ್ನು ಅಂತ್ಯಜರಲ್ಲಿಯೇ ತೆಗೆದುಕೊಳ್ಳುವುದು ದ್ವಿಜನೆ.

## ಗ್ರಹ ಸ್ವರೂಪ

ಮಧುಪಿಂಗಲದೃಕ್ ಸೂರ್ಯಃ ಛತುರಸ್ರಃ ಷುಚಿರ್ದ್ವಿಜ
ಪಿತ್ತ ಪ್ರಕೃತಿಕೋ ಧಿಮಾನ್ ಪುಮಾನಲ್ಪಕಚೋ ದ್ವಿಜ ॥೨೪॥

ಬಹುವಾತಕಫಃ ಪ್ರಾಜ್ಞಾಶ್ಚಂದ್ರೋ ವೃತ್ತತನುರ್ದ್ವಿಜ ।
ಶುಭದೃಂಗ್ ಮಧುವಾಕ್ಯಶ್ಚ ಚಂಚಲೋ ಮದನಾತುರಃ ॥೨೫॥

ರಕ್ತಾಕ್ಷಃ ಕ್ರೂರಹದ್ ಭೌಮಶ್ಚಪಲೋದಾರ ಮೂರ್ತಿಕಃ ।
ಪಿತ್ತಪ್ರಕೃತಿಕಃ ಕ್ರೋಧಿ ಕೃಶಾಮಧ್ಯತನುದ್ವಿಜ ॥೨೬॥

ವಪುಃ ಶ್ರೇಷ್ಠಃ ಕ್ಲಿಷ್ಟವಾಕ್ ಚ ಹ್ರಾತಿಹಾಸ್ಯರುಚಿರ್ಬುಧಃ ।
ಪಿತ್ತವಾನ ಕಫವಾನ್ ವಿಪ್ರ ಮಾರುತ ಪ್ರಕೃತಿಸ್ತಥಾ ॥೨೭॥

ಬೃಹದ್ಗಾತ್ರೋ ಗುರುಶ್ಚೈವ ಪಿಂಗಲೋ ಮೂರ್ದಜೇಕ್ಷಣ ।
ಕಫ ಪ್ರಕೃತಿಕೋ ಧಿಮಾನ್ ಸರ್ವಶಾಸ್ತ್ರ ವಿಶಾರದಃ ॥೨೮॥

ಸುಖೀ ಕಾಂತವಪುಃ ಶ್ರೇಷ್ಠಃ ಸುಂದರಾಕ್ಷೋಽಭೃಗೋಃ ಸುತಃ ।
ಕಫಾಧಿಕಾನಿಲಾತ್ಮಾ ಚ ಕಾವ್ಯಕೃದ್ ವಕ್ರ ಮೂರ್ಧಜಃ ॥೨೯॥

ಕೃಶದೀರ್ಘತನುಃ ಶೌರಿಃ ಪಿಂಗದೃಷ್ಟ್ಯಾನಿಲಾತ್ಮಕಃ ।
ಸ್ಥೂಲದಂತೋಲಸಃ ಪಂಘುಃ ಖರರೋಮಚೋ ದ್ವಿಜ ॥೩೦॥

ಧೂಮ್ರಕಾರೋ ನೀಲತನುರ್ವನಸ್ಥೋಽಪಿ ಭಯಂಕರಃ ।
ವಾತ ಪ್ರಕೃತಿಕೋ ಧೀಮಾನ್ ಸ್ವರ್ಭಾನುಸ್ತಾದೃಶಃ ಶಿಖೀ ॥೩೧॥

ರವಿಯು ಮಧು (ಜೇನುತುಪ್ಪ) ದಂತ ಪಿಂಗಲ ದೃಷ್ಟಿಯುಳ್ಳವನಾಗಿ ಚೌಕ ಶರೀರದವನಾಗಿ ಶೂದ್ರವರ್ಣನಾಗಿ, ಪಿತ್ತ ಪ್ರಕೃತಿಯದಾಗಿದ್ದು, ಬುದ್ಧಿವಂತನು ಹಾಗೂ ಅಲ್ಪ ಕೇಶಿ(ಸ್ವಲ್ಪ ಕೂದಲು)ಯಾಗಿದ್ದಾನೆ.

ಚಂದ್ರನು ವಾತ ಕಫ ವಿಶೇಷ ಉಳ್ಳವನಾಗಿದ್ದು, ವಿದ್ವಾನನಾಗಿ ದುಂಡು ಶರೀರ ಉಳ್ಳವನಾಗಿದ್ದಾನೆ. ದೃಷ್ಟಿ ಸುಂದರವಾಗಿದೆ. ಮೃದು(ಸಿಹಿ)ವಾಣಿ, ಚಂಚಲಮನದ ಚಂದ್ರ ಕಾಮಾತುರನಾಗಿದ್ದಾನೆ.

ಮಂಗಳನು ಕ್ರೋಧದಿಂದ ಕೆಂಪಾದ ಕಣ್ಣು, ಕ್ರೂರ ಹೃದಯ ಚಪಲನಾಗಿದ್ದು ಉದಾರನೂ, ಪಿತ್ತ ಪ್ರಕೃತಿಯವನಾಗಿ, ಕ್ರೋಧಿಯಾಗಿ, ಮಹಾಕಾಯನಾಗಿದ್ದಾನೆ. ಆದರೆ ಮಧ್ಯಮ ಶರೀರ ಉಳ್ಳವನು.

ಬುಧನು ಸುಂದರ ಶರೀರಿ, ಅನೇಕಾರ್ಥ ಕೊಡುವ ವಾಕ್ಯ, ಹಾಸ್ಯ, ಪ್ರೇಮ ಕೂಡಿದ ಹೃದಯದವನು, ಕಫ ವಾತ ಪ್ರಕೃತಿಯವನು ಆಗಿದ್ದಾನೆ.

ಗುರುವು ದೊಡ್ಡ ದೇಹ, ಹಳದಿ ವರ್ಣದ ಕೇಶ ಹಾಗೂ ನೇತ್ರದವನು, ಕಫ ಪ್ರಕೃತಿ, ಬುದ್ಧಿವಂತನು, ಎಲ್ಲ ಶಾಸ್ತ್ರ ಅಭಿಜ್ಞಾತನೂ ಆಗಿದ್ದಾನೆ.

ಶುಕ್ರನು ಸುಖಿ, ಸುಂದರ ಶರೀರಿ, ಸುಂದರ ಕಣ್ಣು, ಕಫ ವಾತ ಪ್ರಕೃತಿ, ಕಾವ್ಯ ನಿರ್ಮಾತ, ಗುಂಗುರ ಕೇಶದವನಾಗಿದ್ದಾನೆ ಹಾಗೂ ಶುಭಗ್ರಹನು ಆಗಿದ್ದಾನೆ.

ಶನಿಯು ದುರ್ಬಲ ಹಾಗೂ ಎತ್ತರ ಶರೀರಿ, ಪೀಲಾದೃಷ್ಟಿ, ವಾತ ಪ್ರಕೃತಿ, ಸ್ಥೂಲವಾದ ದಂತ, ಆಲಸಿ ಸ್ವಭಾವ, ಕುಂಭ ಹಾಗೂ ಕರ್ಕಶ ಸ್ವಭಾವ ಹಾಗೂ ಸುಂದರವಲ್ಲದ ಕೇಶಯುಕ್ತ ನೀಲವರ್ಣ.

ರಾಹುವು ಬೂದಿಯಂತಹ ನೀಲ ವರ್ಣ, ಕಾಡು ಮನುಷ್ಯ, ವಾತ ಪ್ರಕೃತಿ, ಬುದ್ಧಿವಂತಿಕೆಯ ಪ್ರವೃತ್ತಿ, ರಾಹು, ಕೇತುಗಳಾಗಿದ್ದಾರೆ.

### ಸೂರ್ಯಾದಿ ಗ್ರಹ ಧಾತು ಆದಿ

ಅಸ್ಥಿ ರಕ್ತ ಸ್ತಥಾ ಮಜ್ಜಾ ತ್ವಂಗ್‌ಮೇದೊ ವೀರ್ಯಮೇವಚ ।
ಸ್ನಾಯುರೇತೋ ಧಾತವಃ ಸ್ಯುಃ ಸೂರ್ಯಾದೀನಾಂ ಕ್ರಮಾದ್ ದ್ವಿಜ ॥೩೨॥

ದೇವಾಲಯ ಪಯೋವಹ್ನಿ ಕ್ರೀಡಾದಿನಾಂ ತಥೈವಚ ।
ಕೋಶ ಶಯ್ಯಾದ್ಯೋ ತ್ಕರಾಣಾಮೀ ಶಾಃ ಸೂರ್ಯಾದಯಃ ಕ್ರಮಾತ್ ॥೩೩॥

ಅಯನಕ್ಷಣವಾರರ್ತ್ತು –ಮಾಸಪಕ್ಷ ಸಮಾ ದ್ವಿಜ।
ಸೂರ್ಯಾದಿ ನಾಂ ಕ್ರಮಾಜ್ಞೇಯಾ ನಿರ್ವಿಶಂಕಂ ದ್ವಿಜೋತ್ತಮ ॥೩೪॥

ಕಟುಶ್ಚ ಲವಣಸ್ತಿಕ್ತೋ ಮಿಶ್ರಿತೋ ಮಧುರೋಮ್ಲಕಃ ।
ಕಷಾಯಃ ಕ್ರಮೆಶೋ ಜ್ಞೇಯಾಃ ಸೂರ್ಯಾದಿ ನಾಮಿಮೇಧಸಾ ॥೩೫॥

ರವಿ-ಮೂಳೆ, ಚಂದ್ರ-ರಕ್ತ, ಮಂಗಳ-ಮಜ್ಜಾ, ಬುಧ-ತ್ವಚೆ, ಗುರು-ಮೇಧಸ್ಸು,

ಶುಕ್ರ-ವೀರ್ಯ, ಶನಿ-ಸ್ನಾಯು-ದೇಹದ ಅಂಗಗಳಾದರೆ ಹೇ ದ್ವಿಜೋತ್ತಮನೆ, ರವಿ-ಮಂದಿರ, ಚಂದ್ರ-ಜಲಾಶಯ, ಮಂಗಳ-ಅಗ್ರಹಾರ, ಬುಧ-ಕ್ರೀಡಾಸ್ಥಳ, ಗುರು-ಕೋಶ, ಶುಕ್ರ-ಶಯನಗೃಹ, ಶನಿ-ನೀಚಸ್ಥಾನಗಳಾಗಿದೆ. ಅಯನ (ಉತ್ತರಾಯಣ, ದಕ್ಷಿಣಾಯಣ), ಸ್ವಾಮಿ-ರವಿ, ಕ್ಷಣ-ಚಂದ್ರ, ಮಂಗಳ-ದಿನ, ಬುಧ-ಋತು, ಗುರು-ಮಾಸ, ಶುಕ್ರ-ಪಕ್ಷ, ಶನಿ-ವರ್ಷ ಈ ರೀತಿ ಅಧಿಪರಾಗಿದ್ದು ರವಿ-ಕಟು, ಚಂದ್ರ-ಲವಣ, ಮಂಗಳ-ತಿಕ್ತ, ಬುಧ-ಮಿಶ್ರಿತ(ಎರಡು ರುಚಿ), ಗುರು-ಸಿಹಿ, ಶುಕ್ರ-ಒಗರು, ಶನಿ-ಕಹಿ – ಈ ರೀತಿ ರಸ ರೂಪ ರುಚಿಗಳ ಅಧಿಪತಿಗಳು.

## ಗ್ರಹ ದಿಗ್ ಕಾಲ ಬಲ

ಬುಧೇಜ್ಯೌ ಬಲಿನೌ ಪೂರ್ವೇ, ರವಿ ಭೌಮ್ಯೌ ಚ ದಕ್ಷಿಣೇ ।
ವಾರುಣೇ ಸೂರ್ಯ ಪುತ್ರಶ್ಚ ಸೀತ ಚಂದ್ರೌ ತಥೋತ್ತರೇ ॥೩೬॥

ನಿಶಾಯಾಂ ಬಲಿನಶ್ಚಂದ್ರ–ಬುಧ–ಸೌರಾ ಭವಂತಿಹಿ ।
ಸರ್ವದಾ ಜ್ಞೊ ಬಲಿ ಜ್ಞೇಯೋ ದಿನೆ ಶೇಷಾ ದ್ವಿಜೋತ್ತಮ ॥೩೭॥

ಕೃಷ್ಣೇ ಚ ಬಲಿನಃ ಕ್ರೂರಾಃ ಸೌಮ್ಯಾ ವೀರ್ಯಾಯುತಾ ಸಿತೆ ।
ಸೌಮ್ಯಾಯನೆ ಸೌಮ್ಯಾಖೇಟೋ ಬಲಿ ಯಾಮ್ಯಾಯನೇಪರಃ ॥೩೮॥

ಅಬ್ದ ಮಾಸ–ದಿವಾ ಹೋರಾದಿಶಾಸ್ತು ಬಲವತ್ತರಾಃ
ಶ.ಭೌ.ಬು.ಗು.ಶು. ಸೋರಾದ್ಯಾ ವೃದ್ಧಿತೋ ಬಲವತ್ತರಾಃ ॥೩೯॥

ಬುಧ, ಗುರು, ಪೂರ್ವ ದಿಶಾದಲ್ಲಿ, ಸೂರ್ಯ, ಮಂಗಳ ದಕ್ಷಿಣದಲ್ಲಿ, ಶನಿ ಪಶ್ಚಿಮ, ಶುಕ್ರ ಹಾಗೂ ಚಂದ್ರ ಉತ್ತರದಲ್ಲಿ ಬಲಶಾಲಿಗಳಾಗಿರುತ್ತಾರೆ. ಅದರಂತೆ ಹೇ ದ್ವಿಜೋತ್ತಮನೆ, ಚಂದ್ರ ಭೌಮ ಶನೇಶ್ವರರು ರಾತ್ರಿ ಕಾಲದಲ್ಲಿ, ಬುಧನು, ಅಹರ್ನಿಶದಲ್ಲಿ, ಉಳಿದ ಸೂರ್ಯ, ಗುರು, ಶುಕ್ರ ದಿನದಲ್ಲಿ ಸಬಲರಾಗಿರುತ್ತಾರೆ. ಪಾಪಗ್ರಹಗಳು ಕೃಷ್ಣಪಕ್ಷದಲ್ಲಿ(ಕ್ರೂರ ಗ್ರಹಗಳು), ಸೌಮ್ಯ ಗ್ರಹಗಳು ಶುಕ್ಲ ಪಕ್ಷದಲ್ಲಿ ಬಲಿಷ್ಠರಾಗಿರುತ್ತಾರೆ. ಹೇ ಬ್ರಾಹ್ಮಣನೆ, ಅದರಂತೆ ದಕ್ಷಿಣಾಯಣದಲ್ಲಿ ಕ್ರೂರಗ್ರಹಗಳು, ಉತ್ತರಾಯಣದಲ್ಲಿ ಸೌಮ್ಯ ಗ್ರಹಗಳು ಬಲಿಷ್ಠರಾಗಿರುತ್ತಾರೆ.

ಅದರಂತೆ ವರ್ಷೇಶ, ಮಾಸೇಶ, ದಿನೇಶ, ಹೋರೇಶ ತಮ್ಮ ತಮ್ಮ ಸಮಯ ದಲ್ಲಿ ಬಲಿಷ್ಠರು. ಅದು ಉತ್ತರೋತ್ತರ ಬಲಿಷ್ಠರಾಗಿರುತ್ತಾರೆ.

ಶನಿ, ಭೌಮ, ಬುಧ, ಗುರು, ಶುಕ್ರ, ಸೋಮ(ಚಂದ್ರ), ರವಿ – ಈ ಗ್ರಹಗಳು ಕ್ರಮಶಃ ಉತ್ತರೋತ್ತರ ಬಲಶಾಲಿಗಳಾಗಿರುತ್ತವೆ.

ವರಾಹಮಿಹಿರರು ಇದೇ ಅಂಶ ಎತ್ತಿಕೊಂಡು ಹೇಳುತ್ತಾರೆ. ಬೃಹತ್ ಜಾತಕ ದಲ್ಲಿ ಈ ರೀತಿ ಹೇಳಿದ್ದಾರೆ:

ದಿಷುಂ ಬುಧಾಂಗಿರಸೌ ರವಿ ಭೌಮೊ ಸೂರ್ಯ ಸುತಃ ।

ಸಿತ ಶೀತಕರೌಚ ತಥಾನಿಶಾ ಶಶಿಕುಜಸೌರಾಃ ಸರ್ವದಾ

ಜ್ಞೇಹಿಂ ಚಾನ್ಯೆ ಬಹುಲಸಿತಗತಾಃ ಸ್ಯಃ ಕ್ರೂರಸೌಮ್ಯಾಃ

ಕ್ರಮೇಣ ಅಯನದಿವಸಹೋರಾವಮಾಸಪ್ಯೆಃ ಕಾಲವೀರ್ಯ

ಶರುವುಗುರುಚರಾದ್ಯಾ ವೃದ್ಧಿತೋ ವೀರ್ಯವಂತಃ

ದಿಗ್‌ಬಲದಲ್ಲಿ ಸ್ವಲ್ಪ ವ್ಯತ್ಯಾಸ ಸ್ಪಷ್ಟವಾಗಿ ಕಂಡುಬರುತ್ತದೆ. ಪ್ರಮುಖವಾಗಿ ವರಾಹಮಿಹಿರರ ನಂತರ ದಿಗ್‌ಬಲದಲ್ಲಿ ಬದಲಾವಣೆ ಕಂಡುಬರುತ್ತದೆ. ಆದ ಬದಲಾವಣೆ ಈ ರೀತಿಯಿದೆ ರವಿ → ಪೂರ್ವ, ಚಂದ್ರ → ಈಶಾನ್ಯ, ಶುಕ್ರ → ಆಗ್ನೇಯ, ಶನಿ → ಪಶ್ಚಿಮ, ರಾಹು → ನೈಋತ್ಯ, ಕೇತುವಿಗೆ ದಿಗ್‌ಬಲ ಹೇಳಿರುವು ದಿಲ್ಲ. ಈ ಬದಲಾವಣೆ ವರಾಹಮಿಹಿರರ ಹಾಗೂ ನಂತರದ ಕಾಲದಲ್ಲಿ ಆದ ಬದಲಾವಣೆ.

ಇಲ್ಲಿ ವಿವೇಚಿಸುವ ಅಂಶ-ದೇವಾಂಶಸಂಭೂತ ಫಲ ಕೊಡುವುದರಲ್ಲಿ ವಿಶೇಷ ಬಲಯುತರಾದ ರವಿ, ಮಂಗಳರು ದಕ್ಷಿಣದಲ್ಲಿ(ಯಮನ ದಿಕ್ಕು), ಹೆಚ್ಚಿ ಬಲಿಷ್ಠತೆಯ ಪರಾಶರರು ತಮ್ಮ ಅತೀಂದ್ರೀಯ ಜ್ಞಾನದಿಂದ ಪಡೆದ ಅಂಶ ವಿಶೇಷ ಫಲದಾಯಕವೆಂಬುದನ್ನು ಪರೀಕ್ಷಿಸುವುದು. ಮದುವೆ ನೌಕರಿಯಲ್ಲಿ ಈ ಅಂಶ (ಕುಂಡಲಿಯ ಮೇಲಿಂದ) ನೂರಕ್ಕೆ ನೂರು ಸತ್ಯವಾಗಿದೆ. ಈ ಅಂಶ ಅವರವರ ಭಾವನೆ, ಪ್ರಯೋಗಕ್ಕೆ ಸಂಬಂಧಿಸಿದ್ದರೂ, ವರಾಹಮಿಹಿರಾಚಾರ್ಯರ ನಂತರ ರವಿ-ಪೂರ್ವಕ್ಕೆ ಉದಯನಾಗುವುದರಿಂದ ಪೂರ್ವವೆಂದೇ ಪರಿಗಣಿಸುವುದು ಅಷ್ಟು ಸಮಂಜಸವೇ ಎಂಬ ವಿಷಯ ವಿಚಾರಣೀಯವೆ! ನೈಸರ್ಗಿಕವಾಗಿ ರವಿಯನ್ನು ದಕ್ಷಿಣವೆಂದು ಹಾಗೂ ಪರಾಶರರು ಹೇಳಿದ ದಿಕ್ಕನ್ನು ಹೇಳುವುದು ಹೆಚ್ಚು ಶ್ರೇಯಸ್ಕರ.

ಈ ಅಂಶ ಕುಂಡಲಿಯ ಮೇಲಿಂದ ವೈಜ್ಞಾನಿಕವಾಗಿಯೂ ಈ ರೀತಿ ಸ್ಪಷ್ಟ ಪಡಿಸಬಹುದು.

ಕುಂಡಲಿ ಎಂದರೆ ಆಕಾಶ ಚಿತ್ರಣ. ಈ ಆಕಾಶ ದಿಕ್ಕುಗಳನ್ನು ಈ ರೀತಿ ವಿವರಿಸುತ್ತೇವೆ.




ವಿವರ : 1) ಲಗ್ನ - ವ್ಯಯ - ದ್ವಿತೀಯ - ಪೂರ್ವ

2) ವ್ಯಯ ಏಕಾದಶ (ಮುಕ್ತಾಯ) ದಶಮ - ನವಮ - ದಕ್ಷಿಣ

3) ಅಷ್ಟಮ - ಸಪ್ತಮ - ಷಷ್ಠ - ಪಶ್ಚಿಮ

4) ಪಂಚಮ - ಚತುರ್ಥ ತೃತೀಯ - ಉತ್ತರ

ಲಗ್ನ ಕುಂಡಲಿಯಲ್ಲಿ ಲಗ್ನ ಉದಿತ ಪೂರ್ವ-ಸೂರ್ಯಾಸ್ತ, ಪಶ್ಚಿಮ-ಮಧ್ಯಾಹ್ನ, ದಕ್ಷಿಣ-ಮಧ್ಯರಾತ್ರಿ, ಚತುರ್ಥವೆಂಬುದನ್ನು ಎಲ್ಲರೂ ಒಪ್ಪಿಕೊಂಡ ಅಂಶ. ರವಿ ಅತಿ ಪ್ರಖರನಾಗಿರುವುದು ಮಧ್ಯಾಹ್ನದಲ್ಲಿ, ಅಂದರೆ ದಶಮ ಕೇಂದ್ರದಲ್ಲಿ ಅಂದರೆ ಏಕಾದಶ ಪ್ರಾರಂಭದಲ್ಲಿ ಪ್ರಖರನಾಗುತ್ತ ದಶಮ ಕೇಂದ್ರ (ಮಧ್ಯಬಿಂದುವಿನಲ್ಲಿ ಅತೀ ಬಲಿಷ್ಠನಾಗಿ – ಅಲ್ಲಿಂದ ನವಮ ಪ್ರಾರಂಭಕ್ಕೆ ಬಲ ಕಳೆದುಕೊಳ್ಳುತ್ತಾ ಸಾಗಿ ಸಪ್ತಮದಲ್ಲಿ ಅಸ್ತನಾಗಿ ಚತುರ್ಥದಲ್ಲಿ ಪೂರ್ಣ ನಿರ್ಬಲನಾಗುವನು.

ಈ ಅಂಶದ ಮೇಲೆಯೇ ದಶಮ ಕೇಂದ್ರದಲ್ಲಿ ರವಿ, ಮಂಗಳ → ದಕ್ಷಿಣ, ಹಾಗೂ ಬುಧ, ಗುರು → ಲಗ್ನ ಕೇಂದ್ರ ಅಂದರೆ ಪೂರ್ವದಲ್ಲಿ ಅದರಂತೆ ಚಂದ್ರ, ಶುಕ್ರರು → ಚತುರ್ಥ, ಉತ್ತರದಲ್ಲಿ ಶನಿ → ಸಪ್ತಮ ಕೇಂದ್ರ, ಪಶ್ಚಿಮದಲ್ಲಿ ಬಲಿಷ್ಠರೆಂದು ಪರಾಶರರು ವಿವರಿಸಿದುದು.

ಇದಲ್ಲದೆ ಗ್ರಹಗಳ ದಿಕ್ಕುಗಳು ವಾರಾದಿಗಳಲ್ಲಿಯೂ ಬದಲಾಗುತ್ತ ಹೋಗುತ್ತದೆ. ಈ ಎಲ್ಲ ಅಂಶ ಪರಾಮರ್ಶಿಸಿ ನಿರ್ಣಯಿಸುವುದು ಉತ್ತಮ.

## ವೃಕ್ಷ ಉತ್ಪಾದಕ ಗ್ರಹ

ಸ್ಥೂಲಾನ್ ಜನಯತಿ ತ್ವರ್ಕೋ ದುರ್ಭಗಾನ್ ಸೂರ್ಯಪುತ್ರಕಃ।
ಕ್ಷೀರೋಪೇತಾಂಸ್ತಥಾ ಚಂದ್ರಃ ಕಟುಕಾಧ್ಯಾನ ಧರಾಸುತಃ ॥೪೦॥

ಸಫಲಾನಫಲಾಂಜೀವ ಬುಧೌ, ಪುಷ್ಪತರೂನ್ ಕವಿಃ ।
ನೀರಸಾನ್ ಸೂರ್ಯ ಪುತ್ರಶ್ಚ ಏವಂ ಜ್ಞೇಯಾಃ ಖಗದ್ವಿಜ ॥೪೧॥

ಹೇ ಬ್ರಾಹ್ಮಣನೇ, ಸೂರ್ಯನು ದೊಡ್ಡ ದೊಡ್ಡ ವೃಕ್ಷಗಳನ್ನು, ಸೂರ್ಯ ಪುತ್ರ ಶನಿಯು ದುರ್ಬಲನಾದ ಕುತ್ಸಿತ ವೃಕ್ಷಗಳನ್ನು, ಚಂದ್ರನು ರಸಪೂರಿತ (ಹಾಲು ತುಂಬಿದ) ವೃಕ್ಷಗಳನ್ನು, ಮಂಗಳನು ಕಟು ವೃಕ್ಷಗಳನ್ನು ಅಂದರೆ ಮೆಣಸು, ಮೆಣಸಿನ ಕಾಯಿ ಇತ್ಯಾದಿ ವನಸ್ಪತಿಗಳನ್ನು, ಗುರುವು ಫಲಪೂರ್ಣ ವೃಕ್ಷಗಳನ್ನು, ಬುಧನು ಬಂಜೆ ಗ್ರಹವಾದ್ದರಿಂದ ಫಲರಹಿತ ವೃಕ್ಷಗಳನ್ನು, ಶುಕ್ರನು ಪುಷ್ಪಪೂರಿತ ವೃಕ್ಷ ಗಳನ್ನು ಉತ್ಪನ್ನ ಮಾಡುತ್ತಾರೆ. ಅಂದರೆ ಆಯಾ ವೃಕ್ಷಗಳ ಅಧಿಪತಿಗಳಾಗಿದ್ದಾರೆ.

## ಸೂರ್ಯಾದಿ ಗ್ರಹ ಜ್ಞಾತ ವಸ್ತ್ರ ವರ್ಣನೆ

ರಾಹೂಶ್ಚಾಂಡಾಲಜಾತಿಶ್ಚ ಕೇತುರ್ಜಾತ್ಯಂತರಸ್ತಥಾ ।
ಶಿಖಿಸ್ವರ್ಭಾನುಮಂದಾನಾಂ ವಲ್ಮೀಕಂ ಸ್ಥಾನಮುಚ್ಯತೆ ॥೪೨॥

ಚಿತ್ರಕಂಥಾ ಫಣೀಂದ್ರಸ್ಯ. ಕೇತೋಶ್ಚಿದ್ರಯುತೋ ದ್ವಿಜ ।
ಸೀಸಂ ರಾಹೋರ್ನೀಲಮಣಿ, ಕೇತೋರ್ಜ್ಞೇಯೇ ದ್ವಿಜೋತ್ತಮ ॥೪೩॥

ಗುರೋಃ ಪೀತಾಂಬರಂ ವಿಪ್ರ ಭೃಗೋಃ ಕ್ಷೌಮ್ಯಂತಥೈವ ಚ॥
ರಕ್ತಕ್ಷೌಮಂಭಾಸ್ಕರಸ್ಯ ಇಂದೋಃ ಕ್ಷಾಮಂ ಸಿತಂ ದ್ವಿಜ ॥೪೪॥

ಬುಧಸ್ಯ ತ್ವಸಿತ ಕ್ಷೌಮಂ ರಕ್ತಂ ತದ್ವತ್ ಕುಜಸ್ಯಚ ।
ವಸ್ತ್ರಂ ಚಿತ್ರಂ ಶನೇರ್ವಿಪ್ರ । ಪಟ್ಟಿ ವಸ್ತ್ರಂ ತಥೈವಚ ॥೪೫॥

ಹೇ ಮೈತ್ರೇಯನೆ, ರಾಹು ಚಾಂಡಾಲ ಜಾತಿಯವನಾಗಿಯೂ, ಕೇತು ಸಂಕರ ಜಾತಿಯವನು, ಶನಿ ವಲ್ಮೀಕ ಜಾತಿಯವನು, ರಾಹುವಿನ ವಸ್ತ್ರ ಅನೇಕ ವರ್ಣ ದ್ದಾದರೆ, ಕೇತುವಿನದು ಹರಿದ ಬಟ್ಟೆ ವಸ್ತ್ರ, ರಾಹುವಿನ ಧಾತು ಸೀಸ ಹಾಗೂ ಕೇತು ವಿನದು ನೀಲಮಣಿ, ಗುರುವಿನ ವಸ್ತ್ರ ಹಳದಿಯಾದರೆ ಶುಕ್ರನದು ರೇಶ್ಮೆ ವಸ್ತ್ರ, ಸೂರ್ಯನದು ಕೆಂಪು ಅಂಚಿನ ವಸ್ತ್ರ, ಚಂದ್ರನದೇ ಬಿಳಿಯ ರೇಶ್ಮೆ ವಸ್ತ್ರ, ಬುಧನದು ಕೆಂಪು ರೇಶ್ಮೆಯಾದರೆ ಮಂಗಳನದು, ಕೆಂಪು ವಸ್ತ್ರ, ಶನಿಯದು ಅನೇಕ ಬಣ್ಣದ ಅಂಚಿನ ವಸ್ತ್ರ.

## ಗ್ರಹ ಋತು ಆದಿಗಳು

ಭೃಗೋರ್ಋತುರ್ವ ಸಂತಶ್ಚ ಕುಜ ಭಾನೋಶ್ಚ ಗ್ರೀಷ್ಮಕಃ ।
ಚಂದ್ರಸ್ಯ ವರ್ಷಾ ವಿಜ್ಞೇಯಾ ಶರಶ್ಚೈವ ತಥಾವಿದಃ ॥೪೬॥

ಹೇಮಂತೋಽಪಿ ಗುರೋರ್ಜ್ಞೇಯಃ ಶನೇಸ್ತು ಶಿಶಿರೋ ದ್ವಿಜ ।
ಅಷ್ಟೌ ಮಾಸಾಶ್ಚ ಸ್ವರ್ಭಾನೋಃ ಕೇತೋರ್ಮಾಸದ್ವಯಂ ದ್ವಿಜ ॥೪೭॥

ರಾಹ್ವಾರ ಪಂಗುಚಂದ್ರಾಶ್ಚ ವಿಜ್ಞೇಯ ಧಾತುಖೇಚರಾಃ ।
ಮೂಲ ಗ್ರಹೌ ಸೂರ್ಯ ಶುಕ್ರೌ ಅಪರೆ ಜೀವಸಂಜ್ಞಕಾಃ ॥೪೮॥

ಗ್ರಹೇಷು ಮಂದೋ ವೃದ್ಧೋಽಸ್ತಿ ಆಯುರ್ವೃದ್ಧಿಪ್ರದಾಯಕಃ ।
ನೈಸರ್ಗಿಕೆ ಬಹುಸಮಾ ದದಾತಿ ದ್ವಿಜಸತ್ತಮ ॥೪೯॥

ಹೇ ವಿಪ್ರನೆ, ಶುಕ್ರನು ವಸಂತ ಋತುವಿಗೆ, ಮಂಗಳ, ಸೂರ್ಯರು ಗ್ರೀಷ್ಮ ಋತುವಿಗೆ, ಚಂದ್ರನು ವರ್ಷಕ್ಕೆ, ಬುಧನು ಶರದ್ ಋತುವಿಗೆ, ಗುರುವು ಹೇಮಂತ ಋತುವಿಗೆ, ಶನಿ ಶಿಶಿರ ಋತುವಿಗೆ ಅಧಿಪತಿಯಾಗಿದ್ದಾರೆ. ಅಂದರೆ ಆಯಾ ಋತುಗಳಲ್ಲಿ ಆ ಗ್ರಹಗಳ ಬಲ ವಿಶೇಷವಾಗಿರುತ್ತದೆ. ರಾಹು ಗ್ರಹಕ್ಕೆ ಎಂಟು ತಿಂಗಳು, ಕೇತು ಗ್ರಹಕ್ಕೆ ಎರಡು ತಿಂಗಳು ಆಧಿಪತ್ಯವಿದೆ.

ರಾಹು, ಮಂಗಳ, ಶನಿ, ಚಂದ್ರರು ಧಾತುಗಳ ಅಧಿಪತಿಗಳಾದರೆ, ಸೂರ್ಯ, ಶುಕ್ರರು ಮೂಲಗಳ ಅಧಿಪತಿಗಳು. ಅದರಂತೆ ಬುಧ, ಗುರು, ಕೇತುಗಳು ಜೀವಗಳ ಅಧಿಪತಿಗಳಾಗಿದ್ದಾರೆ.

ಗ್ರಹಗಳಲ್ಲಿ ವೃದ್ಧ ಶನಿ. ಅವನು ನೈಸರ್ಗಿಕಾವಸ್ಥೆಯಲ್ಲಿ ಅನೇಕ ವರ್ಷಗಳ ವರೆಗೆ ಆಯುರ್‌ವೃದ್ಧಿಗೊಳಿಸುವನು.

## ಗ್ರಹಗಳ ಉಚ್ಚ ನೀಚಾದಿಗಳು

ಅಜೋ, ವೃಷೋ ಮೃಗಶ್ಚೈವ ಕನ್ಯಾ ಕರ್ಕೋ ಝಷಸ್ತುಲಾ ।
ಸೂರ್ಯಾದೀನಾಂ ಕ್ರಮಾದೇತೆ ಗದಿತಾಸ್ತುಂಗರಾಶಯಃ ॥೫೦॥

ದಶಾಗ್ನಿ ಮನುಯಿಕ್ ತಿಥ್ಯಾಕ್ಷನಕ್ಷತ್ರನಖಾಃ ಕ್ರಮಾದ್ ।
ಭಾಗಾಃ ಸಪ್ತಮಭಂ ತೇಭ್ಯೋ ನೀಚಂ ತೈರೇವ ಭಾಗಕೈಃ ॥೫೧॥

ಮೇಷ, ವೃಷಭ, ಮಕರ, ಕನ್ಯಾ, ಕರ್ಕ, ಮೀನ, ತುಲಾ, ರಾಶಿಗಳು ಕ್ರಮವಾಗಿ ರವಿ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿಗಳಿಗೆ ಉಚ್ಚ ರಾಶಿಗಳಾಗಿವೆ. ಈ ರಾಶಿಯಲ್ಲಿ ಕ್ರಮಾನುಸಾರವಾಗಿ 10, 3, 28, 15, 5, 27, 20 ಅಂಶಗಳು ಅವುಗಳ ಪರಮೋಚ್ಚವಾಗಿದ್ದು, ಈ ರಾಶಿಗಳ ಸಪ್ತಮ ರಾಶಿ ಹಾಗೂ ಮೇಲೆ ಹೇಳಿದ ಅಂಶಗಳು ಕ್ರಮವಾಗಿ ಅದೇ ಗ್ರಹಗಳಿಗೆ ನೀಚಸ್ಥಾನವಾಗಿವೆ.

## ಸ್ವಷ್ಟಾರ್ಥ ಚಕ್ರ

| ಗ್ರಹ | ರವಿ | ಚಂ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಉಚ್ಚ ರಾಶಿ<br>ಅಂಶ | ಮೇಷ<br>$10^0$ | ವೃಷಭ<br>$3^0$ | ಮಕರ<br>$28^0$ | ಕನ್ಯಾ<br>$15^0$ | ಕರ್ಕ<br>$5^0$ | ಮೀನ<br>$27^0$ | ತುಲಾ<br>$20^0$ |
| ನೀಚ ರಾಶಿ<br>ಅಂಶ | ತುಲಾ<br>$10^0$ | ವೃಶ್ಚಿಕ<br>$3^0$ | ಕರ್ಕ<br>$28^0$ | ಮೀನ<br>$15^0$ | ಮಕರ<br>$5^0$ | ಕನ್ಯಾ<br>$27^0$ | ಮೇಷ<br>$20^0$ |

## ಗ್ರಹಗಳು ಮೂಲ ತ್ರಿಕೋನ

ವಿಂಶತ್ಯಾಂಶಾ ರವೇಃ ಸಿಂಹೆ ತ್ರಿಕೋಣಮಪರೆ ಗ್ರಹವ್।
ಇಂದೋ ರ್ವೃಷೇಗ್ನಿಭಾಗಾಸ್ತು ತುಂಗಮನ್ಯೆ ತ್ರಿಕೋಣಕವ್ ॥೩೨॥

ಮೇಷೆ ಕುಜಸ್ಯ ಸೂರ್ಯಾಶಾಸ್ತ್ರಿಕೋನಮಪರೆ ಗ್ರಹವ್ ।
ತಿಥ್ಯಂಶ್ಯೈಃ ಕನ್ಯಾಕಾರಾಶೌ ವಿದಸ್ತುಂಗ ತತಃಪರೆ ॥೩೩॥

ಪಂಚಾಂಶಕಾಸ್ತ್ರೀಕೋಣಾಖ್ಯಾಸ್ತದಗ್ರೆ ತದ್ ಗ್ರಹಂ ಮತವ್ ।
ಗುರೋರ್ಧನುಷಿ ದಿಗ್‌ಭಾಗೈಸ್ತ್ರಿಕೋಣಂ ತತ್ಪರಂ ಗ್ರಹವ್ ॥೩೪॥

ತುಲಾರ್ಧತು ತ್ರಿಕೋಣಂ ಸ್ಯಾದ್ ಭೃಗೋರರ್ಧ ಪರಂಗ್ರಹವ್ ।
ವಿಂಶತ್ಯಂ ಶೈರ್ಘಟೆ ಶೌರೆ ಸ್ತ್ರಿಕೋಣಂ ಸಜ್ಞ ಶೀಷಕೈಃ ॥೩೫॥

ರವಿಗೆ ಸಿಂಹ ರಾಶಿಯಲ್ಲಿ 20 ಡಿಗ್ರಿಯವರೆಗೆ ಮೂಲ ತ್ರಿಕೋನ ಮುಂದಿನ 10 ಡಿಗ್ರಿ ಸ್ವಗ್ರಹ. ಚಂದ್ರನಿಗೆ ವೃಷಭ ರಾಶಿಯಲ್ಲಿ 3 ಡಿಗ್ರಿ ಅಂಶ ಉಚ್ಚ ತ್ರಿಕೋನ ವಾದರೆ, 27 ಡಿಗ್ರಿ ಅಂಶ ಸ್ವಗ್ರಹ (ಕರ್ಕವೂ ಸ್ವಗ್ರಹ), ಮೇಷ ರಾಶಿಯ ಮೊದಲು 12 ಡಿಗ್ರಿ ಮಂಗಳದ ಮೂಲ ತ್ರಿಕೋನವಾದರೆ ಉಳಿದ 18 ಡಿಗ್ರಿ ಅಂಶ ಸ್ವಗ್ರಹ. ಅದರಂತೆ ಕನ್ಯಾರಾಶಿಯಲ್ಲಿ 15 ಡಿಗ್ರಿಯವರೆಗೆ ಬುಧನ ಮೂಲ ತ್ರಿಕೋನವಾಗಿ ಮುಂದಿನ ಭಾಗ ಸ್ವಗ್ರಹ ಧನು ರಾಶಿಯ ಮೊದಲು 10 ಡಿಗ್ರಿ ಗುರುವಿಗೆ ಮೂಲ ತ್ರಿಕೋನವಾಗಿ ಮುಂದಿನ 20 ಡಿಗ್ರಿ ಸ್ವಗ್ರಹ ತುಲಾರ್ಧ ಅಂದರೆ ತುಲಾ 15 ಡಿಗ್ರಿ ಶುಕ್ರನಿಗೆ ಮೂಲ ತ್ರಿಕೋನವಾಗಿ ಮುಂದಿನ 15 ಡಿಗ್ರಿ ಸ್ವಗ್ರಹ ಶನಿಗೆ ಕುಂಭ ರಾಶಿಯಲ್ಲಿ 20 ಡಿಗ್ರಿವರೆಗೆ ಮೂಲ ತ್ರಿಕೋನವಾಗಿ ಮುಂದಿನ ಭಾಗ ಸ್ವಗ್ರಹ.

ಇಲ್ಲಿ ಮಂಗಳನಿಗೆ ವೃಶ್ಚಿಕ, ಚಂದ್ರನಿಗೆ ಕರ್ಕ, ಬುಧನಿಗೆ ಮಿಥುನ, ಗುರುವಿಗೆ ಮೀನ ಹಾಗೂ ಶುಕ್ರನಿಗೆ ವೃಷಭ, ಶನಿಗೆ ಮಕರ ಸ್ವಗ್ರಹಗಳಾಗಿವೆ.

## ಈ ಅಂಶ ಸ್ವಪ್ನಾರ್ಥ ಚಕ್ರ

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಮೂಲ ತ್ರಿಕೋನ | ಸಿಂಹ $20^0$ ಅಂಶ | ವೃಷಭ ಅಂತಿಮ $27^0$ | ಮೇಷ $12^0$ | ಕನ್ಯಾ $16\text{-}20^0$ | ಧನು $10^0$ ವರೆಗೆ | ತುಲಾ $15^0$ ವರೆಗೆ | ಕುಂಭ $20^0$ |
| ಸ್ವರಾಶಿ | ಸಿಂಹದ $20\text{-}30^0$ | × × | ಮೇಷ $21\text{-}30^0$ | ಕನ್ಯಾ $10\text{-}30^0$ | ಧನು $15\text{-}30^0$ | ತುಲಾ $20\text{-}30^0$ | ಕುಂಭ |
| ಉಚ್ಚ | ಬೇರೆ ಯಿದೆ (ಮೇಷ) | ವೃಷಭ ಆದಿ $3^0$ | × | ಉಳಿದ ಕನ್ಯಾದ ಅಂಶ | × | × | × |

( × ) ಹಾಕಿದ್ದು ಆ ರಾಶಿಗಳಲ್ಲಿ ಇಲ್ಲವೆಂದರ್ಥ. ರವಿಗೆ ಸಿಂಹವೆಂದು ಬರೆದಂತೆ ಬೇರೆ ಗ್ರಹ ರಾಶಿ ಉಚ್ಚವಾಗಿದೆ ಹಾಗೂ ಚಂದ್ರನಿಗೆ ಕರ್ಕ ಸ್ವರಾಶಿಯಾಗಿದೆ (ಕರ್ಕದ ಅಧಿಪ).

ರವೇಃ ಸಮೋಜ್ಞಃ ಸಿತಸೂರ್ಯಪುತ್ರಾವರಿ ಪರೆತೆ ಸಹೃದೋ ಭವೇಯುಃ।
ಚಂದ್ರಸ್ಯನಾರಿ ರವಿ ಚಂದ್ರಪುತ್ರೌ ಮಿತ್ರೇ ಸಮಃ ಶೇಷನಭಶ್ವರಾಃ ಸ್ಯುಃ ॥೫೬॥

ಸಮೌಸಿತಾರ್ಕಿ ಶಶಿಜಶ್ಚ ಶತ್ರುಮಿತ್ರಾಣಿ ಶೇಷಃ ಪೃಥಿವಿಸುತಸ್ಯ ।
ಶತ್ರು ಶಶಿ ಸೂರ್ಯಸಿತೌ ಚ ಮಿತ್ರೇ ಸಮಾಃ ಪುರೆಷ್ಯುಃ ಶಶಿನಂದನಸ್ಯ ॥೫೭॥

ಗುರೋರ್ಜ್ಞ ಶುಕ್ರೌ ರಿಪುಸಂಜ್ಞಕೌತು ಶನಿಃ ಸಮೋನ್ಯೆ ಸಹೃದೋ ಭವಂತಿ ।
ಶುಕ್ರಸ್ಯ ಮಿತ್ರೆ ಬುಧ ಸೂರ್ಯ ಪುತ್ರೌ ಸಮೌ ಕುಜರ್ಯಾ ವಿತರಾವರಿತೌ ॥೫೮॥

ಶನೇಃ ಸಮೋ ವಾಕ್ಪತಿರಿಂದು ಸೂನುಶುಕ್ರೌ ಚ ಮಿತ್ರೆರಿಪವಃ ಪುರೇಪಿ॥
ಧೃವಂ ಗ್ರಹಾಣಾಂ ಚತುರಾನೇನ ಶತ್ರುತ್ವ ಮಿತ್ರತ್ವ ಸಮತ್ವಮುಕ್ತಮಮಮ್

ರವಿಗೆ ಬುಧ ಸಮ, ಶುಕ್ರ, ಶನಿ ಶತ್ರು ಅನ್ಯ – ಅಂದರೆ ಚಂದ್ರ, ಮಂಗಳ, ಗುರು ಮಿತ್ರರಾಗಿದ್ದಾರೆ. ಚಂದ್ರನಿಗೆ ಸೂರ್ಯ, ಬುಧ ಮಿತ್ರರಾಗಿದ್ದು ಉಳಿದವರು

ಸಮರು. ಚಂದ್ರನಿಗೆ ಶತ್ರುಗಳಾರಿಲ್ಲ. ಮಂಗಳನಿಗೆ ಶುಕ್ರ, ಶನಿ ಸಮ, ಬುಧ ಶತ್ರು ಉಳಿದ ಸೂರ್ಯ, ಚಂದ್ರ, ಗುರು ಮಿತ್ರರಾಗಿದ್ದಾರೆ. ಬುಧನಿಗೆ ಚಂದ್ರ ಶತ್ರು, ಸೂರ್ಯ, ಶುಕ್ರ ಮಿತ್ರರಾದರೆ ಉಳಿದ ಮಂಗಳ, ಗುರು, ಶನಿ ಸಮರು. ಗುರುವಿಗೆ ಬುಧ, ಶುಕ್ರ ಶತ್ರು. ಶನಿ ಸಮ ಶೇಷ. ಸೂರ್ಯ, ಚಂದ್ರ, ಮಂಗಳ ಮಿತ್ರರು. ಶುಕ್ರನಿಗೆ ಬುಧ, ಶನಿ ಮಿತ್ರ. ಮಂಗಳ, ಗುರು ಸಮ, ರವಿ, ಚಂದ್ರರು ಶತ್ರುಗಳು. ಶನಿಗೆ ಗುರು ಸಮ. ಬುಧ, ಶುಕ್ರ ಮಿತ್ರ, ಸೂರ್ಯ, ಚಂದ್ರ, ಮಂಗಳ ಶತ್ರುಗಳು – ಇದು ನೈಸರ್ಗಿಕ.

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಮಿತ್ರ | ಚಂದ್ರ ಮಂಗಳ ಗುರು | ಸೂರ್ಯ ಬುಧ – | ಸೂರ್ಯ ಚಂದ್ರ ಗುರು | ಸೂರ್ಯ ಶುಕ್ರ – | ಸೂರ್ಯ ಚಂದ್ರ ಮಂಗಳ | ಬುಧ ಶನಿ – | ಬುಧ ಶುಕ್ರ – |
| ಸಮ | ಬುಧ | ಮಂಗಳ ಗುರು ಶುಕ್ರ ಶನಿ | ಶುಕ್ರ ಶನಿ | ಮಂಗಳ ಗುರು ಶನಿ | ಶನಿ | ಮಂಗಳ ಗುರು | ಗುರು |
| ಶತ್ರು | ಶುಕ್ರ ಶನಿ | × | ಬುಧ | ಚಂದ್ರ | ಬುಧ ಶುಕ್ರ | ಚಂದ್ರ ಸೂರ್ಯ | ಚಂದ್ರ ಸೂರ್ಯ ಮಂಗಳ |

ವಿಮರ್ಶೆ: ಎಲ್ಲ ಗ್ರಹಗಳಿಗೂ ತಮ್ಮ ತಮ್ಮ ಮೂಲ ತ್ರಿಕೋನದಿಂದ, ಧನ ಭಾವಾಧಿಪ ಉಚ್ಚದಿಂದ ಅಷ್ಟಮ, ಚತುರ್ಥ, ದ್ವಾದಶ, ಪಂಚಮ, ನವಮ ಸ್ಥಾನದ ಅಧಿಪರು ಮಿತ್ರರಾಗಿ, ಉಳಿದವರು ಶತ್ರುಗಳಾಗಿ ಶತ್ರು ಮಿತ್ರಗಳು ಕೂಡಿಬಂದಲ್ಲಿ ಸಮರಾಗುವರು. ಉದಾಹರಣೆ– ರವಿಯ ಮೂಲ ತ್ರಿಕೋನ ಸಿಂಹ ಕುಂಡಲಿಯಲ್ಲಿ ಈ ರೀತಿಯಾಗುತ್ತದೆ.

ಸಿಂಹದಿಂದ ದ್ವಿತೀಯ ಭಾವ ಕನ್ಯಾರಾಶಿ – ಅಧಿಪ ಬುಧ, ಉಚ್ಚದ ಅಧಿಪ ಮೇಷದ ಮಂಗಳ – ಅಷ್ಟಾಮಾಧಿಪ ಗುರು, ಚತುರ್ಥಾಧಿಪ ಮಂಗಳ, ದ್ವಾದಶಾಧಿಪ ಚಂದ್ರ, ಪಂಚಾಮಧಿಪ ಗುರು, ಉಚ್ಚಾಧಿಪ ಮಂಗಳನೇ – ನವಮಾಧಿಪನಾದ್ದರಿಂದ ಮಿತ್ರನೇ ಈ ರೀತಿ ಸೂರ್ಯನಿಗೆ ಚಂದ್ರ, ಮಂಗಳ, ಗುರು ಮಿತ್ರರಾಗಿ ಬುಧನು ದ್ವಿತಿಯಾಧಿಪನಾಗಿ ಮಿತ್ರನಾಗಿಯೂ ಏಕದಶಾಧಿಪನಾಗಿ ಶತ್ರುವಾಗಿ ಶತ್ರುತ್ವ+ಮಿತ್ರತ್ವ ಸೇರಿ ಸಮನಾಗುವನು.

6 4
7 5 3
8 2
9 11 1
10 12

| 12 | 1 | 2 | 3 |
|---|---|---|---|
| 11 | | | 4 |
| 10 | | | 5ರವಿ |
| 9 | 8 | 7 | 6 |

ಉಳಿದಂತೆ ಉಳಿದ 3, 6, 7, 10ರ ಅಧಿಪರು ಶತ್ರುಗಳಾಗುವರು.

ಇದು ನೈಸರ್ಗಿಕವಾದುದು.

**ಸ್ವತ್ರಿಕೋಣಾದ್ ಧನೋಚ್ಚಾಯುಃ ಸುಖಾಂತ್ಯಮತಿಧರ್ಮಪಾಃ ।**
**ಸುಹೃದಃ ಶತ್ರವಶ್ಚಾಕ್ಕೆ ಸಮಾ ಉಭಯೋದಿತಾಃ ॥೫೯॥**

ಎಂಬುದು ಸಿದ್ಧಾಂತವಾಗಿ ನಿಷ್ಪನ್ನವಾಯಿತು.

## ಗ್ರಹಗಳ ತಾತ್ಕಾಲಿಕ ಮಿತ್ರತ್ವ

**ದಶಾಯಬಂಧು ಸಹಜಸ್ವಾನ್ತ್ಯಾಸ್ಥಾಸ್ತೆ ಪರಸ್ಪರಮ್ ।**
**ತತ್ಕಾಲೆ ಸಹೃದೋನ್ಯತ್ರ ಸಂಸ್ಥಿತಾಃ ಶತ್ರವಃ ಸ್ಮೃತಾಃ ॥೬೦॥**

ಯಾವುದೇ ಗ್ರಹಕ್ಕೆ ತನ್ನ ಸ್ಥಾನ (ತಾನಿದ್ದ ರಾಶಿಯಿಂದ) 10, 11, 4, 3, 2, 12 ಸ್ಥಾನದಲ್ಲಿದ್ದ ಗ್ರಹವು ತಾತ್ಕಾಲಿಕ ಮಿತ್ರನಾಗುತ್ತಾನೆ. ಉಳಿದ 1, 5, 6, 7, 8, 9 ಸ್ಥಾನದಲ್ಲಿದ್ದ ಗ್ರಹವು ಶತ್ರುವಾಗುತ್ತದೆ. ತಾತ್ಪರ್ಯ—ಗ್ರಹಸ್ಥಾನದಿಂದ 3 ಮುಂದೆ ಹಾಗೂ 3 ಹಿಂದೆ ಸ್ಥಾನವಲ್ಲಿದ್ದ ಮಿತ್ರರಾಗಿ ಉಳಿದ ಸ್ಥಾನದಲ್ಲಿದ್ದ ಗ್ರಹ ಶತ್ರುಗಳಾಗುತ್ತವೆ.

ಉದಾಹರಣೆ:—

ಈ ಕುಂಡಲಿಯಲ್ಲಿ ರವಿಯ ಮುಂದಿನ 3 ಸ್ಥಾನಗಳಲ್ಲಿರುವ 2ನೇ ಸ್ಥಾನ (ಲಗ್ನಸ್ಥ ಪಂಚಮ) ಹಾಗೂ ತೃತೀಯ (ಷಷ್ಠ) ಚತುರ್ಥ (ಸಪ್ತಮ) ಸ್ಥಾನದಲ್ಲಿಯ ಹಾಗೂ ಕರ್ಕ (ಪ್ರಥಮ) ತುಲಾದಿಂದ ದಶಮಿ, ಸಿಂಹ, ತುಲಾದಿಂದ ಏಕಾದಶ ನಂತರ ದ್ವಾದಶವಾದ ತೃತೀಯ ಸ್ಥಾನದ ಗ್ರಹಗಳು.

## ಜನ್ಮಾಂಶ ಲಗ್ನ ಕುಂಡಲಿ

5
3
6 ಶುಕ್ರ
4
2 ಕೇ
7 ರ.ಬು.ಚಂ.
1
8 ರಾ.
10 ಗು. ಮಂ.
12 ಶನಿ
9
11

| ಶನಿ | | ಕೆ | |
|---|---|---|---|
| | ಕರ್ಕ ಲಗ್ನ | | |
| ಗು ಮ | | | |
| | ರಾ | ರ ಬು ಚಂ | ಶುಕ್ರ |

ರವಿಗೆ ರಾಹು, ಗುರು, ಮಂಗಳ, ಶುಕ್ರರು ತಾತ್ಕಾಲಿಕ ಮಿತ್ರರು. ಇತರರು ಶತ್ರುಗಳಾಗುವರು. ಈ ಕುಂಡಲಿಗೆ ತಾತ್ಕಾಲಿಕ ಮಿತ್ರರು ಹಾಗೂ ಶತ್ರುಗಳು:

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಮಿತ್ರ | ಗುರು ಮಂಗಳ ಶುಕ್ರ | ಗುರು ಮಂಗಳ ಶುಕ್ರ | ಶನಿ ರವಿ ಬುಧ ಚಂದ್ರ | ಗುರು ಮಂಗಳ ಶುಕ್ರ | ಶನಿ ರವಿ ಬುಧ ಚಂದ್ರ | ರವಿ ಬುಧ ಚಂದ್ರ | ಗುರು ಮಂಗಳ |
| ಶತ್ರು | ಬುಧ ಚಂದ್ರ ಶನಿ | ರವಿ ಬುಧ ಶನಿ | ಗುರು ಶುಕ್ರ | ರವಿ ಚಂದ್ರ ಶನಿ | ಮಂಗಳ ಶುಕ್ರ | ಗುರು ಮಂಗಳ ಶನಿ | ರವಿ ಚಂದ್ರ ಬುಧ ಶುಕ್ರ |

### ಪಶ್ಚಾದ್ ಮೈತ್ರಿ

ನೈಸರ್ಗಿಕೆ ತಥಾ ತಾತ್ಕಾಲಿಕೆ ಮಿತ್ರೇಧಿಮಿತ್ರಕಮ್ ।
ಸಮೇ ಮಿತ್ರೆ ಚ ಮಿತ್ರಂ ತೂಭಯತ್ರಾಧಿರಿಪೂ ರಿಪೌ ॥೬೧॥

ಸಮೇ ಶತ್ರೌ ಶತ್ರುರೇವ ಶತ್ರೌ ಮಿತ್ರೆಸಮಃ ಸ್ಮೃತಃ ।
ಏವಂ ವಿಚಾರ್ಯ ಗಣಕೈಃ ಫಲಂ ವಾಚ್ಯಯಥೋ ದಿತಮ್ ॥೬೨॥

ಗ್ರಹಗಳಲ್ಲಿ ನೈಸರ್ಗಿಕ, ತಾತ್ಕಾಲಿಕ ಎರಡು ಮಿತ್ರತ್ವವಿದ್ದರೆ, ಅಧಿಮಿತ್ರ, ನೈಸರ್ಗಿಕ ಸಮತ್ವ ತಾತ್ಕಾಲಿಕ ಮಿತ್ರ – ಮಿತ್ರವಾಗಿ (ಪರ) ಹಾಗೂ ನೈಸರ್ಗಿಕ,

ತಾತ್ಕಾಲಿಕ ಎರಡು ರೀತಿಯಿಂದ ಶತ್ರುತ್ವವಿದ್ದರೆ ಅಧಿಶತ್ರು ನಿಸರ್ಗತಃ ಸಮತ್ವ, ತಾತ್ಕಾಲಿಕ ಶತ್ರುತ್ವ ಪರ ಶತ್ರು ನಿಸರ್ಗತಃ ಶತ್ರುತ್ವ, ತಾತ್ಕಾಲಿಕ ಶತ್ರು ಈ ರೀತಿ ಪರಿಗಣಿಸಿ – ಜಾತಕದ ಶತ್ರುತ್ವ, ಮಿತ್ರತ್ವ ಕಂಡುಹಿಡಿಯುವುದು.

ನೈಸರ್ಗಿಕ ಮಿತ್ರ + ತಾತ್ಕಾಲಿಕ ಮಿತ್ರ = ಅಧಿಮಿತ್ರ

ನೈಸರ್ಗಿಕ ಸಮ + ತಾತ್ಕಾಲಿಕ ಮಿತ್ರ = ಪರಮಿತ್ರ

ನೈಸರ್ಗಿಕ + ತಾತ್ಕಾಲಿಕ ಶತ್ರುತ್ವ = ಅಧಿಶತ್ರು

ನೈಸರ್ಗಿಕ ಸಮ + ತಾತ್ಕಾಲಿಕ ಶತ್ರು = ಶತ್ರು

ನೈಸರ್ಗಿಕ ಶತ್ರುತ್ವ + ತಾತ್ಕಾಲಿಕ ಮಿತ್ರ = ಸಮ

ಕೊಟ್ಟ ಲಗ್ನ ಕುಂಡಲಿಯಲ್ಲಿ –

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಅಧಿ ಮಿತ್ರ | ಗುರು ಮಂಗಳ | – | ರವಿ ಚಂದ್ರ | ಶುಕ್ರ | ರವಿ ಚಂದ್ರ | ಬುಧ | – |
| ಮಿತ್ರ | – | ಗುರು ಮಂಗಳ ಶುಕ್ರ ರವಿ ಬುಧ | – | – | – | – | – |
| ಸಮ | ಚಂದ್ರ | – | ಬುಧ | ಗುರು ಮಂಗಳ ರವಿ | ಶನಿ ಬುಧ | ರವಿ ಚಂದ್ರ ಶನಿ | ಬುಧ ಶುಕ್ರ |
| ಶತ್ರು | ಬುಧ ಶುಕ್ರ | ಶನಿ | ಶುಕ್ರ ಗುರು ಶನಿ | ಶನಿ | ಮಂಗಳ | ಮಂಗಳ ಗುರು | ಗುರು ಮಂಗಳ |
| ಅಧಿ | ಶನಿ | – | – | ಚಂದ್ರ | ಶತ್ರು | – | ಸೂರ್ಯ ಚಂದ್ರ |

## ಗ್ರಹಗಳಿಗೆ ಉಚ್ಚಾದಿ ಸ್ಥಾನ ಬಲ

ಸ್ವೋಚ್ಚೆ ಶುಭಂಬಲಂ ಪೂರ್ಣ ತ್ರಿಕೋಣೆ ಪಾದವರ್ಜಿತಮ್
ಸ್ವಕ್ಷೇತ್ರೇ ದಲಿಂ ಮಿತ್ರಗೃಹೆ ಪಾದಮಾತ್ರಂ ಪ್ರಕೀರ್ತಿತಮ್ ॥೬೩॥

ಪಾದಾರ್ಧೆ ಸಮಭೆ ಪ್ರೋಕ್ತಂ ವಿಯನ್ನೀಚಾಸ್ತಶತ್ರುಬೆ
ತದ್‌ವದೇ ವಾಶುಭಂ ಬ್ರೂಯಾದ್ ವ್ಯತ್ಯೇಯೇನ ವಿಚಕ್ಷಣಃ ॥೬೪॥

ಸ್ವೋಚ್ಚದಲ್ಲಿ ಗ್ರಹ ಶುಭಪ್ರದವಾಗಿ ಪೂರ್ಣ ಬಲಯುತವಾಗಿರುತ್ತದೆ. ಮೂಲ ತ್ರಿಕೋಣದಲ್ಲಿ 1 $^{1}/_{4}$ ಅಂದರೆ $^{3}/_{4}$ ಬಲವಿರುತ್ತದೆ. ಸ್ವಗೃಹದಲ್ಲಿ $^{1}/_{2}$ ಬಲ, ಮಿತ್ರಕ್ಷೇತ್ರ $^{1}/_{4}$ ಬಲ ಹಾಗೂ ಸಮನ ಮನೆಯಲ್ಲಿ $^{1}/_{8}$ ಬಲ ಮಾತ್ರ ನೀಚ ಅಸ್ತ ಶತ್ರುಗ್ರಹದಲ್ಲಿ ಶೂನ್ಯಬಲವೆಂದು ತಿಳಿಯುವರು. ಈ ಅಂಶಗಳ ಮೇಲಿಂದ ಕುಂಡಲಿಯಲ್ಲಿ ಬಲಾಬಲ ನೋಡುವರು.

ಈ ಅಂಶವನ್ನೇ ಶುಭಾಶುಭ ಫಲ ರೂಪಕವಾಗಿ ಈ ಕೆಳಗಿನ ಕೋಷ್ಠಕದಲ್ಲಿ ನೋಡುವುದು.

### ಶುಭಾಶುಭಾರ್ಥ ಚಕ್ರ

#### ಶುಭಫಲ

| ಉಚ್ಚ | ಮೂಲತ್ರಿಕೋಣ | ಸ್ವಗೃಹ | ಮಿತ್ರಗೃಹ | ಸಮಗೃಹ | ನೀಚಶತ್ರುಗ್ರಹ |
|---|---|---|---|---|---|
| 1 ಪೂರ್ಣ | 0.75 | 0.50 | 0.25 | 0.125 | ಅಸ್ತ 0 |

#### ಅಶುಭಫಲ

| ಉಚ್ಚ | ಮೂಲತ್ರಿಕೋಣ | ಸ್ವಗೃಹ | ಮಿತ್ರಗೃಹ | ಸಮಗೃಹ | ನೀಚಶತ್ರುಗ್ರಹ |
|---|---|---|---|---|---|
| 0 | 0.125 | 0.25 | 0.50 | 0.75 | 1-0 ಪೂರ್ಣ |

ಈ ರೀತಿ ಶುಭಾಶುಭ ಫಲವನ್ನರಿಯುವುದು. ಇಲ್ಲಿ ಪ್ರಮುಖವಾಗಿ ರಾಹು-ಕೇತುಗಳ ಬಗ್ಗೆ ವಿವರಿಸಿ, ಅವು ಛಾಯಾಗ್ರಹಗಳಾದ್ದರಿಂದ ಮಿತ್ರತ್ವ ಶತ್ರುತ್ವಕ್ಕಿಂತ ಅವು ಯಾವ ಗ್ರಹದೊಡನೆ ಇರುವುವೋ ಆ ರೀತಿ ಫಲ ಹೇಳಿದ್ದರಿಂದ ಇಲ್ಲಿ ರಾಹು-ಕೇತು ಹರ್ಷಲ್ ನೆಪ್ಚೂನ್ ಬಗ್ಗೆ ವಿಶೇಷ ಪರಿಶಿಷ್ಟದಲ್ಲಿ ವಿವರಿಸಲಾಗುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರ ತೃತೀಯ ಅಧ್ಯಾಯ ಸಮಾಪ್ತಿ**

## ೪ನೇ ಅಧ್ಯಾಯ

# ಅಥ ಗ್ರಹಾದಿ ಸಾಧನಾಧ್ಯಾಯ

## ಗ್ರಹಗಳ ತಾತ್ಕಾಲಿಕರಣ ಅಥವಾ ಗ್ರಹ ಸ್ಪಷ್ಟ ತೆಗೆಯುವುದು

ಪಂಚಾಂಗಸ್ಥೋ ಮಿಶ್ರಮಾನಕಾಲಃ ಪಂಕ್ತಿಸಮಾಹ್ವಯಃ
ಸೂರ್ಯೋದಯಾದ್ಯಾತಕಾಲಃ ಸಾವನೇಷ್ಟ ಉದೀರಿತಃ ॥೧॥

ದಿನಾದ್ಯಮಂತರಂ ಯಚ್ಚ ತಯೋರ್ಯಾತೈಷ್ಯಕಂ ಹಿತತ್
ಪಂಕ್ತ್ಯಾಧಿಕ್ಯೆ ಯಾತಸಂಜ್ಞಮೈಷ್ಯಮಿಷ್ಟೇಧಿಕೆ ಸ್ಮೃತಮ್ ॥೨॥

ಋಣಾ ಧನಂ ದಿನಾದ್ಯಂ ತದ್‌ಗುಣಿತಂ ಗ್ರಹಭುಕ್ತಿಭಿಃ
ಖರಸೌರ್ವಿಹೃತಂ ಲಬ್ಧಮಂಶಾದ್ಯಂ ಚಾಲನಂ ಫಲಮ್ ॥೩॥

ಪಂಕ್ತಿಗ್ರಹೇಷು ಸಂಶೋಧ್ಯಂ ಯೋಜ್ಯಂ ಚ ಶ್ರಮಶಸ್ತದಾ
ತಾತ್ಕಾಲಿಕಗ್ರಹಾ ವಾಮಂಪಾತೆ ವಕ್ರಖಿಗೇಪಿ ತತ್ ॥೪॥

ನಕ್ಷತ್ರ ಯಾತ ಭೋಗಾಮ್ಯಾ ಮಿಂದುಂ ಸಂಸಾಧಯೇತ್ ಬುಧಃ

ಪಂಚಾಂಗದಲ್ಲಿ ಸ್ಥಿತ ಮಿಶ್ರಮಾನ ಕಾಲಕ್ಕೆ ಪಂಕ್ತಿಯೆಂದು ಹೇಳುತ್ತಾರೆ. (ಇಲ್ಲಿ ಸೂರ್ಯ ಚಂದ್ರ ಮಾನಗಳ ಸಮ್ಮಿಶ್ರವಾಗಿರುವುದರಿಂದ ಮಿಶ್ರಕಾಲವೆಂದು ಹೇಳಲಾಗಿದೆ) – 'ಪಂಕ್ತಿ' ಸೂರ್ಯೋದಯದಿಂದ ಅಭೀಷ್ಟ ಸಮಯದವರೆಗಿನ ಕಾಲವನ್ನು 'ಸಾವನೇಷ್ಟ' ಕಾಲವೆಂದು ಹೇಳುತ್ತಾರೆ. ಈ ಎರಡೂ ಕಾಲಗಳ ದಿನಾಂಕ ಅಂತರವನ್ನು ಯಾತಕಾಲವೆನ್ನುವರು ಅಥವಾ ವಿಷ್ಯಕಾಲವೆನ್ನುವರು.

ಇಲ್ಲಿ ಗ್ರಹಚಲನೆ ಕಾಲ – ಪಂಕ್ತಿ

ಸೂರ್ಯೋದಯದಿಂದ ಇಷ್ಟಕಾಲ – ಸಾವನೇಷ್ಟ

ಎರಡೂ ಕಾಲಗಳ ದಿನಾಧಿಕ ಕಾಲ – ಯಾಚ ಅಥವಾ ವಿಷ್ಯ

(ಈ ಕಾಲಮಾನವನ್ನು ಗ್ರಹಲಾಘವದ ಹಿಂದಿನ ಪಂಚಾಂಗಗಳಲ್ಲಿ ಕಾಣುತ್ತಿದ್ದೆವು. ಗ್ರಹಲಾಘವದ ನಂತರ ಪಂಚಾಂಗದಲ್ಲಿ ಸೂರ್ಯೋದಯದಿಂದ ಸೂರ್ಯೋದಯದವರೆಗಿನ ಕಾಲಮಾನ ಕೊಡುತ್ತಾರೆ. ಈಗ ಅದಕ್ಕೂ ಮುಂದುವರಿದು ನಿರ್ದಿಷ್ಟ ಗ್ರೀನ್‌ವಿಚ್ ಸಮಯಾನುಸಾರ 5.30ರ ಗ್ರಹಮಾನವನ್ನು ಭಾರತದ ಅನೇಕ ಪಂಚಾಂಗದಲ್ಲಿ (ಗ್ರಹಕಾಲಕ್ಕೆ) ಕೊಟ್ಟಿರುತ್ತಾರೆ. ಹೀಗಾಗಿ ವಿಶೇಷ

ಗೊಂದಲವಿರುವುದಿಲ್ಲ) ಪಂಕ್ತಿಯನ್ನು ಕಲ್ಪಾದಿಯಿಂದಲೂ ತೆಗೆದುಕೊಳ್ಳಲು ಬರುತ್ತದೆ.

ಪಂಕ್ತಿ, ಸಾವನೇಷ್ಟ, ಯಾಚ ಎಷ್ಟು ಕಾಲಗಳ ಸ್ಪಷ್ಟ ಕಲ್ಪನೆಯಾದ ನಂತರ ಮುಂದಿನ ಕ್ರಿಯೆ.

ಇಷ್ಟಕಾಲದಿಂದ ಪಂಕ್ತಿಕಾಲ, ಮುಂದಿದ್ದರೆ ಅರ್ಥಾತ್ ಪಂಕ್ತಿಕಾಲದ ಮೊದಲೇ ಗ್ರಹಗಳ ತಾತ್ಕಾಲಿಕರಣ, ಅಭೀಷ್ಟವಾಗಿದ್ದರೆ ಪಂಕ್ತಿ ಕಾಲದಲ್ಲಿ ಇಷ್ಟಕಾಲ ಕಳೆದು, ದಿನಾಧಿಕ ಅವಶೇಷ(ಉಳಿದ)ವನ್ನು ಋಣಾತ್ಮಕ ಯಾತಸಂಜ್ಞಕ ವೆಂದು ತಿಳಿಯಿರಿ. ಪಂಕ್ತಿಕಾಲದಿಂದ ಇಷ್ಟಕಾಲವೇ ಮುಂದಿದ್ದರೆ ಅಂದರೆ ಪಂಕ್ತಿ ಕಾಲದ ನಂತರ ಇಷ್ಟಕಾಲದ ಗ್ರಹಗಳ ತಾತ್ಕಾಲೀಕರಣವಿದ್ದರೆ ಇಷ್ಟಕಾಲದಿಂದ ಪಂಕ್ತಿಕಾಲ ಕಳೆಯಿರಿ. ಉಳಿದ ದಿನಾಧಿಕ ಶೇಷವನ್ನು ಧನಾತ್ಮಕ ವಿಷ್ಯಕಾಲ ಎನ್ನಿರಿ.

ಈ ಪ್ರಕಾರ ಬಂದ ಋಣ ಧನ (ಯಾಚ ವಿಷ್ಯ) ದಿನಾಧಿಕಕ್ಕೆ ಯಾವ ಗ್ರಹದ ಗತಿ ತೆಗೆಯುವುದಿದೆಯೋ ಅದರ ಗತಿಯಿಂದ ಗುಣಿಸಿ 60ರಿಂದ ಭಾಗಿಸಿರಿ. ಯಾವ ಅಂಶಾಧಿಕ ಲಬ್ಧಗಳು ಬರುವುವೋ ಅವನ್ನು ಪಂಕ್ತಿಕಾಲಿಕ ಗ್ರಹಗಳಲ್ಲಿ ಋಣ-ಧನ ಮಾಡಿರಿ. ಯಾತ ಹಾಗೂ ವಕ್ರೀ ಗ್ರಹಗಳಲ್ಲಿ ಚಲನ ಫಲ ಧನ-ಋಣ ಮಾಡಿದರೆ ಅಭಿಷ್ಟ ಕಾಲದ ಗ್ರಹ ಸ್ಪಷ್ಟವಾಗುತ್ತದೆ.

ವಿಶೇಷ: ಪಂಚಾಂಗದಲ್ಲಿ ಯಾವ ಸಮಯ ಸಶೇಷ ಕಾಲವನ್ನು ಪರಿಗ್ರಹಿಸಿ ರುವರೋ ಅದನ್ನು ಪಂಕ್ತಿಕಾಲವೆನ್ನಿರಿ (ಅದು 5.30 ಗ್ರೀನ್‌ವಿಚ್ ಆಗಿರಬಹುದು ಅಥವಾ ಕಾಶಿಯ ಸೂರ್ಯೋದಯ 6.0 ಆಗಿರಬಹುದು ಅಥವಾ ನಮ್ಮ ಕಾಲಮಾನದಂತೆ ಸೂರ್ಯೋದಯದಿಂದ ಸೂರ್ಯೋದಯವಾಗಿರಲೂ ಸಾಕು ಅಥವಾ ಕೇಲ ಮಠೀಯ ಪಂಚಾಂಗಗಳಲ್ಲಿ 15 ದಿನವೆಂದೂ ಪರಿಗಣಿಸಿರುತ್ತಾರೆ) ಅದನ್ನು ಅನುಸರಿಸಿ ನಮ್ಮ ಕ್ರಿಯಾದಿಗಳಿರುತ್ತವೆ. ಗ್ರಹಲಾಘವೀಯದ ನಂತರ ಸೂರ್ಯೋದಯದಿಂದ ಸೂರ್ಯೋದಯ ಗಣಿಸುತ್ತಾರೆ.

ಉದಾಹರಣೆಗೆ – ವೈಶಾಖ ಕೃಷ್ಣಪಕ್ಷ ಪಂಚಮಿ ಬುಧವಾರ ಸೂರ್ಯೋದಯದಿಂದ 13.55 ಸಾವನೇಷ್ಟಕಾಲ, ಪಂಕ್ತಿಕಾಲ ಗುರುವಾರ 45.48 ಘಟಿಕಾ ಇದ್ದು ವಾರಾದಿಯಿಂದ ಕಾಲ ತೆಗೆಯುವುದು. ಬುಧವಾರ 4ನೇ ದಿನ 4-13-55 ಆಯಿತು. ಅಂತೆ ಪಂಕ್ತಿಕಾಲ 5-45-48 ಆಗುತ್ತದೆ. ಈ ರೀತಿಯಂತೆ ಪಂಕ್ತಿಯಲ್ಲಿ ಸಾವನ ಪೇಷ್ಟಕಾಲ ಋಣಾತ್ಮಕವಾಗಿ ಕಳೆಯಲಿ. ಅಂದರೆ (5-45-48) – (4-13-55) = 1-32-3 ವಾರಾದಿ ಯಾತಕಾಲ ಋಣಾತ್ಮಕ ದಿನಾದಿ ಇದರಿಂದ ಪಂಕ್ತಿಯ ಸೂರ್ಯನ ಸ್ಪಷ್ಟಗತಿ 59-00(ಕಲಾ)ಕ್ಕೆ ಗೋಮೂತ್ರೀಕರಣ

ದಂತೆ ಗುಣಾಕಾರ ಮಾಡಿದರೆ,

1.32.3 × 59 = 90.30.57 ಆಗುತ್ತದೆ. ಇದಕ್ಕೆ ನಿಯಮದಂತೆ 9.30.57/60 ಭಾಗ ಮಾಡಿದಾಗ = $1^0$.30'.31" ಋಣಚಲನವಾಗುತ್ತದೆ. ಪಂಕ್ತಿಯ ಸ್ಪಷ್ಟಸೂರ್ಯ 11-22.28-31 ಇದ್ದು ಇದರಲ್ಲಿ ಚಾಲನ ಫಲ ಕಳೆಯಲು 11-22-28.31 (−) 1.30.31 = 11.20.58 ತಾತ್ಕಾಲಿಕ ಸ್ಪಷ್ಟಸೂರ್ಯವಾಗುತ್ತದೆ. ಇದು ತ್ರೈರಾಶಿದಿಂದ ಸಮುಚಿತವಾಗುತ್ತದೆ ಇರಲಿ.

ಈಗಿನ ಪಂಚಾಂಗದಲ್ಲಿ ಈ ಅಂಶ ಬಹಳ ಸುಲಭವಾಗಿದೆ. ಸೂರ್ಯೋದಯದಿಂದ ಸೂರ್ಯೋದಯ ಹೊರಗಿನ ಚಲನಗತಿ ಅಂದರೆ ಪಂಕ್ತಿಯಿರುವುದರಿಂದ ಯಾವ ತೊಂದರೆ ಬರಲಾರದು. ಸೂರ್ಯೋದಯವು ಹೆಚ್ಚು ಕಡಿಮೆ ಬರುವುದರಿಂದ ಶೋಲಾಪೂರಾದಿ ಪಂಚಾಂಗಗಳಲ್ಲಿ 5.30.0 ಗ್ರೀನ್‌ವಿಚ್ ಸಮಯ ಕೊಡುವುದರಿಂದ ಇನ್ನೂ ಹೆಚ್ಚು ಸುಲಭವಾಗಿದೆ.

ಅಂದರೆ–

ಉದಾಹರಣೆ: ಒಬ್ಬ ವ್ಯಕ್ತಿ ಜ್ಯೇಷ್ಠ ಶುಕ್ಲ ಪ್ರತಿಪದಾ ದಿನಾಂಕ 11.6.2002ರಂದು ಮಧ್ಯಾಹ್ನ 12.30ಕ್ಕೆ ಹುಟ್ಟಿದ್ದಾನೆಂದರೆ ಸ್ಪಷ್ಟ ಸೂರ್ಯ ತೆಗೆಯುವುದು.

ಪಂಕ್ತಿಕಾಲ 5.30 ಸಾವನೇಷ್ಟ 12.30 (19 ಘ 10 ಫಲಾ) ಸ್ಪಷ್ಟಸೂರ್ಯನನ್ನು ತೆಗೆಯುವುದು.

| | |
|---|---|
| 12.6.2002ರ 5.30 ಸ್ಪಷ್ಟಸೂರ್ಯ | 1.26.59.03 |
| 11.6.2002ರ 5.30 ಸ್ಪಷ್ಟಸೂರ್ಯ | 1.26.01.40 |
| ಋಣ ಮಾಡಿದಾಗ | 0.0.58'.23" |

ರವಿಯ ಸ್ಪಷ್ಟ ಗತಿ 58'23" ವಿಕಲಾ 24 ತಾಸಿನ ಗತಿ.

ಒಂದು ತಾಸಿನ ಗತಿ = 58.23 ÷ 24 = 2.26 × 7ತಾಸು = 17 ಕಲಾ

ಪಂಕ್ತಿಕಾಲದಿಂದ ಸಾವನೇಷ್ಟಿ ಕಾಲ - 7 ತಾಸು

2'-26" × 7 ತಾಸು = 17' ಕಲಾ

... (5.30) ಸ್ಪಷ್ಟ ಸೂರ್ಯೋದಯ (11.6.2002) 1.26.1.40

7 ತಾಸು ಚಲಾಸದ ಅಂತರ 0.0.17.0

ಸ್ಪಷ್ಟ ಸಾವನೇಷ್ಟ ರವಿ 1.26.18.40

ಇದೇ ರೀತಿ ಇತರ ಗ್ರಹಗಳ ಚಲನ ತೆಗೆದು ತೆಗೆಯಲೂಬಹುದು ಅಥವಾ ಆ ಪದ್ಧತಿಯಿಂದ ತೆಗೆದರೂ ಸರಿಯೇ.

## ಹಳೆಯ ಪದ್ಧತಿಯಲ್ಲಿ ಚಂದ್ರಸ್ಪಷ್ಟ

**ಭಯಾತಂ ಭೋಗವಹೃತಿಂ ಗತಷಾಂಶ ಸಮನ್ವಿತವ್**

**ಖವೇದಗುಣಿತಂ ಭಕ್ತಿಂ ತ್ರಿಭರಂಶಾದಿಕಃ ಶಶಿ**

ಭಯಾತವನ್ನು ಭಭೋಗದಿಂದ ಭಾಗಿಸಿ ಬರುವ ಲಬ್ಧದಲ್ಲಿ ಗತನಕ್ಷತ್ರ ಸಂಖ್ಯೆ ಸೇರಿಸಿ ಈ ಯೋಗಫಲಕ್ಕೆ 40ರಿಂದ ಗುಣಿಸಿ 3ರಿಂದ ಭಾಗಿಸಲು ಯಾವ ಅಂಶಾದಿಗಳು ಬರುವುವೋ ಅವು ಸ್ಪಷ್ಟಚಂದ್ರ

ಫಲಾತ್ಮಕ ಭಯಾತ 2755ರಲ್ಲಿ ಫಲಾತ್ಮಕ ಭಭೋಗ 3434 ಭಾಗಿಸಿದರೆ $2755 \div 3434 = 0\text{-}48\text{-}8\text{-}11$ ಇದು ಲಬ್ಧವಾಯಿತು. ಇದರಲ್ಲಿ ಗತನಕ್ಷತ್ರ ಸಂಖ್ಯೆ (ವಿಶಾಖಾ) 16 ಸ್ಪಷ್ಟ 16.48.8.1 ಆಯಿತು. ಇದಕ್ಕೆ 40ರಿಂದ ಗುಣಿಸಿ 3ರಿಂದ ಭಾಗಿಸಿದರೆ,

$$\frac{16.48.8.1 \times 40}{3} = 224\text{-}1\text{-}49$$ ಇದು 7.14-1.49

ಸ್ಪಷ್ಟ ಚಂದ್ರವಾಯಿತು.

ಇದನ್ನು ಮೇಲೆ ಹೇಳಿದ ಹೊಸ ರೀತಿ ಸ್ಪಷ್ಟ ರವಿಯಂತೆಯು ತೆಗೆಯಲು ಬರುವುದು.

**ಧೂಮಾದಿ ಅಪ್ರಕಾಶ ಗ್ರಹಸಾಧನ**
**ಸತ್ರ್ಯಂಶೈಸ್ತ್ರಿಂದು ಭಾಗೈಮೈಶ್ಚತುರ್ಭಿಸ್ತ್ರ್ಯಯುತೋ ರವಿಃ ॥೫॥**
**ಧೂಮೋನಾಮ ಮಹಾದೋಷಃ ಸರ್ವಕರ್ಮವಿನಾಶಕಃ**

**ಧೂಮೋ ಮಂಡಲತಃ ಶುದ್ಧೋ ವ್ಯತಿಪಾತೋತ್ರದೋಷದಃ ॥೬॥**

**ಷಷದ್‌ಭೇತ್ರ ವ್ಯತಿಪಾತೆ ಪರಿವೇಷಸ್ತು ದೋಷಕೃತ**
**ಪರಿವೇಷಶೂಯತಶ್ಚೂಕ್ರಾದಿಂದುಚಾಪಶ್ಚ ದೋಷದಃ ॥೭॥**

ತ್ರ್ಯಂಶೋನಾತ್ಯಷ್ಟಿಭಾಗೈಶ್ಚ ಯುತಶ್ಚಾಪೋಶುಭಃ ಶಿಖಿ
ಏಕರಾಶಿಯುಂತೆ ಕೇತೌ ಸೂರ್ಯೋ ರಾಶ್ಯಾಧಿಕೋ ಭವೇತ್ ॥೮॥

ಅಪ್ರಕಾಶಗ್ರಹಾಶ್ಚೈತೆದೋಷದಾಃ ಪಾಪಿನಃ ಸ್ಮೃತಾಃ

ಸ್ಪಷ್ಟ ಸೂರ್ಯನಲ್ಲಿ 4 ರಾಶಿ 13 ಅಂಶ ಹಾಗೂ 20 ಕಲಾ ಸೇರಿಸುವುದರಿಂದ ಧೂಮವೆಂಬ, ಮಹಾದೋಷಕಾರಕವಾದ ಅಪ್ರಕಾಶಗ್ರಹ ಎಲ್ಲ ಕಾರ್ಯವನ್ನು ನಷ್ಟ ಮಾಡುವ ಗ್ರಹವಾಗುತ್ತದೆ. ಮಂಡಲ ಶುದ್ಧವಾದ ಈ ಗ್ರಹದಲ್ಲಿ ಅಂದರೆ ಧೂಮದಲ್ಲಿಯ ಅಂಶರಾಶಿಕಲಾದಿಗಳನ್ನು 12 ರಾಶಿಯೇ ಕಳೆಯಲು ದೋಷಕಾರಿ ಯಾದ ವ್ಯತಿಪಾತ ಗ್ರಹವಾಗುತ್ತದೆ. ಈ ವ್ಯತಿಪಾತ ಸ್ವಷ್ಟದಲ್ಲಿ 6 ರಾಶಿ ಸೇರಿಸು ವುದರಿಂದ ದೋಷಕಾರಕ ಪರಿವೇಷ ಸಂಜ್ಞಕ ಗ್ರಹವಾಗುತ್ತದೆ. ಈ ಪರಿವೇಷವನ್ನು 12 ರಾಶಿಯಲ್ಲಿ ಕಳೆಯಲು ಇಂದ್ರಚಾಪ ಗ್ರಹವಾಗುತ್ತದೆ. ಇಂದ್ರಚಾಪದಲ್ಲಿ $16^0$(ಅಂಶ) 40 (ಕಲಾ) ಸೇರಿಸುವುದರಿಂದ ಅಶುಭಕಾರಕ ಕೇತುಗ್ರಹವಾಗುತ್ತದೆ. (ಇದು ಪ್ರತ್ಯೇಕ ಅಪ್ರಕಾಶಿತ ಗ್ರಹ-ರಾಹುಕೇತುವಿನಲ್ಲಿಯ ಕೇತುಗ್ರಹವಲ್ಲ). ಕೇತು ಗ್ರಹದಲ್ಲಿ 1 ರಾಶಿ ಸೇರಿಸುವುದರಿಂದ ಸ್ಪಷ್ಟಸೂರ್ಯವಾಗುತ್ತದೆ. ಇವು 1) ಧೂಮ, 2) ವ್ಯತಿಪಾತ 3)ಪರಿವೇಷ 4)ಇಂದ್ರಚಾಪ 5) ಕೇತುಸಂಜ್ಞಕ ಗ್ರಹಗಳಾಗಿ ಇವು ಪಾಪಿಗಳಾಗಿ ದೋಷಕಾರಕವಾಗಿವೆ.

ಉದಾಹರಣೆ - ಒಬ್ಬ ವ್ಯಕ್ತಿಯ ಸೂರ್ಯಸ್ಪಷ್ಟವು

1) 6-17-35-0 ಇದೆ ಎಂದಾದರೆ ಇದರಲ್ಲಿ ನಿಯಮದಂತೆ

4-13-20-0 ಸೇರಿಸಿದರೆ 6-17-35-0 + 4-13-20-0 = 11-0-55 ಧೂಮ ಸ್ಪಷ್ಟ

2) ಇದನ್ನು 12-0-0 ಕಳೆಯಲು ಅಂದರೆ

12-0-0(−)11-0-55 = 0.29.05 ವ್ಯತಿಪಾತ

ವ್ಯತಿಪಾತ + 6-0-0 = 6-29-5 - ಪರಿವೇಷ

12 ರಾಶಿ - ಪರಿವೇಷ = ಇಂದ್ರಚಾಪ

12-0-0(−) 6.29.55 = 5.0.55 ಕಲಾ ಇಂದ್ರಚಾಪ

ಇಂದ್ರಚಾಪ + 0.16.40 = ಕೇತು

5.0.55+0.16.40 = 5.17.35 ಕೇತು

ಸೂರ್ಯಸ್ಪಷ್ಟ 1.0.0+5.17.35 = 6.17.35

ಸೂರ್ಯಸ್ಪಷ್ಟ - 6.17.35

## ಅಪ್ರಕಾಶಾದಿ ಗ್ರಹಸ್ಪಷ್ಟ

| ಗ್ರಹ | ಧೂಮ | ವ್ಯತಿಪಾತ | ಪರಿವೇಷ | ಇಂದ್ರಚಾಪ | ಕೇತು |
|---|---|---|---|---|---|
| ರಾ | 11 | 0 | 6 | 5 | 5 |
| 60 | 0 | 29 | 29 | 0 | 17 |
| ಕಲಾ | 55 | 05 | 05 | 55 | 35 |

### ಕಲ್ಪಿತ ವ್ಯಕ್ತಿಯ ಕುಂಡಲಿ ಕರ್ಕಲಗ್ನ

5
3
6 ಇಂದ್ರಚಾಪ ಕೇತು (ಶು) ಶುಕ್ರ
4
2 ಕೆ
7 ರವಿ ಬು ಚಂದ್ರ ಪರಿವೇಶ
1 ವ್ಯತಿಪಾತ
8 ರಾ
10 ಗು. ಮ
ಧೂಮ 12 ಶನಿ
9
11

| ಶನಿ ಧೂಮ | ವ್ಯತಿಪಾತ | ಕೇತು | |
|---|---|---|---|
| | | | |
| ಗು. ಮ. | | | |
| | ರಾ | ರ,ಬು,ಚಂ ಪರಿವೇಶ | ಇಂದ್ರ ಚಾಪ ಕೇ, ಶು |

ವಿಶೇಷ : ಮುಂದೆ ಬರುವ ನಿಯಮದಂತೆ ಕೇತು ಒಬ್ಬ (ಕೇತುಸಂಜ್ಞಕ) ಮಾತ್ರ ಫಲ ಕೊಟ್ಟರೆ ಉಳಿದೆಲ್ಲ ಅಪ್ರಕಾಶಿತ ಗ್ರಹಗಳು 3ರ ಒಳಗೆ ಅಥವಾ 27ರ ಮೇಲಿರುವುದರಿಂದ ಮೃತಗ್ರಹಗಳಲ್ಲಿ ಪರಿಗಣಿಸಲ್ಪಟ್ಟು ಅತಿ ನಿರ್ಬಲ ಫಲದಾಯಕಗಳು.

### ಅಪ್ರಕಾಶ ಗ್ರಹಗಳ ಫಲ

ರವೀಂದು ಲಗ್ನಗೇಷ್ವೇಷು ವಂಶಾಯುರ್ಜ್ಞಾನ ನಾಶನಮ್ ।
ಏಷಾಂ ಪಂಚಾರ್ಕದೋಷಾಣಾಂ ಸ್ಥಿತಿಃ ಪದ್ಮಾಸನೋದಿತಾ ॥೯॥

ಈ ಗ್ರಹಗಳು ಅಂದರೆ ಧೂಮಾದಿ ಪಂಚಗ್ರಹಗಳು (ಅಪ್ರಕಾಶಿತ) ಸೂರ್ಯ ಚಂದ್ರ ಅಥವಾ ಲಗ್ನಯುಕ್ತವಾಗಿದ್ದರೆ (ಯುತಿ ಹೆಚ್ಚು ಮಹತ್ವಸ್ಥಾನ ಅಲ್ಪ) ರವಿಯೊಡನೆ ಯುತವಾದರೆ ವಂಶವನ್ನು ಚಂದ್ರನೊಡನೆ ಯುತವಾದರೆ ಆಯುಸ್ಸನ್ನು ಹಾಗೂ ಲಗ್ನಯುತವಾದರೆ ಜ್ಞಾನವನ್ನು ನಾಶ ಮಾಡುತ್ತವೆ. ಈ ಐದು ಸೂರ್ಯಮಂಡಲದ ಅರ್ಕ ದೋಷಿ ಸ್ಥಿತಿಯನ್ನು ಸ್ವತಃ ಬ್ರಹ್ಮದೇವರೆ ಹೇಳುವರೆಂದು ಪರಾಶರರು ಸ್ಪಷ್ಟಪಡಿಸಿದ್ದಾರೆ (ಅಂತರಿಕ್ಷದಲ್ಲಿ 720 ಗ್ರಹಗಳಿವೆ ಯೆಂದು ವೇದ ಸ್ಪಷ್ಟಪಡಿಸಿದೆ)

## ಗುಳಿಕಾದಿ ಸಾಧನ

ರವಿ ವಾರಾದಿ ಶನ್ಯಂತಂ ಗುಳಿಕಾದಿ ನಿರೂಪ್ಯತೆ ॥೧೦॥

ದಿವಸಾನಷ್ಟಧಾ ಕೃತ್ವಾ ವಾರೇಶಾದ್ ಗಣಯೆತ್ ಕ್ರಮಾತ್

ಅಷ್ಟಮಾಂಶೋ ನಿರೀಶಃ ಸ್ಯಾಚ್ಛನ್ಯಂಶೋ ಗುಳಿಕ ಸ್ಮೃತಃ ॥೧೧॥

ರಾತ್ರಿಮಪ್ಯಷ್ಟಧಾ ಭಕ್ತ್ವಾವಾರೇಶಾತ್ ಪಂಚಮಾದಿತಃ

ಗಣಯೇದಷ್ಟಮಃ ಖಂಡೋ ನಿರೀಶಃ ಪರಿಕೀರ್ತಿತಃ ॥೧೨॥

ಶನ್ಯಾಂಶೋ ಗುಳಿಕಃ ಪ್ರೋಕ್ತೋ ಗುರ್ವಂಶೋ ಯಮಘಂಟಿಕಃ ।

ಭೌಮಾಂಶೋ ಮೃತ್ಯುರಾಧಿಷ್ಟೋ ರವ್ಯಂಶಃ ಕಾಲಸಂಜ್ಞಕಃ ॥೩॥

ಸೌಮ್ಯಾಂಶೋರ್ಧಕ ಪ್ರಹರಕಃ ಸ್ಪಷ್ಟಃಸ್ಯಾತ್ ಸ್ವಸ್ವದೇಶತಃ ।

ಸೂರ್ಯ ವಾರಾದಿಗಳಿಂದ ಶನಿವಾರ ಪರ್ಯಂತ ಗುಳಿಕ ಆದಿಗಳ ನಿರೂಪಿಸುತ್ತೇನೆ - ವಿಪ್ರನೆ,

ದಿನಮಾನವನ್ನು ಎಂಟು ಭಾಗ ಮಾಡಿ ಕ್ರಮವಾಗಿ ವಾರಾಧಿಪತಿಯನ್ನು ಗಣನೆನ್ನು ಮಾಡುವುದು (ದಿನಮಾನ ಸ್ಥಳೀಯ ಸೂರ್ಯೋದಯದಿಂದ ಸೂರ್ಯಾಸ್ತ ಪರ್ಯಂತ ಸಮಯ ರಾತ್ರಿಮಾನ ಸೂರ್ಯಾಸ್ತದಿಂದ ಸೂರ್ಯೋದಯ ಪರ್ಯಂತ) ಪ್ರಥಮದಿಂದ ಏಳು ಭಾಗಗಳು ಕ್ರಮಶಃ ವಾರಾಧಿಪರಾಗಿರುತ್ತಾರೆ ಎಂಟನೇ ಭಾಗ ನಿರೀಶ್ವರವಾಗಿರುತ್ತದೆ. ಅಂದರೆ ಅಷ್ಟಮಕ್ಕೆ ಯಾವ ಅಧಿಪರು ಬಿಡುವುದಿಲ್ಲ. ಶನಿಯ ಭಾಗವೇ ಗುಳಿಕ, ಇದೇ ರೀತಿ ರಾತ್ರಿಮಾನವನ್ನು ಎಂಟು ಭಾಗ ಮಾಡಿ ವಾರೇಶನಿಂದ ಐದನೇ ಗ್ರಹ(ವಾರಾಧಿಪ)ದಿಂದ ಆರಂಭ ಮಾಡಿ ಏಳು ಭಾಗಗಳಿಗೆ ಅಧಿಪರನ್ನು ಹೇಳಿ ಎಂಟನೇ ಭಾಗವನ್ನು ನಿರೀಶ್ವರನನ್ನಾಗಿ ಗಣಿಸುವುದು.

| | | |
|---|---|---|
| ಶನಿಯ ಭಾಗ | → | ಗುಳಿಕ |
| ಗುರುವಿನ ಭಾಗ | → | ಯಮಘಂಟ |
| ಮಂಗಳನ ಭಾಗ | → | ಮೃತ್ಯು |
| ರವಿಯ ಭಾಗ | → | ಕಾಲವೇಶ |
| ಬುಧನ ಭಾಗ | → | ಅರ್ಧಪ್ರಹರ |
| ಶುಕ್ರನ ಭಾಗ | → | ಕೋದಂಡ |
| ಚಂದ್ರನ ಭಾಗ | → | ಪರಿಧಿ |

– ಅವನ್ನು ಈ ರೀತಿ ಹೇಳಬಹುದು.

ಸೂರ್ಯೋದಯ ಸೂರ್ಯಾಸ್ತ 6 ಗಂಟೆ ಎಂದೆ ಪರಿಗಣಿಸಿದರೆ ತಾಸಿನಲ್ಲಿ 1.30 ನಿಮಿಷ ಘಟಿಕಾ ಪಳಗಳಲ್ಲಿ 3 ಘಟಿಕಾ 45 ಪಳಾ ಆಗುವುದು ಸ್ಥಳೀಯ ಸೂರ್ಯೋದಯ ಮನದಂತೆ ತೆಗೆಯುವುದು.

ದಿನದಲ್ಲಿ ಚಕ್ರ ಸ್ಥಳೀಯ ಸೂರ್ಯೋದಯ 6.00

| ವಾರ | ಅವಧಿ | 1ನೇ | 2ನೇ | 3ನೇ | 4ನೇ | 5ನೇ | 6ನೇ | 7ನೇ | 8ನೇ |
|---|---|---|---|---|---|---|---|---|---|
| | | 7.30 | 9.00 | 10.30 | 12.00 | 1.30 | 3.00 | 4.30 | 6.00 |
| ರವಿ | | ಕಾಂ | ಪಂ | ಧೂ | ಅರ್ಧ | ಯುಂ | ಕೊಂ | ಗು | ನಿರೀಶ್ವರ |
| ಸೋಮ | | ಪಂ | ಧೂ | ಅರ್ಧ | ಯ | ಕೋ | ಗುಳಿ | ಕಾಂ | |
| ಮಂಗಳ | | ಧೂ | ಅರ್ಧ | ಯ | ಕೋ | ಗುಳಿ | ಕಾಂ | ಪಂ | |
| ಬುಧ | | ಅರ್ಧ | ಯ | ಕೋ | ಗುಳಿ | ಕಾಂ | ಪಂ | ಧೂ | |
| ಗುರು | | ಯ | ಕೋ | ಗುಳಿ | ಕಾಂ | ಪಂ | ಧೂ | ಅರ್ಧ | |
| ಶುಕ್ರ | | ಕೋ | ಗುಳಿ | ಕಾಂ | ಪಂ | ಧೂ | ಅರ್ಧ | ಯ | |
| ಶನಿ | | ಗುಳಿ | ಕಾಂ | ಪಂ | ಧೂಂ | ಅರ್ಧ | ಯ | ಕೋ | |

ರಾತ್ರಿಮಾನ ಸ್ಥಳೀಯ ಸೂರ್ಯಾಸ್ತ 6.0 ಇದ್ದಾಗ

| | | | | | | | | | |
|---|---|---|---|---|---|---|---|---|---|
| ರವಿ | | ಯ | ಕೋ | ಗುಳಿ | ಕಾಂ | ಪಂ | ಧೂ | ಅರ್ಧ | ನಿರೀಶ್ವರ |
| ಸೋಮ | | ಕೋ | ಗುಳಿ | ಕಾಂ | ಪಂ | ಧೂ | ಅರ್ಧ | ಯ | ನಿರೀಶ್ವರ |
| ಮಂಗಳ | | ಗುಳಿ | ಕಾಂ | ಪಂ | ಧೂಂ | ಅರ್ಧ | ಯ | ಕೋ | |
| ಬುಧ | | ಕಾಂ | ಪಂ | ಧೂ | ಅರ್ಧ | ಯುಂ | ಕೊಂ | ಗು | |
| ಗುರು | | ಪಂ | ಧೂ | ಅರ್ಧ | ಯ | ಕೋ | ಗುಳಿ | ಕಾಂ | |
| ಶುಕ್ರ | | ಧೂ | ಅರ್ಧ | ಯ | ಕೋ | ಗುಳಿ | ಕಾಂ | ಪಂ | |
| ಶನಿ | | ಅರ್ಧ | ಯ | ಕೋ | ಗುಳಿ | ಕಾಂ | ಪಂ | ಧೂ | |

ಸಂಕೇತ ನಿವರಣೆ – ಕಾಂ = ಕಾಲ, ಪಂ = ಪರಿಧಿ, ಅರ್ಧ = ಅರ್ಧಪ್ರಹರ, ಯಂ = ಯಮಘಂಟ, ಕೋಂ = ಕೋದಂಡ, ಗುಳಿ = ಗುಳಿಕ (ಮಾಂದಿ), ನಿರೀಶ್ವರ = ಸ್ವಾಮಿಯಲ್ಲದ ಅಂಶ

ಈ ರೀತಿ ಸ್ಥಳೀಯ ಸಮಯದ ಮೇಲೆ ಹೊಂದಾಣಿಕೆ ಮಾಡಿಕೊಂಡು ಆಯಾ ಸ್ವಾಮಿಗಳನ್ನು ತಿಳಿಯುವುದು.

## ಗುಳಿಕ ಲಗ್ನ

ಗುಳಿಕಾರಂಭಕಾಲೇಷ್ಟ - ಸಮಯಾಶ್ರಯತಸ್ತು ಯತ್ ॥೪॥

ಲಗ್ನಂ ಯತಾಧ್ಯತೆ ವಿಧ್ಬಿರ್ಗುಲಿಕಾಃ ಸಃ ನಿಗದ್ಯತೆ

ನಾಮಾಂತರಂ ತು ತಸ್ಯೈವ ಮಾಂದಿರಿತ್ಯಭಿಧೀಯತೆ ॥೫॥

ಗುಳಿಕಾರಂಭ ಕಾಲವನ್ನೇ ಇಷ್ಟ (ಜನನ ಪ್ರಶ್ನೆ) ಸಮಯವೆಂದು ಪರಿಗಣಿಸಿ ಲಗ್ನಾನಯನ ಪದ್ಧತಿಯಂತೆ ಲಗ್ನ ತೆಗೆಯುವುದೆ ಗುಳಿಕ ಸ್ವಷ್ಟ ಅಥವಾ ಗುಳಿಕ ಲಗ್ನವೆನ್ನುವರು – ಗುಳಿಕವನ್ನೇ ಸಂಜ್ಞಾತರವಾಗಿ ಮಾಂದಿ ಎಂದು ಕರೆಯುವರು. ಇಷ್ಟಕಾಲವು ದಿನದಲ್ಲಿದ್ದರೆ ದಿನಗತ ಗುಳಿಕೇಷ್ಟದಂತೆ ಅದರಂತೆ ರಾತ್ರಿಗತ ಗುಣಶೇಷವಿದ್ದರೆ ರಾತ್ರಿಗತ ಗುಳಿಕೋಷ್ಟದಿಂದ ಲಗ್ನಾಯನವೆನ್ನುವುದು ಸ್ವಾಭಾವಿಕವಾಗಿದೆ.

ಉದಾಹರಣೆ : ಬುಧವಾರ ಸೂರ್ಯೋದಯ 6.29 ಇದ್ದು ರವಿ ಅಸ್ತ 5.53 ಇದೆ. ಆ ದಿನದ ಗುಳಿಕ ಸ್ವಷ್ಟ - ದಿನಮಾನ 11.24 ರಾತ್ರಿಮಾನ 12.17 ಮಿನಿಟು ಇದೆ. ಅಂದರೆ ದಿನಮಾನ ಘಟಿ 28.30 ರಾತ್ರಿಮಾನ 31.30 ಆಗುತ್ತದೆ. ಅದೇ ದಿನ ರಾತ್ರಿ ಸ್ಟ್ಯಾಂಡರ್ಡ್ ಟೈಮ್ 11.00 ಪಿ.ಎಂ. ರಾತ್ರಿಗೆ. ಗುಳಿಕ ಲಗ್ನ ಆ ದಿನದ ರಾತ್ರಿಮಾನ 8 ಭಾಗ ಮಾಡಿವಾಗ ಪ್ರತಿಭಾಗ 1 ತಾ 34 ಮಿನಿಟು 30 ಸೆಕೆಂಡಿನಂತೆ ಆಗುತ್ತದೆ. ಬುಧವಾರ ಗುಳಿಕ 7ನೇ ಖಂಡಕ್ಕೆ ಬರುವುದರಿಂದ ಗುಳಿಕಾರಂಭ 4.54.31 ನಿಮಿಷಕ್ಕೆ ಆರಂಭವಾಗುತ್ತದೆ. ಅದು ಸೂರ್ಯೋದಯದಿಂದ 53.33 ಪಳ ಆಗುತ್ತದೆ. ಪರಾಶರರ (ಮುಂದೆ ಬರುವ ನಿಯಮ) 5 ಭಾಗಿಸಿ, ಸೂರ್ಯೋದಯದ ಸ್ವಷ್ಟ ಸೂರ್ಯನಲ್ಲಿ ಕೂಡಿಸಿದಾಗ ಸ್ವಷ್ಟ ಗುಳಿಕ ಲಗ್ನವಾಗುತ್ತದೆ. 53.33 ÷ 5 = 10.24.36 + ಸ್ವಷ್ಟ ಸೂರ್ಯೋದಯದ ಸ್ವಷ್ಟ ಸೂರ್ಯ 6.17.0

10.24.36 (+ – 6.17 5.11.36 (5.11.36) ಸ್ವಷ್ಟಗುಳಿಕ ಲಗ್ನವಾಗುತ್ತದೆ. ಸೂರ್ಯಪುತ್ರಿ ಆಗಿಯ ಉಪಗ್ರ ಗುಳಿಕ 5 ರಾ 11 ಅಂಶ 36 ಕಲಾ ಆಯಿತು ಇದೇ ಗುಳಿಕ ಲಗ್ನ

## ಪ್ರಾಣಪದ ಪರಿಭಾರ್ಕೈ

ಪಲೈಸ್ತು ತಿಥಿಭಿಃ ಪ್ರಾಣಪದಭಂ ಸಮುದೀರಿತವಮ್ ।
ಇಷ್ಟಕಾಲೋದ್ಭವಂ ತತ್ತು ಚರಗದ್ವಿಭಾಗೇ ರವೌ ॥೧೬॥

ಯತು ಮರ್ಕೆ ತತ್ತ್ರಿಕೋಣೆಗೆ ಸ್ಪುಟಂ ಪ್ರಾಣಪದಂ ಹಿತತ್

ರಾಶಿಯಂತೆ ಒಂದು ಪ್ರಾಣಪದವನ್ನು 15 ಫಲವೆಂದು ತೆಗೆದುಕೊಳ್ಳಲಾಗಿದೆ. ಚರ, ಸ್ಥಿರ, ದ್ವಿಸ್ವಭಾವ ರಾಶಿಗತ ಸೂರ್ಯನ ಮೇಲಿಂದ ಇಷ್ಟಕಾಲಿಕ ಪ್ರಾಣಪದ ರಾಶಿಯನ್ನು ಕ್ರಮಶಃ ಸೂರ್ಯ ಸೂರ್ಯನಿಂದ ನವಮ, ಸೂರ್ಯನಿಂದ ಪಂಚಮ ರಾಶಿಯಲ್ಲಿ (ಮಾತ್ರ) ಕೂಡಿಸುವುದರಿಂದ ಪ್ರಾಣಪದವಾಗುತ್ತದೆ. 12ಕ್ಕಿಂತ ಹೆಚ್ಚಾದರೆ 12ರಿಂದ ತಿಷ್ಪಿತಗೊಳಿಸುವುದು ಶೇಷ ರಾಶಿ ಹಾಗೂ ಕೂಡಿಸಿಬಂದ ಅದರ ಕಲಾದಿಗಳು ಪ್ರಾಣಪದವಾಗುವುದು.

ಉದಾಹರಣೆ – ಸೂರ್ಯೋದಯ 6.29 ಇಷ್ಟಸಮಯ (ಹುಟ್ಟಿದ ಸಮಯ) ರಾತ್ರಿ 11 ಗಂಟೆ ಸ್ಪಷ್ಟಸೂರ್ಯ 6.17.35 ಇದ್ದು 6.29ರಿಂದ ರಾತ್ರಿ 11 ಗಂಟೆಯೆಂದರೆ 41 ಘಟಿ 17 ಪಲಾ ಆಗುತ್ತದೆ. 41 × 60 = 2460 ಪಳಗಳು + 17 ಪಳಾ 2477 ಪಳಾ ನಿಯಮದಂತೆ ಇದನ್ನು 15ರಿಂದ ತಷ್ಪಿತಗೊಳಿಸಿದರೆ 165.4ವಾಗುವುದು 12 ರಾಶಿಗಳಿಗಿಂತ ಹೆಚ್ಚಾಗಿದ್ದರಿಂದ 165 ÷ 12 ಗಳಿಸಿದರೆ ಶೇಷ 9 ರಾಶಿ 4ವಾಗುವುದು ಸೂರ್ಯ ಚರರಾಶಿಯಲ್ಲಿರುವುದರಿಂದ ಸೂರ್ಯಸ್ಪಷ್ಟ ಕೂಡಿಸುವರು. 6.17.35 (+) 9.4 = 15.26.35 ರಾಶಿ 12ಕ್ಕಿಂತ ಹೆಚ್ಚಾದ್ದರಿಂದ 3.29.35 ಸ್ಪಷ್ಟ ಪ್ರಾಣಪದವಾಗುತ್ತದೆ.

## 'ಇನ್ನೊಂದು ವಿಧ'

ಘಟಿ ಚತುರ್ಗುಣಾ ಕಾರ್ಯಾಲಿಥ್ಯಾಪ್ತ್ಯೈ ಪಲೈರ್ಯತಾ ॥೧೭॥

ದಿವಾಕರ ಹೃತಾಶೀಪ ಶೇಷಂ ರಾಶಿರ್ಪಾಥ ಪಲಾತ್ಮಕವಮ್ ।
ಪೂರ್ವಶೇಷಂ ದ್ವಿಗುಣಿತಂ ಲವಾಃ ಸ್ಪುಟ ಮದೀರಿತಾಃ ॥೧೮॥

ಏವಂ ರಾಶ್ಯಂ ಶಕೌ ಸೂರ್ಯತತ್ತ್ರಿಕೋಣ ಭಭಾಗಯೋಃ ।
ಯೇತ್ ಕ್ರಮಶೋ ವಿಜ್ಞಶ್ಚರಾದೌ ಸಂಸ್ಥಿತೆ ರವೌ ॥೧೯॥

ಸ್ಪಟಿಂ ರಾಶ್ಯಾಧಿಕಂ ಪ್ರಾಣಪದಂ ತತ್ ಪ್ರೋಚ್ಯತೆ ಪುನಃ

ಇಲ್ಲಿ ಇಷ್ಟಘಟಿಯನ್ನು 4ರಿಂದ ಗುಣಿಸಿ ಗುಣೀತ ಫಲವನ್ನು 15ರಿಂದ

ಫಲರಾಶಿ ಮಾಡಿ ಲಬ್ಧದಲ್ಲಿ ಉಳಿದ ಕಲೆ ಕೂಡಿಸಿ ಅವನ್ನ ದ್ವಿಗುಣಿತಗೊಳಿಸಿ ಅಂಶವೆಂದು ತಿಳಿದು ಈ ರೀತಿಯಿಂದ ರಾಶಿ ಅಂಶಗಳನ್ನು ಸ್ಥಿರ-ಚರ-ದ್ವಿಸ್ವಭಾವದ ರಾಶಿ ಗಣಗುಣ, ಸೂರ್ಯರಾಶಿ, ನವರಾಶಿ ಹಾಗೂ ಪಂಚಮರಾಶಿ ಕೂಡಿಸಿ ಪ್ರಾಣಪದ ನಿಶ್ಚಯಿಸುವುದು.

ಈ ಉದಾಹರಣೆಯಲ್ಲಿಯೂ 41.17 ಪಳ ನನ್ನ ನಿಯಮದಂತೆ ಘಟಿ 41 × 4 = 164 ಮಾಡಿ 17 ಪಳವಿರುವುದರಿಂದ 15ರಿಂದ ತಷ್ಟಿತ ಮಾಡಿದರೆ 1 ರಾಶಿ 2 ಪಳವಾಯಿತು. ಒಂದು 164 ಕೂಡಿಸಿ ಲಬ್ಧ ದ್ವಿಗುಣಿತ ಮಾಡಿದರೆ 165 ರಾಶಿ 4 ಅಂಶವಾಗುವುದು ರಾಶಿಯನ್ನು 12ರಿಂದ ತಷ್ಟಿತಗೊಳಿಸಿದರೆ 165 ÷ 12 = ಶೇಷ 9 ರಾಶಿ 4 ಆಗುವುದು ನಿಯಮದಂತೆ 6.17.35 ಕೂಡಿಸಿದರೆ

15.21.35 ರಾಶಿ 1 ರಾಶಿಮಂಡಲ ಕಳೆದರೆ 3.21.35 ಸ್ಪಷ್ಟ ಪ್ರಾಣಪದ ವಾಗುವುದು. ಇದನ್ನು ಸ್ಪಷ್ಟಕಾಲಂ ಪಲಕೃತ್ಯಂ ಎನ್ನುತ್ತಾರೆ.

## 2ನೇ ಪದ್ಧತಿ

ಸ್ವೇಷ್ಟಕಾಲಂ ಪಲೀಕೃತ್ಯ ತಥ್ಯಾಪ್ತಂ ಬಾಧಿಕಂ ಚಯತ್ ॥೨೦॥

ಚರಾಗದ್ವಿಭಾಗೆ ಭಾನೌ ಭಾನೌಯುಂಗ ನವಮೇಸುತೆ
ಸ್ವಷ್ಟಂ ಪ್ರಾಣಪದಂ ತಚ್ಛ ಲಗ್ನತೋ ನವಮೇ ಸುತೆ ॥೨೦॥

ದ್ವಿತಿಯೇ ದಶಮೇ ಲಾಭೆತುರ್ಯೆವಾಪಿ ಶುಭಪ್ರದಮ್
ಅನ್ಯತ್ರ ಸಂಸ್ಥಿತಂ ತತ್ತು ಸಖದಂ ನಹಿ ಜನ್ಮನಾಮ ॥೨೨॥

ಇಷ್ಟಕಾಲ ಪಳ ಮಾಡಿ 15ರಿಂದ ಭಾಗಿಸಿ ರಾಶ್ಯಾಧಿಕ ಲಬ್ಧವನ್ನು ಚರ ಸ್ಥಿರ ದ್ವಿಸ್ವಭಾವದ ಅನುಸಾರ ಸೂರ್ಯ, ಅವನಿಂದ ಪಂಚಮ ನವಮ ರಾಶಿ ಸೇರಿಸುವುದ ರಿಂದ ಪ್ರಾಣ ಪದಸ್ಫುಟವಾಗುತ್ತದೆ. ಈ ಪ್ರಾಣಪದ ಲಗ್ನದಿಂದ ದ್ವಿತೀಯ, ಚತುರ್ಥ, ಪಂಚಮ, ನವಮ, ದಶಮ ಹಾಗೂ ಏಕಾದಶ ಸ್ಥಾನದಲ್ಲಿ ಬಂದರೆ ಶುಭದಾಯಕವೂ ಜೀವನದಲ್ಲಿ ಸೌಖ್ಯದಾಯಕವಿದ್ದು ಉಳಿದ ಸ್ಥಾನದಲ್ಲಿ ಬಂದರೆ ಅಸೌಖ್ಯ-ಅಶುಭ

ವಿಮರ್ಶೆ : ಇಲ್ಲಿ ಕೇಲ ಸಲ ಪೃಚ್ಛಕರು - ಎಲ್ಲ ಗ್ರಹಗಳು ಉಚ್ಚರಾಗಿದ್ದರೂ ಮನೆಯಲ್ಲಿ ಸೌಖ್ಯವೇ ವಿಲ್ಲಿ ಎನ್ನುವುದನ್ನು ವಿಮರ್ಶಿಸುವಾಗ ಪ್ರಾಣಪದ ಎಲ್ಲಿ ಯಿದ್ದೆ ಅಸೌಖ್ಯ ಕೊಡುತ್ತಿದೆ.

ಉದಾಹರಣೆ – ಪೂರ್ವೋಕ್ತಿ ಇಷ್ಟಕಾಲ ಘಟಿ 41 ಪಳ 17 ಎಲ್ಲವೂ

ಮೊದಲನೇ ಉದಾಹರಣೆಯಿಂದ

ವಿಮರ್ಶೆ – 15 ಪಳಕ್ಕೆ 1 ಪ್ರಾಣಪದ ರಾಶಿಯಂದು ಅಂದರೆ 6 ನಿಮಿಷಕ್ಕೆ 1 ಪ್ರಾಣಪರವಾಗುತ್ತದೆ. ಇಲ್ಲಿ ನಾಡಿಗಿಂತ ಸೂಕ್ಷ್ಮತೆಯಿದೆ.

ಎರಡು ಪದ್ಧತಿಗಳು ಪ್ರಾಣಪದ ತೆಗೆಯಲು ಉಪಯುಕ್ತವೇ ಆಗಿವೆ.

ಇನ್ನೊಂದು ಅಂಶ ಪ್ರಾಣಪದದಿಂದ ಅಸಮಶ್ರಿತ (ಅಪಸವ್ಯ ರೀತಿಯಿಂದ) ಇಷ್ಟಕಾಲ ತೆಗೆಯಲು ಬರುವುದೆಂದು ಜ್ಯೋತಿಷ್ಯರತ್ನಾಕರಕಾರಕರು ಹೇಳಿರುವುದು ಸರ್ವಥಾ ಸರಿಯಲ್ಲ. ಏಕೆಂದರೆ ಪರಾಶರರು ಇದನ್ನು ಫಲಕ್ಕಾಗಿ ಹೇಳಿರುವುದರಿಂದ ಫಲಕ್ಕಾಗಿಯೇ ಉಪಯೋಗಿಸುವರು. ಇಷ್ಟಕಾಲವಲ್ಲದೆ ಪ್ರಾಣಪದ ಬರುವುದಿಲ್ಲ.

ಫಲಬಾ ಪರಿಭಾಷಾ ಚರಬಂಡ ಸಾಧನೆ

## ಲಗ್ನಾದಿಗೆ ಪ್ರಮುಖ ಅಂಶ

ಮೇಷಾದೌ ಸಾಯನಾರ್ಕೆ ತು ದಿನಾರ್ಧಜನಿತಾ ಹಿ ಯಾ ।
ದ್ವಾದಶಾಂ ಗುಲ ಶಂಕೋರ್ಭಾ ಫಲಬೆತ್ಯುಚ್ಯತೆ ಬುಧೈಃ ॥೨೩॥

ತ್ರಿಷ್ಠಾ ಸಾ ಗುಣಿತಾ ದಿಗ್ಭಿರ್ಭುಜೈರ್ಧಶಭಿಃ ಕ್ರಮಾತ್
ತ್ರಿಭಿರ್ಹುತಾಂತಿಮಗತಾ ಭವೆಯಶರತಿ ಖಂಡಕಾಃ ॥೨೪॥

ಸಾಯನ ಸೂರ್ಯನು ಯಾವಾಗ ಮೇಷಾದಿಗತನಾಗಿರುವನೋ ಅಂದರೆ ದಿನ ರಾತ್ರಿ ಸಮವಾಗಿರುವುವೊ ಮಧ್ಯಾಹ್ನ ಸಮಯ 12 ಅಂಗುಲ ಶಂಕುದ ಛಾಯೆ ಫಲಭಾವವಾಗುತ್ತದೆ. ಈ ಫಲಭಾವವನ್ನು 3 ಸ್ಥಾನದಲ್ಲಿಟ್ಟು 10, 8, 10ರಿಂದ ಕ್ರಮಶಃ ಗುಣಿಸಿ ಅಂತಿಮ ಗುಣನ ಫಲದಲ್ಲಿ 3ರಿಂದ ಭಾಗ ಮಾಡಿದರೆ – 3 ಚರ ಬಂಡವಾಗುತ್ತದೆ. ಈ ಚರ ಬಂಡಗಳ ಉಪಯೋಗ ಅಂಶೋದಯ ಪಳಗಳಿಂದ ಸ್ವೋದಯ ಪಳ ತೆಗೆಯುವುದಾಗಿದೆ.

ವಿಮರ್ಶೆ: ಇಲ್ಲಿ ಪಳಗಳು ಎಂದರೆ – 12 ರಾಶಿಗಳ ಭೋಗ್ಯಕಾಲ ಸಮನಾಗಿಲ್ಲ – ಪ್ರತಿ ರಾಶಿ 30 ಡಿಗ್ರಿ ಅಂಶ ಭೋಗಿಸದು. ಅವು ತೆಗೆದುಕೊಳ್ಳುವ ಕಾಲವನ್ನು ಪಳಗಳೆನ್ನುತ್ತೇವೆ. 2 ಡಿಗ್ರಿ 30 ವಿಪಳಾಕ್ಕೆ 1 ನಿಮಿಷ – ಈ ರೀತಿಯದೆ ನಾವು ಅಂಶೋದಯ ಪಳಗಳನ್ನು ಮೂಲವಾಗಿಟ್ಟುಕೊಂಡು ಸಾಗುತ್ತವೆ. ಅಲ್ಲಿಯ ಪಳ ಸ್ಥಿರವಾಗಿದೆ. ಅವು ಅಕ್ಷಾಂಶದಿಂದ ಅಕ್ಷಾಂಶಕ್ಕೆ ಬೇರೆಯಾಗುತ್ತವೆ. ಹೀಗಾಗಿ – ಆ ಅಂಶ ಗಣನೆಗೆ ತೆಗೆದುಕೊಂಡು ಸ್ವೋದಯ ಪಳಗಳ ಮೇಲಿಂದಲೇ ಲಗ್ನ ಸಾಧಿಸಬೇಕು. ಅಂಶೋದಯ ಪಳಗಳಿಂದಾಗಲಿ ಅಥವಾ ಪಂಚಾಂಗದಲ್ಲಿ ಕೊಟ್ಟ

ಲಗ್ನ ಸರಿ ಹೊಂದುವುದಿಲ್ಲ. ಹೀಗಾಗಿ ಭವಿಷ್ಯದಲ್ಲಿ ಲಗ್ನ ಸಾಧನೆಯಲ್ಲಿ ತಪ್ಪಾಗುತ್ತದೆ. ಈ ಅಂಶ ಸ್ಪಷ್ಟ ಗಮನದಲ್ಲಿಟ್ಟು ಲಗ್ನ ಸಾಧಿಸಬೇಕು. ಲಗ್ನ ಸ್ಪಷ್ಟವೆ ಸರ್ವ ಫಲ ಮೂಲವಾದ್ದರಿಂದ ಇಲ್ಲಿ ವಿಶೇಷ ಕಾಳಜಿ ಅತಿ ಅವಶ್ಯಕ.

ಪಲಭಾ – ಶಂಕುವಿನ ಛಾಯಾದಿ ವಿಚಾರ ಸಿದ್ಧಾಂತಾದಿ ಗ್ರಂಥ ಆಳವಾಗಿ ಅಭ್ಯಾಸ ಮಾಡಿದಾಗಲೇ ಅರ್ಥವಾಗುವ ವಿಷಯ ಅದಕ್ಕಾಗಿ ಫಲಬಾ ತೆಗೆಯಲು ಈ ಕೆಳಗಿನ ಸೂತ್ರ ಉಪಯುಕ್ತಕಾರಿ.

ಸ್ಥಳೀಯ ಅಕ್ಷಾಂಶ × 10 = ಬಂದ ಅಂಶ+ಅಕ್ಷಾಂಶ ÷ 5 = ಫಲಬಾ

ಉದಾಹರಣೆಗೆ –

ಬಾಗಲಕೋಟೆಯ ಫಲಬಾ – ಅಕ್ಷಾಂಶ 16.12

16.12 ÷ 10 = 1.3 – 4 + 16.12 = 17.46 ÷ 5 = 3.34

3 – 34 ಬಾಗಲಕೋಟೆ ಫಲಬಾ

ನಿಯಮದಂತೆ ಚರಬಂಡ

| 1ನೇ ಚರಬಂಡ | 2ನೇ ಚರಬಂಡ | 3ನೇ ಚರಬಂಡ |
|---|---|---|
| 3.34 × 10 = 35.40 | 3.34 × 8 = 28.32 | 3.34 × 10 |
| (ಗುಣಕಾರದಲ್ಲಿ 60 ಪಳ = 1°) | | 35.40 ÷ 3 = 11.53 |

ಈ ರೀತಿ 3 ಚರಬಂಡಗಳಾದವು.

ಅಂಶೋದಯ ಪಳಗಳಲ್ಲಿ – ಋಣ ಧ್ರುವ ಕಾರ್ಯ

| | ಪಳ | ಪೂರ್ಣಾಂಕ |
|---|---|---|
| ಮೇಷ | ಮೀನ = 278(–)35 – 40 = 242 – 20 | 242 |
| ವೃಷಭ | ಕುಂಭ = 299(–)28 – 32 = 270 – 28 | 271 |
| ಮಿಥುನ | ಮಕರ = 323(–)11 – 53 = 311 – 07 | 311 |
| ಕರ್ಕ | ಧನು = 323(+)11 – 53 = 334 – 53 | 335 |
| ಸಿಂಹ | ವೃಶ್ಚಿಕ = 299(+)28 – 32 = 327 – 32 | 327 |
| ಕನ್ಯಾ | ತುಲಾ = 278(+)35 – 40 = 313 – 40 | 314 |

ಕೋನೆಯ ಸಂಖ್ಯೆ ಬಾಗಲಕೋಟೆಯ ಅಂಶೋದಯ ಪೂರ್ಣಾಂಶ

ಪಳಗಳು ಅನುಭವಿಸುವ

ಮೇಷ ಮೀನ 1.36 – 6ಶೀ = 1.36

ವೃಷಭ ಕುಂಭ 1.48 – 2 = 1.58

ಮಿಥನು ಕುಂಭ 2.4 – 3 ಪೂರ್ಣಾಂಶ ಮಾಡಬಹುದು

ಕರ್ಕ ಧನು 2.14 – 0

ಸಿಂಹ ವೃಶ್ಚಿಕ 2.10 – 6

ಕನ್ಯಾ ತುಲ 2.14 – 12

ಈ ರೀತಿ ಪ್ರತಿ ಊರಿನ ಅಂಶೋದಯ ಪಳ ತೆಗೆದು ಲಗ್ನ ಸ್ಪಷ್ಟ ತೆಗೆಯಬೇಕು.

ಮೇಲೆ ವಿವರಿಸಿದಂತೆ–

## ಲಂಕೋದಯದಿಂದ ಸ್ವೋದಯ ಸಾಧನೆ

ಲಂಕೋದಯಾ ವಿಘಟಿಕಾ ಗಜಭಾನ್ಯಂಶಗೋಶ್ವಿನಃ ।
ತ್ರಿಪಕ್ಷ ದಹನಾ ವಿತಾಃ ಕ್ರಮೋತ್ಕ್ರಮಗತಾಃ ಪುನಃ ॥೨೫॥

ಕ್ರಮೋತ್ಕ್ರಮಸ್ಥಿ ತೌರ್ಹಿನಯತಾಶ್ವರದಲೈಸ್ಥದಾ ।
ಸ್ವೋದಯಾಃ ಸ್ಯುಃ ಕ್ರಮಾಂಮ್ನೆಪಾತ್ರುಲಾದೇರುತ್ಕ್ರಮಾತ್ತಥಾ ॥೨೬॥

ಮೇಲೆ ವಿವರವಾಗಿ ಚರ್ಚಿಸಿದ ವಿಷಯವನ್ನೇ ಈ ರೀತಿ ವಿವರಿಸುತ್ತಾರೆ. ಅಂಶೋದಯ ಪಳಗಳನ್ನು 278, 299, 323 ಪಳಗಳನ್ನು ಕ್ರಮ ಉತ್ಕ್ರಮ ರೀತಿಯಲ್ಲಿಟ್ಟು 3 ಚರಬಂಡಗಳ ಮೊದಲು 3 ಸ್ಥಾನದಲ್ಲಿ ಹೀನ (ಕಳೆದ) ಮುಂದಿನ 3 ಸ್ಥಾನದಲ್ಲಿ ಕೂಡಿಸುವುದು ಅದು ಮೇಷಾದಿಗಳಿಗೆ ಕ್ರಮದಂತೆ ತಯಾರಿ ಉತ್ಕ್ರಮದಂತೆ ಸ್ವೋದಯ ಸಾಧನೆ ಮಾಡುವುದು.

ಈ ಅಂಶ ಫಲಬಾದಿ ಪ್ರಕರಣದಲ್ಲಿ ವಿವರಿಸಿದ್ದು ಸ್ವಷ್ಟಾರ್ಥ ರಾಶಿಯ ಅಂಶೋದಯ ಫಲ ಕೆಳಗೆ ಕೊಡಲಾಗಿದೆ.

ಮೇಷ ಮೀನ → 278 – 57 = 221 ರಾಶಿ ಫಲಗಳು

ವೃಷಭ ಕುಂಭ → 299 – 46 = 253 ರಾಶಿ ಫಲಗಳು

| | | | |
|---|---|---|---|
| ಮಿಥುನ | ಮಕರ → | 323 − 19 = 304 | ರಾಶಿ ಫಲಗಳು |
| ಕರ್ಕ | ಧನು → | 323 + 19 = 342 | ರಾಶಿ ಫಲಗಳು |
| ಸಿಂಹ | ವೃಶ್ಚಿಕ → | 299 + 46 = 345 | ರಾಶಿ ಫಲಗಳು |
| ಕನ್ಯಾ | ತುಲಾ → | 278 + 57 = 335 | ರಾಶಿ ಫಲಗಳು |
| | | 1800 | 1800 × 2 = 3600 ಫಲ |

## ಲಗ್ನ ಸಾಧನ ವಿಧಿ

ಸ್ಫುಟೋರ್ಕಃ ಸಾಯನಃ ಕಾರ್ಯೋಽಭುಕ್ತಭೋಗ್ಯಾಂಕಾಕಶ್ಚಯೇ ।
ಸ್ವೀಯೋದಯಗುಣಾ ಸ್ತ್ರಿಂಶದ ಭಕ್ತಾಃ ಕಾಲಸ್ತದಾಹ್ರಾಯಾಃ ॥೨೭॥

ಅಭಿಷ್ಟನಾಡೀಫಲತೋ ಭೋಗ್ಯಕಾಲಾನ್ ವಿಶೋಧಯೇತ್ ।
ತತ್‌ಶ್ಚಾಗ್ರಿಮರಾಶೀನಾಂ ಸ್ವೋದಯಾಂಶ್ಚಾಥ ಶೇಷಕಂ ॥೨೮॥

ತ್ರಿಂಶತಾ ಗುಣಿತಂ ಭಕ್ತಯಶುದ್ಧೋದಯತಃ ಫಲಮ್ ।
ಲವಾದ್ಯಂ ಸಹಿತಂ ಮೇಷಾದಿಕ್ಯೈಃ ಶುದ್ಧೈಸ್ತು ರಾಶಿಭಿಃ ॥೨೯॥

ಭುಕ್ತೆ ವಿದೌ ಭುಕ್ತಿಫಲಾನ್ ಷಷ್ಟಿಶುದ್ದೆಷ್ಟಕಾಲತಃ ।
ವಿಶೋಧ್ಯ ಗತರಾಶಿನಾಂ ಸ್ವೋಹಯಾಂಸ್ತತ್ರ ಶೋದಯೆತ್ ॥೩೦॥

ಲವಾದ್ಯಂ ತು ಫಲಂ ಶುದ್ಧಮಶುದ್ಧಾಜಾದಿರಾಶಿತಃ ।
ಅಯನಾಂಶ ವಿಹೀನಂ ಸತ್ ಸ್ಪಟಂ ಲಗ್ನಂ ಪ್ರಜಾಯತೆ ॥೩೦॥

ಷಡ್‌ಶಿಪಹಿತಂ ತಚ್ಚಸಪ್ತಮಂ ಭವನಂ ಮತಮ್ ॥

ಯಾವ ಸಮಯದಲ್ಲಿ ಸ್ಪಷ್ಟ ಲಗ್ನ ಮಾಡುವುದಿದೆಯೋ ಆ ಸ್ಪಷ್ಟ ಸೂರ್ಯನಲ್ಲಿ ಅಯನಾಂಶ ಸೇರಿಸಿ – ಸಾಯನಾರ್ಕ ಮಾಡಿ ಆ ಸಾಯನಾರ್ಕದ ಭೋಗ್ಯ ಕಾಲವನ್ನು (ಅಂದರೆ 30 ಡಿಗ್ರಿಯಲ್ಲಿ ಕಳೆದು – ಆ ರಾಶಿಯ ಉದಯಮಾನ ಫಲಗಳಿಂದ ಗುಣಿಸಿ, 30ರಿಂದ ಭಾಗಿಸಿ ಭಾಗ ಲಬ್ಧಗಳನ್ನು (ಫಲಾದಿ) – ತೆಗೆದುಕೊಳ್ಳುವುದು. ಅದು ಭೋಗ್ಯ ಅಥವಾ ಭುಕ್ತಿ ಕಾಲವಾಗುವುದು. ಭೋಗ್ಯ ಪ್ರಕಾರ ಲಗ್ನ ತೆಗೆಯುವ ಸಮಯದಲ್ಲಿ ಭೋಗ್ಯ ಕಾಲವನ್ನು ಇಷ್ಟ ನಾಡಿಫಲದಲ್ಲಿ ಕಳೆದು (ಅಂದರೆ ಇಷ್ಟಘಟಿಗಳನ್ನು ಫಲಗಳನ್ನಾಗಿ ಮಾಡಿ) – ಹಾಗೆ ಮುಂದಿನ ರಾಶಿಯ ಫಲಗಳನ್ನು (ಸ್ವೋದಯ) ಕಳೆಯುತ್ತ ಉಳಿದ

ಫಲಗಳಿಗೆ, 30ರಿಂದ ಗುಣಿಸಿ ಬಂದ ರಾಶಿಯ ಸ್ವೋದಯ ಫಲಗಳಿಂದ ಭಾಗಿಸಿ ರಾಶಿ ಅಂಶ ತೆಗೆಯುವರು. ಭುಕ್ತಿ ಪ್ರಕಾರ ಲಗ್ನ ತೆಗೆಯುವರು. ಸಾವನೇಷ್ಟಕಾಲ 60ರಲ್ಲಿ ಕಳೆದು ಶೇಷಘಟಿಪಳ ಭುಕ್ತಿ ಕಾಲದಲ್ಲಿ ಕಳೆಯುವದು. ಶೇಷ ಗತರಾಶಿಯಲ್ಲಿ ಉದಯಮಾನ ಕಳೆಯುವರು. ಅಂದರೆ ಭೋಗ್ಯಾಂಶದಿಂದ ಲಗ್ನ ಸಾಧನ ಮಾಡುವಾಗ ಸಾವನೇಷ್ಟಘಟಿಫಲಗಳೇ ಮುಖ್ಯರಾದರೋ ಭೋಗ್ಯಕಾಲವನ್ನು ಕಳೆದು ಈ ರೀತಿ ರಾಶಿಗಳ ಉದಯಮಾನವನ್ನು ಕಳೆಯಲ್ಪಡುತ್ತದೆ – ಭುಕ್ತ್ಯಾಂಶವೇ ಮಾತ್ರ ಈ ಪ್ರಕಾರ ಬಂದ ಶೇಷವನ್ನು 30ರಿಂದ ಗುಣಿಸಿ ಅಶುದ್ಧೋದಯವೆಂದು ಪರಿಗಣಿಸಿ – ಅಂಶೋದಯ ಫಲಗಳಿಂದ ಭಾಗಿಸಿ, ಅಂಶ ಕಲೆ ತೆಗೆದು ರಾಶಿಯಲ್ಲಿ ಜೋಡಿಸಲು ಭುಕ್ತಿ ಪ್ರಕಾರದಲ್ಲಿ ಅಶುದ್ಧ ರಾಶಿ ಸಂಖ್ಯೆಯಲ್ಲಿ ಕಳೆಯಲು ಸಾಯನ ಸ್ಪಷ್ಟಲಗ್ನವಾಗುತ್ತದೆ. ಇದರಲ್ಲಿ ಅಯನಾಂಶ ಕಳೆಯಲು ಸ್ಪಷ್ಟ ಲಗ್ನವಾಗುತ್ತದೆ. ಸ್ಪಷ್ಟ ಲಗ್ನದಲ್ಲಿ 6 ರಾಶಿ ಕೂಡಿಸಲು ಸಪ್ತಮ ಸ್ಪಷ್ಟವಾಗುತ್ತದೆ.

ಇಲ್ಲಿ ಹೇಳಿದ – ಲಗ್ನ ಸಾಧನೆಯಂತೆ ಮೊದಲು ಸ್ವೋದಯ ಫಲ ತೆಗೆದುಕೊಳ್ಳುವರು. ನಂತರ ಇಷ್ಟ–ಸಮಯ ಆಗಿನ ಸ್ಪಷ್ಟ ಸೂರ್ಯರನ್ನ ತೆಗೆದುಕೊಂಡರೆ ಸಾಕು. ಸ್ಪಷ್ಟ ಲಗ್ನ ಸಾಧನೆ ಸುಲಭವಾಗುತ್ತದೆ.

ಸ್ಪಷ್ಟ ಸಮಯ → 41 – 17 ಫಲ

ಸ್ಪಷ್ಟ ಸೂರ್ಯ → $6.17^0 - 35' - 0''$

ಅಯನಾಂಶ → $22^0.59'\,45''$

6 – 17 – 35 ಇಷ್ಟ ಸಮಯದ ಸ್ಪಷ್ಟ ಸೂರ್ಯ

$0 - 22^0 - 59 - 45''$ ಸಾಯನಾಂಶ

---------------------

7 – 10 – 34 – 45 ಸಾಯನಾರ್ಕ

ಪದ್ಧತಿಯಂತೆ $30^0$ ಯಲ್ಲಿ ಕಳೆಯಲಾಗಿ

$30^0 - 00' - 00''$

– 10 – 34 – 45

-----------------

19 – 25 – 15 – ಈ ಭೋಗ್ಯಾಂಶಕ್ಕೆ ವೃಶ್ಚಿಕ ರಾಶಿ ಫಲಗಳಿಂದ ಗುಣಿಸಿ

× 327 – 32 ಗುಣಿಸಿ ಅಂಶ ಕಲಾತ್ಮಕ ಮಾಡಿದ್ದಾರೆ

-----------------

6356 − 214 − 48 ÷ 30

= 211 − 59 − 9 − ಉಳಿದ ಅಂಶ ಇಷ್ಟ ಘಟಿ ಫಲಗಳಾಗಿ

41 × 60≠? + 17

= 2460 + 17 = 2477

2477 ಫಲಗಳಲ್ಲಿ

− 211 − 59 − 9 −

------------------

2265 − 00 − 51 ವೃಶ್ಚಿಕ ರಾಶಿ ಪಳ ಕಳೆದರೆ

334 − 53 − 00 ಧನ ರಾಶಿ ಸ್ವೋದಯ ಪಳಗಳು

---------------

1930 − 07 − 51

311 − 07 − 00 ಮಕರ

----------------

1619 − 00 − 51

270 − 28 − 00 ಕುಂಭ

------------------

1348 − 32 − 51

242 − 20 − 00 ಮೀನ

------------------

1160 − 12 − 51

242 − 20 − 00 ಮೇಷ

-------------------

863 − 52 − 51 ಮೇಷ ರಾಶಿಯವರೆಗೆ ಕಳೆದುಳಿದ ಪಳ

270 − 30 − 00 ವೃಷಭ

---------------

593 − 22 − 51

311 − 07 − 00 ಮಿಥುನ

-----------------

282 – 15 – 51 ಕರ್ಕ ರಾಶಿ ಅಶುದ್ಧೋದಯ ಛಾಯೆ

ಆದ್ದರಿಂದ 282 – 15.51 ಭಾಗಿಸುವ ಚಿಹ್ನೆ 334 – 53

= 3 – 25 ಡಿಗ್ರಿ 31 – 32

22 – 59 – 45 ಅಯನಾಂಶ

3 – 2 – 31 – 47 ಸ್ಪಷ್ಟ ಲಗ್ನ

3 – 2 – 31 – 47 ಈ ರೀತಿ ತೆಗೆಯುವುದು

ಈ ಅಂಶ ರಾಶಿಗಳಲ್ಲಿ 6 ರಾಶಿ ಕೂಡಿಸಿದರೆ ಸಪ್ತಮ ಸ್ಪಷ್ಟವಾಗುವುದು. 3ರಾಶಿ, 2ಅಂಶ, 31 ಕಲಾ, 47 ವಿಕಲಾದಲ್ಲಿ + 6 ರಾಶಿ ಸೇರಿಸಿದರೆ 9 ರಾಶಿ, 2 ಅಂಶ, 31 ಕಲಾ ಹಾಗೂ 47" ಸ್ಪಷ್ಟ ಸಪ್ತಮವಾಗುವುದು. ಭೋಗ್ಯಾದಿಗಳಲ್ಲಿ ಈ ರೀತಿ ಮಾಡಿದರೆ ಭುಕ್ತಿ ಕಲೆಗಳಿಂದ ತೆಗೆಯುವಾಗ ಅಂಶಾದಿ ಲಬ್ಧಗಳನ್ನು ಅಶುದ್ಧರಾಶಿಯಲ್ಲಿ ಕಳೆಯಬೇಕಾಗುತ್ತದೆ( ರಾಶಿ ಸಂಖ್ಯೆಯಲ್ಲಿ ).

'ಭುಕ್ತ ಭೋಗ್ಯ ಅಲ್ಪಿತಾದಲ್ಲಿ ವಿಶೇಷ'

ಸ್ವೇಷ್ಟಕಾಲನ್ನ ಸಂಶುದ್ಧ್ಯೇಯೇದ್ ಭುಕ್ತ ಭೋಗ್ಯಂ ಯದಾತದಾ ।

ತ್ರಿಂಶತ ಗುಣಿತಂ ಸ್ವೇಷ್ಟಂ ಸ್ವೋದಯಾಪ್ತಂ ಲವಾದಿಕಮ್

ಯತ್ರದ್ವಿನಂ ಯುತಂಕಾರ್ಯ ರವೌ ಲಗ್ನಂ ಸ್ಫುಟಂ ಭವೇತ್ ॥೩೨॥

ಒಂದು ವೇಳೆ ಬಂದ ಭುಕ್ತಿ ಅಥವಾ ಭೋಗ್ಯಕಾಲ ಇಷ್ಟ ಘಟಿಯಲ್ಲಿ ಕಳೆಯಲಾಗದಿದ್ದರೆ, ಇಷ್ಟ ಘಟಿಯನ್ನು 30ರಿಂದ ಗುಣಿಸಿ – ನಿಮ್ಮ ಉದಯಮಾನ ದಿಂದ ಭಾಗಿಸಿರಿ – ಭಾಗ ಮಾಡಿದ ನಂತರ ಬಂದ ಅಂಶಾದಿ ಫಲಗಳನ್ನು ಸ್ಪಷ್ಟ ಸೂರ್ಯನಲ್ಲಿ (ಹೀನಯತ್) ಕಳೆಯಿರಿ. (ಅರ್ಥಾತ್ ಭುಕ್ತಾಂಶದಿಂದ ಲಗ್ನ ಸಾಧನ ಮಾಡಲು ಸಾಧ್ಯ – ಇಲ್ಲಿ ಬಂದ ಅಂಶಾದಿಗಳನ್ನು ಸ್ಪಷ್ಟಸೂರ್ಯನಲ್ಲಿ ಕಳೆಯ ಬೇಕು. ಭೋಗ್ಯಾಂಶದಲ್ಲಿ ಬಂದು ಅಂಶಾದಿ ಫಲಗಳನ್ನು – ಸ್ಪಷ್ಟ ಸೂರ್ಯನಲ್ಲಿ ಕೂಡಿಸಬೇಕಾಗುತ್ತದೆ. ಈ ಉದಾಹರಣೆಗೆ ಇಷ್ಟಘಟಿ ಕಡಿಮೆಯಿದ್ದಾಗ ಮಾತ್ರ ಅನುಸರಿಸಬೇಕಾದುದರಿಂದ ಆ ಬೇರೆ ಉದಾಹರಣೆಯನ್ನು ಕೊಡಲಾಗಿದೆ.

ಉದಾಹರಣೆ –

ಸಾಯನ ಸ್ಪಷ್ಟ ಸೂರ್ಯ $= 2 - 27^0 - 11 - 18"$

ಆದ್ದರಿಂದ ಭೋಗ್ಯಾಂಶ $= 2^0 - 48 - 42"$

ಇಷ್ಟಘಟಿ 25 ಘಟಿ, 15 ಪಳ

ರಾಶಿಯ ಮಿಥುನದ ಪಳಗಳು (ಅಂಶೋದಯ) 304

ಆದ್ದರಿಂದ ಭೋಗ್ಯಕಾಲ $= (2^0 - 48' - 42") + 304)$

-------------------------- $= 28.29.30$

ಪಲಾದಿಗಳು 30

ಇಷ್ಟಘಟಿ 25 ಮಾತ್ರ ಪಳಗಳು. ಹೀಗಾಗಿ 25ರಲ್ಲಿ 28 ಕಳೆಯಲಾಗುವುದಿಲ್ಲ.

ಆದ್ದರಿಂದ $\frac{25 \times 30^0}{304} \quad \frac{750}{304} = 2^0.28' - 1"$

ಅಂಶ ಲಬ್ದಗಳನ್ನು ಸ್ವಷ್ಟಸೂರ್ಯನಲ್ಲಿ ಕೂಡಿಸಲಾಗಿದೆ. 2ಡಿಗ್ರಿ – 05ಡಿಗ್ರಿ – 25' – 15" (ನಿರಯಣ ಸೂರ್ಯ ಸಾಯಣಾರ್ಕದಲ್ಲಿ ಅಯನಾಂಶ $21^0 - 46' - 3"$ ಕಳೆಯಲಾಗಿದೆ.

2 – 5ಡಿಗ್ರಿ – 25' – 15"+0 – 2ಡಿಗ್ರಿ – 28' – 1" $= 2 - 7^0 - 53 - 16'$ ಇದು ಸ್ವಷ್ಟಲಗ್ನ.

## ನತೋನ್ನತ ಪರಿಜ್ಞಾನ

ದ್ಯುರಾತ್ರಿಗತಶೇಷೇಷ್ಟಘಟ್ಯೋರಲ್ಪಂ ತದುನ್ನತಮ್ ॥೩೩॥

ನತಂ ದಿನನಿಶೋರರ್ದ್ಧಮುನ್ನತೋನಂ ಪ್ರಕೀರ್ತೀತಮ್ ।

ದಿನ ರಾತ್ರಿಗಳ ಗತಘಟಿ ಹಾಗೂ ಶೇಷ ಘಟಿಗಳಲ್ಲಿ (ಇವೆರಡರಲ್ಲೂ) ಯಾವುದು ಅಲ್ಪವಾಗಿರುತ್ತದೆಯೋ ಅದನ್ನು ಉನ್ನತವೆನ್ನುವರು – ಉನ್ನತವನ್ನು ದಿನ ಮಾನದರ್ಧ ರಾತ್ರಿರಾರ್ಧಮಾನದಲ್ಲಿ ಕಳೆದರೆ ಶೇಷನತ ಕಾಲವಾಗು ತ್ತದೆ.

ಉದಾಹರಣೆಗೆ – ಲೋಕಲ್ ಸೂರ್ಯೋದಯ 6.29, ಸೂರ್ಯಸ್ತ 5.54, ದಿನಾಮಾನ 28 – 33, ರಾತ್ರಿಮಾನ 31 – 27, ಒಬ್ಬನ ಜನನ ರಾತ್ರಿ ಹನ್ನೊಂದಕ್ಕೆ ಜನನವೆಂದರೆ ಸೂರ್ಯೋದಯದಿಂದ 41.17 ಪಳಕ್ಕೆ – ಆಗಿದ್ದರೆ ರಾತ್ರಿ (ಗತರಾತ್ರಿ) 12.45 ಪಳಾಕ್ಕೆ ಹುಟ್ಟಿದ್ದಾನೆ. ಆದ್ದರಿಂದ 31 – 27( – ) 12.45 = 18.42 ಪಳ ರಾತ್ರಿ ಉಳಿಯುವುದು – ಹೀಗಾಗಿ ನಿಯಮದಂತೆ ಅಲ್ಪವಾದ ಇಷ್ಟಕಾಲ (ಗತ ರಾತ್ರಿಯಿಂದ) 12.45 ಉನ್ನತ ಕಾಲವಾಯಿತು.

ಇದನ್ನು – ರಾತ್ರಿ ಅರ್ಧದಲ್ಲಿ 15 ಘಟಿ, 43 ಪಳ, 30 ವಿಪಳದಲ್ಲಿ ಕಳೆಯುವುದು.

15 – 43 – 30(–)12.45 – 0 = 2 – 58 – 30

2 – 58 – 30 ಗತಕಾಲವಾಗುವುದು.

## ದಶಮ ಲಗ್ನ ಸಾಧನ ವಿಧಿ

ನತಾತ್ಪಲೀಕೃತಾ ತ್ಪೂರ್ವಾಪರಸ್ಮಾದ್ ಭುಕ್ತಿ ಭೋಗ್ಯತಃ ।

ಲಂಕೋದಯೈಃ ಸಾಧ್ಯತೆಯಲ್ಲಿಗ್ನಂ ತದ್ಯಶಮಾಭಿಧಮ್ ॥೩೪॥

ಸಷಡ್‌ಭೆ ದಶಮೇ ಜ್ಞೇಯಂ ಚತುರ್ಥ ದ್ವಿಜಸತ್ತಮ

ಪೂರ್ವನತ ಕಾಲದಲ್ಲಿ ಲಂಕೋದಯ ಪಳಗಳಿಂದ ಭುಕ್ತಿ ಪ್ರಕಾರದಂತೆ ಪಶ್ಚಿಮನತದಲ್ಲಿ ಲಂಕೋದಯ ಪಳಗಳಿಂದಲೇ ಭೋಗ್ಯ ಪ್ರಕಾರ ಲಗ್ನಸಾಧನ ಮಾಡುವುದು ಅದೇ ದಶಮ ಲಗ್ನವಾಗುತ್ತದೆ. ದಶಮ ಲಗ್ನದಲ್ಲಿ ಆ ರಾಶಿ ಸೇರಿಸುವುದರಿಂದ ಚತುರ್ಥ ಸ್ಪಷ್ಟವಾಗುವುದು. ಒಂದು ವೇಳೆ ರಾತ್ರಿಗತ ನತ ಕಾಲವಾದರೆ ಸೂರ್ಯ ಗ್ರಹದಲ್ಲಿ ಆ ರಾಶಿ ಸೇರಿಸಿ ಶೇಷಕ್ರಿಯೆ ಮಾಡುವುದು.

ನತೋನ್ನತ ಕಾಲದ ವಿಶೇಷ ಪರಿಜ್ಞಾನ ಈ ರೀತಿ ಮಾಡಬಹುದು.

ದಶಮ ಭಾಗ (ಅಥವಾ ಭಾವ) ಎಲ್ಲ ಹನ್ನೊಂದು ಭಾವಗಳ ಅಡಿಗಲ್ಲು ಇವರ ಮೇಲಿಂದ ಉತ್ಪತ್ತಿ ಎಂಬುದನ್ನು ಮರೆಯಕೂಡದು – ನಮ್ಮ ತಲೆಯ ಮೇಲಿನ ಆಕಾಶ ಮಧ್ಯಬಿಂದುವಿಗೆ 'ಖ' ಸ್ವಸ್ತಿಕ ಅಥವಾ ದಶಮ ಭಾವವೆನ್ನುತ್ತೇವೆ. ಮಧ್ಯಾಹ್ನದಲ್ಲಿ ರವಿ – 'ಖ' ಸ್ವಸ್ತಿಕದಲ್ಲಿರುವನು. ಈ ಬಿಂದುವಿನಿಂದ ಸೂರ್ಯದೇವ ಎಷ್ಟು ಕೆಳಗಿರುವನೆಂದು ಹೇಳುವುದೇ ನತಾಂಶ. ದಿನವಾದರೆ ದಿನ ರಾತ್ರಿಯಾದರೆ ರಾತ್ರಿ ಯಾನ ಅರ್ಧ ಮಾಡಿ ಆ ಘಟಿಗಳಲ್ಲಿ ಇಷ್ಟಕಾಲದ ಘಟಿ ಕಳೆದರೆ ಉಳಿಯುವುದೇ ನತಾಂಶ.

ಮಧ್ಯಾಹ್ನದ ದವಿ – ಇಷ್ಟಕಾಲ ಇವೆರಡರಲ್ಲಿಯ ಆಕಾಶದಲ್ಲಿ ಅಂತರಕ್ಕೆ ನತಾಂಶ ಎನ್ನುವರು.

ಈ ನತಾಂಶ ನಾಲ್ಕು ಅಂಶದಿಂದ ಪರಿಗಣಿಸಬೇಕಾಗುವುದು –

ಸೂರ್ಯೋದಯದಿಂದ ಮಧ್ಯಾಹ್ನ ಪೂರ್ವದಲ್ಲಿ ಜನನವಾಗಿದ್ದರೆ, ಸೂರ್ಯೋದಯದಿಂದ – ಜನನ ಕಾಲದವರೆಗೆ ಘಟಿಗಳನ್ನು ತೆಗೆದು ದಿನಾರ್ಧದಲ್ಲಿ ಕಳೆದರೆ ಉಳಿಯುವುದೇ ದಿನದ ಪೂರ್ವನತ.

ಮಧ್ಯಾಹ್ನದಿಂದ ಸೂರ್ಯೋಸ್ತದವರೆಗೆ (ಅಪರಾಹ್ನದಲ್ಲಿ) ಜನನವಾಗಿದ್ದರೆ

– ಸೂರ್ಯೋದಯದಿಂದ ಜನನ ಕಾಲದವರೆಗೆ ಬರುವ ಘಟಿಗಳನ್ನು ದಿನಮಾನದಲ್ಲಿ ಕಳೆಯತಕ್ಕದ್ದು. ಹೀಗೆ ಕಳೆದು ಬಂದ ಘಟಿಗಳನ್ನು ದಿನಾರ್ಧದಲ್ಲಿ ಕಳೆದು ಶೇಷ ಪಶ್ಚಿಮನತ.

ಮೂರನೇ ಭಾಗ – ಸೂರ್ಯಾಸ್ತದ ನಂತರ ಹಾಗೂ ಮಧ್ಯರಾತ್ರಿ ಪೂರ್ವ ಜನನವಾದರೆ ಇಷ್ಟಕಾಲಕ್ಕೆ ಗತರಾತ್ರಿಯಲ್ಲಿ ದಿನಾರ್ಧ ಕೂಡಿಸಿ ಗತಕಾಲ ಸಂಸ್ಕಾರ ಅಥವಾ ಗತರಾತ್ರಿ – ಇಷ್ಟಕಾಲಕ್ಕೆ (ಸೂರ್ಯಾಸ್ತದಿಂದ ಗತರಾತ್ರಿಯಲ್ಲಿ) ರಾತ್ರಿ ಅರ್ಧ ಕೂಡಿಸಿದರೆ – ಪಶ್ಚಿಮ ನತವಾಗುವುದು.

ಕೊನೆಯದಾಗಿ – ಮಧ್ಯರಾತ್ರಿ ಗತಿಸಿದ ಮೇಲೆ ಜನಿಸಿದ್ದರೆ ಆ ಕಾಲದಿಂದ ಮುಂದೆ ಉಳಿಯುವ ರಾತ್ರಿಯಲ್ಲಿ ದಿನಾರ್ಧ ಕೂಡಿಸಿದರೆ ರಾತ್ರಿಯ ಪೂರ್ವನತವಾಗುವುದು. ಮಧ್ಯರಾತ್ರಿ ನಂತರ ಜನನವಾದಾಗ ಸ್ವಷ್ಟ ರವಿಯಲ್ಲಿ 6 ರಾಶಿ ಕೂಡಿಸಿ ಲಗ್ನ ಸಾಧಿಸುವುದು. ಅದೇ ದಶಮ ಲಗ್ನ.

ದಶಮ ಲಗ್ನವನ್ನು ಸಾಧಿಸುವಾಗ ಲಂಕೋದಯ ಪಳಗಳನ್ನೇ ಉಪಯೋಗಿಸುವುದು – ಲಂಕೋದಯವೆಂದರೆ ಶೂನ್ಯ ಅಕ್ಷಾಂಶದ ಮೇಲಿದ್ದ 12 ರಾಶಿಗಳ ಲಂಕೋದಯ ಪಳಗಳು ಲಗ್ನ ಸಾಧನೆಗೆ (ಪ್ರಥಮ) ಮಾತ್ರ ಸ್ವೋದಯ ಪಳಗಳನ್ನು ಗಣಿಸುವುದು –

ಇಲ್ಲಿ ಮಧ್ಯಾಹ್ನದಲ್ಲಿ ಜನನವಾಗಿದ್ದರೆ (ಲೋಕಲ್ ಟೈಂ) ಸ್ವಷ್ಟ ರಾಶಿ. ಅಂಶ ಕಲೆಗಳು (ಸೂರ್ಯನ) ದಶಮವಾಗುತ್ತದೆ. ಮಧ್ಯರಾತ್ರಿಯಲ್ಲಿ ಜನನವಾದರೆ, ಸೂರ್ಯ ಸ್ವಷ್ಟವೇ. ಪತೀರ್ಥ ಸ್ಪಷ್ಟವಾಗುತ್ತದೆ.

ದಶಮ ಸಾಧನೆಯಲ್ಲಿ ಲಂಕೋದಯ ಪಳಗಳಂತೆ, ನಿರಯಣ ರವಿ ಸ್ಪಷ್ಟ ತೆಗೆದುಕೊಳ್ಳುವರು. ಹೆಚ್ಚು ಶ್ರೇಯಸ್ಕರವೆಂದು ನನ್ನ ಅಭಿಮತ. ಸಾಯನಾರ್ಕ ತೆಗೆದುಕೊಂಡು – ಅಯನಾಂಶ ಕಳೆಯುವುದು. ಅವರವರ ಅಭಿಪ್ರಾಯಕ್ಕೆ ಬಿಟ್ಟ ಅಂಶ. ವ್ಯತ್ಯಾಸ ಅಲ್ಪವಾಗಿರುವುದು – ಹೀಗಾಗಿ ದಶಮ ಸಾಧನೆಗೆ ನಿರಯಣ ರವಿಸ್ಪಷ್ಟ ಅತಿ ಶ್ರೇಯಸ್ಕರ.

ಉದಾಹರಣೆ –
ರವಿಸ್ವಷ್ಟ 6 – 17' – 35'
ಹುಟ್ಟಿದ ಸಮಯ 41.17 ಪಳಾ
ದಿನಮಾನ 28.33
ರಾತ್ರಿಮಾನ 31.27
ಮಧ್ಯರಾತ್ರಿ ಪೂರ್ವಜನನವಾದ್ದರಿಂದ ನಿಯಮದಂತೆ

ಇಷ್ಟರಾತ್ರಿ 12.45
ರಾತ್ರಿಅರ್ಧ 15.44 ನತಾಂಶ 1.31
-----
ಪಶ್ಚಿಮ ನತ 28.29
ಒಟ್ಟು ಪಳ 28 ಘಟಿ × 60+29ಪಳ
ರಾತ್ರಿ ಪಶ್ಚಿಮ ನತವಾದ್ದರಿಂದ ನಿರಯಣ ಭುಕ್ತಾಂಶ ಪರಿಗಣಿಸಿದೆ.
17 − 35 ಕಲಾ

$$= \frac{(17-35)\ 278}{30} = 163 \text{ ಪಳಗಳು.}$$

1709
− 163 ತುಲಾ ರಾಶಿ ಪಳಗಳು
------
1546

ಇವುಗಳಲ್ಲಿ ---
299 ವೃಶ್ಚಿಕ ರಾಶಿ ಪಳ
323 ಧನು ರಾಶಿ ಪಳ
323 ಮಕರ ರಾಶಿ ಪಳ
299 ಕುಂಭ ರಾಶಿ ಪಳ
278 ಮೀನ ರಾಶಿ ಪಳ
----
1522 ಪಳಗಳು ಲಂಕೋದಯ

ಮೇಷ ಅಶುದ್ಧೋದಯವಾದ್ದರಿಂದ
24
× 30 ಗುಣಿಸಿ ಮೇಷದ ಪಳದಿಂದ ಭಾಗಿಸಿದೆ.
-------
278)720($2^0 - 35' - 22'$
556
------
164
× 60
-----

9840
9738
------
0102
× 60
------
6120
6116
------
4

ಸ್ಪಷ್ಟ ದಶಮ 0 – 2° – 35' – 22"

## ಶೇಷಭಾವ ಹಾಗೂ ಸಂಧಿಗಳ ಸಾಧನೆ

ಲಗ್ನಂ ಸುಖಾತ್ ಸುಖಂ ಕಾಮಾದ್ ವಿಶೋಧ್ಯ ತ್ರಿಭರಾಹರೇತ್ ।
ಏಕಾಂಶಂ ದ್ವಿಗುಣಶ್ಚಾಪಿ ಯುಜ್ಯಾಲಗ್ನ ಚತುರ್ಥಯೋಃ ॥೩೬॥

ಷಡ್ಭಾವಾಃ ಸಂಧ್ಯಯ ಶ್ಚೈವಂ ಪೂರ್ವಾಪರಯುತೇರ್ದಲಾತ್ ।
ಸಸಂಧಯಃ ಷಡೇವ ತೇ ಭಾರ್ಧಯುಕ್ತಾಃ ಪರೇಪಿಚ ॥೩೭॥

ಪ್ರಥಮ ಲಗ್ನವನ್ನು ಚತುರ್ಥ ಲಗ್ನದಲ್ಲಿ, ಚತುರ್ಥ ಲಗ್ನವನ್ನು ಸಪ್ತಮ ಲಗ್ನದಲ್ಲಿ ಕಳೆದು ಮೂರರಿಂದ ಭಾಗಿಸಿ ಲಬ್ಧವನ್ನು ಪ್ರಥಮದಲ್ಲಿ ಸೇರಿಸುವುದರಿಂದ ದ್ವಿತೀಯ ಭಾವ ಲಬ್ಧವನ್ನು ದ್ವಿಗುಣಿತ ಮಾಡಿ ಲಗ್ನದಲ್ಲಿ ಸೇರಿಸುವುದರಿಂದ – ತೃತೀಯ ಭಾವ, ಅದರಂತೆ ಸಪ್ತಮದಲ್ಲಿ ಚತುರ್ಥ ಕಳೆದ ಲಬ್ಧಿಯನ್ನು 3ರಿಂದ ಭಾಗಿಸಿ, ಚತುರ್ಥ ಭಾವದಲ್ಲಿ ಸೇರಿಸುವುದರಿಂದ ಪಂಚಮ ಭಾವ. ಅದರ ದ್ವಿಗುಣಿತ ಲಬ್ಧ ಚತುರ್ಥದಲ್ಲಿ ಸೇರಿಸುವುದರಿಂದ 6ನೇ ಭಾವ – ಈಗಾಗಲೇ ಲಗ್ನ ಹಾಗೂ ದಶಮ ಭಾವಗಳನ್ನು ತೆಗೆದಿದೆ. ಅವುಗಳಲ್ಲಿ 6 ರಾಶಿ ಸೇರಿಸಿ ಕ್ರಮವಾಗಿ, ಸಪ್ತಮ, ಚತುರ್ಥ ಭಾವ – ತೆಗೆದು ನಂತರ, ದ್ವಿತೀಯ, ತೃತೀಯ, ಪಂಚಮ, ಷಷ್ಠಗಳಲ್ಲಿ ಆ ರಾಶಿ ಸೇರಿಸಿ, ಅಷ್ಟಮ, ನವಮ, ಏಕಾದಶ ಹಾಗೂ ದ್ವಾದಶ ಭಾವ ಸ್ಪಷ್ಟ ತೆಗೆಯಬೇಕು – ಪೂರ್ವಾಪರ – ಭಾವಗಳ ಯೋಗಾರ್ಥವೂ ಸಂಧಿಯೆಂದು ಕರೆಯಲ್ಪಡುತ್ತದೆ. ಪ್ರಥಮ, ದ್ವಿತೀಯ ಯೋಗಾರ್ಥ ಪ್ರಥಮ ಸಂಧಿ, ದ್ವಿತೀಯ, ತೃತೀಯ ಯೋಗಾರ್ಥ ದ್ವಿತೀಯ ಸಂಧಿ ಈ ರೀತಿ ಸಂಧಿ ತೆಗೆಯುವರು. ಪ್ರಥಮ ಸಂಧಿಗೆ 6 ರಾಶಿ ಕೂಡಿಸಿ, ಸಪ್ತಮ ಸಂಧಿ ದ್ವಿತೀಯಕ್ಕೆ 6 ರಾಶಿ ಸೇರಿಸಿ ಅಷ್ಟಮ

ಸಂಧಿ ತೆಗೆಯುವುದು. ಇದೇ ರೀತಿ ಎಲ್ಲ ಸಂಧಿಗಳನ್ನು ಸಾಧಿಸುವುದು.

ಇಲ್ಲಿ ಮೊದಲನೇ ಉದಾಹರಣೆಯಲ್ಲಿ ಸ್ಪಷ್ಟ ಸಾಧಿತ ಲಗ್ನ.

3 – 2ಡಿಗ್ರಿ – 31' – 47" ಸ್ಪಷ್ಟ ಲಗ್ನ

0 – 2 – 35 – 22 ಸ್ಪಷ್ಟ ದಶಮ

ಕ್ರಮವಾಗಿ 6 ರಾಶಿ ಸೇರಿಸುವುದರಿಂದ ಸಪ್ತಮ, ಚತುರ್ಥ ಭಾವಗಳಾಗುವುವು.

ಸ್ಪಷ್ಟಲಗ್ನ 3 – 2ಡಿಗ್ರಿ – 31' – 47"+6 – 0 – 00 = 9 – 2 – 31 – 47 ಸಪ್ತಮ

ಸ್ಪಷ್ಟ ದಶಯ 0 – 2ಡಿಗ್ರಿ – 35 – 22"+6 – 0 – 0 – 00 = 6 – 2 – 35 – 22 ಚತುರ್ಥ

## ದ್ವಿತೀಯ ಹಾಗೂ ತೃತೀಯ ಭಾವ

ಚತುರ್ಥ – ಲಗ್ನ = '?' ÷ 3+ಲಗ್ನ = ದ್ವಿತೀಯ

= (6 – 2ಡಿಗ್ರಿ – 35 – 22) – (3 – 2ಡಿಗ್ರಿ – 31 – 47 = 3 – 0 – 03 – 35 ಭಾಗಿಸುವ ಚಿಹ್ನೆ 3

(1 – 0 – 3 – 11) + (3 – 2 – 31 – 47) = 4 – 2 – 34 – 58 ದ್ವಿತೀಯ.

ತೃತೀಯಂ = (1 – 0 – 03 – 1) × 2 + ಲಗ್ನ = ತೃತೀಯಂ = (2 – 0 – 6 – 22)+(3 – 2 – 31 – 67) = 5 – 2 – 38 – 09) ತೃತೀಯ.

ಪಂಚಮ ಷಷ್ಟ ಭಾವಗಳು –

ಸಪ್ತಮ – ಚತುರ್ಥ+3+ಚತುರ್ಥ = ಪಂಚಮ

(9 – 2 – 31 – 47) – (6 – 2 – 35 – 22") = 2 – 29 – 56 – 25 ಭಾಗಿಸುವ ಚಿಹ್ನೆ 3

= (0 – 29 – 56' – 28")+(6 – 2 – 35 – 22") = 7 – 2 – 33 – 50 ಪಂಚಮ

ಷಷ್ಟ = (0 – 29 – 58 – 28) × 2 + (6 – 2 – 35 – 22) = 1 – 29 – 56 – 56+6 – 2 – 35 – 22 = 8 – 2 – 32 – 18 ಷಷ್ಠರಾಶಿ.

ದ್ವಿತೀಯ+6=ಅಷ್ಟಮ (4−2−34−58)+6−0−0−0
=10−2−34−58 ಅಷ್ಟಮ ಭಾವ.

ಅದರಂತೆ ತೃತೀಯ, ಪಂಚಮ, ಷಷ್ಠದಲ್ಲಿ ಆ ರಾಶಿ ರೂಪಿಸಿ ನವಮ, ಏಕಾದಶ, ದ್ವಾದಶ ಸಾಧಿಸಿದೆ.

(5−2−38−09)+6−0−0−0=11−2−38−9 ನವಮ

(7−2−33−50)+6−0−0−0=1−2−33−50 ಏಕಾದಶ

(8−2−32−18)+6−0−0−0=2−2−32−18 ದ್ವಾದಶ

| ಭಾವ | ಸ್ವಷ್ಟ |
|---|---|
| ಲಗ್ನ | 3−2−31−47 |
| ದ್ವಿತೀಯ | 4−2−34−58 |
| ತೃತೀಯ | 5−2−38−09 |
| ಚತುರ್ಥ | 6−2−35−22 |
| ಪಂಚಮ | 7−2−33−50 |
| ಷಷ್ಠ | 8−2−32−18 |
| ಸಪ್ತಮ | 9−2−31−47 |
| ಅಷ್ಟಮ | 10−2−34−58 |
| ನವಮ | 11−2−38−09 |
| ದಶಮ | 0−2−35−22 |
| ಏಕಾದಶ | 1−2−33−50 |
| ದ್ವಾದಶ | 2−2−32−18 |

## ದ್ವಾದಶ ಸಂಧಿಗಳು

ವಿಧಾನ ಅತಿ ಸರಳ ರೂಪವಾದ್ದರಿಂದ ವಿಧಾನ-1ನ್ನು ಮಾತ್ರ ತಿಳಿಸಿ – ಮುಂದಿನದು ಅದೇ ರೀತಿ ಆಗಿ ಇಡಲಾಗಿದೆ ಹಾಗೂ ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಪಂಚಮ, ಷಷ್ಠ ಸಂಧಿಗಳಲ್ಲಿ 6 ರಾಶಿ ಕೂಡಿಸಿದರೆ ಸಪ್ತಮ, ಅಷ್ಟಮ, ನವಮ, ದಶಮ, ಏಕಾದಶ, ದ್ವಾದಶ ಸಂಧಿಗಳಾಗುತ್ತದೆ.

1 ಉದಾಹರಣೆ

ಪ್ರಥಮ ಭಾವ+ದ್ವಿತೀಯ ಭಾವ (ಭಾಗಿಸುವ ಚಿಹ್ನೆ) 2=ಸಂಧಿ. ಪ್ರಥಮ ಸಂಧಿ.

ಕೊಟ್ಟ ಅಂಶದಲ್ಲಿ –

(3–2–31–47)+(4–2–34–58)= 7–5–6–45 (ಭಾಗಿಸುವ ಚಿಹ್ನೆ) 2

3–17–33–22 ಪ್ರಥಮ ಭಾವ ಸಂಧಿಯಾಗುವುದು.

## ಕೊಟ್ಟ ಜಾತಕದ ಸಂಧಿ ವಿವರ

| ಪ್ರಥಮ | ಸಂಧಿ | ದ್ವಿತೀಯ ಭಾವ | ಸಂಧಿ | ತೃತೀಯ ಭಾವ | ಸಂಧಿ | ಚತುರ್ಥ ಭಾವ | ಸಂಧಿ | ಪಂಚಮ ಭಾವ | ಸಂಧಿ | ಷಷ್ಠ ಭಾವ | ಸಂಧಿ |
|---|---|---|---|---|---|---|---|---|---|---|---|
| 3 | 3 | 4 | 4 | 5 | 5 | 6 | 6 | 7 | 7 | 8 | 8 |
| 2 | 17 | 2 | 17 | 2 | 17 | 2 | 17 | 2 | 17 | 2 | 17 |
| 31 | 33 | 34 | 36 | 38 | 36 | 35 | 33 | 33 | 33 | 32 | 32 |
| 47 | 22 | 58 | 33 | 9 | 45 | 22 | 04 | 50 | 4 | 18 | 2 |
| ಸಪ್ತಮ | ಸಂಧಿ | ಅಷ್ಟಮ ಭಾವ | ಸಂಧಿ | ನವಮ ಭಾವ | ಸಂಧಿ | ದಶಮ ಭಾವ | ಸಂಧಿ | ಏಕಾಂಶ ಭಾವ | ಸಂಧಿ | ದ್ವಾದಶ ಭಾವ | ಸಂಧಿ |
| 9 | 9 | 10 | 10 | 11 | 11 | 0 | 0 | 1 | 1 | 2 | 2 |
| 2 | 17 | 2 | 17 | 2 | 17 | 2 | 17 | 2 | 17 | 2 | 17 |
| 31 | 33 | 34 | 36 | 38 | 36 | 35 | 33 | 33 | 33 | 32 | 32 |
| 47 | 22 | 58 | 33 | 09 | 45 | 22 | 04 | 50 | 4 | 18 | 02 |

ಇದೇ ಅಂಶದ ಮೇಲೆ ನೀಲಕಂಠಿಯರು ವಿವರಿಸಿದ ವಿವರಣೆ ಲಗ್ನದಿಂದ ಚತುರ್ಥದ $^1/_4$ನ್ನು ಜನ್ಮಲಗ್ನದಲ್ಲಿ ಸೇರಿಸುವುದರಿಂದ ಪ್ರಥಮ ಭಾವ ಸಂಧಿ ಎಂದು – ಇದು ಪರಾಶರ ರೂಪಾಂತರವಾಗಿದ್ದು – ನಿಶ್ಚಿತವಾಗಿ ಎರಡರ ಉಪಪತ್ತಿ ಒಂದೇ ಎಂದರೂ – ಸಂಧಿ ಸಂಪೂರ್ಣ ಬದಲಾಗುತ್ತದೆ.

ವಿಶೇಷ: ನೀಲಕಂಠಿಯ – ಅಂಶ ಅಲೌಕಿಕವಾದುದರಿಂದ ಆ ಅಂಶ ಬಿಟ್ಟು ಭಾವಚಲಿತ ಕುಂಡಲಿಯನ್ನು – ಅವಲೋಕಿಸಲು ಭಾವಸ್ಪಷ್ಟ ಭಾವ ಆರಂಭ ವಿರಾಮ ಸಂಧಿಗಳಿಂದ ವಿವೇಚಿಸಲು ಸಾಧ್ಯವಾಗುತ್ತದೆ – ಭಾವ ಚಲಿತದಿಂದ

ಗ್ರಹಗಳ ಮುಂದಿನ ಹಿಂದಿನ ಮನೆ ಫಲದಲ್ಲಿ ಯಾವುದು ಯೋಗ್ಯವೆಂದು ನಿರ್ಣಯಿಸಲು ಸಾಧ್ಯ – ವಿವರಣೆ.

ಪ್ರಥಮ, ದ್ವಿತೀಯದಿಂದ ತೆಗೆದ – ಸಂಧಿ ಪ್ರಥಮ ಭಾವದ ವಿರಾಮ (53) – ವ್ಯಯ ಲಗ್ನದಿಂದ ತೆಗೆದ ವ್ಯಯದ ಸಂಧಿ. ಲಗ್ನದ ಆರಂಭವಾಗುತ್ತದೆ. ಮೇಲಿನ ಉದಾಹರಣೆಯಲ್ಲಿ ಈ ರೀತಿ ವಿವರಿಸಬಹುದು.

| ಭಾವ | ಆರಂಭ | ಸ್ವಷ್ಟ | ವಿರಾಮ |
|---|---|---|---|
| ಪ್ರಥಮ | 2 – 17 – 32 – 02 | 3 – 2 – 31 – 47 | 3 – 17 – 33 – 22 |
| ದ್ವಿತೀಯ | 3 – 17 – 33 – 22 | 4 – 2 – 34 – 58 | 4 – 17 – 36 – 33 |
| ತೃತೀಯ | 4 – 17 – 36 – 33 | 5 – 2 – 38 – 9 | 5 – 17 – 36 – 45 |
| ಚತುರ್ಥ | 5 – 17 – 36 – 45 | 6 – 2 – 35 – 22 | 6 – 17 – 33 – 04 |
| ಪಂಚಮ | 6 – 17 – 33 – 04 | 7 – 2 – 33 – 55 | 7 – 17 – 33 – 04 |
| ಷಷ್ಟ | 7 – 17 – 33 – 04 | 8 – 2 – 32 – 18 | 8 – 17 – 32 – 02 |
| ಸಪ್ತಮ | 8 – 17 – 32 – 02 | 9 – 2 – 31 – 47 | 9 – 17 – 33 – 22 |
| ಅಷ್ಟಮ | 9 – 17 – 33 – 22 | 10 – 2 – 34 – 58 | 10 – 17 – 36 – 33 |
| ನವಮ | 10 – 17 – 36 – 45 | 11 – 2 – 38 – 9 | 11 – 17 – 36 – 45 |
| ಏಕಾದಶ | 0 – 17 – 33 – 04 | 1 – 2 – 33 – 50 | 1 – 17 – 33 – 04 |
| ದ್ವಾದಶ | 1 – 17 – 33 – 04 | 2 – 2 – 32 – 18 | 2 – 17 – 32 – 2 |

ಭಾವ ಚಲಿತ ಕುಂಡಲಿಗೆ ಗ್ರಹಸ್ವಷ್ಟ

| ಗ್ರ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು | ಹರ್ಷಲ | ನೆಪ್ಚೂನ್ |
|---|---|---|---|---|---|---|---|---|---|---|---|
| ರಾ | 6 | 6 | 9 | 6 | 9 | 5 | 11 | 7 | 1 | 0 | 4 |
| ಅಂ | 17 | 24 | 4 | 19 | 1 | 26 | 2 | 14 | 14 | 18 | 26 |
| ಕಲಾ | 35 | 0 | 44 | 01 | 14 | 31 | 45 | 18 | 18 | 8 | 51 |

ಭಾವ ಚಲಿತ ಕುಂಡಲಿಯಲ್ಲಿ ಲಗ್ನ ಸ್ವಷ್ಟ ಹಾಗೂ ಗ್ರಹ ಸ್ಪಷ್ಟಗಳು – ಭಾವದ ಆರಂಭಕ್ಕಿಂತ ಹಿಂದಿದ್ದರೆ ಹಿಂದಿನ ಭಾವದಲ್ಲಿಯೂ ಹಾಗೂ ವಿರಾಮಕ್ಕಿಂತ ಮುಂದಿದ್ದರೆ ಮುಂದಿನ ಭಾವದಲ್ಲಿಯು ಹಾಕುವುದು ಉದಾಹರಣೆಯಲ್ಲಿ ಲಗ್ನ ಸ್ಪಷ್ಟ 3 – 2 – 31 – 47" ಇದ್ದು ಆರಂಭ 2 – 17 – 32 – 02 ಇದ್ದು, ವಿರಾಮ 3 – 17 – 33 – 22 ಇದ್ದು, ಲಗ್ನ ಕರ್ಕವೇ ಆಗುತ್ತದೆ.

## ಭಾವಚಲಿತ ಕುಂಡಲಿ

5, 6 ನೆಪ್ಚೂನ್, 4, 3, 2, 7 ಶುಕ್ರ (ಉದಯ), 1 ಹ, ರವಿ, ಚಂ, ಬು(ಅಸ್ತ) ರಾ, 10 ಗು. ಮ, 12 ಶನಿ (ವಕ್ರ), 9, 11

| ಶನಿ | | ಕೆ ಹ | |
|---|---|---|---|
| | ಕರ್ಕ ಲಗ್ನ | | |
| ಗು ಮ | | | |
| | ರ ಚ ಬು ರಾ | ಶುಕ್ರ | ನೇ |

ಇಲ್ಲಿ ಗಮನಿಸಬೇಕಾದ ಅಂಶ ನೆಪ್ಚೂನ್ ಶುಕ್ರ, ರವಿ, ಬುಧ, ಚಂದ್ರ, ಹರ್ಷಲರು ವಿರಾಮ ಸಂಧಿಗಿಂತ ಮುಂದಿರುವುದರಿಂದ ಮುಂದಿನ ರಾಶಿಯಲ್ಲಿ ಫಲ ಹಾಕಿದೆ. ಈ ಕುಂಡಲಿಯಿಂದ ನಿರ್ದಿಷ್ಟದ ಕಡೆಗೆ ಹೆಚ್ಚು ಒತ್ತುಕೊಡಲು ಸಾಧ್ಯವಾಗುತ್ತದೆ. ಸ್ಥಾನ ಬದಲಾವಣೆ ವಿಶಿಷ್ಟ ವೈಶಿಷ್ಟ್ಯ ವಿವರಿಸಲು ಅನುಕೂಲವಾಗುತ್ತದೆ. ಫಲಾದೇಶ ನಿಶ್ಚಿತವಾಗುತ್ತದೆ. ಹೀಗಾಗಿ ಆರಂಭ ಹಾಗೂ ವಿರಾಮಗಳು ಬಹಳ ಮಹತ್ವದ ಅಂಶಗಳಾಗಿವೆ.

## ಮೂಲ ಕುಂಡಲಿ (ಲಗ್ನ)

5 ನೆಪ್ಚೂನ್, ಶುಕ್ರ 6, 4, 3, 2ಕೆ, 7 ರ, ಬು, ಚಂದ್ರ (ಅಸ್ತ), 1 ಹ, 8 ರಾ, 10 ಗು. ಮ, 12 ಶನಿ (ವಕ್ರ), 9, 11

| ಶನಿ | ಹ | ಕೆ | |
|---|---|---|---|
| | ಕರ್ಕ ಲಗ್ನ | | |
| ಗು ಮ | | | ನೆಪ್ಚೂನ್ |
| | ರಾ | ರ ಬು ಚ | ಶು |

ಲಗ್ನ ಕುಂಡಲಿ – ಭಾವ ಚಲಿತ ಕುಂಡಲಿ ವಿಮರ್ಶಾತ್ಮಕದಿಂದ ವಿವೇಚಿಸಿದಾಗ ಗ್ರಹಸ್ಥಾನ ಪಲ್ಲಟದ ನಿರ್ದಿಷ್ಟ ಬದಲಾವಣೆ ಸ್ಪಷ್ಟ ಕಂಡುಬರುತ್ತದೆ.

ಇದರಂತೆ

ಗ್ರಹಗಳ ಮುಂದಿನ ಹಿಂದಿನ ಮನೆ ಫಲದಲ್ಲಿ ಯಾವುದು ಯೋಗ್ಯವೆಂದು ನಿರ್ಣಯಿಸಲು ಸಾಧ್ಯ – ವಿವರಣೆ.

ಪ್ರಥಮ, ದ್ವಿತೀಯದಿಂದ ತೆಗೆದ – ಸಂಧಿ ಪ್ರಥಮ ಭಾವದ ವಿರಾಮ (53) – ವ್ಯಯ ಲಗ್ನದಿಂದ ತೆಗೆದ ವ್ಯಯದ ಸಂಧಿ. ಲಗ್ನದ ಆರಂಭವಾಗುತ್ತದೆ. ಮೇಲಿನ ಉದಾಹರಣೆಯಲ್ಲಿ ಈ ರೀತಿ ವಿವರಿಸಬಹುದು.

| ಭಾವ | ಆರಂಭ | ಸ್ಪಷ್ಟ | ವಿರಾಮ |
|---|---|---|---|
| ಪ್ರಥಮ | 2 – 17 – 32 – 02 | 3 – 2 – 31 – 47 | 3 – 17 – 33 – 22 |
| ದ್ವಿತೀಯ | 3 – 17 – 33 – 22 | 4 – 2 – 34 – 58 | 4 – 17 – 36 – 33 |
| ತೃತೀಯ | 4 – 17 – 36 – 33 | 5 – 2 – 38 – 9 | 5 – 17 – 36 – 45 |
| ಚತುರ್ಥ | 5 – 17 – 36 – 45 | 6 – 2 – 35 – 22 | 6 – 17 – 33 – 04 |
| ಪಂಚಮ | 6 – 17 – 33 – 04 | 7 – 2 – 33 – 55 | 7 – 17 – 33 – 04 |
| ಷಷ್ಟ | 7 – 17 – 33 – 04 | 8 – 2 – 32 – 18 | 8 – 17 – 32 – 02 |
| ಸಪ್ತಮ | 8 – 17 – 32 – 02 | 9 – 2 – 31 – 47 | 9 – 17 – 33 – 22 |
| ಅಷ್ಟಮ | 9 – 17 – 33 – 22 | 10 – 2 – 34 – 58 | 10 – 17 – 36 – 33 |
| ನವಮ | 10 – 17 – 36 – 45 | 11 – 2 – 38 – 9 | 11 – 17 – 36 – 45 |
| ಏಕಾದಶ | 0 – 17 – 33 – 04 | 1 – 2 – 33 – 50 | 1 – 17 – 33 – 04 |
| ದ್ವಾದಶ | 1 – 17 – 33 – 04 | 2 – 2 – 32 – 18 | 2 – 17 – 32 – 2 |

**ಭಾವ ಚಲಿತ ಕುಂಡಲಿಗೆ ಗ್ರಹಸ್ಪಷ್ಟ**

| ಗ್ರ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು | ಹರ್ಷಲ | ನೆಪ್ಚೂನ್ |
|---|---|---|---|---|---|---|---|---|---|---|---|
| ರಾ | 6 | 6 | 9 | 6 | 9 | 5 | 11 | 7 | 1 | 0 | 4 |
| ಅಂ | 17 | 24 | 4 | 19 | 1 | 26 | 2 | 14 | 14 | 18 | 26 |
| ಕಲಾ | 35 | 0 | 44 | 01 | 14 | 31 | 45 | 18 | 18 | 8 | 51 |

ಭಾವ ಚಲಿತ ಕುಂಡಲಿಯಲ್ಲಿ ಲಗ್ನ ಸ್ಪಷ್ಟ ಹಾಗೂ ಗ್ರಹ ಸ್ಪಷ್ಟಗಳು – ಭಾವದ ಆರಂಭಕ್ಕಿಂತ ಹಿಂದಿದ್ದರೆ ಹಿಂದಿನ ಭಾವದಲ್ಲಿಯೂ ಹಾಗೂ ವಿರಾಮಕ್ಕಿಂತ ಮುಂದಿದ್ದರೆ ಮುಂದಿನ ಭಾವದಲ್ಲಿಯು ಹಾಕುವುದು ಉದಾಹರಣೆಯಲ್ಲಿ ಲಗ್ನ ಸ್ಪಷ್ಟ 3 – 2 – 31 – 47" ಇದ್ದು ಆರಂಭ 2 – 17 – 32 – 02 ಇದ್ದು, ವಿರಾಮ 3 – 17 – 33 – 22 ಇದ್ದು, ಲಗ್ನ ಕರ್ಕವೇ ಆಗುತ್ತದೆ.

## ಭಾವಚಲಿತ ಕುಂಡಲಿ

5
3
6 ನೆಪ್ಚೂನ್
4
2
7 ಶುಕ್ರ (ಉದಯ)
1 ಹ
ರವಿ, ಚಂ, ಬು(ಅಸ್ತ) ರಾ
10 ಗು. ಮ
12 ಶನಿ (ವಕ್ರ)
9
11

| ಶನಿ | | ಕೆ ಹ | |
|---|---|---|---|
| | ಕರ್ಕ ಲಗ್ನ | | / |
| ಗು ಮ | | | |
| | ರ ಚ ಬು ರಾ | ಶುಕ್ರ | ನೇ |

ಇಲ್ಲಿ ಗಮನಿಸಬೇಕಾದ ಅಂಶ ನೆಪ್ಚ್ಯೂನ್ ಶುಕ್ರ, ರವಿ, ಬುಧ, ಚಂದ್ರ, ಹರ್ಷಲರು ವಿರಾಮ ಸಂಧಿಗಿಂತ ಮುಂದಿರುವುದರಿಂದ ಮುಂದಿನ ರಾಶಿಯಲ್ಲಿ ಫಲ ಹಾಕಿದೆ. ಈ ಕುಂಡಲಿಯಿಂದ ನಿರ್ದಿಷ್ಟದ ಕಡೆಗೆ ಹೆಚ್ಚು ಒತ್ತುಕೊಡಲು ಸಾಧ್ಯವಾಗುತ್ತದೆ. ಸ್ಥಾನ ಬದಲಾವಣೆ ವಿಶಿಷ್ಟ ವೈಶಿಷ್ಟ್ಯ ವಿವರಿಸಲು ಅನುಕೂಲವಾಗುತ್ತದೆ. ಫಲಾದೇಶ ನಿಶ್ಚಿತವಾಗುತ್ತದೆ. ಹೀಗಾಗಿ ಆರಂಭ ಹಾಗೂ ವಿರಾಮಗಳು ಬಹಳ ಮಹತ್ವದ ಅಂಶಗಳಾಗಿವೆ.

## ಮೂಲ ಕುಂಡಲಿ (ಲಗ್ನ)

5 ನೆಪ್ಚೂನ್
3
ಶುಕ್ರ 6
4
2ಕೆ
7 ರ. ಬು. ಚಂದ್ರ (ಅಸ್ತ)
1 ಹ
8 ರಾ
10 ಗು. ಮ
12 ಶನಿ (ವಕ್ರ)
9
11

| ಶನಿ | ಹ | ಕೆ | |
|---|---|---|---|
| | ಕರ್ಕ ಲಗ್ನ | | / |
| ಗು ಮ | | | ನೆಪ್ಚೂನ್ |
| | ರಾ | ರ ಬು ಚ | ಶು |

ಲಗ್ನ ಕುಂಡಲಿ – ಭಾವ ಚಲಿತ ಕುಂಡಲಿ ವಿಮರ್ಶಾತ್ಮಕದಿಂದ ವಿವೇಚಿಸಿದಾಗ ಗ್ರಹಸ್ಥಾನ ಪಲ್ಲಟದ ನಿರ್ದಿಷ್ಟ ಬದಲಾವಣೆ ಸ್ಪಷ್ಟ ಕಂಡುಬರುತ್ತದೆ.

ಇದರಂತೆ

## ಭಾವ ಹೋರಾ ಘಟಿ ಲಗ್ನ ಸಾಧನ

ಅಥವಕ್ಷ್ಯಾಮಿತೆ ಭಾವಲಗ್ನಾದಿನಿ ದ್ವಿಜೋತ್ತಮ ।
ಯಜ್ಞಾನತಃ ಫಲಾದೆಶೆ ಕ್ಷಮಾ ಹೊರಾವಿದೋ ಜನಾಃ ॥೩೮॥

ಸೂರ್ಯೋದಯಾತ್ ಪಂಚಬಾಣದಲೈಕ ಘಟಿಕಾಮಿತಾಃ ।
ಭಾವ ಹೋರಾಘಟೀಲಗ್ನಮಿತಯಃ ಕ್ರಮಶೋ ದ್ವಿಜ ॥೩೯॥

ಇಷ್ಟನಾಡಿಪಲೆ ಪಂಚಹೃತೆ ರಾಶ್ಯಾದಿಶಂ ಫಲಮ್ ।
ಯತ್ತದೌದಯಿಕೆ ಸೂರ್ಯೇಯೋಜ್ಯಮಂಗತು ಭಾವಜಮ್ ॥೪೦॥

ಏವಮೇತೆ ಪುನರ್ದ್ವಾಗ್ಭ್ಯಾಂ ಸಂಗುಣ್ಯ ವಿಭಜೆಚ್ಛರೈಃ ।
ಲಬ್ಧಂ ರಾಶ್ಯಾಧಿಕಂ ಯತ್ತದ್ಯೋಜ್ಯಮೌದಯಿಕೆ ರವೌ॥೪೧॥

ಹೊರಾಲಗ್ನಂ ಸ್ಫುಟಂ ತತ್ ಸ್ಯಾದ್ ಘಟಿ ಲಗ್ನ ಮತೋಚ್ಯತೆ ।
ಇಷ್ಟನಾಡೀಮಿತಾನ್ ರಾಶೀನಕೈಃ ಸಂತಪ್ತಿತಾಂಸ್ತಥಾ ॥೪೨॥

ತತ್ಫಲಾರ್ಧ ಮಿತಾನಂಶಾನುದಯಾರ್ಕೇರ್ಶೇ ತು ಯೋಜಯೇತ್ ।
ಭಾದಿಕಂ ತದಿದಂ ಭೋದ್ಯಂ ಘಟಿಲಗ್ನಂ ಸದಾ ಬುಧೈಃ ॥೪೩॥

ಹೇ ಮೈತ್ರೇಯನೆ, ಈಗ ನಾನು ಭಾವ ಲಗ್ನ ಹೊರಾ ಲಗ್ನಘಟಿ ಲಗ್ನಾದಿಗಳ ಬಗ್ಗೆ ಹೇಳುತ್ತೇನೆ. ಈ ಲಗ್ನಗಳನ್ನು ಅರಿಯುವುದರಿಂದ ಹೋರಾಶಾಸ್ತ್ರಜ್ಞನು ಫಲಾದೇಶದಲ್ಲಿ ನಿಪುಣನಾಗುತ್ತಾನೆ. ಸೂರ್ಯೋದಯದಿಂದ ಭಾವಲಗ್ನ, ಹೋರಾ ಲಗ್ನ, ಘಟಿಲಗ್ನಗಳು ಪ್ರಾರಂಭವಾಗುತ್ತವೆ. ಅವು ಕ್ರಮಶಃ 5, $2^1/_2$ ಹಾಗೂ 1 ಪ್ರಮಾಣದ್ದವುಗಳಾಗಿರುತ್ತವೆ. ಆದ್ದರಿಂದ ಇಷ್ಟಕಾಲದಿಂದ ಭಾವಲಗ್ನ ಸಾಧನ ದಲ್ಲಿ ಇಷ್ಟನಾಡಿ ಪಳಗಳನ್ನು 5ರಿಂದ ಭಾಗಿಸಿ, ಭಾಗಲಬ್ಧ ರಾಶಿ. ಅಂಶ ಕಲಾ ಎಂದು ಪರಿಗಣಿಸಿ ಅವುಗಳನ್ನು ಸ್ಪಷ್ಟ ಸೂರ್ಯೋದಯದ (ಲೋಕಲ್) ಸ್ಪಷ್ಟ ಸೂರ್ಯ ನಲ್ಲಿ ಕೂಡಿಸಿ 12ಕ್ಕಿಂತ ಹೆಚ್ಚು ರಾಶಿಗಳಾದರೆ ಹನ್ನೆರಡರಲ್ಲಿ ಕಳೆದು – ಲಗ್ನ ಸಾಧಿಸುವುದು ಅದೇ ಭಾವಲಗ್ನ, ಇದರಂತೆ ಹೋರಾ ಲಗ್ನಕ್ಕೆ ಇಷ್ಟಘಟಿ ಪಳಗಳಿಗೆ 2ರಿಂದ ಗುಣಿಸಿ, 5ರಿಂದ ಭಾಗಿಸಿ ಸೂರ್ಯೋದಯದ ಸ್ಪಷ್ಟ ಸೂರ್ಯನಲ್ಲಿ ಕೂಡಿಸಿ ದರೆ ಹೋರಾಲಗ್ನವಾಗುವುದು ಇನ್ನು ಘಟಿ ಲಗ್ನದಲ್ಲಿ ಉದಯ ಕಾಲದ ಸೂರ್ಯನ ರಾಶಿಯಲ್ಲಿ ಭಾಗಿಸಿ, ಇಷ್ಟಘಟಿ ಸಮಾನ ರಾಶಿಗಳನ್ನು ಹಾಗೂ ಫಲಾರ್ಧ ಸಮಾನ ಅಂಶವನ್ನು ಸೂರ್ಯ ಅಂಶದಲ್ಲಿ ಕೂಡಿಸಿ 12 ರಾಶಿಗಿಂತ ಹೆಚ್ಚಾದರೆ ಹನ್ನೆರಡರಿಂದ ಭಾಗಿಸಿ, ಉಳಿದುದು ಘಟಿಲಗ್ನ.

ಉದಾಹರಣೆ – ಸ್ಪಷ್ಟಸೂರ್ಯ 6 – 17 – 35 ಕಲಾ ಸೂರ್ಯೋದಯದ

ಸ್ಪಷ್ಟಸೂರ್ಯ – 6 – 16 – 53" – 22" ಇಷ್ಟಘಟಿ 41 – 17 ಪಳಾ (ಭಾಗಿಸುವ ಚಿಹ್ನೆ) 5 = 8 – 15 – 24

6 – 16 – 53 – 22 + 8 – 15 – 24 = 15 – 2 – 17 – 22

12 ರಾಶಿಗಳಿಗಿಂತ ಹೆಚ್ಚಾದ್ದರಿಂದ 12 ಕಳೆಯಲು 3ರಾಶಿ, 2 ಅಂಶ, 17 ಕಲಾ, 22 ಸ್ಪಷ್ಟ ಭಾವಲಗ್ನ.

## ಭಾವಲಗ್ನ ಚಿತ್ರ

5 ನೆ
3
6 ಶು
4
2ಕೆ
7 ರ. ಬು.ಚ
1 ಹ
8 ರಾ
10 ಗು. ಮ
12 ಶ
9
11

| ಶನಿ | ಹ | ಕೆ | |
|---|---|---|---|
| | | | |
| ಗು ಮ | | | ನೆ |
| | ರಾ | ರ ಬು ಚ | ಶು |

## ಹೋರಾಲಗ್ನ

41 – 17 × 2 = 82 – 34 (ಭಾಗಿಸುವ ಚಿಹ್ನೆ) = 16 – 18 – 48 ಹನ್ನೆರಡು ರಾಶಿಗಿಂತ ಹೆಚ್ಚಾಗಿಲ್ಲದಿರುವುದರಿಂದ

4 – 18 – 48 + 6 – 16 – 53 – 22 = 11 – 5 – 41 – 22 ಇದು ಸ್ಪಷ್ಟ ಹೋರಾಲಗ್ನ.

## ಹೋರಾಲಗ್ನ ಚಿತ್ರ

1 ಹ
11
10 ಮ ಗು
2 ಕೆ
12 ಶ
3
9
4
6 ಶುಕ್ರ
8 ರಾ
5
7 ರ. ಬು. ಚ

| ಶ | ಹ | ಕೆ | |
|---|---|---|---|
| | | | |
| ಗು ಮ | | | ನೆ |
| | ರಾ | ರ ಬು ಚ | ಶು |

ಘಟಿ ಲಗ್ನದಲ್ಲಿ 12ರಿಂದ ಭಾಗಿಸಿ – ಇಷ್ಟಘಟಿ ರಾಶಿ 41 (ಭಾಗಿಸುವ ಚಿಹ್ನೆ) 12=5 ರಾಶಿ, 17 ಪಳ, ಪಳಗಳನ್ನು 2ರಿಂದ ಭಾಗಿಸಲು 17 (ಭಾಗಿಸುವ ಚಿಹ್ನೆ) 2=8ಡಿಗ್ರಿ–30'. ಇವುಗಳನ್ನು ಸೂರ್ಯೋದಯದ ರವಿಯಲ್ಲಿ ಸೇರಿಸಲು... 5–3–30+6–16–53–22 ಕಲಾ =11–25–23–22 ಘಟಿಲಗ್ನ.

**ಘಟಿಲಗ್ನ**

1ಹರ್ಷಲ | 11
2 ಕೆ | 12 ಶ (ವ) | 10 ಮ ಗು
3 | 9
4 | 6 ಶುಕ್ರ | 8 ರಾ
5 ನೆ | 8 ರ.ಬು.ಚ

| | | | |
|---|---|---|---|
| ಶ | ಹ | ಕೆ | |
| | | | |
| ಗು ಮ | | | ನೆ |
| | ರಾ | ರ ಬು ಚ | ಶು |

ಪೂರ್ಣ ಫಲಂ ಗ್ರಹೆ ಭಾವಸಮೇ ಶೂನ್ಯನ್ಯಂ ತು ಸಂಧಿಗೋ ।
ಸಂಧಿದ್ವಯಾಂತರಗತೆ ಭವೆತ್ತ್ರದ್ಭಾವಜಂ ಫಲಮ್ ॥೪೪॥

ಸಂಧಿಭ್ಯಾಮಧಿಕೆ ನ್ಯೂನೆ ಫಲಮಗ್ರಿಮ ಪೂರ್ವಜಮ್ ।
ಭಾವಲಗ್ನಾತು ತಿಥ್ಯಂ ಶೈಃ ಪುರಃ ಪುಷ್ಪಗತ್ಯೈದ್ವಿಜ ॥೪೫॥

ಫಲಾಭಾವ ಫಲಾರಂಭೌ ಸಂಧೀಚಾಪಿ ವಿನಿರ್ದಿಶೇತ್ ॥

ಭಾವ ಸಮಾನ ಅಂಶದಲ್ಲಿಯ ಗ್ರಹ ಆ ಭಾವದ ಪೂರ್ಣಫಲವನ್ನು – ಸಂಧಿ ಸಮಾನಾಂಶ ಗ್ರಹ ಶೂನ್ಯ ಫಲದಾಯಕವಾಗುತ್ತದೆ – ಎರಡೂ ಸಂಧಿ (ಆರಂಭ, ವಿರಾಮ)ಗಳ ಮಧ್ಯದಲ್ಲಿಯ ಗ್ರಹ – ಮಧ್ಯ ಭಾವಫಲವನ್ನು ಕೊಟ್ಟರೆ, ಭಾವದ ವಿರಾಮ – ಸಂಧಿಗೆ ಮುಂದಿದ್ದ ಗ್ರಹ – ಮುಂದಿನ ಭಾವದ ಹಾಗೂ ಆರಂಭ ಸಂಧಿಗೆ ಹಿಂದಿದ್ದ ಗ್ರಹ ಹಿಂದಿನ ಭಾವದ ಫಲವನ್ನು ಕೊಡುತ್ತದೆ. ಭಾವ ಲಗ್ನದಿಂದ 15 ಡಿಗ್ರಿ ಮುಂದೆ 15 ಡಿಗ್ರಿ ಹಿಂದೆ ಕ್ರಮಶಃ ಫಲಾಭಾವ ಹಾಗೂ ಫಲಾರಂಭ ಸ್ಥಾನವಾಗಿರುತ್ತದೆ. ಹಾಗೂ ಎರಡು ಸಂಧಿಯಾಗಿರುತ್ತದೆ.

ವಿಮರ್ಶೆ: ಇಲ್ಲಿ ಮುಖ್ಯ ತಾತ್ಪರ್ಯ ತನ್ವಾದಿ ಭಾವ ಹಾಗೂ ದ್ವಾದಶ

ಸಂಧಿಗಳ ಸಾಧನೆಯ ಪ್ರಕಾರ ಕುಂಡಲಿ ಸ್ಥಿತಗ್ರಹಗಳ ಮುಖಾಂತರ ಫಲಾದೇಶ ಉಚಿತವಾಗುತ್ತದೆ. ಭಾವಾಂಶ ಸಮಾನ ಗ್ರಹ ಪೂರ್ಣಫಲದಾಯಕವಾಗಿರುತ್ತದೆ. ಆದರೆ ಸಂಧಿಗಳು ಗ್ರಹ ಫಲ ಶೂನ್ಯವಾಗಿರುತ್ತದೆ. ಎರಡು ಸಂಧಿಗಳ ಮಧ್ಯಸ್ಥಿತಿ ಯುಳ್ಳ ಗ್ರಹ ಅದೇ ಭಾವದ ಫಲವನ್ನು ಆರಂಭ ಸಂಧಿಗಿಂತ – ಕಡಿಮೇ ಅಂಶವುಳ್ಳ ಗ್ರಹ ಮುಂದಿನ ಭಾವ ಫಲ – ಕೊಡುತ್ತದೆಂದು ಹೇಳುವುದು. ಒಂದುವೇಳೆ ಸರಿಯಾದ ಅಂಕಿ ಸಂಖ್ಯೆ ಸಿಗದೆ ಭಾವ ಸ್ಪಷ್ಟ ಸಂಧಿ ಆದಿಸಾಧನ ಸಂಭವವಿಲ್ಲದಾಗ 5, 5 ಘಟಿ ಸಮಾನ ಭಾವಲಗ್ನ ಹಾಗೂ ಭಾವದಿಂದ 15 ಡಿಗ್ರಿ ಪೂರ್ವ, 15 ಡಿಗ್ರಿ ನಮತರ ಗ್ರಹಿಸಿ – ಸಂಧಿಯ ಫಲ ಹೇಳಬಹುದು ಅಸಂಗತವಾಗಲಾರದು. ಯಾಕೆಂದರೆ ದಿನದಲ್ಲಿ ಬಹಳ ಕಡಿಮೆ ಅಂತರ ಬರುವುದರಿಂದ ಭಾವಲಗ್ನದ ಮುಖಾಂತರ ಫಲಾದೇಶ ವ್ಯಾವಹಾರಿಕವಾಗಿದೆ. – ಪರಾಶರರು ತಮ್ಮ ಗ್ರಂಥದಲ್ಲಿ ಸಸಂಧಿ ದ್ವಾದಶಭಾವ ಹಾಗೂ ಭಾವಲಗ್ನಗಳು ವಿವೇಚನೆ ಮಾಡಿದ್ದಾರೆ – ತನ್ವಾದಿ – ಭಾವ ಸ್ಪಷ್ಟ ಕಠಿಣವಾದಾಗ ಸರಲತಮ 5ಘಟಿ ಪ್ರಮಾಣ ಭಾವಲಗ್ನವನ್ನು ವಿವರಿಸಿದ್ದಾರೆ. ಆದರೂ ಇದು ಮಧ್ಯಮಪಕ್ಷ. ಸ್ಪಷ್ಟಭಾವ ಸಂಧಿ ತೆಗೆದು ಹೇಳುವುದು ನಿಶ್ಚಿತವಾಗಿ ಉತ್ತಮಪಕ್ಷ – ಭಾವ, ಹೊರಾ, ಘಟಿಲಗ್ನ ಗಳಿಗಿಂತ ಭಾವಸ್ಪಷ್ಟ – ಲಗ್ನಸ್ಪಷ್ಟ, ಸಂಧಿಸ್ಪಷ್ಟದಿಂದ ಫಲಾದೇಶ ಸಮುಚಿತ ವೆಂಬುದು ಪರಾಶರರ ಅಭಿಪ್ರಾಯವೆಂಬುದು ನನ್ನ ವಿಚಾರ. ಉದಾಹರಿತ ಕುಂಡಲಿ ಯಲ್ಲಿ ರವಿ ವಿರಾಮ ಸಂಧಿಗೆ ಅತಿ ಸಮೀಪವಿರುವುದರಿಂದ ನೀಚನಾದರೂ ನಿಷ್ಫಲ ವಾಗಿದ್ದಾರೆ. – ಗುರು, ಮಂಗಳ, ಶನಿ ಭಾವಸ್ಪಷ್ಟಕ್ಕೆ ಅತಿ ಸಮೀಪವರ್ತಿ ಗಳಾದ್ದರಿಂದ ನಿರ್ದಿಷ್ಟ ಫಲದಾಯಕರು ಹಾಗೂ ಇತರ ಎಲ್ಲ ಗ್ರಹಗಳು ಅಂದರೆ ಚಂದ್ರ, ಬುಧ, ಶುಕ್ರ, ಹರ್ಷಲ, ನೆಪ್ಚೂನ್ ಮುಂದಿನ ಭಾವಫಲ ಕೊಟ್ಟರೆ ರಾಹು, ಕೇತುಗಳು ಮಧ್ಯದಲ್ಲಿರುವುದರಿಂದ ಅದೇ ಭಾವಫಲ ಕೊಡುವುವು – ಈ ಅಂಶ ಗಮನದಲ್ಲಿಟ್ಟುಕೊಂಡು ಫಲಾದೇಶ ಮಾಡುವುದು ವಿಹಿತ.

ಇತಿ ಬೃಹತ್ಪರಾಶರ ಹೋರಾಶಾಸ್ತ್ರ ಗ್ರಹ
ಸಾಧನಾ(ಚತುರ್ಥಾ)ಧ್ಯಾಯ ಸಮಾಪ್ತಿ



(೩ನೇ ಅಧ್ಯಾಯ)

# ಅಥ ರಾಶಿಶೀಲಾಧ್ಯಾಯ

ಅಹೋರಾತ್ರ ಪದಾದ್ಯಾಂತ್ಯಲೋಪಾದ್ಹೋರೇತಿ ಕಥ್ಯತೇ ।
ತಸ್ಯಾ ಜ್ಞಾನ ಮಾತ್ರೇಣ ಜಾತಕರ್ಮಫಲಂ ವದೇತ್ ॥೧॥

ಯದವ್ಯಕ್ತಾತ್ಮಾಕೋ ವಿಷ್ಣುಃ ಕಾಲರೂಪೋಜನಾರ್ಧನಃ ।
ತಸ್ಯಾಂಗಾನಿ ನಿಭೋಧ ತ್ವಂ ಕ್ರಮಾನ್ಮೇಷಾದಿ ರಾಶಯಃ ॥೨॥

ಮೇಷೋ ವೃಷಶ್ಚ ಮಿಥುನಃ ಕರ್ಕ ಸಿಂಹ. ಕುಮಾರಿಕಃ।
ತುಲಾಲಿಚಾಪ ಮಕರಃ ಕುಂಭ ಮೀನೌ ಯಥಾ ಕ್ರಮಮ್ ॥೩॥

ಅಹೋರಾತ್ರಿ ಈ ಪದಗಳಲ್ಲಿ ಆದಿ, ಅಂತಿಮ ಅಕ್ಷರ, ವರ್ಣ ಲೋಪ ಮಾಡಿದರೆ ಹೋರಾ ನಿಷ್ಪತ್ತಿಯಾಗುವುದು. ಈ ಹೋರಾ(ಸಮಯ ಲಗ್ನ)ದ ಜ್ಞಾನ ಮಾತ್ರದಿಂದಲೇ ಜಾತಕನ ಕರ್ಮಫಲ (ಶುಭಾಶುಭಫಲ) ಹೇಳಲು ಬರುವುದು. ಈ ಕಾಲ ಹಾಗೂ ಅವ್ಯಕ್ತ ಆತ್ಮವೂ ಶ್ರೀ ವಿಷ್ಣುವೇ ಆಗಿದ್ದಾನೆ. ಈ ಜನಾರ್ಧನನ ಅಂಗಗಳೇ ಮೇಷಾದಿ ರಾಶಿಗಳಾಗಿವೆ ಅಥವಾ ರಾಶಿಸ್ಥಾನವಾಗಿದೆ. ಈ ದ್ವಾದಶ ರಾಶಿಗಳು ಕ್ರಮವಾಗಿ, 1) ಮೇಷ 2) ವೃಷಭ 3) ಮಿಥುನ 4) ಕರ್ಕ 5) ಸಿಂಹ 6) ಕನ್ಯಾ 7) ತುಲಾ 8) ವೃಶ್ಚಿಕ 9) ಧನು 10) ಮಕರ 11) ಕುಂಭ 12)ಮೀನಗಳಾಗಿವೆ.

## ಕಾಲ ಪುರುಷನ ಅಂಗ ವಿಭಾಗ

ಶೀರ್ಷಾನನೆ ತಥಾ ಬಾಹೂ ಹೃತ್ಕ್ರೋಡಕಟಿವಸ್ತಯಃ ।
ಗುಹ್ಯೋರುಯುಗಲೆ ಜಾನುಯುಗ್ಮೆವೈ ಜಂಘೆಕೆತಥಾ ॥೪॥

ಚರಣೌದ್ವೌ ತಥಾಜಾದೆರ್ಜ್ಞೇಯಃ ಶೀರ್ಷಾದಯಃ ಕ್ರಮಾತ್ ॥

ಈ ಕಾಲಪುರುಷನ 1) ಮೇಷ – ಶಿರ 2) ವೃಷಭ – ಮುಖ 3) ಮಿಥುನ – ಎದೆ 4) ಕರ್ಕ – ಹೃದಯ 5) ಸಿಂಹ – ಹೊಟ್ಟೆ 6) ಕನ್ಯಾ – ಟೊಂಕ 7) ತುಲಾ – ಮೂತ್ರಜನಕಾಂಗಳು (ಕಿಡ್ನಿ ಇತ್ಯಾದಿ) 8) ವೃಶ್ಚಿಕ – ಲಿಂಗ 9) ಧನು – ತೊಡೆಭಾಗ 10) ಮಕರ – ಕಾಲುಗಳು 11) ಕುಂಭ – ಹಿಮ್ಮಡಿ 12) ಮೀನ – ಪಾದಗಳು.

ಈ ರೀತಿ ದ್ವಾದಶ ರಾಶಿಗಳು ಕಾಲಪುರುಷನ ಅಂಗಗಳಾಗಿವೆ.

## ಚರಾದಿ ಸಂಜ್ಞೆಗಳು

**ಚರ ಸ್ಥಿರದ್ವಿಸ್ವಭಾವಾಃ ಕ್ರೂರಾಕ್ರೂರೌ ನರಸ್ತ್ರೀಯೌ ।**
**ಪಿತ್ತಾನಿಲತ್ರಿಧಾತ್ವೈಕ್ಯ–ಶ್ಲೈಷ್ಮಿಕಾಶ್ಚ ಕ್ರಿಯಾದಯಃ ॥೫॥**

ಈ ಮೇಷಾದಿ ದ್ವಾದಶ ರಾಶಿಗಳಲ್ಲಿ ಚರ, ಸ್ಥಿರ–ದ್ವಿಸ್ವಭಾವ, ಕ್ರೂರ–ಸೌಮ್ಯ, ಪುರುಷ–ಸ್ತ್ರೀ–ವಾತ, ಪಿತ್ತ, ಕಫಾತ್ಮಕ ತ್ರಿಧಾತುಗಳಾಗಿವೆ.

| | | |
|---|---|---|
| ಚರ ರಾಶಿಗಳು | | ಮೇಷ, ಕರ್ಕ, ತುಲಾ, ಮಕರ |
| ಸ್ಥಿರ ರಾಶಿಗಳು | : | ವೃಷಭ, ಸಿಂಹ, ವೃಶ್ಚಿ, ಕುಂಭ |
| ದ್ವಿ ಸ್ವಭಾವ | : | ಮಿಥುನ, ಕನ್ಯಾ, ಧನು, ಮೀನ |

ಇಲ್ಲಿ ಸುಲಭಕ್ಕಾಗಿ ಮೇಷದಿಂದ ನಾಲ್ಕರಿಂದ ನಾಲ್ಕು ಹೀಗೇ ಕೇಂದ್ರ ರಾಶಿಗಳು ಒಂದೇ ಸ್ವಭಾವಕ್ಕೆ ಸೇರಿದ್ದಾಗಿವೆ. ಅದರಂತೆ ವೃಷಭ, ಹಾಗೇ ಮಿಥುನದಿಂದ – ಕೇಂದ್ರರಾಶಿಗಳೇ ಒಂದೇ ಗುಂಪಿಗೆ ಸೇರಿವೆ. ಅದರಂತೆ ವಿಷಮ ರಾಶಿಗಳು ಕ್ರೂರ ಹಾಗೂ ಪುರುಷ ರಾಶಿಗಳಾಗಿವೆ.

ಕ್ರೂರ ಪುರುಷ ರಾಶಿಗಳು: ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ

ಸೌಮ್ಯ ಸ್ತ್ರೀ ರಾಶಿಗಳು : ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ರಾಶಿಗಳು. ಇವು ಸಮ ರಾಶಿಗಳು.

| | | |
|---|---|---|
| ಪಿತ್ತಕಾರಕ ರಾಶಿಗಳು | – | ಮೇಷ, ಸಿಂಹ, ಧನು |
| ವಾತಕಾರಕ ರಾಶಿಗಳು | – | ವೃಷಭ, ಕನ್ಯಾ, ಮಕರ |
| ಕಫಕಾರಕ ರಾಶಿಗಳು | – | ಕರ್ಕ, ವೃಶ್ಚಿಕ, ಮೀನ |
| ತ್ರಿಧಾತುಕಾರಕ ರಾಶಿಗಳು | – | ಮಿಥುನ, ತುಲಾ, ಕುಂಭ |

## ರಾಶಿ ಸ್ವರೂಪಾದಿಗಳು

### ಮೇಷ:

**ರಕ್ತವರ್ಣೋ ಬೃಹದ್ ಗಾತ್ರಶ್ಚತುಷ್ಪಾದ್ ರಾತ್ರಿ ವಿಕ್ರಮಿ ॥೬॥**
**ಪೂರ್ವವಾಸಿ ನೃಪಜ್ಞಾತಿಃ ಶೈಲಚಾರೀ ರಜೋಗುಣಿ**
**ಪೃಷ್ಠೋದಯಿ ಪಾವಕೆ ಚ ಮೇಷರಾಶಿಃ ಕುಜಾಧಿಪಃ**

ಮೇಷ ರಾಶಿ ವರ್ಣ ಕೆಂಪು, ಎತ್ತರ ಶರೀರ, ಪಾದಚಾರ (ನಾಲ್ಕು ಕಾಲು) ರಾತ್ರಿ ಪರಾಕ್ರಮಿ, ಪೂರ್ವ ದಿಶಾದಲ್ಲಿ ನಿವಾಸ, ಕ್ಷತ್ರಿಯ ಜಾತಿ, ಪರ್ವತದಲ್ಲಿ ಅಲೆದಾಟ, ರಜೋ ಗುಣ, ಪೃಷ್ಠೋದಯ ರಾಶಿ, ಅಗ್ನಿ ತತ್ವ, ಮಂಗಳ ಅಧಿಪ, ರಾಶಿಯ ನಂತರ

## ವೃಷಭ

ಶ್ವೇತಃ ಶುಕ್ರಾಧಿಪೋ ದೀರ್ಘ ಚತುಷ್ಪಾಚ್ಛಾರ್ವರೀವಲಿ ।
ಯಾಮ್ಯೇಟ್ ಗ್ರಾಮ್ಯೋ ವಣಿಗ್ ಭೂಮಿ ರಜಪೃಷ್ಠೋದಯ ವೃಷಃ ॥೮॥

ಶ್ವೇತವರ್ಣ ಶುಕ್ರ ಅಧಿಪನಾಗಿ ದೀರ್ಘಶರೀರಿಯಾಗಿ, ನಾಲ್ಕು ಕಾಲುಳ್ಳವನಾಗಿ, ರಾತ್ರಿ ಬಲಶಾಲಿ, ದಕ್ಷಿಣ ದಿಕ್ಕು, ಪರ್ವತದಲ್ಲಿ ಹೊಲದಲ್ಲಿ ಸಂಚಾರ, ವೈಶ್ಯ ಜಾತಿ, ಭೂಮಿ ತತ್ವ, ರಜೋಗುಣ, ಪೃಷ್ಠೋದಯ ರಾಶಿ

## ಮಿಥುನ

ಶೀರ್ಷೋದಯೀ ನೃಮಿಥುನಂ ಸಗದಂಚ ಸವೀಣಕಮ್ ।
ಪ್ರತ್ಯಂಗ್‌ರುದ್ ದ್ವಿಪಾದ್ರಾತ್ರಿಬಲಿ ಗ್ರಾಮ ವ್ರಜೋನಿಲೀ ॥೯॥
ಸಮಗಾತ್ರೋ ಹರಿದ್ ವರ್ಣೋ ಮಿಥುನಾಖ್ಯೋ ಬುಧಾಧಿಪಃ ।
ಮಿಥುನ ಸ್ವರೂಪ ಸದಾವೀಣಾಸಹಿತ ಪುರುಷ-ಸ್ತ್ರೀ ಜೋಡಿ

ಶೀರ್ಷೋದಯ ರಾಶಿ, ಪಶ್ಚಿಮ ದಿಶಾ, ವಾಯುತತ್ವ, ಎರಡು ಕಾಲು, ರಾತ್ರಿ ಬಲಿ, ಗ್ರಾಮದಲ್ಲಿ ವಿಹಾರ, ವಾತ ಪ್ರಕೃತಿ, ಸಮಾನಾಂತರ ಶರೀರ, ಹರಿತ್ ವರ್ಣ ಅಧಿಪತಿ ಬುಧ

## ಕರ್ಕ ರಾಶಿ

ಪಾಟಲೋ ವನಚಾರಿ ಚ ಬ್ರಾಹ್ಮಣೋ ನಿಶಿ ವೀರ್ಯವಾನ್ ॥೧೦॥
ಬಹುಪಾದಿ ಸ್ಥೂಲತನುಸ್ತಥಾ ಸತ್ವಗುಣಿ ಜಲೀ ।
ಪೃಷ್ಠೋದಯೀ ಕರ್ಕರಾಶಿ ಮೃಗಾಂಶಾಧಿಪತಿಃ ಸ್ಮೃತಃ ॥೧೧॥

ಪಾಟಲ ವರ್ಣ, ವನಚಾರಿ, ಬ್ರಾಹ್ಮಣ ಜಾತಿ, ರಾತ್ರಿ ಬಲಿ, ಅನೇಕ ಪಾದವುಳ್ಳ ಚಿಕ್ಕ ಶರೀರ, ಸತ್ವಗುಣಿ, ಜಲತತ್ವ, ಪೃಷ್ಠೋದಯಿ, ಮೃಗಾಂಶನಾದ ಚಂದ್ರ ಅಧಿಪತಿಯಾದ ರಾಶಿ ಕರ್ಕ

### ಸಿಂಹ

ಸಿಂಹಃ ಸೂರ್ಯಾಧಿಪಃ ಸತ್ವಿ ಚತುಷ್ಪಾತ್ ಕ್ಷತ್ರಿಯೋ ವನಿ ।
ಶೀರ್ಷೋದಯಿ ಬೃಹದ್ ಗಾತ್ರಃ ಪಾಂಡುಃ ಪೂರ್ವೇಡ್ ದ್ವಿವಿರ್ಯವಾನ್ ॥೧೨॥

ಸಿಂಹ ರಾಶ್ಯಾಧಿಪ ಸೂರ್ಯ, ಸತ್ವಗುಣ, ನಾಲ್ಕು ಕಾಲು, ಬೃಹದಾಕಾರ ಶರೀರ, ಪಾಂಡುವರ್ಣ, ಪೂರ್ವ ದಿಶಾದಲ್ಲಿ ವಾಸ, ದಿನ ಬಲಿಯಾಗಿರುತ್ತದೆ.

### ಕನ್ಯಾ

ಪಾರ್ವತೀಯಾಥ ಕನ್ಯಾಖ್ಯಾ ರಾಶಿರ್ದಿನಬಲಾನ್ವಿತಾ ।
ಶೀರ್ಷೋದಯಾ ಚ ಮಧ್ಯಾಂಗಾ ದ್ವಿಪಾದ್ಯಾಮ್ಯಚರಾಚಸಾ ॥೧೩॥

ಸಾ ಸಸ್ಯದಹನಾ ವೈಶ್ಯಾ ಚಿತ್ರವರ್ಣಾ ಪ್ರವಂಚ್ಛನೀ
ಕುಮಾರಿ ತಮಸಾ ಯುಕ್ತಾ ಬಾಲಾಭಾವ ಬುಧಾಧಿ ಪಾ ॥೧೪॥

ಕನ್ಯಾ ರಾಶಿ, ಪರ್ವತೀಯ ಪ್ರದೇಶ, ವಿಚರಣ ದಿನ ಬಲಿ, ಶೀರ್ಷೋದಯ, ಮಧ್ಯಮ ಶರೀರ, ಎರಡು ಕಾಲು, ದಕ್ಷಿಣ ದಿಶಾದಲ್ಲಿ ವಾಸ, ಸಸ್ಯಸಹಿತ ಅಗ್ನಿಧಾರಣ, ವೈಶ್ಯ ಜಾತಿ, ಚಿತ್ರವರ್ಣ, ವಾಯು ತತ್ವ, ಕುಮಾರ ಅವಸ್ಥಾ, ತಮೋಗುಣ ಪ್ರಧಾನ, ಅಧಿಪತಿ ಬುಧ.

### ತುಲಾ

ಶೀರ್ಷೋದಯೀದ್ಯುವೀರ್ಯಾಢ್ಯೇ ಘಟಃ ಕೃಷ್ಣೋ ರಜೋಗುಣೆ ।
ಪಶ್ಚಿಮೋ ಭೂಚರೋ ಘಾತಿ ಶೂದ್ರೋ ಮಧ್ಯತನು ದ್ವಿಪಾತ್ ॥೧೫॥

ಶುಕ್ರಾದಿ ಯೋಥ

ಇದು ಶೀರ್ಷೋದಯ ರಾಶಿ, ದಿನ ಬಲಿ, ಕೃಷ್ಣ ವರ್ಣ, ರಜೋ ಗುಣಿ, ಪಶ್ಚಿಮ ದಿಶೆಯಲ್ಲಿ ವಾಸ, ಭೂಮಿಯಲ್ಲಿ ಸಂಚಾರ, ಹಿಂಸಕ ಪ್ರವೃತ್ತಿ, ಶೂದ್ರ ಜಾತಿ, ಮಧ್ಯಮ ಶರೀರ, ಎರಡು ಕಾಲು, ಶುಕ್ರ ಅಧಿಪ

### ವೃಶ್ಚಿಕ

ಸ್ವಲ್ಪಾಂಗೋ ಬಹುಪಾದ್ ಬ್ರಾಹ್ಮಣೋ ಬಲ ।
ಸೌಮ್ಯಸ್ಥೋ ದಿನವೀರ್ಯಾಢ್ಯಃ ಪಿಶಂಗೋ ಜಲಭೂವಹಃ ॥೧೬॥

ರೋಮಸ್ವಾಪ್ಯೋತಿತೀಷ್ಣಾಗ್ರೋ ವೃಶ್ಚಿಕಶ್ಚ ಕುಜಾಧಿಪಃ ।

ಚಿಕ್ಕ ಶರೀರ, ಅನೇಕ ಕಾಲುಗಳು, ಬ್ರಾಹ್ಮಣ ಜಾತಿ, ಬಿಲದಲ್ಲಿ ವಾಸ, ಉತ್ತರ ದಿಕ್ಕಿನಲ್ಲಿ ವಾಸ, ದಿನದಲ್ಲಿ ಪ್ರಾಬಲ್ಯ, ಪಿಶಂಗ ವರ್ಣ, ಜಲತತ್ವ, ಭೂಮಿಯಲ್ಲಿ ಸಂಚಾರ, ರೋಮಯುಕ್ತ ಶರೀರ, ಅತ್ಯಧಿಕ ತೇಜ, ಡಂಭ, ಅಧಿಪತಿ ಭೌಮ

## ಧನು

ಪೃಷ್ಠೋದಯಿ ತ್ವಥಧನುರ್ಗುರುಸ್ವಾಮಿ ಚ ಸಾತ್ವಿಕಃ ॥೧೭॥

ಪಿಂಗಲೋ ನಿಶಿ ವೀರ್ಯಾಢ್ಯಃ ಪಾವಕಃ ಕ್ಷತ್ರಿಯೋ ದ್ವಿಪಾತ್ ।
ಆದಾವಂತೆ ಚತುಷ್ಪಾದಃ ಸಮಗಾತ್ರೋ ಧನುರ್ಧರಃ ॥೧೮॥

ಪೂರ್ವಸ್ಥೋ ವಸುಧಾಚಾರಿ ಬಹುತೇಜಃ ಸಮನ್ವಿತಃ ।

ಧನು ರಾಶಿ ಪೃಷ್ಠೋದಯ ರಾಶಿ, ಸ್ವಾಮಿಗುರು, ಸತ್ವಗುಣ
ಪಿಂಗಲ ವರ್ಣ ರಾತ್ರಿ ಪ್ರಾಬಲ್ಯ ಅಗ್ನಿತತ್ವ ಕ್ಷತ್ರಿಯ ವರ್ಣ

ಪೂರ್ವಾರ್ಧದಲ್ಲಿ ಎರಡು ಕಾಲು, ಉತ್ತರಾರ್ಧದಲ್ಲಿ ನಾಲ್ಕು ಕಾಲು, ಸಮಾನ ಶರೀರ, ಧನುರ್ಧಾರಣ, ಪೂರ್ವದಿಕ್ಕು, ಪೃಥ್ವಿಯ ಮೇಲೆ ಸಂಚಾರ, ಅಮಿತ ತೇಜಸ್ವಿ

## ಮಕರ

ಮಂದೇಶಸ್ತಾಮಸೋ ಭೂಮಿಯಾಮ್ಯೇಟ್ ಚ ನಿಶಿ ವೀರ್ಯವಾನ್ ।
ಪೃಷ್ಠೋದಯಿ ಬೃಹದ್‌ಗಾತ್ರಃ ಕರ್ಬುರೋ ವನಭೂಚರಃ ॥19॥

ಆದೌ ಚತುಷ್ಪಾದಾಂತೆ ತು ವಿಪದೊ ಜಲಗೋ ಮತಃ ॥20॥

ಅಧಿಪತಿ ಶನಿ, ತಾಮಸ ಗುಣ, ಭೂಮಿ ತತ್ವ, ದಕ್ಷಿಣ ದಿಶಾದಲ್ಲಿ ನಿವಾಸ, ರಾತ್ರಿ ಪ್ರಾಬಲ್ಯ, ಪೃಷ್ಠೋದಯಿ, ದೊಡ್ಡ ಶರೀರ, ಚಿತ್ರವರ್ಣ, ವನ ಹಾಗೂ ಭೂಮಿಯಲ್ಲಿ ಚಲನ, ಪೂರ್ವಾರ್ಧದಲ್ಲಿ ನಾಲ್ಕು ಕಾಲುಗಳು, ಉತ್ತರಾರ್ಧದಲ್ಲಿ ಹೆಳವ (ಪಾದರಹಿತ), ನೀರಲ್ಲಿ ಸಂಚರಣ

## ಕುಂಭ

ಕುಂಭಃ ಕುಂಭಿ ನರೋ ಬಭ್ರುವರ್ಣೋ ಮಧ್ಯತನುದ್ವಿಪಾತ್
ದ್ಯುವೀರ್ಯೋ ಜಲ ಮಧ್ಯಸ್ಥೋ ವಾತ ಶೀರ್ಷೋದಯಿ ತಮಃ ॥೨೧॥

ಶೂದ್ರಃ ಪಶ್ಚಿಮ ದೇಶಸ್ಯ ಸ್ವಾಮಿ ದೈವಶಾರಿ ಸ್ಮೃತಃ ।

ಕುಂಭ ರಾಶಿ, ಕೊಡ ಹೊತ್ತ ಪುರುಷ, ಭೂರಾ ವರ್ಣ (ಬೂದು), ಮಧ್ಯಮ ಶರೀರ, ಎರಡು ಕಾಲು, ದಿನದಲ್ಲಿ ಪ್ರಾಬಲ್ಯ, ನೀರ ಮಧ್ಯ ಸಂಚಾರ, ವಾಯು ತತ್ವ, ಶೀರ್ಷೋದಯ, ತಾಮಸ ಗುಣ, ಶೂದ್ರ ಜಾತಿ, ಪಶ್ಚಿಮ ದಿಕ್ಕಿನಲ್ಲಿ ವಾಸ, ಅಧಿಪತಿ ಶನಿ.

## ಮೀನ

ಮೀನೌ ಪುಚ್ಛಾಸ್ಯಸಂ ಲಗ್ನೌ ಮೀನರಾಶಿರ್ದಿವಾ ಬಲಿ ॥೨೨॥

ಜಲೀ ಸತ್ವಗುಣಾಢ್ಯಶ್ಚ ಸ್ವಸ್ಥೋ ಜಲಚರೋ ದ್ವಿಜಃ ।
ಅಪದೋ ಮಧ್ಯದೇಹಿ ಚ ಸೌಮ್ಯಸ್ಥೋ ಹ್ಯಚಭಯೋದಯಿ ॥೨೩॥

ಸುರಾಚಾರ್ಯಾಧಿಶ್ಚೆತ್ಥಂ ರಾಶಿನಾಮುದಿತಾ ಗುಣಾಃ ॥
ತ್ರಿಂಶದ್ ಭಾಗಾತ್ಮಕಾನಾಂ ಚ ಸ್ಥೂಲ ಸೂಕ್ಷ್ಮ ಫಲಾಯ ಚ ॥೨೪॥

ಹೇ ಮುನಿಯೇ, ಮೀನ ರಾಶಿಯ ಮುಖ ಹಾಗೂ ಪುಚ್ಛಗಳೆರಡು ಸಂಲಗ್ನ ವಾಗಿವೆ (ಕೂಡಿಕೊಂಡಿವೆ) ಮೀನ ಸ್ವರೂಪ ದಿನದಲ್ಲಿ ಪ್ರಾಬಲ್ಯ ಜಲತತ್ವ ಸತ್ವಗುಣ – ಸ್ವಸ್ಥ ಮುಖ ಮುದ್ರೆ ಜಲದಲ್ಲಿ ಸಂಚರಣ ವಿಪ್ರಜಾತಿ ಪಾದರಾಹಿತ್ಯ ಮಧ್ಯಮ ಶರೀರಿ ಉತ್ತರ ದಶಾದಲ್ಲಿ ನಿವಾಸ – ಉಭಯೋದಯ ಸ್ವಾಮಿ ಗುರು

ಈ ರೀತಿ ಸ್ಥೂಲ ಹಾಗೂ ಸೂಕ್ಷ್ಮ ಫಲಾದೇಶಕ್ಕಾಗಿ ತ್ರಿಂದ್ ಭಾರಾತ್ಮಕ ($30^0$) ರಾಶಿಗಳ ಗುಣ ಪರಾಶರರಿಂದ ಹೇಳಲ್ಪಟ್ಟಿತು.

ರಾಶಿ ಗುಣ ಸ್ವರೂಪಗಳಲ್ಲಿ ಪರಾಶರರಿಗೂ ಹಾಗೂ ನಂತರದ ವರಾಹ ಮಿಹಿರಾದಿಗಳಿಗೂ ಸ್ವಲ್ಪ ವ್ಯತ್ಯಾಸ ಕಂಡುಬರುವುದನ್ನು ನಂತರ ವಿವೇಚಿಸ ಲಾಗುವುದು.

### ಜನ್ಮಕಾಲದಿಂದ ಗರ್ಭದಾನ ಸಮಯಜ್ಞಾನ

ಅಥಾತಃ ಸಂಪ್ರವಕ್ಷ್ಯಾಮಿ ಶ್ರುಣುಶಪ್ವ ಮುನಿಪುಂಗವ ।
ಜನ್ಮಕಾಲಂ ಚ ಸಂಶೋಧ್ಯ ನಿಷೇಕಂ ಪರಿಶೋಧಯೇತ್ ॥೨೫॥

ತದಹಂ ಸಂಪ್ರಕ್ಷ್ಯಾಮಿ ಮೈತ್ರೇಯ । ತ್ರಂ ವಿಧಾರಯ
ಜನ್ಮಲಗ್ನಾತ್ ಪರಿಜ್ಞಾನಂ ನಿಷೇಕಂ ಸರ್ವೇಜಂ ತು ಯತ್ ॥೨೬॥

ಯಸ್ಮಿನ್ ಭಾವೆ ಭಾನವಿಃ ಸ್ಯಾತ್ತಸ್ಯ ಮಾಂದೇರ್ಯದಂತರಮ್
ಲಗ್ನಭಾಗ್ಯಾಂತರಂ ಯೋಜ್ಯಂ ಯಚ್ಚ ರಾಶ್ಯಾದಿ ಜಾಯತೆ ॥೨೭॥

ಮಾಸಾದಿ ತನ್ಮಿತಂ ಜ್ಞೇಯಂ ಜನ್ಮತಃ ಪ್ರಾಗ್ ನಿಷೇಕಜಮ
ಯದ್ಯದೃಶ್ಯದಲೆಂಗೇಶಃ ತದೆಂದೋರ್ಭುಕ್ತಭಾಗಯುಕ್ ॥೨೮॥

ತತ್ಕಾಲೆ ಸಾಧಯೇಲ್ಲಿಗ್ನಂ ಶೋಧಯೇತ್ ಪೂರ್ವವತ್ತನುಮ್ ।
ತಸ್ಮಾಚ್ಛುಭಾಶುಭಂ ವಾಚ್ಯಂ ಗರ್ಭಸ್ಥಸ್ಯ ವಿಶೇಷತಃ ॥೨೯॥

ಶುಭಾಶುಭಂ ವದೇತ್ ಪಿತ್ರೋರ್ಜೀವನಂ ಮರಣಾ ತಥಾ ।
ಎವಂ ನಿಷೆಕಲಗ್ನೆನ ಸಮ್ಯಗ್ ಜ್ಞೆಯಂ ಸ್ವಕಲ್ಪನಾತ್

ಹೇ ಮುನಿಶ್ರೇಷ್ಠನಾದ ಮೈತ್ರೇಯನೆ, ಜನ್ಮಲಗ್ನದ ಪರಿಜ್ಞಾನದಿಂದ ಗರ್ಭದಾನದ ಸಮಯದ ಜ್ಞಾನ ಹೇಗೆ ತೆಗೆಯಬೇಕೆಂಬುದನ್ನು ವಿವರಿಸುತ್ತೇನೆ ಕೇಳು. ಯಾವ ಭಾವದಲ್ಲಿ ಶನಿಯಿರುವನೋ ಆ ಭಾವ ಹಾಗೂ ಗುಳಿಕ ಅಂತರವಿದೆಯೋ, ಅದರಲ್ಲಿ ಲಗ್ನ ಹಾಗೂ ನವಮ ಭಾವದ ಅಂತರ ಸೇರಿಸಿದರೆ, ರಾಶ್ಯಾಧಿಕವಾಗುತ್ತದೆಯೋ ಅದನ್ನು ಮಾಸ-ದಿನ-ಸಮಯವೆಂದು ಪರಿಗಣಿಸಿ ಗರ್ಭದಾನ ಸಮಯ ನಿರ್ಧರಿಸುವುದು. ಒಂದು ವೇಳೆ ಲಗ್ನೇಶ ಅದೃಶ್ಯ ಚಕ್ರಾರ್ಧದಲ್ಲಿದ್ದರೆ (ಲಗ್ನದಿಂದ ಮೊದಲಿನ 6 ರಾಶಿ) ತಯಾರಿಸಿದ ರಾಶ್ಯಾದಿಗಳಲ್ಲಿ ಚಂದ್ರನ ಭುಕ್ತಾಂಶ ಜೋಡಿಸುವುದು – ಈ ಪ್ರಕಾರ ಸಿದ್ಧಪಡಿಸಿದ ನಿಷೇಕ (ಗರ್ಭದಾನ)ದ ಲಗ್ನದ ಮೇಲಿಂದ ಪ್ರಾಣಿ ಮಾತ್ರರ ಶುಭಾಶುಭ ಫಲ ನಿರ್ಧರಿಸುವುದು. ಈ ಲಗ್ನದ ಮೇಲಿಂದ ಜಾತಕನ 'ಮಾತಾಪಿತೃ' ಜೀವನದ ಆಗುಹೋಗು ಮರಣ ರೋಗಾದಿಗಳ ಫಲಾದೇಶವನ್ನು ನಿಮ್ಮ ನಿಮ್ಮ ಬುದ್ಧಿಮತ್ತೆ ಅನುಸರಿಸಿ ಹೇಳುವುದು.

ಉದಾಹರಣೆ ಈ ಮೊದಲೇ ತೆಗೆದಂತೆ–

| | |
|---|---|
| ಗುಳಿಕ ಲಗ್ನ ಸ್ಪಷ್ಟ | 5.11.36 |
| ಲಗ್ನ ಸ್ಪಷ್ಟ | $3.2^0$ 31'.47' |
| ನವಮ ಸ್ಪಷ್ಟ | $11.2^0$ 38.9 |
| ಶನಿ ಸ್ಪಷ್ಟ | 11.2.45 |
| ಚಂದ್ರ ಭುಕ್ತಾಂಶ (6 ರಾಶಿಯಲ್ಲಿದ) | $0.6^0.0^0$ |

ಇಲ್ಲಿ ನಿಯಮದಂತೆ

(5.11.36) -11.2.45 = 6.8.51

ಗುಳಿಕ (−) ಶನಿ ಉಳಿದ ಅಂಶ

ಲಗ್ನ (3.2.31.47) − (11.2.38.9) = 3.29.53.38

ಗರ್ಭಧಾರಣೆ 6.8.51.0 ಗುಳಿಕ ಶನಿ ಅಂತರ

3.29.53.38 ನವಮ ಲಗ್ನ ಅಂತರ

0- 6- 0- 0 ಭುಕ್ತಾಂಶ (ಚಂದ್ರ)

10.14.44.38 ಪೂರ್ವ ಜನನ

ಗರ್ಭಧಾರಣ

## ಆಗಿನ ಲಗ್ನಕುಂಡಲಿ (ವೃಶ್ಚಿಕ ಲಗ್ನ)

9 ಬು. ಗು
7 ಮಂ
10 ರ
8 ರಾ
6
11 ಶು. ಶ
5 ನೇ
12 ಚಂ
2 ಕೆ
4
1 ಹ
3

| ಚಂ | ಹ | ಕೆ | |
|---|---|---|---|
| ಶು.ಶ | | | |
| ರ | | | ನೇ |
| ಬು, ಗು | ರಾ | ಮ | |

ಜೀವನದ ಪರಿಚರ್ಯೆ ಮರಣ ಮಾತಾ ಪಿತೃ ಇತ್ಯಾದಿ ನೋಡಲು ಅನುಕೂಲಕರ ರೋಗಕ್ಕೂ ಅತೀ ಮಹತ್ವ

ವಿಮರ್ಶೆ : ಮೊದಲನೇ ವಿಮರ್ಶಕ ಅಂಶ ಗರ್ಭದಾನ ಸಮಯ, ನಿಜವಾದ ಜನ್ಮಾರಂಭ. ಗರ್ಭದಾನವಾದಾಗಲೇ ನಮ್ಮ ಜನನವಾದಂತೆ. ಹೀಗಾಗಿ ಆ ದಿನವನ್ನು ಪರಿಗಣಿಸುವುದು ಅತೀ ಸೂಕ್ತ. ಪ್ರಮುಖವಾಗಿ ಪ್ರಾರಬ್ಧ ಕರ್ಮ ಅಥವಾ ದೈವ ನೋಡಲು ನಾವು ಜನ್ಮಜನ್ಮಾಂತರದ ಪ್ರಾದುರ್ಭಾವವಾದಾಗ ಮುಖ್ಯ ಅಂಶ ಈ ಭೂಮಿಯ ಅಂದರೆ ಗರ್ಭಪ್ರವೇಶವೇ ಮುಖ್ಯವಾಗಿದೆ.

ಆದರೂ ಈ ಕೆಲವು ಅಂಶ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಅದರಲ್ಲಿ

ಪ್ರಮುಖವಾಗಿ ಮಾಸ ಮಾಸಾಧಿ ಪತಿಗಳನ್ನು ಗರ್ಭದಲ್ಲಿ ಬೆಳವಣಿಗೆಯನ್ನು ಅವಲೋಕಿಸುವುದು ಪ್ರಮುಖ ಅಂಶವಾಗಿದೆ.

**ಮಾಸಗಳಂತೆ ಬೆಳವಣಿಗೆ**

| ಮಾಸ | 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|---|
| ಸ್ಥಿತಿ | ಕಲ | ಘನ | ಅಂಕುರ | ಅಸ್ಥಿ | ಚರ್ಮ | ಕೇಶ | ಚೇತನ | - | - | - |
| ಸ್ವಾಮಿ | ಶುಕ್ರ | ಮಂಗಳ | ಗುರು | ರವಿ | ಚಂದ್ರ | ಶನಿ | ಬುಧ | ಲಗ್ನ | ಚಂ | ರ |

ಮಾಸದಲ್ಲಿ ಪ್ರತಿ ತಿಂಗಳೂ ಆಗುವ ಪ್ರಗತಿಯಂತೆ ಮಾಸಾಧಿಪತಿಗಳಿರುವರು. ಗರ್ಭಧಾರಣ ಲಗ್ನ 'ಕಲ' ತೋರಿಸುತ್ತದೆ. ಅಂಕುರ ನಿಜ ಪ್ರಾರಂಭವಾದ್ದರಿಂದ ಅದನ್ನೇ ಗಣಿಸಬೇಕೆಂದು ಕೆಲವರ ಮತವಾದರೂ ವ್ಯಕ್ತಿಯ ಪ್ರಾರಂಭ ಕಲವೆ. ಆದ್ದರಿಂದ ಅದನ್ನೇ ಗ್ರಹಿಸುವುದು ಚೇತನ ಪ್ರಾದುರ್ಭಾವವಾದೊಡನೆ ಲಗ್ನವನ್ನೇ ಗ್ರಹಿಸುವುದೆಂದು ಕೆಲವರ ವಾದ. ರೋಗಾದಿಗಳನ್ನು ಗ್ರಹಿಸುವಾಗ ಆಯಾ ಮಾಸಾಧಿಪರನ್ನೇ ಪರಿಗಣಿಸಬೇಕಾಗುವುದು. ಅಂಗಹೀನತ್ವವನ್ನು ಇದರ ಮೇಲೆ ಕಂಡುಹಿಡಿಯಲು ಬರುವುದರಿಂದ ಪ್ರತಿ ಅಂಶವೂ ಪ್ರಮುಖವೆ. ಗರ್ಭಧಾರಣ ಲಗ್ನದ ಮೇಲಿಂದ ಮಾಸಾಧಿಪರ ಬಲಾಬಲದಿಂದ ರೋಗಾದಿಗಳನ್ನು ನಿರ್ಧರಿಸಲು ಬರುವುದು. ಅದಕ್ಕಾಗಿ ಪರಾಶರರು ಈ ಅಂಶ ವಿಶೇಷ ಹೇಳಿರುವರು. ವೈದ್ಯಕೀಯ ಜ್ಯೋತಿಷ್ಯದಲ್ಲಿ ಈ ಅಂಶ ಪ್ರಮುಖ ಪಾತ್ರವನ್ನಾಡುತ್ತವೆ. ಅದರಂತೆ ದೈವಬಲಾದಿಗಳನ್ನು ನಿರ್ಧರಿಸಲು ಗರ್ಭಧಾರಣ ಕುಂಡಲಿ ಅವಶ್ಯಕವಾಗಿದೆ. ಕೆಲವರು ಪ್ರತಿ ಮಾಸಕ್ಕೊಂದು ಕುಂಡಲಿ ತೆಗೆಯಲು ಹೇಳುವರು. ಆದರೆ ನನ್ನ ಅನುಭವಕ್ಕೆ ಅದು ಸರಿಹೊಂದಿಲ್ಲ. ಈ ವಿಷಯ ಅವರವರ ಅನುಭವಕ್ಕೆ ಬಿಟ್ಟಿದ್ದು. ದೈಹಿಕ ಮಾನಸಿಕ ಬೆಳವಣಿಗೆ ನೋಡಲು ಗರ್ಭಧಾರಣ ಕುಂಡಲಿ ಅವಶ್ಯಕವಾಗಿ ನೋಡಲೇಬೇಕು. ಅದು ನನ್ನ ಅನುಭವ.

ರಾಶಿಸ್ವರೂಪ ವಾಸಸ್ಥಾನದ ಬಗ್ಗೆ ಸ್ವಲ್ಪ ಪರಾಶರರ ಮುಂದಿ ನನವರಿಗೂ ಪರಾಶರರಿಗೂ ವ್ಯತ್ಯಾಸ ಕಂಡರೂ ಮುಂದಿನವರು ಕೇವಲ ಪ್ರಾಣಿಯೆಂದು ಗ್ರಹಿಸಿ ನಿರ್ಧರಿಸುವುದರಿಂದ ವ್ಯತ್ಯಾಸವಿದೆ. ಪರಾಶರೀಯು ಶುದ್ಧವಾದುದು.

**॥ ಇತಿ ಬೃಹತ್ ಪರಾಶರ ಹೋರಾಯಂ ರಾಶಿಶೀಲಾಧ್ಯಾಯ ಸಮಾಪ್ತಂ ॥5॥**

## ೬ನೇ ಅಧ್ಯಾಯ

# ಅಥ ಷೋಡಶ ವರ್ಗವರ್ಣನಾಧ್ಯಾಯಃ

**ಮೈತ್ರೇಯ ಉವಾಚ:**

ಗ್ರಹಾಣಾಮಥ ರಾಶಿನಾಂ ಯೇ ಗುಣಾಭವತೋದಿತಾಃ
ಶ್ರುತಾ ಇದಾನೀಂ ಶುಶ್ರೃಷು ಭಾರ್ಗವ ಭೇ ದಾಂಶ್ಚ ತಾನ್‌ವದ ॥೧॥

**ಮೈತ್ರೇಯ ಕೇಳಿದುದು–**

ತಮ್ಮ ಮುಖಾಂತರ ಹೇಳಲ್ಪಟ್ಟ ಗ್ರಹಗಳ ಹಾಗೂ ರಾಶಿಗಳ ಗುಣ ಸ್ವಭಾವ ಸ್ವರೂಪಾದಿಗಳ ಬಗ್ಗೆ ಕೇಳಿದ್ದೇನೆ. ಈಗ ನಾನು ಭಾವಗಳ ಭೇದವನ್ನು ಕೇಳಬಯಸುತ್ತೇನೆ. ಅದನ್ನು ಹೇಳುವಿರಾಗಿರಿ.

**ಪರಾಶರ ಉವಾಚ:**

ವರ್ಗಾನ್ ಷೋಡಶ ಯತ್ರಾಹ ಬ್ರಹ್ಮಾಲೋಕ ಪಿತಾಮಹಃ
ತದಹಂ ಸಂಪ್ರವಕ್ಷ್ಯಾಮಿ ಮೈತ್ರೇಯ ಶ್ರೂ ಯತಾಮಿತಿ ॥೨॥

ಜಗತ್ತಿನ ಪಿತಾಮಹರಾದ ಬ್ರಹ್ಮದೇವರು ಹದಿನಾರು ವರ್ಗಗಳ ಯಾವ ವರ್ಣನೆ ಮಾಡಿದ್ದಾರೋ ಅವುಗಳನ್ನು ಹೇಳುತ್ತೇನೆ. ಮೈತ್ರೇಯರೆ ಕೇಳುವಿರಾಗಿರಿ.

### ಷೋಡಶ ವರ್ಗ*

ಕ್ಷೇತ್ರಂ ಹೋರಾಚ ದ್ರೇಷ್ಕಾಣಾಸ್ತುರ್ಯಾಂಶಃ ಸಪ್ತಮಾಂಶಕಃ
ನವಾಂಶೋ ದಶಮಾಂಶಶ್ಚ ಸೂರ್ಯಾಶಃ ಷೋಡಶಾಂಶತಸ್ತಿಕಃ ॥೩॥

ಖವೇದಾಂಶೋಕ್ಷವೇದಾಂಶಃ ಷಷ್ಟ್ಯಾಂಶಶ್ಚ ತತಃ ಪರಮ್ ॥೪॥

* *ಕೊನೆಯಲ್ಲಿ ವಿಮರ್ಶೆ ಕೊಡಲಾಗಿದೆ.*

ಮೂಲ ಲಗ್ನಸಾಧನೆಯ ನಂತರ ಯಾವ ಅಂಶ ಪರಿಗಣಿಸುವುದು ಎಂಬುದನ್ನು ಸೂಚಿಸಿ, 16 ವರ್ಗ ಮಾತ್ರ ವಿವರಿಸಿದ್ದಾರೆ.

1) ಕ್ಷೇತ್ರ 2) ಹೋರಾ 3)ದ್ರೇಷ್ಕಾಣ 4) ಚತುರ್ಥಾಂಶ 5) ಸಪ್ತಮಾಂಶ 6) ನವಮಾಂಶ 7) ದಶಮಾಂಶ 8) ದ್ವಾದಶಾಂಶ 9) ಷೋಡಶಾಂಶ 10) ವಿಶಾಂಶ 11) ಚತುರ್ವಿಶಾಂಶ 12) ಸಪ್ತವಿಂಶಾಂಶ 13) ತ್ರಿಂಶಾಂಶ 14) ಸ್ವವೇದಾಂಶ

(ಖವೇದಾಂಶ) 15) ಅಕ್ಷವೇದಾಂಶ 16) ಷಷ್ಟ್ಯಾಂಶ

"ತತ್ಕ್ಷೇತ್ರಂ ತಸ್ಯ ಖೇಟಸ್ಯ ರಾಶೇರ್ಯೋ ಯಸ್ಯ ನಾಯಕಃ ।
ಸೂರ್ಯೇಂದ್ವೋರ್ವಿಷಮೇ ರಾಶೌಸಮೇ ತದ್ ವಿಪರೀತಕಮ್ ॥೫॥

ಪಿತರಶ್ಚಂದ್ರ ಹೋರೇಶ ದೇವಾ ಸೂರ್ಯಸ್ಯ ಕೀರ್ತ್ತಿತಾಃ ।
ರಾಶ್ಯಾರ್ಧೇ ಭವೇದ್ಧೋರಾಸ್ತಾಶ್ಚತುರ್ವಿಂಶತಿಃ ಸ್ಮೃತಾ ॥೬॥

ಮೇಷಾದಿ ತಾಸಾಂ ಹೋರಾಣಾಂ ಪರಿವೃತ್ತಿದ್ವಯಂ ಭವೇತ್ ।

ಯಾವ ರಾಶಿಗೆ ಯಾವ ಗ್ರಹ ಅಧಿಪತಿಯಾಗಿದೆಯೋ ಆ ಗ್ರಹಕ್ಕೆ ಆ ರಾಶಿ ಕ್ಷೇತ್ರವಾಗಿರುತ್ತದೆ. ಮೇಷ ಮಿಥುನ ಆದಿ ವಿಷಮ ರಾಶಿಗಳ ಪೂರ್ವಾರ್ಧ $15^0$ ಸೂರ್ಯ ಹೋರಾ ಅದರಂತೆ ಉತ್ತರಾರ್ಧ $15^0$ ಚಂದ್ರ ಹೋರಾ ($15^0$ $30^0$) ಹಾಗೂ ವೃಷಭ ಕರ್ಕ ಆದಿ ಸಮರಾಶಿಗಳ ಪೂರ್ವಾರ್ಧ ($0^0.15^0$) $15^0$ ಅಂಶ ಚಂದ್ರ ಹೋರಾ ಉತ್ತರಾರ್ಧ $15^0$ ($15^0.30^0$) ಸೂರ್ಯ ಹೋರಾ ಆಗಿರುತ್ತದೆ. ಚಂದ್ರ ಹೋರಾದ ಅಧಿದೇವತೆ ಪಿತೃಗಣ ಸೂರ್ಯ ಹೋರಾದ ಅಧಿದೇವತೆ ದೇವಗಣ ರಾಶ್ಯಾರ್ಧವನ್ನು ಹೋರಾ ಎನ್ನುವರು ಅಥ 24 ಆಗುತ್ತವೆ. ಹೋರಾದಲ್ಲಿ ಮೇಷಾದಿ ರಾಶಿಗಳ ಎರಡು ಆವೃತ್ತಿಗಳಾಗುತ್ತವೆ.

ಉದಾಹರಣೆ : ಲಗ್ನ $3.2^0$ $-31.47$ ಇದ್ದು ಕರ್ಕ ರಾಶಿಯಾಗಿ ಚಂದ್ರ ಅಧಿಪತಿಯಾಗುತ್ತಾನೆ. ಆದರೆ ಚಂದ್ರ ಸೂರ್ಯರಿಗೆ ಕ್ಷೇತ್ರಾಧಿಪತಿ ಹೇಳಲಾಗಿಲ್ಲ ವಾದ್ದರಿಂದ ಉಳಿದ ಗ್ರಹಗಳಿಗೆ ಈ ರೀತಿ ಕ್ಷೇತ್ರಾಧಿಪತ್ಯ ಹೇಳಿದ್ದಾರೆ.

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಕ್ಷೇಮ ಸ್ವಾಮಿತ್ವ | ಸಿಂಹ | ಕರ್ಕ | ಮೇಷ | ಮಿಥುನ | ಧನು | ವೃಷಭ | ಮಕರ |
| ಸ್ವಕ್ಷೇತ್ರ | + | + | ವೃಶ್ಚಿಕ | ಕನ್ಯಾ | ಮೀನ | ತುಲಾ | ಕುಂಭ |

## ಶುದ್ಧ ಹೋರಾ*

| ಸ್ವಾಮಿ | ರಾಶಿ | ಮೇಷ | ವೃಷಭ | ಮಿಥುನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|---|
| ದೇವತೆ ಸಿಂಹ ದೇವ ಗಣ | ಅಂಶ 0°.15° | 1 ದೇವ | 3 ಪಿತೃ | 5 ದೇವ | 7 ಪಿ | 9 ದೆ | 11 ಪಿ | 1 ದೆ | 3 ಪಿ | 5 ದೆ | 7 ಪಿ | 9 ದೆ | 11 ಪಿ |
| ಕರ್ಕ ಪಿತೃ ಗಣ | 15°.30° | 2 ಪಿ | 4 ದೇ | 6 ಪಿ | 8 ದೇ | 10 ಪಿ | 12 ದೇ | 2 ಪಿ | 6 ದೇ | 8 ಪಿ | 10 ದೇ | 12 ಪಿ | ದೇ |

## ಪ್ರಚಲಿತ ಹೋರಾ+

| ರಾಶಿ ಅಂಶ | ಮೇಷ | ವೃಷಭ | ಮಿಥುನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| 15° | 5 ದೇ | 4 ಪಿ | 5 ದೇ | 4 ಪಿ | 5 ದೇ | 4 ಪಿ | 5 ದೇ | 4 ಪಿ | 5 ದೆ | 4 ಪಿ | 5 ದೇ | 4 ಪಿ |
| 30° | 4 ಪಿ | 5 ದೇ | 4 ಪಿ | 5 ದೇ | 4 ಪಿ | 5 ದೇ | 4 ಪಿ | 5 ದೇ | 4 ಪಿ | 5 ದೇ | 4 ಪಿ | 5 ದೇ |

## ದ್ರೇಷ್ಕಾಣ

ರಾಶಿ ತ್ರಿಭಾಗಾ ದ್ರೇಷ್ಕಾಣಾಸ್ತೆ ಚ ಷಟ್‌ತ್ರಿಂಶದೀರಿತಾಃ ।
ಪರಿವೃತ್ತತ್ರಯಂ ತೇಷಾ ಮೇಷಾದೇಃ ಕ್ರಮಶಃ ಭವೇತ್ ॥೭॥

ಸ್ವಪಂಚನವಮಾನಾಂ ಚ ರಾಶೀನಾಂ ಕ್ರಮಶಶ್ಚ ತೆಶ್ಚ ತೆ ।
ನಾರದಾಗಸ್ತಿದುರ್ವಾಸಾ ದ್ರೇಷ್ಕಾಣೇಶಾಶ್ವರಾದಿಷು ॥೮॥

ರಾಶಿಯನ್ನು 3 ಭಾಗ ಮಾಡಿದಾಗ 10, 10, 10 ಮೂರು ಭಾಗಗಳಾಗುವುವು. ಇವಕ್ಕೆ ದ್ರೇಷ್ಕಾಣವೆನ್ನುವರು. ಮೊದಲಿನ 10°ಕ್ಕೆ ಪ್ರಥಮ ದ್ರೇಷ್ಕಾಣವೆನ್ನುವರು. 11°.20°ದವರೆಗೆ ದ್ವಿತೀಯ ದ್ರೇಷ್ಕಾಣ 20°.30°ದವರೆಗೆ ತೃತೀಯ ದ್ರೇಷ್ಕಾಣವೆನ್ನುವರು. ಒಟ್ಟು ದ್ರೇಷ್ಕಾಣಗಳು 36 ಆಗುತ್ತವೆ. ಪ್ರಥಮ ದ್ರೇಷ್ಕಾಣ ಅದೇ ರಾಶಿಯಾದರೆ ದ್ವಿತೀಯ ದ್ರೇಷ್ಕಾಣ ಪಂಚಮ ರಾಶಿಯಾಗುವುದು. ತೃತೀಯ ದ್ರೇಷ್ಕಾಣ 9ನೇ ರಾಶಿಯಾಗುವುದು. ಚರಸ್ಥಿರ ದ್ವಿಸ್ವಭಾವ ರಾಶಿಯ ಅಧಿಪರು ಕ್ರಮವಾಗಿ ನಾರದ, ಅಗಸ್ತ್ಯ, ದೂರ್ವಾಸರಾಗುವರು.

ಕೋಟಿ ಉದಾಹರಣೆಯಲ್ಲಿ ಲಗ್ನ 3.2°.31'.47" ಆದ್ದರಿಂದ ಕರ್ಕ ಪ್ರಥಮ

ದ್ರೇಷ್ಕಾಣವೇ ಆಗಿ ಚರರಾಶಿ ಆಗಿ ನಾರದರೇ ಅಧಿದೇವತೆಯಾಗುವರು.

## ಸ್ವಷ್ಟಾರ್ಥ ದ್ರೇಷ್ಕಾಣ ಚಕ್ರಗಳು

## ಶುದ್ಧ ದ್ರೇಷ್ಕಾಣ+

| ರಾಶಿ ಅಂಶ ದೇವ | ಮೇಷ | ವೃಷಭ | ಮಿಥುನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| 0-10 ನಾರದ | 1 | 4 | 7 | 10 | 1 | 4 | 7 | 10 | 1 | 4 | 7 | 10 |
| 0°.20° ಅಗಸ್ತ್ಯ | 2 | 5 | 8 | 11 | 2 | 5 | 8 | 11 | 2 | 5 | 8 | 11 |
| 20°.30° ದೂರ್ವಾಸ | 3 | 6 | 9 | 12 | 3 | 6 | 9 | 12 | 3 | 6 | 9 | 12 |

## ಪ್ರಚಲಿತ ಹೋರಾ

| ರಾಶಿ ಅಂಶ | ಮೇಷ | ವೃಷಭ | ಮಿಥುನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| 0-10° | 1 ನಾ | 2 ಅ | 3 ದೂ | 4 ನಾ | 5 ಅ | 6 ದೂ | 7 ನಾ | 8 ಅ | 9 ದೂ | 10 ನಾ | 11 ಅ | 12 ದೂ |
| 10°.20° | 5 ಅ | 6 ದೂ | 7 ನಾ | 8 ಅ | 9 ದೂ | 10 ನಾ | 11 ಅ | 12 ದೂ | 1 ನಾ | 2 ಅ | 3 ದೂ | 4 ನಾ |
| 20°.30° | 9 ದೂ | 10 ನಾ | 11 ಅ | 12 ದೂ | 1 ನಾ | 2 ಅ | 3 ದೂ | 4 ನಾ | 5 ಅ | 6 ದೂ | 7 ನಾ | 8 ಅ |

## ಚತುರ್ಥಾಂಶ

ಸ್ವರ್ಕ್ಷಾದಿ ಕೇಂದ್ರಪತಯಸ್ತುರ್ಯಾಶೇಶಃ ಕ್ರಿಯಾದಿಷು ।
ಸನಕಶ್ಚ ಸನಂದಶ್ಚ ಕುಮಾರಶ್ಚ ಸನಾತನಃ ॥೯॥

ಯಾವುದೇ ರಾಶಿಯ ಚತುರ್ಥಾಂಶದ ಸ್ವಾಮಿ ಪ್ರಥಮ ಚತುರ್ಥಾಂಶಕ್ಕೆ ಅದೇ ರಾಶ್ಯಾಧಿಪತಿಯಾಗಿದ್ದು ಎರಡನೇ ಭಾಗಕ್ಕೆ ಅದರ ಚತುರ್ಥಾಧಿಪ 3ನೇ ಭಾಗಕ್ಕೆ ಅದರ ಸಪ್ತಮಾಧಿಪ ಕೊನೇ ಭಾಗಕ್ಕೆ ಅದರ ದಶಮಾಧಿಪನಾಗಿರುತ್ತಾನೆ. ಮೇಷದ 1ನೇ ಭಾಗಕ್ಕೆ ಮೇಷ 2ನೇ ಭಾಗಕ್ಕೆ ಕರ್ಕ 3ನೇ ಭಾಗಕ್ಕೆ ತುಲಾ 4ನೇ ಭಾಗಕ್ಕೆ ಮಕರ– ಈ ರೀತಿಯಾಗಿದ್ದು ಅದರ ದೇವತೆಗಳ ಎಲ್ಲ ರಾಶಿಗಳ ಪ್ರಥಮ ಭಾವಕ್ಕೆ ಸನಕ

## ಷೋಡಶ ವರ್ಗ

ಅಥ ವಕ್ಷ್ಯೇ ವಿಶೇಷಣ ವಿಶ್ವಕಾಂ ಮಮ ಸಮ್ಮತಾವಮ್ ॥೨೦॥

ಕ್ರಮಾತ್ ಷೋಡಶ ವರ್ಗಾಣಾಂ ಕ್ಷೇತ್ರಾಧೀನಾಂ ಪ್ರಥಕ್ ಪ್ರಥಕ್ಃ
ಹೋರಾತ್ರಿಶಾಂಶ ದೃಕ್ಕಾಣೆ ಕುಚಂದ್ರಶಸಿನಃ ಕ್ರಮಾತ್ ॥೨೨॥

ಕಲಾಂಶಸ್ಯ ದ್ವಿಯಂ ಜ್ಞೇಯಂ ತ್ರಯಂ ನಂದಕಾಸ್ಯಚ
ಕ್ಷೇತ್ರೇ ಸಾರ್ಧತ್ರಯಂ ವೇದಾಃ ಸ್ಮೃತಾಃ ಷಷ್ಟ್ಯಾಂಕಸ್ಯ ಹಿ ॥೨೩॥

ಅರ್ಧಮರ್ಧ ಚ ಶೇಷಾಣಾಂ ಹ್ಯೂಯೆತತ್ ಸ್ವೀಯಮುದಾಹೃತವಮ್
ಪೂರ್ಣ ವಿಶ್ವಾಬಲಂ ವಿಂಶೋಧೃತಿಃ ಸ್ಯಾದಧಿಮಿತ್ರಕೆ ॥೨೪॥

ಮಿತ್ರೇ ಪಂಚದಶ ಪ್ರೋಕ್ತಂ ಸಮೇದಶ ಪ್ರಕೀತಿತಮ್
ಶಾತೌಸಪ್ತಾಧಿಶತ್ರೌ ಚ ಪಂಚ ವಿಶ್ವಾಭೂಂ ಭವೇತ್ ॥೨೫॥

ಹೇ ಮೈತ್ರೇಯನೆ ನಾನು ಷೋಡಶ ವರ್ಗಗಳ ಅಂದರೆ ಕ್ಷೇತ್ರ, (ಲಗ್ನಾದಿ)ಗಳ ವಿಂಶೋದಕ ಬಲ 2 ವಿಧವಾಗಿ ಹೇಳುತ್ತೇನೆ. ಹೋರಾ ತ್ರಿಂಶಾಂಶ ದ್ರೇಷ್ಕಾಣದಲ್ಲಿ ಕ್ರಮಶಃ 1, 1, 1 ಬಲವಿದ್ದು ಷೋಡಶಾಂಶದಲ್ಲಿ 2 ನವಾಂಶದಲ್ಲಿ 3, ಕ್ಷೇತ್ರ (ಲಗ್ನದಲ್ಲಿ) $3^{1}/_{2}$ ಬಲವಾದರೆ ಷಷ್ಟ್ಯಾಂಶ 4 ಉಳಿದೆಲ್ಲ ವರ್ಗಗಳಲ್ಲಿ 5 ಬಲವುಳ್ಳದ್ದಾಗಿದ್ದರೆ ಪ್ರತ್ಯೇಕದಲ್ಲಿ ಅರ್ಧ ಅರ್ಧ ಬಲವುಳ್ಳದ್ದಾಗಿರುತ್ತವೆ. ಈ ಪ್ರಕಾರ ಷೋಡಶಾಂಶ ವರ್ಗೀಯ ಸಮಸ್ತ ಬಲ ಸ್ವವರ್ಗದಲ್ಲಿ 20 ಅಧಿಮಿತ್ರನ ಮನೆಯಲ್ಲಿ 18 ಮಿತ್ರನ ಮನೆಯಲ್ಲಿ 15, ಸಮನ ಮನೆಯಲ್ಲಿ 10, ಶತ್ರುವಿನ ಮನೆಯಲ್ಲಿ 7, ಅಧಿಶತ್ರುವಿನ ಮನೆಯಲ್ಲಿ 5 ಬಲವುಳ್ಳದ್ದಾಗಿರುತ್ತವೆ.

## ಸ್ಫುಟವಿಂಶೋಪಕ ಬಲ

ವರ್ಗ ವಿಶ್ವಾಃ ಸ್ವವಿಶ್ವಾಧ್ನಾಃ ಪನರ್ವಿಂಶತಿ ಭಾಜಿತಾಃ ।
ವಿಂಶೋಪಕಂ ಫಲಾರ್ಹ ತತ್ಪಂಚಮೇನಂ ಫಲದ ನಹಿ ॥೨೬॥

ತದೂರ್ಧ್ವ ಸ್ವಲ್ಪಫಲದಂ ದಶೋರ್ಧ್ವ ಮಧ್ಯಮ ಸ್ಮೃತಮ್ ।
ತಥ್ಯೂರ್ಧ್ವ ಪೂರ್ಣ ಫಲದಂ ಬೊಧ್ಯಂ ಸರ್ವ ಖಚಾರಿಣಾಮ್ ॥

ಅಧಿಮಿತ್ರ ಆದಿ ಕಥಿತ ವಿಂಶೋಪಕದಿಂದ ವರ್ಗವಿಶ್ವಾವನ್ನು ಗುಣಿಸಿ 30ರಿಂದ ಭಾಗಿಸಲು ಆದರ ದೂರ್ವದಲ್ಲಿ ಫಲೋಪಯುಕ್ತ ಸ್ಪಷ್ಟ ವಂಶೋಪಯುಕ್ತ ಬಲ

ಬರುತ್ತದೆ. 5ಕ್ಕಿಂತ ಕಡಿಮೆಯಾದರೆ ಫಲಪ್ರದವಾಗಲಾರದು. ಅದು 5ರಿಂದ ಅಧಿಕ 10ರ ಒಳಗಾಗಿದ್ದರೆ ಸ್ವಲ್ಪ ಬಲ 15ರವರೆಗೆ ಇದ್ದರೆ ಮಧ್ಯಮ ಬಲ ಹಾಗೂ 15ರಿಂದ 20 ಇದ್ದರೆ ಪೂರ್ಣ ಬಲಗ್ರಹವಾಗುತ್ತದೆ.

### ಉದಯಾಸ್ತ ವಿಂಶೋಪಕ

ಅಥನ್ಯಾದಪಿ ವಕ್ಷ್ಯಾಯಿ ಮೈತ್ರೇಯ ತ್ವಂ ವಿಧಾರಯ
ಖೇಟಾಃ ಪೂರ್ಣಫಲಂ ದುದ್ಯುಃ ಸೂರ್ಯಾತ್ಸಪ್ತಮಕೆಸ್ಥಿತಾಃ ॥೨೮॥

ಫಲಾಭಾವಾಂ ವಿಜ್ಞಾನೀಯಾತ್ ಸಮೇ ಸೂರ್ಯನಭಶ್ವರೇ ।
ಮಧ್ಯೆಲಾನುಪಾತಾತ್ ಸರ್ವತ್ರ ಹೃದಯಸ್ತು ವಿಶೋಪಕಕಾಃ ॥೨೯॥

ಇಲ್ಲಿ ಪ್ರಮುಖವಾಗಿ ಗಣಿಸಬೇಕಾದ ಅಂಶ ಸೂರ್ಯನಿಂದ ಸಪ್ತಮದಲ್ಲಿರುವ ಗ್ರಹ ಪೂರ್ಣ ಫಲದಾಯಿಯಾಗಿದ್ದು ಸೂರ್ಯಸಮಾನ ಗ್ರಹ ನಿಷ್ಫಲ ಗ್ರಹವಾಗುತ್ತಿದೆ. ಸೂರ್ಯ ಅವನ ಸಪ್ತಮ ಮಧ್ಯಗ್ರಹ ಅನುಪಾತದಂತೆ ಫಲದಾಯಕವಾಗುತ್ತದೆ ಅಂದರೆ 6 ರಾಶಿ ಅಂತರ ಪೂಜಾಫಲ ಈ ಮಧ್ಯದಲ್ಲಿ – ಅನುಪಾತದಂತೆ ಫಲ ಗ್ರಹಿಸುವುದು ಈ ಫಲ ವಿಂಶೋಪಕ ಬಲ ನಿರ್ಣಯದಲ್ಲಿ ಆಚರಣೀಯ.

ವರ್ಗವಿಶ್ವಾಬಲಂ ಜ್ಞೇಯಂ ಫಲಮಸ್ಯ ದ್ವಿಜರ್ಷಭಃ ।
ಯಚ್ಚಯತ್ರಫಲಂ ಬುದ್‌ಧ್ವಾತತ್ ಫಲಂ ಪರಿಕೀರ್ತಿತವಮ್ ॥೩೦॥

ವರ್ಗ ವಿಶ್ವಾಬಲಂ ಚಾದಾವುದಯಾಸ್ತಮತಃ ಪರವಮ್
ಪೂರ್ಣ ಪೂರ್ಣೇತಿಪೂರ್ಣ ಸ್ಯಾತ್ ಸರ್ವದೈವಂ ವಿಚಿಂತಯೇತ್ ॥೩೧॥

ಹೀನಂ ಹಿನೋತಿಹೀನಂಸ್ಯಾತ್ ಸ್ವಲ್ಪೇಲ್ಪಾತ್ಯಲ್ಪಕಂ ಸ್ಮೃತಮ್ ।
ಮಧ್ಯಂ ಮಧ್ಯೇತಿಮಧ್ಯಂ ಸ್ಯಾದ್ ಯಾವದಸ್ಯ ದಶಾಸ್ಥಿತಿಃ ॥೩೨॥

ಹೇ ದ್ವಿಜಶ್ರೇಷ್ಠನೆ, ಗ್ರಹಗಳ ವಿಂಶೋಪಕ ಬಲ ತಿಳಿದುಕೊಂಡು ಎಲ್ಲಿ ಯಾವ ಫಲ ಇದೆಯೋ ಆ ಫಲ ಹೇಳುವುದು ಪ್ರಥಮತಃ ವರ್ಗ ವಿಂಶೋಪಕ ನಂತರ ಉದಾಯಾಸ್ತ ವಿಂಶೋಪಕ ತೆಗೆದು ಹೇಳುವುದು ಪೂರ್ಣ ವಿಂಶೋಪಕದಲ್ಲಿ ಪೂರ್ಣ. ಅತೀ ಪೂರ್ಣ (ಅಂಶಾತ್ಮಕ) ವಿಂಶೋಪಕದಲ್ಲಿ ವಿಶೇಷ ಫಲ ಮಧ್ಯಮದಲ್ಲಿ ಮಧ್ಯಮಹೀನ – ಅತೀ ಹೀನದಲ್ಲಿ ಅದೇ ಫಲ ನಿರ್ದೇಶಿವುದು ಸ್ವಲ್ಪ –

ಅತೀ ಸ್ವಲ್ಪ – ತಾತ್ಪರ್ಯವೆಂದೇ ಪೂರ್ಣ ಮಧ್ಯಮ ಸ್ವಲ್ಪ ದಿನದಲ್ಲಿ (ವಿಂಶೋಪಕದಲ್ಲಿ) ಭೇದವಿದ್ದು ಪ್ರತಿಯೊಂದರಲ್ಲಿ ಅತೀ ಎಂಬ ಭೇದವೂ ಇದೆ. ಅಂದರೆ ಪೂರ್ಣದಲ್ಲಿ 15ರಿಂದ $17^1/_2$ - ಅತೀ ಪೂರ್ಣದಲ್ಲಿ $17^1/_2$ರಿಂದ 20ರವರೆಗೆ ಅತೀ ಹೀನದಲ್ಲಿ 0 $2^1/_2$ರವರೆಗೆ ಹೀನ $2^1/_2$ಯಿಂದ 5, 5ರಿಂದ $7^1/_2$ ಮಧ್ಯಮ (ಸ್ವಲ್ಪ ಅತೀ $7^1/_2$ರಿಂದ 10ರವರೆಗೆ ಮಧ್ಯಮ (ಅತೀ) ಈ ರೀತಿ ಫಲಾದೇಶ ಮಾಡುವುದು.

## ಕೇಂದ್ರಾದಿ ಸಂಜ್ಞೆ

ಅಥಾ ಅನ್ಯದಪಿ ವಕ್ಷ್ಯಯಾಮಿ ಮೈತ್ರೇಯ ಶೃಣು ಸವ್ರತ
ಲಗ್ನ ತುರ್ಯಾಸ್ತವಿಯಂತಾಂ ಕೇಂದ್ರಸಂಜ್ಞಾ ವಿಶೇಷತಃ ॥೩೩॥

ದ್ವಿಪಂಚರಂಧ್ರ ಲಾಭಾನಾಂ ಜ್ಞೇಯ ಪರಫಣಾ ಭಿಧಾ ।
ತ್ರಿಪಡ್ ಭಾಗ್ಯವ್ಯಯಾನಾಂ ಸ್ಯಾದಾಪೋಕ್ಲಿಮ್ ಮಿತಿ ದ್ವಿಜ ॥೩೪॥

ಲಗ್ನಾತ್ ಪಂಚಮ ಭಾಗ್ಯಸ್ಯ ಕೋಣಸಂಜ್ಞೆ ವಿಧೀಯತಿ
ಷಷ್ಠಾಷ್ಟವ್ಯಯಮಭಾವಸ್ತು ದುಃಖ ಸಂಜ್ಞಾ ಸ್ತ್ರೀಕಸಂಜ್ಞೆಶಾಃ ॥೩೫॥

ಚತುರಸ್ತ್ರಂ ತುರ್ಯಾರಂಧ್ರಂ ಕಥಯಂತಿ ದ್ವಿಜೋತ್ತಮ
ಸ್ವಸ್ಥಾದುಪಚಯರ್ಕ್ಷಾಣಿ ತ್ರಿ ಷಡಾಯಾಂಬರಾಣಿ ಹಿ ॥೩೬॥

ಹೇ ಸುವ್ರತನಾದ ಮೈತ್ರೇಯನೆ, ಇನ್ನೂ ಹೆಚ್ಚಿನ ವಿಷಯವೆಂದರೆ ಚತುರ್ಥ ಸಪ್ತಮ ದಶಮ(ಲಗ್ನಸಹಿತ) ಸ್ಥಾನಗಳನ್ನು ಕೇಂದ್ರಗಳೆಂದು ದ್ವಿತೀಯ ಪಂಚಮ ಅಷ್ಟಮ ಹಾಗೂ ಏಕಾದಶಗಳನ್ನು ಪರಫಣ ಶೇಷ ತೃತೀಯ ಷಷ್ಠ ನವಮ ದ್ವಾದಶ ಗಳನ್ನು ಆಪೋಕ್ಲಿಮ್ ಎಂದು – ಲಗ್ನದಿಂದ ಪಂಚಮ, ನವಮಗಳನ್ನು ತ್ರಿಕೋಣ ಗಳೆಂದು ಕರೆಯುವರು. ಅದರಂತೆ ಷಷ್ಠ ಅಷ್ಟಮ ದ್ವಾದಶ ಈ ಮೂರು ಭಾವಗಳಿಗೆ ದುಷ್ಟ ಅಥವಾ ತ್ರಿಕ್ ಸ್ಥಾನಗಳೆಂದು ಕರೆಯುವರು ಚತುರ್ಥ ಅಷ್ಟಮಗಳನ್ನೇ ಚತುರಸ್ರ ಶಬ್ದಗಳಿಂದ ತೃತೀಯ ಷಷ್ಠ ದಶಮ ಏಕಾದಶ ಸ್ಥಾನಗಳಿಗೆ ಉಪಚಯ ವೆಂದು ಕರೆಯುವರು.

ವಿಶೇಷವಾಗಿ ದ್ವಿತೀಯ ದ್ವಾದಶಗಳನ್ನು ಬಂಧನಕಾರಕ ಸ್ಥಾನವೆಂದು ಹಾಗೂ ನಿರ್ಬಲ ಸ್ಥಾನವೆಂದು ಕರೆಯುವರು. ಅದರಂತೆ ತೃತೀಯ ಷಷ್ಠ ಹಾಗೂ ಏಕಾದಶ ಸ್ಥಾನಗಳನ್ನು ಕ್ರೂರ ಗ್ರಹಗಳಿಗೆ ಬಲಿಷ್ಠವೆಂದು ಪರಿಗಣಿಸುವುದು.

## ಭಾವ ಪರಿಭಾಷೆ

ಪಣಫರ ಧನ

ಆಪೋಕ್ಲಿಮ್ ತ್ರಿಕ್ ವ್ಯಯ

ಆಪೋಕ್ಲಿಮ್ ಉಪಚಯ ಸಹಜ

ಕೇಂದ್ರ ತನು

ಫನಿಫರ ಉಪಚಯ ಲಾಭ

ಕೇಂದ್ರ ಚತುರಸ್ತ ಬಂದು ಸುಖ

ಕೇಂದ್ರ ಉಪಚಯ ಕರ್ಮ

ಪಾಣಫರ ತ್ರಿಕೋಣ ಪುತ್ರ

ಕೇಂದ್ರ ಜಾಯಾ

ಆಪೋಕ್ಲಿಮ್ ತ್ರಿಕೋಣ ಧರ್ಮ

ಆಪೋಕ್ಲಿಮ್ ಟ್ರಿಕ್ ಉಪಚಯ ಅರಿ

ಪಣಫರ ಚತುಂಸ್ರ ರಂಧ್ರ

| | | | |
|---|---|---|---|
| ಆಪೋಕ್ಲಿಮ್ ತ್ರಿಕ್ ವ್ಯಯ | ಕೇಂದ್ರ ತನು | ಫನಿಫರ ಧನ | ಆಪೋಕ್ಲಿಮ್ ಉಪಚಯ ಸಹಸ |
| ಫಣಪರ ಉಪಚಯ ಲಾಭ | | | ಕೇಂದ್ರ ಚತುರಸ್ತ ಬಂದು ಸುಖ |
| ಕೇಂದ್ರ ಉಪಚಯ ಕರ್ಮ | | | ಪಣಫರ ತ್ರಿಕೋಣ ಪುತ್ರ |
| ಆಪೋಚಿವ್ ತ್ರಿಕೋಣ ಧರ್ಮ | ಫಣಪರ ಟ್ರಿಕ್ ಚತುಂಸ್ರ ರಂಧ್ರ | ಕೇಂದ್ರ ಜಾಯಾ | ಆಮೋಯಿ ಟ್ರಿಕ್ ಉಪಚಯು |

## ತನ್ವಾದಿ ಭಾವ

ತನುರ್ಧನಂ ಚ ಸಹಜೋ ಬಂಧು ಪುತ್ರಾರಯಸ್ತಥಾ
ಯುವತಿರಂಧ್ರಧರ್ಮಾಖ್ಯ - ಕರ್ಮಲಾಭಾವ್ಯಯಃ ಕ್ರಮಾತ್ ॥೩೭॥

ಸಂಕ್ಷೇಪೇಣ್ಯೆ ತದುದಿತ ಮನ್ಯದ್ ಬುದ್ಧಿದ್ಯನುಸಾರಿತಃ ।
ಕಿಂಚಿದ್ ವಿಶೇಷಂ ವಕ್ಷ್ಯಾಮಿ ಯಥಾ ಬ್ರಹ್ಮಾಮುಖಾಚ್ಛ್ರುತಮ್
॥೩೮॥

ತನು, ಧನ, ಸಹಜ ಬಂಧು ಪುತ್ರ ಜಾಯಾ ರಂಧ್ರ ಧರ್ಮ ಕರ್ಮ ಲಾಭ ವ್ಯಯವೆಂದು ಲಗ್ನಾದಿ ಭಾವಗಳನ್ನು ಪರಿಗಣಿಸುವುದು. ಆಯಾ ಹೆಸರುಗಳಂತೆ ಅವುಗಳ ವಿಚಾರ ವಿಮರ್ಶಿಸುವುದು ವಿಹಿತ. ಇದು ಕೇವಲ ಸಂಕ್ಷೇಪವಾಗಿ ಗುರುತಿಸಿದ್ದು ಇದರ ಅತೀರಿಕ್ತ ಸ್ವಬುದ್ಧಿಗನುಸಾರ ಫಲಾಫಲ ವಿಮರ್ಶೆ ಅವಶ್ಯಕ ಈಗ ನಾನು ಬ್ರಹ್ಮನ ಮುಖಾಂತರ ಕೇಳಿದ ವಿಶೇಷ ವಿಷಯ ಹೇಳುತ್ತೇನೆ.

ನವಮೇಪಿ ಪಿತೃಜ್ಞಾನಂ ಸೂರ್ಯಾಚ್ಚ ನವಮೋಥವಾ ।
ಯತ್ ಕಿಂಚಿದ್ ದಶಮೇ ಲಾಭೆ ತತ್ ಸೂರ್ಯಾದ ದಶಮೇಶಿವೆ ॥೩೯॥

ತುರ್ಯೇ ತನೌ ಧನೆ ಲಾಭೆ ಭಾಗ್ಯೇ ಯಚಿಂತನಂ ಚ ತತ್ ।
ಚಂದ್ರಾತ್ತುರ್ಯೆ ತನೌ ಲಾಭೆ ಭಾಗ್ಯೆ ತಚ್ಚಿಂತಯೆದ್ ಧ್ರುವಮ್ ॥೪೦॥

ಲಗ್ನಾದ್ ದುಶ್ಚಕ್ಯ ಭವನೆ ಯತ್ಕುಜಾದ್ ವಿಕ್ರಮೆರಿತಿ ಖಿಲಮ್ ।
ವಿಚಾರ್ಯ ಷಷ್ಠ ಭಾವಸ್ಯ ಬುಧಾತ್ ಷಷ್ಠಿ ವಿಲೋಕಯೇತ್ ॥೪೧॥

ತನಯಸ್ಯ ಗುರೋಃ ಪುತ್ರ, ಜಾಯಾಯಾಃ ಸಪ್ತಮೇ ಭೃಗೋಃ ।
ಅಷ್ಟಮಸ್ಯ ವ್ಯಯಸ್ಯಾಪಿ ಮಂದಾಷ್ಟತ್ಕೈ ವ್ಯಯೋತಥಾ ॥೪೨॥

ಯಾದ್‌ಭಾವಾದ್ಯತ್ ಫಲಂ ಚಿಂತ್ಯಂ ಚದೀಶಾತ್ತ ತ್ಫಲಂ ವಿದುಃ ।
ಜ್ಞೇಯಂ ತಸ್ಯ ಫಲಂ ತದ್ವಿತತ್ರ ಚಿಂತ್ಯಂ ಶುಭಾ ಶುಭಾವಮ್ ॥೪೩॥

ಲಗ್ನ ಅಥವಾ ಸೂರ್ಯನಿಂದ ನವಮ ಭಾವದಿಂದ ಪಿತೃ ಸುಖ, ದುಃಖಾದಿ ಗಳನ್ನು ವಿಚಾರ ಮಾಡುವರು. ಯಾವ ವಿಷಯಗಳನ್ನು ಲಗ್ನ ದಶಮ ಏಕಾದಶ ಸ್ಥಾನದಿಂದ ವಿಚಾರ ಮಾಡಲಾಗುವುದೋ ಅವುಗಳನ್ನು ಸೂರ್ಯನಿಂದ ದಶಮ-ಏಕಾದಶಗಳಿಂದಲೂ ಮಾಡುವುದು. ಲಗ್ನ ಚತುರ್ಥ ಧನ ಭಾಗ್ಯ ಅದರಂತೆ ಲಾಭ ಭಾವದಿಂದ ವಿಚಾರಣೀಯ ವಿಷಯವನ್ನು ಚಂದ್ರನಿಂದ ಪ್ರಥಮ, ಚತುರ್ಥ,

ದ್ವಿತೀಯ, ನವಮ, ಏಕಾದಶ ಸ್ಥಾನಗಳಿಂದ ಮಾಡಲು ಬರುವುದು. ಲಗ್ನದಿಂದ ತೃತೀಯ ಸ್ಥಾನದ ವಿಚಾರವನ್ನು ಮಂಗಳನಿಂದ ತೃತೀಯ ಸ್ಥಾನದಿಂದಲೂ ಮಾಡುವುದು. ಆರನೇ ಸ್ಥಾನದಿಂದ (ರೋಗ ಶತ್ರುಮಾತುಲ) ಮಾಡುವ ವಿಚಾರ ವನ್ನು ಬುಧನಿಂದ ಆರನೇ ಸ್ಥಾನದಿಂದ ಮಾಡುವುದು. ಮಕ್ಕಳ ವಿಚಾರ ಗುರುವಿನಿಂದ ಪಂಚಮ ಸ್ಥಾನದಿಂದಲೂ, ಸ್ತ್ರೀ ವಿಚಾರವನ್ನು ಶುಕ್ರನಿಂದ ಸಪ್ತಮ ಭಾವದಿಂದಲು ವಿಚಾರಿಸುವುದು. ಮೃತ್ಯುವನ್ನು ಹಾಗೂ ಆಯುಷ್ಯವನ್ನು ಶನಿಯಿಂದ ಅಷ್ಟಮ ಭಾವದಿಂದಲೂ ವಿಚಾರಿಸುವುದು. ವ್ಯಯದ ವಿಚಾರವನ್ನು ಶನಿಯಿಂದಲೇ ವ್ಯಯಭಾವದಿಂದಲೂ ವಿಚಾರಿಸಲು ಬರುವುದು – ಅದರಂತೆ ಭಾವಾಧಿಪರಿಂದ ಅವರಿದ್ದ ಸ್ಥಾನದಿಂದ ಅಷ್ಟ ಸ್ಥಾನದಿಂದಲೂ ವಿಚಾರಣೀಯವೇ. ಈ ಎಲ್ಲ ಅಂಶಗಳನ್ನು ಗಮನಿಸಿ ಯಾವುದು ಬಲಿಷ್ಠವೋ ಅದರಿಂದ ವಿಶೇಷ ಫಲ ಹೇಳುವುದು.

ವಿಮರ್ಶೆ – ಸಾಮಾನ್ಯ ನಾಡಿ ಗ್ರಂಥಗಳು – ಸ್ವತಂತ್ರವೆನ್ನುವ ಕಲ್ಪನೆ ಹಾಗೂ ಗ್ರಹಗಳಿಂದ ಫಲದ ಕಲ್ಪನೆ – ನಮ್ಮದೆನ್ನುವುದು ತಮ್ಮದೆನ್ನುವುದನ್ನು ಪರಾಶರರ ಈ ಭಾಗ ಎತ್ತಿ ತೋರಿಸುತ್ತದೆ. ಅಂದರೆ ಗ್ರಹಗಳಿಂದ ಭಾವಾಧಿಪರಿಂದ ಭಾವಾತ್ ಭಾವದಿಂದಲೂ ವಿಮರ್ಶೆ ಮಾಡುವ ಋಷಿ ಮುನಿ ಪ್ರಣೀತವೇ ಹೊರತು ಸ್ವತಂತ್ರವಲ್ಲವೆಂಬುದು ಮುಖ್ಯ ಅಂಶ ಹಾಗೂ ಗ್ರಹ ಬಲಾಬಲ, ಭಾವ ಬಲಾ ಬಲವನ್ನು ಗಣಿತದಂತೆ ವಿಮರ್ಶಿಸಿ ಹೇಳುವುದು.

ಇತಿ ಪರಾಶರ ಬೃಹತ್ ಹೋರಾಶಾಸ್ತ್ರ ವರ್ಗ ವಿವೇಚನಾಧ್ಯಾಯ ಸಮಾಪ್ತಃ ॥7॥

೮ನೇ ಅಧ್ಯಾಯ

## ಅಥ ದೃಷ್ಟಿಭೇದ ವರ್ಣನಾಧ್ಯಾಯಃ

ಪರಾಶರ ಉವಾಚ:—

ಅಥ ಮೇಷಾದಿರಾಶೀನಾಂ ದ್ವಾದಶಾನಂ ಪೃಥಕ್—ಪೃಥಕ್ ।
ದೃಷ್ಟಿಭೇದಂ ಪ್ರವಕ್ಷ್ಯಾಮಿ ಶೃಣು ತ್ವಂ ದಿಜಸತ್ತಮ ॥೧॥

ರಾಶಯೋಭಿ ಮುಖಂವಿಪ್ರ! ಪ್ರಪಶ್ಯಂತಿ ಚ ಪಾರ್ಶ್ವಗಾಭೆ ।
ಚರಃ ಸ್ಥಿರಾನ್ ಯಥಾ ಪಶ್ಯೇತ್ ಸ್ಥಿರೋಪಿಚ ತಥಾ ಚರಾನ್ ॥೨॥

ಅನಂತಗತಾನೇವ ಗೃಹಸ್ತತ್ರ ಗತಾ ಅಪಿ ।
ದ್ವಿಸಭಾವೋ ದ್ವಿಭಾನ್ ಕಿಂತು ನಾತ್ಮಾನಮವಕೋಕತೆ ॥೩॥

ಹೇ ದ್ವಿಜಶ್ರೇಷ್ಠ ಮೈತ್ರೇಯನೆ, ಮೇಷಾದಿ ದ್ವಾದಶ ರಾಶಿಗಳ ಎರಡು ದೃಷ್ಟಿ ಭೇದಗಳನ್ನು ಹೇಳುತ್ತೇನೆ ಕೇಳು.

ಮೇಷಾದಿ ಹನ್ನೆರಡು ರಾಶಿಗಳು ತಮ್ಮ ಸಮ್ಮುಖ ರಾಶಿಗಳನ್ನು ಹಾಗೂ ಪಾರ್ಶ್ವ(ದ್ವಿ)ಗತ ರಾಶಿಗಳನ್ನು ನೋಡುತ್ತವೆ. ಆದರೆ ಚರರಾಶಿಗಳು ಸಮೀಪವರ್ತಿ ಸ್ಥಿರರಾಶಿಯನ್ನು ಬಿಟ್ಟು ಉಳಿದ ಮೂರು ಸ್ಥಿರರಾಶಿಗಳನ್ನು ಅದರಂತೆ ಸ್ಥಿರರಾಶಿಗಳು ತಮ್ಮ ಸಮೀಪವರ್ತಿ ಚರರಾಶಿಗಳನ್ನು ಹೊರತುಪಡಿಸಿ ಅನ್ಯ ಚರರಾಶಿಗಳನ್ನು ದೃಷ್ಟಿಸುತ್ತವೆ – ದ್ವಿಸ್ವಭಾವ ರಾಶಿಗಳು ತಮ್ಮದನ್ನು ಬಿಟ್ಟು ಉಳಿದ ದ್ವಿಸ್ವಭಾವ ರಾಶಿಯನ್ನು ದೃಷ್ಟಿಸುತ್ತವೆ. ಗ್ರಹಗಳು ತಮ್ಮ ಸ್ಥಿತರೂಪದಂತೆ ವರ್ತಿಸುತ್ತವೆ.

ಜೈಮಿನಿ ಸೂತ್ರಕಾರರು ಈ ಮಾತನ್ನೇ 'ಅಭಿಪಶ್ಯಂತ್ಯಪಕ್ಷಣೀ' 'ಪಾರ್ಶ್ವಗಾಭೀಚ' 'ತನ್ನಿಷ್ಠಶ್ಚ ತದ್ವಕ್' ಎಂಬ ಸೂತ್ರಗಳಿಂದ ದೃಷ್ಟಿಯನ್ನು ವಿವರಿಸುತ್ತಾರೆ – ದೃಷ್ಟಿಚಕ್ರ ನೋಡಿದಾಗ ಸ್ಪಷ್ಟ ಅರ್ಥವಾಗುತ್ತದೆ.

ನಿರೀಕ್ಷಂತೆ ಚರಸ್ಥಾಸ್ತು ಸ್ಥಿರಸ್ಥಾನ್ ದ್ಯುಚರಾಂಸ್ತಥಾ ।
ಏವಂ ಸ್ಥಿರಗತಾಶ್ಚಾಪಿ ಚರಸ್ಥಾನ ನಾಂತಕಾಸ್ಥಿತಾಮ್ ॥೪॥

ದ್ವಿಸ್ವಭಾವಗತಾಃ ಖೇಟಾಃ ಪ್ರಪಶ್ಯಂತಿ ದ್ವಿಭಾಸ್ಥಿತಾಮ್ ।
ಗ್ರಹಾನ್ ಸಮುಸಪ್ತಾನಪಿತು ನಾತ್ಮಾನಾ ಸಹ ಸಂಸ್ಥಿತಾನ್ ॥೫॥

ಉಪರ್ಯುಕ್ತ ತೃತೀಯ ಶ್ಲೋಕದಲ್ಲಿಯ 'ಗ್ರಹಾಸ್ತತ್ರಗರ್ತಾಪಿ'ಯ ಸ್ಪಷ್ಟೀಕರಣ ಈ ಎರಡು ಶ್ಲೋಕಗಳಲ್ಲಿ ವಿವರಿಸುತ್ತಾರೆ.

ಚರರಾಶಿಯಲ್ಲಿದ್ದ ಗ್ರಹ ನಿಕಟಸ್ಥ ಸ್ಥಿರರಾಶಿಯಲ್ಲಿದ್ದ ಗ್ರಹವನ್ನು ಬಿಟ್ಟು ಉಳಿದ ಗ್ರಹಗಳನ್ನು (ಸ್ಥಿರ ರಾಶಿಗಳ) ಹಾಗೂ ಇದೇ ತರಹ ಸ್ಥಿರರಾಶಿಸ್ಥ ಗ್ರಹ ನಿಕಟಸ್ಥ ಚರರಾಶಿ ಗ್ರಹಗಳನ್ನು ಹೊರತುಪಡಿಸಿ ಅನ್ಯ ಚರರಾಶಿ ಗ್ರಹಗಳನ್ನು ವೀಕ್ಷಿಸುತ್ತದೆ. ಅದರಂತೆ ದ್ವಿಸ್ವಭಾವ ರಾಶಿಸ್ಥಗ್ರಹ ತನ್ನ ಸಹಚರ (ಸಮೀಪವರ್ತಿ ದ್ವಿಸ್ವಭಾವ)ನನ್ನು ಬಿಟ್ಟು ಇತರ ದ್ವಿಭಾವಸ್ಥ ಗ್ರಹಗಳನ್ನು ವೀಕ್ಷಿಸುತ್ತದೆ.

## ದೃಷ್ಟಿ ಚಕ್ರ ನ್ಯಾಸ

ದೃಷ್ಟಿಚಕ್ರಸ್ಯದ್ಯ ವಿನ್ಯಾಸಂ ವಕ್ಷ್ಯೇಥ ಬ್ರಹ್ಮಣೋದಿತಮ್ ।
ವಿಜ್ಞಾನ ಮಾತ್ರತೋ ಯಸ್ಯ ದೃಷ್ಟಿ ಭೇದಃ ಪಕಾಶ್ಯತೆ ॥೬॥

ಪ್ರಾಚ್ಯಾಮಜ್ಯಕೌ ದೇಯೌ ಕರ್ಕ ಸಿಂಹಾವುದಗಾದಿಶಿ ।
ಪ್ರತೀಚ್ಯಾಂ ಕ್ರಮಾತೋ ವಾಚ್ಯಾಂ ತುಲಾಲಿ ನಕ್ರ ಕುಂಭಕೌ ॥೭॥

ಈಶಾನೆ ಮಿಥುನಂ ಕೋಣೆ ಕನ್ಯಾಂ ವಾಯವ್ಯಸಂಜಕೆ ।
ಧನುರ್ವಿಲಿಖ್ಯ ನೈಋತ್ಯಾಮಾಗ್ರಯ್ಯಾಂ ವಿಲಿಖೆಜ್ಯಷಮ್ ॥೮॥

ಚತುಷ್ಕೋಣಾಕಾರ ಚಕ್ರಂ ವಿನ್ಯಸ್ಯೈವಂ ದೃಶಂದಿಶೇತ್
ವರ್ತುಲಾಕರತೋ ವಾಪಿ ದೃಷ್ಟೇಃ ಕಾರ್ಯ ವಿಚಾರಣಾ ॥೯॥

ಈಗ ನಾನು ಬ್ರಹ್ಮ ದೇವರು ಹೇಳಿದ ದೃಷ್ಟಿ ಚಕ್ರನ್ಯಾಸ ಹೇಳುತ್ತೇನೆ. ಅದರ ಜ್ಞಾನ ಮಾತ್ರದಿಂದ, ರಾಶಿ ಹಾಗೂ ಗ್ರಹಗಳ ದೃಷ್ಟಿ ಪ್ರಸ್ಫುಟವಾಗುತ್ತದೆ (ಗೋಚಾರ) ಚತುಷ್ಕೋಣಾಕಾರ ಚಕ್ರ ಬರೆದು ಅದರ ಪೂರ್ವ ದಿಶಾದಲ್ಲಿ ಮೇಷ(1) ಹಾಗೂ ವೃಷಭ(2) ಉತ್ತರ ದಿಶಾದಲ್ಲಿ ಮಕರ, ಕುಂಭ ಉಳಿದ ಮಿಥುನ, ಕನ್ಯಾ, ಧನು, ಮೀನ (ದ್ವಿಸ್ವಭಾವ) ರಾಶಿಗಳನ್ನು ಕ್ರಮವಾಗಿ ಈಶಾನ್ಯ, ವಾಯವ್ಯ, ನೈಋತ್ಯ ಹಾಗೂ ಆಗ್ನೇಯ ಕೋಣೆಯಲ್ಲಿ ಸ್ಥಾಪಿಸುವುದು. ಈ ಪ್ರಕಾರ ಚತುಷ್ಕೋಣಾಕಾರ ಚಕ್ರ ಅಥವಾ ವೃತ್ತಾಕಾರ ಚಕ್ರ ನಿರ್ಮಾಣ ಮಾಡಿ ದೃಷ್ಟಿ

ವಿವೇಚನೆ ಮಾಡುವುದು.

## ದೃಷ್ಟಿಚಕ್ರ ಚಿತ್ರ




ಈ ರೀತಿ ದೃಷ್ಟಿಸ್ಥಾನ ಗುರುತಿಸುವುದು




ಈ ರೀತಿ ದೃಷ್ಟಿಯನ್ನು ಅವಲೋಕಿಸಿ – ಗ್ರಹ ಬಲಾಬಲ ಫಲ ನಿರ್ದೇಶಿಸುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರ ದೃಷ್ಟಿಭೇದ ವರ್ಣನಾಧ್ಯಾಯ ಸಮಾಪ್ತ ॥8॥**

## ೯ನೇ ಅಧ್ಯಾಯ

# ಅಥ ಸೂತಿಕಾಧ್ಯಾಯ

**ಪರಾಶರ ಉವಾಚಃ–**

ಅಥಾಹಂ ಸೂತಿಕಾಧ್ಯಾಯಂ ವಕ್ಷ್ಯಯಾಮಿ ಸೃಣುಸಂವೃತ ।
ಪುರಾ ಪ್ರಸಂಗವಶತೋ ಬ್ರಹ್ಮಣಾ ಕಥಿತಂ ಯಥಾ ॥೧॥

ಯಂತ್ರೈಃ ಸ್ಪಷ್ಟತರೊ ವೇದ್ಯೋ ಜನ್ಮಕಾಲಸ್ತಥಾಪುನಃ ।
ಸಾಧ್ಯಾಃ ಸ್ಪಷ್ಟಖಿಗಾಶ್ಚೈವಂ ಲಗ್ನಂ ಸಾಧ್ಯಂ ಯಥೊದಿವ್ಮ್ಃ ॥೨॥

ಲಗ್ನದ್ವಾದಶ ಭಾವೇಷು ಗ್ರಹಾಃ ಸ್ಥಾಪ್ಯಾ ದಿವಾಜನೌ ।
ಸೂರ್ಯೋ, ರಾತ್ರೌ, ಸೂರ್ಯಪುತ್ರೋ ಜನಕೌ ಪರಿಕೀರ್ತಿತೌ ॥೩॥

ತಥೈವ ಸಿತಚಂದ್ರೌ ತು ವಿಜ್ಞೇಯೌ ಮಾತೃಸಂಜ್ಞಿತೌ ।
ತಯೋರ್ಮಧ್ಯೆ ಬಲಿ ಯಃ ಸ್ಯಾತ್ತಸ್ಯ ಗೇಹೆಜನಿರ್ಭವೇತ್ ॥೪॥

**ಪರಾಶರರು ಹೇಳಿದರು–**

ಹೇ ಸುವ್ರತ ಮೈತ್ರೇಯನೆ, ಈಗ ಸೂತಿಕಾಧ್ಯಾಯ ಹೇಳುತ್ತೇನೆ ಕೇಳು. ಇದನ್ನು ಬ್ರಹ್ಮದೇವರು ಪ್ರಸಂಗವಶಾತ್ ನನಗೆ ಹೇಳಿದ್ದರು.

ಪ್ರಥಮವಾಗಿ ಯಂತ್ರ ಸಹಾಯದಿಂದ ಜನ್ಮಕಾಲದ ಸರಿಯಾದ ಜ್ಞಾನ ಮಾಡಿಕೊಂಡು ತಾತ್ಕಾಲಿಕ ಸ್ಪಷ್ಟಗ್ರಹ ಹಾಗೂ ಲಗ್ನ ಸಾಧನೆ ಮಾಡಿ ತಾತ್ಕಾಲಿಕ ಲಗ್ನವಶ ನಿಷ್ಪನ್ ಜನ್ಮಾಂಕ ಚಕ್ರದಲ್ಲಿ ಎಲ್ಲ ಗ್ರಹಗಳನ್ನು ಸ್ಥಾಪಿಸಿ – ದಿನದಲ್ಲಿ ಜನ್ಮವಾಗಿದ್ದರೆ ಸೂರ್ಯನನ್ನು ರಾತ್ರಿಯಲ್ಲಿ ಜನ್ಮವಾಗಿದ್ದರೆ, ಶನಿಯನ್ನು ಪಿತನೆಂದು ಪರಿಗ್ರಹಿಸಿ ಅದರಂತೆ ದಿನದಲ್ಲಿ ಜನ್ಮವಾದರೆ ಶುಕ್ರ ರಾತ್ರಿಯಲ್ಲಿ ಜನ್ಮವಾದರೆ ಚಂದ್ರನನ್ನು ಮಾತಾ ಎಂದು ಗ್ರಹಿಸಿ, ಮಾತೃ, ಪಿತೃ ಸಂಜ್ಞ ಗ್ರಹದಲ್ಲಿ ಯಾವುದು ಬಲಿಷ್ಠವೋ ಆ ಗ್ರಹದ ಅನುಸಾರ ಜಾತಕನ ಜನ್ಮವೆಂದು (ಗ್ರಹದಲ್ಲಿ) ತಿಳಿಯುವರು.

ವಿಶೇಷಃ– ಒಂದು ವೇಳೆ ವ್ಯಕ್ತಿಯ ಜನ್ಮರಾತ್ರಿಯಲ್ಲಿ ಆಗಿದೆಯೆಂದರೆ ಶನಿ ಪಿತಾ ಹಾಗೂ ಚಂದ್ರ ಮಾತಾ ಆಗುವುದರಿಂದ ಅವರಲ್ಲಿ ಬಲಾಬಲ ನೋಡಿ ಯಾವ ಮನೆಯಲ್ಲಿ ಜನನವೆಂಬುದು ನಿರ್ಧರಿಸುವುದು.

## ರಸ್ತೆಯಲ್ಲಿ ಜನನ

ನೀಚರಾಶಿ ಗತಾಃ ಸೌಮ್ಯಾ ಗ್ರಹದೃಷ್ಟಿ ವಿವರ್ಜಿತಾಃ ।
ಚಂದ್ರೋಯದಿ ಭವೆಲಗ್ನೆ ಪಥಿ ಜನ್ಮ ವಿನಿರ್ದಿಶೇತ್ ॥೫॥

ಶುಭ ಗ್ರಹ ನೀಚ ರಾಶಿಗತವಾಗಿ ಯಾವುದೇ ಗ್ರಹದಿಂದ ದೃಷ್ಟಿತವಾಗಿರದಿದ್ದರೆ ಚಂದ್ರ ಲಗ್ನಗತನಾದರೆ 'ಮಾರ್ಗದಲ್ಲಿ ಮಗುವಿನ ಜನನ'ವೆಂದು ಗ್ರಹಿಸುವುದು.

## ಸೂತಿಕಾ ಗ್ರಹ ಪ್ರಕಾಶ ಜ್ಞಾನ

ಸಬಲೋ ಭೌಮ ದೃಷ್ಟಶ್ಚ ಸ್ವಕ್ಷೇತ್ರಾದಿಷು ಸಂಸ್ಥಿತಾಃ ।
ಸೂರ್ಯೋ ಯದಾ ತದಾ ಜ್ಞೇಯಂ ಬಹುದೀಪಾನ್ವಿತಂ ಗ್ರಹಮ್ ॥೬॥

ಜಲಭಾಂಶಗತಶ್ಚಂದ್ರಶ್ಚತುರ್ಥೆ ಭವನೇ ಭವೇತ್ ।
ಯುಕ್ತೋ ಮಂದೇನವಾ ದೃಷ್ಟೋಂಧಕಾರೆ ಜಾಯತೆ ಜನಿಃ ॥೭॥

ಸಬಲ ರವಿ ತನ್ನ ಮನೆಯಲ್ಲಿ ಅಥವಾ ಉಚ್ಚದಲ್ಲಿದ್ದ ಮಂಗಳನಿಂದ ನೋಡಲ್ಪಡುತ್ತಿದ್ದರೆ ಸೂತಿಕಾ ಗ್ರಹ ಅನೇಕ ದೀಪಗಳಿಂದ ಯುಕ್ತವಾಗಿರುತ್ತದೆ ಅಥವಾ ಚಂದ್ರ, ಜಲಚರ ರಾಶಿಗತನಾಗಿ ಚತುರ್ಥದಲ್ಲಿದ್ದರೆ ಅದು ಶನಿಯಿಂದ ಕೂಡಿದ್ದರೆ ದೃಷ್ಟಿತನಾಗಿದ್ದರೆ ಕತ್ತಲೆಯಲ್ಲಿ ಮಗುವಿನ ಜನನ.

ಈ ಅಂಶ ಸಾರಾವಲಿಕಾರರು ಹೇಳಿದ್ದಾರೆ.

'ಬಲವತಿ ಸೂರ್ಯೋ ದೃಷ್ಟಿ ಬಹುಪ್ರದೀಪಾನ್ ವಿದೇತ್ ಕುಪುತ್ರೇಣ'

## ದೀಪಾದಿ ಜ್ಞಾನ

ಯಸ್ಮಿನ್ ಭಾಗೆ ಭವೇತ್ಸೂರ್ಯಸ್ತತ್ರ ದೀಪಂ ವದೇತ್ ಸುಧಿಃ ।
ಲಗ್ನಾದವರ್ತಿಸ್ತಥಾ ಚಂದ್ರಾತ್ತೈಲಂ ವಾಕ್ಯಂ ಮನೀಷಿಭಿಃ ॥೮॥

ಚರೋರ್ಕೇ ಚಂಚಲೋ ದೀಪಾಃ ಸ್ಥಿರರ್ಷೆತುಸ್ಥಿರೋ ಭವೇತ್ ।
ದ್ವಿಭೆ ಸ್ಥಿತಿರ್ದ್ವಯೋ ಜ್ಞೆಯಾ ಸೂರ್ಯರ್ಷೆವಶತೋ ಬುಧೈಃ ॥೯॥

ಯಾವ ಭಾಗ (ದಿಕ್ಕು) ಸೂರ್ಯಸ್ಥಿತಿಯಿರುವುದೋ ಅದೇ ಭಾಗದಲ್ಲಿ ದೀಪ ಹೇಳುವರು. ಲಗ್ನದಿಂದ ಬತ್ತಿ, ಚಂದ್ರನಿಂದ ತೈಲದ ಜ್ಞಾನ ಮಾಡಿಕೊಳ್ಳುವುದು. ಜನ್ಮ ಸಮಯದಲ್ಲಿ ಚರರಾಶಿಯಲ್ಲಿ ಸೂರ್ಯನಿದ್ದರೆ ದೀಪ ಚಂಚಲವೆಂದು ಸ್ಥಿರರಾಶಿಯಲ್ಲಿ ರವಿಯಿದ್ದರೆ ದೀಪ ಸ್ಥಿರವಾಗಿರುತ್ತದೆ. ದ್ವಿಸ್ವಭಾವ ಗತ ಸೂರ್ಯನಿದ್ದರೆ – ಚಲಿತವಾಗಿರುತ್ತದೆ.

ವಿಮರ್ಶೆ:– (1) 'ಯಸ್ಮಿನ್ ಭಾಗೆ ಸ್ಥಿತಃ ಸೂರ್ಯಃ' ದ ಆಶಯ ಯಾವ ದಿಕ್ಕಿನಲ್ಲಿ ಸೂರ್ಯನಿರುವನೋ ಎಂಬುದು ಭಾವವನ್ನಲ್ಲ.

ಆದರೆ ಸಾರಾವಲಿಯಲ್ಲಿ –

ದ್ವಾದಶಭಾಗ ವಿಭಕ್ತೆ ವಾಸಗ್ರುಹೇವಸ್ಥಿತೆ ಸಹ ಸ್ವಾಂಶೌ
ದ್ವಿಪಶ್ವರಸ್ಥಿರಾದಿಷು ತಥೈವ ವಾಚ್ಯಃ ಪ್ರಸವಕಾಲೆ

ಸಹಸ್ರಾಂಶದ 12 ರಾಶಿ ಭಾಗಗಳಲ್ಲಿ ಸ್ಥಿರ, ಸ್ಥಿರಾದಿಗಳಂತೆ – ಸ್ಥಿರ, ಚರ ಹಾಗೂ ದ್ವಿಸ್ವಭಾವದಂತೆ, ದಿಕ್ಕು ಹಾಗೂ ದೀಪಜ್ಞಾನ ಮಾಡಿಕೊಳ್ಳುವುದು ಎಂದಿದೆ.

ಲಗ್ನದಿಂದ ಬತ್ತಿ – ಲಗ್ನಾರಂಭದಲ್ಲೇ ಜನನವಾಗಿದ್ದರೆ ಜನ್ಮ ಕಾಲಾಸನ್ನ ಅವಧಿಯೇ ದೀಪದಲ್ಲಿ ಬತ್ತಿ – ಲಗ್ನಾನಂತರದೇ ಜನ್ಮವಾದಲ್ಲಿ – ಬತ್ತಿಯ ಕೊನೆ ಭಾಗ ಉಳಿದಾಗ ಜನನ – ಅನುಪಾತದಿಂದ ಬತ್ತಿಜ್ಞಾನ ಮಾಡಿಕೊಳ್ಳುವುದು. ಚಂದ್ರನಿಂದ ಎಣ್ಣೆ ಜ್ಞಾನ – ಲಗ್ನಾರಂಭ ಜನನ ಪೂರ್ಣ ಎಣ್ಣೆ ಅಂತಿಮ ಪಟ್ಟಿ ಕೊನೆ ಎಣ್ಣೆ ಕಣ– ಹೀಗೆ ಅನುಪಾತದಿಂದ ಜ್ಞಾನ ಮಾಡಿಕೊಳ್ಳುವುದು. ಚಂದ್ರ ಬಲಿಷ್ಠನಾಗಿದ್ದರೆ ಪೂರ್ಣ ತೈಲ – ನೀಚನಾಗಿದ್ದರೆ ಅತಿ ಅಲ್ಪ ತೈಲ ಇತ್ಯಾದಿ – ವರಾಹ ಮಿಹಿರಾಚಾರ್ಯರು ಇದನ್ನೇ ಸ್ಪಷ್ಟಿ ಕರಿಸುತ್ತಾರೆ: 'ಸ್ನೇಹಃ ಶಶಾಂಕದುದಯಾಶ್ಚ ವರ್ತ್ತಿರ್ದೀಪೂರ್ಣಾಯುಕ್ತ...''

## ಜನ್ಮಜ್ಞಾನ

ಶೀರ್ಷಾಚ್ಛೀರ್ಷೋದಯೇ ವಾಚ್ಯಃ ಪಾದಾತ್ ಪೃಷ್ಠೋದಯೆಮತಃ।
ಕರಾತ್ತದುಭಯೇ ಜ್ಞೇಯಃ ಪ್ರಸವಃ ಸರ್ವದೇಹಿನಾಮ್ ॥೧೦॥

ಜನ್ಮಲಗ್ನ ಕಾಲದಲ್ಲಿ ಲಗ್ನವು ಶೀರ್ಷೋದಯ ರಾಶಿಯಿದ್ದರೆ ಮಗುವಿನ ಜನ್ಮವು ತಲೆಯಿಂದ ಪೃಷ್ಠೋದಯ ರಾಶಿಯಿದ್ದರೆ ಕಾಲಿನಿಂದ ಉಭಯೋದಯ ರಾಶಿಗಳಿದ್ದರೆ ಕೈಮೇಲಾಗಿ ನಿಷ್ಕ್ರಮಣವಾಗಿರುತ್ತದೆ.

ಶೀರ್ಷೋದಯ ಪೃಷ್ಠೋದಯ ಉಭಯೋದಯ ರಾಶಿಗಳ ಬಗ್ಗೆ ಜಾತಕ ಗ್ರಂಥಗಳಲ್ಲಿ ಸ್ಪಷ್ಟವಾಗಿದೆ. ಆದರಂತೆ ವರಾಹಮಿಹಿರರು ಹೇಳಿದ್ದಾರೆ. 'ಗೋಜಾಶ್ವಿಕರ್ಕಾ ಮಿಥುನಾಃ ಸ್ಮೃತಿಃ ಸಮ್ಯಗಾ ನಿಶಾಖ್ಯಾಃ ಪೃಷ್ಠೋದಯಾ ವಿಮಿಥುನಾಃ ಕಥಿತಾಸ್ತವವ॥ಆದಿ॥

## ಸೂತಿಕಾ ಗ್ರಹ ದ್ವಾರ

ಕೇಂದ್ರಸ್ಥ ಗ್ರಹಯೋಗಾದ್ವಾ ಲಗ್ನರ್ಕ್ಷಾದ್ವಾ ಬಲಾಧಿಕಾತ್ ।
ದ್ವಾರಂ ವಾಚ್ಯಂ ತು ಗೇಹಸ್ಯ ದಿಗೀಶ ಕ್ರಮತಃ ಸದಾ ॥೧೧॥

ಕೇಂದ್ರದಲ್ಲಿದ್ದ ಗ್ರಹಯೋಗದಿಂದ ಸೂತಿಕಾಗ್ರಹದ ಬಲಾಬಲದ ಮೇಲಿಂದ ಸೂತಿಕಾ ಗ್ರಹದ ದ್ವಾರವನ್ನು ಹೇಳುವುದು. ಅನೇಕ ಗ್ರಹಗಳು ಕೇಂದ್ರದಲ್ಲಿದ್ದರೆ ಬಲಾಧಿಕ ಗ್ರಹದ ಮೇಲಿಂದ ಗ್ರಹದ ದಿಶೆ – ಸೂತಿಕಾ ಗ್ರಹದ ದ್ವಾರ ದೆಶೆಯಾಗುವುದು ಗ್ರಹಗಳ ದಿಸೆ.

ಪಾಚ್ಯ್ರದೀಶಾ ರವಿ ಸಿತ ಕುಜಂ ರಾಹೂಯಮೆಂದು ಸೌಮ್ಯವಾಕ್‌ಪತಯಃ।

–ಈ ರೀತಿಯಾಗಿ ಗ್ರಹಗಳ ದಿಶಾ ಅರಿತುಕೊಳ್ಳುವುದು. ಒಂದು ವೇಳೆ ಕೇಂದ್ರದಲ್ಲಿ ಯಾವುದೇ ಗ್ರಹವಿಲ್ಲದಿದ್ದಲ್ಲಿ ಲಗ್ನರಾಶಿ ದಶಾದಲ್ಲಿ ಬಾಗಿಲು ಇರುತ್ತದೆ.

ವರಾಹಮಿಹಿರರು ಇದನ್ನೇ ಹೇಳಿದ್ದಾರೆ.

'ದ್ವಾದಶ್ಚ ತದ್ ವಾಸ್ತೂನಿ ಕೇಂದ್ರ ಸಂಸ್ಥೈ ಜ್ಞೇಯಃ ಗ್ರಹೈರ್ವೀರ್ಯ ಸಮನ್ವಿತೈರ್ವಾ'

ಮಣಿರಥನು ಲಗ್ನದಲ್ಲಿ ಯಾವ ರಾಶಿ ದ್ವಾದಶಾಂಶ ಇದೆಯೋ ಆ ರಾಶಿಯ ದಶಾದಲ್ಲಿ ಮನೆಯ ದ್ವಾರವೆಂದು ಸ್ಪಷ್ಟಪಡಿಸಿದ್ದಾರೆ ಅದರಂತೆ–

ಮಣಿರಥರ ವಚನ: –

'ಲಗ್ನೆಯೋ ದ್ವಿರ ಶಾಂಶಸ್ತದಭಿಮುಖಂ ಸೂತಿಕಾ ಗೃಹೆ ದ್ವಾರವ್'

## ಉಪಸೂತಿಕಾ ಜ್ಞಾನ

ಲಗ್ನ ಚಂದ್ರಾಂತರಾಲಸ್ಥಗ್ರಹೈಃ ಸ್ಯುರುಪಸೂತಿಕಾಃ ।
ದೃಶ್ಯಾದೃಶ್ಯ ವಿಭಾಗಾಭ್ಯಾಂ ಬಹಿರಂತಶ್ಚ ತಾಃ ಸ್ಮೃತಾಃ ॥೧೨॥

ಸ್ವರ್ಕ್ಷಾದೌ ದ್ವಿಗುಣ ಜ್ಞೇಯಾ ವಕ್ರೋಚ್ಚೈ ತ್ರಿಗುಣಮತಾಃ ।
ಯತ್ರೋಭಯಸ್ಯ ಸಂಪ್ರಾಪ್ತಿಸ್ತ್ರೈಗುಣ್ಯಂ ತತ್ರ ವೈ ಸುಕೃತ ॥
ಪಾಪೈಸ್ತು ವಿಧವಾ ಜ್ಞೇಯಾಃ ಶೋಭನೈಃ ಸಧವಾಃ ಸ್ಮೃತಾಃ ॥೧೩॥

ಲಗ್ನ ಹಾಗೂ ಚಂದ್ರರ ನಡುವಿರುವ ಗ್ರಹಗಳ ತುಲ್ಯ ಉಪಸೂರಿಗಿತ್ತಿಯರಿರುತ್ತಾರೆ. (ಜನ್ಮ ಸಮಯದಲ್ಲಿ ಸೂತಿಕಾ (ಸೂಲಗಿತ್ತಿ) ಜೊತೆಗಿರುವ ಸ್ತ್ರೀಯರು

ದೃಶ್ಯ ಹಾಗೂ ಅದೃಶ್ಯ ವಿಭಾಗಗಳ ಅನುಸಾರ ಸೂತಿಕಾಗ್ರಹದ ಹೊರಗೆ ಹಾಗೂ ಅವಳ ಹತ್ತಿರ ಇರುವ ಜನರಿಗೆ ನಿರ್ದೇಶನ ನೀಡಿರಿ. ದೃಶ್ಯಭಾಗ ಸಪ್ತಮಭಾವ ಭೋಗ್ಯಾಂಶದಿಂದ ಲಗ್ನದ ಭುಕ್ತಾಂಶದವರೆಗೆ) ದೃಶ್ಯಗತ ಗ್ರಹಸಂಖ್ಯಾ ತುಲ್ಯ – ಹೊರಗೆ ಅದೃಶ್ಯ ಭಾಗದಲ್ಲಿರುವ ಗ್ರಹ ಸಂಖ್ಯಾ ತುಲ್ಯ – ಸೂತಿಕಾ ಗ್ರಹದಲ್ಲಿ ಎಂದು ಸಂಖ್ಯೆ ತಿಳಿಸಬಹುದು.

ತಮ್ಮ ಮನೆ, ನವಾಂಶ ದ್ರೇಷ್ಕಾಣದಲ್ಲಿ ಸ್ಥಿತ ಸಂಖ್ಯಾದ ದ್ವಿಗುಣಿತ ತಮ್ಮುಚ್ಚ ಅಥವಾ ವಕ್ರಿತ್ವವುಳ್ಳ ಗ್ರಹ ಸಂಖ್ಯಾ ದ್ವಿಗುಣಿತ ವಾಚಿ ಸೂತಿಕಾರ ನಿರ್ದೇಶನ ಮಾಡಬಹುದು. ಒಂದು ವೇಳೆ ಗ್ರಹ ಸ್ಥಿತ ವಶ ದ್ವೈಗುಣ್ಯ ಹಾಗೂ ತ್ರೈಗುಣ್ಯ ಎರಡು ಪ್ರಾಪ್ತವಾದರೆ ಒಂದು ದಿಶೆ ಯಾವುದೇ ಗ್ರಹ ತನ್ನ ಮನೆ ನವಾಂಶ ವಕ್ರತ್ವಾಂ ಎರಡೂ ಆಗಿದ್ದರೆ ಒಂದು ಸಲ ತ್ರೈಗುಣ್ಯ ಮಾತ್ರ ಮಾಡಿ ಸೂತಿಕಾ ಸಂಖ್ಯೆ ಹೇಳುವುದು. ಲಗ್ನ ಹಾಗೂ ಚಂದ್ರಮರ ನಡುವೆ ಸ್ಥಿತವಾದ ಪಾಪಗ್ರಹ ಸಂಖ್ಯೆ ಸಮಾನ ವಿಧವಾ ಹಾಗೂ ಶುಭಗ್ರಹ ಸಮಾನ ಸವಿಧವಾ(ಮುತ್ತೈದೆ)ಯರಿರುತ್ತಾರೆ.

ವರಾಹಮಿಹಿರರು ಅದನ್ನೇ ಹೇಳಿದ್ದಾರೆ–

**ಲಗ್ನ ಚಂದ್ರಾಂತರ ಗತ್ತೈಗ್ರಗ್ರ್ಹೈಃ ಸ್ಯುರೂಪ ಸೂತಿಕಾಃ ।**
**ಬಹಿರಂತಶ್ಚ ಚಕ್ರಾರ್ಧೆ ದೃಶ್ಯಾದೃಶ್ಯೇನ್ಯಾಥಾ ಪರೆ ॥**

ಈ ಭಾಗವನ್ನೇ ಅನೇಕ ಆಚಾರ್ಯರು ಎತ್ತಿ ಹೇಳಿದ್ದಾರೆ. ಜನ್ಮಾಂಗ ಕುಂಡಲಿಯಲ್ಲಿ ದೃಶ್ಯ, ಅದೃಶ್ಯ ಭಾಗಗಳನ್ನು ಸ್ಪಷ್ಟ ಉಲ್ಲೇಖಿಸಿದ್ದಾರೆ. ದೃಶ್ಯ, ಪಾತಾಳ ಭಾಗದ ಎದುರು ಹಾಗೂ ಅದೃಶ್ಯ ದೃಶ್ಯದ ಎದುರುಭಾಗ ಅಂದರೆ ಚಕ್ರಾರ್ಧ ಭಾಗವನ್ನು ಪರಿಗಣಿಸಿದ್ದಾರೆ.

ಉದಾಹರಿತ ಕುಂಡಲಿಯ



ಸಪ್ತಮದಲ್ಲಿ 9 – 2° – 31' – 47" ದಿನಂತರದ ಹಾಗೂ ಕರ್ಕದ – 3° – 31' – 47' ಕಲಾ ದೃಶ್ಯ ಗೋಲಾರ್ಧ ಉಳಿದ ಭಾಗ ಅದೃಶ್ಯ ಗೋಲಾರ್ಧ. ಇದು ಫಲಕ್ಕೂ ಕಾರಣವೇ.

## ಚಿನ್ನ ಜ್ಞಾನ

ಕಾಲಾಂಗೆ ಯತ್ರಭೌಮಾಕೌ ತತ್ರ ಜ್ಞೇಯಂ ತಿಲಾದಿಕಮ್ ॥೧೪॥

ಶನಿ ರಾಹೂ ಸ್ಥಿತೌ ಯತ್ರ ತತ್ರ ಶ್ಯಾಮಲಮಾದಿಶೇತ್ ।
ಲಗ್ನೆ ಚಂದ್ರಾರ ಶುಕಾಶ್ಚೇತ್ ಚಿನ್ಹಂ ಶಿರಸಿ ಸಂಸ್ಥಿತಮ್ ॥೧೫॥

ಶುಕ್ರೇಸ್ತೆ ನಿಧನೆ ರಾಹುಃ ವಾಮಕರ್ಣೇಥ ಮಸ್ತಕೆ ।
ಗುರುಃ ಶುಕ್ರೋಥವಾ ಭೌಮೋ ಯದಿ ದ್ಯೂನೆ ವ್ಯವಸ್ಥಿತಃ ॥೧೬॥

ತದಾ ಚಿನ್ಹಂ ಭವೇಮೂರ್ಧ್ನಿಂ ಗ್ರಹವರ್ಣಾನುಸಾರತಃ ।
ಚಂದ್ರೋ ವಾ ಕ್ಷಿತಿಜೋ ಲಗ್ನೆಥವಾ ಶುಕ್ರೆ ಭವೇದ್ಯದಿ ॥೧೭॥

ದ್ವಾದಶಾಬ್ದೆ ತದಾ ಚಿನ್ಹಂ ಶೀರ್ಷೆ ಸ್ಯಾನಾತ್ರಸಂಶಯಃ ।
ತ್ರಿಕೋಣಸ್ಥಾರ್ಕಿಭೌಮಾಭ್ಯಾಂ ಗುದೆ ಲಂಗೋಪಿವಾದಿಶೇತ್ ॥೧೮॥

ಸುಖೆ ಲಗ್ನೇಥವಾ ಮಂದಸ್ತ್ರಿಕೋಣೆ ಭಾರ್ಗವೋ ಯದಿ ।
ಮೃತ್ಯುಸ್ಥೆ ಬುಧೆವೆಜ್ಯೌ ಜಠರೆ ತತ್ ಸಮಾದಿಶೀತ್ ॥೧೯॥

ಶುಕ್ರಾರ್ಕ ರಾಹವಕ್ಷ್ಚೇತ್ ಸ್ಯುಃ ಸುಖೇ ಲಗ್ನೆಥವಾ ಕುಜೆ ।
ತದಾಚಿಹ್ನಂ ಭವೇನ್ನೂನಂ ವಾಮಪಾದೆವಿಶೀಷತಃ ॥೨೦॥

ಶುಕೋ ಲಗಾಷ್ಟಮೇ ರಾಹೂಶ್ಚಿಹಂ ವಾಮ ಶೃತೌ ಶಿರೋ ।
ಜೀವೋ ಲಗ್ನೆಮದೆ ರಾಹುಸ್ತದಾ ವಾಮಬುಜೆ ವದೇತ್ ॥೨೦॥

ಅಷ್ಟಮೇ ರಜನಿನಾಥೊ ವ್ಯಯಸ್ಥೌ ಗುರುಭಾರ್ಗವೌ ।
ಮದಸ್ಥೌ ಮಂದಮಾಹೇಯೌ ತದಾಚಿನ್ಹಂ ಬುಜದ್ವಯೇ ॥೨೨॥

ಶುಕ್ರೋ ಧನೇಥ ಕರ್ಮಸ್ಥೌ ಸೈಹಿಕೆಯಶನೈಶ್ವರೌ ।
ಅಷ್ಟಮೇ ದಿವಸಾಧೀಶೋ ನಾಭೌಚಿನ್ಹಂತದಾದಿಶೇತ್ ॥೨೩॥

ಶುಕ್ರಭೌಮೌ ತೃತೀಯಸ್ಥೌ ದ್ವಿತೀಯೆ ರಜನಿಪತಿಃ ।
ದಶಮೆ ಭವನೆ ಮಂದಶ್ಚಿನ್ಹಂ ಕಟಿಗತಂ ಭವೇತ್ ॥೨೪॥

ತ್ರಿಷಡಾಯೋ ಯದಾಸೌಮ್ಯೋ ವ್ಯಮ್ಯೋ ವಾಚಾಸ್ಪತಿರ್ಭವೇತ್ ।
ಸಹಜೇ ಚ ಭವೇತ್ ಕಾವ್ಯಸ್ತದಾ ಚಿನ್ಹಂ ಹೃದಿಸ್ಥಿತಮ್ ॥೨೫॥

ಕಾಲಪುರುಷನ ಯಾವ ಅಂಗದಲ್ಲಿ ಸೂರ್ಯ, ಭೌಮರಿರುವರೋ ಆ ಅಂಗದಲ್ಲಿ ತಿಲಾದಿ ಚಿಹ್ನೆ ಹೇಳುವುದು. ಶನಿ, ರಾಹು ಯಾವ ಸ್ಥಾನದಲ್ಲಿರುವರೋ ಅಲ್ಲಿ – ಶ್ಯಾಮ ವರ್ಣದ ಚಿಹ್ನೆಯನ್ನು – ಹೇಳುವುದು. ಪುರುಷನ ಅಂಶ ರಾಶಿಗಳನ್ನು ಮೇಲೆ ವಿವರಿಸಿದೆ. ವರಾಹಮಿಹಿರರು ಅದನ್ನೇ ಹೇಳಿದ್ದಾರೆ. ಅವರು ಬೃಹಜ್ಜಾತಕದಲ್ಲಿ 'ಕಲಾಂಗಾನಿ ವರಾಂಗಮಾನನಸರೋ ಹೃತ್ಕ್ರೋಡವಾಸೋಭೃತ್...' – ಈ ಶ್ಲೋಕದಲ್ಲಿ ವಿವರಿಸಿದ್ದಾರೆ.

ಲಗ್ನದಲ್ಲಿ ಒಂದು ವೇಳೆ ಚಂದ್ರ, ಮಂಗಳ, ಶುಕ್ರರಿದ್ದರೆ ತಲೆಯಲ್ಲಿ ಸಪ್ತಮದಲ್ಲಿ ಶುಕ್ರನಿದ್ದರೆ ಹಾಗೂ ಅಷ್ಟಮ ರಾಹು ಬಲಗಿವಿ ಮಸ್ತಕದ ಚಿಹ್ನೆಯಿರುತ್ತದೆ. ಗುರು, ಶುಕ್ರಯಾ ಮಂಗಲ ಸಪ್ತಮದಲ್ಲಿದ್ದರೆ, ಶೀರ್ಷದಲ್ಲಿ ಚಿಹ್ನೆಗಳಿರುತ್ತವೆ. ಗ್ರಹವರ್ಣ ದಂತೆ ಬಣ್ಣವಿರುತ್ತವೆ. ಚಂದ್ರ, ಮಂಗಳ ಅಥವಾ ಶುಕ್ರ ಲಗ್ನದಲ್ಲಿದ್ದರೆ ಹನ್ನೆರಡು ವರ್ಷದಲ್ಲಿ ಶೀರ್ಷದಲ್ಲಿ ನಿಸ್ಸಂದೇಹ ಚಿಹ್ನೆ ಹೇಳುವುದು. ನವಮ ಅಥವಾ ಪಂಚಮದಲ್ಲಿ ಶನಿ, ಮಂಗಳರಿದ್ದರೆ ಗುಧದ ಮೇಲೆ ಚಿಹ್ನೆ ಹಾಗೂ ಲಿಂಗದ ಮೇಲೆ ಚಿಹ್ನೆವಿರುತ್ತದೆ. ಶನಿ ಲಗ್ನ ಚತುರ್ಥದಲ್ಲಿ ಹಾಗೂ ಶುಕ್ರ ನವಮ ಅಥವಾ ಪಂಚಮಸ್ಥಾನ ಸ್ಥಿತರಾಗಿದ್ದರೆ ಬುಧ, ಗುರು ಅಷ್ಟಮಸ್ಥರಾಗಿದ್ದರೆ ಹೊಟ್ಟೆಯ ಮೇಲೆ ಚಿಹ್ನೆಯಿರುತ್ತದೆ. ಶುಕ್ರ, ರವಿ, ರಾಹು ಒಂದು ವೇಳೆ ನಾಲ್ಕನೇ ಸ್ಥಾನದಲ್ಲಿ ದ್ದರೆ ಅಥವಾ ಲಗ್ನದಲ್ಲಿ ಮಂಗಳನಿದ್ದರೆ ವಿಶೇಷತಃ ಬಲಗಾಲದಲ್ಲಿ ಚಿಹ್ನೆಯಿರು ತ್ತದೆ. ಲಗ್ನದಲ್ಲಿ ಶುಕ್ರ, ಅಷ್ಟಮದಲ್ಲಿ ರಾಹು ಇದ್ದರೆ ಬಲಗಿವಿಯಲ್ಲಿ ಚಿಹ್ನೆ, ಗುರು ಲಗ್ನದಲ್ಲಿ, ರಾಹು ಸಪ್ತಮದಲ್ಲಿ, ಬಲಭುಜದಲ್ಲಿ ಅಷ್ಟಮದಲ್ಲಿ ಚಂದ್ರ, ದ್ವಾದಶದಲ್ಲಿ ಗುರು, ಶುಕ್ರ, ಸಪ್ತಮದಲ್ಲಿ ಶನಿ, ಮಂಗಳರಿದ್ದರೆ ಎರಡೂ ಕೈಗಳ ಮೇಲೆ (ಪೂರ್ಣ ಭುಜದಿಂದ) ಚಿಹ್ನೆ, ಧನದಲ್ಲಿ ಶುಕ್ರ, ಕರ್ಮಸ್ಥಾನದಲ್ಲಿ ರಾಹು, ಶನಿ ಹಾಗೂ ಅಷ್ಟಮದಲ್ಲಿ ಸೂರ್ಯನಿದ್ದರೆ ನಾಭಿಯ ಮೇಲೆ ಚಿಹ್ನೆಯಿರುತ್ತದೆ. ಶುಕ್ರ, ಮಂಗಳ ತೃತೀಯದಲ್ಲಿ, ಎರಡರಲ್ಲಿ ಚಂದ್ರ, ದಶಮದಲ್ಲಿ ಶನಿಯಿದ್ದರೆ ಕಟಿ ಪ್ರದೇಶದಲ್ಲಿ ಚಿಹ್ನೆ 1 ಬುಧ 3, 6, 11 ಸ್ಥಾನಗಳನ್ನು ಬಿಟ್ಟು ಬೇರೆ ಸ್ಥಾನದಲ್ಲಿ ಗುರು 12ರಲ್ಲಿ ಹಾಗೂ 3ರಲ್ಲಿ ಶುಕ್ರರಿದ್ದರೆ ಹೃದಯದಲ್ಲಿ ಚಿಹ್ನೆ ಹೇಳಬೇಕು.

ಆದರೆ ವರಾಹಮಿಹಿರರು ಒಂದೇ ಶ್ಲೋಕದಲ್ಲಿ ಚಿನ್ಹೆ ಹೇಳಿ ದ್ರೇಷ್ಕಾಣವಶ 'ಕಂದೃಕ್ ಸ್ರೋತ್ರ – ನಸಾ ಕಪಲೋ ಹನು ಈ ಶ್ಲೋಕದಲ್ಲಿ ವಿವರಿಸಿದ್ದಾರೆ –

ಇಲ್ಲಿ ಅಂಗ ವಿಭಾಗ ಮಾಡಿ "ತಸ್ಮಿನ್ ಪಾಪಯುತೆ ವ್ರಣಾ ಶುಭಯುತೆ ದೃಷ್ಟಿ ಚ ಲಕ್ಷ್ಮಾದಿಶೀತ್' ಎಂದ ಒಂದು ಚಿಹ್ನೆಯ ವಿವರ ನೀಡುತ್ತಾರೆ.

ವಿಮರ್ಶೆ: – ಪರಾಶರರ ಶ್ಲೋಕಗಳಲ್ಲಿ ದೃಷ್ಟಿಯನ್ನು ಸೇರಿಸಿ ಚಿಹ್ನೆ ಹಾಗೂ ಗ್ರಹಸ್ಥಾನದಿಂದ ಚಿಹ್ನೆ ಶುಭಾಶುಭ ಹೇಳುವುದು ಗಾಯದ ಕಲೆಗಳ ಚಿಹ್ನೆ ಪರಿಗಣಿಸಬಾರದು.

## ಪಿತಾನ ಪರೋಕ್ಷದಲ್ಲಿ ಜನ್ಮಜ್ಞಾನ

ಲಗ್ನೆ ಮಂದೋ ಮದೆ ಭೌಮಶ್ಚಂದ್ರೋ ಲಗ್ನಂ ನ ಪಶ್ಯತಿ ।
ಬುಧ ಶುಕ್ರಾಂತರೆ ಚಂದ್ರಃ ಪರೋಕ್ಷೆ ಸ್ಯಜ್ಜನಿಃ ಪಿತುಃ ॥೨೬॥

ಅಷ್ಟಮೇ ನವಮೇ ವಾಪಿ ಚರಭೆ ಯದಿ ಭಾಸ್ಕರಃ ।
ಪರೋಕ್ಷೆ ಜನ್ಮಜಾತಸ್ಯ ಪಿತುಃ ಸ್ಯಾನ್ನಾತ್ರ ಸಂಶಯಃ ॥೨೭॥

ಕರ್ಮಭಾವಂ ವಿನಾದೃಶ್ಯೆ ಚರಭೆ ಯದಿ ಭಾಸ್ಕರಃ ।
ಲಗ್ನಂ ಚಂದ್ರೇನ ಪಶ್ಯೇಚ್ಚದ್ ದೂರಸಂಸ್ಥಃ ಶಿಶೋಃ ಪಿತಾ ॥೨೮॥

ಲಗ್ನದಲ್ಲಿ ಶನಿ ಸಪ್ತಮದಲ್ಲಿ ಭೌಮರಿಂದ ಲಗ್ನದ ಮೇಲೆ ಚಂದ್ರನ ದೃಷ್ಟಿ ಇರದಿದ್ದರೆ ಹಾಗೂ ಚಂದ್ರ, ಬುಧ, ಶುಕ್ರರ ನಡುವೆ ವಿದ್ಯಮಾನನಾಗಿದ್ದರೆ ಪಿತ್ರ ಪರೋಕ್ಷದಲ್ಲಿ ಜಾತಕನ ಜನ್ಮವೆಂದು ನಿಸ್ಸಂದೇಹವಾಗಿ ಹೇಳುವುದು. ಚರರಾಶಿ ಗತನಾದ ಸೂರ್ಯ ಅಷ್ಟಮ ಅಥವಾ ನವಮದಲ್ಲಿದ್ದರೆ – ಪರೋಕ್ಷ ಜನ್ಮಸ್ಪಷ್ಟ ವಾಗಿ ಹೇಳುವುದು. ದಶಮ ಭಾವ ಬಿಟ್ಟು ಯಾವುದೇ ದೃಶ್ಯ ಗೋಲಾರ್ಧದಲ್ಲಿ ಸ್ಥಿತ ಸೂರ್ಯ, ಚಂದ್ರ ಲಗ್ನ ನೋಡದಿದ್ದರೆ ಪಿತ್ರ ಪರೋಕ್ಷ ಜನ್ಮವೆಂದು ಹೇಳುವುದು. ಪರಾಶರೋಕ್ತಿಯನ್ನೇ ವರಾಹಮಿಹಿರರು ಎತ್ತಿ ಹೇಳಿದ್ದಾರೆ.

'ಪಿತುರ್ಜನಿಃ ಪರೋಕ್ಷಸ್ಯ ಲಗ್ನಯಿಂದಾವಪಶ್ಯತಿ । ವಿದೇಶ ಸ್ಥಸ್ಯ ಚಂಬೆಮದ್ಯಾದ್ ಭ್ರಷ್ಟೆ ದಿವಾಕರೆ ॥ ತಥಾ ಉದಯಸ್ಥೇಪಿ ವಾ ಮಂದೆ ಕುಜೆ ವಾಸ್ತಮುಪಾಗತೆ । ಸ್ಥಿತೆ ಚಾಂತಃ ಶೌಪನಾಥೆ ಶಶಾಂಗಸುತಶುಕ್ರಯೋಃ॥'

–ವರಾಹಮಿಹಿರ.

## ಪಿತೃ ಸೌಖ್ಯ ಹಾನಿಕರ ಯೋಗ

ರಾತ್ರೌ ಜನ್ಮ ಯದಾ ಯಸ್ಯ ಭೌಮಯಕ್ತಃ ಶನೈಶ್ವರಃ ।
ಚರಸ್ಥಃ ಪರದೇಶೆ ತು ತಾತಸ್ಯ ನಿಧನಂ ವದೇತ್ ॥೨೯॥

ಅಷ್ಟಮೇವಾ ವ್ಯಯೋ ಪಾಪಾ ಲಗ್ನೇಶೋ ಬಲಸಂಯುತಃ ।
ಸುಖೇಥ ನವಮೇ ವಾಪಿ ರೋಗಯುಕ್ತಸ್ತದಾ ಪಿತಾ ॥೩೦॥

ಲಗ್ನಸ್ಥ ಸಬಲಂ ಸೂರ್ಯ ಶನಿ ಭೌಮೌ ಪ್ರಸಪಶ್ಯತಃ ।
ಜನ್ಮಕಾಲೆ ತದಾ ತಸ್ಯ ರೋಗಯುಕ್ತಾಃ ಪಿತಾ ಖೆವೇತ್ ॥೩೦॥

ಚತುರ್ಥೆದಶಮೋ ವಾಪಿ ಶನಿಭೌಮಾರ್ಕ ಖೇಚರಾಃ ।
ಶುಭಸಂಬಂಧಿಹೀನಾಶ್ಚೆತ್ತದಾ ಪಿತೃಸುಖಂನಹಿ ॥೩೨॥

ರಾತ್ರಿ ಕಾಲದಲ್ಲಿ ಜನನವಾದ ಮಗುವಿನ ಕುಂಡಲಿಯಲ್ಲಿ ಚರರಾಶಿಸ್ತ ಶನಿ – ಭೌಮಯುಕ್ತನಾಗಿದ್ದರೆ ಪರದೇಶದಲ್ಲಿ ಆ ಮಗುವಿನ ತಂದೆ ಮರಣವೆಂದು ಸ್ಪಷ್ಟಪಡಿಸುವುದು. ಅಷ್ಟಮ ಅಥವಾ ವ್ಯಯದಲ್ಲಿ 2ಕ್ಕಿಂತ ಹೆಚ್ಚು ಪಾಪ ಗ್ರಹ ಹಾಗೂ ಸಬಲ ಲಗ್ನೇಶ 4ರಲ್ಲಿ ಇಲ್ಲವೇ 9ರಲ್ಲಿದ್ದರೆ ಅಥವಾ ಜನ್ಮ ಸಮಯದಲ್ಲಿ ಶನಿ, ಮಂಗಳ ಲಗ್ನಗಳ ಸಬಲ ಸೂರ್ಯನನ್ನು ನೋಡುತ್ತಿದ್ದರೆ, ಜಾತಕನ ತಂದೆ ರುಗ್ಣ – ರೋಗದಿಂದ ಬಳಲುವವನಾಗುವನು. ಒಂದು ಹಾಗೂ ನಾಲ್ಕರಲ್ಲಿ ಅಥವಾ ದಶಮದಲ್ಲಿ ಶನಿ, ಮಂಗಳ ಹಾಗೂ ಸೂರ್ಯರಿದ್ದರೆ ಹಾಗೂ ಅವುಗಳ ಮೆಲೆ ಶುಭ ಗ್ರಹದ ಪೂರ್ಣ ದೃಷ್ಟಿಯಿರದಿದ್ದರೆ ಜಾತಕ ಪಿತೃ ಸುಖ ವಂಚಿತ ನಾಗುವನು.

ಇತಿ ಪರಾಶರ ಹೋರಾಶಾಸ್ತ್ರ ಸೂತಿಕಾಧ್ಯಾಯ ಸಮಾಪ್ತಂ॥9॥

## ೧೧ನೇ ಅಧ್ಯಾಯ

# ಅಥಾರಿಷ್ಟ ವಿವೇಚನಾಧ್ಯಾಯಃ

**ಪರಾಶರ ಉವಾಚ:—**

ಮೈತ್ರೆಯಾದೌ ಜನುರ್ಲಗ್ನಾದ್ರಿಷ್ಟಂ ತದ್ ಭಂಗಮೇವಚ ।
ವಿಚಾರ್ಯ ತದನುಭ್ರೂಯಾತ್ ಫಲಂ ತನ್ವಾದಿಭಾವಜಮ್ ॥೧॥

**ಪರಾಶರರು ಹೇಳಿದರು—**

ಹೇ ಮೈತ್ರೇಯನೇ ಸರ್ವ ಪ್ರಥಮ ಲಗ್ನದಿಂದ ಬಾಲಾರಿಷ್ಟ ಅರಿಷ್ಟಭಂಗದ ವಿಚಾರ ಮಾಡಿ, ಅನಂತರ ತನ್ವಾದಿ ಭಾವಗಳ ಫಲಾದೇಶ ಮಾಡುವುದು.

### ಅವಧಿ

ಚತುರ್ವಿಂಶತಿವರ್ಷಾಣಿ ಯಾವದ್ ಗಚ್ಛತಿ ಜನ್ಮತಃ ।
ಜನ್ಮಾರಿಷ್ಟಂ ತಾವತ್ ಸ್ಯಾದಾಯರ್ದಾಯಂ ನ ಚಿಂತಯೇತ್ ॥೨॥

ಪರಾಶರರಂತೆ ಚತುರ್ವಿಂಶತಿ ವರ್ಷಗಳವರೆಗೆ ಬಾಲಾರಿಷ್ಟಾದಿಗಳಿರುವುದ ರಿಂದ ಜನ್ಮದಿಂದ ಆ ವರ್ಷದ ನಂತರ ಜನ್ಮ ಕುಂಡಲಿಯ ಶುಭಾಶುಭ ಅವಲೋಕಿಸುವುದು ವಿಹಿತ.

### ಅರಿಷ್ಟಯೋಗ—

ಷಷ್ಟಾಷ್ಟರಿಷ್ಫಗಶ್ಚಂದ್ರೋಗ್ರಹೈಃ ಕ್ರೂರೈಶ್ಚ ವೀಕ್ಷಿತಃ ।
ಜಾತಸ್ಯ ಮೃತ್ಯುದ್ದ ಸದ್ಯಸ್ತ್ವಷ್ಟವರ್ಷೈಃ ಶುಭೆಕ್ಷಿತಃ ॥೩॥

ಶಾಶಿವನ್ಮೃತ್ಯುದಾಃ ಸೌಮ್ಯಾಶ್ಚೆದ್ ವಕ್ರಾಃ ಕ್ರೂರ ವೀಕ್ಷಿತಾಃ ।
ಶಿಶೋರ್ಜಾತಸ್ಯ ಮಾಸೇನ ಲಗ್ನೆ ಸೌಮ್ಯವಿವಜಿಂತೆ ॥೪॥

ಯಸ್ಯಜನ್ಮಾನಿ ಧೀಸ್ಥಾಃ ಸ್ಯುಃ ಸೂರ್ಯರ್ರೆಂದು ಕುಜಾಭಿಧಾಃ ।
ತಸ್ಯತ್ವಾಶು ಜನತ್ರೀ ಚ ಭ್ರಾತಾ ನಿಧನ ಮಾಪ್ನುಯಾತ್ ॥೫॥

ಪಾಪೇಕ್ಷಿತೋ ಯುತೋ ಭೌಮೊ ಲಗ್ನಗೋ ನ ಶುಭೆಕ್ಷಿತಾಃ ।
ಮೃತ್ಯುದ ಸ್ತ್ವಷ್ಟಮಸ್ಥೋಪಿ ಸೌರಿಣಾರ್ಕಣಾ ವಾನ್ವಿತಃ ॥೬॥

ಆರು, ಎಂಟು, ಹನ್ನೆರಡು (ತ್ರಿಕ್) ಸ್ಥಾನಗಳಲ್ಲಿ ಯಾವುದೇ ಸ್ಥಾನದಲ್ಲಿ ಸ್ಥಿತ

ಚಂದ್ರ ಪಾಪಗ್ರಹ ದೃಷ್ಟಿತನಾದರೆ ತೀವ್ರ ಮೃತ್ಯುಕಾರಕ ಯೋಗವಾಗುತ್ತದೆ. ಒಂದು ವೇಳೆ ಅದರ ಮೇಲೆ ಶುಭಗ್ರಹದ ದೃಷ್ಟಿಯಿದ್ದರೆ 8 ವರ್ಷದಲ್ಲಿ ಮೃತ್ಯುವಕ್ರ ಶುಭಗ್ರಹವೂ ಪಾಪಗ್ರಹದಿಂದ ದೃಷ್ಟಿತವಾಗಿದ್ದರೆ ಚಂದ್ರನಂತೆ ಮೃತ್ಯುಕಾರಕವೇ. ಒಂದು ವೇಳೆ ಲಗ್ನದ ಮೇಲೆ ಶುಭಗ್ರಹದ ದೃಷ್ಟಿ ಇರದಿದ್ದರೆ ಒಂದು ತಿಂಗಳಲ್ಲಿ ಮಗುವಿನ ಮರಣವಾಗುತ್ತದೆ. ಜನ್ಮ ಸಮಯದಲ್ಲಿ ಸೂರ್ಯ, ಮಂಗಳ, ಶನಿ ಐದನೇ ಮನೆಯಲ್ಲಿದ್ದರೆ ತೀವ್ರ ಮಗುವಿನ ತಾಯಿ ಹಾಗೂ ಅಣ್ಣನ ಮೃತ್ಯು ಹೇಳುವುದು. ಲಗ್ನಸ್ಥ ಭೌಮ ಪಾಪಗ್ರಹಯುತ ದೃಷ್ಟನಾದರೆ ಹಾಗೂ ಶುಭಗ್ರಹದ ದೃಷ್ಟಿ ಅದರ ಮೇಲಿರದಿದ್ದರೆ ಜಾತಕನು – ತೀವ್ರ ಮರಣ ಹೊಂದುವನು. ಅಷ್ಟಮದಲ್ಲಿ ಮಂಗಳ, ಶನಿ ಅಥವಾ ಸೂರ್ಯರಿಂದ ಯುಕ್ತನಾಗಿದ್ದರೆ ಮಗುವಿಗೆ ಮಾರಕ ಯೋಗವೆ.

ಚಂದ್ರ–ಸೂರ್ಯ ಗ್ರಹೆ ರಾಹೂಶ್ಚಂದ್ರ ಸೂರ್ಯಯುತೋ ಯದಿ ।
ಸೌರಿಭೌಮೇಕ್ಷಿತಂ ಲಗ್ನಂ ಪಕ್ಷಮೇಕಂ ಸ ಜೀವತಿ ॥೭॥

ಕರ್ಮಸ್ಥಾನೆ ಸ್ಥಿತಹ ಸೌರಿಃ ಶತ್ರುಸ್ಥಾನೆ ಕಲಾನಿಧಿಃ ।
ಕ್ಷಿತಿಜಃ ಸಪ್ತಮೇ ಮಾತ್ರಾಸಾರ್ಧ ತು ಮ್ರಿಯತೆ ಶಿಶುಃ ॥೮॥

ಲಗ್ನೆ ಭಾಸ್ಕರ ಪುತ್ರುಶ್ಚ ನಿಧನೆ ಚಂದ್ರಮಾ ಯದಿ ।
ತೃತೀಯಸ್ಥೋ ಯದಾ ಜೀವಃ ಸ ಯಾತಿ ಯಮಮಂದಿರಮ್ ॥೯॥

ಹೋರಾಯಾಂ ನವಮೇ ಸೂರ್ಯಃ ಸಪ್ತಮಸ್ಥಃ ಶನೈಶ್ಚರಃ ।
ಏಕಾದಶೋ ಗುರುಃ ಶುಕ್ರೋ ಮಾಸಮೇಕಂ ಸ ಜೀವತಿ ॥೧೦॥

ವ್ಯಯೋ ಸರ್ವೆ ಗ್ರಹಾನೇಷ್ಟಾಃ ಸೂರ್ಯ–ಶುಕ್ರೇಂದು ರಾಹವಃ ।
ವಿಶೇಷನ್ನಾಶಕರ್ತಾರೋ ದೃಷ್ಟ್ಯಾವಾ ಭಂಗಕಾರಿಣಃ ॥೧೧॥

ಚಂದ್ರ, ಸೂರ್ಯಗ್ರಹಣ ಸಮಯದಲ್ಲಿ ರಾಹು, ಚಂದ್ರ ಅಥವಾ ಸೂರ್ಯಯುಕ್ತನಾದ ಸಮಯ ಲಗ್ನದ ಮೇಲೆ ಶನಿ, ಮಂಗಳ ದೃಷ್ಟಿಯಿದ್ದರೆ – ಜಾತಕನು ಒಂದು ಪಕ್ಷ (15 ದಿನ) ಮಾತ್ರ ಜೀವಿತವಿರುವನು. ದಶಮಸ್ಥ ಶನಿ, ಷಷ್ಠಸ್ಥ ಚಂದ್ರ ಹಾಗೂ ಸಪ್ತಮದಲ್ಲಿ ಮಂಗಳರಿದ್ದರೆ ತಾಯಿ ಸಹಿತ ಮಗುವಿನ ಮೃತ್ಯು. ಲಗ್ನದಲ್ಲಿ ಶನಿ, ಅಷ್ಟಮಸ್ಥ ಚಂದ್ರ, ತೃತೀಯಸ್ಥ ಗುರುವಿದ್ದರೆ ಜಾತಕನ ಮೃತ್ಯು ಹೇಳುವುದು. ಹೋರಾದ ನವಮದಲ್ಲಿ ಸೂರ್ಯ, ಸಪ್ತಮಸ್ಥ ಶನಿ ಹಾಗೂ ಏಕಾದಶದಲ್ಲಿ ಗುರು, ಶುಕ್ರರಿದ್ದರೆ ಬಾಲಕನಿಗೆ ಒಂದು ಮಾಸದಲ್ಲಿ ಮೃತ್ಯು ಸಂಭವ (ನಿಶ್ಚಿತ). ವ್ಯಯದಲ್ಲಿ ಯಾವುದೇ ಗ್ರಹ ಇಷ್ಟಕಾರಕದಲ್ಲಿ ವಿಶೇಷವಾಗಿ ರವಿ, ಶುಕ್ರ,

ಚಂದ್ರ ಹಾಗೂ ರಾಹು ಅಧಿಕ ಹಾನಿಕಾರಕರು. ಆದರೆ ಅವರ 12ನೇ ಮನೆಯ ಮೇಲಿನ ದೃಷ್ಟಿ ಅರಿಷ್ಟ ಭಂಗಕಾರಕವಿದೆ.

ಪಾಪನ್ವಿತಃ ಶಶಿ ಧರ್ಮದ್ಯೂನ–ಲಗ್ನಗತೊ ಯದಿ ।
ಶುಭೈರ್ನ ಚೇದಿಕ್ಷಿತ ಯುತಸ್ತದಾ ಮೃತ್ಯುಪ್ರದಾಃ ಶಿಶೋಃ ॥೧೨॥

ಸಂಧ್ಯಾಯಾಂ ಚಂದ್ರ ಹೋರಾಯಾಂ ಗಂಡಾಂತೆ ನಿಧನಾಯ ವೈ ।
ಪ್ರತ್ಯೇಕಂ ಚಂದ್ರಪಾಪೈಶ್ಚ ಕೇಂದ್ರಗೈಃ ಸ್ಯಾದ್ ವಿನಾಶನಮ್ ॥೧೩॥

ರವೇಸ್ತು ಮಂಡಲಾರ್ಧಸ್ತಾತ್ ಸಾಯಂ ಸಂಧ್ಯಾ ತ್ರಿನಾಡಿಕಾ ।
ತಥೈವಾರ್ದೋದಯಾತ್ಪೂರ್ವ ಪ್ರಾತಃ ಸಂಧ್ಯಾ ತ್ರಿನಾಡಿಕಾ ॥೧೪॥

ಚಕ್ರ – ಪೂರ್ವಾಪರಾರ್ಧೈಷು ಕ್ರೂರ ಸೌ ಮ್ಯೇಷು ಕೀಟಭೆ ।
ಲಗ್ನಗೆ ನಿಧನಂ ಯಾತಿ ನಾತ್ರಕಾರ್ಯಾ ವಿಚಾರಣಾ ॥೧೫॥

ವ್ಯಾಯಶತ್ರುಗತೈಃ – ಕಕ್ರೈರ್ಮ್ಯತ್ಯು ದ್ರವ್ಯಗತೈರಪಿ ।
ಪಾಪಮಧ್ಯಗತೆ ಲಗ್ನೆ ಸತ್ಯಮೇವ ಮೃತ್ಯಂ ವದೇತ್ ॥೧೬॥

ಲಗ್ನ ಸಪ್ತಮಗೌ ಪಾಪೌ ಚಂದ್ರೋಪಿ ಕ್ರೂರಸಂಯುತಃ ।
ಯದಾ ತ್ವವಿಕ್ಷೀತಃ ಸೌಮ್ಯೈಃ ಶೀರ್ಘನ್ಮೃತ್ಯುರ್ಭವೇತ್ತದಾ ॥೧೭॥

ಪಾಪಯುಕ್ತ ಚಂದ್ರ, ಲಗ್ನ, ಸಪ್ತಮ ಅಥವಾ ನವಮದಲ್ಲಿದ್ದು ಶುಭಗ್ರಹ ಸಂಯೋಗ ಅಥವಾ ದೃಷ್ಟಿ ರಹಿತನಾಗಿದ್ದರೆ ಶೀರ್ಘ ಜಾತಕನ ಮೃತ್ಯು. ಸಂಧ್ಯಾಕಾಲ ಚಂದ್ರಹೋರಾ ಅಥವಾ ಗಂಡಾಂತರ ಕಾಲ(ಕಟಕ, ವೃಶ್ಚಿಕ, ಮೀನದ ಅಂತ್ಯಭಾಗ) ದಲ್ಲಿ ಜನ್ಮವಾಗಿದ್ದರೆ, ಪ್ರತ್ಯೇಕ ಸ್ಥಿತಿಯಲ್ಲಿ ಚಂದ್ರ ಅಥವಾ ಪಾಪಗ್ರಹ ಕೇಂದ್ರಗತ ವಾಗಿದ್ದರೆ ಮಗುವಿನ ನಿಧನವೆಂದು ಹೇಳುವುದು. ಸೂರ್ಯನ ಅರ್ಧೋದಯದ ಪೂರ್ವ ಮೂರು ಘಟಿ ಪ್ರಾತಃ ಸಂಧ್ಯಾ ಅಂದರೆ ಸೂರ್ಯನ ಅರ್ಧಾಸ್ತದ ನಂತರ ಮೂರು ಘಟಿಯಲ್ಲಿ ಚಕ್ರದ ಪೂರ್ವಾರ್ಧದಲ್ಲಿ ಪಾಪಗ್ರಹ, ಉತ್ತರಾರ್ಧದಲ್ಲಿ ಶುಭಗ್ರಹ ಇದ್ದರೆ ಕರ್ಕ ಲಗ್ನವಿದ್ದರೆ ನಿಸ್ಸಂದೇಹ ಜಾತಕನ ಮೃತ್ಯು ಹೇಳಿದೆ. ಇಲ್ಲಿ ಪೂರ್ವಾರ್ಧವನ್ನು ಖ ಸ್ವಸ್ತಿಕದ ಮಧ್ಯದಿಂದ ಪಾತಾಳ ಬಿಂದು ಎಂದು ಅಂದರೆ ಚತುರ್ಥ ಮಧ್ಯ – ಪೂರ್ವಾರ್ಧ ಪಾತಾಳ ಮಧ್ಯದಿಂದ ಖ ಸ್ವಸ್ತಿಕಾರ್ಧ ಉತ್ತರಾರ್ಧ ಎಂದು ತಿಳಿಯುವುದು. ಪಾಪಗ್ರಹ 6, 8, 12, 2 ಸ್ಥಾನದಲ್ಲಿದ್ದು ಲಗ್ನ ಪಾಪಗ್ರಹ ಮತ್ತು ಅಥವಾ ಪಾಪ ಗ್ರಹ ಕರ್ತರಿಯಲ್ಲಿದ್ದರೆ ನಿಶ್ಚಯವಾಗಿ ಶಿಶುವಿನ ಮೃತ್ಯು ಹೇಳುವುದು. ಲಗ್ನ – ತತ್‌ಸಪ್ತಮದಲ್ಲಿ ಪಾಪಗ್ರಹ ಚಂದ್ರನು

ಪಾಪಗ್ರಹಯುಕ್ತನಾಗಿ ಶುಭ ದೃಷ್ಟಿಯಿರದಿದ್ದರೆ ಶೀರ್ಘ ಜಾತಕನ ಮೃತ್ಯು ಹೇಳುವುದು.

ವಿಮರ್ಶೆ – ಇಲ್ಲಿ ಅತಿ ಅವಶ್ಯಕವಾಗಿ ಪರಿಗಣಿಸಬೇಕಾದ ಅಂಶ – ಸೂರ್ಯೋದಯ, ಸೂರ್ಯಾಸ್ತ – ಸೂರ್ಯ ಸಿದ್ಧಾಂತದಂತೆ ಸೂರ್ಯ ಕಂಡೊಡನೆ ಸೂರ್ಯೋದಯವಲ್ಲ. ಸೂರ್ಯ ಮಧ್ಯ ಬಂದು ಕ್ಷಿತಿಜದ ಮೇಲೆ ಕಂಡಾಗ ಸೂರ್ಯೋದಯ ಮೊದಲು ಕಾಣುವುದು ಭ್ರಾಮಕತೆ – ಸೂಯಾಸ್ತ ವನ್ನು ಅದೇ ರೀತಿ ಪರಿಗಣಿಸುವುದು. 'ಇಲ್ಲಿ ಪ್ರಾಚೀನ (ವೇದ) ಕಾಲದಿಂದಲೂ' ಒಂದು ಮಾಧ್ಯಮದಿಂದ ಇನ್ನೊಂದು ಮಾಧ್ಯಮದಲ್ಲಿ ಹಾಯ್ದು ಬಂದು ವಕ್ರೀಭವನವಾಗಿ – ಸೂರ್ಯ ಮೊದಲೇ ಹುಟ್ಟಿದಂತೆ ಕಾಣುವುದರಿಂದ ಸೂರ್ಯ ಮಧ್ಯಮಕ್ಕೆ ಸೂರ್ಯೋದಯವೆಂಬುದು ಶಾಸ್ತ್ರೋಕ್ತ ಶುದ್ಧವಾದ ಅಂಶ.




ದೃಕ್‌ದಂತೆ ಸೂರ್ಯ ಕಂಡೊಡನೆ ಗ್ರಹಿಸುವುದರಿಂದ ಸಮಯ ವ್ಯತ್ಯಾಸ ವಾಗುತ್ತದೆ. ಮಧ್ಯ ಕಾಣಿಸಿದ ಸಮಯ ಸೂರ್ಯೋದಯವೆಂದು ಪರಿಗಣಿಸಿ – 3 ಘಟಿ ಮುಂದೆ, ಹಿಂದೆ ಪರಿಗಣಿಸುವುದು ಅದು ಗಂಡಕಾಲ.




ಮೇಲಿನ ಭಾಗದ ಹೋರಾದ ನವಮದಲ್ಲಿ ಸೂರ್ಯ, ಸಪ್ತಮದಲ್ಲಿ ಶನಿ... ಇತ್ಯಾದಿ ಹೇಳಿರುವುದರಿಂದ ಎಲ್ಲ ಗ್ರಹಗಳು ಕರ್ಕ ಇಲ್ಲವೆ ಸಿಂಹ ಹೋರಾದಲ್ಲಿ ಹಾಕುವುದು ತಪ್ಪು ಎಂಬುದು ಸಿದ್ಧವಾಗುತ್ತದೆ.

ಕ್ಷೀಣೆ ಶಶಿನಿ ಲಗ್ನಸ್ಥೆ ಪಾಪೈಃ ಕೇಂದ್ರಾಷ್ಟಸಂಸ್ಥಿತೈಃ ।
ಯೋ ಜಾತೋ ಮೃತ್ಯುಮಾಪ್ನೋತಿಸ ವಿಪ್ರೇಶ ನ ಸಂಶಯಃ ॥೧೮॥

ಪಾಪಯೋರ್ಮಧ್ಯಗಶ್ಚಂದ್ರೋ ಲಗ್ನಾಷ್ಟಾಂತ್ಯಲತತ್ರಗಃ ।
ಅಚಿರಾನ್ಮೃತ್ಯುಮಾಪ್ನೋತಿ ಯೋ ಜಾತಃ ಸ ಶಿಶು ಸ್ತದಾ ॥೧೯॥

ಪಾಪದ್ವಯ ಮಧ್ಯಗತೆ ಚಂದ್ರೆ ಲಗ್ನಸಮಾಶ್ರೀತೆ ।
ಸಪ್ತಾಷ್ಟಗೇನ ಪಾಪೇನ ಮಾತ್ರಾ ಸಹ ಮೃತಃ ಶಿಶುಃ ॥೨೦॥

ಶನೈಶ್ವರಾರ್ರ್ಕಭೌಮೇಷು ರಿಷ್ಫ–ಧರ್ಮಾಷ್ಟಗೇಷು ಚ ।
ಶುಭೈರವೀಕ್ಷ್ಯಮಾಣೇಷು ಯೇ ಜಾತೋ ನಿಧನಂ ಗತಃ ॥೨೧॥

ಯದ್‌ದ್ರೇಷ್ಕಾಣೇ ಚ ಯಾಮಿತ್ರೆ ತಸ್ಯ ಸ್ಯಾಯೇದ್ವಾರುಣೋ ಗ್ರಹಃ ।
ಕ್ಷೀಣ ಚಂದ್ರೋ ವಿಲಗ್ನಸ್ಥಃ ಸದ್ಯೋ ಹರತಿ ಜೀವಿತಮ್ ॥೨೨॥

ಆಪೋಕ್ಲಿಮಸ್ಥಿತಾಃ ಸರ್ವೆ ಗ್ರಹಾ ಬಲವಿವರ್ಜಿತಾಃ ।
ಷಡ್‌ಮಾಸಂ ವಾ ದ್ವಿಮಾಸಂ ವಾ ತಸ್ಯಾಯುಃ ಸಮುದಾಹೃತಮ್ ॥೨೩॥

ಲಗ್ನದಲ್ಲಿ ಕ್ಷೀಣ ಚಂದ್ರ ಹಾಗೂ ಪಾಪಗ್ರಹ ಕೇಂದ್ರ ಅಥವಾ ಅಷ್ಟಮಗತ ರಾಗಿದ್ದರೆ – ನಿಸ್ಸಂದೇಹ ಜಾತಕನ ಮೃತ್ಯು. ಚಂದ್ರನು ಪಾಪಕರ್ತರಿ ಯೋಗದಿಂದ ಲಗ್ನದಲಲಣಿದ್ದರೆ ಅಷ್ಟಮ, ದ್ವಾದಶ ಅಥವಾ ಸಪ್ತಮ ಗತನಾಗಿದ್ದರೂ ಜಾತಕನ ಮೃತ್ಯು ಹೇಳುವುದು. ಪಾಪದ್ವಯದ ಮಧ್ಯದಲ್ಲಿ ಚಂದ್ರ ಲಗ್ನಗತನಾದರೆ ಅಷ್ಟಮ, ಸಪ್ತಮ ಭಾವಗಳು ಪಾಪಕ್ರಾಂತ (ಯಾವುದೇ ಒಂದು) ತಾಯಿ ಮಗುವಿನೊಂದಿಗೆ ಮೃತ್ಯುವಿನ ವಶಳಾಗುತ್ತಾಳೆ. ಶನಿ, ರವಿ ಹಾಗೂ ಭೌಮರು 12, 9, 8 ಭಾವದ ಲ್ಲಿದ್ದು ಶುಭಗ್ರಹ ದೃಷ್ಟಿರಹಿತರಾಗಿದ್ದರೆ ಮಗುವಿನ ಮೃತ್ಯು ಹೇಳುವುದು. ಯಾವ ಲಗ್ನದ ದ್ರೇಷ್ಕಾಣ ಅಥವಾ ಸಪ್ತಮದಲ್ಲಿ ಪಾಪಗ್ರಹವಿದ್ದರೆ ಅದರಂತೆ ಕ್ಷೀಣ ಚಂದ್ರ ಲಗ್ನವರ್ತಿಯಾಗಿದ್ದರೆ ಮಗುವಿನ ಶೀರ್ಘ ಮರಣ ಹೇಳುವುದು. ನಿರ್ಬಲ ಎಲ್ಲ ಗ್ರಹಗಳು ಆಪೋಕ್ಲಿಮ್ ಸ್ಥಾನದ ರಾಶಿಯಲ್ಲಿದ್ದರೆ ಆರು ತಿಂಗಳು ಅಥವಾ ಎರಡೇ ತಿಂಗಳಲ್ಲಿ ಮಗುವಿನ ಮೃತ್ಯುವೆಂದು ಸ್ಪಷ್ಟ ನಿರ್ದೇಶಿಸಬೇಕು.

## ಮಾತೃ ಕಷ್ಟ ವಿಚಾರ

ಪಾಪೈಃ ಖೇಟೈ ಸ್ತ್ರೀಭಿಶ್ಚಂದ್ರೊ ದೃಶ್ಯತೆ ಯದಿ ಜನ್ಮನಿ ।
ಮಾತೃನಾಶೋ ಭ ಭೇತ್ತಸ್ಯ ಶುಭೈದೃಷ್ಟೆ ಶುಭ ವದೇತ್ ॥೨೪॥

ಧನೆ ರಾಹುರ್ಬುಧಃ ಶುಕ್ರಃ ಸೌರಿಃ ಸೂರ್ಯೋ ಯದಾಸ್ಥಿತಃ ।
ತಸ್ಯ ಮಾತುರ್ಭವೇನ್ಮೃತ್ಯು ಮೃತೆ ಪಿತರಿ ಜಾಯಿತೆ ॥೨೫॥

ಪಾಪಾತ್ಸಪ್ತಮ–ರಂಧ್ರೇಸ್ಥೆ ಚಂದ್ರೇ ಪಾಪಸಮನ್ವಿತೆ ।
ಬಲಿಭಿಃ ಪಾಪಕೈರ್ದೃಷ್ಟೆ ಜಾತೋ ಭವತಿ ಮಾತೃಹಾ ॥೨೬॥

ಉಚ್ಚಸ್ಥೊ ವಾಥ ನೀಚಸ್ಥಃ ಸಪ್ತಮಸ್ಥೊ ಯದಾ ರವಿ ।
ಪಾನಹೀನೋ ಭವೇದ್ ಬಾಲಸ್ತ್ವಜಾ ಕ್ಷಿರೇಣ ಜೀವತಿ ॥೨೭॥

ಚಂದ್ರಾಚ್ಚತುರ್ಥಗಃ ಪಾಪೋ ರಿಪುಕ್ಷೇತ್ರೆ ಯದಾ ಭವೇತ್ ।
ತದಾ ಮಾತೃವಧಂ ಕುರ್ಯಾತ್ ಕೇಂದ್ರೆ ಯದಿ ಶುಭೊ ನಚೇತ್ ॥೨೮॥

ದ್ವಾದಶೆ ರಿಪುಭಾವೆ ಚ ಯದಾ ಪಾಪಗ್ರಹೋ ಭವೇತ್ ।
ತದಾ ಮಾತೃರ್ಭಯಂ ವಿದ್ಯಾಚ್ಚತುರ್ಥೆ ದಶಮೇ ಪಿತುಃ ॥೨೯॥

ಲಗ್ನೆ ಕ್ರೂರೊ ವ್ಯಯೇ ಕ್ರೂರೊ ಧನೆ ಸೌಮ್ಯಸ್ತಥೈವ ಚ ।
ಸಪ್ತಮೇ ಭವನೆ ಕ್ರೂರಃ ಪರಿವಾರ ಕ್ಷಯಂಕರಃ ॥೩೦॥

ಲಗ್ನಸ್ಥೆ ಚ ಗುರೌ ಸೌರೌ ಧನೆ ರಾಹೌ ತೃತೀಯಗೆ ।
ಇತಿ ಚೇಜ್ಜನ್ಮಕಾಲೆ ಸ್ಯಾದ್ ಮಾತಾ ತಸ್ಯ ನ ಜೀವತಿ ॥೩೦॥

ಕ್ಷೀಣ ಚಂದ್ರಾತ್ ತ್ರಿಕೋಣಸ್ಥೈಃ ಪಾಪೈಃ ಸೌಮ್ಯವಿವರ್ಜಿತೈಃ ।
ಮಾತಾ ಪರಿತ್ಯಜೇದ್ ಬಾಲಂ ಷಡ್‌ಮಾಸಾಚ್ಚ ನ ಸಂಶಯಃ ॥೩೨॥

ಏಕಾಂಶ ಕಸ್ಥೌ ಮಂದಾರೌ ಯತ್ರ ಕುತ್ರ ಸ್ಥಿತೌ ಯದಾ ।
ಶಶಿ ಕೇಂದ್ರಗ ತೌ ತೌ ವಾ ದ್ವಿಮಾತೃಭ್ಯಾಂ ನ ಜೀವತಿ ॥೩೩॥

ಜನ್ಮಕಾಲಿಕ ಚಂದ್ರನನ್ನು 3 ಪಾಪಗ್ರಹಗಳು ನೋಡಿದರೆ ತಾಯಿಯ ಮೃತ್ಯು ಹೇಳುವುದು. ಆದರೆ ಚಂದ್ರನ ಮೇಲೆ ಶುಭ ದೃಷ್ಟಿಯಿದ್ದರೆ ಶುಭ ಹೇಳುವುದು. ಧನ ಸ್ಥಾನದಲ್ಲಿ ರಾಹು, ಬುಧ, ಶುಕ್ರ, ಸೂರ್ಯ, ಶನಿ ಈ ನಾಲ್ಕು ಗ್ರಹಗಳಿದ್ದರೆ ತಂದೆಯ ಮೃತ್ಯು ಹೇಳುವುದು ಹಾಗೂ ನಂತರ – ಮಗುವಿನ ಜನನ ಹಾಗೂ ಮಾತಾನ ಮೃತ್ಯು ಸಂಭವ – ಪಾಪಗ್ರಹದಿಂದ ಸಪ್ತಮ ಅಥವಾ ಅಷ್ಟಮ ಸ್ಥಿತ ಚಂದ್ರ ಪಾಪಯುಕ್ತನಾಗಿದ್ದರೆ ಹಾಗೂ ಬಲಿಷ್ಠ ಪಾಪಗ್ರಹದ ದೃಷ್ಟಿ ಚಂದ್ರನ ಮೇಲಿದ್ದರೆ ಆ ಜಾತಕ ಮಾತೃನಾಶಕನಾಗುತ್ತಾನೆ. ಉಚ್ಚ (ಮೇಷ ಗತ) ರವಿ ಅಥವಾ ನೀಚ (ತುಲಾ ಗತ) ರವಿ ಸಪ್ತಮ ಭಾವದಲ್ಲಿದ್ದರೆ ಮಗು ತಾಯಿಯ ಹಾಲಿನಿಂದ

ವಂಚಿತವಾಗಿ ಆಡಿನ ಹಾಲಿನಿಂದ ಜೀವಿಸುವಂತಾಗುತ್ತದೆ. ಚಂದ್ರನಿಂದ ಚತುರ್ಥ ಸ್ಥಾನ ಗತ ಪಾಪಗ್ರಹ ಶತ್ರುಸ್ಥಾನದಲ್ಲಿದ್ದರೆ ಕೇಂದ್ರ ಸ್ಥಾನಗಳು (ಲಗ್ನ) ಶುಭಗ್ರಹ ರಿಕ್ತವಾಗಿದ್ದರೆ ತಾಯಿಯ ನಿಧನ. ಅದರಂತೆ 12ನೇ ಸ್ಥಾನ, 6ನೇ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಮಾತೃ ನಾಶಕಾರಕ. ಅವೇ ಗ್ರಹಗಳು ದಶಮ, ಚತುರ್ಥದಲ್ಲಿದ್ದರೆ ತಂದೆ ನಾಶಕಗಳು. ಲಗ್ನ ಧನ ವ್ಯಯ ಸಪ್ತಮ ಭಾವಗಳ ಪಾಪಗ್ರಹಗಳಿದ್ದರೆ – ಜಾತಕನು ಪರಿವಾರ ನಾಶಕನಾಗುತ್ತಾನೆ. ಲಗ್ನದಲ್ಲಿ ಗುರು, ಧನದಲ್ಲಿ ಶನಿ, ತೃತೀಯದಲ್ಲಿ ರಾಹುಗಳಿದ್ದರೆ ಜಾತಕನ ತಾಯಿ ಮರಣ ನಿಶ್ಚಿತ. ಕ್ಷೀಣ ಚಂದ್ರನಿಂದ ನವಮದಲ್ಲಿ ಪಂಚಮದಲ್ಲಿ ಪಾಪಗ್ರಹಗಳು ಮಾತ್ರ ವಿದ್ಧ ಶುಭ ದೃಷ್ಟಿಯಿರದಿದ್ದರೆ 6 ತಿಂಗಳಲ್ಲಿ ಬಾಲಕ ಮಾತೃವಿಹೀನನಾಗುತ್ತಾನೆ – ಯಾವುದೇ ರಾಶಿಯಲ್ಲಿ ಶನಿ, ಮಂಗಳ ಒಂದೇ ಅಂಶದಲ್ಲಿದ್ದರೆ ಅವೆರಡು ಚಂದ್ರನಿಂದ ಕೇಂದ್ರದಲ್ಲಿದ್ದರೆ – ಜಾತಕನ ಜನನಿ ಧಾತ್ರಿಪಾಲಿತರಾಗಿದ್ದರೂ ನಿಸ್ಸಂದೇಹ ಜೀವಿತರಾಗಿರುವುದಿಲ್ಲ.

## ಪಿತೃ ಕಷ್ಟ ವಿಚಾರ

ಲಗ್ನೇ ಮಂದೋ ಮದೇ ಭೌಮಃ ಷಷ್ಟಸ್ಥಾನೇ ಚ ಚಂದ್ರಮಾಃ ।
ಇತಿ ಚೇಜ್ಜನ್ಮಕಾಲೇ ಸ್ಯಾತ್ ಪಿತಾ ತಸ್ಯ ನ ಜೀವತಿ ॥೩೪॥

ಲಗ್ನೇ ಜೀವೋ ಧನೇ ಮಂದ ರವಿ ಭೌಮ ಬುಧ ಸ್ತಥಾ ।
ವಿವಾಹ ಸಮಯೇ ತಸ್ಯ ಬಾಲಸ್ಯ ಮ್ರಿಯತೆ ಪಿತಾ ॥೩೫॥

ಲಗ್ನದಲ್ಲಿ ಶನಿ, ಸಪ್ತಮದಲ್ಲಿ ಭೌಮ ಹಾಗೂ ಅಷ್ಟಮದಲ್ಲಿ ಚಂದ್ರ ಈ ರೀತಿ ಜನ್ಮಕುಂಡಲಿಯಲ್ಲಿ ಗ್ರಹಗಳಿದ್ದರೆ ಜಾತಕನ ತಂದೆ ಮೃತನಾಗುತ್ತಾನೆ. ಲಗ್ನದಲ್ಲಿ ಗುರು, ಧನದಲ್ಲಿ ಶನಿ, ರವಿ, ಮಂಗಳ ಹಾಗೂ ಬುಧ ಇದ್ದರೆ ಜಾತಕನ ಲಗ್ನ ಸಮಯದಲ್ಲಿ ತಂದೆಯ ಮೃತ್ಯು ಹೇಳುವುದು.

ಸೂರ್ಯಃ ಪಾಪೇನ ಸಂಯುಕ್ತಾಃ ಪಾಪಮಧ್ಯ ಗತೋಽಪಿ ವಾ ।
ಸೂರ್ಯಾತ್ ಸಪ್ತಮಗಃ ಪಾಪಸ್ತದಾ ಪಿತೃವಧೋ ಭವೇತ್ ॥೩೬॥

ಸಪ್ತಮೇ ಭವನೇ ಸೂರ್ಯಃ ಕರ್ಮಸ್ಥೋ ಭೂಮಿ ನಂದನಃ ।
ರಾಹುರ್ವ್ಯಯೇ ಚ ಯಸ್ಯೈವ ಪಿತಾ ಕಷ್ಟೇನ ಜೀವತಿ ॥೩೭॥

ದಶಮಸ್ಥೋ ಯದಾ ಭೌಮಃ ಶತೃಕ್ಷೇತ್ರೆ – ಸಮಾಶ್ರೀತಃ ।
ಮ್ರಿಯತೆ ತಸ್ಯ ಜಾತಸ್ಯ ಪಿತಾ ಶೀಘ್ರಂನ ಸಂಶಯಃ ॥೩೮॥

ರಿಪುಸ್ಥಾನೆ ಯದಾ ಚಂದ್ರೋ ಲಗ್ನಸ್ಥಾನೆ ಶನಿಶ್ವರಃ ।
ಕುಜಶ್ವ ಸಪ್ತಮೇ ಸ್ಥಾನೆ ಪಿತಾತಸ್ಯನ ಜೀವತಿ ॥೩೯॥

ಸೂರ್ಯನು ಪಾಪಗ್ರಹ ಯುಕ್ತ ಪಾಪದ್ವಯ ಮಧ್ಯನಾಗಿದ್ದರೆ ಹಾಗೂ ಸೂರ್ಯ ಸಪ್ತಮದಲ್ಲಿ ಪಾಪಗ್ರಹವಿದ್ದರೆ ಜಾತಕನ ತಂದೆ ಮೃತ್ಯುಧಾಮಕ್ಕೆ ಹೋಗುತ್ತಾನೆ. ಸಪ್ತಮದಲ್ಲಿ ಸೂರ್ಯ, ದಶಮದಲ್ಲಿ ಮಂಗಳ, ವ್ಯಯದಲ್ಲಿ ರಾಹು ಇದ್ದರೆ ತಂದೆ ಬಹಳ ಕಷ್ಟದಿಂದ ಜೀವನ ನಿರ್ವಹಿಸಬೇಕಾಗುವುದು. ದಶಮ ಸ್ಥಿತ ಕುಜ, ಶತ್ರು ಕ್ಷೇತ್ರದಲ್ಲಿದ್ದರೆ ತೀವ್ರ ತಂದೆಯ ಮರಣ ಹೇಳುವುದು. ಆರನೇ ಸ್ಥಾನದಲ್ಲಿ ಚಂದ್ರ, ಲಗ್ನದಲ್ಲಿ ಶನಿ, ಸಪ್ತಮದಲ್ಲಿ ಮಂಗಳರಿದ್ದರೆ ತೀವ್ರ ತಂದೆ ಮೃತ್ಯು.

ಭೌಮಾಂಶಕಗತೆ ಭಾನೌ ಸೌರಿಣಾ ಚ ನಿರೀಕ್ಷಿತೆ ।
ಪ್ರಾಗ್ ಜನ್ಮನೋ ನಿವೃತ್ತಿಃ ಸ್ಯಾನ್ಮೃತ್ಯುರ್ವಾಪಿ ಶಿಶೋಃ ಪಿತುಃ ॥೪೦॥

ಸೂರ್ಯ, ಮಂಗಳ ನವಾಂಶ ಗತನಾಗಿದ್ದರೆ ಅವನ ಮೇಲೆ ಶನಿ ದೃಷ್ಟಿಯಿದ್ದರೆ, ತಂದೆ ಜಾತಕನ ಜನ್ಮ ಪೂರ್ವದಲ್ಲಿ ವಿರಕ್ತನಾಗಿ ಮನೆ ಬಿಟ್ಟು ಹೋಗಿರುತ್ತಾನೆ. ಇಲ್ಲವೇ ಮೃತ್ಯುವಶನಾಗಿರುತ್ತಾನೆ. (ವಿರಕ್ತ – ದೇಹ ತ್ಯಾಗ ಅವರ ಕುಂಡಲಿ ಯಿಂದ ನೋಡುವುದು)

ಪಾತಾಲೆ ಚಾಂಬರೆ ಪಾಪೌ ದ್ವಾದಶೇ ಚ ಯದಾ ಸ್ಥಿತೌ ।
ಪಿತರಂ ಮಾತರಂ ಹತ್ವಾ ದೇಶಾದ್ದೇಶಾಂತರಂ ವ್ರಜೇತ್ ॥೪೧॥

ರಾಹೂಜೀವೌ ರಿಪುಕ್ಷೇತ್ರೆ ಲಗ್ನೆವಾಥ ಚತುರ್ಥಕೆ ।
ವತ್ಸರೆ ತುತ್ರಯೋವಿಂಶೋ ಪುತ್ರಸ್ತಾತ್ಂನ ಪಶ್ಯತಿ ॥೪೨॥

ಚತುರ್ಥ ದಶಮ ಅಥವಾ ದ್ವಾದಶ ಸ್ಥಾನದಲ್ಲಿ ಎರಡು ಪಾಪಗ್ರಹ ಇದ್ದರೆ ತಾಯಿ, ತಂದೆ ಹತ್ಯೆ ಮಾಡಿ (ಹತ್ವಾ) ದೇಶ ದೇಶಾಂತರ ವಾಸಿಯಾಗುವನು. ರಾಹು, ಗುರು, ಲಗ್ನ ಚತುರ್ಥ ಅಥವಾ ಷಷ್ಠದಲ್ಲಿದ್ದರೆ ತಂದೆ ಮೃತ್ಯು ಜಾತಕನ 23ನೇ ವರ್ಷದಲ್ಲಾಗುತ್ತದೆ.

ಭಾನುಃ ಪಿತಾ ಚ ಜಂತೂನಾಂ ಚಂದ್ರೋ ಮಾತಾ ತಥೈವ ಚ ।
ಪಾಪದೃಷ್ಟಿಯುತೋ ಭಾನುಃ ಪಾಪಮಧ್ಯಗತೋಪಿವಾ ॥೪೩॥

ಪಿತ್ರಾರಿಷ್ಟಂ ವಿಜಾನೀ ಯಾೌ ಚ್ಛಿಶೋರ್ಜಾತಸ್ಯ ನಿಶ್ಚಿತಮ್ ।

ಭಾನೋಃ ಷಷ್ಠಾಷ್ಟರ್ಕ್ಷಸ್ಥೈಃ ಪಾಪೈಃ ಸೌಮ್ಯವಿವರ್ಜಿತೈಃ ।
ಚತುರ್ಥ ಸ್ಥಾನಗೈರ್ವಾಪಿ ಪಿತ್ರಾರಿಷ್ಟಂ ವಿನಿರ್ದಿಶೇತ್ ॥೪೪॥

ಏವಮಿಂದೋಃ ಸ್ಥಿತೌ ರೈರ್ಮಾತೃಕಷ್ಟಂ ವಿಚಿಂತಯೇತ್ ।
ಕಷ್ಟಂಮೃತಿಂವಾ ಜಾನೀಯಾದ್ ಬಲಾಬಲ ವಿವೇಕತಃ ॥೪೫॥

ಸೂರ್ಯನು ಸಕಲ ಪ್ರಾಣಿಮಾತ್ರರ (ಜಂತು) ತಂದೆ. ಚಂದ್ರ ತಾಯಿ – ಹೀಗಾಗಿ ಜನ್ಮ ಸಮಯದಲ್ಲಿ ರವಿ ಪಾಪಗ್ರಹಯುತನಾಗಿರುವುದು. ತಂದೆಗೆ ಅರಿಷ್ಟ ಸೂಚಕ ಅಥವಾ ಸೂರ್ಯನಿಂದ ಷಷ್ಠ ಅಷ್ಟಮ ರಾಶಿ ಪಾಪಗ್ರಹ ಕ್ರಾಂತವಾಗಿದ್ದರೆ ಅದರ ಮೇಲೆ ಶುಭ ಗ್ರಹಗಳ ಯೋಗ ದೃಷ್ಟಿಯಿರದಿದ್ದರೂ ಕೂಡ ತಂದೆಗೆ ಮಾರಕವೇ. ಅದರಂತೆ ಚಂದ್ರನಿಂದ ತಾಯಿಗೆ ಅರಿಷ್ಟವೆಂದು ತಿಳಿಯುವುದು. ಪಾಪಗ್ರಹಯುತ ಅಥವಾ ದೃಷ್ಟ ಅಥವಾ ಪಾಪಗ್ರಹ ಕರ್ತರಿಯಲ್ಲಿದ್ದರೆ (ಚಂದ್ರ) ತಾಯಿಗೆ ಕಷ್ಟಕಾರಕ ಚಂದ್ರನಿಂದ ಅಷ್ಟಮಗತ ಪಾಪ ಶುಭ ಗ್ರಹ ದೃಷ್ಟಿತ ಅಥವಾ ಯುಕ್ತರಾಗಿದ್ದರೆ ಮಾತೃಕಾರಕವಾಗುತ್ತದೆ. ಬಲಾಬಲ ವಿವೇಕದಿಂದಲೇ ಇಷ್ಟ – ಅರಿಷ್ಟ ಫಲ ಹೇಳುವುದು.

ವಿಮರ್ಶೆ – ಎಲ್ಲ ಜ್ಯೋತಿಷ್ಯ ಗ್ರಂಥಕರ್ತರ ಗ್ರಂಥದಲ್ಲಿ ಅರಿಷ್ಟಾಧ್ಯಾಯದ ಮೇಲೆ ಬರೆದಿರುವುದು ಮುಖ್ಯ ಅಂಶ. ಪರಾಶರೋಕ್ತ ಈ ಅರಿಷ್ಟಾಧ್ಯಾಯ ಅತಿ ಪ್ರಾಚೀನತಮವೆಂದು ಗಣಿಸುವುದು ಸರ್ವಥಾ ಉಪಯುಕ್ತವಾಗಿದೆ. ಅದರಂತೆ ಅರ್ವಾಚೀನ ಜಾತಕಕಾರರು ಅರಿಷ್ಟಾಧ್ಯಾಯವನ್ನು 2 ಅಧ್ಯಾಯಗಳಲ್ಲಿ ಇಟ್ಟಿರುವುದು ಕಾಣಸಿಗುತ್ತದೆ. ಅಧಿಕತಮ ಜಾತಕಕಾರರು ಚಂದ್ರಾರಿಷ್ಟದ ಬಗ್ಗೆ ಹೆಚ್ಚು ವಿವೇಚಿಸಿದ್ದಾರೆ. ಇಲ್ಲಿ ಚಂದ್ರಾರಿಷ್ಟ ಬಿಟ್ಟು ಇತರ ಗ್ರಹಗಳಿಂದಾಗುವ ಅರಿಷ್ಟವನ್ನು ವಿವೇಚಿಸಿದ್ದಾರೆ.

ಪರಾಶರೀಯ ಅರಿಷ್ಟಾಧ್ಯಾಯದ 3ನೇ ಶ್ಲೋಕ

ಷಷ್ಠಾಷ್ಟರಿ ಷ್ಫಾಗಶ್ಚಂದ್ರೋ ಗ್ರಹೈಃ ಕ್ರೂರಹೈ ವೀಕ್ಷಿತಃ ।

ಜಾತಸ್ಯ ಮೃತ್ಯುದಃ ಸದ್ಯಸ್ತ್ವಷ್ಟವರ್ಷೈರ್ಃ ಶುಭೇಕ್ಷಿತಃ ।

ಇದನ್ನೇ ವರಾಹಮಿಹಿರ ಲಘು ಜಾತಕದಲ್ಲಿ –

ಷಷ್ಠಷ್ಟಮೇಪಿ ಚಂದ್ರಃ ಸದ್ಯೋ ಮರಣಾಯ ಪಾಪಸುದೃಷ್ಟಃ ಅಷ್ಟಭಿಃ ಶುಭದೃಷ್ಟಾಂ ಇತ್ಯಾದಿ

ಈ ಅಧ್ಯಾಯದ 4ನೇ ಶ್ಲೋಕ –

**ಶಶಿವನ್ಮೃತ್ಯುರ್ದಾಃ ಸೌಮ್ಯೈಃ ಅದನ್ನೇ ಲಘು ತ್ರಯೋದಶ ಶ್ಲೋಕ ಸಂಧ್ಯಾಯಾಂ ಚಂದ್ರಹೋರಾಯಂ ಗಂಡಾಂತೆ ನಿಧನಾಯ ವೈ । ಪ್ರತ್ಯೇಕಂ ಚಂದ್ರ ಪಾಪೈಶ್ಚ ಕೇಂದ್ರಗೈಃ ಸ್ಯಾದ್ ವಿನಾಶನಮ್ । ಅದನ್ನೇ ಲಘು ಜಾತಕದಲ್ಲಿ ರಾಶ್ಯಾಂತ ರಸ್ಥೈ ಪಾಪೈಃ ಸಂಧ್ಯಾಯಾಂ ಹಿಮಮಂಟಾಬಹೋರಾಯಾನ್**

ಎಂಬುದು ಹಾಗೂ ಪಂಚದಶ (15) ಶ್ಲೋಕ

**ಚಕ್ರಯೂರ್ವಾಪರಾರ್ಧೇಷು... ಎಂಬುದನ್ನು ಲಘುಜಾತಕ ಚಕ್ರಪ್ರಾಕ್ ಪಶ್ಚಾರ್ಧೆ....**

ಈ ರೀತಿ ಪರಾಶರೀಯ ಅಧಿಕಾರೋಕ್ತವಾದ ಆಶಯವನ್ನೇ ಎತ್ತಿ ವರಾಹ ಮಿಹಿರರು ಬರೆದು – ತಮ್ಮ ಆಶಯವನ್ನು ವ್ಯಕ್ತ ಮಾಡಿ ಅವರಿಂದ ಉಪಕೃತರಾಗಿದ್ದಾರೆ. ಈ ವ್ಯಕ್ತಿಕರಣ ಚಂದ್ರಕೃತಾರಿಷ್ಟಕ್ಕೆ ಸೀಮಿತವಿದೆ ಹಾಗೂ ಮಾತೃ ಕಷ್ಟ, ಪಿತೃ ಕಷ್ಟ ವಿಚಾರಕ್ಕೆ ಸಂಬಂಧಿಸಿಲ್ಲ ಕೇವಲ ಮಾತೃದಾರಿಷ್ಟಕ್ಕೆ ಸೀಮಿತವಾಗಿದೆ. ಇಲ್ಲಿ ಮಾತೃ, ಪಿತೃ ಕಷ್ಟ ವಿಚಾರ ಉಳಿದ ಗ್ರಂಥಗಳಿಗಿಂತ ವಿಶದ ರೂಪದಲ್ಲಿ ಪ್ರಸ್ತುತವಾಗಿದೆ. ಹೀಗಾಗಿ ಅರ್ವಾಚೀನರಿಗೆಲ್ಲ ಪರಾಶರರೇ – ಅರಿಷ್ಟಾಧ್ಯಾಯದ ಪಿತಾಮಹರು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇರಿಷ್ಟಾ ವಿವೇಚನಾಧ್ಯಾಯ ಸಮಾಪ್ತಂ ॥10॥**



೧೧ನೇ ಅಧ್ಯಾಯ

# ಅಥಾರಿಷ್ಟಭಂಗಾಧ್ಯಾಯಃ

ಪರಾಶರ ಉವಾಚ:—

ಇತ್ಯುಕ್ತಂ ತು ಮಯಾರಿಷ್ಟಂ ತದ್‌ಭಂಗಂ ಶೃಣ್ವತಃ ಪರಮ್ ।
ರಿಷ್ಟ, ಭಂಗಂ ಚ ದೃಷ್ಟ್ವೈವ ಜಾತಕಸ್ಯ ಫಲಂ ದಿಶೇತ್ ॥೧॥

ಏಕೋಪಿ ಜ್ಞಾರ್ಯಶುಕ್ರಾಣಾಃ ಲಗ್ನಾತ್ ಕೇಂದ್ರಗತೋ ಯದಿ ।
ಅರಿಷ್ಟಂ ನಿಖಿಲಂ ಹಂತಿ ತಿಮಿರಂ ಭಾಸ್ಕರೋ ಯಥಾ ॥೨॥

ಏಕಏವ ಬಲಿ ಜೀವೋ ಲಗ್ನಾಸ್ಥೋರಿಷ್ಠ ಸಂಚಯವಮ್ ।
ಹಂತಪಾಪತ್ರಯಂ ಭಕ್ತ್ಯಾ ಪ್ರಣಾಮ ಈರ್ವ ಶೂಲಿನಃ ॥೩॥

ಏಕಏವ ಬಲಿಗ್ನೇಶಃ ಕೇಂದ್ರಸಂಸ್ಥೋ ಬಲಾನ್ವಿತಃ ।
ಅರಿಷ್ಠ ನಿನಲಂ ಹಂತಿ ಪಿನಾಕಿ ತ್ರಿಪರಂ ಯಥಾ ॥೪॥

ಶುಕ್ಲ ಪಕ್ಷೆ ಕ್ಷಪಾಜನ್ಮಲಗ್ನೆ ಸೌಮ್ಯನಿರೀಕ್ಷಿತೆ ।
ವಿಪರೀತಂ ಕೃಷ್ಣಪಕ್ಷೆ ತಥಾರಿಷ್ಠ ವಿನಾಶನವಮ್ ॥೫॥

10ನೇ ಅಧ್ಯಾಯದಲ್ಲಿ ಉಲ್ಲೇಖಿಸಿದ ಅರಿಷ್ಠದ ಭಂಗವನ್ನು ಕೇಳು – ಅರಿಷ್ಠಯೋಗ, ಭಂಗ ಯೋಗ ವಿವೇಚಿಸಿಯೇ ಜಾತಕದ ಸಂಬಂಧ ಫಲಾದೇಶ ಹೇಳುವುದು – ಕೇವಲ ಅರಿಷ್ಠ ಮಾತ್ರ ನೋಡುವುದಲ್ಲ.

## ಅರಿಷ್ಟ ಭಂಗ

ಲಗ್ನದಿಂದ 1, 4, 7, 10 ಅಂದರೆ ಕೇಂದ್ರದಲ್ಲಿ ಬುಧ, ಗುರು, ಶುಕ್ರರಲ್ಲಿ ಯಾರೊಬ್ಬರು ಇದ್ದರೆ – ಸರ್ವಾರಿಷ್ಟಮ ಸೂರ್ಯನ ಪ್ರಕಾಶಕ್ಕೆ ಕತ್ತಲೆ ಅಂಜಿ ಓಡುವವಂತೆ ನಾಶವಾಗುತ್ತದೆ – ಯಾವುದೇ ಗ್ರಹ ಬಲಿಷ್ಠವಾಗಿದ್ದು, ಲಗ್ನಗತ ಗುರುಯಿದ್ದರೆ, ಭಕ್ತಿ ಪೂರ್ವಕ ಶಿವನಿಗೆ ನಮಸ್ಕರಿಸಿದಾಗ ಪಾಪ ಸಮೂಹ ನಾಶವಾಗುವಂತೆ ನಾಶವಾಗುತ್ತದೆ (ಅರಿಷ್ಠ) ಅದರಂತೆ ಬಲಿ ಲಗ್ನೇಶ ಕೇಂದ್ರಗತ ನಾಗಿದ್ದರೂ ಎಲ್ಲ ಅರಿಷ್ಟಯೋಗಗಳನ್ನು ನಾಶ ಮಾಡುತ್ತಾನೆ. ಶುಕ್ಲಪಕ್ಷದಲ್ಲಿ ರಾತ್ರಿ ಜನನವಾಗಿ ಲಗ್ನದ ಮೇಲೆ ಶುಭ ಗ್ರಹ ದೃಷ್ಟಿಯಿದ್ದರೆ ಅಥವಾ ಹಗಲು ಜನನವಾಗಿ ಲಗ್ನದ ಮೇಲೆ ಪಾಪಗ್ರಹ ದೃಷ್ಟಿಯಿದ್ದರೆ ಎಲ್ಲ ಅರಿಷ್ಠಗಳು ನಾಶವಾಗುತ್ತವೆ.

ವ್ಯಯಸ್ಥಾನೆ ಯದಾ ಸೂರ್ಯಾಸ್ತುಲಾ ಲಗ್ನೇತು ಜಾಯಿತೆ ।
ಜೀವೇತ್ ಸ ಶತವರ್ಷಾಣಿ ದೀರ್ಘಾಯುರ್ಬಾಲಕೋ ಭವೇತ್ ॥೬॥

ಲಗ್ನಾಚ್ಚತುರ್ಥಗಃ ಪಾಪೋ ಗುರುಃ ಕೇತು ತ್ರಿಕೋಣಗಃ ।
ಕುಲದ್ವಯಾನಂದಕರಃ ಸ್ವಸ್ಥೊ ದೀರ್ಘಾಯುರರ್ಭಕಃ ॥೭॥

ಗುರು ಭೌಮೌ ಯದಾ ಯುಕ್ತೌ ಗುರುದೃಷ್ಟೆಪಾಥವಾ ಕುಜಃ ।
ಹತ್ವಾರಿಷ್ಟಮಶೇಷಂ ಚ ಜನನ್ಯಾಃ ಶುಭಕೃದ್ ಭವೇತ್ ॥೮॥

ಚತುರ್ಥೆ ದಶಮೇ ಪಾಪಃ ಸೌಮ್ಯಮಧ್ಯೆ ಯದಾ ಭವೇತ್ ।
ಪಿತುಃ ಸೌಖ್ಯಕರೋ ಯೋಗಃ ಶುಭೈಃ ಕೇಂದ್ರ ತ್ರಿಕೋಣಗೈ ॥೯॥

ಸೌಮ್ಯಾಂತರಗತೈಃ ಪಾಪೈಃಶುಭೈಃ ಕೇಂದ್ರ ತ್ರಿಕೋಣಗೈಃ ।
ಸದ್ಯೋ ನಾಶಯತೇರಿಷ್ಟ ತದ್‌ಭಾವೊತ್ಥ ಫಲಂ ನ ತತ್ ॥೧೦॥

ತುಲಾ ಲಗ್ನದಲ್ಲಿ ಕನ್ಯಾದ ಅಂದರೆ ವ್ಯಯದ ರವಿಯಿದ್ದರೆ ಜಾತಕನು ಶತಾಯು ಆಗುತ್ತಾನೆ. ಲಗ್ನದಿಂದ ನಾಲ್ಕರಲ್ಲಿ ಪಾಪಗ್ರಹ ಗುರು 1, 4, 7, 10, 9, 5 (ಕೇಂದ್ರ ತ್ರಿಕೋಣ ಸ್ಥಾನಗಳಿಂದ ಅನ್ಯತಮ ಸ್ಥಾನದಲ್ಲಿದ್ದರೆ ಜಾತಕನು) ಸ್ವಸ್ಥ ದೀರ್ಘಾಯು ಮಾತಾ ಪಿತಾ ಎರಡು ಕುಲಗಳಲ್ಲಿ ಆನಂದದಾಯಕನಾಗಿರುತ್ತಾನೆ. ಗುರು, ಮಂಗಳ, ಏಕಗ್ರ ಸಂಯುಕ್ತರಾಗಿದ್ದರೆ (ಯುತ) ಅಥವಾ ಮಂಗಳನ ಮೇಲೆ ಗುರುವಿನ ಪೂರ್ಣ ದೃಷ್ಟಿಯಿದ್ದರೆ ಎಲ್ಲ ಅರಿಷ್ಟವನ್ನು ನಾಶ ಮಾಡುತ್ತದೆ ಹಾಗೂ ತಾಯಿಗೂ ಶುಭವಾಗುತ್ತದೆ. ಚತುರ್ಥ ಅಥವಾ ದಶಮ ಸ್ಥಿತ ಪಾಪಗ್ರಹಗಳ ಮಧ್ಯವಿದ್ದ ಶುಭಗ್ರಹ ಕೇಂದ್ರ (1, 4, 7, 10) ತ್ರಿಕೋನ(5, 9)ರಲ್ಲಿದ್ದರೆ ತಂದೆಗೆ ಶುಭ ಹೇಳುವುದು. ಶುಭಗ್ರಹ ಮಧ್ಯದಲ್ಲಿ ಪಾಪಗ್ರಹ ಹಾಗೂ ಶುಭಪ್ರದ ಕೇಂದ್ರ ತ್ರಿಕೋನಗಳಿದ್ದರೆ ಎಲ್ಲ ಅರಿಷ್ಟವನ್ನು ನಾಶ ಮಾಡುತ್ತವೆ ಹಾಗೂ ಆ ಭಾವಗಳ ಕೆಟ್ಟ ಫಲ ದೊರೆಯಲಾರದು.

ಬೃಹತ್ ಪರಾಶರ ಹೋರಾಶಾಸ್ತ್ರ ಅರಿಷ್ಟ ಭಂಗಾಧ್ಯಾಯ ಸಮಾಪ್ತಃ



೧೨ನೇ ಅಧ್ಯಾಯ

## ಅಥ ಭಾವ ವಿವೇಚನಾಧ್ಯಾಯಃ

### ಮೈತ್ರೇಯ ಉವಾಚ:

ಶ್ರುತಂ ರಿಷ್ಟಂ ಚ ತದ್‌ಭಂಗಂ ಭಗವನ್ ಭವತೋದಿತಮ್ ।
ಅಥ ಕಿಂ ಕಿಂ ಮತೋ ಭಾವದ್ ವಿಚಾರ್ಯಯಿತಿ ಕಥ್ಯತಾಮ್ ॥೧॥

ಮೈತ್ರೇಯರು ಕೇಳಿದರು:— ಹೇ ಭಗವಾನ್ ಪರಾಶರರೇ, ತಮ್ಮಿಂದ ನಾನು ಬಾಲಾರಿಷ್ಠ ಹಾಗೂ ಅರಿಷ್ಠ ಭಂಗದ ವಿಷಯ ತಿಳಿದೆನು. ಈಗ ಯಾವ ಯಾವ ಭಾವದಿಂದ ಯಾವ ವಿಚಾರ (2) ಮಾಡುವುದು. ಕೃಪೆ ಮಾಡಿ ಹೇಳಿರಿ—

### ತನ್ವಾದಿ ಭಾವದಿಂದ ವಿಚಾರಣೀಯ ವಿಷಯ

### ಪರಾಶರ ಉವಾಚ:—

ತನುಂ ರೂಪಂ ಚ ಜ್ಞಾನಂ ಚ ವರ್ಣಾಶ್ಚೈವ ಬಲಾಬಲಮ್ ।
ಪ್ರಕೃತಿಂ ಸುಖಂ ದುಃಖಂ ಚ ತನುಭಾವಾದ್ ವಿಚಿಂತಯೇತ್ ॥೨॥

ಕುಟುಂಬಂ ಚ ಧನಂ ಧಾನ್ಯಂ ಮೃತ್ಯು ಜಾಲಮಮಿತ್ರಿಕಮ್ ।
ಧಾತು ರತ್ನಾದಿಕಂ ಸರ್ವಂ ಧನಸ್ಥಾನಾನ್ನಿರೀಕ್ಷಯೇತ್ ॥೩॥

ವಿಕ್ರಮಂ ಭೃತ್ಯಭ್ರಾತಾದಿಚೋಪದೇಶ ಪ್ರಯಾಣಕಂ ।
ಪಿತ್ರೋರ್ವೈ ಮರಣಾ ವಿದ್ವಾನ್ ದುಶ್ಚಿಕ್ಯಾಚ್ಚಾ ನಿರೀಕ್ಷಯೇತ್ ॥೪॥

ಬಾಂಧವಾನಥ ಯಾನಾನಿ ಮಾತೃಸೌಖ್ಯಾದಿ ಕಾನ್ಯಾಪಿ ।
ನಿಧಿಕ್ಷೇತ್ರ ಗೃಹಾಕಾವಾದಿಕಂ ತುರ್ಯಾದ್ ವಿಚಾರಯೇತ್ ॥೫॥

ಯಂತ್ರ ಮಂತ್ರ ತಥಾವಿದ್ಯಾಂ ಬುದ್ಧೇಶ್ಚೈವ ಪ್ರಬಂಧಕಮ್ ।
ಪುತ್ರ ರಾಜ್ಯಾಪಭ್ರಂಶಾದೀನ್ ಪಶ್ಯತ್ ಪುತ್ರಾಲಯಾದ್ ಬುಧಃ ॥೬॥

ಮಾತುಲಂ ಮೃತ್ಯುಶಂಕಾಶ್ಚ ಶತ್ರೂಂಶ್ಚೈವ ಬ್ರಣಾದಿಕಾನ್ ।
ಸಪತ್ನಿ ಮಾತರಂ ಚಾಪಿ ಶತ್ರುಸ್ಥಾನಾನ್ನಿರೀಕ್ಷಯೇತ್ ॥೭॥

ಜಾಯಾಮಧ್ವಪ್ರಯಾಣಂ ಚ ಪದಾಪ್ತಿಂಚ ವಣಿಕ್ ಕ್ರಿಯಾಮ್ ।
ಮರಣಂ ಚ ಸ್ವದೇಹಸ್ಯ ಜಾಯಾಭಾವಾನ್ನಿರೀಕ್ಷಯೇತ್ ॥೮॥

ಆಯುರ್ಮೃತ್ಯುಪರಂ ಚಾಪಿ ಗುದೆ ಚೈವಾಂಹಾರಾದಿಕವಮ್ ।
ಪೂರ್ವಾಪರ ಜನುರ್ವೃತ್ತಂ ಸರ್ವ ರಂಧ್ರಾದ್ ವಿಚಿಂತಯೇತ್ ॥೯॥

ಹೇ ಮೈತ್ರೇಯನೆ, ಶರೀರ, ರೂಪ, ವರ್ಣ, ಜ್ಞಾನ ಬಲಾಬಲ, ಸ್ವಭಾವ, ಸುಖ, ದುಃಖ ಇತ್ಯಾದಿ ವಿಚಾರ ತನು, ಭಾವದಿಂದ ಮಾಡುವುದು. ಕುಟುಂಬ, ಧನ, ದಾನ್ಯ, ಮೃತ್ಯು, ಶತ್ರು, ಧಾತು – ರತ್ನ ಈ ವಿಚಾರ ಧನ ಭಾವದಿಂದ ಪರಾಕ್ರಮ ಮೃತ್ಯು ಅಣ್ಣ–ತಮ್ಮ ಉಪದೇಶ ಯಾತ್ರಾ ಮಾತಾ, ಪಿತಾ ಮರಣ 3ನೇ ಭಾವದಿಂದ ಬಂಧು ಬಾಂಧವ, ವಾಹನ, ಮಾತೃಸುಖ – ಖಜಾನೆ, ಜಮೀನು, ಮನೆ, ತೋಟ ಇತ್ಯಾದಿ ವಿಚಾರ ನಾಲ್ಕನೇ ಸ್ಥಾನದಿಂದ – ಅನ್ಯಜಾತಕಕಾರರು ತನು ಭಾವದಿಂದ – ಶರೀರ ವರ್ಣಾ ಕೃತಲಕ್ಷಣಾನಿಯಂಶೋ ಗುಣಸ್ಥಾನ ಸುಖಾ ಸುಖಾನಿ । ಧನ ಭಾವದಿಂದ 'ವಿತ್ತ ನೇತ್ರಂ ಮುಖಂ ವಿದ್ಯಾಂ ವಾಕ್ ಕುಟುಂಬ ಶನಾನಿ ಚ,' ಎಂದರೆ ತೃತೀಯ ಭಾವದಿಂದ ಜ್ಯೇಷ್ಠಾನುಜಸ್ಥಿತಿ ಪರಾಕ್ರಮ ಸಾಹಸಾನಿ ಎಂದಿದ್ದಾರೆ. ಈ ಅಂಶಗಳು ವಿಚಾರಣೀಯವೆ.

ಪಂಚಮ ಭಾವದಿಂದ ಯಂತ್ರ, ಮಂತ್ರ, ವಿದ್ಯಾ, ಬುದ್ಧಿ, ವೈಭವ ಪುತ್ರ ರಾಜ್ಯಾಪಭ್ರಂಶಗಳ ವಿಚಾರ, ಆರನೇ ಭಾವದಿಂದ ಮಾಮಾ ಮರಣಶಂಕಾ ಶತ್ರು ವ್ರಣ ಆದಿ, ಋಣ ಆದಿಯಾಗಿ ವಿಚಾರಿಸುವುದು. ಸ್ತ್ರೀ ಮಾರ್ಗ ಯಾತ್ರಾ ಪದಪ್ರಾಪ್ತಿ, ವಾಣಿಜ್ಯ ಸ್ವಂತ ಮರಣದ ವಿಚಾರ ಜಾಯಾಸ್ಥಾನದಿಂದ ಆಯು, ಮೃತ್ಯು, ಔಷಧ ರೋಗ ಭಾಗಿದಾರರನ್ನು ಅಷ್ಟಮದಿಂದ – ವಿಚಾರಣೀಯ ವಿಷಯದಲ್ಲಿ ಅನ್ಯರು ಪಂಚಮದಿಂದ 'ಪುತ್ರಾದೇವ ಮಹಿಪ - ಪುತ್ರ ಪಿತೃಧೀಪುಣ್ಯಾನಿ ಸಂಚಿಂತಯೇತ್।' ಎಂದರೆ ಆರನೇ ಭಾವದ ವಿಚಾರಣೀಯ ವಿಷಯವನ್ನು 'ರೋಗಾದಿ–ವ್ಯಸನ ಕ್ಷತಾನಿ ವಸುಧಾ ಪುತ್ರಾರಿತಶ್ಚಿಂತಯೇತ್' ಎಂದರೆ ಜಾಯಾ ಭಾವದಿಂದ 'ರಣಾಂಗಣಂ ಚಾಪಿ ವಣಿಕ್ ಕ್ರಿಯಾಶ್ಚ ಜಾಯಾ ವಿಚಾರ ಗಮನ ಪ್ರಯಾಣವಮ್' ಹೇಳಿದ್ದ ಈ ವಿಷಯಗಳ ವಿಚಾರವೂ ವಿಚಾರಣೀಯವೇ.

## ನವಮಾದಿ ಭಾವ ವಿಚಾರ

ಧರ್ಮಭಾಗ್ಯಮಥೊ ಶ್ಯಾಲಂ ಭ್ರಾತೃ–ಪತ್ನಾದಿಕಾಂಸ್ತಥಾ ।
ತೀರ್ಥಯಾತ್ರಾದಿಕಂ ಸರ್ವ ಧರ್ಮಸ್ಥಾನಾನ್ನಿರೀಕ್ಷಯೇತ್ ॥೧೦॥

ರಾಜ್ಯಂ ಚಾಕಾಶ ವೃತ್ತಿಂ ಚ ಗಾನಂ ಚ ಪಿತರಂ ತಥಾ ।
ಋಣಾ ಚಾಪಿ ಪ್ರವಾಸಂ ಚ ವ್ಯೋಮಸ್ಥಾನಾನ್ನಿರೀಕ್ಷಯೇತ್ ॥೧೧॥

ನಾನಾವಸ್ತುಭವಸ್ಯಾಪಿ ಪುತ್ರಜಾಯಾದಿ ಕಸ್ಯಚ ।
ಆಯಂ ಸುಶುಸಮೃದ್ಧಿ ಚ ಭವಸ್ಥಾನಾನ್ನಿರೀಕ್ಷಯೇತ್ ॥೧೨॥

ವ್ಯಯಂ ಚ ವೈರಿ ವೃತ್ತಾಂತ ರಿಷ್ಕಮಂತ್ಯಾದಿಕಂ ತಥಾ ।
ವ್ಯಯಾಚ್ಚೈವ ಹಿ ಜಾನೀಯಾದಿತೀ ಸರ್ವತ್ರ ಬುದ್ಧಿಮಾನ್ ॥೧೩॥

ಭಾಗ್ಯ, ಶ್ಯಾಲಾ (ಆಶಯ) ಅತ್ತಿಗೆ ತೀರ್ಥಯಾತ್ರಾ ಈ ವಿಚಾರ್ರ ಧರ್ಮಸ್ಥಾನದಿಂದ ನೋಡುವುದು. ಅರ್ಥ ಪ್ರವೃತ್ತಿಯನ್ನು ಈ ಸ್ಥಾನದಿಂದಲೇ ನೋಡುವುದು. ದಶಮದಿಂದ ಆಕಾಶ ವೃತ್ತಿ ಪಿತಾ ಮಾನ ಸನ್ಮಾನ, ಋಣ ಪ್ರವಾಸ – ಉದ್ಯೋಗಾದಿಗಳನ್ನು ನೋಡುವುದಾದರೆ ಅನೇಕ ವಸ್ತು ಉತ್ಪತ್ತಿ ಪುತ್ರ, ಸ್ತ್ರೀ ಆಯ, ಪಶು, ಸಮೃದ್ಧಿಗಳನ್ನು ಏಕಾದಶ ಸ್ಥಾನದಿಂದ ನೋಡಿದರೆ, ವ್ಯಯ ಸ್ಥಾನದಿಂದ – ವ್ಯಯ ಶತ್ರು ವೃತ್ತಾಂತ ಅಂತ್ಯ – (ಮೃತ್ಯು ಸಮಯದ) ಇತ್ಯಾದಿ ವ್ಯಯದಿಂದ ನೋಡುವುದು.

## ಭಾವ ಫಲ ಶುಭಾಶುಭತ್ವ

ಯೋ ಯೋ ಭಾವೋ ಗ್ರಹೈಃ ಸೌಮ್ಯೈಃ ಸ್ವೈ ರ್ವೈ ರ್ಯುಕ್ತೋಥವೇಕ್ಷತ।
ಯುವಾ ಪ್ರಬುದ್ಧೋ ರಾಜ್ಯಸ್ಥಃ ಕುಮಾರೋ ಯಸ್ಯ ವಾಧಿಪಃ ॥೧೪॥

ತದ್ ದೃಷ್ಟಿವಶತೋ ಜ್ಞೇಯಂ ತದ್ ಭಾವಜ ಫಲಂ ಶುಭಮ್ ।
ಯದ್ ಯದ್ ಭಾವಪತಿರ್ನಷ್ಟ – ಸ್ತ್ರೀಕೇಶಾದ್ಯೈಶ್ಚ ಸಂಯುತಃ ॥೧೫॥

ಭಾವಂ ನ ವೀಕ್ಷತೆ ಸಮ್ಯಗ್ ಗ್ರಹಃ ಸುಪ್ತೋಥವಾ ಮೃತಃ ।
ಸ್ಥವಿರಃ ಪಿಡಿತೋ ವಾಪಿ ನಷ್ಟಂ ಭಾವ ಫಲಂ ವದೇತ್ ॥೧೬॥

ಯಾವ ಯಾವ ಭಾವಗಳು ಶುಭ ಗ್ರಹಯುತ ಅಥವಾ ತಮ್ಮ ಸ್ವಾಮಿ ಯುವಾ ಪ್ರಬುದ್ಧ ಕುಮಾರಾದಿ ಅವಸ್ಥೆಗತರಾಗಿರುವರೋ ಹಾಗೂ ಅವರ ದೃಷ್ಟಿ ಭಾವದ ಮೇಲಿದ್ದರೆ ಆ ಭಾವ ಫಲ ಶುಭದಾಯಕವಾಗಿರುತ್ತದೆ. ಅನ್ಯಥಾ ಭಾವೇಶ ನೀಚ ಅವಸ್ಥೆಯಲ್ಲಿ (ಬಾಲ ಹಾಗೂ ವೃದ್ಧ ಮೃತಾವಸ್ಥೆ) ತ್ರಿಕೋನ(6, 8, 12, 3, 11 ಸ್ಥಾನಾಧಿಪರು)ದಿಂದ ಸಂಯುಕ್ತ(ಯೋಗ)ರಾಗೊ ತಮ್ಮ ಭಾವ ನೋಡದಿದ್ದರೆ ಭಾವ ಫಲ ಸಾಮಾನ್ಯ ನಾಶವೆಂದು ಹೇಳುವುದು.

ವಿಮರ್ಶೆ ಇದೇ ರೀತಿ. ಎಲ್ಲ ಜಾತಕಕಾರರು ವಿಶೇಷ ಅರ್ವಾಚೀನ ಜಾತಕ ಕಾರರು ತಮ್ಮ ಗ್ರಂಥಗಳಲ್ಲಿ ಗ್ರಹ ಭಾವ ವೃದ್ಧಿ, ಹಾನಿ ವರ್ಣಿಸಿದ್ದಾರೆ. ಜಾತಕ ಪಾರಿಜಾತಕಾರ ಈ ರೀತಿ ಹೇಳಿದ್ದಾನೆ.

ತನ್ವಾದಿ ಭಾವೇಷು ಶುಭೋದಯೇಷು ತದ್‌ಭಾವನಾಥೊಪಗತೆ ಕ್ಷಿತೇಷು।

ತದುಕ್ತ ಭಾವಸ್ಯ ಸಾಮ್ಯದ್ಧಿರುಕ್ತಾ ನ ಪಾಪ ಖೇಟೆಕ್ಷಿತ ಸಂಯಿತೇಷು।

ಯದ್ ಭಾವನಾಥೊ ರಿಪು ರಿಷ್ಫರಂಧ್ರೆ ದುಃಖಸ್ಥಾನಪೊ ಯದ್ ಭಾವನ ಸ್ಥಿತಸ್ತು ।

ತದ್ ಭಾವನಾಶಂ ಕಥಯಂತಿ ತಜ್ಞಾಃ ಶುಭೆಕ್ಷಿತ ಶ್ಚೇತ್ ಫಲಮನ್ಯಥಾ ಸ್ಯಾತ್ ।

ಎಂದು ಸ್ಪಷ್ಟಪಡಿಸಿದ್ದಾರೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರ ಭಾವ ವಿವೇಚನಾಧ್ಯಾಯ ಸಮಾಪ್ತಃ

## ೧೩ನೇ ಅಧ್ಯಾಯ

# ಅಥ ಪ್ರಥಮ (ತನು) ಭಾವಫಲಾಧ್ಯಾಯಃ

ತನುಪಃ ಕೇಂದ್ರಕೋಣಸ್ಥೋನಿಶಂ ದದ್ಯಾತ್ತನೌ ಸುಖಮ್ ।
ಸ ಏವ ತ್ರಿಕಗಃ ಪಾಪ ಸಂಯುತಸ್ತನುಸೌಖ್ಯಹೃತ್ ॥೧॥

ತನುಪೋಸ್ತಮಿತೋ ನೀಚ –ಶತ್ರುಭವಸ್ಥೋತಿ ರೋಗಕೃತ್ ।
ಕೇಂದ್ರ ತ್ರಿಕೋಣಗಃ ಸೌಮ್ಯಾಃ ಸರ್ವರೋಗಾಪಹಾರಕಾಃ ॥೨॥

ಲಗ್ನೇಶನು ಕೇಂದ್ರ (1, 4, 7, 10) ಅಥವಾ ತ್ರಿಕೋನ(5, 9)ರಲ್ಲಿ ಸ್ಥಿತನಾಗಿದ್ದರೆ ಜಾತಕನಿಗೆ ಶಾರೀರಿಕ ಸೌಖ್ಯವಿರುತ್ತದೆ. ಅದೇ ಲಗ್ನೇಶ ತ್ರಿಕ್ (6, 8, 12) ಗತನಾಗಿದ್ದರೆ ಹಾಗೂ ಪಾಪಗ್ರಹ ಯುಕ್ತನಾಗಿದ್ದರೆ ಶಾರೀರಿಕ ಸೌಖ್ಯ ಬಲಾಬಲದ ಮೇಲಿಂದ ಹೆಚ್ಚು ಹಾಗೂ ಕಡಿಮೆಯಾಗಿರುತ್ತದೆ. ಲಗ್ನೇಶ ಅಸ್ತಂಗತನಾಗಿದ್ದರೆ, ನೀಚ ಶತ್ರುಸ್ಥಾನನಾಗಿದ್ದರೆ ಶಾರೀರಿಕ ರೋಗವೆಂದು ಹೇಳುವುದು. ಆದರೂ ಶುಭಗ್ರಹ ಕೇಂದ್ರಗತನಾಗಿದ್ದರೆ ಅಥವಾ ತ್ರಿಕೋನಸ್ಥರಾಗಿದ್ದರೆ ರೋಗ ಮುಕ್ತರೆಂದು(ಗುಣವಾಗುವುದೆಂದು) ಹೇಳುವುದು.

ಲಗ್ನೆ ಶಶಿನಿ ವಾ ಪಾಪಗ್ರಹೈರ್ಯುಕ್ತೇಥವೇಕ್ಷಿತೆ ।
ಸೌಮ್ಯದೃಗ್ ರಹಿತೆ ಸೌಖ್ಯಂ ತನೌ ಜಾತಸ್ಯನೋ ಭವೇತ್ ॥೩॥

ಲಗ್ನೆ ಶುಭೇತು ಶುಭಗಸ್ತತ್ರ ಪಾಪೆತು ದುರ್ಭಗಃ ।
ಶುಭಗ್ರಹೈರ್ಯುತೆ ದೃಷ್ಟೆ ತನೌ ಸೌಖ್ಯಂ ಸುನಿಶ್ಚಿತಮ್ ॥೪॥

ಲಗ್ನ ಅಥವಾ ಚಂದ್ರನ ಮೇಲೆ ಪಾಪಗ್ರಹಗಳ ದೃಷ್ಟಿಯಿದ್ದರೆ ಅಥವಾ ಸಂಯೋಗವಾಗಿದ್ದರೆ ದುಷ್ಟಗ್ರಹ ದೃಷ್ಟಿಯಲ್ಲಿ ಶುಭಗ್ರಹ ದೃಷ್ಟಿಯಿರದಿದ್ದರೆ ಜಾತಕನು ಸುಖದಿಂದ ವಂಚಿತನಾಗುವನು. ಲಗ್ನದಲ್ಲಿ ಶುಭ ಗ್ರಹವಿದ್ದರೆ ನೋಡಲು ಸುಂದರ, ಪಾಪಗ್ರಹವಿದ್ದರೆ ನೋಡಲು ಕುರೂಪನಾಗಿರುತ್ತಾನೆ. ಲಗ್ನದಲ್ಲಿ ಶುಭ ಗ್ರಹಯುತ ದೃಷ್ಟಿ ಇದ್ದರೆ ನಿಸ್ಸಂದೇಹ. ಅವನಿಗೆ ಶಾರೀರಿಕ ಸುಖ ದೊರೆಯುತ್ತದೆ.

ಕೇಂದ್ರ–ತ್ರಿಕೋಣಗೋಂಗೇಶೋ ಬುಧೊ ಜೀವೋಥವಾ ಭೃಗುಃ ।
ದೀರ್ಘಾಯುರ್ಮತಿಮಾನ್ ಜಾತೋ ಧನವಾನ್ ರಾಜವಲ್ಲಭಃ ॥೫॥

ಲಗ್ನೇಶೇ ಚರರಾಶಿಸ್ಥೆ ಶುಭಗ್ರಹ ನಿರೀಕ್ಷತೆ ।
ಕೀರ್ತಿ–ಶ್ರೀಮಾನ್ ಮಹಾಭೋಗಿ ದೇಹಪುಷ್ಟಿ ಸಮನ್ವಿತಾಃ ॥೬॥

ಜೀವಃ ಶುಕ್ರೋ ಬುಧೋ ವಾಪಿ ಲಗ್ನೆ ಶಶಿ ಸಮನ್ವಿತಃ ।
ಲಗ್ನಾತ್ ಕೇಂದ್ರಗತಶ್ಚಾಪಿ ರಾಜ ಲಕ್ಷಣ ಸಂಯುತಃ ॥೭॥

ಲಗ್ನೇಶ ಬುಧ, ಗುರು ಅಥವಾ ಶುಕ್ರ ಕೇಂದ್ರ ಅಥವಾ ತ್ರಿಕೋನಗತರಾಗಿದ್ದರೆ ಜಾತಕನು ದೀರ್ಘಾಯು ಮತಿವಂತನು. ಧನ ಹಾಗೂ ರಾಜಪ್ರಿಯನಾಗಿರುತ್ತಾನೆ. ಚರರಾಶಿ ಗತ ಲಗ್ನೇಶ ಶುಭಗ್ರಹ ದೃಷ್ಟಿತನಾಗಿದ್ದರೆ, ಜಾತಕನು ಜೀವನದಲ್ಲಿ ಯಶಸ್ವಿ ಧನಿ, ಶಾರೀರಿಕ ಸೌಖ್ಯ, ಸಂಪನ್ನ ಹಾಗೂ ಭೋಗೇಂದ್ರನಾಗುತ್ತಾನೆ. ಚಂದ್ರಯುಕ್ತ ಗುರು, ಬುಧ ಅಥವಾ ಲಗ್ನ ಅಥವಾ ಕೇಂದ್ರದಲ್ಲಿದ್ದರೆ ಜಾತಕ ರಾಜ ಲಕ್ಷಣಯುಕ್ತನಾಗುತ್ತಾನೆ.

ಅಜೇ ವೃಷೇಥವಾ ಸಿಂಹೆ ಲಗ್ನೆ ಸಾರೆ ಸಸೂರ್ಯಜೆ ।
ನಾಲೇನ ವೃಷ್ಟಿತೋ ಜಾತೋ ರಾತ್ಯಂ ಶಸದೃಶೆ ತನೌ ॥೮॥

ಚತುಷ್ಪಾದ ಗತೆ ಸೂರ್ಯೋ ದ್ವಿಸ್ವಭಾವ ಗತೈಃ ಪರೈಃ ।
ದ್ಯುಚರೈರ್ಬಲಿಭಿರ್ಜಾತೋ ಯಮಲತ್ವಮ ವಾಪ್ನುಯಾತ್ ॥೯॥

ಮೇಷ, ವೃಷಭ ಅಥವಾ ಸಿಂಹ ಲಗ್ನದಲ್ಲಿ ಶನಿ, ಮಂಗಳರಿದ್ದು ಲಗ್ನದಲ್ಲಿ ಯಾವ ರಾಶಿಯ ನವಾಂಶ ಆಗುತ್ತದೆಯೋ ಆ ಅಂಗ ಜನ್ಮ ಸಮಯದಲ್ಲಿ ನಾಲ ವೇಷ್ಟಿತವಾಗಿರುತ್ತದೆ. ಸೂರ್ಯ ಒಂದು ವೇಳೆ ಚತುಷ್ಪಾದ ರಾಶಿಗತನಾಗಿದ್ದರೆ ಅನ್ಯ ಪ್ರಬಲ ಗ್ರಹ ದ್ವಿಸ್ವಭಾವ ರಾಶಿಗತರಾಗಿದ್ದರೆ ಯುಗ್ಮ ಜನ್ಮವಾಗುತ್ತದೆ (ಎರಡು) ಅವಳಿ ಜವಳಿ ಜನ್ಮ.

ರವಿಚಾಂದ್ರೌ ಯದ್ಯೆಕಸ್ಥಾ ವೇಕಾಂಶಕ ಸಮನ್ವಿತೌ ।
ತ್ರಿಮಾತ್ರಾ ಚ ತ್ರಿಭಿರ್ಮಾಸ್ಯೈಃ ಭ್ರಾವ್ರಾ ಚ ಪೋಷಿತಃ ॥೧೦॥

ಏವಮೇವ ಫಲಂ ವಾಚ್ಯಂ ಚಂದ್ರಾದಪಿ ಸದಾ ಬುಧೈಃ ।
ಅಧುನಾ ಜಾತಕಸ್ಯಾಂಗೆ ಬ್ರಣಲಕ್ಷ್ಮಿದಿಕಂ ಶೃಣು ॥೧೧॥

ರವಿ, ಚಂದ್ರರು ಒಂದೇ ರಾಶಿಯಲ್ಲಿದ್ದು ಒಂದೇ ನವಾಂಶ ಜಾತಕನ ಜನ್ಮವಾಗಿ ದ್ದರೆ, ಮೂರು ತಿಂಗಳವರೆಗೆ 3 ತಾಯಿಯರ ಹಾಲು ಸೇವಿಸಿ ನಂತರ ತಂದೆ, ಸಹೋದರರಿಂದ ರಕ್ಷಿತನಾಗಿರುತ್ತಾನೆ. ಇದೇ ತರಹ ಚಂದ್ರನಿಂದಲೂ ಫಲಾ, ದೇಶ

ಹೇಳುವುದು ಈಗ ಜಾತಕನ ಅಂಗದಲ್ಲಿಯ ಚಿಹ್ನೆ ಹಾಗೂ ವ್ರಣಾದಿಗಳನ್ನು ಕೇಳು.

ಭಾವಾಃ ಪ್ರೊಕ್ತಸ್ತು ತನ್ವಾದ್ಯಾ ಆದ್ಯೆ ಲಗ್ನದೃಕಾಣಕೆ ।
ಶೀರ್ಷ ಚ ಚಕ್ಷುಪಿ ಕರ್ಣೋನಾಸೇ ಚಾಪಿ ಕಪೋಲಿಕೆ ॥೧೨॥

ಹನೂರ್ಮುಖಂ ಚ ತನುತಃ ಕ್ರಮಾದ್ ದಕ್ಷಿಣವಾಮಗಾಂಃ ।
ದ್ವಿತೀಯೇ ತು ಕ್ರಮಾತ್ ಕಂಠಃ ಸ್ಕಂಧೌ ಬಾಹೂ ಚ ಪಾರ್ಶ್ವಕೆ ॥೧೩॥

ಹೃದಯೇ ಚ ತಥಾ ಕುಕ್ಷೀ ನಾಭಿಶೆ ತ್ಸ್ಯುದಿತಂ ಬುಧೈಃ ।
ಏವಂ ತೃತೀಯದ್ರೇಷ್ಕಾಣೆ ವಸ್ತಿರ್ಭೇದ್ಯಂ ಗುದಂ.ತಥಾ ॥೧೪॥

ವೃಷಣದ್ವಯ ಮ್ಯೂರು ಚ ಜಾನುನಿ ಚಾಪಿ ಜಂಘಕೆ ।
ಚರಣಶ್ವೇತ್ಯವಯಾವಾಃ ಪುರತಃ ಪುಷ್ಠತಸ್ತನೋಃ ॥೧೫॥

ಸಪಾಪೇಂಗೆ ವ್ರಣಾ ಕ್ರೂರೈಃ ಸಬುಧೈರ್ನಿಯತಂ ಚ ತತ್ ।
ಸಶುಭೆ ಶುಭದೃಷ್ಟೇ ವಾ ಚಿನ್ಹ ಮಾತ್ರಂ ವಿನಿರ್ದಿಶೇತ್ ॥೧೬॥

ಲಗ್ನ ಪ್ರಥಮ ದ್ರೇಷ್ಕಾಣ ಗತವಾದರೆ ಲಗ್ನ ಶೀರ್ಷ ಲಗ್ನದಿಂದ ಪೂರ್ವ ದ್ವಿತೀಯ (2, 12) ಕಣ್ಣು, ತೃತೀಯ, ಏಕಾದಶ (3, 11) ಕಿವಿ, ಚತುರ್ಥ, ದಶಮ (4, 10) ಮೂಗು, ಪಂಚಮ, ನವಮ (5, 9) ಕಪೋಲ, ಷಷ್ಠ, ಅಷ್ಟಮ (6, 8) ದಾಡಿ ಹಾಗೂ ಸಪ್ತಮ ಮುಖ, ಕ್ರಮಶ ದಕ್ಷಿಣ ವಾಮ ಅಂಗದ ಮೇಲೆ ಚಿಹ್ನೆ ತಿಳಿಯುವುದು. ಇದೇ ಪ್ರಕಾರ ದ್ವಿತೀಯ ದ್ರೇಷ್ಕಾಣಗತ ಲಗ್ನವಾದರೆ ಲಗ್ನೇಶ ಲಗ್ನದಲ್ಲಿ ಕಂಠ ದ್ವಾದಶ – ಸ್ಕಂದ ತೃತೀಯ, ಏಕಾದಶದಲ್ಲಿ ಬುಜದ್ವಯ, ಚತುರ್ಥ ದಶಮ ಪಾರ್ಶ್ವದ್ವಯ (ಎರಡೂ ಪಕ್ಕಡೆ) ಪಂಚಮ ನವಮದಲ್ಲಿ ಹೃದಯ, ಆರು ಎಂಬುದರಲ್ಲಿ ಹೊಟ್ಟೆ ಸಪ್ತಮ ಭಾವನಾಥಿಯಲ್ಲಿ, ಅದೇ ಲಗ್ನ ತೃತೀಯ ದ್ರೇಷ್ಕಾದಣ ಗತವಾಗಿ ಲಗ್ನೇಶ ಲಗ್ನದಲ್ಲಿ ವಸ್ತಿ 2, 12ರಲ್ಲಿ ಲಿಂಗ ಹಾಗೂ ಗುದ, 3, 11ರಲ್ಲಿ ಅಂಡಕೋಶ, 4, 10ರಲ್ಲಿ ಜಂಘಾ, 5, 9ರಲ್ಲಿ ಚರಣ, 6, 8ರಲ್ಲಿ ಪೃಷ್ಠಸ್ಥಾನ, ಸಪ್ತಮದಲ್ಲಿ ಅರ್ಧಭಾಗ ನಿಶ್ಚಿತ ವ್ರಣ ರೂಪಿಯಾಗಿತ್ತುದೆ. ಅದೇ ಶುಭಗ್ರಹ ಸಂಯೋಗ ಅಥವಾ ದೃಷ್ಟಿತವಾದರೆ ಕೇವಲ ಚಿಹ್ನೆ ಮಾತ್ರ ಹೇಳುವುದು.

ವಿಮರ್ಶೆ – ಪ್ರಥಮವಾಗಿ ಎಲ್ಲ ಭಾವಗಳ ವಿಚಾರ ಮಾಡುವಾಗ ಭಾವೇಶನ ಸ್ಥಾನ ಯೋಗ ದೃಷ್ಟಿಯನ್ನು ನಿರ್ಧರ ಮಾಡಬೇಕಾದುದರಿಂದ ಆ ಎಲ್ಲ ಅಂಶ ಗಳನ್ನು ದ್ರೇಷ್ಕಾಣ ಗತ ಭಾವೇಶರ ವಿಚಾರವನ್ನು ಮಾಡಬೇಕಾಗುವುದು. ಜನ್ಮ

ಜಾತಕದಲ್ಲಿ ಅತಿ ಮುಖ್ಯ ಗ್ರಹ ಲಗ್ನೇಶ – ಆದಕ್ಕಾಗಿ ವಿಶೇಷವಾಗಿ ಲಗ್ನೇಶನನ್ನು ವಿಚಾರಿಸಬೇಕು. ಎಲ್ಲ ಯೋಗಗಳನ್ನು 'ಪರಿಗಣಿಸಬೇಕಾಗುವುದು ಹಾಗೂ ಲಗ್ನೇಶನಾರು ಆ ಲಗ್ನಕ್ಕೆ ಕಾರಕಗ್ರಹವನ್ನು ಪರಿಗಣಿಸಬೇಕಾಗುವುದು. ಈ ಎಲ್ಲ ಅಂಶ ಅತಿ ಪ್ರಮುಖವಾದವುಗಳು.

ಪ್ರಮುಖ ಸರಹಿತೆಗಳಾದ ಲೋಮೇಶ ಸಂಹಿತಾದಲ್ಲಿ – 'ಲಗ್ನೇಶೆ ಲಗ್ನಗೆಪುಂಸಃ ಸಂದೇಹಃ ಸ್ವಬುಜಾಕ್ರಮ । ಮನಸ್ವಿ ಚಾತಿ ಚಾಂಚಲ್ಯೋ ದ್ವಿಭಾರ್ಯಾ ಪರಗಾಮಿವಾ' ಎಂದರೆ ಗರ್ಗ ಸಂಹಿತಾದಲ್ಲಿ – 'ಲಗ್ನಾಧಿಪತಿರ್ಲಗ್ನೆ ನಿರೋಗಂ ದೀರ್ಘಜೀವಿತಂ ಕುರುತೆ । ಬಲವಂತಂ ದೃಢಗಾತ್ರಂ ರೂಪ ಯುಕ್ತಂ' ಎಂದರೆ ಥವ್ಯರು ಅನೇಕ ವಿಚಾರವನ್ನು ಹೇಳಿದ್ದಾರೆ. ಇಲ್ಲಿ ಪ್ರಮುಖವಾಗಿ ಲಗ್ನಗತನಾದರೆ ರವಿ – ಪರಾಕ್ರಮಿ ಸ್ವಪ್ರಯತ್ನ ಪ್ರಗತಿ ಎಂದು ಭೂಮಿ ಆದಿ – ಖರೀದಿ, ದ್ವಿ ಪತ್ನಿ ಎಂದು, ಚಂದ್ರ – ಚಂಚಲ, ಮಂಗಳ – ಇಬ್ಬರು ಹೆಂಡತಿಯರು (ಮೇಷ) ವೃಶ್ಚಿಕದಲ್ಲಿ – ವಿಜಯಿ, ಬುಧ (ಮಿಥುನ, ಕನ್ಯಾ) ರೂಪವಾನ್ ಬಲವಾನ್ – ಗುರು (ಧನು, ಮೀನ) ನಿರೋಗ ದೀರ್ಘಾಯು ಕುಲನೇತಾ ಶುಕ್ರ (ವೃಷಭ, ತುಲಾ) ಪರ ಸ್ತ್ರೀ ಸಂಬಂಧ, ಸುಖ ವಿಲಾಸ ಶನಿ (ಮಕರ, ಕುಂಭ) ದೀರ್ಘಾಯು – ದ್ವಿ ಪತ್ನಿಯರ ಈ ರೀತಿ ಭಾವೇಶ ಫಲಾದ್ಯಾಯಿ ಪರಿಗಣಿಸುವುದು. ಇಲ್ಲಿ ಪ್ರಮುಖವಾಗಿ ಮಾತೃಭಾಷೆ ಕಾರ್ಯ ಪ್ರಬಂಧಕದಲ್ಲಿ ಕ್ಷಮತೆ ಶರೀರಶಾಸ್ತ್ರ (ಅನಾಟಮಿ) ನೇತೃತ್ವ, ಸಂಪಾದಕ, ಮೇನೇಜರ್, ಸಂಶೋಧಕ, ತತ್ವಶಾಸ್ತ್ರ – ಕಾಯಿದೆ ವಿಚಾರ ಮಾಡುವುದು.



## ಅಥ. ದ್ವಿತೀಯ (ಧನ) ಭಾವ ಫಲಾಧ್ಯಾಯಃ

### ಪರಾಶರ ಉವಾಚಃ

ಶ್ರುತಂ ತ್ವಯಾ ತು ಮೈತ್ರೇಯ । ತನುಭಾವ ಗತಂ ಫಲಮ್ ।
ಧನಭಾವಗತಂ ವಚ್ಮಿ ಸಮಾ ಕರ್ಣಾಯ ಶಾಂತಿಧಿಃ ॥೧॥

ಧನಾಧಿಪೋ ಧನೆ ಕೇಂದ್ರೆ ತ್ರಿಕೋಣೆ ವಾ ಯದಾಸ್ಥಿತಃ ।
ಧನಧಾನ್ಯಯುತೋ ಜಾತೊ ಜಾಯತೆ ನಾತ್ರ ಸಂಶಯಃ ॥೨॥

ಷಷ್ಠೇಷ್ಟಮೇ ವ್ಯಯೋ ವಾ ಚೇದ್ ಧನಕ್ಷಯಕಶಿಸ್ತು ಸಃ ।
ಅರ್ಥೇರ್ಥದಃ ಶುಭೆ ಜ್ಞೇಯಃ ಕ್ರೂರಸ್ತತ್ರಾರ್ಥನಾಶಕಃ ॥೩॥

ಧನಾದಿಪೋ ಗುರುರ್ಯಸ್ಯ ಧನಸ್ಥಾನಸ್ಥಿತೋ ಯದಿ ।
ಭೌಮೇನ ಸಹಿತೋ ವಾಪಿ ಧನವಾನ್ ಸ ನರೋ ಭವೇತ್ ॥೪॥

ಧನೇಶೆ ಲಾಭರಾಶಿಸ್ಥೆ ಲಾಭೇಶೆವಾ ಧನಂ ಗತೆ ।
ತಾಬುಭೌ ಕೇಂದ್ರಗೌ ಕೋಣಸ್ಥಿತೌ ವಾ ಧನವಾನ್ನರಃ ॥೫॥

ಧನೇಶೆ ಕೇಂದ್ರ ರಾಶಿಸ್ಥೆ ಲಾಭೇಶೆ ತತ್ತ್ರಕೋಣಗೆ ।
ಗುರು–ಶುಕ್ರಯುತೆ ದೃಷ್ಟೆ ಧನ ಲಾಭ ಮುದೀರಯೇತ್ ॥೬॥

### ಪರಾಶರರು ಹೇಳಿದರು–

ಹೇ ಮೈತ್ರೇಯ, ನನ್ನಿಂದ ತನುಭಾವದ ವಿಚಾರ, ಅದರ ಫಲ ಕೇಳಿದೆ, ಈಗ ಧನ ಭಾವದ ವಿಚಾರ ಹೇಳುತ್ತೇನೆ ಕೇಳು–

ಧನೇಶ ಧನಸ್ಥಾನ ಅಥವಾ 1, 4, 7, 10, 9, 5 ಸ್ಥಾನಗಳಲ್ಲಿ ಯಾವುದೇ ಸ್ಥಾನದಲ್ಲಿದ್ದರೆ ನಿಸ್ಸಂದೇಹ ಧನಧಾನ್ಯ ಸಂಪನ್ನನಾಗಿರುತ್ತಾನೆ. ಧನಸ್ಥಾನಗತ ಶುಭಗ್ರಹ ಧನಪ್ರದವಾದರೆ 6, 8, 12 ತ್ರಿಕ್‌ದಲ್ಲಿದ್ದರೆ ಧನಕ್ಷಯವಾಗುತ್ತದೆ. ಅದೇ ಪಾಪಗ್ರಹಗಳು ಕೇಂದ್ರ ತ್ರಿಕೋನಗತವಾದರೆ ಧನಕ್ಷಯ ಧನೇಶ, ಗುರು ಧನ ಸ್ಥಾನದಲ್ಲಿದ್ದರೆ ಅಥವಾ ಮಂಗಳನ ಜೊತೆಗಿದ್ದರೆ ಜಾತಕ ಧನವಂತನಾಗುತ್ತಾನೆ. ಧನೇಶ ಲಾಭಸ್ಥಾನದಲ್ಲಿ ಅಥವಾ ಲಾಭೇಶದಲ್ಲಿ ಅಥವಾ ಎರಡೂ ಕೇಂದ್ರ ಇಲ್ಲವೇ ತ್ರಿಕೋನದಲ್ಲಿದ್ದರೆ ಮನುಷ್ಯ ಧನಸಂಪನ್ನನಾಗುತ್ತಾನೆ. ಧನೇಶ ಕೇಂದ್ರಗತ

ನಾದರೆ ಲಾಭೇಶ ಅವನಿಂದ ನವಮ ಅಥವಾ ಪಂಚಮದಲ್ಲಿದ್ದರೆ ಗುರು, ಶುಕ್ರ ಯು, ದೃಷ್ಟರಾಗಿದ್ದರೆ ಪೂರ್ಣ ಧನ ಪ್ರಾಪ್ತಿ ಹೇಳುವುದು.

ವಿತ್ತೇಶೆ ರಿಪು ಪ್ರಭಾವಸ್ಥೆ ಲಾಭೇಶೇಪಿ ಚ ತದ್‌ಗತೆ ।
ವಿತ್ತಲಾಭೌ ಯುತೌ ಪಾಪೈ ರ್ದೃಷ್ಟೌ ವಾ ನಿಃ ಸ್ವಏವ ಸಃ ॥೭॥

ವಿತ್ತಾಯಯೋಃ ಪತೀ ಚಾಸ್ತಂ ಗತೌ ಪಾಪ ಖಗನ್ವಿತೌ ।
ಜನ್ಮಪ್ರಭೃತಿ ದಾರಿದ್ರಯಂ ಭಿಕ್ಷಾನಂ ಲಭತೆ ನರಃ ॥೮॥

ಷಷ್ಠಷ್ಟಮೇ ವ್ಯಯಗತೆ ಧನಲಾಭಧಿಪೆ ತಥಾ ।
ಲಾಭೆ ಕುಜೆ ಧನೆ ರಾಹೌ ರಾಜದಂಡಾದ್ದನಕ್ಷಯಃ ॥೯॥

ಧನೇಶ ಲಾಭೇಶ ಷಷ್ಠಭಾವ ಗತನಾದರೆ ಹಾಗೇ ಧನ ಹಾಗೂ ಲಾಭ ಭಾವ ಪಾಪಗ್ರಗಳಿಂದ ಯುಕ್ತವಾದರೆ; ದೃಷ್ಟವಾದರೆ ಜಾತಕ ದರಿದ್ರನಾಗುತ್ತಾನೆ. ಧನೇಶ, ಲಾಭೇಶ ಅಸ್ತಂಗತರಾಗಿ ಪಾಪಗ್ರಹ ಯುಕ್ತರಾಗಿದ್ದರೆ ಜಾತಕನು ಜನ್ಮತಃ ದರಿದ್ರನಾಗಿರುತ್ತಾನೆ. ಭಿಕ್ಷಾನ್ನದ ಮೇಲೆ ಆಶ್ರಿತನಾಗಿರುತ್ತಾನೆ. ಧನೇಶ ಲಾಭೇಶ ತ್ರಿಕ್ (6, 8, 12) ಸ್ಥಾನಗತರಾಗಿದ್ದರೆ, ಮಂಗಳ ಏಕಾದಶದಲ್ಲಿ, ರಾಹು ಧನ ಸ್ಥಾನದಲ್ಲಿದ್ದರೆ ರಾಜ ದಂಡದಿಂದ ಅವನ ಸಂಪತ್ತು ನಾಶವಾಗುತ್ತದೆ.

ಲಾಭೆ ಜೀವೆ ಧನೆ ಶುಕ್ರೆ ವಿತ್ತೇಶೆ ಶುಭ ಸಂಯುತೆ ।
ವ್ಯಯೇ ಶುಭಗ್ರಹಯುತೆ ಧರ್ಮಮೂಲೋ ಧನವ್ಯಯಃ ॥೧೦॥

ಧನೇಶೆ ಪರಮೋಚ್ಛಸ್ಥೆ ಕಿಂವಾ ಸ್ವಭವನಾಶ್ರೀತೆ ।
ಗುರುಣಾ ವೀಕ್ಷಿತೆ ಜಾತಃ ಖ್ಯಾತಃ ಸರ್ವಜನಪ್ರಿಯಃ ॥೧೧॥

ಧನಾಧಿಪೆ ಶುಭಯತೆ ಸ್ಥಿತೆ ಪಾರಾವತಾದಿಕೆ ।
ವಿವಿಧಾ ಧನ ಸಂಪತ್ತಿಃ ಸ್ವತಸ್ತ ದೂಭವನೆ ಭವೇತ್ ॥೧೨॥

ಲಾಭಸ್ಥಾನ ಗತ ಗುರು, ಧನಭಾವಗತ ಶುಕ್ರ, ಧನೇಶ, ಶುಭಗ್ರಹ ಸಂಯುಕ್ತ ಹಾಗೂ ದ್ವಾದಶ ಸ್ಥಾಯಿ ಶುಭಗ್ರಹ ಯುಕ್ತವಾದರೆ ಜಾತಕ ಧರ್ಮ ಮೂಲ ಧನ ವ್ಯಯ ಮಾಡಬೇಕಾಗುತ್ತದೆ. ಧನೇಶ ಉಚ್ಚ ಅಥವಾ ಸ್ವಭಾವಗತರಾದರೆ ಗುರುವಿನ ದೃಷ್ಟಿ ಅವನ ಮೇಲಿದ್ದರೆ – ಜಾತಕ ಸರ್ವಜನಪ್ರಿಯ, ವಿಖ್ಯಾತ ವ್ಯಕ್ತಿಯಾಗುತ್ತಾನೆ. ಶುಭಗ್ರಹ ಯುಕ್ತ ಧನೇಶ ಪಾರಾವತ ಆದಿ ಶುಭವರ್ಗ ಸ್ಥಿತನಾದರೆ ಜಾತಕನ ಮನೆಯಲ್ಲಿ ಸ್ವತಃ ಅನೇಕ ವಿಧ ಸಂಪತ್ತು ಕೂಡಿ ಬೀಳುತ್ತದೆ.

**ನೇತ್ರೇಶೆ ಬಲಸಂಯುಕ್ತೆ ಶೋಭನಾಕ್ಷೋ ಭವೇನ್ನರಃ ।**
**ಷಷ್ಠಾಷ್ಟಮ–ವ್ಯಯ–ಗತೆ ನೇತ್ರೆ ವೈಕಲ್ಯಮಾದಿಶೇತ್ ॥೧೩॥**

**ಧನೇಶ ಪಾಪಸಂಯುಕ್ತೆ ಧನೆ ಪಾಪ ಸಮನ್ವಿತೆ ।**
**ಅಸತ್ಯವಾದಿ ಪಿಶುನೋ ಭವೇದ್ ವಾತರುಜಾರ್ದಿತಃ ॥೧೪॥**

ನೇತ್ರೇಶ (ಧನೇಶ) ಸಬಲನಾಗಿದ್ದರೆ ಜಾತಕ ಸುಂದರ ನೇತ್ರವುಳ್ಳವನಾಗುತ್ತಾನೆ. ಅದೇ ನೇತ್ರೇಶ 6, 8, 12 ಸ್ಥಾನದಲ್ಲಿದ್ದರೆ ನೇತ್ರರೋಗ ಹೇಳುವುದು. ಧನೇಶ ಪಾಪಗ್ರಹ ಯುಕ್ತ ಹಾಗೂ ಧನಸ್ಥಾನ ಪಾಪಕ್ರಾಂತವಾದರೆ ಜಾತಕ ಅಸತ್ಯವಾದಿ ಪಿಶುಣ ವಾತರೋಗಿಯಾಗುತ್ತಾನೆ.

ಇಲ್ಲಿಯೂ ಅವನ ಸ್ಥಾನ ಆ ಸ್ಥಾನ ಸ್ಥಿತಗ್ರಹ ಅವಲೋಕಿಸಿ ಫಲ ಹೇಳುವುದು.

ವಿಶೇಷವಾಗಿ – ಕ್ಷೀರ ವ್ಯಾಪಾರ, ವಿಮಾ ಪಾಲಿಸಿ, ಸೆಕ್ಯೂರಿಟಿ ಅರಿವೆ, ಕಥೆ–ಉಪನ್ಯಾಸ–ಲೇಖನ ಜ್ಯೋತಿಷ್ಯಶಾಸ್ತ್ರ ಹಾಗೂ ಫಲ ಕಥನ ಅನ್ನ, ರುಚಿ, ಸಂಸಾರದಲ್ಲಿ ಆಸಕ್ತಿ, ಅನಾಸಕ್ತಿ ವಿವಾಹ – ಅನೇಕ ಜನರ ಮೇಲೆ ಪ್ರಭಾವ, ಧ್ವನಿ ಪಿ.ಡಬ್ಲ್ಯೂ.ಡಿ. ಬೆಳ್ಳಿ, ಬಂಗಾರ, ರೇಖಾಗಣಿತ ಸರ್ವೇಕ್ಷಣ ವಿಭಾಗ, ಟಂಕಸಾಲೆ, ಹೋಟೆಲ್, ವ್ಯವಸಾಯ – ದಲಾಲಿ–ಅಗಸ ಬಡ್ಡಿ ವಸೂಲಿದಾರ ಅಡಿಗೆ ಮಾಡುವವ ಮದ್ಯ ಮಾರಾಟಗಾರ ಇತ್ಯಾದಿ ನೋಡುವುದು. ನೇತ್ರ – ರೋಗ ಪ್ರಮುಖ ಗಣನೆ ಆಗಿದೆ.

**ಇತಿ ಪರಾಶರ ಹೋರಾಶಾಸ್ತ್ರೇ ಧನಭಾವ ಫಲಾಧ್ಯಾಯಃ ಸಮಾಪ್ತಃ**

೧೫ನೇ ಅಧ್ಯಾಯ

## ಅಥ ತೃತೀಯ ಭಾವ ಫಲಾಧ್ಯಾಯಃ

**ಪರಾಶರ ಉವಾಚ:**

ಅಥಮೈತ್ರೇಯ ತೇ ವಚ್ಮಿ ಫಲಂ ಸಹಜ ಭಾವಜಮ್ ।
ಸಹಜೆ ಸಶುಭೆ ದೃಷ್ಟೆ ಸೌಮ್ಯೈರ್ವಾ ಭ್ರಾತೃಮಾನ್ ಜನಃ ॥೧॥

ಸ ಭೌಮೋ ಭ್ರಾತೃ ಭಾವೇಶೋ ಭ್ರಾತೃಭಾವಮೀಕ್ಷತೆ ।
ಭ್ರಾತೃಕ್ಷೇತ್ರಗತೆ ವಾಪಿ ಸುಖಂ ಭ್ರಾತುರ್ವಿನಿರ್ದಿಶೇತ್ ॥೨॥

ತೌ ಪಾಪಯೋಗತಃ ಪಾಪಕ್ಷೇತ್ರಯೋಗೇನ ವಾ ಪುನಃ ।
ಉತ್ಪಾಟ್ಯ ಸಹಜಾನ್ ಸದ್ಯೋ ನಿಹತೋ ನಾತ್ರ ಸಂಶಯಃ ॥೩॥

**ಪರಾಶರರು ಹೇಳಿದರು –**

ಹೇ ಮೈತ್ರೇಯನೆ, ಈಗ ನಾನು ಸಹಜ (ತೃತೀಯ) ಭಾವದ ಬಗ್ಗೆ ಹೇಳುತ್ತೇನೆ. ಸಹಜ ಭಾವವು ಶುಭಗ್ರಹಗಳಿಂದ ಯುಕ್ತ ಅಥವಾ ದೃಷ್ಟವಾದರೆ ಮನುಷ್ಯ ಸಹಜ ಸೌಖ್ಯಯುಕ್ತನಾಗುತ್ತಾನೆ. ಮಂಗಲ ಸಹಿತ ಸಹಜೋಶ ಸಹಜ ಭಾವವನ್ನು ಪೂರ್ಣ ದೃಷ್ಟಿಯಿಂದ ನೋಡುತ್ತಿದ್ದರೆ ಅಥವಾ ತೃತೀಯ ಭಾವಗತನಾದರೆ, ಸಹೋದರರ ಸೌಖ್ಯ ದೊರೆಯುತ್ತದೆ. ತೃತೀಯೇಶ ಮಂಗಳ ಪಾಪಗ್ರಹ ಯುಕ್ತ ಅಥವಾ ಪಾಪಗ್ರಹ ರಾಶಿಯಲ್ಲಿದ್ದರೆ – ಸಹಜಭಾವಕ್ಕೆ ತೀವ್ರ ಘಾತಕವಾಗುತ್ತದೆ.

ಸ್ತ್ರೀಗ್ರಹೋ ಭ್ರಾತೃಭಾವೇಶೋ ಭ್ರಾತೃಗಃ ಸ್ತ್ರೀಗ್ರಹೋಥವಾ ।
ಭಗಿನಿ ಸ್ಯಾದಥೊ ಭ್ರಾತಾ ಪುಂಗ್ರಹೆ ಪುಂಗ್ರಹೋ ಯದಿ ॥೪॥

ಮಿಶ್ರೇ ಮಿಶ್ರಫಲಂ ಜ್ಞೇಯಂ ಬಲಾಬಲ ವಿವೇಕಾತಃ ।
ಸಹಜೆ ಶಕುಜೌ ರಂಧ್ರೆ ಪಾಪೈರ್ಯುಕ್ತೌ ಚ ವೀಕ್ಷಿತೌ ॥೫॥

ಸೋದರಧ್ನೌ, ಕೇಂದ್ರಕೋನ – ಸ್ವೋಚ್ಚ – ಮಿತ್ರ ಸ್ವವರ್ಗಗೆ ।
ಭ್ರಾತೃಪೆ ಕಾರಕೆ ವಾಪಿ ಭ್ರಾತೃ ಭಾವ ಸುಖಂ ದಿಶೇತ್ ॥೬॥

ಭ್ರಾತೃಪೆ ಕಾರಕೆ ವಾಪಿ ಸೌಮ್ಯೈರ್ಯುಕ್ತೆಥವೇಕ್ಷಿತೆ ।
ಭಾವೇವಾ ಬಲಸಂಯುಕ್ತೆ ಭ್ರಾತೃವೃದ್ಧಿಃ ಪ್ರಜಾಯತೆ ॥೭॥

ತೃತೀಯ ಸ್ತ್ರೀ ಗ್ರಹವಾಗಿದ್ದು (ಚಂದ್ರ, ಶುಕ್ರ) ಅಥವಾ ಸ್ತ್ರೀ ಗ್ರಹಗಳು ತೃತೀಯ ಭಾವಗತರಾಗಿದ್ದರೆ, ಅಕ್ಕನ ಸುಖ ಪುರುಷ ರಾಶಿ, ಪುರುಷ ಗ್ರಹ(ಸೂರ್ಯ ಭೌಮ ಗುರು)ವಿದ್ದರೆ ಅಣ್ಣ, ತಮ್ಮರ ಸುಖ, ಸ್ತ್ರೀ ರಾಶಿ ಪುರುಷ ಗ್ರಹ, ಪುರುಷ ರಾಶಿ ಸ್ತ್ರೀ ಗ್ರಹ ಮಿಶ್ರ ಫಲ – ತೃತೀಯೇಶ ಅಂತೆ ಮಂಗಳ ಅಷ್ಟಮಭಾವ ಗತರಾಗಿ ಪಾಪಗ್ರಹಯುತ ಅಥವಾ ದೃಷ್ಟರಾಗಿದ್ದರೆ ಸಹೋದರರ ನಾಶಕಾರಕವಾಗಿರುತ್ತದೆ. ಸಹಜೇಶ ಅಥವಾ ಭ್ರಾತೃಕಾರಕ ಗ್ರಹ ಕೇಂದ್ರ ತ್ರಿಕೋಣ ಸ್ವೋಚ್ಚ ಮಿತ್ರಗ್ರಹ ಅಥವಾ ಸ್ವಗ್ರಹದಲ್ಲಿದ್ದರೆ ಸಹೋದರ ಸುಖ ಹೇಳುವುದು.

ಸಹಜೇಶ ಅಥವಾ ಭ್ರಾತೃಕಾರಕ ಗ್ರಹ ಯುಕ್ತನಾಗಿದ್ದರೆ ಅಥವಾ ದೃಷ್ಟ ನಾಗಿದ್ದರೆ ಸಹಜ ಭಾವ ಸಬಲವಾಗಿ ವೃದ್ಧಿ ಹೊಂದುತ್ತದೆ.

ಭ್ರಾತೃಭೆ ಬುಧ ಸಂಯುಕ್ತೆ ತದೀಶೇ ಚಂದ್ರ ಸಂಯುತೇ ।
ಕಾರಕೆ ಮಂದ ಸಂಯುಕ್ತೆ ಭಗಿನ್ಯೆಕಾಗ್ರತೋ ಭವೇತ್ ॥೮॥

ಪಶ್ಚಾತ್ ಸಹೋದರೋಪ್ಯೇಕಸ್ತೃತೀಯಸ್ತು ಮೃತೋ ಭವೇತ್ ।
ಕಾರಕೇತ್ ರಾಹು ಸಂಯುಕ್ತೆ ವಿಕ್ರಮೇಶೆ ತು ನೀಚಗೆ ॥೯॥

ಪಶ್ಚಾತ್ ಸಹೋದರೌಭಾವಃ – ಪೂರ್ವ ತು ತತ್ರಯಂ ಭವೇತ್ ।
ಭ್ರಾತೃಸ್ಥಾನಾಧಿಪೆ ಕೇಂದ್ರೆ ಕಾರಕೆ ತತ್ರಿಕೋಣಗೆ ॥೧೦॥

ಜೀವೇನ ಸಹಿತೆಪ್ಯುಚ್ಚೆ ವಾಚ್ಯಾ ದ್ವಾದಶ ಸೋದರಾಃ ।
ತತ್ರಾಗ್ರುಜದ್ವಯಂ ತದ್ವತ್ ಸ್ವಸ್ವಾಚ್ಚಾಪಿ ತೃತೀಯಕಃ ॥೧೧॥

ಸಪ್ತಮೇ ನವಮೋಶ್ಚೈವ ದ್ವಾದಶ್ಚ ಮೃತೋಭವೇತ್ ।
ಜ್ಞೇಯಾಃ ಸಹೋದರಾಃ ಶೇಷಾಃ ಷಟ್‌ಸ್ಯುದೀರ್ಘಾಯುಷಾನ್ವತಾಃ ॥೧೨॥

ಸಹಜ ಭಾವ ಬುಧ ಸಂಯುಕ್ತವಾದರೆ ಸಹಜೇಶನ ಜೊತೆ ಚಂದ್ರನಿದ್ದರೆ ಹಾಗೂ ಭ್ರಾತೃಕಾರಕ ಗ್ರಹ ಶನಿಯ ಜೊತೆಗಿದ್ದರೆ ಮೊದಲು ಅಕ್ಕ, ನಂತರ ಅಣ್ಣ, ತಾವು ಮೂರನೇಯವರಾಗಿ – 3ನೇಯವರು ಮೃತರಾಗುತ್ತಾರೆ. ಭ್ರಾತೃಕಾರಕ ರಾಹುವಿನ ಜೊತೆಗೆ ಸಹಜೇಶ ನೀಚ ಗತನಾಗಿದ್ದರೆ ನಂತರದ ಸಹೋದರನ ಅಭಾವ – ಅವನಿಗಿಂತ 3 ಜನ ದೊಡ್ಡವರು (ಅಣ್ಣಂದಿರು) ತೃತೀಯೇಶ ಕೇಂದ್ರಸ್ಥನಾಗಿ ಭ್ರಾತೃಕಾರಕ ಗ್ರಹ ಅವನಿಂದ ಕೇಂದ್ರದಲ್ಲಿ ಗುರುವಿನ ಜೊತೆಗಿದ್ದರೆ ಹಾಗೂ ಉಚ್ಚಸ್ಥನಾಗಿದ್ದರೆ 12 ಜನ ಸಹೋದರರನ್ನು ಹೇಳುವುದು. ಅದರಲ್ಲಿ ಜಾತಕನಿಗಿಂತ

ಇಬ್ಬರು ಜೇಷ್ಠರು, ನಂತರ ಕನಿಷ್ಠರು ಅದರಲ್ಲಿ 3ನೇ, 7ನೇ, 9ನೇ, 12ನೇ ಸಹೋದರರ ಮೃತ್ಯು. ಉಳಿದವರು ದೀರ್ಘಜೀವಿಗಳಾಗುತ್ತಾರೆ.

ಲಾಭೇಶೇನ ಯುತೆ ಭೌಮೆ ಗುರುಣಾ ಸಹಿತೇಪಿವಾ ।
ಸಹಜಸ್ಥಾನಗೆ ಚಂದ್ರೆ ಸಪ್ತ ಸಂಖ್ಯಾಃ ಸಹೋದರಾಃ ॥೧೩॥

ಸಹಜ ಸ್ಥಾನಗೆ ಚಂದ್ರೆ ಪುಂಗ್ರಹೇಕ್ಷೈವ ವೀಕ್ಷಿತೆ ।
ಭ್ರಾತರಸ್ತತ್ರ ಕವಿನಾ ಭಗಿನ್ಯಃ ಸಂಯುತೇಕ್ಷಿತೆ ॥೧೪॥

ಅಗ್ರಜಂ ದಿನಕೃದ್ದಂತಿ ಮಂದಃ ಪೃಷ್ಠಗತಂ ತಥಾ ।
ಉಭಯಂ ಭೂಮಿಜೋ ಹಂತಿ ಸಹಜಸ್ಥೋ ವಿನಿಶ್ಚಯಾತ್ ॥೧೫॥

ಮಂಗಳ ಆಯೇಶ (ಲಾಭ) ಯುಕ್ತ ಅಥವಾ ಗುರು ಸಮನ್ವಿತನಾಗಿ ಹಾಗೂ ಸಹಜಸ್ಥಾನ ಗತ ಚಂದ್ರಮನಿದ್ದರೆ ಸಹೋದರರ ಸಂಖ್ಯೆ ಏಳು ಇರುತ್ತದೆ. ಸಹಜ ಸ್ಥಾನ ಸ್ಥಿತ ಚಂದ್ರನ ಮೇಲೆ ಪುರುಷ ಗ್ರಹ ಮಾತ್ರ ದೃಷ್ಟಿಯಿದ್ದರೆ – ಸಹೋದರ ಅಣ್ಣನಾಗಿರುತ್ತಾನೆ. ಶುಕ್ರಯುತ ದೃಷ್ಟರಾಗಿದ್ದರೆ ಅಕ್ಕ ಇರುತ್ತಾಳೆ. ಸಹಜಸ್ಥಾನ ಗತ ಶನಿ ಪೃಷ್ಟಜ ಹಾಗೂ ರವಿ ಅಗ್ರಜನಿಗೆ ಮಂಗಳ ಅಗ್ರಹ ಪಷ್ಟಜ ಈಶ್ವರಿಗೂ ನಾಶಕರಾಗಿರುತ್ತಾರೆ.

ವಿಮರ್ಶೆ – ಈ ಭಾಗದಲ್ಲಿ ಕೇವಲ ಅಣ್ಣ, ತಮ್ಮ, ಅಕ್ಕ, ತಂಗಿಯ ವಿಚಾರ ತಿಳಿಸಿ ಉಳಿದ ವಿಚಾರವನ್ನು ವಿವರಿಸದೆ ಬಿಟ್ಟಿದ್ದು ಈ ಕೆಳಗಿನ ವಿಚಾರವನ್ನು ಮಾಡುವುದು ವಿಹಿತ. ನೌಕರಿ ಪೋಸ್ಟ್ ವಿಭಾಗ, ಟೆಲಿಫೋನ್ – ವೈಬ್‌ಸೈಟ್ ಆಗಬಹುದು. ಬ್ಯಾಂಕ್, ವಿಮಾ ಕಂಪನಿ ನೌಕರಿ – ದರ್ಶನಶಾಸ್ತ್ರ, ಮನೋ ವಿಜ್ಞಾನ ಅಭ್ಯಾಸ ಹೇಳಿ – ಚಿಕಿತ್ಸಕ ಶಾಸ್ತ್ರ, ಶೀಘ್ರಲಿಪಿ (ಶಾರ್ಟ್ ಹ್ಯಾಂಡ್), ಟೈಪ್, ಕಾಂಪಿಟರ ಅನುವಾದ ಕಾರ್ಯ, ಅಂಕಗಣಿತ, ಜ್ಯೋತಿಷ್ಯ, ಹಸ್ತಸಾಮುದ್ರಿಕ, ಪ್ರವಾಸಿ ವ್ಯಾಪಾರಿ, ಸಮಾಚಾರ ಪತ್ರ, ಛಾಯಾಚಿತ್ರ, ಭೌತಿಕಶಾಸ್ತ್ರ ಇತ್ಯಾದಿ ವಿಚಾರಿಸಲು ಬರುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಸಹಜಭಾವ ಫಲಾಧ್ಯಾಯ ಸಮಾಪ್ತಿಃ

## ೧೬ನೇ ಅಧ್ಯಾಯ

# ಅಥ ಚತುರ್ಥ (ಸುಖ) ಭಾವ ಫಲಾಧ್ಯಾಯಃ

**ಪರಾಶರ ಉವಾಚ:**

ಮೈತ್ರೇಯ ತೆ ನಿಗದಿತಂ ಭ್ರಾತೃಭಾವಗತಂ ಫಲವಮ್ ।
ಅಧುನಾಕಥ್ಯತೆ ಮಾತೃಭಾವಜಂ ತನ್ಮುನೆ ಶೃಣು ॥೧॥

ಬಂಧು ಭಾವಗತೆ ಬಂಧುನಾಥೆ ವಾ ತತ್ರ ಲಗ್ನಪೆ ।
ಸೌಮ್ಯ ಖೇಟೆ ಕ್ಷಿತಯುತೆ ಪೂರ್ಣಗೇಹ ಸುಖಂ ಭವೇತ್ ॥೨॥

ಸ್ವರ್ಕ್ಷ‌ಶತಂಗಗೆ ತುರ್ಯನಾಥೆ ಸುಖಮನುತ್ತಮಮ್ ।
ಗೃಹ ಭೂಯಾನ ಮಾತ್ರಾದಿ ಜಾತಂ ವಾದ್ಯಾದಿಜಂ ತಥಾ ॥೩॥

ತುರ್ಯಕರ್ಮೆಶಯೋಃ ಕೇಂದ್ರೆ ತ್ರಿಕೋಣೆವಾ ಸಹಸ್ಥಿತೌ ।
ರಾಜಾರ್ಹೆ ಸದನೆ ವಾಸೋ ಜಾತಕಸ್ಯ ಭವೆ ಧ್ರುವವಮ್ ॥೪॥

ತುರ್ಯನಾಥೆ ಸೌಮ್ಯ ಖೇಟೆ ಶುಭೈರ್ಯುಕ್ತೆಥವೇಕ್ಷತೆ ।
ಲಗ್ನಗೆ ಶಶಿಜೆ ಜಾತೋ ಬಂಧು ಪೂಜ್ಯೋ ಭವೇತ್ಸದಾ ॥೫॥

**ಪರಾಶರರು ಹೇಳಿದರು –**

ಹೇ ಮೈತ್ರೇಯನೆ, ಸಹಜ ಭಾವದ ಫಲ ಹೇಳಿದ್ದೇನೆ. ಈಗ ಸುಖಭಾವದ ಫಲವನ್ನು ಹೇಳುವೆನು. ಚತುರ್ಥ ಸ್ಥಾನದಲ್ಲಿ ಸುಖೇಶ ಅಥವಾ ಲಗ್ನೇಶರಿದ್ದರೆ ಹಾಗೂ ಆ ಸ್ಥಾನ ಶುಭಗ್ರಹ ಯುಕ್ತ ದೃಷ್ಟವಾಗಿದ್ದರೆ ಪೂರ್ಣ ರೂಪದಿಂದ ಕೌಟುಂಬಿಕ ಸುಖ ದೊರೆಯುತ್ತದೆ. ಸುಖೇಶನು ತನ್ನ ಮನೆ ಸ್ವಭಾವಾಂಶ ಅಥವಾ ತನ್ನ ಉಚ್ಚಗತ ಜಾತಕನಿಗೆ ಮನೆ, ಜಮೀನು, ವಾಹನ, ತಾಯಿ ಹಾಗೂ ಗೀತ ವಾದ್ಯದ ಸುಖ ದೊರೆಯುವುದು. ಕೇಂದ್ರ ಅಥವಾ ತ್ರಿಕೋನದಲ್ಲಿ ಸುಖೇಶ ಅಂತೇ ರಾಜ್ಯೇಶ (ದಶಮಿ) ಸಹವರ್ತಿಯಾಗಿದ್ದರೆ ಜಾತಕ ರಾಜಯೋಗ ಪ್ರಸಾದದಲ್ಲಿ ನಿವಾಸಿತನಾಗುತ್ತಾನೆ. ಶುಭಗ್ರಹ ಚತುರ್ಥೇಶ ಶುಭಗ್ರಹ ಯುಕ್ತ ದೃಷ್ಟಿತರಾದರೆ ಬುಧ ಲಗ್ನಗತನಾದರೆ ಜಾತಕ ಬಂಧು ಪೂಜ್ಯನಾಗುತ್ತಾನೆ.

ಮಾತುಃ ಸ್ಥಾನೆ ಶುಭಯುತೆ ತದೀಶೆ ಸ್ವೋಚ್ಚರಾಶಿಗೆ ।
ಕಾರಕೆ ಬಲ ಸಂಯುಕ್ತೆ ಭ್ರಾತೃದೀರ್ಘಾಯು ರಾದಿಹೇತ್ ॥೬॥

ಸುಖೇಶೆ ಕೇಂದ್ರ ಭಾವಸ್ಥೆ ತಥಾ ಕೇಂದ್ರೆ ಸ್ಥಿತೆ ಭೃಗೌ ।
ಶಶಿಜೆ ಚೊಚ್ಚ ರಾಶಿಸ್ಥೆ ಯಾನ ಸೌಖ್ಯಂ ವದೇದ್ ಬುಧಃ ॥೭॥

ಸುಖೇ ಮಂದೋ ರವಿಯುತಶ್ಚಂದ್ರೊ ಭಾಗ್ಯಗತೆ ಯದಿ ।
ಲಾಭ ಸ್ಥಾನ ಗತೋ ಭೌಮೋ ಗೋಮಹಿಷ್ಯಾದಿ ಲಾಭ ಕೃತಂ ॥೮॥

ಸುಖೆ ಚರಗ್ರಹಾಸಕ್ತೇ ತಥಾ ತದ್ರಾಶಿ ನಾಯಕೆ ।
ಸ ಭೌಮೆ ವ್ಯಯಷಷ್ಟಸ್ಥೆ ಮೂಕತ್ವಂ ಯಾತಿ ಮಾನವಃ ॥೯॥

ಲಗ್ನ ಸ್ಥಾನಾಧಿಪೆ ಸೌಮ್ಯೆ ಸುಖೇಶೆ ನೀಚ ರಾಶಿಗೆ ।
ಕಾರಕೆ ವ್ಯಯ ಭಾವಸ್ಥೆ ಸುಖೇಶೆ ಲಾಭ ಸಂಯುತೆ ॥೧೦॥

ದ್ವಾದಶೆ ವತ್ಸರೆ ಪ್ರಾಪ್ತೆ ವಾಹನಸ್ಯ ಸುಖಂ ವದೇತ್ ।
ವಾಹನೆ ರವಿ ಸಂಯುಕ್ತೆ ಸ್ವೋಚ್ಚೇ ತದ್ರಾಶಿನಾಯಕೆ ॥೧೧॥

ಯುತೆ ಶುಕ್ರೇಣ ಯಾನಾಪ್ತಿರ್ದ್ವಿತ್ರಿಂಶೆ ವತ್ಸರೆ ಭವೇತ್ ।
ಕರ್ಮೇಶೇನ ಯುತೆ ಬಂಧುನಾಥೆ ತುಂಗಾಂಶ ಸಂಯುತೆ ॥೧೨॥

ದ್ವಿಚತ್ವಾರಿಂಶಕೆ ವರ್ಷ ನರೋ ವಾಹನಭಾವಗ್ಭವೇತ್ ।
ಲಾಭೇಶೆ ಸುಖ ರಾಶಿಸ್ಥೆ ಸುಖೇಶೆ ಲಾಭ ಸಂಯುತೆ ॥೧೩॥

ದ್ವಾದಶೆ ವತ್ಸರೆ ಪ್ರಾಪ್ತೆ ಮಾನವೋ ಯಾನ ಭಾಗ್ಭವೇತ್ ।
ಶುಭಂ ಭಾವಸ್ಯ ಸಂಪುಷ್ಟೌ ದುರ್ಬಲತ್ವೇನ್ಯಥಾ ಫಲಮ್ ॥೧೪॥

ಚತುರ್ಥ ಭಾವ ಶುಭ ಯುಕ್ತವಾಗಿ ಚತುರ್ಥೇಶ ತನ್ನುಚ್ಚದಲ್ಲಿದ್ದರೆ ಹಾಗೂ ಮಾತೃಕಾರಕ ಗ್ರಹ ಸಬಲವಾಗಿದ್ದರೆ ಜಾತಕನ ತಾಯಿ ದೀರ್ಘಾಯು ಬಲಿಯಾಗಿರುತ್ತಾಳೆ. ಸುಖೇಶ ಹಾಗೂ ಶುಕ್ರ ಕೇಂದ್ರಸ್ಥರಾಗಿ, ಬುಧ ತನ್ನುಚ್ಚದಲ್ಲಿದ್ದರೆ ವಾಹನ ಸುಖ ದೊರೆಯುತ್ತದೆ. ಚತುರ್ಥದಲ್ಲಿ ಶನಿ ಹಾಗೂ ಸೂರ್ಯರಿದ್ದು ಚಂದ್ರ ಭಾಗ್ಯ ಭಾವ ಗತನಾದರೆ ಮಂಗಳ ಏಕಾದಶದಲ್ಲಿದ್ದರೆ ಜಾತಕನಿಗೆ ಎತ್ತು, ಎಮ್ಮೆ ಆದಿ ಪಶು ಸುಖ ಸುಖಸ್ಥಾನ ಚರರಾಶಿದಾಗಿದ್ದು ಸುಖೇಶ ಮಂಗಳನ ಜೊತೆಗಿದ್ದರೆ ಅದು ಆರು, ಹನ್ನೆರಡರಲ್ಲಿದ್ದರೆ ಮೂಕನಾಗುವನು. ಲಗ್ನೇಶ ಶುಭಗ್ರಹವಾಗಿ ಸುಖೇಶ ನೀಚರಾಶಿಗತನಾದರೆ ಚತುರ್ಥ ಭಾವಕಾರಕ ಗ್ರಹ ದ್ವಾದಶದಲ್ಲಿದ್ದರೆ, ಸುಖೇಶ ಲಾಭದಲ್ಲಿದ್ದರೆ, 12ನೇ ವರ್ಷದಲ್ಲಿ ಸ್ವವಾಹನ ಸೌಖ್ಯ ಹೇಳುವುದು. ರವಿ ಯುಕ್ತ ವಾಹನ (4) ಸ್ಥಾನವಿದ್ದು ಚತುರ್ಥೇಶ ತನ್ನ ಉಚ್ಚದಲ್ಲಿ ಶುಕ್ರನ ಜೊತೆಗಿದ್ದರೆ

21ನೇ ವರ್ಷದಲ್ಲಿ ವಾಹನ ಸೌಖ್ಯ – ಸುಖೇಶ ತನ್ನ ಉಚ್ಚಾಂಶದಲ್ಲಿ ಕರ್ಮೇಶ ನಿಂದ ಕೂಡಿದ್ದರೆ 42ನೇ ವರ್ಷದಲ್ಲಿ ವಾಹನ ಸೌಖ್ಯ ಹೇಳುವುದು. ಲಾಭೇಶ ಚತುರ್ಥದಲ್ಲಿ ಚತುರ್ಥೇಶ ಲಾಭದಲ್ಲಿ ಇದ್ದರೆ 12ನೇ ವರ್ಷದಿಂದಲೇ ಮಾನವ ಪ್ರವಾಸ ಆರಂಭಿಸುತ್ತಾನೆ. ಇದೇ ಪ್ರಕಾರ ಭಾವವು ಸಪುಷ್ಪವಾಗಿದ್ದರೆ ಆ ಭಾವದಿಂದ ವಿಚಾರಣೀಯದಲ್ಲಿ ಅಂಶ ಪ್ರಾಪ್ತಿಯಾಗುತ್ತವೆ. ಭಾವ ದುರ್ಬಲತೆ ಯಿಂದ – ಅಪ್ರಾಪ್ತಿಯನ್ನು ಹೇಳುವುದು.

ಪರಾಶರರು ಇಲ್ಲಿ ಮಾತೃ ಸೌಖ್ಯ ಹಾಗೂ ವಾಹನ ಸೌಖ್ಯವಷ್ಟೇ ಹೇಳಿದ್ದು – ಈ ಕೆಳಗಿನ ಅಂಶಗಳು ವಿಚಾರಣೀಯವೆ. ಮನಸ್ಥಿತಿ, ಗೌರರ ಹೃದಯ ಹೊಟ್ಟೆ, ಗುಪ್ತಧನ ಖರೀದಿ, ಮಾರಾಟ – ಅಣ್ಣ, ತಮ್ಮರ ಧನ, ಪುತ್ರನ ಖರ್ಚು, ಪಿತಾಮಹ ವ್ಯವಸಾಯ, ಸಸುರ (ಅಳಿಯ) ಮಿತ್ರ ದೂರ ಪ್ರವಾಸ, ವ್ಯವಸಾಯ ಲಾಭ, ಹಾನಿ, ಆರ್ಥಿಕ ಸ್ಥಿತಿ ಸೌಖ್ಯ – ವಾದ, ವಿವಾದ, ನೌಕಾಯಾನ ವೃದ್ಧಿ, ಚಿಕಿತ್ಸಕ ಬುದ್ಧಿ – ಅದರಂತೆ ವಿಶೇಷವಾಗಿ ತಾಯಿ ಹಾಲು. ಹಾಲಿನ ವ್ಯಾಪಾರ, ನಗರ ಪಾಲಿಕಾದ ಕೆಲಸಗಾರ, ವನಸ್ಪತಿ ಶಾಸ್ತ್ರ – ಆಯುರ್ವೇದ ತತ್ ಸಂಬಂಧಿ ಉದ್ಯೋಗ, ರಸಾಯನ ನಿರ್ಮಾಣ – ಹಸ್ತಾಂತರ ವಿಷಯಕ ಕಾಯ್ದೆ. ಈ ವಿಷಯ ವಿಚಾರ ಮಾಡುವುದು ವಿಹಿತ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಚತುರ್ಥ ಭಾವ ಫಲಾಧ್ಯಾಯಃ ಸಮಾಪ್ತಿ

## ೧೭ನೇ ಅಧ್ಯಾಯ

# ಅಥ ಪಂಚಮ ಭಾವ (ಸುತ) ಫಲಾಧ್ಯಾಯಃ

### ಪರಾಶರ ಉವಾಚ:

ಅಥ ಪಂಚಮಭಾವಸ್ಯ ಫಲಂ ವೆಚ್ಮಿ ಶೃಣುದ್ವಿಜ ।
ಲಗ್ನೇಶೆ ಪಂಚಮೇಶೆ ಚ ಪಂಚಮ ಸ್ಥಾನ ಸಂಸ್ಥಿತೆ ॥೧॥

ಕೇಂದ್ರ ಕೋಣಗತೆ ವಾಪಿ ಪೂರ್ಣ ಪುತ್ರಭವಂ ಸುಖಮ್ ।
ಷಷ್ಠಾಷ್ಟಮವ್ಯಯ ಗತೆ ಸುತೇಶೆ ಸ್ಯಾದ ಪುತ್ರತಾ ॥೨॥

ಅಸ್ತಂಗತೆ ಪಂಚಮೇಶೆ ಪಾಪಕ್ರಾಂತೆ ಚ ದುರ್ಬಲೆ ।
ಷಷ್ಠಸ್ಥಾನೆ ಸುತಾಧೀಶೆ ಲಗ್ನೇಶೆ ಭೌಮ ಸಂಯುತೆ ।
ಮ್ರಿಯತೆ ಪ್ರಥಮಾಪತ್ಯಂ ಕಾಕವಂಧ್ಯಾ ಸಧರ್ಮಿಣಿ ॥೪॥

ಸುತಾಧಿಶೋ ಹಿ ನೀಚಸ್ಥಃ ಷಷ್ಠಾದಿತ್ರಿಕಸಂಸ್ಥಿತಃ ।
ಕಾಕ ವಂಧ್ಯಾ ಭವೇನ್ನಾರಿ ಸುತೆ ಕೇತು ಬುಧೌಯದಿ ॥೫॥

ಸುತೇಶೋ ನಿಚಗೋ ಯತ್ರ್ರಸುತಸ್ಥಾನಂ ನ ಪಶ್ಯತಿ ।
ತತ್ರ ಸೌರಿಬುಧೌ ಸ್ಯಾತಾಂ ಕಾಕ ವಂಧ್ಯಾ ತ್ವಮಾಪ್ನುಮಾತ್ ॥೬॥

ಭಾಗ್ಯೆಶೋ ಮೂರ್ತಿವರ್ತೀ ಚ ಸುತೇಶೋ ನೀಚಗೋ ಯದಿ ।
ಸುತೆ ಕೇತು ಬುಧೌ ಸ್ಯಾತಾಂ ಸುತಂ ಕಷ್ಟಾದ್ ವಿನಿರ್ದಿಶೇತ್ ॥೭॥

ಷಷ್ಠಾದಿ ತ್ರಿಕಸಂಸ್ಥೋ ವಾ ನೀಚೋ ವಾ ಹಾರಿಗೆಹಗಃ ।
ಪಂಚಮೇಶಃ ಪಂಚಮೇ ಚೇತ ಪುತ್ರಂ ಕಷ್ಟಾದ್ ವಿನಿರ್ದಿಶೆತ್ ॥೮॥

### ಪರಾಶರರು ಹೇಳಿದರು –

ಹೇ ದ್ವಿಜ ಶ್ರೇಷ್ಠ ಮೈತ್ರೇಯನೆ ಈಗ ಪಂಚಮ ಭಾವದ ಫಲ ಹೇಳುತ್ತೇನೆ ಕೇಳು – ಲಗ್ನೇಶಲಿಂತೆ ಪಂಚಮೇ ಪಂಚಮದಲ್ಲಿ ಅಥವಾ ಕೇಂದ್ರ (1, 4, 7, 10) ಹಾಗೂ ನವಮದಲ್ಲಿದ್ದರೆ ಪೂರ್ಣರೂಪ ಪುತ್ರ ಜನ್ಮ ಸುಖ ರೂಪವಾಗುತ್ತದೆ. ಆದೇ ಪಂಚಮೇಶ ತ್ರಿಕ್ (6, 8, 12)ರಲ್ಲಿದ್ದರೆ ಪುತ್ರಾಭಾವವೆಂದು ಹೇಳುವುದು. ಪಂಚಮೇಶ ಅಸ್ತಂತ ಪಾಪಗ್ರಹ ಕ್ರಾಂತ ಅಥವಾ ದುರ್ಬಲನಾಗಿದ್ದರೆ ಪುತ್ರೋತ್ಪತ್ತಿ

ಯಾಗುವುದು. ಕಠಿಣ ಒಂದು ವೇಳೆ ಪುತ್ರೋತ್ಸವವಾದರೂ ಸ್ವಲ್ಪ ದಿನದಲ್ಲಿ ಮೃತ್ಯು ಸಂಭವ. ಪಂಚಮೇಶ 6ನೇ ಸ್ಥಾನದಲ್ಲಿ ಲಗ್ನೇ ಮಂಗಳಯುಕ್ತನಾಗಿದ್ದರೆ ಮೊದಲನೇ ಮಗು ಮೃತ್ಯು ವಶವಾಗಿ ಹೆಂಡತಿ ಕಾಕ ವಂಧ್ಯಾ ಆಗುತ್ತಾಳೆ. ಪಂಚಮೇಶ ನೀಚಸ್ಥನಾಗಿ ಷಷ್ಠಾದಿ ತ್ರಿಕ್‌ದಲ್ಲಿದ್ದರೆ ಹಾಗೂ ಪಂಚಮ ಭಾವದಲ್ಲಿ ಕೇತು, ಬುಧರಿದ್ದರೆ – ಕೂಡ ಹೆಂಡತಿ ಕಾಕ ವಂದ್ಯಾ ಆಗುತ್ತಾಳೆ. ನೀಚಸ್ಥ ಪಂಚಮೇಶ ಪಂಚಮ ಭಾವ ನೋಡದಿದ್ದರೆ ಹಾಗೂ ಶನಿ, ಬುಧ ಪಂಚಮದಲ್ಲಿದ್ದರೆ – ಕೂಡ ಹೆಂಡತಿ ಕಾಕ ವಂದ್ಯಾ ಆಗುವಳು. ಭಾಗ್ಯೇಶ ಲಗ್ನಸ್ಥನಾಗಿ ಪಂಚಮೇಶ ನೀಚಸ್ಥನಾಗಿ ಪಂಚಮದಲ್ಲಿ ಕೇತು, ಬುಧರಿದ್ದರೂ – ಧರ್ಮಾನುಷ್ಠಾನದಿಂದ ಪುತ್ರ ಸಂತತಿ ಹೇಳುವುದು. ಪಂಚಮೇಶ ಷಷ್ಠ, ಅಷ್ಟಮ ಅಥವಾ ವ್ಯಯದಲ್ಲಿ ನೀಚ ಅಥವಾ ಶತ್ರು ಗೃಹಿಯಾಗಿದ್ದರೆ – ಹಾಗೂ ಪಂಚಮದಲ್ಲಿದ್ದರೆ – ದೇವತಾರಾಧನೆ ಪ್ರಯತ್ನದಿಂದ ಪುತ್ರ ಸಂತತಿ.

ಪುತ್ರಸ್ಥಾನೆ ಬುಧ ಕ್ಷೇತ್ರೆ ಮಂದ ಕ್ಷೇತ್ರೆಥವಾ ಪುನಃ ।
ಮಂದೆ ಮಾಂದಿಯುತೆ ದೃಷ್ಟೆ ತದಾ ದತ್ತಾದಯಃ ಸುತಾ ॥೯॥

ರವಿ ಚಂದ್ರೌ ಯದ್ಯೆಕಸ್ತಾ ವೇಕಾಂಶಕ ಸಮನ್ವಿತೌ ।
ತ್ರಿಮಾತೃಭಿರಸೌ ಕಿಂವ್ಮಾ ದ್ವಿಪುತ್ರಾಪಿ ಚ ಪೊಷ್ಯತೆ ॥೧೦॥

ಪಂಚಮೇ ಷಡ್ ಗ್ರಹೈರ್ಯುಕ್ತೆ ತದೀಶೋ ವ್ಯಯ ರಾಶಿಗೆ ।
ಲಗ್ನೇಶೆಂದೂ ಬಲ ಯುತೌ ದತ್ತಪುತ್ರೋದಯಸ್ತದಾ ॥೧೧॥

ಪಂಚಮೇ ಸಬಲೈರ್ಜಿವಸೀತಸಿ ತಜ್ಞ್ಯೈಃ ಸಂಯುತೆಷಿತೆ ।
ಬಲಾನ್ವಿತೆ ಸುತೀಶೆ ಚ ಭವೆಯುರ್ಬಹವಃ ಸುತಾಃ ॥೧೨॥

ಮಿಥುನ, ಕನ್ಯಾ, ಮಕರ ಅಥವಾ ಕುಂಭ ಪಂಚಮ ಭಾವದಲ್ಲಿ ಶನಿ ಹಾಗೂ ಗುಳಿಕ ಸಂಯೋಗ ಅಥವಾ ದೃಷ್ಟಿಯಿದ್ದರೆ ದತ್ತಕ ಪುತ್ರನೆಂದು ಹೇಳುವುದು. ಒಂದೇ ರಾಶಿಯಲ್ಲಿ ರವಿ, ಚಂದ್ರ – ಒಂದೇ ನವಾಂಶ ಗತರಾದರೆ (3, 20 ಕಲೆಯೊಳಗಿದ್ದರೆ) ಜಾತಕ 3 ತಾಯಿಯರು ಅಥವಾ 2 ತಂದೆಯಿಂದ ಪೋಷಿತನಾಗುತ್ತಾನೆ. ಪಂಚಮ ಭಾವದಲ್ಲಿ ಆರು ಗ್ರಹಗಳಿದ್ದು ಪಂಚಮೇಶ 12ರಲ್ಲಿದ್ದರೆ ಲಗ್ನೇಶ ಅಂತೆ ಚಂದ್ರ ಸಬಲರಾಗಿದ್ದರೆ ಕೂಡ ದತ್ತಕ ಮಗ. ಪಂಚಮ ಭವನದ ಮೇಲೆ ಪ್ರಬಲ ಬುಧ, ಗುರು, ಶುಕ್ರರ ದೃಷ್ಟಿ ಅಥವಾ ಪಂಚಮದಲ್ಲಿ ಯೋಗ ಹಾಗೂ ಪಂಚಮೇಶನು ಪ್ರಬಲನಾಗಿದ್ದರೆ – ಪುತ್ರೋತ್ಪತ್ತಿ ಹೇಳುವುದು.

ಸುತೇಶೆ ಶಶಿ ಸಂಯುಕ್ತೇ ಚಂದ್ರದ್ರೇಷ್ಕಾಣ ಗೇಪಿಚ ।
ಕನ್ಯಕಾನಾಂ ತದೋತ್ಪತ್ತಿ ನಿರ್ದೇಶೇನ್ಮತಿಮಾನ್ನರಃ ॥೧೩॥

ಚಂದ್ರಯುಕ್ತ ಪಂಚಮೇಶ ತನ್ನದೇ ದ್ರೇಷ್ಕಾಣದಲ್ಲಿದ್ದರೆ ಕನ್ಯೋತ್ಪತ್ತಿ ನಿರ್ದೇಶನ ನೀಡುವುದು. ಅಂದರೆ ಪ್ರಚಲಿತ ದ್ರೇಷ್ಕಾಣದಂತೆ ಚಂದ್ರದೇಷ್ಕಾಣ ಕರ್ಕದ 1ನೇ ದ್ರೇಷ್ಕಾಣ, ವೃಶ್ಚಿಕದ ತೃತೀಯ ಹಾಗೂ ಮೀನದ 2ನೇ ದ್ರೇಷ್ಕಾಣ ವಾಗುವುದು ಇಲ್ಲಿ. ಸುತೇಶ ಚಂದ್ರ ಕರ್ಕರಾಶಿ 1ರಿಂದ 10ರಲ್ಲಿ ವೃಶ್ಚಿಕದ 20 ಡಿಗ್ರಿಯಿಂದ 30 ಡಿಗ್ರಿವರೆಗೆ ಹಾಗೂ ಮೀನದ 10 ಡಿಗ್ರಿಯಿಂದ 20 ಡಿಗ್ರಿ ಅಂಶದಲ್ಲಿದ್ದರೆ ಮಾತ್ರ ಸಾಧ್ಯ. ಶುದ್ಧದ್ರೇಷ್ಕಾಣದಲ್ಲಿ ವೃಷಭ, ಕನ್ಯಾ, ಮಕರದ 10ರವರೆಗಿದ್ದರೆ ಸಾಧ್ಯ.

ಸುತೇಶೆ ಚರರಾಶಿಸ್ಥೆ ಸುಧಾಂಶೌ ರಾಹೂಣಾನ್ವಿತೆ ।
ಪುತ್ರಸ್ಥಾನಂ ಗತೆ ಮಂದೆ ಪರಜಾತಂ ವದೇಚ್ಛಿಶುಮ್ ॥೧೪॥

ಚಂದ್ರಾದಷ್ಟಮಗೆ ಜೀವೆ ಲಗ್ನಾದಷ್ಟಗಮೇ ವಿಧೌ ।
ಪಾಪಖೇಟ್ಯೆ ದೀಕ್ಷತಯತೆ ಜಾತಃ ಸ್ಯಾಜ್ಜಾರ ಸಂಭವಃ ॥೧೫॥

ಪಂಚಮೇಶ ಚರರಾಶಿಯಲ್ಲಿ ಚಂದ್ರ, ರಾಹುಯುಕ್ತ ಹಾಗೂ ಶನಿ ಪಂಚಮ ಸ್ಥಾನ ಗತನಾದರೆ – ಮಗು ಧರ್ಮ ಸಂತಾನ (ಸ್ವತಂದೆಯಿಂದ ಹುಟ್ಟಿದವ ನಾಗುತ್ತದೆ.) ಚಂದ್ರನಿಂದ ಅಷ್ಟಮಸ್ಥ ಗುರು ಲಗ್ನದಿಂದ ಅಷ್ಟಮಸ್ಥ ಚಂದ್ರ ಇದ್ದು ಚಂದ್ರ, ಗುರು ಪಾಪಗ್ರಹ ಯುಕ್ತ ದೃಷ್ಟರಾಗಿದ್ದರೂ ಕೂಡ ಜಾತಕ ಜಾರ ಸಂತಾನವೆಂದು ಹೇಳುವುದು.

## ಈ ಅಂಶ ಹೇಳುವಾಗ

ವಿಮರ್ಶೆ– ಸಾರಾಸಾರ ವಿಚಾರ ಅತಿ ಅವಶ್ಯಕವಾಗಿದೆ 1)ಮೇಷ ಲಗ್ನವಿದ್ದು ಪಂಚಮೇಶ ಚರರಾಶಿಗಳಾದ ಮೇಷ, ಕರ್ಕದಲ್ಲಿದ್ದರೆ ಉಳಿದ ಗ್ರಹ ವಿಚಾರ ಮಾಡಿ – ಲಗ್ನೇಶನ ಮೇಲೆ ಗುರು ದೃಷ್ಟಿಯಿರದಿದ್ದರೆ ಅದನ್ನು ಖಚಿತಪಡಿಸಿ ಹೇಳುವುದು. ವೃಷಭ ಲಗ್ನವಿದ್ದಾಗ ಗುರು ಉಚ್ಚಸ್ಥನಾಗಿ ಚಂದ್ರ, ಗುರು – ಅಧಿಪರ ರಾಶ್ಯಾಂತರ ಯೋಗವಾಗಿ – ಜಾರ ಸಂತಾನ ಅನ್ನುವುದನ್ನು ವಿಮರ್ಶೆ ಮಾಡಿಯೇ ಹೇಳುವುದು. ಮಿಥುನ ಲಗ್ನದಲ್ಲಿ ಶುಕ್ರ ಪಂಚಮಸ್ಥನಾಗಿ ಶುಭ ದೃಷ್ಟಿತನಾದರೆ – ಹಾಗೇ ಹೇಳುವಾಗ ವಿಚಾರಣೀಯ. ಇದೇ ರೀತಿ ಎಲ್ಲ ಲಗ್ನ ವಿಚಾರಿಸಿಯೇ ಫಲ ಹೇಳುವುದು. ಕಾಕ ವಂಧ್ಯಾ ಹೇಳುವಾಗ ಸ್ತ್ರೀ ಕುಂಡಲಿ ವಿಮರ್ಶೆ ಮಾಡಿಯೇ ಹೇಳುವುದು.

ಪುತ್ರಸ್ಥಾನಾಧಿಕ್ವೆ ಸ್ವೋಚ್ಚೆ ಲಗ್ನಾಚ್ಚೆ ದ್ವಿತ್ರಿಕೋಣಗೆ ।
ಗುರುಣಾ ಸಂಯುತ ದೃಷ್ಟೆ ಪುತ್ರ ಭಾಗ್ಯಮುಪೈತಿಸಃ ॥೧೬॥

ತ್ರಿಚತುಃ ಪಾಪ ಸಂಯುಕ್ತೆ ಪಂಚಮೇ ಶುಭವರ್ಜಿತೆ ।
ನೀಚಗೆ ಪಂಚಮೇಶ ಚ ನೀಚಸಂಸ್ಥೊ ಭವೆಚ್ಛಿಶುಃ ॥೧೭॥

ಸ್ವ ಉಚ್ಚಿಸ್ಥ ಪಂಚಮೇಶ ಲಗ್ನದಿಂದ 2, 3, 9, 5ನೇ ಸ್ಥಾನಗಳಲ್ಲಿದ್ದು ಅವನ ಮೇರೆ ಗುರು ದೃಷ್ಟಿ ಅಥವಾ ಶುಭಯೋಗ ಮಾಡುತ್ತಿದ್ದರೆ ಅವನು ಪುತ್ರ ಸೌಖ್ಯವಾತನಾಗುತ್ತಾನೆ. ಅದೇ ಮೂರು ಅಥವಾ ನಾಲ್ಕು ಪಾಪಗ್ರಹಯುತ ಪಂಚಮ ಭಾವ ಶುಭ ದೃಷ್ಟಿ ರಹಿತವಾಗಿದ್ದರೆ ಹಾಗೂ ಪಂಚಮೇಶ ನೀಚರಾಶಿ ಗತನಾಗಿದ್ದರೆ ಜಾತಕನು ನೀಚ ಕರ್ಮನಿರತನಾಗುವನು.

ಪುತ್ರಸ್ಥಾನಂ ಗತೆ ಜೀವೇ ತದೀಶೆ ಭೃಗು ಸಂಯುತೆ ।
ದ್ವಾವಿಂಶೆ ಚ ತ್ರಯಸ್ತ್ರಿಂಶೆ ವತ್ಸರೆ ಜಾಯತೆ ಸುತಃ ॥೧೮॥

ಸುತೇಶೆ ಕೇಂದ್ರ ಭಾವಸ್ಥೆ ಕಾರಕೇಣ ನಮನ್ವಿತೆ ।
ಷಟ್‌ತ್ರಿಂಶೆ ತ್ರಿಂಶದಬ್ದೇ ಚ ಪುತ್ರೋತ್ಪತ್ತಿ ವಿನಿರ್ದಿಶೇತ್ ॥೧೯॥

ಲಗ್ನಾದ್ ಭಾಗ್ಯಗತೆ ಜೀವೇ ಜೀವಾದ್ ಭಾಗ್ಯಗತೆ ಭೃಗೌ ।
ಲಗ್ನೇಶೆ ಭೃಗುಯುಕ್ತೆ ವಾ ಚತ್ವಾರಿಂಶೆ ಸುತೋ ಭವೇತ್ ॥೨೦॥

ಪುತ್ರಸ್ಥಾನಂ ಗತೆ ರಾಹೌ ತದೀಶೆ ಪಾಪ ಸಂಯುತೆ ।
ನೀಚರಾಶಿ ಗತೋ ಜೀವೋ ದ್ವಿತ್ರಿಂಶೆ ಪುತ್ರ ಮೃತ್ಯುವಃ ॥೨೧॥

ಲಗ್ನಾತ್ ಪಂಚಮಗೆ ಪಾಪೆ ಜೀವಾತ್ ಪಂಚಮಗೇಪಿಚ ।
ಷಟ್‌ತ್ರಿಂಶೆ ಚ ತ್ರಯ ಸ್ತ್ರಿಂಶೆ ಚತ್ವಾರಿಂಶೆ ಸುತಕ್ಷಯಃ ॥೨೨॥

ಲಗ್ನೆ ಮಾಂದಿ ಸಮಾಯುಕ್ತೆ ಲಗ್ನೇಶೆ ನೀಚ ರಾಶಿಗೆ ।
ಷಟ್ ಪಂಚ ಶನ್ಮಿತೇಂಬ್ಧೆ ತು ಪುತ್ರಶೋಕ ಸಮಾಕುಲಃ ॥೨೩॥

ಪಂಚಮದಲ್ಲಿ ಗುರು, ಪಂಚಮೇಶ ಶುಕ್ರ ಸಹಿತವಾಗಿದ್ದರೆ 32 – 33ನೇ ವರ್ಷದಲ್ಲಿ ಪುತ್ರಲಾಭವಾಗುತ್ತದೆ. (ಸಂತಾನವಾಗುತ್ತದೆ) ಲಗ್ನದಿಂದ ನವಮ ಸ್ಥಾನದಲ್ಲಿ ಗುರು ಗುರುವಿನಿಂದ ನವಮದಲ್ಲಿ (ಪಂಚಮದಲ್ಲಿ) ಶುಕ್ರ ಅಥವಾ ಲಗ್ನೇಶ ಶುಕ್ರನ ಜೊತೆಗಿದ್ದರೆ 40ನೇ ವರ್ಷದಲ್ಲಿ ಪುತ್ರ ಸಂತಾನ – ಪುತ್ರ ಭಾವದಲ್ಲಿ ರಾಹು ಹಾಗೂ ಪಂಚಮೇಶ – ಪಾಪಗ್ರಹ ಯುಕ್ತನಾದರೆ ಗುರು ತನ್ನ ನೀಚದಲ್ಲಿದ್ದರೆ 32ನೇ ವಯಸ್ಸಿಗೆ ಪುತ್ರ ಶೋಕವುಂಟಾಗುತ್ತದೆ (ಪುತ್ರ ಮೃತ್ಯು)

ಶುಕ್ರ, ಲಗ್ನದಿಂದ ಪಂಚಮ ಭಾವದಲ್ಲಿ ಪಾಪಗ್ರಹಗಳಿದ್ದರೆ 33 ಅಥವಾ 36ನೇ ವರ್ಷದಲ್ಲಿ ಪುತ್ರ ನಿಧನ ಹೇಳುವುದು. ಲಗ್ನದಲ್ಲಿ ಗುಳಿಕ ಲಗ್ನೇಶ ನೀಚ ಗತನಾದರೆ 56ನೇ ವರ್ಷದಲ್ಲಿ ಪುತ್ರ ನಿಧನ ಹೇಳುವುದು ಅಥವಾ ಅಪ್ಪಾದುಃಖವಾಗುವುದು.

## ದಶಾದಿ ಬಹುಸಂಖ್ಯಕ ಪುತ್ರಯೋಗ

ಚತುರ್ಥೆ ಪಾಪ ಸಂಯುಕ್ತ ಷಷ್ಠೇಪಿಚ ತಥಾವಿಧೆ ।
ಸುತೇಶ ಪರಮೋಚ್ಚಸ್ಥೆ ಲಗ್ನೇಶೇನ ಸಮನ್ವಿತಾ ॥೨೪॥

ಕಾರಕೆ ಶುಭ ಸಂಯುಕ್ತೆ ದಶ ಸಂಖ್ಯಾಸ್ತು ಸೂನವಃ ।
ಪರಮೋಚ್ಚಗತೆ ಜೀವೆ ಧನೇಶೆ ರಾಹು ಸಂಯುತೆ ॥೨೫॥

ಭಾಗ್ಯೇಶೆ ಭಾಗ್ಯ ಸಂಯುಕ್ತೆ ಸಂಖ್ಯಾತಾ ನವಸೂನವಃ ।
ಪುತ್ರ ಭಾಗ್ಯಗತೆ ಜೀವೆ ಸುತೇಶೆ ಬಲಸಂಯುತೆ ॥೨೬॥

ಧನೇಶೆ ಕರ್ಮ ಭಾವಸ್ಥೆ ವಸು ಸಂಖ್ಯಾಸ್ತು ಸೂನವಃ ।
ಪಂಚಮಾತ್ ಪಂಚಮೇ ಮಂದೆ ಸುತಸ್ಯಚ ತದೀಶ್ವರೆ ॥೨೭॥

ಸೂನವಃ ಸಪ್ತಸಂಖ್ಯಾಶ್ಚ ದ್ವಿಗರ್ಭೆ ಯಮಲಂ ಭವೇತ್ ।
ವಿತ್ತೇಶೆ ಪಂಚಮಸ್ಥೆ ಚ ಸುತಸ್ಥೆ ಪಂಚಮಾದಿಪೆ ॥೨೮॥

ಷಟ್ ಸಂಖ್ಯಾಕಸ್ಸುತ ಪ್ರಾಪ್ತಿಸ್ತೊಷಾಂ ಚ ತ್ರಿಪುಜಾಭೃತಿಃ ।
ಮಂದಾತ್ ಪಂಚಮಗೆ ಜೀವೋಜೀವಾದ್ ವಾ ಪಂಚಮೇ ಶನೌ ॥೨೯॥

ಪಂಚಮೇ ಪಾಪ ಸಂಯುಕ್ತೆ ಪುತ್ರಮೇಕಂ ವಿನಿರ್ದಿಶೇತ್ ।
ಪಂಚಮೇ ಪಾಪ ಸಂಯುಕ್ತೆ ಗುರೌ ಪಂಚಮಗೆ ಶನೌ

॥೩೦॥

ಜಾಯಾಂತರೆ ಪುತ್ರ ಲಾಭಃ ಕಲತ್ರ ತ್ರಯಭಾಗ್ ಭವೇತ್ ।
ಪಂಚಮೇ ಪಾಪ ಸಂಯುಕ್ತೆ ಜೀವಾತ್ ಪಂಚಮಗೆ ಶನೌ ॥೩೧॥

ಲಗ್ನೇಶೆ ಧನ ಭಾವಸ್ಥೆ ಪಂಚಮೇಶಃ ಕುಜಾನ್ವಿತಃ ।
ಜಾತಂ ಜಾತಂ ಶಿಶುಂ ಹಂತ ದೀರ್ಘಾಯು ಶ್ಚೈವ ಮಾನವಃ ॥೩೨॥

ಚತುರ್ಥ ಹಾಗೂ ಷಷ್ಠಭಾವ ಪಾಪ ಯುಕ್ತವಾಗಿ ಪರಮೋಚ್ಚ ಗತ ಪಂಚಮೇಶ ಲಗ್ನೇಶನ ಜೊತೆಗಿದ್ದರೆ ಹಾಗೂ ಪುತ್ರಕಾರಕ ಗ್ರಹವು ಶುಭಯುಕ್ತ ವಾಗಿದ್ದರೆ 10 ಜನ ಮಕ್ಕಳನ್ನು ಹೇಳುವುದು. ಗುರು ಮರಮೋಚ್ಚಗತನಾಗಿ ಧನೇಶ

ಹಾಗೂ ರಾಹು ಸಂಯೋಗವಾಗಿ ಭಾಗ್ಯೇಶ ಭಾಗ್ಯಸ್ಥಾನ ಗತರಾಗ್ದಿರೆ 9 ಮಕ್ಕಳಾಗುವುವು. ಗುರು ಪಂಚಮ ಅಥವಾ ನವಮದಲ್ಲಿ ಪಂಚಮೇಶ ಪ್ರಬಲನಾಗಿದ್ದರೆ ಹಾಗೂ ಧನೇಶ ಕರ್ಮ ಸ್ಥಾನಗತನಾಗಿದ್ದರೆ 8 ಜನ ಮಕ್ಕಳೆಂದು, ಪಂಚಮ ಭಾವದಿಂದ ಪಂಚಮದಲ್ಲಿ ಇದು ಪಂಚಮೇಶ ಪಂಚಮದಲ್ಲಿದ್ದರೆ ಏಳು ಜನ ಮಕ್ಕಳನ್ನು ಹೇಳುವುದು. ಅದರಲ್ಲಿ ಎರಡು ಗರ್ಭ ಯುಗ್ಮ (ಅವಳಿ ಜವಳಿ) ಆಗಿರುತ್ತವೆ. ವಿತ್ತೇಶ ಹಾಗೂ ಪಂಚಮೇಶ ಪಂಚಮ ಭಾವದಲ್ಲಿದ್ದರೆ 6 ಜನ ಮಕ್ಕಳು, ಅದರಲ್ಲಿ 3 ಮಕ್ಕಳ ಮರಣ, ಶನಿಯಿಂದ ಐದರಲ್ಲಿ ಗುರು ಅಥವಾ ಗುರುವಿನಿಂದ ಪಂಚಮ ಶನಿ ಹಾಗೂ ಪಂಚಮಸ್ಥಾನ ಪಾಪಯುಕ್ತವಾಗಿದ್ದರೆ ಒಬ್ಬನೇ ಮಗನೆಂದು ಹೇಳುವುದು.

ಪಂಚಮ ಭಾವ ಪಾಪಗ್ರಹ ಯುಕ್ತ ಹಾಗೂ ಗುರುವಿನಿಂದ ಪಂಚಮದಲ್ಲಿ ಶನಿಯಿದ್ದರೆ ಜಾತಕನಿಗೆ 3 ಪತ್ನಿಯರು ಅದರಲ್ಲಿ ಮೊದಲನೆಯವಳನ್ನು ಬಿಟ್ಟು ಉಳಿದವರಲ್ಲಿ ಪುತ್ರ ಸಂತಾನವಾಗುತ್ತವೆ. ಪಂಚಮ ಭಾವ ಪಾಪಯುಕ್ತವಾಗಿ – ಗುರುವಿನಿಂದ ಪಂಚಮದಲ್ಲಿ ಶನಿ ಲಗ್ನೇಶ ಧನ ಭಾವ ಗತನಾಗಿ ಪಂಚಮೇಶ ಭೌಮ ಯುಕ್ತನಾದರೆ ಮನುಷ್ಯ ಮಾತ್ರಾತ್ಮಜನಾಗುತ್ತಾನೆ. ಅರ್ಥಾತ್ ಅನೇಕ ಪುತ್ರರಾದರೂ ಯಾರೂ ಜೀವಿತರಾಗಿರುವುದಿಲ್ಲ. ಆದರೆ ಸ್ವತಃ ದೀರ್ಘಾಯು ಆಗಿರುತ್ತಾನೆ.

ವಿಮರ್ಶೆ–'ಪುತ್ರಾದ್ಯೇವ ಮಹಿಪಪುತ್ರಪಿತೃಧೀಪುಣ್ಯಾನಿ ಸಶ್ಚಿಂತಯೇತ್'ದ ಅನುಸಾರ ಪಂಚಮ ಭಾವದಿಂದ ದೇವತೆ, ರಾಜ, ಪುತ್ರ, ಪಿತಾ ಬುದ್ಧಿ ಪುಣ್ಯ ಈ ಅಂಶಗಳಲ್ಲಿದೆ. ಈ ಕೆಳಗಿನ ಅಂಶವೂ ವಿಚಾರಣೀಯವೆ.

ವಿದ್ಯಾ ಸಂತಾನದ ಜೊತೆಗೆ ಗರ್ಭ ಮಂತ್ರ ತಂತ್ರ ಲಾಟರಿ ಉಪಾಸನಾ ಕಾರ್ಯದಲ್ಲಿ ಸಫಲತೆ, ಜ್ಞಾನ ಪ್ರಾಪ್ತಿಯ ದಿಕ್ಕು ಸಮಯಾನೂಕೂಲತೆ – ಹೊಟ್ಟೆ ಅಕಸ್ಮಾತ ಲಾಭ ಸ್ವಭಾವ ವೈಚಿತ್ರ್ಯ ಬುದ್ಧಿ ಜಠರಾಗ್ನಿ ಕಾವ್ಯ ರಚನೆ ಪ್ರಥಮ ಸಂತಾನ ನೌಕರರ ಬರು ಹೋಗುವುದು, ನಾಟಕವಾದ್ಯ ಕುಶಲತಾ ರಾಜನ ಮೃತ್ಯು, ತಂದೆ ಸಂಪತ್ತು ಪಾಪ, ಪುಣ್ಯ ಹೆಂಡತಿಗೆ ಆಗುವ ಲಾಭ, ಜಡ್ಡು ದೇವರ ಸಂಬಂಧ ವಿಚಾರ ಭಾಗ್ಯ ವಿಭಿನ್ನ ಆಸೆ, ಆಕಾಂಕ್ಷೆ, ವೇಶ್ಯಾ ಸಂಬಂಧ, ಪಾಸನಾಮಂತ್ರ, ಅನ್ನದಾನ, ಧನ ಲಾಭ ಮಾರ್ಗ, ಪಂಡಿತರಲ್ಲಿ ಸನ್ಮಾನ, ಪರಂಪರಾಪಾನಾದಿ ವಿಚಾರಗಳನ್ನು ನೋಡುವುದರಲ್ಲಿದೆ.

ಇಲ್ಲಿ ವಿವರಿಸಿದಂತೆ ಪಂಚಮ ಭಾವದಿಂದ ಹಾಗೂ ಅಧಿಪತಿಯಿಂದ ನೋಡಬೇಕಾದ ವಿಶೇಷ ಫಲವನ್ನು ಪರಿಗಣಿಸುವುದು.

ಮಾನವ ಜೀವನದಲ್ಲಿ ಪಂಚಮಸ್ಥಾನ ವಿದ್ಯಾ ಹಾಗೂ ಸಂತಾನಾಭಿವೃದ್ಧಿ (ವಂಶವೃದ್ಧಿ) ಸ್ಥಾನದ ಕಾರಣ ವಿಶೇಷ ಮಹತ್ವವಿದ್ದ – ಉಳಿದ ಅಂಶ ಎಲ್ಲ ಶಾಸ್ತ್ರಕಾರರೂ ಗೌಣವಾಗಿ ಕಂಡಿದ್ದಾರೆ. ಅನ್ಯಗ್ರಂಥ ಸಹಾಯದಿಂದ ಈ ವಿಷಯ ಈ ರೀತಿ ಪರಿಗಣಿಸುವುದು – ವಿದ್ಯ ಸಂತಾನಕ್ಕೆ ವಿಶೇಷವಾಗಿ ನೈಸರ್ಗಿಕಕಾರಕನಾದ ಗುರುವನ್ನು, ಶುಕ್ರನನ್ನು ವಿಚಾರಿಸುವುದು ವಿಶೇಷವೇ.

1) ಪಂಚಮೇಶ ಬುಧ, ಗುರುವಿನ ಜೊತೆಗೆ ತ್ರಿಕ್(6, 8, 12)ರಲ್ಲಿದ್ದರೆ ಜಾತಕ ವಿದ್ಯಾವಿಹೀನನಾಗಿರುತ್ತಾನೆ. ಅದೇ ಪಂಚಮೇಶ ತನ್ನ ಸ್ವಗ್ರಹದಲ್ಲಿದ್ದು ಶುಭ ದೃಷ್ಟಿತನಾಗಿದ್ದರೆ ಅಲ್ಪನೆಂದು ಕಾಣುವ ಅವಶ್ಯಕತೆಯಿಲ್ಲ. ಪಂಚಮೇಶ ಕೇಂದ್ರ ತ್ರಿಕೋನದಲ್ಲಿದ್ದರೆ ಅವನನ್ನು ವಿದ್ಯಾಯುಕ್ತನೆಂದೇ ಗಣಿಸುವುದು.

2) ಬುಧ, ಗುರು ಪಂಚಮೇಶ ಸೂರ್ಯನ ಸಂಗಡ ಅಸ್ತಂಗತರಾಗಿದ್ದರೆ ಮನುಷ್ಯ ಮಂದಬುದ್ಧಿಯವನಾಗಿರುತ್ತಾನೆ. ಆದರೆ ಬುಧ, ಗುರು ಪಂಚಮೇಶ ತಮ್ಮ ತಮ್ಮ ಮನೆಯಲ್ಲಿದ್ದರೆ ಬುದ್ಧಿವಂತನಾಗಿರುತ್ತಾನೆ.

3) ಪಂಚಮೇಶ ಗುರು ತ್ರಿಕ್‌ದಲ್ಲಿದ್ದರೆ ಜಾತಕ ಮೂಗನಾಗಿರುತ್ತಾನೆ.

4) ಒಂದೇ ಸ್ಥಾನದಲ್ಲಿದ್ದ ಗುರು, ರಾಹು, ಶನಿ, ಬುಧರು ಶುಕ್ರನಿಂದ ನೋಡಲ್ಪಡುತ್ತಿದ್ದರೆ ಶೂದ್ರನಾಗಿದ್ದರೂ ಬ್ರಾಹ್ಮಣ ತುಲ್ಯ ಶ್ರೇಷ್ಠ ವಿದ್ವಾಂಸನಾಗಿರುತ್ತಾನೆ.

5) ಪಂಚಮೇಶನಂತೆ ದ್ವಿತೀಯೇಶ ಬಲಿಷ್ಠರಾಗಿದ್ದು ಅವರ ಮೇಲೆ ಸೂರ್ಯನ ದೃಷ್ಟಿಯಿದ್ದರೆ ಜಾತಕ ವ್ಯಾಕರಣ ಶಾಸ್ತ್ರಜ್ಞನಾಗುತ್ತಾನೆ.

6) ಗುರು ಕೇಂದ್ರಸ್ಥನಾಗಿ ದ್ವಿತೀಯೇಶ ಬುಧನಾಗಿ ಅಥವಾ ಶುಕ್ರ ಸ್ವೋಚ್ಚ ಗ್ರಹಿಯಾಗಿದ್ದರೆ ಜಾತಕ ಗಣಿತಶಾಸ್ತ್ರಜ್ಞನಾಗುತ್ತಾನೆ.

7) ದ್ವಿತೀಯ ಭಾವ ಗತ ಭೌಮ ಶುಭ ಗ್ರಹ ಪಂಚಮೇಶನೊಂದಿಗೆ ಇದ್ದರೆ ಬುಧನ ದೃಷ್ಟಿಯಿದ್ದರೆ ಜಾತಕ ಗಣಿತಜ್ಞನಾಗುವನು.

8) ಸಚಂದ್ರ ಪಂಚಮೇಶ ಕೇಂದ್ರಸ್ಥನಾಗಿದ್ದರೆ ಅಥವಾ ತೃತಿಯೇ ಬುಧನ ಜೊತೆಗಿದ್ದರೆ – ಕೂಡ ಜಾತಕ ಗಣಿತಜ್ಞನಾಗುವನು.

9) ಲಗ್ನೇಶ ಪಂಚಮೇಶರಲ್ಲಿ ಯಾರೊಬ್ಬರು ದ್ವಿತೀಯಸ್ಥಾನ ಗತರಾಗಿ ಶುಕ್ರ, ದ್ವಾದಶದಲ್ಲಿದ್ದರೆ ಇಲ್ಲವೇ ಉಚ್ಚಸ್ಥ ಪಂಚಮೇಶ – ಕೇಂದ್ರದಲ್ಲಿದ್ದರೆ ಲಗ್ನೇಶ ಪಾರಾವತಾಂಶ ಗತನಾದರೆ ಅಥವಾ ಶುಕ್ರ ನೀಚದಲ್ಲಿ ತೃತೀಯದಲ್ಲಿದ್ದರೂ

ವೇದಾಂತ ಶಾಸ್ತ್ರಜ್ಞನಾಗುವನು.

10) ದ್ವಿತೀಯೇಶ ಸೂರ್ಯ ಅಥವಾ ಮಂಗಳರಾಗಿದ್ದು ಅವರ ಮೇಲೆ ಗುರು ಅಥವಾ ಶುಕ್ರನ ದೃಷ್ಟಿಯಿದ್ದರೆ ಶಾಸ್ತ್ರಜ್ಞನಾಗುವನು.

11) ಗುರುಯುಕ್ತ ದ್ವಿತೀಯೇಶ ಸ್ವಸ್ಥಾನದಲ್ಲಿದ್ದ ಅವನ ಮೇಲೆ ಪಾಪಗ್ರಹ ದೃಷ್ಟಿಯಿರದಿದ್ದರೆ ವಾಗ್ಮಿಯಾಗುವನು.

12) ಬುಧ, ಗುರು ದ್ವಿತೀಯದಲ್ಲಿದ್ದು ಅವರ ಮೇಲೆ ಪಾಪಗ್ರಹ ದೃಷ್ಟಿಯಿರ ದಿದ್ದರೆ ಜಾತಕ ಸುವಿಖ್ಯಾತನಾಗುವನು.

13) ದ್ವಿತೀಯ ಸ್ಥಾನ ಶುಭಗ್ರಹ ಯುಕ್ತಿ ಅಥವಾ ದೃಷ್ಟರಾಗಿದ್ದರೆ – ಜಾತಕ ಸೌಮ್ಯ ಮಾತುಗಾರನಾಗುವನು. ಅದೇ ಭಾವ ಪಾಪಗ್ರಹಯುತವಾದರೆ ದುರ್ಭಾಷಿ ಯಾಗುವನು.

14) ಧನ ಸ್ಥಾನದಲ್ಲಿ ಧನುರಾಶಿ ಚಂದ್ರನಿದ್ದರೆ (ವೃಶ್ಚಿಕ ಲಗ್ನದಲ್ಲಿ ಮಾತ್ರ ಸಾಧ್ಯ) ವಿಖ್ಯಾತ ಸ್ಪಷ್ಟವಾದಿಯಾಗುವನು.

15) ಬುದ ಕೇಂದ್ರಸ್ಥನಾಗಿ – ದ್ವಿತೀಯಸ್ಥ ಬಲಿಷ್ಠನಾಗಿದ್ದರೆ ಅಥವಾ ದ್ವಿತೀಯಸ್ಥ ಶುಕ್ರ, ತೃತೀಯದಲ್ಲಿ ಅನ್ಯ ಶುಭಗ್ರಹಗಳಿದ್ದರೆ ಜಾತಕ ಜ್ಯೋತಿಷ್ಯ ಶಾಸ್ತ್ರಜ್ಞನಾಗುವನು.

16) ದ್ವಿತೀಯೇಶ ಬಲಿಷ್ಠನಾಗಿ ಬುಧ ಕೇಂದ್ರಸ್ಥ ಹಾಗೂ ಶುಕ್ರ ಪಂಚಮದಲ್ಲಿದ್ದರೆ ವಿಖ್ಯಾತ ಜ್ಯೋತಿಷಿಯಾಗುವನು.

## ಸಂತತಿ ವಿಚಾರ

ಸಂತತಿಕಾರಕ ಗುರುವಿನಿಂದ ಪಂಚಮ ಸ್ಥಾನ ಪಾಪಕ್ರಾಂತವಾಗಿದ್ದು ಸ್ವತಃ ಗುರು ಕೂಡ ಪಾಪಯುಕ್ತನಾಗಿದ್ದರೆ ಆ ವ್ಯಕ್ತಿಯ ಸಂತತಿ ಜೀವಿತವಾಗಿರುವುದಿಲ್ಲ. ಇದೇ ರೀತಿ ಲಗ್ನ (ಮುಖ್ಯ ಅಂಶ) ಚಂದ್ರ ಸಪ್ತಮ ಭಾವದಿಂದಲೂ ನೋಡುವುದು – ಅಂದರೆ ಈ ಮೂರು ಸ್ಥಾನಗಳಿಂದ ಪಂಚಮ ಭಾವದಲ್ಲಿ ಪಾಪಗ್ರಹ – ಆ ಸ್ಥಾನಗಳು ಪಾಪಕ್ರಾಂತವಾದರೆ ಸಂತತಿ ನಾಶ – ಇಂಥ ಸಮಯದಲ್ಲಿ ಹರಿವಂಶ ಶ್ರವಣ – ವಿಷ್ಣು ಸಹಸ್ರನಾಮ, ಕನ್ಯಾದಾನ ಆದಿ ಸಹಾಯಕವಾಗಿ ಮಕ್ಕಳು ಜೀವಿಸುವುವು.

ಕಟಕ ರಾಶಿಸ್ಥ ಚಂದ್ರ ಪಂಚಮದಲ್ಲಿದ್ದರೆ ಅವನಿಗೆ ಕನ್ಯಾ ಸಂತತಿ ಹೆಚ್ಚು.

ಕುಂಭದ ಶನಿ ಪಂಚಮದಲ್ಲಿದ್ದರೆ ಐದು ಜನ ಪುತ್ರರು ಮಕರದ ಶನಿ ಪಂಚಮ

3 ಕನ್ಯೆಯರು.

ಬುಧ, ಶುಕ್ರ, ಚಂದ್ರ ಪಂಚಮ ಭಾವಗತರಾಗಿದ್ದರೆ ಕನ್ಯಾ ಸಂಖ್ಯೆ ಹೆಚ್ಚು. ಕೇವಲ ಗುರು ಪಂಚಮದಲ್ಲಿದ್ದರೆ 5 ಜನ ಗಂಡು ಮಕ್ಕಳು ಜನಿಸುವರು.

ತೃತೀಯ ಭಾವಸ್ಥ ಬುಧನಲ್ಲಿ ಎರಡು ಗಂಡು ಮಕ್ಕಳು ಹಾಗೂ ಮೂರು ಹೆಣ್ಣು ಮಕ್ಕಳು, ಗುರುವಿದ್ದರೆ 5 ಗಂಡು, ಚಂದ್ರ ಶನಿ ತೃತೀಯದಲ್ಲಿ ಒಬ್ಬ ಮಗ, ಶುಕ್ರ 3 ಜನ ಗಂಡು ಮಕ್ಕಳು, ಚಂದ್ರ ರಾಹೂ ಪುತ್ರ – ಅಭಾವ ತೋರಿಸುತ್ತದೆ.

ಪಾಪಗ್ರಹ ಅಥವಾ ಗುರು ಚತುರ್ಥದಲ್ಲಿದ್ದರೆ ಅಷ್ಟಮ ಅಥವಾ ಪಂಚಮ ದಲ್ಲಿ ಚಂದ್ರನಿದ್ದರೆ 30 ವರ್ಷ ಪರ್ಯಂತ ಮಕ್ಕಳಿಲ್ಲ.

ಪಂಚಮೇಶ ಪರಮೋಚ್ಚದಲ್ಲಿ ಪುರುಷಗ್ರಹ ನವಮಸ್ಥರಾಗಿದ್ದರೆ ಹಾಗೂ ಪಾಪಗ್ರಹದಿಂದ ವೀಕ್ಷಿತನಾಗಿದ್ದರೆ – ಅಭಾವ ಕಂಡರೆ ವೀಕ್ಷಿತನಾಗಿರದಿದ್ದರೆ ಸಮ ಸಂಖ್ಯೆಯಲ್ಲಿ ಪುತ್ರ ಸಂತಾನ.

ಪಂಚಮೇಶ ನಿರ್ಬಲ, ಪಾಪಯುಕ್ತ ಅಸ್ತಂಗತನಾದರೆ ಪುತ್ರ ಸಂತಾನವಿಲ್ಲ ವೆಂದು ಹೇಳುವುದು. ಆದರೂ ತೀವ್ರ ಮರಣ ಹೊಂದುತ್ತವೆ.

ಪಂಚಮ ಭಾವಸ್ಥ ಶನಿ, ರಾಹು ಹಾಗೂ ಕೇತು ಗರ್ಭ ನಾಶಕಾರಕರಾಗಿದ್ದಾರೆ.

ಬುಧ, ಶುಕ್ರ, ಗುರು ತಮ್ಮ ರಾಶಿಗಳಲ್ಲಿ ಇಲ್ಲವೇ ಉಚ್ಚರಾಗಿದ್ದರೆ ಹಾಗೂ ಅವರು 1, 5, 10, 11, 9, 7ರಲ್ಲಿದ್ದರೆ ರಾಜನ ಸಮಾನ ಪುತ್ರ ಸಂತತಿಯಿಂದ ಸುಖಿ ಪುರುಷನಾಗುತ್ತಾನೆ.

### ನಿಃಸಂತಾನ ಯೋಗಗಳು—

1) ಸೂರ್ಯ ಲಗ್ನಸ್ಥ, ಶನಿ ಸಪ್ತಮ 2) ಬೃಹಸ್ಪತಿಯ ದೃಷ್ಟಿ ಗೋಚರವಾಗದ ರವಿ, ಶನಿ ಸಪ್ತಮದಲ್ಲಿ 3) ಸೂರ್ಯ, ಶನಿಯುಕ್ತ ಷಷ್ಠೇಶ ಷಷ್ಠ ಸ್ಥಾನದಲ್ಲಿ ಬುಧ ದೃಷ್ಟ 4) ಶನಿ, ಮಂಗಳ, ಷಷ್ಠ ಅಥವಾ ಚತುರ್ಥದಲ್ಲಿ – ಇವು ನಿಃಸಂತಾನಕಾರಕ ಮಹತ್ವ ಯೋಗಗಳು.

'ಈ ಎಲ್ಲ ಕುಂಡಲಿಗಳಿಗೂ – 'ಸ್ತ್ರೀ ಪುರುಷ' ಎರಡೂ ಜಾತಕಗಳನ್ನು ನೋಡಿ ಫಲ ಹೇಳುವುದು' ಒಂದೇ ಕುಂಡಲಿಯಿಂದ ಹೇಳಬೇಡಿರಿ.

### ಸಂತಾನ ಸಂಖ್ಯೆ

1) ಪಂಚಮೇಶ ಪುರುಷಗ್ರಹ(ರ, ಮು, ಗು)ವ ನವಾಂಶದಲ್ಲಿ ಇದ್ದ ರಾಶಿ

ಸಂಖ್ಯೆ ಸಮಾನ ಪುರುಷ, ಸ್ತ್ರೀ ಗ್ರಹ(ಚ, ಶು)ರ ರಾಶಿ ಸಂಖ್ಯೆ ಸಮಾನ ಕನ್ಯೆ – ಬಲಾಬಲ ನೋಡಿ ಹೇಳುವುದು.

2) ಪಂಚಮ ಭಾವದ ಮೇಲೆ ಎಷ್ಟು ಪುರುಷ ಗ್ರಹ ದೃಷ್ಟಿಯಿದೆಯೋ ಅಷ್ಟು ಪುರುಷ ಸಂತಾನ. ಸ್ತ್ರೀ ಗ್ರಹ ಸಂಖ್ಯೆಯಷ್ಟು ಸ್ತ್ರೀ ಸಂತಾನ.

3) ಪಂಚಮ ಭಾವದ ನವಾಂಶದ ಮೇಲೆ ಎಷ್ಟು ಪಾಪಗ್ರಹಗಳ (ಪುರುಷ) ದೃಷ್ಟಿಯಿದೆಯೋ ಅಷ್ಟು ಗಂಡು, ಎಷ್ಟು ಸ್ತ್ರೀ ಗ್ರಹ ದೃಷ್ಟಿಯೂ ಅಷ್ಟು ಸ್ತ್ರೀ ಹಾಗೂ ಕೆಲವು ಸಲ ಗರ್ಭನಾಶವನ್ನು ಹೇಳುವುದು. (ಪಾಪಗ್ರಹ ಲಗ್ನಕಾರಕವಿಲ್ಲದಿದ್ದರೆ ಮಾರಕವಾಗಿದ್ದರೆ).

4) ಪಂಚಮೇಶ ನವಮೇಶ ಸಪ್ತಮಸ್ಥಾನದಲ್ಲಿದ್ದರೆ ಅಥವಾ ಯುಗ್ಮ ರಾಶಿಯಲ್ಲಿದ್ದರೆ ಅವು ಚಂದ್ರ, ಶುಕ್ರಯುತ ದೃಷ್ಟರಾಗಿದ್ದರೆ ಕನ್ಯಾ ಬಾಹುಳ್ಯ ಹೇಳುವುದು.

5) ಗುರು, ಚಂದ್ರ, ಸೂರ್ಯ ಈಗ ಸ್ಫುಟ ಕೂಡಿಸಿ ಎಷ್ಟು ರಾಶಿಯಾಗುವುದೇ (12ರಲ್ಲಿ ಕಳೆದು) ಆ ಸಂಖ್ಯೆ ಸಮಾನ ಮಕ್ಕಳನ್ನು ಹೇಳುವುದು.

6) ಲಗ್ನೇಶ ಯಾವ ನವಾಂಶದಲ್ಲಿರುವನೋ ಆ ನವಾಂಶ ತುಲ್ಯಾ ಮಕ್ಕಳೆಂದು ಹೇಳುವುದು.

7) ಪಂಚಮೇಶ, ನವಮೇಶ, ಚತುರ್ಥೇಶ ಸ್ಫುಟ ಕೂಡಿಸಿ ರಾಶ್ಯಾದಿ ಆಗಿ ಅದರ ನವಾಂಶ ತುಲ್ಯ ಸಂತಾನ ಹೇಳುವುದು.

8) ಪಂಚಮೇಶನ ನವಾಂಶಧಿಪ ಸ್ವನವಾಂಶದಲ್ಲಿದ್ದರೆ ಜಾತಕನಿಗೆ ಒಬ್ಬನೇ ಮಗ.

ಈ ಅಂಶ ಪರಿಗಣಿಸುವಾಗ ಬಲಾಬಲ ನೋಡಿ ಸ್ವಬುದ್ಧಿಯಿಂದ ಸರಿಯಾಗ ಲೆಕ್ಕ ಮಾಡಿ ಹೇಳುವುದು. ಯಾವುದು ಸರಿಹೊಂದುತ್ತದೆಯೋ ಅದನ್ನು ಹೇಳುವುದು. ಜ್ಯೋತಿಷ್ಯರ ವಿವೇಚನ ಸಾಮರ್ಥ್ಯ ಅವರ ಜ್ಞಾನಾದಿಗಳ ಮೇಲೆ ಅವರ ಭವಿಷ್ಯ ನಿರ್ಧರಿತವಾಗುತ್ತದೆ. 'ಕೋ ವಕ್ತಾ ತಮೇಕಂ ವೇದಸಂ ವಿನಾ' ಎನ್ನುವುದನ್ನು ಮರೆಯಬಾರದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಪಂಚಮ ಭಾವ ಫಲಾಧ್ಯಾಯಃ ಸಮಾಪ್ತಃ

## ೧೮ನೇ ಅಧ್ಯಾಯ

# ಅಥ ಷಷ್ಠ (ರೋಗಾದಿ) ಭಾವ ಫಲಾಧ್ಯಾಯಃ

**ಪರಾಶರ ಉವಾಚ:**

ಅಥ ವಚ್ಮಿ ಫಲಂ ಷಷ್ಠ ಭಾವಗಂ ತೆ ಮುನೇಧುನಾ ।
ಯೇನ ಜ್ಞಾಸ್ಯಸಿ ಜಾತಸ್ಯ ದೇಹ ರೋಗ ವ್ರಣಾದಿಕಮ್ ॥೧॥

ಸ್ವಭೆಷಷ್ಠಾಧಿಪಃ ಪಾಪೋ ದೇಹೆ ವಾಪ್ಯಷ್ಟಮೆ ಸ್ಥಿತಃ ।
ತದಾ ಭವೇದ್ ವ್ರಣೋ ದೇಹೆ ಭಾವರಾಶಿಗತೆಂಗಕೆ ॥೨॥

ಏವಂ ಪಿತ್ರಾದಿ – ಭಾವೇಶಸ್ತತ್ತತ್ಕಾರಕ – ಸಂಯುತಾಃ ।
ವ್ರಣಾದಿಪಯುಶ್ಚಾಪಿ ಷಷ್ಠಾಷ್ಟಮ ಯುತಾ ಯದಿ ॥೩॥

ತೇಷಾಮಪಿ ವ್ರಣು ವಾಚ್ಯ – ಮಾದಿತ್ಯೇನ ಶಿರೋ ವ್ರಣಮ್ ।
ಇಂದುನಾ ಚ ಮುಖೆ ಕಂಠೆ ಭೌಮೇನ ಜ್ಞೇನ ನಾಭಿಷು ॥೪॥

ಗುರುಣಾನಾಸಿಕಾಯಾಂ ಚ ಭೃಗುಣಾ ನಯನೆ ಪದೆ ।
ಶಶಿನಾ ಸಹುಣಾ ಕುಕ್ಷೌ ಕೇತುನಾ ಚ ತಥಾ ಭವೇತ್ ॥೫॥

ಲಗ್ನಾಧಿಪಃ ಕುಜ ಕ್ಷೇತ್ರೆ ಬುಧ ಕ್ಷೇತ್ರೇಪಿ ವಾ ಸ್ಥಿತೆ ।
ಯತ್ರ – ಕುತ್ರ ಸ್ಥಿತೋ ಜ್ಞೇನ ವೀಕ್ಷಿತೋ ಮುಖರುಕ್ ಪ್ರದಃ ॥೬॥

ಹೇ ಮುನಿಯೇ ಈಗ ಆರನೇ ಭಾಗ, ರೀಪು ರೋಗ ಭಾವದ ಫಲ ಹೇಳುತ್ತೇನೆ. ಇದರಿಂದ ಜಾತಕನ ಶಾರೀರಿಕ ರೋಗಾದಿ ಜ್ಞಾನವಾಗುತ್ತದೆ. ಪಾಪಷಷ್ಠೇಶ ತನ್ನ ಮನೆ ಷಷ್ಠ ಸ್ಥಾನ ಲಗ್ನ ಅಷ್ಟಮ ಸ್ಥಾನದಲ್ಲಿದ್ದರೆ ಜಾತಕನ ಶರೀರದ ಷಷ್ಠ ಭಾವಾಶ್ರೀತ ಅದಂಗದಲ್ಲಿ ವ್ರಣಕಾರಕವಾಗುತ್ತದೆ. ಅದರಂತೆ ಪಿತ್ರ ಆದಿ ಭಾವೇಶರು ಷಷ್ಠನಿಂದ ಯುಕ್ತರಾದರೆ ಷಷ್ಠ ಭಾವ ಹಾಗೂ ಅಷ್ಟಮ ಗತರಾದರೆ ಪಿತ್ರಾದಿಗಳಿಗೆ ವ್ರಣ ಹೇಳುವುದು. ಷಷ್ಠೇಶ ರವಿ ಉಕ್ತ ಸ್ಥಾನದಲ್ಲಿದ್ದರೆ ಶಿರೋ ವ್ರಣ – ಚಂದ್ರನ ಜೊತೆಗಿದ್ದರೆ ಮುಖ ವ್ರಣ, ಮಂಗಳನಿದ್ದರೆ ಕಂಠ ವ್ರಣ, ಬುಧನಿದ್ದರೆ ನಾಭಿ ವ್ರಣ, ಶನಿಯಿದ್ದರೆ ಪಾದ ವ್ರಣ ಅಲ್ಲದೆ ರಾಹು, ಕೇತುಗಳಿದ್ದರೆ ಹೊಟ್ಟೆಯ ಮೇಲೆ ವ್ರಣ ಹೇಳುವುದು. ಲಗ್ನೇಶ ಕುಜ ಕ್ಷೇತ್ರದಲ್ಲಿ (ಮೇಷ, ವೃಶ್ಚಿಕ)

ಅಥವಾ ಬುಧ ಕ್ಷೇತ್ರ ಕನ್ಯಾ, ಮಿಥುನದಲ್ಲಿದ್ದು ಬುಧ ದೃಷ್ಟರಾದರೆ ಮುಖ ವ್ರಣವಾಗುತ್ತದೆ.

### ಕುಷ್ಠ ರೋಗ

ಲಗ್ನಾಧಿಪೌ ಕುಜ ಬುಧೌ ಚಂದ್ರೇಣ ಸಹಿತೌ ಯದಿ ।
ರಾಹುಣಾ ಶನಿನಾ ಸಾರ್ಧ ಕುಷ್ಠಂ ತತ್ರ ವಿನಿರ್ದಿಶೇತ್ ॥೭॥

ಲಗ್ನಾಧಿಪಂ ವಿನಾ ಲಗ್ನೆ ಸ್ಥಿತಶ್ಚೆತ್ತಮಸಾ ಶಶಿ ।
ಶ್ವೇತ ಕುಷ್ಠ ತದಾ ಕೃಷ್ಣಕುಷ್ಠಚ ಶನಿನಾ ಸಹ ॥೮॥

ಕುಜೇನ ರಕ್ತ ಕುಷ್ಠ ಸ್ಯಾತ್ತತ್ತ ದೇವಂ ವಿಚಾರಯೇತ್ ।

ಲಗ್ನೇಶ ಬುಧ, ಮಂಗಳ, ಚಂದ್ರ, ರಾಹು, ಶನಿಯ ಜೊತೆಗಿದ್ದರೆ ಕುಷ್ಠರೋಗ ಹೇಳುವುದು. ಲಗ್ನದಲ್ಲಿ ರಾಹುವಿನ ಜೊತೆಗೆ ಚಂದ್ರನಿದ್ದರೆ ಹಾಗೂ ಲಗ್ನೇಶ ಅಲ್ಲಿರದಿದ್ದರೆ ಶ್ವೇತ ಕುಷ್ಠ ಹೇಳುವುದು. ಶನಿ ಇದ್ದರೆ ಕೃಷ್ಣ ಕುಷ್ಠ, ಮಂಗಳನಿದ್ದರೆ ರಕ್ತ ಕುಷ್ಠ ಹೇಳುವುದು.

### ಗಂಡಾದಿ ರೋಗ ಯೋಗ

ಲಗ್ನೇ ಷಷ್ಠಾಷ್ಟ ಮಾಧೀಶೌ ರವೀಣಾ ಚೇತ್ ಸಮನ್ವಿತೌ ॥೯॥

ಜ್ವರ ಗಂಡಃ ಕುಜೆ ಗ್ರಂಥಿಃ ಶಸ್ತ್ರವ್ರಣ ಮಥಾಪಿ ವಾ ।
ಬುಧೇನ ಪಿತ್ತಂ ಗುರುಣಾ ರೋಗ ಭಾವಂ ವಿನಿರ್ದಿಶೇತ್ ॥೧೦॥

ಸ್ತ್ರೀಭಿಃ ಶುಕ್ರೇಣ ಶನಿನಾ ವಾಯುನಾ ಸಂಯುತೋ ಯದಿ ।
ಗಂಡಶ್ಚಾಂಡಾಲತೋ ನಾಚ್ ಕೇತುನಾ ತು ಗ್ರಹೆ ಭಯಮ್ ॥೧೧॥

ಚಂದ್ರೇಣ ಗಂಡಃ ಸಲಿತೌ ಕಫಶ್ಲೆಷ್ಮಾದಿನಾ ಭವೇತ್ ।
ಏವಂ ಪಿತ್ರಾದಿ– ಭಾವಾಂತಂ ತತ್ತತ್ಕಾರಕ ಯೋಗತಃ ॥೧೨॥

ಗಂಡಸ್ತೇಷಾಂ ಭವೇದೇವ ಮೂಹ್ಯಮೇತನ್ಮನೀಷಿಭಿಃ ॥

ರವಿಯುಕ್ತ ಷಷ್ಠ, ಅಷ್ಟಮೇಶ ಲಗ್ನದಲ್ಲಿದ್ದುದಾದರೆ ಜ್ವರ ಗಂಡ, ಮಂಗಳನ ಜೊತೆಗಿದ್ದರೆ – ಮೈಮೇಲೆ ಗಂಟುಗಳು ಅಥವಾ ಶಸ್ತ್ರ ವ್ರಣ, ಬುಧ ಜೊತೆಗಿದ್ದರೆ ಪೈತ್ತಿಕ ರೋಗಾದಿಗಳು – ಗುರುವಿದ್ದರೆ ರೋಗಾಭಾವ, ಶುಕ್ರನಿದ್ದರೆ – ಸ್ತ್ರೀ ಸಂಸರ್ಗ ರೋಗ, ಶನಿಯುಕ್ತರಾದರೆ ವಾಯು ಪ್ರಕೋಪ, ರಾಹುವಿನ ಜೊತೆಗಿದ್ದರೆ ನಾಭಿಯಲ್ಲಿ ವ್ರಣ, ಕೇತುವಿನ ಜೊತೆಗಿದ್ದರೆ ಗ್ರಹಭೀತಿ, ಒಂದು ವೇಳೆ ಚಂದ್ರನ

ಜೊತೆಗೆಯಿದ್ದಗೆ ಜಲಜ ಗಂಡ, ಕಫಶ್ಲಿಷ್ಮ ಭೀತಿ ಅಥವಾ ಕಫ ಪ್ರಕೋಪ ತೋರುತ್ತದೆ. ಇದೇ ಪ್ರಕಾರ ವತ್ರಾದಿ (ದಶಮ) ಭಾವದಲ್ಲಿ ವಶವರ್ತಿ ಗ್ರಹಾದಿಗಳಿಂದ ಪಿತ್ರಾದಿಗಳ ರೋಗ ವಿಚಾರಣೀಯವೆ.

'ರೋಗಾಪ್ತಿ ಸಮಯ'

ರೋಗಸ್ಥಾನಗತೆ ಪಾಪೆ ತದೀಶೆ ಪಾಪ ಸಂಯುತೆ ॥೧೩॥

ರಾಹೂಣಾಂ ಸಂಯುತೆ ಮಂದೆ ಸರ್ವದಾ ರೋಗ ಸಂಯುತಃ ।
ರೋಗಸ್ಥಾನಗತೆ ಭೌಮೆ ತದೀಶೆ ರಂಧ್ರ ಸಂಯುತೆ ॥೧೪॥

ಷಷ್ಠೆ ವಾದ್ವಾದಶೆ ವರ್ಷೆ ಜ್ವರರೋಗಿ ಭವೆನ್ನರಃ ।
ಷಷ್ಠಸ್ಥಾನಗತೆ ಜೀವೇ ತದ್‌ಗೃಹೆ ಚಂದ್ರಸಂಯುತೆ ॥೧೫॥

ದ್ವಾವಂಶೈಕೋನ ವಿಂಶೆಬ್ಧೆ ಕುಷ್ಠರೋಗಂ ವಿನಿರ್ದಿಶೇತ್ ।
ರೋಗಸ್ಥಾನಂ ಗತೆ ರಾಹೌ ಕೇಂದ್ರೆ ಮಾಂದಿ ಸಮನ್ವಿತೆ ॥೧೬॥

ಲಗ್ನೇಶೆ ನಾಶರಾಶಿಸ್ಥೆ ಷಡ್‌ವಿಂಶೆ ಕ್ಷಯರೋಗಿತಾ ।
ವ್ಯಯೇಶೆ ರೋಗ ರಾಶಿಸ್ಥೆ ತದೀಶೆ ವ್ಯಯ ರಾಶಿಗತೆ ॥೧೭॥

ಊನತ್ರಿಂಶೇಥವಾ ತ್ರಿಂಶೆ ವರ್ಷೆ ಗುಲ್ಮರುಜಂ ದಿಶೇತ್ ।
ರಿಪುಸ್ಥಾನಗತೆ ಚಂದ್ರೆ ಶನಿನಾ ಸಂಯುತೆ ಸತಿ ॥೧೮॥

ಪಂಚ ಪಂಚಶದಬ್ದೆಷು ರಕ್ತಕುಷ್ಠ ವಿನಿರ್ದಿಶೇತ್ ।
ಲಗ್ನೇಶ್ ಲಗ್ನರಾಶಿಸ್ಥೆ ಮಂದೆ ಶತ್ರು ಸಮನ್ವಿತೆ ॥೧೯॥

ಏಕೋನ ಷಷ್ಠಿ ವರ್ಷೆತು ವಾತರೋಗಾದಿತೋ ಭವೇತ್ ।
ರಂಧ್ರೇಶೆ ರಿಪುರಾಶಿಸ್ಥೆ ವ್ಯಯೇಶೆ ಲಗ್ನಸಂಸ್ಥಿತೆ ॥೨೦॥

ಚಂದ್ರೆ ಷಷ್ಠೇಶ ಸಂಯುಕ್ತೆ ವಸು ವರ್ಷೆ ಮೃಗಾದ್ಧಯವ್ ।
ಷಷ್ಠಾಷ್ಟಮ ಗತೊ ರಾಹುಸ್ತಸ್ಮಾದಷ್ಟಮಗೆ ಶನೌ ॥೨೧॥

ಪ್ರಥಮೆ ವಾ ದ್ವಿತೀಯೇಬ್ಧೆ ಜಾತಕಸ್ಯ ದ್ವಿಜೋತ್ತಮ ।
ಭವೇದಗ್ನಿಭಯಂ ತಸ್ಯ ತ್ರಿವರ್ಷೆ ಪಕ್ಷಿದೋಷಭಾಕ್ ॥೨೨॥

ಷಷ್ಠಾಷ್ಟಮಗತೆ ಸೂರ್ಯೇ ತದ್‌ವ್ಯಯೋ ಚಂದ್ರ ಸಂಯುತೆ ।
ಪಂಚಮೇ ನವಮೇಬ್ಧೆತು ಜಲಭೀತಿಂ ವಿನಿರ್ದಿಶೇತ್ ॥೨೩॥

ಅಷ್ಟಮೇ ಮಂದ ಸಂಯುಕ್ತೇ ರಂಧ್ರಾದ್ವಾ ದ್ವಾದಶೇ ಕುಜಃ ।
ದಶಭೇಬ್ದೇಥವಾ ತ್ರಿಂಶೇ ಸ್ಫೋಟಕಾದಿ ವಿನಿರ್ದಿಶೇತ್ ॥೨೪॥

ರಂಧ್ರೇಶೇ ರಾಹು ಸಂಯುಕ್ತೇ ತದಂಶೇ ರಂಧ್ರಕೋಣಗೇ ।
ದ್ವಾವಿಂಶೇಷ್ವಾದಶೇ ವರ್ಷೇ ಗ್ರಂಥಿ–ಮೋಹಾದಿ ಪಿಡನಮ್ ॥೨೫॥

ಲಾಭೇಶೇ ರಿಪುಭಾವಸ್ಥೇ ತದೀಶೇ ಲಾಭ ರಾಶಿಗೇ ।
ಏಕತ್ರಿಂಶೇ ಭವೇದಬ್ದೇ ಶತ್ರು ಮೂಲಾದ್ಧಿನ ವ್ಯಯಃ ॥೨೬॥

ಸುತೇಶೇ ರಿಪುಭಾವಸ್ಥೇ ಷಷ್ಠೇಶೇ ಗುರು ಸಂಯುತೇ ।
ವ್ಯಯೇಶೇ ಲಗ್ನಭಾವಸ್ಥೇ ತಸ್ಯ ಪುತ್ರೋ ರಿಪುರ್ಭವೇತ್ ॥೨೭॥

ಲಗ್ನೇಶೇ ಷಷ್ಠರಾಶಿಸ್ಥೇ ಷಷ್ಠೇಶೇಪಿ ಚ ಷಷ್ಠಗೇ ।
ದಶಮ್ಯೈಕೋನ ವಿಂಶೇಬ್ದೇ ಶುನಕಾದ್ ಭೀತಿರುಚ್ಯತೇ ॥೨೮॥

ಷಷ್ಠಸ್ಥಾನಗತ ಪಾಪಗ್ರಹ ಷಷ್ಠೇಶ ಪಾಪಯುಕ್ತನಾಗಿ ಹಾಗೂ ಶನಿ, ರಾಹು ಸಂಯೋಗವಿದ್ದರೆ ಜಾತಕ ರೋಗದ ತವರಾಗಿರುತ್ತಾನೆ. ಷಷ್ಠ ಸ್ಥಾನದಲ್ಲಿ ಮಂಗಳ ಷಷ್ಠೇಶ ಅಷ್ಟಮ ಸ್ಥಾನದಲ್ಲಿದ್ದರೆ 6 ಇಲ್ಲವೇ 12ನೇ ವರ್ಷದಲ್ಲಿ ಮನುಷ್ಯ ಜ್ವರ ರೋಗಗ್ರಸ್ತನಾಗುತ್ತಾನೆ. ಗುರು ಷಷ್ಠಸ್ಥಾನಗತನಾಗಿ ಗುಳಿಕ ಕೇಂದ್ರಗತನಾದರೆ ಲಗ್ನೇಶ ಅಷ್ಟಮ ಸ್ಥಾನದಲ್ಲಿದ್ದರೆ 26ನೇ ವರ್ಷದಲ್ಲಿ ಕ್ಷಯರೋಗ ಬರುತ್ತದೆ. ವ್ಯಯೇಶ ಷಷ್ಠಸ್ಥಾನದಲ್ಲಿ ಹಾಗೂ ಷಷ್ಠೇಶ ವ್ಯಯಸ್ಥಾನದಲ್ಲಿದ್ದರೆ 29 ಅಥವಾ 30 ವರ್ಷದಲ್ಲಿ ಮನುಷ್ಯನಿಗೆ ಗುಲ್ಮಿರೋಗವಾಗುತ್ತದೆ. ಅದೇ ಷಷ್ಠಸ್ಥಾನದಲ್ಲಿ ಶನಿಯುಕ್ತ ಚಂದ್ರನಿದ್ದರೆ 55ನೇ ವರ್ಷದಲ್ಲಿ ರಕ್ತ ಕುಷ್ಠವಾಗುತ್ತದೆ. ಲಗ್ನೇಶ ಲಗ್ನದಲ್ಲಿ ಶನಿ ಷಷ್ಠ ಸ್ಥಾನದಲ್ಲಿದ್ದರೆ, 59ನೇ ವರ್ಷದಲ್ಲಿ ವಾತರೋಗ ಪೀಡೆ ಪ್ರಾರಂಭವಾಗುತ್ತದೆ. ಅಷ್ಟಮೇಶ ಷಷ್ಠಸ್ಥಾನದಲ್ಲಿ ಹಾಗೂ ವ್ಯಯೇಶ ಲಗ್ನದಲ್ಲಿ ಹಾಗೂ ಷಷ್ಠೇಶ ಹಾಗೂ ಚಂದ್ರರ ಸಂಯೋಗವಾದರೆ ಅಷ್ಟ ವರ್ಷದಲ್ಲಿ ಚಿಗರೆ ಯಿಂದ ಭಯ, ಷಷ್ಠ, ಅಷ್ಟಮದಲ್ಲಿ ರಾಹುಯಿದ್ದರೆ ಹಾಗೂ ಅವರಿಂದ ಅಷ್ಟಮಸ್ಥ ಶನಿಯಿದ್ದರೆ ಪ್ರಥಮ, ದ್ವಿತೀಯ ವರ್ಷದಲ್ಲಿ ಅಗ್ನಿಭಯ ಹಾಗೂ 3ನೇ ವರ್ಷದಲ್ಲಿ ಪಕ್ಷಿಯಿಂದ ಭಯ, ಆರು ಇಲ್ಲವೇ ಎಂಟನೆಯದರಲ್ಲಿ ಸೂರ್ಯನಿದ್ದು ಅವನಿಂದ ಹನ್ನೆರಡರಲ್ಲಿ ಚಂದ್ರನಿದ್ದರೆ 5 ಅಥವಾ 9ನೇ ವರ್ಷದಲ್ಲಿ ಜಲಭಯವಿರುತ್ತದೆ. ಅಷ್ಟಮಸ್ಥಾನ ಶನಿಯುಕ್ತ ಹಾಗೂ ಸಪ್ತಮದಲ್ಲಿ (ಲಗ್ನದಿಂದ) ಮಂಗಳನಿದ್ದರೆ ದಶಾ ಕಾಲದಲ್ಲಿ ಇಲ್ಲವೇ, 30ನೇ ವರ್ಷದಲ್ಲಿ ಆಗ ಶಾರೀರಿಕ: ಪ್ರಕೋಪ ರಾಹುಯುಕ್ತ ಅಷ್ಟಮೇಶ ತನ್ನ ನವಾಂಶದಲ್ಲಿ ಅಷ್ಟಮದಿಂದ ನವಮ ಅಥವಾ

ಪಂಚಮದಲ್ಲಿದ್ದರೆ 22 ಅಥವಾ 18ನೇ ವರ್ಷದಲ್ಲಿ ಗ್ರಂಥಿ, ಪ್ರಮೇಹ ಆದಿ ರೋಗ ಪೀಡೆ ಆರಂಭವಾಗುತ್ತದೆ. ಲಗ್ನೇಶ ಷಷ್ಠ ಭಾವದಲ್ಲಿ ಹಾಗೂ ಷಷ್ಠೇಶ ಲಾಭಭಾವ ಗತನಾದರೆ 31ನೇ ವರ್ಷದಲ್ಲಿ ಶತ್ರು ಮೂಲಕ ಧನನಾಶವಾಗುತ್ತದೆ. ಪಂಚಮೇಶ ಷಷ್ಠಭಾವದಲ್ಲಿ ಷಷ್ಠೇಶ ಹಾಗೂ ಗುರು ಸಂಯೋಗವಾಗಿ ಹಾಗೂ ವ್ಯಯೇಶ ಲಗ್ನಗತರಾಗಿದ್ದರೆ ಪುತ್ರನೇ ಶತ್ರುವಾಗುವನು. ಲಗ್ನೇಶ, ಷಷ್ಠೇಶ ಷಷ್ಠರಾಶಿಗತ ರಾಗಿದ್ದರೆ 10 ಅಥವಾ 19ನೇ ವರ್ಷದಲ್ಲಿ ನಾಯಿ ಭಯವಿರುತ್ತದೆ.

ವಿಮರ್ಶೆ – ಈ ಯಾವುದೇ ಭಾಗದಲ್ಲಿ ಸಂಯೋಗ ಯುತ ಎಂದಲ್ಲ ಯುತಿಯೆಂದೇ ಗ್ರಹಿಸಿರಿ – ಆಯಾ ಗ್ರಹಗಳ ಅಂಶಾತ್ಮಕಯುತ ಬೇರೆ ಬೇರೆಯಾಗಿದ್ದು ಅದನ್ನೇ ಅನುಸರಿಸುವುದು ಆಗ ಮಾತ್ರ ಪೂರ್ಣಫಲ. ಕೇವಲ ರಾಶಿಯಲ್ಲಿದ್ದಾಗ ಉಳಿದ ಅಂಶ ವಿಚಾರಿಸಬೇಕಾಗುತ್ತದೆ.

ಅದಲ್ಲದೇ ಇಲ್ಲಿ ಷಷ್ಠಭಾವದಿಂದ ಕೇವಲ ರೋಗವಿಚಾರ ಹೇಳಿದ್ದು. ಈ ಕೆಳಗಿನ ಅಂಶಗಳು ವಿಚಾರಣೀಯವೇ–

ಇದಕ್ಕೆ ಸಂಸರ್ಗ ಸ್ಥಾನವೂ ಎನ್ನುತ್ತಿದ್ದು ಸಂಗತ. ಅದರ ಪರಿಣಾಮ (ಬಾಲ್ಯದಲ್ಲಿ ಅತಿ ಅವಶ್ಯ) ವ್ಯವಸಾಯ–ಲಾಭ–ಹಾನಿ, ಶತ್ರುತ್ವ, ಸ್ವಜನ ವಿರೋಧ, ಮಾನ ಮರ್ಯಾದೆ – ಟೊಂಕ ವ್ರಣ ರೋಗ, ತಾಯಿಯ ತಂಗಿ (ಮಾಂಸಿ) ತಂದೆ ಪುಣ್ಯ, ಪಶುಗಳ ಕಳವು, ನೌಕರ ಚಾಕರ – ಓಡಿಹೋದವರ ವಿಚಾರ, ಪ್ರಥಮ ಪುತ್ರನ ಸಂತಾನ, ವಿಷ ಪ್ರಯೋಗ – ಜೀವನದಲ್ಲಿ ಪರಿವರ್ತನೆ, ಪಶುಭಯ, ಪ್ರೇಯಸಿಯಿಂದ ಧನ ಲಾಭ, ಶರೀರ ವ್ಯಂಗ, ಸ್ಫೋಟಕ ರೋಗ, ಬಂಧನ, ಕನ್ಯಾಳ ಭಾಗ್ಯ, ಕ್ಷಯ ಉಷ್ಣತಾ ದುಃಖ, ಭಯ, ವ್ಯಸನ ಕೆಟ್ಟ ಕೆಲಸ ವಿಶೇಷ – ಸಾರ್ವಜನಿಕ ಸ್ವಾಸ್ಥ್ಯ ಅಧಿಕಾರ, ಡಾಕ್ಟರ್, ಸ್ತ್ರೀ ಭೋಗ, ರೈಲ್ವೇ, ತಂಬಾಕು ವ್ಯಾಪಾರ, ಅಫೀಮು ಸಿಗರೇಟು ವ್ಯಸನ – ನೌಕರಿ ನೋಡುವುದು.

**ಅಥ ಬೃಹತ್ ಪರಾಶರ ಹೋರಾಶಾಸ್ತ್ರೇ ಷಷ್ಠಭಾವ ಫಲಾಧ್ಯಾಯಃ**



## ೧೯ನೇ ಅಧ್ಯಾಯ

# ಅಥ ಸಪ್ತಮಭಾವ ಫಲಾಧ್ಯಾಯಃ

**ಪರಾಶರ ಉವಾಚ:**

**ಅಥ ಮೈತ್ರೇಯ ತೇ ಜಾಯಾ ಭಾವಜಂ ಫಲಮುಚ್ಯತೆ ।**
**ಸ್ವರ್ಕ್ಷೆ ಸ್ವಚ್ಚೇತು ಜಾಯೇಶೆ ಪೂರ್ಣ ಜಾಯಾ–ಸುಖಂ ವದೇತ್ ॥೧॥**

**ಕಲತ್ರಪೋ ವಿನಾ ಸ್ವರ್ಕ್ಷ ಸ್ಥಿತಃ ಷಷ್ಠೇಷ್ಟಮೇ ವ್ಯಯೇ ।**
**ರೋಗಿಣಂ ಕುರುತೇ ನಾರಿ ತಥಾ ತುಂಗಾದಿಕಂ ವಿನಾ ॥೨॥**

**ಸಪ್ತಮೆ ತು ಸ್ಥಿತೆ ಶುಕ್ರೇತೀವ ಕಾಮಿ ಭವೇನ್ನರಃ ।**
**ಯತ್ರ ಕುತ್ರ ಸ್ಥಿತೆ ಪಾಪಯುತೆ ಸ್ತ್ರೀ ಮರಣು ಭವೇತ್ ॥೩॥**

ಪರಾಶರರು ಹೇಳಿದರು – ಹೇ ಮೈತ್ರೇಯ ಈ ಜಾಯಾ (ಹೆಂಡತಿ) ಭಾವದ ಫಲ ಹೇಳುತ್ತೇನೆ. ಸಪ್ತಮೇಶ ಸ್ವಭವನದಲ್ಲಿ ಸ್ವೋಚ್ಚದಲ್ಲಿ ಇದ್ದರೆ ಪೂರ್ಣ ಪತ್ನಿ ಸುಖ – ಅದೇ ಜಾಯೇಶ ಸ್ವೋಚ್ಚ ಸ್ವಗ್ರಹ ಸ್ವವಾಂಶ ಬಿಟ್ಟು (ವರ್ಗೋತ್ತಮ) ಬಿಟ್ಟು ಅನ್ಯತ್ರವಿದ್ದರೆ – ಅಂದರೆ ಆರು, ಎಂಟು ಹಾಗೂ ಹನ್ನೆರಡರಲ್ಲಿದ್ದರೆ – ಅವನ ಹೆಂಡತಿ ರುಗ್ಣರಾಗಿರುತ್ತಾಳೆ. ಸಪ್ತಮದಲ್ಲಿ ಶುಕ್ರನಿದ್ದರೆ (ವಿಶೇಷ– ಚಂದ್ರ+ಶುಕ್ರ–ಚಂದ್ರದೃಷ್ಟಿ) ಮನುಷ್ಯ ಅತ್ಯಧಿಕ ಕಾಮಿಯಾಗಿರುತ್ತಾನೆ. ಎಲ್ಲ ಶುಕ್ರ ಪಾಪಯುಕ್ತನಾಗಿದ್ದರೆ ಸ್ತ್ರೀ ಮರಣ, ಸಬಲ ಶುಕ್ರನಾಗಿದ್ದರೆ ಸ್ತ್ರೀ ಮಾರಕವೆಂದಿದ್ದಾರೆ.

'ಶುಕ್ರಃ ಬಲಾಂತರಗತಃ ಸಬಲಃ ಸಿತ । ದ್ವಾ ಪಾಪ ವ್ಯಯಸ್ತ ಮೃತಿಗಾ ರಮಣಿ ಹರಾಃ ಸ್ಯು'

ಎಂದಿದ್ದಾರೆ.

ಈ ವಿಚಾರ – ವಿಚಾರಣೀಯ. ಪುರುಷ ಕುಂಡಲಿಯಲ್ಲಿ ಶುಕ್ರ ಸ್ತ್ರೀಕಾರಕ ಗ್ರಹ, ಸ್ತ್ರೀ ಕುಂಡಲಿಯಲ್ಲಿ ರವಿಕಾರಕ ಗ್ರಹವಾದ್ದರಿಂದ ಮಾರಕ, ಹಾನಿಕಾರಕ ವೆಂಬುದು ಪಾಪಯುಕ್ತನಾದಾಗ ಪಾಪಕ್ರಾಂತ – ಪಾಪಗ್ರಹ ಕರ್ತರಿ ಪಾಪಸ್ಥಾನ – ಇತ್ಯಾದಿ ವಿಚಾರ ಮಾಡಿ ಹೇಳುವುದು.

ಒಂದೆಡೆ ಶುಕ್ರ ಜಾಯಾಕಾರಕ, ಮತ್ತೊಂದೆಡೆ ಮಾರಕನೆನ್ನುವುದನ್ನು ವಿಮರ್ಶಿಸುವುದು ಕಾಮುಕತೆ ಸಹಜ.

ಸೌಮ್ಯೈರ್ಯುಕ್ತೋಥವಾ ದೃಷ್ಟಃ ಕಲತ್ರೇಶೋ ಬಲಾನ್ವಿತಃ ।
ಕುರುತೇ ಜಾತಕಂ ಸರ್ವ ಸುಖ ಸಂಪತ್ತಿ ಶಾಲಿನಮ್ ॥೪॥

ಜಾಯೇಶೇಸ್ತಂಗತೆ ನೀಚರಿಪ್ಪುಭಸ್ಥೇ ತಿದುರ್ಬಲೆ ।
ತದೀಯಾ ಸರುಜಾ ಜಾಯಾ ಬಹುಭಾರ್ಯಃ ಸ ಜಾಯತೆ ॥೫॥

ಕವೇಃ ಶನೇರ್ವಾ ರಾಶಿಸ್ಥೆ ಸೌಮ್ಯದೃಷ್ಟೆ ಕಲತ್ರಪೆ ।
ಸ್ವತುಂಗ ಭೆ ತದಾ ಜಾತೋ ಬಹುದಾರಃ ಪ್ರಜಾಯತೆ ॥೬॥

ಪ್ರಬಲನಾದ ಜಾಯೇಶ ಶುಭಗ್ರಹ ಯುಕ್ತ ಅಥವಾ ದೃಷ್ಟನಾಗಿದ್ದರೆ – ಜಾತಕ ಸರ್ವ ಸಂಪತ್ತುಶಾಲಿಯಾಗುತ್ತಾನೆ. ಜಾಯೇಶ ಅಸ್ತಂಗತನಾದರೆ ನೀಚ ಅಥ ಶತ್ರು ರಾಶಿಗತನಾಗಿದ್ದರೆ ಅತಿ ದುರ್ಬಲನಾಗಿದ್ದರೆ, ಆ ಜಾತಕನ ಹೆಂಡತಿಗೆ ರುಗ್ಣವಾಗುತ್ತದೆ. ಅಲ್ಲದೆ ಅವನಿಗೆ ಅನೇಕ ಸ್ತ್ರೀ ಭೋಗ ಯೋಗವಿರುತ್ತದೆ. ಜಾಯೇಶ ಶುಕ್ರ ಅಥವಾ ಶನಿ ರಾಶಿಯಲ್ಲಿದ್ದ (ವೃಷಭ, ತುಲಾ, ಮಕರ, ಕುಂಭ) ಶುಭಗ್ರಹದಿಂದ ದೃಷ್ಟನಾಗಿದ್ದರೆ ಸ್ವೋಚ್ಚಸ್ಥ ಜಾಯೇಶ ಶುಭ ದೃಷ್ಟನಾಗಿದ್ದರೆ ನಿಶ್ಚಯ ಅನೇಕ ಲಲನಾ ಸುಖ ಭೋಗ ಹೇಳುವುದು.

ವಂಧ್ಯಾಸಂಗೋ ಮದೆ ಭಾನೌ ಚಂದ್ರೆ ರಾಶಿ ಸಮಾಃ ಸ್ತ್ರಿಯಃ ।
ಕುಜೆ ರಜಸ್ವಲಾಸಂಗೋ ವಂಧ್ಯಾ ಸಂಗೋಽಶ್ಚ ಕೀರ್ತಿತಃ ॥೭॥

ಬುಧೆ ವೇಶ್ಯಾ ಚ ಹೀನಾ ಚ ವಣಿಕ್ ಸ್ತ್ರೀ ವಾ ಪ್ರಕೀರ್ತಿತಾಂ ।
ಗುರೌ ಬ್ರಾಹ್ಮಣಭಾರ್ಯಾ ಸ್ಯಾದ್ ಗರ್ಭಿಣೀ ಸಂಗಃ ಏವಚ ॥೮॥

ಹೀನಾ ಚ ಪುಷ್ಪಿಣೀ ವಾಚ್ಯಾ ಮಂದ ರಾಹು ಫಣೀಶ್ವರೈಃ ।
ಕುಜೆಸ್ತೆಸುಸ್ತನಿ ಮಂದೆ ದುರ್ಬಲಾ ವ್ಯಾಧಿ ಸಂಯುತಾ ॥೯॥

ಕಠಿನೋರ್ಧ್ವಕುಚಾಚಾರ್ಯೇ ಸಿತೆ ಸ್ಥೂಲೋತ್ತಸ್ತನೀ ।
ಪಾಪೆ ದ್ವಾದಶ–ಕಾಮಸ್ಥೆ ಕ್ಷೀಣ ಚಂದ್ರಸ್ತು ಪಂಚಮೇ ॥೧೦॥

ಜಾತಸ್ಯ ಭಾರ್ಯಾ ವೇಶ್ಯಾಃ ಸ್ಯಾದಿತಿ ಜಾತಿ ವಿರೋಧಕೃತ್ ।
ಜಾಮಿತ್ರೆ ಮಂದಭೌಮೆ ತು ತದೀಶೆ ಮಂದಭೂಮಿಜೆ ॥೧೧॥

ವೇಶ್ಯಾ ವಾ ಜಾರಿಣೀ ವಾಪಿ ತಸ್ಯ ಭಾರ್ಯಾನ ಸಂಶಯಃ ।
ಭೌಮಾಂಶಕ ಗತೆ ಶುಕ್ರೇ ಭೌಮ ಕ್ಷೇತ್ರ–ಗತೇಥವಾ ॥೧೨॥

ಭೌಮಯುಕ್ತೇಥವಾ ದೃಷ್ಟೇ ಭಗಚುಂಬನ ಭಾಗ್ ಭವೇತ್ ।
ಮಂದಾಂಶಗತೆ ಶುಕ್ರೇ ಮಂದಕ್ಷೇತ್ರ – ಗತೇಪಿ ಚ ॥೧೩॥

ಮಂದಯುಕ್ತೆ ಚ ದೃಷ್ಟೆ ಚ ಶಿಶ್ನ – ಚುಂಬನಸತ್ಪರಃ ।
ದಾರೆಶೆ ಸ್ವೋಚ್ಚ ರಾಶಿಸ್ಥೆ ದ್ಯೂನೆ ಶುಭ ಸಮನ್ವಿತೇ ॥೧೪॥

ಲಗ್ನೇಶೆ ಬಲ ಸಂಯುಕ್ತೆ ಕಲತ್ರ ಸ್ಥಾನಗೆ ಸತಿ ।
ಪುತ್ರ ಪೌತ್ರಾದಿ ಸಂಯುಕ್ತಾ ಗುಣಾಢ್ಯಾ ತಸ್ಯಗೇಹಿನೀ ॥೧೫॥

ಜಾಯೇಶೆ ರಿಪುನೀಚಸ್ಥೆ ಮೂಢೆ ವಾ ಪಾಪ ವೀಕ್ಷಿತೆ ।
ಪಾಪೆಕ್ಷಿತಯುತೆ ವಾಸ್ತೆ ಜಾಯಾಹಾನಿ ವಿನಿರ್ದಿಶೇತ್ ॥೧೬॥

ಷಷ್ಠೇಷ್ಟಮೆ ವ್ಯಯೋ ವಾಪಿ ಮದೇಶೇ ದುರ್ಬಲೋ ಯದಿ ।
ನೀಚ ರಾಶಿ ಗತಃ ಕಿಂವಾ ದಾರಾನಾಶಂ ವಿನಿರ್ದಿಶೇತ್ ॥೧೭॥

ಕಲತ್ರಸ್ಥಾನಗೆ ಚಂದ್ರೆ ತದೀಶೆ ವ್ಯಯ ರಾಶಿಗೆ ।
ಕಾರಕೋ ಬಲಹೀನಶ್ಚ ದಾರಾಸೌಖ್ಯಂ ನ ವಿದ್ಯತೆ ॥೧೮॥

ಸಪ್ತಮದಲ್ಲಿ ಸೂರ್ಯನಿದ್ದರೆ ಸ್ತ್ರೀ ವಂಧ್ಯಾಳಾಗುತ್ತಾಳೆ. ಚಂದ್ರನಿದ್ದರೆ ರಾಶಿ ಸ್ವಭಾವದಂತೆ ಸ್ವಭಾವಾನುಕೂಲ ಸ್ತ್ರೀಯಾಗಿರುತ್ತಾಳೆ. ಮಂಗಳ ಸಪ್ತಮದಲ್ಲಿದ್ದರೆ ಜಾತಕನಿಗೆ ವಂಧ್ಯಾ (ಬಂಜೆ) ಹಾಗೂ ರಜಸ್ವಲೆ ಸ್ತ್ರೀಯೊಂದಿಗೆ ಸಂಗವಾಗುತ್ತದೆ. ಬುಧ ಸಪ್ತಮದಲ್ಲಿದ್ದರೆ ವೇಶ್ಯಾ ನೀಚ ಜಾತಿ ವಣಿಕ್ ಜಾತಿ ಸ್ತ್ರೀಸಂಗವಾಗುತ್ತದೆ. ಗುರು ಸಪ್ತಮದಲ್ಲಿದ್ದರೆ ಬ್ರಾಹ್ಮಣ ಹಾಗೂ ಗರ್ಭಿಣಿ ಸ್ತ್ರೀ ಸಂಗವಾಗುತ್ತದೆ. ಶನಿ, ರಾಹು, ಕೇತು ಈ ಗ್ರಹಗಳಲ್ಲಿ ಯಾವುದೇ ಸ್ತ್ರೀ ಸಂಪರ್ಕವಾಗುತ್ತದೆ. ಮಂಗಳ ಸಪ್ತಮದಲ್ಲಿದ್ದರೆ ಸುಂದರ ಸ್ತನದ ಶನಿಯಿದ್ದರೆ ಗುಜ್ಜಾನೆ ಮರಿಯಂತಹ, ರುಗ್ಣ – ಗುರುಯಿದ್ದರೆ ಕಠೋರ ಹಾಗೂ ಉನ್ನತ ಸ್ತನದವಳು. ಶುಕ್ರನಿದ್ದರೆ ಉನ್ನತ ಹಾಗೂ ಸ್ಥೂಲಸ್ತನದವಳಾಗಿರುತ್ತಾಳೆ.

ಯಾವನ ಜಾತಕದಲ್ಲಿ ಹನ್ನೆರಡನೇ ಹಾಗೂ ಏಳನೇ ಸ್ಥಾನದಲ್ಲಿ ಪಾಪಗ್ರಹ ಗಳು ಹಾಗೂ ಕ್ಷೀಣ ಚಂದ್ರ ಪಂಚಮದಲ್ಲಿದ್ದರೆ ಸ್ತ್ರೀ ವಸ್ಯನಾಗಿ ಸ್ವಜಾತಿ ವಿರೋಧಿಯಾಗಿರುತ್ತಾನೆ. ಸಪ್ತಮದಲ್ಲಿ ಶನಿ, ಮಂಗಳರಿದ್ದರೆ ಹಾಗೂ ಸಪ್ತಮೇಶ ರಿದ್ದರೆ ನಿಸ್ಸಂದೇಹವಾಗಿ ಸ್ತ್ರೀ ವೇಶ್ಯೆಯಾಗಿರುತ್ತಾಳೆ (ಜಾತಕನ ಸ್ತ್ರೀ). ಶುಕ್ರ, ಮಂಗಳ ನವಾಂಶನಾಗಿದ್ದರೆ ಹಾಗೂ ಮಂಗಳ ಸಂಯೋಗವಾದರೆ – ಅವಳ ಭಗ

ಚುಂಬಿಸುವ ಆಸಕ್ತಿ. ಅದೇ ರೀತಿ ಶುಕ್ರ, ಶನಿ ಕ್ಷೇತ್ರ ಅಥವಾ ಶನಿ ನವಾಂಶ ಗತನಾಗಿ ಶನಿಯುಕ್ತನಾದರೆ ಶಿಶ್ನ ಚುಂಬನಾಸಕ್ತಿಯುಳ್ಳವಳಾಗಿರುತ್ತಾಳೆ.

ಸಪ್ತಮೇಶ ಉಚ್ಚರಾಶಿಸ್ಥ – ಸಪ್ತಮಭಾವ ಶುಭಗ್ರಹಯುಕ್ತ ದೃಷ್ಟಿತ ವಾದರೂ ಸ್ತ್ರೀ ಪುತ್ರಪೌತ್ರಾದಿಯುಕ್ತರು ಗುಣವಿತ ಅದೇ ಶತ್ರುಕ್ಷೇತ್ರ ನೀಚ ರಾಶಿ ಗತ ಅಸ್ತಂಗತ ಪಾಪದೃಷ್ಟರಾದರೆ ಸಪ್ತಮಭಾವ ಪಾಪಕ್ರಾಂತವಾದರೆ ಪತ್ನಿ ನಾಶ ಹೇಳುವುದು. ಬಲಹೀನ ಸಪ್ತಮೇಶ 6, 8, 12ರಲ್ಲಿ ನೀಚರಾಶಿಗತನಾದರೂ ಸ್ತ್ರೀನಾಶ ಚಂದ್ರ ಸಪ್ತಮದಲ್ಲಿ ಸಪ್ತಮೇಶ 12ರಲ್ಲಿ ಹಾಗೂ ಸ್ತ್ರೀಕಾರಕ ಗ್ರಹ ನಿರ್ಬಲವಾಗಿದ್ದರೆ ಅವನಿಗೆ ಸ್ತ್ರೀ ಸೌಖ್ಯವಿರುವುದಿಲ್ಲ.

## ದಿವ್ಯಾದಿ ಪತ್ನಿಯೋಗ

ನೀಚೆ ಪಾಪರ್ಕ್ಷಗೆ ವಾಪಿ ಸಪಾಪೆ ಚ ಕಲತ್ರಪೆ ।
ಕ್ಲೀಬಗ್ರಹೆ ಸಪ್ತಮಸ್ತೆ ದ್ವಿಭಾರ್ಯೋ ಜಾಯತೆ ನರಃ ॥೧೯॥

ಕಲತ್ರಸ್ಥಾನಗೆ ಭೌಮೇ ಶುಕ್ರೆ ಜಾಯತ್ರಿಗೆ ಶನೌ ।
ಲಗ್ನೇಶೆ ರಂಧ್ರರಾಶಿಸ್ಥೆ ಕಲತ್ರತ್ರಯವಾನ್ ಭವೇತ್ ॥೨೦॥

ದ್ವಿಸ್ವಭಾವಗತೆ ಶುಕ್ರೆ ಸ್ವೋಚ್ಚೆ ತದ್ರಾಶಿ ನಾಯಕೆ ।
ದಾರೇಶೆ ಬಲಸಂಯುಕ್ತೆ ಬಹುದಾರಾ ಸಮನ್ವಿತಾಃ ॥೨೧॥

ಪಾಪಗ್ರಹ ಯುಕ್ತ ಸಪ್ತಮೇಶ ನೀಚ ಅಥವಾ ಪಾಪಗ್ರಹ ರಾಶಿಯಲ್ಲಿದ್ದರೆ ಜಾತಕನು ದ್ವಿಭಾರ್ಯಾ ಯೋಗದವನಾಗಿರುತ್ತಾನೆ. (ಇಲ್ಲವೇ ಹೆಂಡತಿ – ಬೇರೆ ಸ್ತ್ರೀ) ಸಪ್ತಮದಲ್ಲಿ ಮಂಗಳ, ಶುಕ್ರ ಹಾಗೂ ಶನಿ ಇದ್ದರೆ ಅಷ್ಟಮೇಶ ಅಷ್ಟಮಸ್ಥಾನ ಗತನಾದರೆ ಮೂರು ಸ್ತ್ರೀ ರಮಣನಾಗುವನು. ಶುಕ್ರ ದ್ವಿಸ್ವಭಾವ ರಾಶಿಗತವಾಗಿದ್ದರೆ – ಆ ದ್ವಿಸ್ವಭಾವ ರಾಶ್ಯಾಧೀಪ ತನ್ನುಚ್ಚದಲ್ಲಿದ್ದರೆ ಹಾಗೂ ಸಪ್ತಮೇಶ ಸಬಲನಾಗಿದ್ದರೆ ಮನುಷ್ಯ ಬಹಳ ಸ್ತ್ರೀ ರಮಣನಾಗಿರುತ್ತಾನೆ.

## ವಿವಾಹ ಸಮಯ

ದಾರೇಶೇ ಶುಭ ರಾಶಿಸ್ಥೆ ಸ್ವೋಚ್ಚಸ್ವರ್ಕ್ಷತಗೆ ಭೃಗೌ ।
ಪಂಚಮೆ ನವಮೇಚ್ಛಿತು ವಿವಾಹಃ ಪ್ರಾಯಶೋ ಭವೇತ್ ॥೨೨॥

ದಾರಾಸ್ಥಾನಂ ಗತೆ ಸೂರ್ಯೋ ತದೀಶೆ ಭೃಗುಸಂಯುತೆ ।
ಸಪ್ತಮ್ಯೈಕಾದಶೆ ವರ್ಷೆ ವಿವಾಹಃ ಪ್ರಾಯಶೋ ಭವೇತ್ ॥೨೩॥

ದಶಮೇ ಷೋಡಶಾಬ್ದೆ ಚ ವಿವಾಹ ಪ್ರಾಯಶೊ ಭವೆತ್
ಲಗ್ನ ಕೇಂದ್ರ ಗತೆ ಶುಕ್ರೆ ಲಗ್ನೇಶೆ ಮಂದ ರಾಶಿಗೆ ॥೨೪॥

ಕುಟುಂಬ ಸ್ಥಾನಗೆ ಶುಕ್ರೆ ದಾರೇಶೆ ಲಾಭ ರಾಶಿಗೆ ।
ವತ್ಸರೈಕಾದಶೆ ಪ್ರಾಪ್ತೆ ವಿವಾಹಂ ಲಭತೆ ನರಃ ॥೨೫॥

ಲಗ್ನಾತ್ ಕೇಂದ್ರಗತೆ ಶುಕ್ರೆ ತಸ್ಮಾತ್ ಕಾಮಗತೆ ಶನೌ ।
ದ್ವಾದಶೈಕೋನ ವಿಂಶೆ ಚ ವಿವಾಹಃ ಪ್ರಾಯಶೊ ಭವೇತ್ ॥೨೬॥

ಚಂದ್ರಾಜ್ಜಾಮಿತ್ರಗೆ ಶುಕ್ರೆ ಶುಕ್ರಾಜ್ಜಾಮಿತ್ರಗೆ ಶನೌ ।
ವತ್ಸರೆಷ್ಠಾದಶೆ ಪ್ರಾಪ್ತೆ ವಿವಾಹಂ ಲಭತೆ ನರಃ ॥೨೭॥

ಧನೇಶೆ ಲಾಭ ರಾಶಿಸ್ಥೆ ಲಗ್ನೇಶೆ ಕರ್ಮ ರಾಶಿಗೆ ।
ಅಬ್ದೆ ಪಂಚದಶೆ ಪ್ರಾಪ್ತೆ ವಿವಾಹಂ ಲಭತೆ ನರಃ ॥೨೮॥

ಸಪ್ತಮೇಶ ಶುಭಗ್ರಹ ರಾಶಿಯಲ್ಲಿದ್ದು ಹಾಗೂ ಶುಕ್ರ ತನ್ನುಚ್ಚ ಅಥವಾ ತನ್ನ ಭವನದಲ್ಲಿದ್ದರೆ ಪಂಚಮ ಅಥವಾ ನವಮ ವರ್ಷದಲ್ಲಿ ವಿವಾಹ ಸಂಭವ ಹೇಳುವುದು. ಸೂರ್ಯ, ಸಪ್ತಮದಲ್ಲಿ ಜಾಯೇಶ ಶುಕ್ರಯುಕ್ತನಾಗಿದ್ದರೆ – ಸಪ್ತ–ಏಕಾದಶದಲ್ಲಿ ವಿವಾಹ ಸಂಭವ ಹೇಳುವುದು. ಶುಕ್ರ ದ್ವಿತೀಯ ಸ್ಥಾನ ಹಾಗೂ ಸಪ್ತಮೇಶ ಏಕಾದಶದಲ್ಲಿ 10ನೇ ವರ್ಷ ಇಲ್ಲವೇ 16ನೇ ವಿವಾಹ ಹೇಳುವುದು. ಶುಕ್ರ ಲಗ್ನಾದಿ ಕೇಂದ್ರಗತನಾದರೆ ಹಾಗೂ ಲಗ್ನೇಶ ಶನಿರಾಶಿ (ಮಕರ, ಕುಂಭ)ದಲ್ಲಿದ್ದರೆ 11ನೇ ವರ್ಷದಲ್ಲಿ ವಿವಾಹ ಹೇಳುವುದು. ಲಗ್ನದಿಂದ ಕೇಂದ್ರದಲ್ಲಿ ಶುಕ್ರ ಹಾಗೂ ಶುಕ್ರನಿಂದ ಸಪ್ತಮದಲ್ಲಿ ಶನಿ ಇದ್ದರೆ, 12 ಇಲ್ಲವೇ 19ನೇ ವರ್ಷ ಬಹುಶಃ ವಿವಾಹ ಸಂಭವ. ಚಂದ್ರನಿಂದ ಸಪ್ತಮದಲ್ಲಿ ಶುಕ್ರ, ಶುಕ್ರನಿಂದ ಸಪ್ತಮದಲ್ಲಿ ಶನಿ (ರಾಶಿ ಗತನಾಗಿ) ಇದ್ದರೆ 18ನೇ ವರ್ಷಕ್ಕೆ ವಿವಾಹ ಧನೇಶ ಲಾಭಸ್ಥಾನಗತನಾಗಿ ಲಗ್ನೇಶ ದಶಮದಲ್ಲಿದ್ದರೆ 15ನೇ ವರ್ಷ ವಿವಾಹ ಹೇಳುವುದು.

ಧನೇಶೆ ಲಾಭ ರಾಶಿಸ್ಥೆ ಲಾಭೇಶೆ ಧನ ರಾಶಿಗೆ ।
ಅಬ್ದೆ ತ್ರಯೋದಶೆ ಪ್ರಾಪ್ತೆ ವಿವಾಹಂ ಲಭತೇ ನರಃ ॥೨೯॥

ರಂಧ್ರಾಜ್ಜಾಮಿತ್ರಗೇ ಶುಕ್ರೆ ತದೀಶೆ ಭೌಮ ಸಂಯುಕ್ತತೆ ।
ದ್ವಾವಿಂಶೇ ಸಪ್ತವಿಂಶೇಬ್ದೆ ವಿವಾಹಂ ಲಭತೆ ನರಃ ॥೩೦॥

ದಾರಾಂಶಕ ಗತೆ ಲಗ್ನನಾಥೆ ದಾರೆಶ್ವರೆ ವ್ಯಯೇ ।
ತ್ರಯೋವಿಂಶೆ ಚ ಷಡವಿಂಶೆ ವಿವಾಹಂ ಲಭತೆ ನರಃ ॥೩೦॥

ರಂಧ್ರೆಶೆ ದಾರಾ–ರಾಶಿಸ್ಥೆ ಲಗ್ನಾಂಶೆ ಭೃಗುಸಂಯುತೆ ।
ಪಂಚವಿಂಶೆ ತ್ರಯಸ್ತ್ರೀಶೆ ವಿವಾಹಂ ಲಭತೇ ನರಃ ॥೩೨॥

ಭಾಗ್ಯಾದ್ ಭಾಗ್ಯಗತೆ ಶುಕ್ರೆ ತದ್‌ದ್ವಯೆ ರಾಹುಸಂಯುತೆ ।
ಏಕತ್ರಿಂಶಾತ್ ತ್ರಯಸ್ತ್ರಿಂಶೆ ದಾರಾಲಾಭಂ ವಿನಿರ್ದಿಶೇತ್ ॥೩೩॥

ಭಾಗ್ಯಾಜ್ಞಾ ಮಿತ್ರಗೆ ಶುಕ್ರೆ ತದ್‌ಧ್ಯೂನೆ ದಾರಾ ನಾಯಕೆ ।
ತ್ರಿಂಶೇಥವಾ ಸಪ್ತವಿಂಶೆ ವರ್ಷೆ ಪಾಣಗ್ರಹೊ ಭವೇತ್ ॥೩೪॥

ಧನೇಶ ಲಾಭಸ್ಥಾನದಲ್ಲಿ ಲಗ್ನೇಶ ಧನದಲ್ಲಿದ್ದರೆ 12ನೇ ವರ್ಷ ವಿವಾಹ – ಅಷ್ಟಮದಿಂದ ಸಪ್ತಮ (ದ್ವಿತೀಯ)ದಲ್ಲಿ ಶುಕ್ರನಿದ್ದು ಅಷ್ಟಮೇಶ ಮಂಗಳ ಯುಕ್ತನಾಗಿದ್ದರೆ 22 ಅಥವಾ 27ನೇ ವರ್ಷ ವಿವಾಹ ಸಂಭವ, ಲಗ್ನೇಶ ಸಪ್ತಮೇಶನ ನವಾಂಶದಲ್ಲಿ ಹಾಗೂ ಸಪ್ತಮೇಶ ವ್ಯಯದಲ್ಲಿದ್ದರೆ 23 ಅಥವಾ 26ನೇ ವರ್ಷ ವಿವಾಹ – ಅಷ್ಟಮೇಶ ಸಪ್ತಮಸ್ಥಾನ ಗತನಾಗಿ ಲಗ್ನನವಾಂಶ ಶುಕ್ರ ಸಂಯುಕ್ತ ನಾಗಿದ್ದರೆ 25 ಅಥವಾ 33ರಲ್ಲಿ ಮದುವೆ, ಭಾಗ್ಯಸ್ಥಾನದಿಂದ ನವಮ ಸ್ಥಾನ (ಪಂಚಮ)ಶುಕ್ರನಿದ್ದು – ಈ ಎರಡರಲ್ಲಿ (ಪಂಚಮ, ನವಮ) ರಾಹು ಇದ್ದರೆ 31ರಿಂದ 33ರ ಮಧ್ಯದಲ್ಲಿ ವಿವಾಹ ಹೇಳುವುದು. ಭಾಗ್ಯದ ಸಪ್ತಮ (ತೃತೀಯ) ಶುಕ್ರನ್ನಿ ಶುಕ್ರನಿಂದ ಸಪ್ತಮದಲ್ಲಿ (ಭಾಗ್ಯ) ಸಪ್ತಮೇಶನಿದ್ದರೆ 27 ಅಥವಾ 30 ವರ್ಷದಲ್ಲಿ ವಿವಾಹ, 37ರಲ್ಲಿ ವಿವಾಹ.

ಇಲ್ಲಿ ಸಂಭವ ಹೇಳಿದ್ದು ದಶಾ ಹಾಗೂ ಗೋಚರ ಹಾಗೂ ಅಷ್ಟಮವರ್ಗ ಲಗ್ನ ಸಾಧನರ್ಥ ನಕ್ಷತ್ರದಲ್ಲಿ ಗುರು ಸಪ್ತಮೇಶ ಪರಿಭ್ರಮಣ ನೋಡಿ ಹೇಳುವುದು. ಅದಕ್ಕೆ ಸಂಭವನೀಯವೆಂದಿದೆ.

## ಸ್ತ್ರೀ ಮೃತ್ಯು ಸಮಯ

ದಾರೇಶೆ ನೀಚರಾಶಿಸ್ಥೆ ಶುಕ್ರೆ ರಂಧ್ರಾರಿ ಸಂಯುತೆ ।
ಅಷ್ಟಾದಶೆ ತ್ರಯವ್ರಿಂಶೆ ವತ್ಸರೆ ದಾರಾನಾಶನಮ್ ॥೩೫॥

ಮದೇಶೆ ನಾಶರಾಶಿಸ್ಥೆ ವ್ಯಯೇಶೆ ಮದರಾಶಿಗೆ ।
ತಸ್ಯ ಚೈಕೋನವಿಂಶಾಬ್ದೇ ದಾರಾನಾಂಶ ವಿನಿರ್ದಿಶೇತ್ ॥೩೬॥

ಕುಟುಂಬಸ್ಥಾನಗೋ ರಾಹುಃ ಕಲತ್ರೇ ಭೌಮಸಂಯುತೆ ।
ಪಾಣಿ ಗ್ರಹಾತ್ತೃತೀಯೇಹ್ನಿ ಸರ್ಪದಂಶಾದ್ ವಧುಮೃತಿಃ ॥೩೭॥

ರಂಧ್ರಸ್ಥಾನ ಗತೆ ಶುಕ್ರೆ ತದೀಶೆ ಸೌರಿರಾಶಿಗೆ ।
ದ್ವಾದಶೈಕೋನವಿಂಶಾಬ್ದೆ ದಾರಾನಾಶಂ ವಿನಿರ್ದಿಶೇತ್ ॥೩೮॥

ಲಗ್ನೇಶೆ ನೀಚರಾಶಿಸ್ಥೆ ಧನೇಶೆ ನಿಧನಂ ಗತೆ ।
ತ್ರಯೋದಶೆ ತು ಸಂಪ್ರಾಪ್ತೆ ಕಲತ್ರಸ್ಯ ಮೃತಿ ಭವೇತ್ ॥೩೯॥

ಯಸ್ಯ ಜನ್ಮನಿ ಷಷ್ಠಸ್ಥಃ ಕುಜೋ ರಾಹುಃ ಕಲತ್ರಗಃ ।
ಸೂರ್ಯ ಪುತ್ರೋಷ್ಟಮಸ್ಥ ಶ್ಚೆಜ್ಜಾಯಾ ತಸ್ಯನ ಜೀವತಿ ॥೪೦॥

ಸಪ್ತಮೇಷ ನೀಚರಾಶಿ ಗತನಾಗಿ ಶುಕ್ರ, ಷಷ್ಠ ಅಥವಾ ಅಷ್ಟಮ ಸ್ಥಾನದಲ್ಲಿದ್ದರೆ 18ನೇ ವರ್ಷಕ್ಕೆ ಅಥವಾ 33ನೇ ವರ್ಷದಲ್ಲಿ ಪತ್ನಿಯ ದೇಹವಾಸವಾಗುತ್ತದೆ. ರಾಹು ದ್ವಿತೀಯಭಾವಗತನಾದರೆ – ಸಪ್ತಮದಲ್ಲಿ ಅದೇ ರಾಹು, ಮಂಗಳ ಯುಕ್ತನಾದರೆ – ಲಗ್ನದ 3ನೇ ದಿನ ಹೆಂಡತಿಯ ನಿಧನ (ಅದು ಸರ್ಪಕಚ್ಚುವದರಿಂದ) ಶುಕ್ರ ಅಷ್ಟಮದಲ್ಲಿ ಅಷ್ಟಮೇಶ ಮಕರ ಅಥವಾ ಕುಂಭದಲ್ಲಿದ್ದರೆ 19ನೇ ವರ್ಷ ಸ್ತ್ರೀಯ ಮೃತ್ಯು ಲಗ್ನೇಶ ತನ್ನ ನೀಚ ರಾಶಿಗತನಾಗಿ ಹಾಗೂ ಧನೇಶ ಅಷ್ಟಮದಲ್ಲಿದ್ದರೆ 13ನೇ ವರ್ಷ ಪತ್ನಿ ವಿಯೋಗ ಯಾವ ಜಾತಕನ ಜನ್ಮ ಸಮಯದಲ್ಲಿ ಮಂಗಳ ಷಷ್ಠ, ರಾಹು ಸಪ್ತಮ ಹಾಗೂ ಶನಿ ಅಷ್ಟಮ ಸ್ಥಾನದಲ್ಲಿದ್ದರೆ – ಅವನ ಹೆಂಡತಿ ತೀವ್ರ ಮೃತ್ಯುವಶವಾಗುತ್ತಾಳೆ.

## 3ನೇ ವಿವಾಹ ಸಮಯ

ಶುಕ್ರ ಜಾಮಿತ್ರಿಗೆ ಚಂದ್ರೇ ಚಂದ್ರ ಜಾಮಿತ್ರಗೆ ಬುಧೆ ।
ರಂಧ್ರೇಶೆ ಸುತ ಭವಸ್ಥೆ ಪ್ರಥಮಂ ದಶವಾಬ್ಧಿ ಕಮ್ ॥೪೧॥

ದ್ವಾವಿಂಶೆ ಚ ದ್ವಿತೀಯಂ ಸ್ಯಾತ್ ತ್ರಯಸ್ತ್ರಿಂಶೆ ತೃತೀಯಕಮ್ ।
ವಿವಾಹಂ ಲಭತೆ ಮರ್ತ್ಯೋ ನಾತ್ರಕಾರ್ಯ ವಿಚಾರಣಾ ॥೪೨॥

ಶುಕ್ರನಿಂದ ಸಪ್ತಮದಲ್ಲಿ ಚಂದ್ರ, ಚಂದ್ರನಿಂದ ಸಪ್ತಮ ಬುಧ (ಬುಧ+ಶುಕ್ರರ ಸಪ್ತಮ ಚಂದ್ರ) ಅಷ್ಟಮೇಶ ಪಂಚಮದಲ್ಲಿದ್ದರೆ ಮೊದಲಿಗೆ ಲಗ್ನ 22ನೇ ವರ್ಷ ಹಾಗೂ 3ನೇ ವಿವಾಹ 33ನೇ ವರ್ಷದಲ್ಲಾಗುತ್ತದೆ. ಇದರಲ್ಲಿ ಸಂದೇಹವಿಲ್ಲ.

ಭಾವ ವಿಮರ್ಶೆ – ಪ್ರತಿಯೊಂದು ಅಂಶವನ್ನು ಬಲಾಬಲದ ಮೇಲೆ ನಿರ್ಧರಿಸಬೇಕು. ರವಿ, ಶುಕ್ರರನ್ನು ಹಾಗೂ ಪ್ರಮುಖವಾಗಿ ಇಂದ್ರ (ಹರ್ಷಲ), ವರುಣ

(ನೆಪ್ಚ್ಯೂನ್)ನನ್ನು ಗಣನೆಗೆ ತೆಗೆದುಕೊಳ್ಳುವುದು.

ಈ ಭಾವ ವಿಚಾರಿಸುವಾಗ ಪೂರಕ ಭಾವಗಳನ್ನು ವಿಚಾರಿಸುವುದು ಅಂದರೆ ಕುಟುಂಬ, ಸುಖ, ಸುತರ ಸ್ಥಾನವಾದ ಪಂಚಮಭಾವ, ಅಷ್ಟಮ ಅಂದರೆ ಸಪ್ತಮ ದಿಂದ ಕುಟುಂಬ ಹಾಗೂ ಸಪ್ತಮಕ್ಕೆ ವ್ಯಯವಾಗುವ ಷಷ್ಠ ಭಾವ ಪರಿಗಣಿಸಿ – ಮದುವೆ, ಸುಖ, ದುಃಖವಯ ಆದಿ ತಿಳಿಸುವುದು ಹಾಗೂ ಸಂಸಾರ ಸುಖವನ್ನು ಹೇಳುವುದು. ಈ ಕೆಳಗಿನ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುವಾಗ ಪುರುಷ ಕುಂಡಲಿಯಲ್ಲಿ ಶುಕ್ರ, ಸ್ತ್ರೀ ಕುಂಡಲಿಯಲ್ಲಿ ರವಿ ಹಾಗೂ ಅಂಶಾತ್ಮಕವಾಗಿ ಕಾರಕ ಗಳನ್ನು ವಿಮರ್ಶಿಸುವುದು – ಕೆಲ ವಿಶೇಷ ಅಂಶಗಳು–

1) ಜಾಯೇಶ ಶುಭಯುಕ್ತನಾಗಿರದೆ ತ್ರಿಕ್‌ಸ್ಥಾನದಲ್ಲಿದ್ದರೆ ಹಾಗೂ ನೀಚ ಅಸ್ತಂಗತನಾಗಿದ್ದರೆ ಸಂಸಾರ ಸುಖ ದೊರೆಯಲಾರದು.

2) ತ್ರಿಕ್ ಅಧಿಪರು (6, 8, 12) ಜಾಯಾ ಭಾವಗತರಾದರೆ ಅವುಗಳ ಮೇಲೆ ಶುಭಗ್ರಹ ದೃಷ್ಟಿಯಿರದಿದ್ದರೆ ಹಾಗೂ ಶುಭ ಸಂಯುಕ್ತರಾಗಿರದಿದ್ದರೂ ಸ್ತ್ರೀ ಸುಖ ಕೊರತೆದಾಯಕ.

3) ಜಾಯೇಶ ವ್ಯಯಸ್ಥಾನಗತನಾಗಿ – ಲಗ್ನೇಶ ಅಥವಾ ಜನ್ಮರಾಶೇಶ (ಚಂದ್ರನಿದ್ದ ರಾಶಿ ಸ್ವಾಮಿ) ಸಪ್ತಮಸ್ಥರಾಗಿದ್ದು – ನೀಚಗ್ರಹ ದೃಷ್ಟಿತರಾದರೆ – ಸ್ತ್ರೀ ಸೌಖ್ಯವಿಲ್ಲವೆಂದು ಹೇಳುವುದು.

4) ಚಂದ್ರ, ಶುಕ್ರ ಯಾವ ಭಾವದಲ್ಲಿದ್ದರೂ ಆ ಭಾವದಿಂದ ಸಪ್ತಮದಲ್ಲಿ ಶನಿ, ಮಂಗಳರಿದ್ದರೆ ಜಾತಕ ವಿವಾಹದಿಂದಲೂ ವಂಚಿತನಾಗುವನು.

5) ಸಪ್ತಮಸ್ಥ ಶನಿ ಹಾಗೂ ಚಂದ್ರರಿರುವುದರಿಂದ ಜಾತಕ ಪ್ರಾಯಶಃ ಅವಿವಾಹಿತನಾಗಿರಬೇಕಾಗುತ್ತದೆ.

6) ಸಪ್ತಮದಲ್ಲಿ ಬುಧ, ಶುಕ್ರ ಶುಭಗ್ರಹ ದೃಷ್ಟಿರಹಿತರಾಗಿದ್ದರೆ – ಜಾತಕ ಸ್ತ್ರೀ ವಿಹೀನನಾಗಿರುತ್ತಾನೆ. (ಇದ್ದರೂ ಸ್ತ್ರೀಯಿಂದ ಅಲ್ಪ ಸುಖವೂ ಇಲ್ಲ)

7) ಶುಕ್ರ, ಮಂಗಳ, ಸಪ್ತಮಭಾವಗತರಾಗಿ ಅಥವಾ ನವಮ ಪಂಚಮ ದಲ್ಲಿದ್ದರೆ – ಕೂಡ ಸ್ತ್ರೀ ವಿಹೀನತೆ.

8) ಶುಕ್ರ, ಪಾಪಗ್ರಹ ಸಂಯುತನಾಗಿ ಪಂಚಮ, ಸಪ್ತಮ ಅಥವಾ ನವಮ ದಲ್ಲಿದ್ದರೂ ಜಾತಕ ವಿವಾಹ ವಂಚಿತನಾಗುವನು ಅಥವಾ ಸ್ತ್ರೀ ವಿಯೋಗ ಪೀಡಿತ.

9) ಲಗ್ನ ಚತುರ್ಥ, ಸಪ್ತಮ, ಅಷ್ಟಮ, ದ್ವಾದಶ ಭಾವಗತ ಪಾಪಗ್ರಹ

ವಿಶೇಷತಃ ಮಂಗಳ ಅಥವಾ ಶನಿ – ಸ್ತ್ರೀ ಘಾತಕರು.

10) ಪಾಪಗ್ರಹ ಕರ್ತರಿಯಲ್ಲಿ ಶುಕ್ರ ಅಥವಾ ಸಪಾಪ ಶುಕ್ರ ಅದರಂತೆ ಶುಕ್ರನಿಂದ ಸಪ್ತಮ, ಅಷ್ಟಮ ಹಾಗೂ ದ್ವಾದಶದಲ್ಲಿ ಪಾಪಗ್ರಹ ಸ್ತ್ರೀ ಘಾತಕಗಳೇ.

11) ಚಂದ್ರನಿಂದ 1, 4, 7, 8, 12ರಲ್ಲಿ ಪಾಪಗ್ರಹ ದಂಪತಿಗಳಲ್ಲಿ ಪತಿ ಕುಂಡಲಿಯಲ್ಲಿದ್ದರೆ ಪತ್ನಿಗೆ, ಪತ್ನಿ ಕುಂಡಲಿಯಲ್ಲಿ ಪತಿಗೆ ಘಾತಕಗಳೇ.

ಇಲ್ಲಿ ಕೇವಲ ಒಂದು ಗ್ರಹದಿಂದ ಹೇಳದೆ – ತಾರಕ, ಮಾರಕ, ಕಾರಕಾದಿ ನೋಡಿ ಬಲಾಬಲದ ಮೇಲೆ ಹೇಳುವುದು.

## ಸ್ತ್ರೀ ಸುಖ ಸಂಖ್ಯೆ

1) ಸಪ್ತಮದಲ್ಲಿ ಬುಧ, ಗುರು, ರವಿ, ಮಂಗಳರಲ್ಲಿ ಯಾರಿಬ್ಬರಿದ್ದರೂ ಒಬ್ಬ ಸ್ತ್ರೀ ಸುಖಿ.

2) ಲಗ್ನೇಶ ಸಪ್ತಮೇಶ – ಇಬ್ಬರು ಲಗ್ನ ಅಥವಾ ಸಪ್ತಮದಲ್ಲಿದ್ದರೆ 2ರ ಸುಖ.

3) ಸಪ್ತಮ, ಅಷ್ಟಮ ಪಾಪಗ್ರಹ ಅಥವಾ ಮಂಗಳ ದ್ವಾದಶದಲ್ಲಿದ್ದರೆ ಅಥವಾ ದ್ವಾದಶೇಶ ದೃಶ್ಯ ಗೋಲಾರ್ಧದಲ್ಲಿದ್ದರೆ ಜಾತಕನಿಗೆ ದ್ವಿತೀಯ ವಿವಾಹ ಅವಶ್ಯವಾಗಿ ಆಗುತ್ತದೆ.

4) ಸಪ್ತಮೇಶ ಶುಭಗ್ರಹ ಯುತನಾಗಿ ತ್ರಿಕ್‌ದಲ್ಲಿದ್ದರೆ, ಸಪ್ತಮದಲ್ಲಿ ಪಾಪಗ್ರಹವಿದ್ದರೆ – ಇಬ್ಬರು ಹೆಂಡತಿಯರು.

5) ಲಗ್ನೇಶ ಹನ್ನೆರಡನೇ ಭಾವದಲ್ಲಿ ದ್ವಿತೀಯಾಧಿಪ ಪಾಪಯುಕ್ತ ಸಪ್ತಮ ದಲ್ಲಿಯೂ ಪಾಪಗ್ರಹವಿದ್ದರೆ ಅಥವಾ ಪಾಪಕ್ರಾಂತವಾಗಿದ್ದರೆ ಇಬ್ಬರು ಹೆಂಡತಿಯರೆಂದು ಹೇಳುವುದು.

6) ಮಂಗಳ ಸಪ್ತಮ, ಅಷ್ಟಮ, ದ್ವಾದಶಗತನಾಗಿ ಸಪ್ತಮೇಶನ ದೃಷ್ಟಿಯಿರ ದಿದ್ದರೆ ಜಾತಕನಿಗೆ ದ್ವಿಭಾರ್ಯಾ ಯೋಗ.

7) ಸಪ್ತಮ ಅಥವಾ ದ್ವಿತೀಯಸ್ಥಾನ ಪಾಪಯುತ ದೃಷ್ಟವಾದರೆ, ಸಪ್ತಮೇಶ ದ್ವಿತೀಯಾಧಿಪರಲ್ಲಿ ಯಾರೊಬ್ಬರು ನಿರ್ಬಲರಾಗಿದ್ದರೆ – ದ್ವಿಭಾರ್ಯಾ ಯೋಗ.

8) ಸಪ್ತಮ ದ್ವಿತೀಯದಲ್ಲಿ ಬಹಳ ಪಾಪಗ್ರಹಗಳಿದ್ದರೆ ಹಾಗೂ ದ್ವಿತೀಯೇಶ ಅಥವಾ ಸಪ್ತಮೇಶನ ಮೇಲೆ ಪಾಪ ದೃಷ್ಟಿಯಿದ್ದರೆ 3 ವಿವಾಹ.

9) ಲಗ್ನ ದ್ವಿತೀಯ, ಸಪ್ತಮದಲ್ಲಿ ಯಾವುದೇ ಸ್ಥಾನದಲ್ಲಿ ಪಾಪಗ್ರಹವಿದ್ದು ಸಪ್ತಮೇಶ ನೀಚ ಹಾಗೂ ಅಸ್ತಂಗತನಾಗಿದ್ದರೆ ಮೂವರು ಹೆಂಡತಿಯರು.

10) ನವಮೇಶ ಸಪ್ತಮಗತ ಸಪ್ತಮೇಶ 4ರಲ್ಲಿ ಅಥವಾ ಏಕಾದಶೇಸ ಸಪ್ತಮೇಶ ಕೇಂದ್ರಗತರಾದರೆ 3 ಜನ ಹೆಂಡತಿಯರು ಅಥವಾ ಬಹತಾನಾ ಸುಖ ಭೋಗ.

## ಸಮಯ ವಿಮರ್ಶೆ

ಮದುವೆ ಸಮಯವು ಕೂಡ ಅತಿ ಮಹತ್ವದ ಅಂಶವಾಗಿದೆ. ಈ ಅಂಶ ವಿಚಾರಿಸುವಾಗ ಸ್ಥಾಪಿತ ಗ್ರಹಗಳು, ದಶಾಗೋಚರ, ನಕ್ಷತ್ರ ಗೋಚರ – ಅಷ್ಟಕ ವರ್ಗದಲ್ಲಿ ಗ್ರಹದ ಸ್ಥಾನ, ಅಷ್ಟಕ ವರ್ಗದಂತೆ ಗುರು, ಲಗ್ನಕಾರಕ ಗ್ರಹ, ಸಂಚರಿಸುವ ನಕ್ಷತ್ರಾದಿಗಳ ಅವಲೋಕನವು ಅತಿ ಅವಶ್ಯಕವಾಗಿದೆ. ಈ ಎಲ್ಲ ಅಂಶ ಗಮನದಲ್ಲಿಟ್ಟುಕೊಂಡು – ಫಲಾ ದೇಶ ಹೇಳುವುದು.

1) ಜಾಯಾಕಾರಕ ಗ್ರಹ ಅಥವಾ ಸಪ್ತಮೇಶ ಇದರಲ್ಲಿ ಯಾರು ಬಲಿಷ್ಠರೋ ಅವರ ದಶಾ, ಅಂತರದಶಾ ಕಾಲದಲ್ಲಿ ಮದುವೆಯಾಗುತ್ತದೆ.

2) ಸ್ಫುಟ ಲಗ್ನೇಶ (ರಾಶ್ಯಾಧಿಪನಲ್ಲಿ – ಸ್ವಷ್ಪ ಅಂಶಾಧಿಪ ಹಾಗೂ ಸಪ್ತಮೇಶರ – ಯೋಗ ಸಮಯ (ಗೋಚರ) ಅವರ ಮೇಲೆ ಗುರು ಸಂಚಾರ ಕಾಲದಲ್ಲಿ ವಿವಾಹವಾಗುತ್ತದೆ.

3) ಜನ್ಮಕಾಲಿಕ ಚಂದ್ರ ರಾಶಿ ಸ್ವಾಮಿಯ ಸ್ಫುಟವನ್ನು ಅಷ್ಟಮೇಶನ ಸ್ವಷ್ಪದಲ್ಲಿ ಕೂಡಿಸಿದಾಗ ಬರುವ ರಾಶ್ಯಾದಿಗಳಲ್ಲಿ ಗುರು ಸಂಚಾರ ಕಾಲಕ್ಕೆ ವಿವಾಹ ಸಂಭವ ಅಥವಾ ಆ ರಾಶಿಯ ಸಪ್ತಮದಲ್ಲಿ ಗುರು ಬಂದಾಗ ಮದುವೆ. ಅದರಂತೆ ಲಗ್ನೇಶ ಯಾವ ನವಾಂಶದಲ್ಲಿರುವನೋ ಅದರ ಅಧಿಪ ಯಾವ ರಾಶಿಯಲ್ಲಿರುವನೊ ಅದರ ದ್ವಿತೀಯ ಸ್ಥಾನದಲ್ಲಿ ಗೋಚರ ಚಂದ್ರ ಅಥವಾ ಗುರು ಬಂದಾಗ ಅದರಂತೆ ಪಂಚಮ ನಮದಲ್ಲಿ ಬಂದಾಗಲೂ ವಿವಾಹ ಹೇಳುವುದು.

5) ಸಪ್ತಮೇಶ ಲಗ್ನೇಶರ ಯೋಗ (ಯತಿ ನವಪಂಚಕ ತ್ರಿರೇಕಾದಶ) – ಲಗ್ನ ಸ್ವಲ್ಪಾವಧಿಯಲ್ಲಿ ಪೂರ್ಸೈಸಲ್ಪಡುತ್ತದೆ. ಅದರಂತೆ ಸಪ್ತಮ ಭಾವ ಲಗ್ನ ಭಾವದ ಸಮೀಪ ಶುಭಗ್ರಹಗಳಿದ್ದರೆ ಸಪ್ತಮೇಶನ ಮೇಲೆ ಲಗ್ನೇಶನ ಸಂಚಾರ ಸಮಯದಲ್ಲಿ ವಿವಾಹವಾಗುತ್ತದೆ.

6) ಸುಲಭ ಲಗ್ನಕ್ಕೆ – ಲಗ್ನ ಸಪ್ತಮ ದ್ವಿತೀಯದಲ್ಲಿ ಹಾಗೂ ಲಗ್ನಾಧಿಪನ ಮೇಲೆ ಶುಭಗ್ರಹಗಳು ಬಂದು ಅಥವಾ ದೃಷ್ಟಿಯಿದ್ದರೆ ವಿವಾಹ ಕೂಡಿ ಬರುತ್ತದೆ.

7) ಲಗ್ನ ಸಪ್ತಮ ದ್ವಿತೀಯಗಳು ಹಾಗೂ ಶುಕ್ರರು ಪೀಡಿತರಾಗಿದ್ದರೆ ನೀಚಾವಸ್ಥೆಯಲ್ಲಿದ್ದರೆ ಮದುವೆ ವಿಳಂಬ.

ಈ ಎಲ್ಲ ಅಂಶ ಪರಿಗಣಿಸಿ ವಿವಾಹ ಸಮಯ ನಿರ್ಧರಿಸುವುದು.

## ಯೋಗಾನುಸಾರ ಸ್ತ್ರೀ ವಿವರಣ ವಿಮರ್ಶೆ

'ಸತ್ಯಂ ಭ್ರೂಯಾತ್ ನ ಅಪ್ರಿಯಂ' ಎಂಬ ಅಂಶ ಗಮನದಲ್ಲಿಟ್ಟುಕೊಂಡು ಹಾಗೂ ಪರಾಶರರ 'ಕೋ ವಕ್ತಾ ತಮೇಕಂ ವೇದಸಂ ವಿನಾ' ಎಂಬ ಅಂಶವನ್ನು ಗಮನದಲ್ಲಿಟ್ಟು ಕೆಳಗಿನ ವಿಷಯ ವಿಮರ್ಶಿಸುವುದು – ಇಲ್ಲವಾದಲ್ಲಿ ಜಕಣಾ ಚಾರ್ಯ ಡಕಣಾಚಾರ್ಯರ ಕಥೆಯಾಗುವುದು.

1) ಶುಕ್ರ ಚರ ರಾಶಿಯಲ್ಲಿದ್ದು, ಗುರು ಸಪ್ತಮದಲ್ಲಿದ್ದರೆ ಹಾಗೂ ಲಗ್ನೇಶ ಬಲಿಯಿದ್ದರೆ ಜಾತಕನ ಸ್ತ್ರೀ ಪತಿವ್ರತೆಯಾಗಿರುವಳು.

2) ಸಪ್ತಮೇಶ ಗುರುವಿನ ಮೇಲೆ (ಮಿಥುನ, ಕನ್ಯಾ ಲಗ್ನದಲ್ಲಿ ಅಥವಾ ಗುರು ಸಪ್ತಮದಲ್ಲಿದ್ದು) ಬುಧ, ಶುಕ್ರರ ದೃಷ್ಟಿಯಿದ್ದರೆ ಹಾಗೂ ಸಪ್ತಮೇಶ ಗುರು ಪಾಪಯುಕ್ತ ಅಥವಾ ದೃಷ್ಟರಾಗಿರದಿದ್ದರೆ ಸ್ತ್ರೀ ಪತಿವ್ರತೆಯಾಗಿರುವಳು. (ಕೇವಲ ಗ್ರಹಗಳಕ್ಕಿಂತ ಲಗ್ನಕ್ಕೆ ಕಾರಕ ಮಾರಕವನ್ನು ನೋಡುವುದು ವಿಶೇಷ)

3) ಸಪ್ತಮದ ಮೇಲೆ ಅಥವಾ ಸಪ್ತಮದಲ್ಲಿ ಅನುಕ್ರಮವಾಗಿ ಗುರು ದೃಷ್ಟಿ ಸ್ಥಾಪಿತನಾಗಿದ್ದರೆ, ಸ್ತ್ರೀ ಸುಶೀಲೆ, ದಯಾಳು ಆಗಿರುತ್ತಾಳೆ, ಸಚ್ಚರಿತ್ರಳು ಆಗಿರುತ್ತಾಳೆ.

4) ಲಗ್ನದಲ್ಲಿ ರಾಹು ಅಥವಾ ಕೇತುಗಳಿದ್ದರೆ ಸ್ತ್ರೀಯು ಗಂಡನ ವಶವರ್ತಿ ಯಾಗಿರುತ್ತಾಳೆ.

5) ಲಗ್ನೇಶ ಸಪ್ತಮದಲ್ಲಿ, ಸಪ್ತಮೇಶ ಪಂಚಮದಲ್ಲಿದ್ದರೆ ಗಂಡ (ಜಾತಕ) ಸ್ತ್ರೀ ವಶವರ್ತಿಯಾಗಿರುತ್ತಾಳೆ.

6) ಸಪ್ತಮೇಶ ಶುಭಗ್ರಹದ ಜೊತೆಗಿದ್ದು ಅಥವಾ ಉಚ್ಚಸ್ಥ, ಸ್ವಗ್ರಹಿ, ಮಿತ್ರಗ್ರಹಿಯಾಗಿದ್ದರೂ ಸ್ತ್ರೀ ಉತ್ತಮ ಗುಣವತಿಯಾಗುವಳು. ಸಪ್ತಮೇಶನ ಮೇಲೆ, ಗುರುವಿನ ಮೇಲೆ ಬುಧ, ಶುಕ್ರರ ದೃಷ್ಟಿಯಿದ್ದರೆ ಗುರು ಸಪ್ತಮದಲ್ಲಿದ್ದರೆ ಅಥವಾ ಸಪ್ತಮೇಶ ಕೇಂದ್ರಗತನಾದರೆ, ಅವನ ಮೇಶ ಲಗ್ನಕಾರಕ, ಶುಭಗ್ರಹ ದೃಷ್ಟಿಯಿದ್ದರೆ – ಅವನ ಹೆಂಡತಿ ಪತಿವ್ರತೆಯಾಗಿರುವಳು.

7) ಸಪ್ತಮೇಶ ಭೌಮನಾಗಿ (ವೃಷಭ, ತುಲಾ ಲಗ್ನ) ಅವನು ಸ್ವಗ್ರಹಿ, ಮಿತ್ರಗ್ರಹಿ ಉಚ್ಚನಾಗಿ ಶುಭಗ್ರಹಯುತನಾದರೂ ಸ್ತ್ರೀ ನಿಷ್ಠುರಳಾಗಿರುತ್ತಾಳೆ.

ಆದರೂ ಪತಿಯ ಆಜ್ಞಾಪಾಲಿನಿ ಹಾಗೂ ಪ್ರೇಮ ಮಾಡುವವಳು ಆಗಿರುತ್ತಾಳೆ. ಅದೇ ಮಂಗಳ ನೀಚ ಶತ್ರುಗ್ರಹಿ ಅಸ್ತಂಗತನಾಗಿದ್ದರೆ ಸ್ತ್ರೀ ಕುಟಿಲ ದುಶ್ಚರಿತ್ರಳು, ಕುಂಟಾದಳು ಆಗಿರುತ್ತಾಳೆ.

8) ಬಲಿಷ್ಠನಾದ ಸಪ್ತಮೇಶ ಗುರುವಾಗಿ, ಮಿತ್ರಗ್ರಹ ಉಚ್ಚಸ್ಥ ಅಥವಾ ಸ್ವಗ್ರಹಿಯಾಗಿದ್ದರೆ ಜಾತಕನ ಸ್ತ್ರೀ ಸಂತಾನವತಿ, ಸದಾಚಾರ ಶೀಲ ಧಾರ್ಮಿಕ ವಿಚಾರಿಣಿಯಾಗಿರುತ್ತಾಳೆ.

9) ಸಪ್ತಮೇಶ ಶುಕ್ರ ಪಾಪಗ್ರಹಯುಕ್ತ, ಪಾಪ ದೃಷ್ಟರಾಗಿದ್ದರೆ ಅಥವಾ ಶುಕ್ರ ನೀಚಸ್ಥ ಅಥವಾ ಶತ್ರು ನವಾಂಶಗತನಾಗಿದ್ದರೆ ಅವನ ಹೆಂಡತಿ ಕಠೋರ ಚಿತ್ತದವಳಾಗೊ ಕುಟಿಲಳು ಆಗಿರುತ್ತಾಳೆ.

10) ಬಲಿಷ್ಠ ಶುಕ್ರ ಸಪ್ತಮೇಶನಾಗಿ ಶುಭಗ್ರಹಯುಕ್ತ ಅಥವಾ ದೃಷ್ಟ ನಾಗಿದ್ದರೆ ಶುಭ ನವಾಂಶಗತ ಮಿತ್ರಗ್ರಹಿಯಾಗಿದ್ದರೂ ಪುತ್ರವಿತ ಸಚ್ಚರಿತ್ರ ಳಾಗುವಳು.

11) ಸಪ್ತಮೇಶ ಶನಿ ಬಲಿಷ್ಠನಾಗಿ ಶುಭಗ್ರಹಯುಕ್ತ ಅಥವಾ ದೃಷ್ಟನಾಗಿದ್ದರೆ ಹೆಂಡತಿ ವಿನೀತಳಾಗಿರುತ್ತಾಳೆ ಹಾಗೂ ಉತ್ತಮ ಸ್ವಭಾವದವಳು ಆಗಿರುತ್ತಾಳೆ. ಅದೇ ಶನಿ ಪಾಪಗ್ರಹದ ಜೊತೆಗೆ ಪಾಪ ದೃಷ್ಟರಾಗಿದ್ದರೆ, ನೀಚರಾಶಿ ಗತನಾಗಿದ್ದರೆ, ನವಾಂಶಗತನಾಗಿದ್ದರೆ – ಕುಟಿಲ – ಕುಲಿಟಾ ಆಗಿರುತ್ತಾಳೆ.

12) ಸಪ್ತಮೇಶ ತ್ರಿಕಸ್ಥ (6, 8, 12)ನಾಗಿ ಶುಕ್ರ ದುರ್ಬಲನಾಗಿ ಶುಭ ದೃಷ್ಟಿ ರಹಿತನಾಗಿದ್ದರೆ – ನೀಚಸ್ಥಳಾಗಿರುತ್ತಾಳೆ ಹಾಗೂ ಕ್ಷುಲ್ಲಕ ಬುದ್ಧಿಯವಳಾಗಿರು ತ್ತಾಳೆ.

13) ಸಪ್ತಮೇಶ, ದಶಮೇಶ ಹಾಗೂ ಶುಕ್ರ, ಸೂರ್ಯರ ದೃಷ್ಟಿಯಲ್ಲಿದ್ದರೆ, ಗುರು ಸಪ್ತಮದಲ್ಲಿದ್ದರೆ ಸ್ತ್ರೀ ಪತಿವ್ರತೆಯಾಗಿರುತ್ತಾಳೆ.

ಈ ಎಲ್ಲ ಅಂಶ ಸಾವಧಾನರಾಗಿ ವಿಮರ್ಶಿಸುವುದು.

ಈ ಅಂಶಗಳ ಜೊತೆಗೆ ಕೆಳಗಿನ ಅಂಶವನ್ನು ವಿಶೇಷವಾಗಿ ಗಮನಿಸಲು ಅವಕಾಶವಿದೆ.

ಈ ಭಾವಕ್ಕೆ ಗುಪ್ತಕಾರ್ಯ ಭಾವವೆಂದು ವಿಚಾರಿಸುವುದು ಮುಖ್ಯವಾಗಿ ಉದ್ಯೋಗ ವ್ಯವಸಾಯ ಬಿಟ್ಟು ಉಪದಂದೆ. (ಸೈಡ್ ಬಿಜನೇಸ್) ಯಾತ್ರಾ ಪತಿ, ಪತ್ನಿ – ಯುದ್ಧ ಭೂಮಿ, ವ್ಯಾಪಾರ ಕಳೆದವಸ್ತು – ಮರೆವು ಕಳವಿನ ಧನ ಕಾಮುಕತಾ ದ್ವೇಷ – ಓಡಿಹೋದ ವ್ಯಕ್ತಿ (ತಪ್ಪಿಸಿಕೊಂಡ ಕೂಡಾ)

ಸ್ವದೇಶ–ವಿದೇಶ ಪರಸ್ಪರ (ಸ್ತ್ರೀ, ಪುರುಷ) ಪ್ರೇಮ ಕೋರ್ಟು ಪ್ರಕರಣ. ಉಪಭೋಗ ವ್ಯಸನ – ಚೌರ್ಯ ವಿದ್ಯಾ ವಿವಾಹ ಸಂಬಂಧ ನಿಶ್ಚಿತತೆ – ಕೋಡ ತಕ್ಕೊಳ್ಳುವ ವ್ಯವಹಾರ – ವೈವಿದ್ಯ – ಬಡವ ಧನ – ರಾಜ ಸನ್ಮಾನ – ಬಿಲ್ಡಿಂಗ್ ಕೆಲಸಗಾರ – ನಟ, ನಟಿ, ಗಾಯಕ ಸರಾಫ್ – ಅರಿವೇ ವ್ಯಾಪಾರಿ ನಗರ ಪಾಲಿಕಾ ನೌಕರಿ, ಸೇನೆ, ನಿರ್ಮಾಪಕ ವಿತರಣಕಾರ ರೇಡಿಯೋ, ಭೂಗರ್ಭ ಶಾಸ್ತ್ರ (ಜಿಯೋಲಜಿ) ಇತ್ಯಾದಿ ವಿಶೇಷ ವಿಷಯಗಳನ್ನು ವಿಮರ್ಶಿಸುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಸಪ್ತಮ ಭಾವ ಫಲಾಧ್ಯಾಯಃ ಸಮಾಪ್ತಿಃ**

## ೨೦ನೇ ಅಧ್ಯಾಯ

# ಅಥ ಅಷ್ಟಮ (ಆಯ) ಭಾವ ಫಲಾಧ್ಯಾಯಃ

ಅಥಾಯುರ್ಗೇಹಗಂ ವಕ್ಷ್ಯೇ ಫಲಂ ಶೃಣು ಮುನೇಧುನಾ ।
ಕೇಂದ್ರಗೊ ಮೃತಿನಾಥಸ್ತು ದೀರ್ಘಾಯುಷ್ಯಪ್ರದಃ ಸ್ಮೃತಃ ॥೧॥

ಆಯುಃ ಸ್ಥಾನಾಧಿಪಃ ಪಾಪ್ಯೈಃ ಸಹ್ಯವಾಯುಷಿ ಸಂಸ್ಥಿತಃ ।
ಕರೋತ್ಯಲ್ಪಾಯುಷಂ ಜಾತಂ ಲಗ್ನೇಗೋಽಪ್ಯತ್ರ ಸಂಸ್ಥಿತಃ ॥೨॥

ಏವಂ ಹಿ ಶನಿನಾ ಚಿಂತಾ ಕಾರ್ಯಾ ತರ್ಕೈರ್ವಿಚುಕ್ಷಣೈಃ ।
ಕರ್ಮಾಧಿಪೇನ ಚ ತಿಥಾ ಚಿಂತನಂ ಕಾರ್ಯಮಾಯುಷಃ ॥೩॥

ಹೇ ಮೈತ್ರೇಯನೆ – ಅಷ್ಟಮ(ಆಯುರ್)ಭಾವದ ಫಲವನ್ನು ಹೇಳುತ್ತೇನೆ – ಅಷ್ಟಮೇಶ ಕೇಂದ್ರವರ್ತಿಯಾಗಿದ್ದರೆ (1, 4, 7, 10) ಜಾತಕನು ದೀರ್ಘಾಯು ಆಗಿರುತ್ತಾನೆ. ಅಷ್ಟಮೇಶ, ಲಗ್ನೇಶ ಪಾಪಗ್ರಹ ಸಹಿತ ಅಷ್ಟಮದಲ್ಲಿದ್ದರೆ ಮನುಷ್ಯ ಅಲ್ಪಾಯು ಆಗುತ್ತಾನೆ. ಇದೇ ರೀತಿ ಶನಿ ಹಾಗೂ ದಶಮೇಶರಿಂದಲೂ ಆಯಷ್ಯದ ವಿಚಾರ ಮಾಡಬಹುದು.

### ದೀರ್ಘಾಯು ಯೋಗ

ಷಷ್ಠೆ ವ್ಯಯೋಽಪಿ ಷಷ್ಠೇಶೋ ವ್ಯಾಯಾಧೀಶೋ ರಿಪೌ ವ್ಯಯೇ ।
ಲಗ್ನೇಷ್ಠಮೇ ಸ್ಥಿತೋ ವಾಪಿ ದೀರ್ಘಮಾಯುಃ ಪ್ರಯಚ್ಛಂತಿ ॥೪॥

ಸ್ವಸ್ಥಾನೆ ಸ್ವಾಂಶಕೆ ಕಿಂವಾ ಮಿತ್ರೇಶೆ ಮಿತ್ರಮಂದಿರೆ ।
ದೀರ್ಘಾಯುಷಂ ಕರೋತ್ಯೇವ ಲಗ್ನೇಶೋಽಷ್ಟಮಷಃ ಪುನಃ ॥೫॥

ಲಗ್ನಾಷ್ಟಮಪಿ ಕರ್ಮೇಶಮಂದಾಃ ಕೇಂದ್ರ ತ್ರಿಕೋಣಯೋಃ ।
ಲಾಭೆ ವಾ ಸಂಸ್ಥಿತಾಸ್ತದ್ವಿದ್ ದಿಶೇಯು ದೀರ್ಘಮಾಯುಷಮ್ ॥೬॥

ವೀಕ್ಷಿತಃ ಕೇಂದ್ರಗೈಃಸೌಮ್ಯೈರ್ಲಗ್ನಪೋತಿ ಬಲಾನ್ವಿತಃ ।
ಸದೂವಿತ್ತಂ ಸದ್‌ಗುಣಾ ಚಾಪಿ ದೀರ್ಘಮಾಯುಃ ಪ್ರಯಚ್ಛಂತಿ ॥೭॥

ಲಗ್ನೇಶೆ ಸ್ವೋಚ್ಚರಾಶಿಸ್ಥೆ ಚಂದ್ರೆ ಲಾಭ ಸಮಾನ್ವಿತೆ ।
ರಂಧ್ರಸ್ಥಾನಗತೆ ಜೀವೆ ದೀರ್ಘಾಯುಷ್ಯಂ ನ ಸಂಶಯಃ ॥೮॥

ಏಷುಯೋ ಬಲವಾಂಸ್ತ್ವ ಸ್ಯಾನುಂ ಸಾರಾದ್ ದೈವವಿದ್ದರಃ ।
ವಿಚಾರ್ಯ ಬಹುದಾ ವಿದ್ವಾನ್ ಜಾತಕಸ್ಯಾಯುರಾ ದಿಶೇತ್ ॥೯॥

ಷಷ್ಠೇಶ ಅಥವಾ ವ್ಯಯೇಶ, ಷಷ್ಠ, ವ್ಯಯಸ್ಥಾನಗತರಾಗಿ ಅಥವಾ ಲಗ್ನ ಅಷ್ಟಮ ಸ್ಥಾನಗತರಾಗಿದ್ದರೂ ಜಾತಕ ದೀರ್ಘಾಯು ಆಗಿರುತ್ತಾನೆ. ಲಗ್ನೇಶ, ಅಷ್ಟಮೇಶ ಹಾಗೂ ಪಂಚಮೇಶ ತಮ್ಮ ಕ್ಷೇತ್ರ, ತಮ್ಮ ನವಾಂಶ ಅಥವಾ ಮಿತ್ರನ ಮನೆಯಲ್ಲಿದ್ದರೆ ಜಾತಕ ದೀರ್ಘಾಯುವೆಂದು ಹೇಳುವುದು. ಲಗ್ನೇಶ, ಅಷ್ಟಮೇಶ, ದಶಮೇಶ ಹಾಗೂ ಶನಿ ಕೇಂದ್ರ ತ್ರಿಕೋನ ಅಥವಾ ಲಾಭಸ್ಥಾನಗತರಾಗಿದ್ದರೆ ಕೂಡ ದೀರ್ಘಾಯುವೆಂದು ಹೇಳುವುದು. ಪ್ರಬಲ ಲಗ್ನೇಶ ಕೇಂದ್ರಗತನಾಗಿ ಶುಭಗ್ರಹ ನೋಡುತ್ತಿದ್ದರೆ ಧನ, ಗುರುವಿನಿಂದ ಯುಕ್ತವಾಗಿದ್ದರೆ ಜಾತಕ ದೀರ್ಘಾಯು ಆಗಿರುತ್ತಾನೆ. ಲಗ್ನೇಶ ತನ್ನ ಉಚ್ಚರಾಶಿಯಲ್ಲಿ, ಚಂದ್ರ ಲಾಭ ಸ್ಥಾನದಲ್ಲಿ ಹಾಗೂ ಗುರು ಅಷ್ಟಮ ಸ್ಥಾನಗತರಾಗಿದ್ದರೂ ಜಾತಕ ದೀರ್ಘಾಯುಯಾಗಿರುತ್ತಾನೆ.

ಇವುಗಳಲ್ಲಿ ಯಾವುದು ಪ್ರಬಲ ಯೋಗವೋ ತದನುಸಾರ ಪಂಡಿತನಾದ (ಅಭಿಜ್ಞ) ಜ್ಯೋತಿಷಿ ವಿಚಾರಿಸಿ ಫಲಾದೇಶ ನಿರ್ದೇಶಿಸುತ್ತಾನೆ.

## ಅಲ್ಪಾಯು ಯೋಗ

ಅಷ್ಟಮಾಧಿಪತೌ ಕೇಂದ್ರೇ ಲಗ್ನೇಶೇ ಬಲವರ್ಜಿತೇ ।
ವಿಂಶತ್ಯಬ್ದಾನಸೌ ಜೀವೇದ್ ದ್ವಾತ್ರಿಂಶತ್ಪರಮಾಯುಷಮ್ ॥೧೦॥

ರಂಧ್ರೇಶೇ ನೀಚರಾಶಿಸ್ಥೇ ರಂಧ್ರೇ ಪಾಪಗ್ರಹೈರ್ಯುತೇ ।
ಲಗ್ನೇಶೇ ದುರ್ಬಲೇ ಜಾತಃ ಸ್ವಲ್ಪಾಯುರ್ಭವತಿ ಧ್ರುವಮ್ ॥೧೧॥

ರಂಧ್ರೇಶೇ ಪಾಪಸಂಯುಕ್ತೇ ರಂಧ್ರೇ ಪಾಪಗ್ರಹಯುತೇ ।
ವ್ಯಯೋ ಕ್ರೂರ ಗ್ರಹೈರ್ಯುಕ್ತೇ ಜಾತಮಾತ್ರಂ ಮೃತಿರ್ಭವೇತ್ ॥೧೨॥

ಪಾಪಾಃ ಕೇಂದ್ರ ತ್ರಿಕೋಣಸ್ಥಾಃ ಸೌಮ್ಯಾಃ ಷಷ್ಠೇಷ್ಟಮೇಯದಿ ।
ನೀಚಸ್ಥ ರಂಧ್ರಪೆ ಲಗ್ನೇ ಜಾತಃ ಸದ್ಯೋಮೃತೋ ಭವೇತ್ ॥೧೩॥

ಪಂಚಮೇ ಪಾಪಸಂಯುಕ್ತೇ ರಂಧ್ರೇಶೇ ಪಾಪ ಸಂಯುತೇ ।
ರಂಧ್ರೇ ಪಾಪಗ್ರಹೈರ್ಯುಕ್ತೇ ಸ್ವಲ್ಪಾಯುಷ್ಯಃ ಪ್ರಜಾಯತೇ ॥೧೪॥

ರಂಧ್ರೇಶೇ ರಂಧ್ರ ರಾಶಿಸ್ಥೇ ಚಂದ್ರೇ ಪಾಪ ಸಮನ್ವಿತೇ ।
ಶುಭೈರದೃಷ್ಟೇ ಜಾತಸ್ಯ ಮಾಸಾಂತೇ ಚ ಮೃತಿರ್ಭವೇತ್ ॥೧೫॥

ಅಷ್ಟಮೇಶ ಕೇಂದ್ರಸ್ಥರಾಗಿ ಹಾಗೂ ಲಗ್ನೇಶ ನಿರ್ಬಲನಾಗಿದ್ದರೆ 30 ವರ್ಷದಿಂದ 32ರಲ್ಲಿ ಮೃತ್ಯು ಸಂಭವಿಸುತ್ತದೆ. ಅಷ್ಟಮೇಶ ನೀಚರಾಶಿಸ್ಥನಾಗಿ ಹಾಗೂ ಅಷ್ಟಮೇಶನೂ ಕೂಡ ಪಾಪಗ್ರಹಕ್ರಾಂತನಾಗಿ ಲಗ್ನೇಶ ನಿರ್ಬಲನಾಗಿದ್ದರೆ ನಿಶ್ಚಯಪೂರ್ವಕ ಜಾತಕ ಅಲ್ಪಾಯುಯಾಗುತ್ತಾನೆ. ಅಷ್ಟಮೇಶ ಹಾಗೂ ಅಷ್ಟಮ ಸ್ಥಾನ ಎರಡೂ ಪಾಪಕ್ರಾಂತ – ಪಾಪಯುಕ್ತರಾಗಿದ್ದರೂ 12ನೇ ಸ್ಥಾನವೂ ಪಾಪಯುಕ್ತವಾದರೆ ಜಾತಕನ ಜನ್ಮವಾದೊಡನೆ ಮೃತ್ಯುವನ್ನಪ್ಪುತ್ತಾನೆ. ಪಾಪಗ್ರಹ ಕೇಂದ್ರ ಅಥವಾ ತ್ರಿಕೋನ ಸ್ಥಿತನಾಗಿದ್ದರೆ ಹಾಗೂ ಶುಭಗ್ರಹ ಷಷ್ಠ ಅಥವಾ ಅಷ್ಟಮ ಗತರಾಗಿದ್ದರೆ ಹಾಗು ಶುಭಗ್ರಹ ಷಷ್ಠ ಅಥವಾ ಅಷ್ಟಮ ಗತರಾಗಿದ್ದರೆ ಹಾಗೂ ನೀಚರಾಶಿಸ್ಥ ಅಷ್ಟಮೇಶ–ಲಗ್ನಗತನಾಗಿದ್ದರೆ – ಜಾತಕನಿಗೆ ಶೀಘ್ರ ಮೃತ್ಯು ಹೇಳುವುದು. ಪಂಚಮ ಹಾಗೂ ಅಷ್ಟಮ ಪಾಪಕ್ರಾಂತವಾಗಿ ಹಾಗೂ ಅಷ್ಟಮೇಶನು ಪಾಪಯುಕ್ತನಾಗಿದ್ದರೆ ಜಾತಕ ಸ್ವಲ್ಪಾಯುವೆಂದು ಹೇಳುವುದು. ಅಷ್ಟಮೇಶ ಅಷ್ಟಮಸ್ಥನಾಗಿ, ಚಂದ್ರ ಪಾಪಗ್ರಹಯುಕ್ತ ಮತ್ತು ಚಂದ್ರ ಶುಭಗ್ರಹ ದೃಷ್ಟಿ ರಹಿತನಾಗಿದ್ದರೆ ಮಾಸಾಂತ್ಯದಲ್ಲಿ ಜಾತಕನ ಮೃತ್ಯು ಹೇಳವುದು.

ಅಷ್ಟಮದಿಂದ ಆಯುವಿಲ್ಲದೆ ಈ ಕೆಳಗಿನ ವಿಚಾರಗಳು ವಿಚಾರಣೀಯವೆ.

ದುರ್ಗಮ ಕಿಲ್ಲಾ – ಮೃತಧನ ಪಾರ್ವಾರ್ಜಿತ ಧನ ನಷ್ಟ ವಾರ್ಸಾದಂತೆ ಮೃತವ್ಯಕ್ತಿ ಧನ ಪ್ರಾಪ್ತ, ಭೂಗತ ಧನ – ಸಾಲ, ಸಾಲಭಾದೆ. ಮೃತ್ಯ ಕಾರಣ, ರಾಜದಂಡ ಶಿಕ್ಷೆ, ಉದ್ಯೋಗ, ಸೇನಾ ವಿರೋಧ, ಸ್ತ್ರೀ ಧನ, ಶಸ್ತ್ರಕ್ರಿಯಾ ಸಂಕಟ, ನೌಕರನ ಸಂಪತ್ತು – ಅಗ್ನಿ, ಜಲ ಇತ್ಯಾದಿ ಗಂಡ ಪಶುಗಂಡ – ವ್ಯಾಪಾರದಲ್ಲಿ ಕೀರ್ತಿ, ನಷ್ಟ, ಕುಸ್ತಿ ಪಂದ್ಯಾಟ ಜಯ, ಅಪಜಯಾದಿಗಳು ಮುಖ್ಯತೆ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅಷ್ಟಮ ಭಾವ ಫಲಾಧ್ಯಾಯ ಸಮಾಪ್ತಿಃ**

## ಅಥ ನವಮ (ಭಾಗ್ಯ) ಭಾವ ಫಲಾಧ್ಯಾಯಃ

ಅಥಕರ್ಣಾಯ ಮೈತ್ರೇಯ। ಭಾಗ್ಯಭಾವಫಲಂ ಪುನಃ ।
ಭಾಗ್ಯೇಶೆ ಸಬಲೆ ಭಾಗ್ಯೆ ಭಾಗ್ಯವಾಂ ಜಾಯತೆ ನರಃ ॥೧॥

ಧರ್ಮಸ್ಥಾನಗತೆ ಜೀವೇ ತದೀಶೆ ಕೇಂದ್ರ ಸಂಸ್ಥಿತೆ ।
ಲಗ್ನೇಶೆ ಬಲಸಂಯುಕ್ತೆ ಬಹು ಭಾಗ್ಯಯುತೋ ಭವೇತ್ ॥೨॥

ಭಾಗ್ಯೇಶೆ ಬಲಸಂಯುಕ್ತೆ ಭಾಗ್ಯೆ ಭೃಗು ಸಮನ್ವಿತೆ ।
ಜೀವೆ ಕೇಂದ್ರಗತೆ ಲಗ್ನಾತ್ ಪಿತಾ ಭಾಗ್ಯ ಸಮನ್ವಿತಃ ॥೩॥

ಭಾಗ್ಯಸ್ಥಾನದ್ ದ್ವಿತೀಯೇ ಸುಖೆ ಭೌಮಸಮನ್ವಿತೆಃ ।
ಭಾಗ್ಯೇಶೆ ನೀಚರಾಶಿಸ್ಥೆ ಪಿತಾ ನಿರ್ಧನ ಏವ ವೈ ॥೪॥

ಭಾಗ್ಯೇಶೆ ಪರಮೋಚ್ಚಸ್ಥೆ ಭಾಗ್ಯಾಂಶೆ ಜೀವಸಂಯುತೆ ।
ಲಗ್ನಾಚ್ಚತುಷ್ಪಯೇ ಶುಕ್ರೆ ದೀರ್ಘಜೀವೀ ಪಿತಾ ಭವೇತ್ ॥೫॥

ಭಾಗ್ಯೇಶೆ ಕೇಂದ್ರ ಭಾವಸ್ಥೆ ಗುರುಣಾ ಚ ನೀರೀಕ್ಷಿತೆ ।
ತತ್ಪಿತಾ ವಾಹನೈರ್ಯುಕ್ತೋರಾಜಾ ವಾ ತತ್ಸಮೋ ಭವೇತ್ ॥೬॥

ಭಾಗ್ಯೇಶೆ ಕರ್ಮಭಾವಸ್ಥೆ ಕರ್ಮೇಶೆ ಭಾಗ್ಯರಾಶಿಗೆ ।
ಶೌಭ್ಯೇಕ್ಷಿತೆ ಧನಾಢ್ಯಶ್ಚ ಕೀರ್ತಿಮಾಂಸ್ತತ್ ಪಿತಾ ಭವೇತ್ ॥೭॥

ಪರಾಶರರು ಹೇಳಿದರು –

ಹೇ ಮೈತ್ರೇಯನೇ ಈಗ ಭಾಗ್ಯಸ್ಥಾನದ (ನವಮ) ಫಲ ಹೇಳುತ್ತೇನೆ. ಭಾಗ್ಯೇಶನು ಭಾಗ್ಯಸ್ಥಾನಗತನಾಗಿದ್ದರೆ ಜಾತಕನು ಭಾಗ್ಯಶಾಲಿಯೆಂದು ಪರಿಗಣಿಸುವುದು ಗುರುವು ಭಾಗ್ಯಸ್ಥಾನದಲ್ಲಿದ್ದು ಭಾಗ್ಯೇಶ ಕೇಂದ್ರಸ್ಥನಾಗಿದ್ದರೆ ಹಾಗೂ ಲಗ್ನೇಶ ಪ್ರಬಲನಾಗಿದ್ದರೆ ಆ ಜಾತಕ ಪೂರ್ಣ ಬಲಶಾಲಿಯಾಗಿರುತ್ತಾನೆ. ಬಲಿಷ್ಠ ಭಾಗ್ಯೇಶ ಶುಕ್ರಯುಕ್ತನಾಗಿ ಭಾಗ್ಯಗತನಾದರೆ ಹಾಗೂ ಗುರು ಲಗ್ನದಿಂದ ಕೇಂದ್ರ ಸ್ಥಾನದಲ್ಲಿದ್ದರೆ ಜಾತಕನ ತಂದೆ ಭಾಗ್ಯವಂತನಾಗಿರುತ್ತಾನೆ. ಭಾಗ್ಯಸ್ಥಾನದಿಂದ ಎರಡನೇ ಅಥವಾ ನಾಲ್ಕನೇ (ದಶಯ ವ್ಯಯ) ಸ್ಥಾನದಲ್ಲಿ ಮಂಗಳನಿದ್ದು ಹಾಗೂ ಭಾಗ್ಯೇಶ ತನ್ನ ನೀಚರಾಶಿ ಗತನಾಗಿದ್ದರೆ ಜಾತಕನ ತಂದೆ ನಿರ್ಧನನಾಗಿರುತ್ತಾನೆ –

ಭಾಗ್ಯೇಶ ಪರಮೋಚ್ಚ ಸ್ಥಾನಸ್ಥನಾಗಿ ಭಾಗ್ಯಭಾವ ನವಾಂಶಗತ ಗುರುವಿದ್ದರೆ ಹಾಗೂ ಲಗ್ನದಿಂದ ಕೇಂದ್ರದಲ್ಲಿ ಶುಕ್ರನಿದ್ದರೆ ಜಾತಕನ ತಂದೆ ದೀರ್ಘಾಯುವಾದ ಶ್ರೀಮಂತನಾಗಿರುತ್ತಾನೆ. ಕೇಂದ್ರಸ್ಥಿತ ಭಾಗ್ಯೇಶ ಶುಕ್ರ ದೃಷ್ಟರಾಗಿದ್ದರೆ ಜಾತಕನ ತಂದೆ ವಾಹನ ಯುಕ್ತನಾಗಿ ರಾಜ ಸಮಾನ – ಯೋಗವುಳ್ಳವನಾಗಿರುತ್ತಾನೆ. ಕರ್ಮ ಭಾಗ್ಯೇಶು ಪರಿವರ್ತನ (ಸ್ಥಾನ) ಮಾಡಿ ಶುಭಗ್ರಹ ದೃಷ್ಟಿಯಲ್ಲಿದ್ದರೆ ಧನಾಢ್ಯ ಯೋಗ (ಕರ್ಮಪತಿಭಾಗ್ಯ) ಭಾಗ್ಯಾಧಿಪ ಶುಕ್ರ.

## ಪಿತೃಭಕ್ತಿ ಯೋಗ

ಪರಮೋಚ್ಚಾಂಶಗೆ ಸೂರ್ಯೇ ಭಾಗ್ಯೇಶೆ ಲಾಭಸಂಸ್ಥಿತೆ ।
ಧರ್ಮಿಷ್ಠೋ ನೃಪವಾತ್ಸಲ್ಯಃ ಪಿತೃಸೇವೀ ಭವೆನ್ನರಃ ॥೮॥

ಲಗ್ನಾತ್ ತ್ರಿಕೋಣಗೆ ಸೂರ್ಯೇ ಭಾಗ್ಯೇಶೆ ಸಪ್ತಂಥಿತೆ ।
ಗುರುಣಾ ಸಹಿತೆ ದೃಷ್ಟೆ ಪಿತೃಭಕ್ತಿ ಸಮನ್ವಿತಃ ॥೯॥

ಸೂರ್ಯ ತನ್ನ ಪರಮೋಚ್ಚಾಂಶ(ಮೇಷದಲ್ಲಿ 10$^0$)ದಲ್ಲಿದ್ದು ಭಾಗ್ಯೇಶನು ಲಾಭಸ್ಥಾನಗತನಾಗಿದ್ದರೆ, ಜಾತಕ ಧರ್ಮಿಷ್ಠ ರಾಜಪ್ರಿಯ ಹಾಗೂ ಪಿತೃಸೇವಿತರಾಗುತ್ತಾರೆ. ಲಗ್ನದಿಂದ ನವಮ, ಪಂಚಮದಲ್ಲಿ ಸೂರ್ಯನಿದ್ದ ಸಪ್ತಮ ಸ್ಥಾನಗತ ಭಾಗ್ಯೇಶ ಗುರುವಿನಿಂದ ಯುತನಾದರೆ ಅಥವಾ ದೃಷ್ಟನಾದರೆ ಜಾತಕ ಪಿತೃಭಕ್ತಿಯುಳ್ಳವನಾಗಿರುತ್ತಾನೆ.

ಭಾಗ್ಯೇಶೆ ಧನ ಭಾವಸ್ಥೆ ಧನೇಶೆ ಭಾಗ್ಯ ರಾಶಿಗೆ ।
ದ್ವಾತ್ರಿಂಶಾತ್ಪರತೋ ಭಾಗ್ಯಂ ವಾಹನಂ ಕೀರ್ತಿ ಸಂಭವಃ ॥೧೦॥

ಭಾಗ್ಯೇಶ ಧನಭಾವಗತ ಹಾಗೂ ಧನೇಶ ಭಾಗ್ಯಸ್ಥಾನಗತರಾಗಿದ್ದರೆ 32ನೇ ವರ್ಷಾಂತರ ಜಾತಕ ವಾಹನ ಸೌಖ್ಯ ಪಡೆದು ಜೀವನದಲ್ಲಿ ಯಶಸ್ಸು ಪಡೆಯುತ್ತಾನೆ.

## ಪಿತೃಶಾತ್ರವ ಯೋಗ

ಲಗ್ನೇಶೆ ಭಾಗ್ಯ ರಾಶಿಸ್ಥೆ ಷಷ್ಠೇಪಿ ಚ ತತ್ರಗೆ ।
ಅನ್ಯೋನ್ಯ ವೈರಂ ಧ್ರುವತೆ ಜನಕಃ ಕತ್ಸಿತೋ ಭವೇತ್ ॥೧೧॥

ಷಷ್ಠೇಶಯುಕ್ತ ಲಗ್ನೇಶ ಭಾಗ್ಯ ರಾಶಿಸ್ಥನಾಗಿದ್ದು – ಅಂತಹ ಜಾತಕ ತಂದೆ ಯೋಚನೆ ಶತ್ರುತ್ವ ಭಾವ ಹೊಂದಿರುತ್ತಾನೆ ಹಾಗೂ ತಂದೆ ಕತ್ಸಿಕ ಸ್ವಭಾವದವ ನಿರುತ್ತಾನೆ.

## ಭಿಕ್ಷಾಶಿತ್ವಯೋಗ

ಕರ್ಮಾಧಿಪೇನ ಸಹಿತೋ ವಿಕ್ರಮೇಶೋತಿ ನಿರ್ಬಲಃ ।
ಭಾಗ್ಯೇಶೋ ನೀಚಗೋ ವಾಸ್ತೋಯೋಗೊ ಭಿಕ್ಷಾಶನೋ ಮತಃ ॥೧೨॥

ಅತಿ ದುರ್ಬಲನಾದ ತೃತೀಯೇಶ ದಶಮೇಶನ ಜೊತೆಗೆ ಭಾಗ್ಯೇಶ ತನ್ನ ನೀಚರಾಶಿಯಲ್ಲಿ ಅಥವಾ ಅಸ್ತನಾಗಿದ್ದರೆ ಜಾತಕ ಭಿಕ್ಷಾಟನ ಶೀಲ (ಭಿಕ್ಷಾನ್ನದಿಂದ ಬದುಕುವವ)ನಾಗಿರುತ್ತಾನೆ.

## ಪಿತೃಮರಣ ಯೋಗ

ಷಷ್ಠಾಷ್ಟಮ–ವ್ಯಯೋ ಭಾನೌ ರಂಧ್ರೇಶೆ ಭಾಗ್ಯ ಸಂಯುತೆ ।
ವ್ಯಯೇಶೆ ಲಗ್ನರಾಶಿಸ್ಥೆ ಪಂಚಮಸ್ಥೆ ತು ಷಷ್ಠಪೆ ॥೧೩॥

ಜಾತಸ್ಯ ಜನನಾತ್ ಪೂರ್ವಜನಕಸ್ಯ ಮೃತಿರ್ಭವೇತ್ ।
ರಂಧ್ರಸ್ಥಾನಗತೆ ಸೂರ್ಯೇ ರಂಧ್ರೇಶೆ ಭಾಗ್ಯಗೆ ಸತಿ ॥೧೪॥

ಜಾತಸ್ಯ ಪ್ರಥಮಾಬ್ದೆ ತು ಪಿತುರ್ಮರಣಮಾದಿಶೇತ್ ।
ವ್ಯಯೇಶೆ ಭಾಗ್ಯರಾಶಿಸ್ಥೆ ನೀಚಾಂಶೆ ಭಾಗ್ಯನಾಯಕೆ ॥೧೫॥

ತೃತೀಯೇ ಷೋಡಶೆ ವರ್ಷೆ ಜನಕಸ್ಯ ಮೃತರ್ಭವೇತ್ ।
ಲಗ್ನೇಶೆ ನಾಶರಾಶಿಸ್ಥೆ ರಂಧ್ರೇಶೆ ಭಾನುಸಂಯುತೆ ॥೧೬॥

ದ್ವಿತೀಯೇ ದ್ವಾದಶೆ ವರ್ಷೆ ಪಿತುರ್ಮರಣಮಾದಿಶೇತ್ ।
ಭಾಗ್ಯದ್ರಂಧ್ರಗತೆ ರಾಹೌ ಭಾಗ್ಯಾದ್ ಭಾಗ್ಯಗತೆ ರವೌ ॥೧೭॥

ಷೋಡಶೆಷ್ಟಾದಶೆ ವರ್ಷೆ ಜನಕಸ್ಯ ಮೃತಿರ್ಭವೇತ್ ।
ರಾಹುಣಾ ಸಹಿತೆ ಸೂರ್ಯೋ ಚಂದ್ರಾದ್ ಭಾಗ್ಯಗತೆ ಶನೌ ॥೧೮॥

ಸಪ್ತಮ್ಯೆಕೋನವಿಂಶಾಬ್ದೆ ತಾತಸ್ಯ ಮರಣಂ ಧ್ರುವಮ್ ।
ಭಾಗ್ಯೇಶೆ ವ್ಯಯರಾಶಿಸ್ಥೆ ವ್ಯಯೇಶೆ ಭಾಗ್ಯರಾಶಿಗೆ ॥೧೯॥

ವರ್ಷೆ ವೇದರ್ಣವಮಿತೆ ಪಿತುರ್ಮರಣಮಾದಿಶೇತ್ ।
ರವ್ಯಂಶೆ ಚ ಸ್ಥಿತೆ ಚಂದ್ರೆ ಲಗ್ನೇಶೆ ರಂಧ್ರಸಂಯುತೆ ॥೨೦॥

ಪಂಚತ್ರಿಂಶೆ ವೈಕಚತ್ವಾರಿಂಶದ್ವರ್ಷೆ ಮೃತಿಃ ಪಿತುಃ ।
ಪಿತೃಸ್ಥಾನಾಧಿಪೆ ಸೂರ್ಯೇ ಮಂದ ಭೌಮ ಸಮಾನ್ವಿತೆ ॥೨೧॥

ಪಂಚಶದ್ – ವತ್ಸರೆ ಪ್ರಾಪ್ತೆ ಜನಕಸ್ಯ ಮೃತಿಃ ಭವೇತ್ ।
ಭಾಗ್ಯಾತ್ ಸಪ್ತಮಗೆ ಸೂರ್ಯೇ ರಾಹೌ ಭ್ರಾತುರ್ನಗಸ್ಥಿತೆ ॥೨೨॥

ಷಷ್ಟೆ ವಾ ಪಂಚವಿಂಶೇಬ್ದೆ ಪಿತುರ್ಮರಣಮಾಧಿಶೇತ್ ।
ರಂಧ್ರು ಜಾಮಿತ್ರಗೆ ಮಂದೆ ಮಂದೆ ಜ್ಞಾಮಿತ್ರಗೆ ರಪೌ ॥೨೩॥

ತ್ರಿಂಶೇಬ್ದೆ ಏಕವಿಂಶೋ – ಷಡ್‌ವಿಂಶೆ ವಾ ನಿಧನಂ ಪಿತುಃ ।
ಭಾಗ್ಯೇಶೆ ನೀಚರಾಶಿಸ್ಥೆ ತದೀಶೆ ಭಾಗ್ಯರಾಶಿಗೆ ॥೨೪॥

ಷಡ್‌ವಿಂಶೆ ವಾ ತ್ರಯಸ್ತ್ರಿಂಶೆ ಪಿತುರ್ಮರಣಮಾದಿಶೇತ್ ।

6, 8, 12 ಸ್ಥಾನಗಳಲ್ಲಿ ಸೂರ್ಯ ಭಾಗ್ಯಸ್ಥಾನದಲ್ಲಿ ಅಷ್ಟಮೇಶ, ಲಗ್ನದಲ್ಲಿ ವ್ಯಯೇಶ, ಪಂಚಮದಲ್ಲಿ ಷಷ್ಠೇಶರಿದ್ದರೆ ಜಾತಕನ ಜನ್ಮ ಪೂರ್ವ ತಂದೆಯ ಮರಣ. ಸೂರ್ಯ ಅಷ್ಟಮದಲ್ಲಿ, ಅಷ್ಟಮೇಶ ನವಮದಲ್ಲಿದ್ದರೆ ಜಾತಕನ ಜನ್ಮ ಪೂರ್ವವೇ ತಂದೆಯ ಮರಣವಾಗಿರುತ್ತದೆ. ಅದರಂತೆ ಭಾಗ್ಯದಲ್ಲಿ ವ್ಯಯೇಶ ಹಾಗೂ ಭಾಗ್ಯೇಶ ತನ್ನ ನೀಚಾಂಶದಲ್ಲಿದ್ದರೆ 3 ಅಥವಾ 16ನೇ ವರ್ಷದಲ್ಲಿ ತಂದೆಯ ಮರಣ ಹೇಳುವುದು.

ಲಗ್ನೇಶ ಅಷ್ಟಮದಲ್ಲಿ ಹಾಗೂ ಅಷ್ಟಮೇಶ ಸೂರ್ಯನ ಸಹಿತ ಅಥವಾ ಸೂರ್ಯ ಭಾಗ್ಯದಲ್ಲಿದ್ದರೆ 2 ಅಥವಾ 12ನೇ ವರ್ಷದಲ್ಲಿ ಮೃತ್ಯು (ತಂದೆಯ) ಭಾಗ್ಯದಿಂದ ಅಷ್ಟಮ (ಲಗ್ನದಿಂದ ನಾಲ್ಕನೇ ಮನೆ)ಯಲ್ಲಿ ರಾಹು ಭಾಗ್ಯಸ್ಥಾನದ ನವಮ (ಪಂಚಮ)ದಲ್ಲಿ ಸೂರ್ಯನಿದ್ದರೆ 16ನೇ ವರ್ಷ ಅಥವಾ 18ರಲ್ಲಿ ತಂದೆಯ ಮೃತ್ಯು – ರಾಹುವಿನ ಜೊತೆ ಸೂರ್ಯ ಹಾಗೂ ಚಂದ್ರನಿಂದ ನವಮಸ್ಥ ಶನಿ ಇದ್ದರೆ 7 ಅಥವಾ 19ನೇ ವರ್ಷದಲ್ಲಿ ನಿಶ್ಚಿತ ಪಿತೃವಿನ ಮೃತ್ಯು ಹೇಳುವುದು. ಭಾಗ್ಯೇಶ 12ರಲ್ಲಿ ವ್ಯಯೇಶ ಭಾಗ್ಯದಲ್ಲಿ ಇದ್ದರೆ 44ನೇ ವರ್ಷದಲ್ಲಿ ಪಿತೃ ಮರಣ ಹೇಳುವುದು. ಸೂರ್ಯ ನವಾಂಶದಲ್ಲಿ ಚಂದ್ರ ಹಾಗೂ ಲಗ್ನೇಶ ಅಷ್ಟಮ ಸ್ಥಾನದಲ್ಲಿದ್ದರೆ 35 ಅಥವಾ 41ರಲ್ಲಿ ತಂದೆಯ ಮರಣ. ದಶಮೇಶನಾದ ಸೂರ್ಯ (ವೃಶ್ಚಿಕ ಲಗ್ನ) ಶನಿಯ ಅಥ ಮಂಗಳನ ಜೊತೆಗೆ ಇದ್ದರೆ ಜನ್ಮದಿಂದ 50ನೇ ವರ್ಷಕ್ಕೆ ತಂದೆಯ ಮರಣ ಭಾಗ್ಯದಿಂದ ಸಪ್ತಮ(ಲಗ್ನದಿಂದ ತೃತೀಯ)ದಲ್ಲಿ ರವಿ ಭಾಗ್ಯದಲ್ಲಿ ರಾಹು (ಸಮ ಸಪ್ತಕ ಯೋಗ ರ. ರಾ) ಇದ್ದರೆ 6 ಇಲ್ಲವೆ 25ರಲ್ಲಿ ತಂದೆಯ ಮರಣ. 8ರಿಂದ7ನೇ ಮನೆ (ಲಗ್ನದಿಂದ ದ್ವಿತೀಯ)ದಲ್ಲಿ ಶನಿ – ಅಷ್ಟಮದಲ್ಲಿ ರವಿ ಇದ್ದರೆ (ಸಮಸಪ್ತಕ ರ.ಶ) 30, 21, 26ರಲ್ಲಿ ಪಿತೃಮರಣ

ಹೇಳುವುದು. ಭಾಗ್ಯೇಶ ನೀಚರಾಶಿಸ್ಥನಾಗಿ – ಭಾಗ್ಯೇಶನ ನೀಚರಾಶಿ ಸ್ವಾಮಿ ಭಾಗ್ಯದಲ್ಲಿ ಇದ್ದರೆ 26ರಿಂದ 33ನೇ ವರ್ಷದಲ್ಲಿ ಮರಣ.

## ಭಾಗ್ಯೋದಯ ಕಾಲ

ಪರಮೋಚ್ಚಾಂಶಗೆ ಶುಕ್ರೆ ಭಾಗ್ಯೇಶೇನ ಸಮನ್ವಿತೆ ॥೨೫॥

ಭ್ರಾತೃಸ್ಥಾನೆ ಶನಿಯುತೆ ಬಹುಭಾಗ್ಯಧಿಪೋ ಭವೇತ್ ।
ಗುರುಣಾಂ ಸಂಯುತೆ ಭಾಜ್ಯೆ ತದೀಶೆ ಕೇಂದ್ರ ರಾಶಿಗೆ ॥೨೬॥

ವಿಂಶಾದ್‌ವರ್ಷಾತ್ಪರಂ ಚೈವ ಬಹುಭಾಗ್ಯಂ ವಿನಿರ್ದಿಶೇತ್ ।
ಪರಮೋಚ್ಚಾಂಶಗೆ ಸೌಮ್ಯೆ ಭಾಗ್ಯೇಶೆ ಭಾಗ್ಯರಾಶಿಗೆ ॥೨೭॥

ಷಟ್‌ತ್ರಿಂಶಾಚ್ಚ ಪರಂ ಚೈವ ಬಹುಭಾಗ್ಯಂ ವಿನಿರ್ದಿಶೇತ್ ।
ಲಗ್ನೇಶೆ ಭಾಗ್ಯರಾಶಿಸ್ಥೆ ಭಾಗ್ಯೇಶೆ ಲಗ್ನಸಂಯುತೆ ॥೨೮॥

ಗುರುಣಾಂ ಸಂಯುತೆ ಲಾಭಃ ಸ್ಯಾದ್‌ನಯಾನಯೋಃ ।

ಶುಕ್ರ ತನ್ನ ಮರಮೋಚ್ಚಾಂಶದಲ್ಲಿ ಭಾಗ್ಯೇಶನೊಂದಿಗಿದ್ದರೆ ಹಾಗೂ 3ನೇ ಸ್ಥಾನ ಶನಿಯುಕ್ತವಾಗಿದ್ದರೆ ಜಾತಕನ ಬಹುಭಾಗ್ಯಶಾಲಿಯಾಗುತ್ತಾನೆ. ಭಾಗ್ಯದಲ್ಲಿ ಗುರು ಹಾಗೂ ಭಾಗ್ಯೇಶ ಕೇಂದ್ರದಲ್ಲಿದ್ದರೆ 20ನೇ ವರ್ಷದ ಅವಸ್ಥೆಯಲ್ಲಿ ಭಾಗ್ಯೋದಯ (ಅಥವಾ 20ರ ನಂತರ) ಬುಧ ತನ್ನ ಪರಮೋಚ್ಚಾಂಶ, ಭಾಗ್ಯೇಶ ನವಮಗತರಾದರೆ 36ನೇ ವರ್ಷಕ್ಕೆ ಭಾಗ್ಯೋದಯ ಲಗ್ನೇಶ ಭಾಗ್ಯಸ್ಥಾನಗತ ಭಾಗ್ಯೇಶ ಲಗ್ನದಲ್ಲಿ ಸಪ್ತಮದಲ್ಲಿ ಗುರು ಇದ್ದರೆ ಧನ, ವಾಹನ ಪ್ರಾಪ್ತಿ ಹೇಳುವುದು.

## ದೌರ್ಭಾಗ್ಯ ಯೋಗಃ

ಭಾಗ್ಯಾದ್ ಭಾಗ್ಯಗತೆ ರಾಹೌ ಭಾಗ್ಯೇಶೆ ನಿಧನಂ ಗತೆ ॥೨೯॥

ಅಥವಾ ನೀಚರಾಶಿಸ್ಥೆ ಭಾಗ್ಯಹೀನೋ ಭವೆನ್ನರಃ ।
ಭಾಗ್ಯಸ್ಥಾನಗತೆ ಮಂದೆ ಶಶಿನಾಚ ಸಮನ್ವಿತಾ ॥೩೦॥

ಲಗ್ನೇಶೆ ನೀಚರಾಶಿಸ್ಥೆ ಭಿಕ್ಷಾಶಿ ಚ ನರೋಭವೇತ್ ।
ಜ್ಞೇಯ ಮಿತ್ಥಂ ಫಲಂ ಭಾಗ್ಯೇಶಾಂಗೆ ಶಾವಷ್ಠಿತೇರ್ವಶಾತ್ ॥೩೦॥

ಭಾಗ್ಯದಿಂದ ನವಮದಲ್ಲಿ (ಲಗ್ನದಿಂದ ಪಂಚಮ) ರಾಹು ಭಾಗ್ಯೇಶ ಅಷ್ಟಮ ಅಥವಾ ನೀಚರಾಶಿಸ್ಥನಾಗಿದ್ದರೆ ಮನುಷ್ಯ ಭಾಗ್ಯಹೀನನಾಗುತ್ತಾನೆ. ಶನಿ ಭಾಗ್ಯದಲ್ಲಿ

ಚಂದ್ರಯುಕ್ತ ಹಾಗೂ ಲಗ್ನೇಶ ನೀಚರಾಶಿ ಗತನಾಗಿದ್ದರೆ ಜಾತಕ ಭಿಕ್ಷೆ ಬೇಡುವ ಪ್ರಸಂಗ ಬರುತ್ತದೆ. ಈ ರೀತಿ ಭಾಗ್ಯೇಶ, ಲಗ್ನೇಶರ ಮೇಲಿಂದ ಭಾಗ್ಯದ ಫಲ ಹೇಳುವುದು.

ವಿಮರ್ಶೆ: ಭಾಗ್ಯದ ವಿಮರ್ಶೆ ಮಾಡುವಾಗ ಭಾಗ್ಯಕ್ಕೆ ಸಂಬಂಧಿಸಿದ ಲಗ್ನ ಧನ ಸುಖ, ನವಮ, ದಶಮ, ಏಕಾದಶ ಭಾವಗಳನ್ನು ಧ್ಯಾನದಲ್ಲಿಡುವುದು. ಅವಕ್ಕೂ ಭಾಗ್ಯಕ್ಕೂ ನೇರ ಸಂಬಂಧವಿದೆ.

ಭಾಗ್ಯಪ್ರಪ್ತಿ ಧನ
ಸರ್ವಮೂಲ
ಲಾಭ ಭಾಗ್ಯ
ತೃತೀಯ
ಭಾಗ್ಯ ಸುಬಾದಾರ
ಎಲ್ಲವೂ ಕರ್ಮಾಧಾರ
ಪಂಚಮ
ಭಾಗ್ಯ

| ಭಾಗ್ಯ | ಕರ್ಮಾಧಾರ | ಲಾಭ ಭಾಗ್ಯ | |
|---|---|---|---|
| | ದತ್ತ ಕುಂಡಲಿ ಕರ್ಕ ಲಗ್ನ | | ಸರ್ವ ಮೂಲ |
| | | | ಭಾಗ್ಯ ಪ್ರಾಪ್ತಿ |
| | ವ | ಭಾಗ್ಯ | ತೃತೀಯ |

ಈ ಭಾವಗಳಂತೆ – ಭಾಗ್ಯಕಾರಕ ಗುರುವನ್ನು ಹಾಗೂ ಧನಕಾರಕ ಶುಕ್ರನನ್ನು – ಭಾಗ್ಯ ನೋಡುವಾಗ ಪರಿಶೀಲಿಸುವುದು. ಸುಖಸ್ಥಾನ ಪೂರ್ವಜನ್ಮ → ಭಾಗ್ಯ (ಅಂದರೆ ಆ ಕರ್ಮಫಲ) ತೋರಿಸುವುದು ಕರ್ಮಸ್ಥಾನ. ಈ ಜನ್ಮದ ಪಾಪಪುಣ್ಯ ತೋರುತ್ತದೆ. ಅವೆರಡರ ಗಳಿಕೆ ಲಾಭ ತೋರುತ್ತದೆ. ಲಗ್ನವಂತೂ ಎಲ್ಲದಕ್ಕೂ ಮೂಲಬಿಂದುವಾದರೆ ದ್ವಿತೀಯನೇ ಧನ. ಈ ಭಾಗಗಳಿಲ್ಲದ ಗ್ರಹ ಭಾವಾಧಿ ಪರಸ್ಥಾನ – ವಿಮರ್ಶಿಸಿ ಫಲ ಹೇಳುವುದು ಅತಿ ಅವಶ್ಯಕವಾಗಿದೆ.

ಅದರಂತೆ ಪಂಚಮ ಭಾವ – ಭಾಗ್ಯದ ಅನುಭವಿಸುವಿಕೆಗೂ ಭಾಗ್ಯದಿಂದ ಭಾಗ್ಯವಾಗುವುದರಿಂದ ಅತಿ ಮಹತ್ವವೇ. ಅದರಂತೆ ತೃತೀಯ ಭಾವ ನೇರ ಸಂಬಂಧ ಹೊಂದಿರುತ್ತದೆ. ಹೀಗಾಗಿ ಆ ಭಾವಗಳನ್ನು ಗಣನೆಗೆ ತೆಗೆದುಕೊಳ್ಳುವುದು ಅತಿ ಅವಶ್ಯವಾಗಿದೆ.

## ಭಾಗ್ಯ ದೌರ್ಭಾಗ್ಯದಲ್ಲಿ ಪ್ರಮುಖ ಅಂಶಗಳು

1) ಭಾಗ್ಯೇಶ ಗುರು, ಶುಕ್ರ ಸಪಾಪರಾಗಿ ತ್ರಿಕ್ (3, 6, 8)ರಲ್ಲಿದ್ದರೆ ಮನುಷ್ಯ ಭಾಗ್ಯಹೀನನಾಗುತ್ತಾನೆ. 3ನೇ ಸ್ಥಾನದಲ್ಲಿದ್ದ ಭಾಗ್ಯದ ಮೇಲೆ ದೃಷ್ಟಿಯಿರುವುದ

ರಿಂದ ವಿಮರ್ಶಿಸಿ ಫಲ ಹೇಳುವರು. ಈ ಗ್ರಹಗಳೇ ಕೇಂದ್ರ ತ್ರಿಕೋನದಲ್ಲಿದ್ದರೆ – ಶುಭಗ್ರಹ ದೃಷ್ಟಿತರಾಗಿದ್ದರೆ ಮನುಷ್ಯ ಭಾಗ್ಯಶಾಲಿಯಾಗಿರುತ್ತಾನೆ.

2) ನವಮೇಶ ಕೇಂದ್ರಗತನಾಗಿ ನವಮದಲ್ಲಿ ಶುಭಗ್ರಹ ಅಥವಾ ಶುಭದೃಷ್ಟಿ ಅಥವಾ ನವಮೇಶನ ದೃಷ್ಟಿಯಿದ್ದರೆ ಜಾತಕ ಭಾಗ್ಯಶಾಲಿ – ಇಲ್ಲಿ ನವಮೇಶ ಯಾವ ರಾಶಿಯಲ್ಲಿರುವನೋ ಆ ರಾಶಿ ಸ್ವಾಮಿ ಭಾವಕಾರಕನಾಗುವನು.

ನವಮೇಶ ಭಾಗ್ಯಕಾರಕನಾದರೆ ಲಗ್ನೇಶ ಭಾಗ್ಯ ಸೂಚಕನಾಗುತ್ತಾನೆ. ಭಾಗ್ಯೇಶ, ಲಗ್ನೇಶ, ನವಮೇಶನಿದ್ದ ರಾಶೀಶರ ಮೇಲಿಂದ ಭಾಗ್ಯ ನಿರ್ದೇಶಿಸುವುದು – ಅದರಂಮತೆ ಭಾಗ್ಯದಲ್ಲಿದ್ದ ಗ್ರಹವನ್ನು ಅವಲೋಕಿಸುವುದು.

3) ಲಗ್ನ ಪಂಚಮ ದ್ವಿತೀಯದಲ್ಲಿ ಬಲವಾದ ಗ್ರಹವಿದ್ದರೆ ಜಾತಕ ಭಾಗ್ಯಶಾಲಿ ಯಾಗುತ್ತಾನೆ.

4) ಭಾಗ್ಯೇಶನಂತೆ ಧನೇಶನು ಧನ ಹಾಗೂ ಕರ್ಮದಲ್ಲಿದ್ದರೂ ಧನಾಢ್ಯ ನಾಗುತ್ತಾನೆ. ಧನವನ್ನು – ಭಾಗ್ಯದ ದ್ವಿತೀಯ ಲಕ್ಷಣವೆಂದು ಪರಿಗಣಿಸುತ್ತೇವೆ.

5) ಚತುರ್ಥೇಶ, ನವಮೇಶ ದ್ವಿತೀಯಸ್ಥಾನದಲ್ಲಿದ್ದರೆ ಅಥವಾ ಶುಕ್ರ, ಗುರು ದ್ವಿತೀಯದಲ್ಲಿದ್ದರೆ ಮನುಷ್ಯ ಪೂರ್ಣ ಧನಿ ಎನ್ನಿಸಿಕೊಳ್ಳುತ್ತಾನೆ. ಧನವೇ ಭಾಗ್ಯವಲ್ಲದಿದ್ದರೂ ಅದನ್ನು ಭಾಗ್ಯದ ದ್ವಿತೀಯ ಲಕ್ಷಣವೆಂದು ಪರಿಗಣಿಸಲಾಗಿದೆ.

6) ದ್ವಿತೀಯೇಶ, ನವಮೇಶ ಕೇಂದ್ರಗತರಾಗಿದ್ದರೂ ಅವರ ಶುಭ ದೃಷ್ಟಿ – ಶುಭ ಸಂಯೋಗವಿದ್ದರೂ ಪೂರ್ಣಧನವಂತನೆನ್ನಿಸಿಕೊಳ್ಳುತ್ತಾನೆ.

7) ನವಮೇಶ ಲಗ್ನಗತನಾಗಿ ಬೃಹಸ್ಪತಿಯಿಂದ ದೃಷ್ಟಿತನಾದರೆ – ಆ ವ್ಯಕ್ತಿ ಭಾಗ್ಯದಲ್ಲಿ ರಾಜ್ಯವಂದಿತನಾಗಿರುತ್ತಾನೆ. ಲಗ್ನೇಶ – ಚತುರ್ಥೇಶ ತಮ್ಮ ಸ್ಥಾನ ನೋಡುತ್ತಿದ್ದರೆ ಮನುಷ್ಯ ಪೂರ್ಣ ಸಂಪತ್ತಶಾಲಿಯಾಗಿ ಭಾಗ್ಯವಂತನಾಗಿರುತ್ತಾನೆ.

8) ಧನೇಶ ಧನದಲ್ಲಿ ಚತುರ್ಥೇಶ ಚತುರ್ಥದಲ್ಲಿ ಲಗ್ನೇಶ, ನವಮೇಶ ನೊಂದಿಗೆ ಲಗ್ನದಲ್ಲಿದ್ದರೆ – ಶ್ರೇಷ್ಠ ವ್ಯಕ್ತಿಯಾಗಿ ಸಿಂಹಾಸನ ಭಾಗಿಯಾಗಿ ಭಾಗ್ಯವಂತನಾಗಿರುತ್ತಾನೆ.

9) ಗುರು, ಶುಕ್ರ ಇಬ್ಬರೂ ಕೇಂದ್ರ ತ್ರಿಕೋನ ಅಥವಾ ಲಾಭದಲ್ಲಿದ್ದರೆ (1, 4, 7, 10, 5, 9, 11) ಅದು ಸುಖೇಶನ ಸಹಿತವಾಗಿದ್ದರೆ – ಮನೆ, ವಾಹನ, ಭೂಮಿಸಹಿತ ರಾಜನಂತೆ ಸುಖಿಯಾಗಿರುತ್ತಾನೆ. (ಭಾಗ್ಯವಂತ).

10) ಭಾಗ್ಯೇಶ ತ್ರಿಕ್‌ದಲ್ಲಿ ಗುರು ದೃಷ್ಟನಾಗಿದ್ದರೆ ವಸ್ತ್ರ ವಾಹನಾದಿ ಸಹಿತ ಭಾಗ್ಯಶಾಲಿಯಾಗಿರುತ್ತಾನೆ.

11) ಧನೇಶ ನವಮದಲ್ಲಿ, ಲಾಭೇಶ ನವಮದಲ್ಲಿ – (ಧನೇಶ ಲಾಭದಲ್ಲಿದ್ದರು) ನವಮೇಶ ಅಂತೆ ದಶಮೇಶ ದ್ವಿತೀಯ ಭಾವದಲ್ಲಿದ್ದರೂ ಜಾತಕ ಧನ, ಗುಣ, ಸುಖಾದಿಗಳಿಂದ ರಾಜ್ಯಮಾನ್ಯ ಧರ್ಮಾತ್ಮನಾಗಿ ಭಾಗ್ಯಶಾಲಿಯಾಗಿರುತ್ತಾನೆ.

12) ನವಮೇಶ ಸಹಿತ ಪಂಚಮೇಶ ನವಮಭಾವದಲ್ಲಿದ್ದರೆ ಅಥವಾ ನವಮದಲ್ಲಿಯ ಪಂಚಮೇಶ, ನವಮೇಶ ದೃಷ್ಟಿತವಾಗಿದ್ದರೆ ಹಾಗೂ ಭಾವಕಾರಕ ಗ್ರಹ ಪಂಚಮದಲ್ಲಿದ್ದರೆ ಪುತ್ರಪೌತ್ರಾದಿಗಳಿಂದ ಭಾಗ್ಯವಂತನಾಗಿರುತ್ತಾನೆ.

13) ಬಲಿಷ್ಠನಾದ ಲಾಭೇಶ ತನ್ನ ಮನೆಯಲ್ಲಿ ಅಥವಾ ಉಚ್ಚನಾಗಿದ್ದರೆ ಎಲ್ಲ ಪ್ರಕಾರದ ಲಾಭ – ಲಾಭೇಶ ದುರ್ಬಲ ನೀಚಸ್ಥನನಾಗಿದ್ದರೆ ತ್ರಿಕ್ ದುಃಖಗತನಾದರೆ ಲಾಭವಾಗಲಾರದು.

14) ಲಗ್ನೇ ಉಚ್ಚರಾಶಿಯಲ್ಲಿ ನವಮೇಶ ಕೇಂದ್ರದಲ್ಲಿ ಅಥವಾ ತ್ರಿಕೋನಗತನಾಗಿದ್ದರೆ – ಜೀವನಾಂತ್ಯದವರೆಗೂ ಜಾತಕ ಭಾಗ್ಯಶಾಲಿಯಾಗಿರುತ್ತಾನೆ.

15) ದ್ವಿತೀಯೇಶ, ನವಮೇಶ ಅಥವಾ ಲಗ್ನೇಶ ಕೇಂದ್ರಗತರಾಗಿ ಗುರು ಲಾಭೇಶನಾಗಿ ಕೇಂದ್ರಗತರಾದರೆ ಜಾತಕ ರಾಜ್ಯ ಸುಖ ಭೋಕ್ತನಾಗುವನು. ಈ ಅಂಶದಲ್ಲಿ ವಿಶೇಷವೆಂದರೆ ಗುರು ಲಾಭಸ್ಥನಾಗಲು ವೃಷಭ ಅಥವಾ ಕುಂಭ ಲಗ್ನವಾಗಬೇಕು. ಅಂದಾಗ ಮಾತ್ರ ಶುಭಕರ. ಇಲ್ಲಿ ದೈವಜ್ಞರ ಅಭಿಪ್ರಾಯದಂತೆ ಸಾವಿರ ಶುಭ ಯೋಗಗಳಿದ್ದರೂ ಕುಂಭ ಲಗ್ನ ಸುಖಕರವಲ್ಲವೆಂದಿರುವುದನ್ನು ಗಮನಿಸಿದರೆ ವೃಷಭ ಲಗ್ನದಲ್ಲಿ ಈ ಯೋಗ ಬಲವತ್ತರವಾಗುತ್ತದೆ.

3
2 ಬು+ಶ (ಶು)
4
5 ಗು
8 ಗು
6
7

| | | | |
|---|---|---|---|
| | | ಬು ಶನಿ (ಶು) | |
| ಬು ಶುಕ್ರ | | | |
| | | | ಗು |
| | 8 ಗು | | |

12 10
11 ಗು +ಶ + ಶು ಬಲಹೀನ
1 9
8
2 ಗು. ಶು(ಶ)
3 7
4 6

| | | ಗು ಶು (ಶ) | |
|---|---|---|---|
| ಗು+ಶ ಶು ಬಲಹೀನ | | | |
| | | | |
| | | | |

1)ರಲ್ಲಿ ಬುಧ, ಶನಿ, ಶುಕ್ರರಲ್ಲಿ ಶುಕ್ರ, ಶನಿ, ರವಿ ಶತ್ರುಗಳು. ಮಂಗಳನಿಗೆ ಬುಧ ಶತ್ರುವಾಗಿ, ಈ ಬುದ, ಶನಿ, ಶುಕ್ರರು ಲಗ್ನ ಅಥವಾ ದಶಮ ಕೇಂದ್ರದಲ್ಲಿ ಗುರು ಸಪ್ತಮದಲ್ಲಿ ವಿಶೇಷ ಬಲ. ದಶಮ – ಸಪ್ತಮ ಸಾಮಾನ್ಯ ಬಲ. (2)ರಲ್ಲಿ ಗುರು, ಶುಕ್ರ, ಶನಿಗಳು ಲಗ್ನ ಇಲ್ಲವೆ ಚತುರ್ಥ ಕೇಂದ್ರದಲ್ಲಿ ಗುರು–ಸಪ್ತಮ, ದಶಮದ್ಯ ಕುಂಭವಾದರೆ ಸಾಮಾನ್ಯ ಶುಭ. ಈ ರೀತಿ ವಿಮರ್ಶಾತ್ಮಕವಾಗಿ ನೋಡುವುದು.

16) ಲಗ್ನೇಶ, ನವಮೇಶ ಚತುರ್ಥ ಸ್ಥಾನದಲ್ಲಿ ಅಥವಾ ಚತುರ್ಥೇಶ, ನವಮೇಶ ಲಾಭದಲ್ಲಿ ಪೂರ್ಣ ಧನ. ಇಲ್ಲಿ ಲಗ್ನಗಳ ಮೇಲಿಂದ ನಿರ್ಣಯಿಸುವುದು ಹೆಚ್ಚು. ವಿಶೇಷ ಮೇಷವಾದ – ಚತುರ್ಥ, ಗುರುಗಳು ಚತುರ್ಥದಲ್ಲಿ , ಕಟಕದಲ್ಲಿ ಶುಭರು. ಆದರೆ ಏಕಾದಶ ಕುಂಭದಲ್ಲಿ ಅತಿ ಸಾಮಾನ್ಯರು. ವೃಷಭದಲ್ಲಿ ಏಕಾದಶ ದಲ್ಲಿ ಶುಕ್ರ+ಶನಿ ಅತಿ ಸಾಮಾನ್ಯರಾಗುತ್ತಾರೆ. ಮಿಥುನದಲ್ಲಿ ಬುಧ+ಶನಿ ಚತುರ್ಥ ದಲ್ಲಿ ಬಲಿಷ್ಠರು. ಈ ರೀತಿ ವಿವೇಚಿಸುವುದು ಹೆಚ್ಚು ವಿಶೇಷ.

17) ಧನೇಶ ಲಾಭಸ್ಥಾನದಲ್ಲಿ, ಲಾಭೇಶ ಭಾಗ್ಯಸ್ಥಾನದಲ್ಲಿ, ಭಾಗ್ಯೇಶ ಪಂಚಮದಲ್ಲಿ – ಇದ್ದರೆ ಅತಿ ಧನಾಢ್ಯನಾಗುವನು. ವೃಷಭದಲ್ಲಿ ಗುರು, ನೀಚಸ್ಥನಾಗುವುದರಿಂದ ವಿವೇಚಿಸಬೇಕಾದುದು ನ್ಯಾಯವೇ.

18) ಕೇಂದ್ರ ತ್ರಿಕೋನಾಧಿಪರ ಸಂಬಂಧ 1) ಸಹವಾಸ–ಯುತ ಸರ್ವಶ್ರೇಷ್ಠ, (2) ದೃಷ್ಟಿ, (3)ರಾಶ್ಯಾಂತರ, (4) ಅನ್ಯತರ ಸಹವಾಸ – ನವಪಂಚಕ ತ್ರಿರೇಕಾದಶ ಇತ್ಯಾದಿ ಯೋಗಗಳು – ಈ ಯೋಗದಲ್ಲಿ ಯಾವುದೇ ಇದ್ದರೂ ರಾಜಯೋಗ ವಾಗುತ್ತದೆ. ಅದರಲ್ಲಿ ವಿಶೇಷ ನವಮೇಶ, ದಶಮೇಶ ಸಂಬಂಧ – ಅತಿ ಬಲವತ್ತರವಾದುದಾಗುತ್ತದೆ. ಪಂಚಮ ತ್ರಿಕೋನಾಧಿಪ ಇತರ ಕೇಂದ್ರ ಗ್ರಹಗಳ

ಯೋಗ ಸಾಮಾನ್ಯ ರಾಜ್ಯಯೋಗವಾಗುತ್ತದೆ. ಕಟಕ ಲಗ್ನದಲ್ಲಿ ಗುರು+ಮಂಗಳ ಇತಿ – ಮಕರದಲ್ಲಿ, ಕಟಕದಲ್ಲಿ ಅತೀ ಬಲವತ್ತರ ಶುಭಯೋಗವಾಗುತ್ತದೆ.

19) ಜನ್ಮ ಸಮಯದಲ್ಲಿ ಅತಿ ಉಚ್ಚದಲ್ಲಿ ಯಾವುದೇ ಗ್ರಹವಿದ್ದರೂ ಅದನ್ನು ಮಿತ್ರಗ್ರಹ ನೋಡುತ್ತಿದ್ದರೂ ಜಾತಕ ರಾಜನ ಸಮಾನ ಭಾಗ್ಯವಂತನಾಗುತ್ತಾನೆ. ಬಲವಾನ್ ಶುಕ್ರ, ಏಕಾದಶ, ದ್ವಾದಶದಲ್ಲಿದ್ದರೂ – ಶುಭವೇ – ಎರಡು ಅಥವಾ 3 ಗ್ರಹಗಳು ಉಚ್ಚರಾಗಿ ಚಂದ್ರ ಕಟಕರಾಶಿಗತನಾಗಿದ್ದರೆ, ಲಗ್ನ ಪೂರ್ಣ ಬಲಿಷ್ಠವಾಗಿದ್ದರೆ ಆ ವ್ಯಕ್ತಿ ಸರ್ವತ್ರ ಪೂಜ್ಯನೀಯನಾಗುತ್ತಾನೆ. ಉದಾಹರಣೆ – ದಾಶರಥಿ ರಾಮ – ಕರ್ಕ ಲಗ್ನ ಲಗ್ನದಲ್ಲಿ ಚಂದ್ರ+ಗುರು – ಮಕರದಲ್ಲಿ ಮಂಗಳ – ಮೀನದಲ್ಲಿ ಶುಕ್ರ, ಮೇಷದಲ್ಲಿ ರವಿ, ತುಲಾದಲ್ಲಿ ಶನಿ – ಹೀಗಾಗಿ ಶ್ರೀರಾಮ ಸರ್ವತ್ರ ಸರ್ವಕಾಲಿಕ ಪುರುಷೋತ್ತಮನೆ.

20) ಧನು, ಮೇಷ, ಸಿಂಹ ಲಗ್ನಗಳಲ್ಲಿ ಸ್ಥಿತ ಮಂಗಳ ತನ್ನ ಮಿತ್ರನಿಂದ ನೋಡಲ್ಪಡುತ್ತಿದ್ದರೆ – ಆ ಮನುಷ್ಯ ರಾಜಸಮಾನ ಧನವಂತನಾಗುತ್ತಾನೆ. ಶನಿ ಕೇಂದ್ರ ಅಥವಾ ತ್ರಿಕೋನ ಅಥವಾ ಉಚ್ಚ ಬಲಿಷ್ಠನಾಗಿ ಅವನನ್ನು ಲಗ್ನೇಶ ನೋಡುತ್ತಿದ್ದರೆ – ಜಾತಕ ರಾಜಸಮಾನ ಧನಾಢ್ಯನಾಗುತ್ತಾನೆ.

21) ಜನ್ಮ ಸಮಯ ಲಗ್ನಸ್ಥ ಗುರು, ಕೇಂದ್ರಸ್ಥ ಬುಧ, ಅವರ ಮೇಲೆ ನವಮೇಶನ ದೃಷ್ಟಿ – ರಾಜಸಮಾನ ಸಿರಿವಂತನನ್ನಾಗಿ ಮಾಡುತ್ತವೆ.

22) ಜನ್ಮಸಮಯ ಲಗ್ನಸ್ಥ ಚಂದ್ರ, ಸುಖಸ್ಥ ಗುರು, ದಶಮಸ್ಥ ಶುಕ್ರ ಹಾಗೂ ತನ್ನುಚ್ಚ ಇಲ್ಲವೇ ಸ್ವಗ್ರಹದಲ್ಲಿ ಶನಿಯಿದ್ದರೆ – ಮನುಷ್ಯರಾಜ ತುಲ್ಯ ಧನಿಕನಾಗುತ್ತಾನೆ.

23) ಕುಂಭ ಲಗ್ನ ಲಗ್ನದಲ್ಲಿ ಶನಿ, 4 ಗ್ರಹಗಳು ಉಚ್ಚರಾಗಿದ್ದರೆ – ಕುಂಭ ಲಗ್ನವಾದರೂ ಆ ವ್ಯಕ್ತಿ ರಾಜನಾಗುತ್ತಾನೆ. ಮೇಷ ಲಗ್ನಸ್ಥ ಬುಧ ಹಾಗೂ ಗುರು ಸ್ವೋಚ್ಚ(ಕರ್ಕ)ದಲ್ಲಿದ್ದರೆ – ಆ ವ್ಯಕ್ತಿ ರಾಜ ಸಮಾನನಾಗುತ್ತಾನೆ.

24) ಸ್ವಗ್ರಹ ಅಥವಾ ಉಚ್ಚಸ್ಥ ಭೌಮಾದಿ ಐದು ಗ್ರಹಗಳು ಕೇಂದ್ರಗತರಾದರೆ (ಮಂ, ಬು, ಗು, ಶು, ಶ) ಕ್ರಮಶಃ ರುಚಕ 2)ಭದ್ರ, 3) ಗುರು – ಹಂಸ, 4) ಮಾಲವ್ಯ (ಶುಕ್ರ), 5) ಶ (ಶನಿ), ಯೋಗಗಳಾಗುವ ಕಾರಣ ಅಂತಹ ವ್ಯಕ್ತಿ ವಿಖ್ಯಾತ ಮಹಾ ಪುರುಷನಾಗುತ್ತಾನೆ.

25) ಮೀನ ಲಗ್ನ ಪೂರ್ಣ ಬಲಿ ಚಂದ್ರಮ ಮಂಗಳ ಗೋಚ್ಚದಲ್ಲಿದ್ದರೆ, ಶನಿ ಕುಂಭದಲ್ಲಿ(ವ್ಯಯ)ದ್ದರೂ ಜಾತಕ ರಾಜನಾಗುತ್ತಾನೆ.

26) ಜನ್ಮ ಸಮಯದಲ್ಲಿ ಮಂಗಳ ಮಕರ ಲಗ್ನದಲ್ಲಿ ಹಾಗೂ ಕಟಕದಲ್ಲಿ ಚಂದ್ರನಿದ್ದರೆ ಮನುಷ್ಯ ರಾಜನಾಗುತ್ತಾನೆ.

27) ಧನ ಭಾವದಲ್ಲಿ ಗುರು, ಶುಕ್ರ ರಾಜ ಯೋಗಕಾರಕರಾಗುತ್ತಾರೆ. (ವಿಶೇಷ – ಮಿಥುನ ಕುಂಭ ಲಗ್ನದಲ್ಲಿ).

28) ಲಗ್ನೇಶ ಕೇಂದ್ರಸ್ಥ – ಕರ್ಮೇಶ ಚತುರ್ಥದಲ್ಲಿ ಭಾಗ್ಯೇಶ ಲಗ್ನದಲ್ಲಿ – ಮನುಷ್ಯ ದೀರ್ಘಜೀವಿ ರಾಜನಾಗುತ್ತಾನೆ.

29) ಯಾವನ ಜನ್ಮ ಲಗ್ನೇಶ ನೀಚ ಅಸ್ತ ಹಾಗೂ ಶತ್ರು ರಾಶಿಗತರಾಗಿ ಕೇಂದ್ರದಲ್ಲಿದ್ದರೆ ಅನ್ಯಗ್ರಹಯುಕ್ತನಾಗಿರದಿದ್ದರೆ ಜಾತಕ ರಾಜನಾಗುತ್ತಾನೆ.

ಈ ಎಲ್ಲ ಅಂಶ ಲಗ್ನಾದಿಗಳ ಮೇಲಿಂದ ನೋಡುವುದು ವಿಹಿತ.

ಭಾಗ್ಯದಿಂದ ಭಾಗ್ಯವಿಲ್ಲದೆ ಶಕ್ತಿ ಗುರು ಧರ್ಮ ತಪ ಶುಭಕಾರ್ಯ – ಧರ್ಮಕಾರ್ಯ ಸಂಲಗ್ನ ತಂದೆ ಪೌತ್ರ ಲಾಭ ಮನ ಮನೆ ಜನರು – ಶಿಕ್ಷಣದಿಂದ ಲಾಭ, ತಂದೆ-ತಾಯಿ ಭಾಗ್ಯ ವರಾವಶಾ ಶುದ್ಧಾಚರಣ ತೀರ್ಥಯಾತ್ರೆ ಪ್ರೇಮ ಪ್ರಕರಣ ಪುರಾಣ ಪುಣ್ಯಕಥೆ ಔಷಧಿ ನ್ಯಾಯ ಪ್ರತಾಪ ಪ್ರವಾಸ ಆರೋಗ್ಯ ಸತ್ ಸಂತತಿ ತಂದೆಯ ಶಾಪ ಎಲ್ಲ ಐಶ್ವರ್ಯ ಪಟ್ಟಾಭಿಷೇಕ ಯಜ್ಞ ಗುರೂಪದೇಶ ವೈರಾಗ್ಯ ವೇದಪಠಣ ಹೆಂಡತಿ ಜ್ಞಾನ ದೈವೀ ಶಕ್ತಿ ಸಾಕ್ಷಾತ್ಕಾರ ಅಂತರ್‌ಜ್ಞಾನ ಸ್ವಪ್ನ ದೀಕ್ಷಾ ವಿದ್ಯಾ ನೌಕರ ಮಾನ ಸನ್ಮಾನ ವಿದೇಶ ಯಾತ್ರೆ ಗ್ರಂಥ ಶಾಸ್ತ್ರ ಶಕುನ ಸನ್ಯಾಸ ಏಕಪತ್ನಿವ್ರತ–

ನನ್ನ ವಿಶೇಷ ವಿಚಾರ ವಿವಾಹ ವಿವಾಹಿತ ಸ್ತ್ರೀ ಭಾಗ್ಯೋದಯ - ಕಾಯ್ದೆ ಏನೇ ಭಾಷೆ ದರ್ಶನ ಶಾಸ್ತ್ರ ವಿಶ್ವವಿದ್ಯಾಲಯದ ವ್ಯಾಸಂಗಗಳು (ಎಂ. ಎ.ಹೆಚ್.ಡಿ.) ಇತ್ಯಾದಿ ವಿವೇಚಿಸುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರ ನವಮ ಭಾವ ಫಲಾಧ್ಯಾಯಃ ಸಮಾಪ್ತಃ**

## ೨೨ನೇ ಅಧ್ಯಾಯ

# ಅಥ ದಶಮ (ಕರ್ಮ) ಭಾವಫಲಾಧ್ಯಾಯಃ

**ಪರಾಶರ ಉವಾಚ :**

ಅತಃ ಪರಂ ತು ಶ್ರೋತವ್ಯಂ ತ್ವಯಾ ಕರ್ಮಭವಂ ಫಲಮ್
ಚತುರ್ಮುಖಾದಿಭಿರ್ಯಚ್ಚ ಪ್ರೋಕ್ತಂ ಲೋಕಹಿತೈಷಿಭಿಃ ॥೧॥

ಸ್ವರಾಶ್ಯಂ ಶೋಚ್ಚಗೆ ಪೂರ್ಣ ಬಲೋಪೇತೆ ತು ಕರ್ಮಪೆ ।
ಪಿತೃಸೌಖ್ಯಾನ್ವಿತೋ ಜಾತಃ ಪುಣ್ಯಕರ್ಮಾ ಸುಕೀರ್ತಿಮಾನ್ ॥೨॥

ಕರ್ಮಾಧಿಪೋ ಬಲೋನಶ್ಚೇತ್ ಕರ್ಮವೈ ಕಲ್ಯಮಾದಿಶೇತ್
ರಾಹುಃ ಕೇಂದ್ರ ತ್ರಿಕೋಣಸ್ಥೋ ಜ್ಯೋತಿಷ್ಟೋಮಾದಿ ಯುಗಕೃತ ॥೩॥

**ಪರಾಶರರು ಹೇಳಿದರು—**

ಹೇ ಮೈತ್ರೇಯಿ, ಈ ನಂತರ ಕರ್ಮಭಾವ ಫಲವನ್ನು ಹೇಳುತ್ತೇನೆ. ಯಾವುದನ್ನು ಲೋಕಕಲ್ಯಾಣಕ್ಕಾಗಿ ಬ್ರಹ್ಮದೇವರು ನನಗೆ ಹೇಳಿದ್ದರು. -ಕೇಳು- ಪೂರ್ಣ ಬಲಿಷ್ಠ ಕರ್ಮೇಶ ತನ್ನ ರಾಶಿ ನವಾಂಶ ಅಥವಾ ಉಚ್ಚದಲ್ಲಿದ್ದರೆ ಜಾತಕ ಪಿತೃಸೌಖ್ಯಯುಕ್ತ ಪುಣ್ಯಕರ್ಮಾದಿ ನಿರತನಿರುತ್ತಾನೆ ಹಾಗೂ ತನ್ನ ಕಾರ್ಯದಲ್ಲಿ ಯಶಸ್ವಿಯೂ ಆಗಿರುತ್ತಾರೆ. ಅದೇ ಕರ್ಮೇಶನು ನಿರ್ಬಲನಾಗಿದ್ದರೆ ಜಾತಕ ಕರ್ಮಹೀನನಾಗಿರುತ್ತಾನೆ. ರಾಹು ಕೇಂದ್ರ ಅಥವಾ ನವಮ, ಪಂಚಮಗತನಾಗಿದ್ದರೆ ಅವರು ಜ್ಯೋಷ್ಟೋಮ ಆದಿ ಯಜ್ಞಕರ್ಮನಿರತನಿರುತ್ತಾನೆ (ಹಾಗೂ ಪೂರ್ವಜನ್ಮದಲ್ಲಿ ಜ್ಯೋತಿಷ್ಟೋಮ ಹೋಮ ಹವನಾದಿ ಪುಣ್ಯದಿಂದ ಹುಟ್ಟಿರುತ್ತಾನೆ)

ಸೌಮ್ಯಯುಕ್ತೆ ಶುಭಸ್ಥಾನೆ ಸಂಸ್ಥಿತೆ ಕರ್ಮಪೆ ಸತಿ ।
ವಾಣಿಜ್ಯತೋ ರಾಜತೋ ವಾಲಾ ಭೋ ಹಾನಿರ್ವಿಪರ್ಯಯೇ ॥೪॥

ದಶಮೇ ಪಾಪ ಸಂಯುಕ್ತೇ ಕಾಮೇ ಪಾಪಸಮನ್ವಿತೆ ।
ದುಷ್ಕಿರ್ತಿಂ ಲಭತೆ ಮೃರ್ತಃ ಸ್ವಜನಾನಂ ವಿದೂಷಕಃ ॥೫॥

ಕರ್ಮೇಶೆ ನಾಶರಾಶಿಸ್ಥೆ ಸೈಂಹಿಕೇಯ — ಸಮನ್ವಿತೆ ।
ಜನದ್ವೇಷಿ ಮಹಾಮೂರ್ಖೋ ದುಷ್ಕೃತಿಂ ಲಭತೆ ನರಃ ॥೬॥

ಕರ್ಮೇಶೆ ದ್ಯೂನ ರಾಶಿಸ್ಥೆ ಮಂದಭೌಮ ಸಮನ್ವಿತೆ ।
ಧನೇಶೆ ಪಾಪ ಸಂಯುಕ್ತೆ ಶಿಶ್ನೋದರಪರಾಯಣಃ ॥೭॥

ಕರ್ಮೇಶ ಶುಭಸ್ಥಾನದಲ್ಲಿ ಶುಭಗ್ರಹಯುಕ್ತನಾಗಿದ್ದರೆ ವಾಣಿಜ್ಯ ರಾಜಾಶ್ರಯ(ಎಂ.ಬಿ.ಎ., ಬಿಸಿನೆಸ್ ಮ್ಯಾನೇಜ್‌ಮೆಂಟ್)ದಿಂದ ಲಾಭ ಇದರ ವಿಪರೀತ ಅಶುಭಸ್ಥಾನ – ಅಶುಭಗ್ರಹಯುಕ್ತನಾಗಿದ್ದರೆ, ದಶಮ ಹಾಗೂ ಏಕಾದಶ ಭಾವ ಪಾಪಕ್ರಾಂತವಾಗಿದ್ದರೆ ಮನುಷ್ಯ ದುಷ್ಟಕಾರ್ಯ ನಿರತನಾಗಿ ರುವನು ಹಾಗೂ ಸಜ್ಜನ ದ್ವೇಷಿಯೂ ಆಗಿರುತ್ತಾನೆ. ಕರ್ಮೇಶ ಅಷ್ಟಮಸ್ಥನಾಗಿ ರಾಹುಯುಕ್ತನಾಗಿದ್ದರೆ ಮನುಷ್ಯ ವಿನೋದಿ ಮಹಾಮೂರ್ಖ ಜನ ದ್ವೇಷಿಯಾಗಿ ರುತ್ತಾನೆ – ಹಾಗೂ ದುಷ್ಟಕಾರ್ಯನಿರತ. ಕರ್ಮೇಶ ಶನಿ ಮಂಗಳರ ಸಂಗಡ ಸಪ್ತಮದಲ್ಲಿದ್ದರೆ ಹಾಗೂ ಸಪ್ತಮೇಶನೂ ಕೂಡ ಪಾಪಯುಕ್ತನಾಗಿದ್ದರೆ ಜಾತಕನು ವ್ಯಭಿಚಾರಿಯಾಗಿರುವನು, ದಾರಾಪರಾಯಣನಾಗಿರುತ್ತಾನೆ.

## ಶೋಭನ ಯೋಗ

ತುಂಗ ರಾಶಿಂ ಸಮಾಶ್ರಿತ್ಯ ಕರ್ಮೇಶೆ ಗುರುಸಂಯುತೆ ।
ಭಾಗ್ಯೇಶೆ ಕರ್ಮರಾಶಿಸ್ಥೆ ಮಾನೈಶ್ವರ್ಯ ಪ್ರತಾಪವಾನ್ ॥೮॥

ಲಾಭೇಶೆ ಕರ್ಮರಾಶಿಸ್ಥೆ ಕರ್ಮೇಶೆ ಲಗ್ನ ಸಂಯುತೆ ।
ತಾವುಭೌ ಕೇಂದ್ರಗೌವಾಪಿ ಸುಖಿಜೀವನಭಾಗ್ ಭವೇತ್ ॥೯॥

ಕರ್ಮೇಶೆ ಜಲಸಂಯುಕ್ತೆ ಮೀನೆ ಗುರು ಸಮನ್ವಿತೆ ।
ವಸ್ತ್ರಾಭರಣ ಸೌಖ್ಯಾದಿ ಲಭತೆ ನಾತ್ರ ಸಂಶಯಃ ॥೧೦॥

ಗುರು ಸಹಿತ ಕರ್ಮೇಶ ತನ್ನ ಉಚ್ಚಸ್ಥನಾಗಿದ್ದರೆ ಭಾಗ್ಯೇಶ ಕರ್ಮರಾಶಿಗತ ನಾಗಿದ್ದರೆ ಜಾತಕ ಮಾನ ಐಶ್ವರ್ಯ ಹಾಗೂ ಪ್ರತಾಪಪೂರ್ಣನಾಗಿರುತ್ತಾನೆ. ಲಾಭೇಶ ದಶಮದಲ್ಲಿ ಕರ್ಮೇಶ ಲಗ್ನದಲ್ಲಿ ಇಬ್ಬರೂ ಕೇಂದ್ರಸ್ಥರಾಗಿರಲಿ ಮನುಷ್ಯ ಸುಖಿಯಾಗಿರುತ್ತಾನೆ. ಬಲಿ ದಶಮೇಶ ಗುರುಯುಕ್ತನಾಗಿದ್ದರೆ ಅದೂ ಮೀನದಲ್ಲಿ ದ್ದರೆ ಜಾತಕ ನಿಸ್ಸಂದೇಹ ವಸ್ತ್ರ ಆಭೂಷಣ ಆದಿ ಸೌಖ್ಯವಂತನಾಗಿರುತ್ತಾನೆ.

## ಅಶೋಭನ ಯೋಗ

ಲಾಭಸ್ಥಾನಗತೆ ಸೂರ್ಯೇ ರಾಹುಭೌಮ ಸಮನ್ವಿತೆ ।
ರವಿ ಪುತ್ರೇಣ ಸಂಯುಕ್ತೆ ಕರ್ಮಚ್ಛಿತ್ತಾ ಭವೆನ್ನರಃ ॥೧೧॥

ರಾಹು, ಮಂಗಳ, ಶನಿಯಿಂದ ಕೂಡಿ ರವಿ ಲಾಭಸ್ಥಾನದಲ್ಲಿದ್ದರೆ ಮನುಷ್ಯ ಕರ್ಮಧ್ವಂಸಕನಾಗುತ್ತಾನೆ.

## ಸತ್ಕರ್ಮ ಯೋಗ

ಮೀನೆ ಜೀವೆ ಭೃುಗಯುತೆ ಲಗ್ನೇಶೆ ಬಲಸಂಯುತೆ ।
ಸ್ವೋಚ್ಚ ರಾಶಿಗತೆ ಚಂದ್ರೆ ಸಮ್ಯಗ್ ಜ್ಞಾನಾರ್ಥವಾನ್ ಭವೇತ್ ॥೧೨॥

ಕರ್ಮೇಶೆ ಲಾಭಿ ರಾಶಿಸ್ಥೆ ಲಾಭೇಶೆ ಲಗ್ನ ಸಂಸ್ಥಿತೆ ।
ಕರ್ಮ ರಾಶಿ ಸ್ಥಿತೆ ಶುಕ್ರೆ ರತ್ನವಾನ್ ಸ ನರೋ ಭವೇತ್ ॥೧೩॥

ಕೇಂದ್ರ ತ್ರಿಕೋಣಗೆ ಕರ್ಮನಾಥೆ ಸ್ವೋಚ್ಚ ಸಮಾಶ್ರೀತೆ ।
ಗುರುಣಾ ಸಹಿತೆ ದೃಷ್ಟೆ ಸತ್ಕರ್ಮ ಸಹಿತೋ ಭವೇತ್ ॥೧೪॥

ಕರ್ಮೇಶೆ ಲಗ್ನಭಾವಸ್ಥೆ ಲಗ್ನೇಶೆನ ಸಮನ್ವಿತೆ ।
ಕೇಂದ್ರ ತ್ರಿಕೋಣಗೆ ಚಂದ್ರೆ ಸತ್ಕರ್ಮ ನಿರತೋ ಭವೇತ್ ॥೧೫॥

ಶುಕ್ರಯುಕ್ತ ಗುರು ಮೀನ ರಾಶಿಸ್ಥನಾಗಿದ್ದರೆ ಚಂದ್ರ ತನ್ನ ಕರ್ಕದಲ್ಲಿದ್ದರೆ ಜಾತಕ ಉತ್ತಮ ಜ್ಞಾನ ಪೂರ್ವ ಸಂಪತ್ತುಗಳಿಂದ ಕೂಡಿರುತ್ತಾನೆ. ಕರ್ಮೇಶ ಲಾಭಸ್ಥಾನದಲ್ಲಿ ಹಾಗೂ ಲಗ್ನೇಶ ಲಗ್ನದಲ್ಲಿದ್ದರೆ, ಶುಕ್ರ ದಶಮಸ್ಥನಾಗಿದ್ದರೆ ಜಾತಕ ರತ್ನಾದಿಗಳಿಂದ ಪರಿಪೂರ್ಣನಾಗಿರುತ್ತಾನೆ ಹಾಗೂ ಕರ್ಮೇಶ ಸ್ವೋಚ್ಚನಾಗಿ ಕೇಂದ್ರ ಅಥವಾ ತ್ರಿಕೋನದಲ್ಲಿ ಗುರುವಿನಿಂದ ಯುತನಾಗಿದ್ದರೆ ಮನುಷ್ಯ ಕರ್ಮ ಶೀಲನಾಗಿ ಕರ್ಮೇಶ, ಲಗ್ನೇಶ ಇಬ್ಬರೂ ಲಗ್ನದಲ್ಲಿ ಚಂದ್ರ ಕೇಂದ್ರ ಅಥವಾ ತ್ರಿಕೋನದಲ್ಲಿದ್ದರೆ ಜಾತಕ ಶುಭಕರ್ಮ ನಿರತನಾಗಿರುತ್ತಾನೆ.

## ಅಸತ್ಕರ್ಮ ಯೋಗ

ಕರ್ಮಸ್ಥಾನಗತೆ ಮಂದೆ ನೀಚಖೇಚರ ಸಂಯುತೆ ।
ಕರ್ಮೇಶೆ ಪಾಪ ಸಂಯುಕ್ತೆ ಕರ್ಮ ಹೀನೋ ಭವೇನ್ನರಃ ॥೧೬॥

ಕರ್ಮೇಶೆ ರಂಧ್ರ ರಾಶಿಸ್ಥೆ ರಂಧ್ರೇಶೆ ಕರ್ಮಸ್ಥಿತೆ ।
ಪಾಪಗ್ರಹೇಣ ಸಂಯುಕ್ತೆ ದುಷ್ಕರ್ಮ ನಿರತೋ ಭವೇತ್ ॥೧೭॥

ಕರ್ಮೇಶೆ ನೀಚ ರಾಶಿಸ್ಥೆ ಕರ್ಮಸ್ಥೆ ಪಾಪ ಖೇಚರೆ ।
ಕರ್ಮಭಾತ್ ಕರ್ಮಗೆ ಪಾಪೆಕರ್ಮ ವೈಕಲ್ಯ ಮಾದಿಶೇತ್ ॥೧೮॥

ನೀಚ ರಾಶಿಗತ ಗ್ರಹದೊಡನೆ ಶನಿ ದಶಮಗತನಾಗಿದ್ದರೆ ದಶಮ ನವಾಂಶವೂ ಪಾಪಗ್ರಹ ಕ್ರಾಂತವಾಗಿದ್ದರೆ ಜಾತಕ ಕರ್ಮರಹಿತನಾಗಿರುತ್ತಾನೆ. ಕರ್ಮೇಶ ಅಷ್ಟಮದಲ್ಲಿ ಅಷ್ಟಮೇಶ ಕರ್ಮಸ್ಥಾನದಲ್ಲಿ ಹಾಗೂ ಪಾಪಗ್ರಹದ ಸಂಯೋಗ

ವಾದರೆ ಜಾತಕ ದುಷ್ಕರ್ಮಿಯಾಗಿರುತ್ತಾನೆ. ಕರ್ಮೇಶ ನೀಚರಾಶಿ ಗತನಾಗಿ ಕರ್ಮಸ್ಥಾನ ಪಾಪಗ್ರಹ ಕ್ರಾಂತವಾದರೆ ದಶಮಸ್ಥಾನದಿಂದ ದಶಮ(ಸಪ್ತಮ)ವೂ ಪಾಪಯುಕ್ತವಾದರೆ ಜಾತಕ ಕರ್ಮರಹಿತನಾಗಿ ತಿರುಗಾಡುತ್ತಿರುತ್ತಾನೆ.

## ಕೀರ್ತಿಮದ್ಯೋಗ

ಕರ್ಮಸ್ಥಾನಗತೇ ಚಂದ್ರೇ ತದೀಶೇ ತತ್ ತ್ರಿಕೋಣಗೇ ।
ಲಗ್ನೇಶೇ ಕೇಂದ್ರ ಭಾವಸ್ಥೇ ಸತ್ಕೀರ್ತಿ ಸಹಿತೋ ಭವೇತ್ ॥೧೯॥

ಲಗ್ನೇಶೇ ಕರ್ಮಭಾವಸ್ಥೇ ಕರ್ಮೇಶೇ ಬಲಸಂಯುತೇ ।
ದೇವೇಂದ್ರ ಗುರುಣಾ ದೃಷ್ಟೇ ಸತ್ಕೀರ್ತಿ ಸಹಿತೋ ಭವೇತ್ ॥೨೦॥

ಕರ್ಮಸ್ಥಾನಾಧಿಪೇ ಭಾಗ್ಯೇ ಲಗ್ನೇಶೇ ಕರ್ಮ ಸಂಯುತೇ ।
ಲಗ್ನಾತ್ ಪಂಚಮನೇ ಚಂದ್ರೇ ಖ್ಯಾತಕೀರ್ತಿಃ ಪ್ರಜಾಯತೇ ॥೨೧॥

ಏತತ್ಸಮಾಸತಃ ಕರ್ಮಭಾವಜಂ ಗದಿತಂ ಫಲಮ್ ।
ಜ್ಞೇಯ ಮನ್ಯತ್ತು ಲಗ್ನೇಶ ಕರ್ಮಶಾಶ್ರಯತಿ ಬುಧೈಃ ॥೨೨॥

ದಶಮ ಭಾವದಲ್ಲಿ ಚಂದ್ರ ದಶಮೇಶ ಚಂದ್ರನಿಂದ ನವಮ ಪಂಚಮದಲ್ಲಿ (ಲಗ್ನದಿಂದ 2ನೇ, 4ನೇ ಸ್ಥಾನ)ದಲ್ಲಿ ಹಾಗೂ ಲಗ್ನೇಶ ಕೇಂದ್ರಗತನಾದರೆ ಜಾತಕ ಸತ್ಕೀರ್ತಿಯುಳ್ಳವನಾಗಿ ಜೀವನದಲ್ಲಿ ಯಶಸ್ಸು ಪಡೆಯುತ್ತಾನೆ. ಲಾಭೇಶ ದಶಮ ಸ್ಥನಾಗಿ, ಕರ್ಮೇಶ ಪ್ರಬಲನಾಗಿದ್ದು ಗುರುವಿನ ದೃಷ್ಟಿ ಅವನ ಮೇಲಿದ್ದರೆ – ಜಾತಕ ದವಳ ಕೀರ್ತಿವಂತನಾಗುತ್ತಾನೆ. ಕರ್ಮೇಶ ಭಾಗ್ಯಸ್ಥನಾಗಿ ಲಗ್ನೇಶ ಕರ್ಮಸ್ಥಾನ ಗತನಾಗಿ ಲಗ್ನದಿಂದ ಪಂಚಮದಲ್ಲಿ ಚಂದ್ರನಿದ್ದರೆ ಜಾತಕ ವಿಖ್ಯಾತನಾಗಿರುತ್ತಾನೆ. ಸಂಕ್ಷೇಪತಃ ಕರ್ಮಭಾವ ಫಲ ಹೇಳಿದರು. ವಿಶೇಷ ಫಲ ಲಗ್ನೇಶ – ಕರ್ಮೇಶರ – ಸಂಬಂಧದಿಂದ ತಿಳಿಯುವುದು.

## ವಿಶೇಷ ವಿಮರ್ಶೆ

ಕರ್ಮಭಾವ ಅತಿ ಪ್ರಮುಖವಾಗಿದ್ದು – ಲಗ್ನೇಶ, ಕರ್ಮೇಶ, ಪಾತಾಳೇಶ – ಪಂಚಮೇಶ (ಪಾತಾಳ – ಪೂರ್ವಜನ್ಮದ ಆಕಾಂಕ್ಷೆ – ಪಂಚಮೇಶ – ರವಿ ಕಿರಣ ಪ್ರಚೋದನೆ) ಷಷ್ಠೇಶ ಹಾಗೂ ತೃತಿಯೇಶ, ಸಪ್ತಮೇಶ ವ್ಯವ ಹಾರಾದಿಗಳು ಭಾಗ್ಯಕ್ಕಾಗಿ ಭಾಗ್ಯೇಶರ ಸಂಬಂಧ ನೋಡಿಯೇ ಕರ್ಮಭಾವ ನಿಶ್ಚಯಿಸುವುದು ಹಾಗೂ ಕರ್ಮದಿಂದ ತ್ರಿಕೋನಗಳಾದ ದ್ವಿತೀಯ ಷಷ್ಠಗಳ ಪ್ರಭಾವವೂ ಕರ್ಮದ ಮೇಲೆ ಪ್ರಮುಖವಾಗಿ ಪ್ರತ್ಯೇಕ ಗ್ರಹ ರಾಶಿ. ಅವುಗಳ

ಸಂಬಂಧ ವಿಚಾರಿಸಿಯೇ ಕರ್ಮ ನಿರ್ಧರಿಸುವುದು. ಈಗ ಈ ಭಾವ ಮತ್ತಷ್ಟು ಕ್ಲಿಷ್ಟವಾಗಿ – ಅನೇಕ ಉದ್ಯೋಗ ನಿರ್ಧರಿಸಬೇಕಾಗುತ್ತದೆ. ಇದು ಆಕಾಶದ ಮಧ್ಯ ಬಿಂದು. 'ಖ' ಸ್ವಸ್ತಿಕವಾದ್ದರಿಂದ ಇದರ ಪ್ರಭಾವ ಜೀವನದ ಪರ್ಯಂತ ವಿವೇಚಿಸ ಬೇಕಾಗುತ್ತದೆ.

ಇದಲ್ಲದೆ ಇನ್ನು ಅನೇಕ ವಿಚಾರವನ್ನು ದಶಮದಿಂದ ನಿರ್ಧರಿಸಬಹುದು.

ಹಿಂದೆ ಪ್ರಮುಖವಾಗಿ ಸನ್ಯಾಸವನ್ನು ನಿರ್ಧರಿಸುತ್ತಿದ್ದರೂ ಅದಕ್ಕೆ ಸ್ಥಾನ ವೆಂದೇ ಹೆಸರಿದೆ. ಅಲ್ಲದೆ ಆಜ್ಞಾ ಮಾನ ದಿವ್ಯ ಅಲಂಕಾರ, ವ್ಯಾಪಾರ, ವೇದಾಂತ ಕರ್ಮ ಜೀವನ ಯಶ, ವಿದ್ಯಾ, ಮುದ್ರಾ, ಪುಣ್ಯಕಾರ್ಯ, ರಾಜ್ಯವೃದ್ಧಿ ಪಿತಾ, ಕೆರೆ ಕೊಳ್ಳ ನಿರ್ಮಾಣ, ಉದರ ನಿರ್ವಾಹಕ ಉದ್ಯೋಗ, ನೌಕರ ಚಾಕರ, ರಾಜಕೀಯ ಸನ್ಮಾನ, ರಾಜನೀತಿಯ ಚಿಲ್ಲರೆ ವ್ಯವಹಾರ, ಅಧಿಕಾರ ವೈಭವ, ಯಂತ್ರ ಮಂತ್ರ, ಔಷಧಿ ದೇವ, ಮಂತ್ರ ಸಿದ್ಧಿ, ಲೇವಾದೇವಿ – ದತ್ತರ ವಿಚಾರ – ಪೂರ್ವ ಜನ್ಮ ವಿಚಾರ (ಚತುರ್ಥವೂ ಸಹಿತ) ಪಿತೃಭಕ್ತಿ, ಐಶ್ವರ್ಯ ಉಪಭೋಗ, ಪೂರ್ವಾರ್ಜಿತ ಕರ್ಮಫಲ – ಕೋರ್ಟು ಕಚೇರಿ ವ್ಯವಾರ, ವಿದ್ಯಾಗುರು – ರಾಜ ಬಾಲ ರೋಗಾದಿ ಗಳೊಂದಿಗೆ – ನನ್ನ ವಿಚಾರದಂತೆ – ಅಡವಿಯ (ಅರಣ್ಯ) ಅಧಿಕಾರಿ, ಕಾರ್ಖಾನೆ ನೌಕರಿ – ಕೆಲಸದ ಸಂಬಂಧ ರಾಜ್ಯಪಾಲ ಅವನ ಸಹಾಯಕ – ಜನಪದ ಸಮಿತಿ ಇತ್ಯಾದಿ.

### ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ದಶಮಭಾವ ಫಲಾದ್ಯಾಯಃ

(೨೩ನೇ ಅಧ್ಯಾಯ)

# ಅಥ ಏಕಾದಶ (ಆಯು) ಭಾವಫಲಾಧ್ಯಾಯಃ

## ಪರಾಶರ ಉವಾಚ:

ಅಥಬ್ರುವೀಮ ತೆ ಲಾಭಭಾವಜಾತಂ ಫಲಂ ಮುನೆ ।
ಯಚ್ಛ್ರುಭಾಶುಭಜಿಜ್ಞಾಸಾ ನೃಣಾಂ ಸ್ವಾಭಾವಿಕೀ ಮತಾ ॥೧॥

ಲಾಭಾಧೀಪೋ ಯದಾ ಲಾಭೆ ತಿಷ್ಠತ್ ಕೇಂದ್ರ ತ್ರಿಕೋಣಯೋಃ ।
ಬಹುಲಾಭಂ ತದಾಕುರ್ಯಾತ್ತುಂಗಗೋರ್ಕಾಶಗೋಪಿ ವಾ ॥೨॥

ಲಗ್ನೇಶೆ ಧನರಾಶಿಸ್ಥೆ ಜನೇಶೆ ಕೇಂದ್ರ ಸಂಸ್ಥಿತೆ ।
ಗುರುಣಾ ಸಹಿತೆ ಭಾವೆ ಗುರುಲಾಭಂ ವಿನಿರ್ದಿಶೇತ್ ॥೩॥

ಸೌಮ್ಯಯುಕ್ತೆ ತೃತೀಯಸ್ಥೆ ಲಗ್ನೇಶೆ ಸತಿ ಜಾತಕಃ ।
ಷಟ್ ತ್ರಿಂಶೆ ವತ್ಸರೆ ಪ್ರಾಪ್ತೆ ಸಹಸ್ರದ್ವಯ – ನಿಷ್ಕಭಾಕ್ ॥೪॥

ಕೇಂದ್ರ ತ್ರಿಕೋಣಗೆ ಚಾಂಯನಾಥೆ ಶುಭ ಸಮನ್ವಿತೆ ।
ಚತ್ವಾರಿಂಶೆ ತು ಸಂಪ್ರಾಪ್ತೆ ಸ ಸಹಸ್ರಾರ್ಧ ನಿಷ್ಕಭಾಕ್ ॥೫॥

ಲಾಭಸ್ಥಾನೆ ಗುರುಯುತೆ ಧನೆ ಚಂದ್ರ ಸಮನ್ವಿತೆ ।
ಭಾಗ್ಯಸ್ಥಾನಗತೆ ಶುಕ್ರೆ ಷಟ್‌ಸಹಸ್ರಧಿಪೋ ಭವೇತ್ ॥೬॥

## ಪರಾಶರರು ಹೇಳಿದರು–

ಹೇ ಮುನಿಯೇ, ಈಗ ನಾನು ಲಾಭ ಭಾವದ ಫಲ ಹೇಳುತ್ತೇನೆ – ಲಾಭದ ಬಗ್ಗೆ ಶುಭಾಶುಭ ತಿಳಿಯಲು ಸ್ವಭಾವತಃ ಎಲ್ಲರೂ ಅಭಿಲಾಷೆಯುಳ್ಳವರಾಗಿರುತ್ತಾರೆ – ಲಾಭೇಶ ಲಾಭಸ್ಥಾನ ಅಥವಾ ಕೇಂದ್ರ, ತ್ರಿಕೋನ ಅಥವಾ ಉಚ್ಚಸ್ಥನಾಗಿ ಸೂರ್ಯನಿಂದ ಅಸ್ತಂಗತನಾಗಿದ್ದರೂ ಕೂಡ ಪೂರ್ಣ ಲಾಭ ಹೇಳುವುದು. ಲಾಭೇಶ ಧನ ಸ್ಥಾನ, ಧನೇಶ ಕೇಂದ್ರದಲ್ಲಿ ಗುರುಗಿನ ಜೊತೆಗಿದ್ದರೆ ಬಹಳ ಲಾಭ ದಾಯಕವೇ. ಶುಭಗ್ರಹಯುಕ್ತ ಲಾಭೇಶ ತೃತೀಯಸ್ಥಾನದಲ್ಲಿದ್ದರೆ 36ನೇ ವರ್ಷಕ್ಕೆ – ಜಾತಕನಿಗೆ ಸುವರ್ಣಮುದ್ರೆ ಪ್ರಾಪ್ತ ಮಾಡಿಕೊಡುತ್ತಾರೆ. ಶುಭಗ್ರಹಯುಕ್ತ ಲಾಭೇಶ ಕೇಂದ್ರ ಅಥವಾ ತ್ರಿಕೋನದಲ್ಲಿದ್ದರೆ 40ನೇ ವರ್ಷ – ಅರ್ಧ ಕೋಟ್ಯಾಧೀಶ(500 ನಿಷ್ಕೆ)ದ ಅಧಿಪನಾಗುತ್ತಾನೆ. ಗುರು ಮುಖ್ಯವಾಗಿ ಲಾಭಸ್ಥಾನದಲ್ಲಿ ಚಂದ್ರ ಧನ ಸ್ಥಾನದಲ್ಲಿ

ಹಾಗೂ ಶುಕ್ರ ಭಾಗ್ಯಸ್ಥಾನದಲ್ಲಿದ್ದರೆ 600 ನಿಷ್ಕೆಗಳ ಅಧಿಪನಾಗುತ್ತಾನೆ. (ನಿಷ್ಕೆ ಆಗಿನ ಬಂಗಾರದ ನಾಣ್ಯ)

ಲಾಭಾಚ್ಚ ಲಾಭಗೆ ಜೀವೆ ಚಂದ್ರೆ ಚಾಂದ್ರಿಸಮನ್ವಿತೆ ।
ಧನ ಧಾನ್ಯಾಧಿಪಃ ಶ್ರೀಮಾನ್ ರತ್ನಾದ್ಯಾಭರಣೈರ್ಯುತಾಃ ॥೭॥

ಲಾಭೇಶೆ ಲಗ್ನ ಭಾವಸ್ಥೆ ಲಗ್ನೇಶೆ ಲಾಭಸಂಯುತೆ ।
ತ್ರಯಸ್ತ್ರಿಂಶೆ ತು ಸಂಪ್ರಾಪ್ತೇ ಭವೇನ್ನಿಷ್ಕ ಸಹಸ್ರಭಾಕ್ ॥೮॥

ಧನೇಶೆ ಲಾಭರಾಶಿಸ್ಥೆ ತದೀಶೆ ಧನರಾಶಿಗೆ ।
ವಿವಾಹಾತ್ ಪರತಶ್ಚೈವ ಬಹುಭಾಗ್ಯಂ ಸಮಾದಿಶೇತ್ ॥೯॥

ಧೈರ್ಯೇಶೆ ಲಾಭರಾಶಿಸ್ಥೆ ಲಾಭೇಶೆ ಭ್ರಾತೃಸಂಸ್ಥಿತೆ ।
ಭ್ರಾತೃಭಾವದ್ಧನ ಪ್ರಾಪ್ತಿ – ರ್ದಿವ್ಯಾಭರಣ ಸಂಯುತಃ ॥೧೦॥

ಲಗ್ನದಿಂದ ಏಕಾದಶದಲ್ಲಿ ಚಂದ್ರ, ಬುಧನ ಜೊತೆ ಗುರು ಇದ್ದರೆ ವಿಚಿತ್ರ ರತ್ನ ಆಭೂಷ ಆದಿಯಿಂದ ಧನ ಧಾನ್ಯದ ಯಜಮಾನನಾಗಿರುತ್ತಾನೆ. ಲಾಭೇಶ ಲಗ್ನದಲ್ಲಿ ಲಗ್ನೇಶ ಲಾಭದಲ್ಲಿ ಇದ್ದರೆ 33ನೇ ವರ್ಷ 1000ದಷ್ಟು ಸ್ವರ್ಣಮುದ್ರೆಗಳು (1000 ಕೋಟಿ) ಅವನಿಗೆ ದೊರೆತು ಕೋಟ್ಯಾಧಿಪನಾಗುತ್ತಾನೆ. ಧನೇಶ ಲಾಭಸ್ಥಾನದಲ್ಲಿ ಹಾಗೂ ಲಾಭೇಶ ಧನದಲ್ಲಿದ್ದರೆ ವಿವಾಹ ನಂತರ ಜಾತಕ ವಿಶಿಷ್ಟ ಲಾಭಯುಕ್ತನಾಗುತ್ತಾನೆ. ತೃತೀಯೇಶ ಲಾಭದಲ್ಲಿ ಲಾಭೇಶ ತೃತೀಯದಲ್ಲಿದ್ದರೆ ಅಣ್ಣ, ತಮ್ಮರಿಂದ ಧನ ಪ್ರಾಪ್ತಿ ಮಾಡಿಕೊಳ್ಳುವನು ಹಾಗೂ ದಿವ್ಯಾಭರಣಯುಕ್ತನಾಗುವನು.

## ಅಲಾಭಕ್ಯದ್ಯೋಗ

ಲಾಭೇಶೆ ನೀಚಭೇಸ್ತೆವಾ ತ್ರಿಕೆ ಪಾಪಸಮನ್ವಿತೆ ।
ಕೃತೆ ಭೂರಿ ಪ್ರಯತ್ನೇಪಿ ನೈವ ಲಾಭಃ ಕದಾಚನ ॥೧೧॥

ಲಾಭೇಶ ತನ್ನ ನೀಚದಲ್ಲಿ ಅಸ್ತಂಗತ ಅಥವಾ ತ್ರಿಕ್(3, 6, 8)ರಲ್ಲಿ ಪಾಪಗ್ರಹ ಯುಕ್ತನಾದರೆ ಭೂರಿ ಪ್ರಯತ್ನದಿಂದಲೂ ಲಾಭ ದೊರೆಯಲಾರದು.

ಈ ಎಲ್ಲ ಅಂಶ ಬಲಾಬಲ ದೃಷ್ಟಿ ಹಾಗೂ ಗ್ರಹ ಅವಲೋಕಿಸಿಯೇ ಹೇಳುವುದು. ಬೇರೆ ಬೇರೆ ಭಾಗದಲ್ಲಿ ಹೇಳಿದ ಲಾಭೇಶನ ಅಂಶ ಗಣನೆಗೆ ತೆಗೆದು ಕೊಂಡು ವಿಷಯ ವಿವರಿಸುವುದು – ಲಾಭಾಧಿ ಪಗಾರ ಎಂಬುದು ಅತಿ ಪ್ರಮುಖ ಅಂಶ.

ಈ ಭಾವದಿಂದ ಎಲ್ಲ ಪ್ರಕಾರದ ಧನಲಾಭ, ಪಶು ಮಿತ್ರ ರಾಜ್ಯ ಕನ್ಯಾ ಧನ ಪರಿವಾರ ಸಂಬಂಧಿಗಳು, ಆಸ್ತಿ, ಮನೆ, ಮರ, ಕಾಲಿನ ವಿಚಾರ, ಎಡಗಿವಿ ಚಿಂತೆ, ವಸ್ತ್ರ, ಪುತ್ರ ಪರಾಧೀನತೆ, ಪೂರ್ವಾರ್ಜಿತ ಧನ ಸ್ತ್ರೀಯಿಂದ ಧನಲಾಭ, ದ್ರವ್ಯ ಲೋಭ, ಭಾಗ್ಯೋದಯ ಕಾರ್ಯ ಹಾಗೂ ಇತರ ಸಿದ್ಧಿ ಸಾತ್ವಿಕ ಉಪಾಸನೆ – ಮಂತ್ರಪದ ಮಾವನಿಂದ ಲಾಭ, ಶಾರ್ಟ್ ಹ್ಯಾಂಡ್, ಟೈಪಿಂಗ್ – ಅಣ್ಣ-ತಮ್ಮ, ಅಕ್ಕ, ತಂಗಿಯರ ಭಾಗ್ಯ. ಸ್ವ ಪರಾಕ್ರಮ ವಾಹನ ಪರಿಶ್ರಮದ ಪ್ರಾಪ್ತಿ ಹೆಂಡತಿಯ ವಿದ್ಯೆ ರಾಜಾಧಿಕಾರ ಕಳ್ಳ–ಋಜು ವ್ಯಾಪಾರದಲ್ಲಿ ಲಾಭ, ಆದಿ ಬುದ್ಧಿ ಸ್ವಾಮಿಕರ್ತಾ ಇತ್ಯಾದಿ ಪ್ರಮುಖ ಅಂಶಗಳ ವಿವೇಚನೆ ಭಾಗ್ಯಸ್ಥಾನ ಭಾಗ್ಯಾಧಿಪ – ಅವನಿದ್ದ ಸ್ಥಳದ (ರಾಶಿ) ಅಧಿಪನ ಕಾರಕತ್ವ – ಇತ್ಯಾದಿ ವಿಷಯಗಳೊಂದಿಗೆ ಪ್ರಮುಖವಾಗಿ ನನ್ನ ವಿಚಾರದಂತೆ–

ವಿಧಾನಸಭಾ – ಸದಸ್ಯತ್ವ – ಮಂತ್ರಪದ ಹಾಗೂ ವಿದೇಶ ವ್ಯಾಪಾರ ನೋಡಲು ಬರುವುದು. ಆಯಾ ಅಂಶಗಳಿಗೆ ಕಾರಕತ್ವ ನೋಡಿ ವಿವೇಚಿಸುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಏಕಾದಶ**
**ಭಾವಫಲಾಧ್ಯಾಯಃ ಸಮಾಪ್ತಿಃ**

# ಅಥ ದ್ವಾದಶ (ವ್ಯಯ) ಭಾವಫಲಾಧ್ಯಾಯಃ

**ಪರಾಶರ ಉವಾಚ:**

ಅಥಬ್ರವೀಮಿ ಮೈತ್ರೇಯ ವ್ಯಯಭಾವಗತಂ ಫಲಮ್ ।
ಸ್ವರಾಶಿಗೆ ತುಂಗಗೆ ವಾ ಸೌಮ್ಯಯುಕ್ತೇಕ್ಷಿತೇಪಿವಾ ॥೧॥

ವ್ಯಯೇಶೆಥ ವ್ಯಯೋ ಸೌಮ್ಯೈರ್ಯುತೆ ದೃಷ್ಟೆ ಶುಭವ್ಯಯಃ ।
ಚಂದ್ರೋ ವ್ಯಯಾಧಿಪೋ ಧರ್ಮಲಾಭ ಮಂತ್ರೇಷು ಸಂಸ್ಥಿತಃ ॥೨॥

ಸ್ವೋಚ್ಚೆ ಸ್ವರ್ಕ್ಷೆ ನಿಜಾಂಶೆ ವಾ ಲಾಭ ಧರ್ಮಾತ್ಮಜಾಂಶಕೆ ।
ದಿವ್ಯಾಗಾರಾದಿ ಪರ್ಯಂಕೋ ದಿವ್ಯ ಗಂಧೈಕಭೋಗವಾನ್ ॥೩॥

ಪರಾರ್ಧರಮಣೋ ದಿವ್ಯವಸ್ತ್ರ ಮಾಲ್ಯಾದಿ ಭೂಷಣ ।
ಪರಾರ್ಧ್ಯಮಿತ್ರ ಸಂಯುಕ್ತೊ ದಿನಾನಿ ನಿಯತಿ ಪ್ರಭುಃ ॥೪॥

ಪರಾಶರರು ಹೇಳಿದರು—

ಹೇ ಮೈತ್ರೇಯನೆ, ಈಗ ನಾನು ವ್ಯಯಭಾವದ ಫಲ ಹೇಳುತ್ತೇನೆ. ವ್ಯಯೇಶ ತನ್ನ ರಾಶಿ ಅಥವಾ ಉಚ್ಚನಾಗಿ ಶುಭ ಗ್ರಹಯುತ ದೃಷ್ಟನಾಗಿದ್ದರೆ ಅಥವಾ ವ್ಯಯಸ್ಥನಾಗಿ ಶುಭಗ್ರಹ ಯುತನಾಗಿದ್ದರೆ ಜಾತಕನಿಗೆ ಶುಭಕಾರ್ಯದಲ್ಲಿ ವ್ಯಯ ಹೇಳುವುದು. ವ್ಯಯಾಧಿಪ ಚಂದ್ರನಾಗಿ ಅವನು ಉಚ್ಚನಾಗಿ (ವೃಷಭದಲ್ಲಿ) ಅಂದರೆ ದಶಮದಲ್ಲಿ ಅಥವಾ ನವಮ, ಏಕಾದಶ ಅಥವಾ ಪಂಚಮದಲ್ಲಿ ತನ್ನ ನವಾಂಶ ದಲ್ಲಿದ್ದರೆ ಅಥವಾ ಏಕಾದಶ, ನವಮ, ಪಂಚಮ ಭಾವಗತ ನವಾಂಶದಲ್ಲಿದ್ದರೆ ಜಾತಕ ದಿವ್ಯಾಗಾರ ಸುಂದರ ಪಲ್ಲಂಗ ದ್ರವ್ಯ ಆದಿ ಭೋಗಯುಕ್ತನಾಗುವನು – ಮೇಲಿನ ಯೋಗದಲ್ಲಿಯ ಜಾತಕ ದಿವ್ಯವಸ್ತ್ರ, ಆಭೂಷಣ, ಮಾಲ್ಯ ಅಸಂಖ್ಯ ಸಂಪತ್ತಿನ ಸ್ವಾಮಿಯಾಗುವನು. ವಿಲಾಸಪೂರ್ಣನು ಆಗುವನು.

ಏವಂ ಸ್ವಶತ್ರು – ನೀಚಾಂಶೀಪ್ಯಾಂಶೆ ವಾಪ್ಯಷ್ಟಮೇ ರಿಪೌ ।
ಸಂಸ್ಥಿತಃ ಕುರುತೆ ಜಾತಂ ಕಾಂತಾ ಸುಖ ವಿವರ್ಜಿತಮ್ ॥೫॥

ವ್ಯಯಾಧಿಕ್ಯ ಪರಿಕ್ಲಾಂತಂ ದಿವ್ಯಭೋಗ ನಿರಾಕೃತಮ್ ।
ಸಹಿ ಕೇಂದ್ರ ತ್ರಿಕೋಣಸ್ಥ ಸ್ವಸ್ತ್ರೀಯಾಲಂಗತಃ ಸ್ವಯಮ್ ॥೬॥

ಜಾತಕಸ್ಯ ಯಥಾ ಪ್ರೋಕ್ತಂ ಫಲಂ ಲಗ್ನಾನ್ಮದೃಷ್ಟಿಭಿಃ ।
ಏವಂ ಭ್ರಾತ್ರಾದಿಭಾವೇಭ್ಯ ಸ್ತತ್ರತ್ ಸರ್ವ ವಿಚಾರಯೇತ್ ॥೭॥

ವ್ಯಯೇಶ ತನ್ನ ಶತ್ರುಗ್ರಹ, ನೀಚರಾಶಿ ಅಥವಾ ನೀಚ ನವಾಂಶ, ಷಷ್ಠ, ಅಷ್ಟಮ ಸ್ಥಾನ – ಅಥ ಷಷ್ಠಾಷ್ಟಮ, ನವಾಂಶಗತನಾಗಿದ್ದರೆ ಜಾತಕ ಸ್ತ್ರೀಸೌಖ್ಯ ಹಾಗೂ ಅನ್ನ ದ್ರವ್ಯಾದಿ ಸೌಖ್ಯವಿಹಿತನಾಗುತ್ತಾನೆ. ಅವನಿಗೆ ನಿರರ್ಥಕ ವ್ಯಯ ದಿಂದಲೂ ಖಿನ್ನತೆಯುಂಟಾಗುತ್ತದೆ. ಅದೇ ವ್ಯಯೇಶ ಕೇಂದ್ರ ತ್ರಿಕೋನಗತನಾಗಿದ್ದರೆ ಅವನು ಸ್ತ್ರೀ ಸುಖದಿಂದ ಪೂರ್ಣನಾಗಿರುತ್ತಾನೆ. ಯಾವ ಪ್ರಕಾರ ಲಗ್ನದಿಂದ ಭಾವದ ಫಲಾದೇಶ ಮಾಡಲಾಗಿದೆಯೋ ಅದೇ ರೀತಿ ಉಳಿದ ಭಾವಗಳಿಂದಲೂ ಫಲಾದೇಶ ಮಾಡುವುದು.

ವಿಶೇಷ ಸೂಚನೆ – ಯಾವ ಭಾವ ನೋಡಬೇಕಾಗಿದೆಯೋ ಆ ಭಾವ ಲಗ್ನವೆಂದು ಪರಿಗಣಿಸಿ ಫಲಾದೇಶವೂ ಮಾಡುವುದು.

**ದೃಶ್ಯಾ ದೃಶ್ಯಾರ್ಧ ಚಕ್ರಸ್ಥಾ ಗ್ರಹಾಸ್ತು ಫಲದಾಃ ಕ್ರಮಾತ್ ।**
**ಪ್ರತ್ಯಕ್ಷತಃ ಪರೋಕ್ಷೇ ಚ ಜ್ಞೇಯಮೇತದ್ ವಿದಾ ಸದಾ ॥೮॥**

ಇಲ್ಲಿ ದೃಶ್ಯ ಗೋಲಾರ್ಧದಲ್ಲಿಯ ಗ್ರಹಗಳು ಪ್ರತ್ಯಕ್ಷವಾಗಿಯೂ ಅದೃಶ್ಯ ಗೋಲಾರ್ಧದ ಗ್ರಹಗಳು ಅಪ್ರತ್ಯಕ್ಷ ದೃಷ್ಟ್ಯಾದಿಗಳಿಂದ ಫಲದಾಯಕವಾಗಿವೆ.

ಈ ಮೊದಲೇ ತಿಳಿಸಿದಂತೆ ಲಗ್ನ ಬಿಂದುವಿನಿಂದ ಸಪ್ತಮ ಬಿಂದು ಅದೃಶ್ಯ ಗೋಲಾರ್ಧ ವಿಪರೀತ. ಸಪ್ತಮ ಬಿಂದುವಿನಿಂದ ಲಗ್ನ ಬಿಂದು ದೃಶ್ಯ ಗೋಲಾರ್ಧ.

ದೃಶ್ಯ – ಅದೃಶ್ಯಗಳು ವೈಜ್ಞಾನಿಕವಾಗಿ ಸತ್ಯಯುಕ್ತವಾದವುಗಳೇ. ಲಗ್ನದಿಂದ ಸಪ್ತಮದವರೆಗೆ ಕಾಂತ ವೃತ್ತದ ಪ್ರದೇಶ ಕ್ಷಿತಿಜದ ಅಧೋಗತವಾಗಿರುತ್ತದೆ. ಅದಕ್ಕೆ ಅದೃಶ್ಯ ಸಪ್ತಮದಿಂದ ಲಗ್ನ ಬಿಂದು ಕಾಂತ ವೃತ್ತೀಯ ಪ್ರದೇಶ ಕ್ಷಿತಿಜದ ಮೇಲೆ ಇರುವುದರಿಂದ, ಕಾಣುವುದರಿಂದ – ದೃಶ್ಯ ಅದಕ್ಕಾಗಿ ಪ್ರತ್ಯಕ್ಷ, ಪರೋಕ್ಷ ಫಲ ಹೇಳಿರುವುದು.

## ದೃಶ್ಯ – ಅದೃಶ್ಯ ಗೋಲಾರ್ಧದ ಚಿತ್ರ



ವ್ಯಯ ಸ್ಥಾನಗತೋ ರಾಹುರ್ಭೌಮಾರ್ಕಾಭ್ಯಾಂ ಹಿ ಸಂಯುತಃ ।
ತದೀಶೆ ಚಾರ್ಕಸಂಯುಕ್ತೆ ನರಕೆ ಪತನಂ ಭವೇತ್ ॥೯॥

ವ್ಯಯಸ್ಥಾನಗತೆ ಸೌಮ್ಯೆ ತದೀಶೆ ಸ್ವೋಚ್ಚರಾಶಿಗೆ ।
ಶುಭಯುಕ್ತೆ ಶುಭೈರ್ದೃಷ್ಟೆ ಮುಕ್ತಿಃ ಸ್ಯಾನ್ನೆಹ ಸಂಶಯ ॥೧೦॥

ವ್ಯಯೇಶೆ ಪಾಪಸಂಯುಕ್ತೆ ವ್ಯಯೇ ವಾಪಿ ಸಮನ್ವಿತೆ ।
ಪಾಪಗ್ರಹೇಣ ಸಂದೃಷ್ಟೆ ದೇಶಾದ್ಯೆ ಶಾಂತರಂ ಗತಃ ॥೧೧॥

ವ್ಯಯೇಶೆ ಶುಭರಾಶಿಸ್ಥೆ ವ್ಯಯೇರ್ಕ್ಷೆ ಶುಭ ಸಂಯುತೆ ।
ಶುಭಗ್ರಹೇಣ ಸಂದೃಷ್ಟೆ ಸ್ವದೇಶಾತ್ ಸಂಚರೋ ಭವೇತ್ ॥೧೨॥

ವ್ಯಯೇ ಮಂದ ಸಂಯುಕ್ತೆ ಭೂಮಿಜೇನ ಸಮನ್ವಿತೆ ।
ಶುಭ ದೃಷ್ಟೆ ಸಂಪ್ರಾಪ್ತಿಃ ಪಾಪ ಮೂಲದ್ಧಾನಾರ್ಜನಮ್ ॥೧೩॥

ಲಗ್ನೇಶೆ ವ್ಯಯ ರಾಶಿಸ್ಥೆ ವ್ಯಯೇಶೆ ಲಗ್ನಸಂಯುತೆ ।
ಭೃಗು ಪುತ್ರೇಣ ಸಂಯುಕ್ತೆ ಧರ್ಮ ಮೂಲಾದ್ಧನವ್ಯಯಃ ॥೧೪॥

ಮಂಗಳ, ಸೂರ್ಯನ ಜೊತೆಗೆ ರಾಹು ವ್ಯಯಸ್ಥಾನದಲ್ಲಿ ವ್ಯಯೇಶನು ಸೂರ್ಯನ ಜೊತೆಗಿದ್ದರೆ ಮನುಷ್ಯ ನರಕವಾಸಿಯಾಗುತ್ತಾನೆ. ವ್ಯಯದಲ್ಲಿ ಶುಭಗ್ರಹವಿದ್ದು ವ್ಯಯೇಶ ತನ್ನ ಉಚ್ಚರಾಶಿಗತನಾಗಿ ಶುಭಗ್ರಹಯುತನಾದರೆ ನಿಸ್ಸಂದೇಹ ಮನುಷ್ಯ ಮೋಕ್ಷಭಾಗಿಯಾಗುತ್ತಾನೆ. ವ್ಯಯೇಶ ಪಾಪಗ್ರಹಯುಕ್ತನಾಗಿ ವ್ಯಯಸ್ಥಾನವೂ ಪಾಪಗ್ರಹಯುಕ್ತ ಅಥವಾ ದೃಷ್ಟವಾಗಿದ್ದರೆ ಜಾತಕ ದೇಶ ದೇಶಾಂತರ ತಿರುಗುವವನಾಗುತ್ತಾನೆ. ವ್ಯಯೇಶ ಅಂತೆ ವ್ಯಯಸ್ಥಾನ ಶುಭರಾಶಿ ಹಾಗೂ ಶುಭಗ್ರಹದಿಂದ ಕೂಡಿದ್ದರೆ ಜಾತಕ ಸ್ವದೇಶದಲ್ಲಿ ಭ್ರಮಣಶೀಲನಾಗಿರುತ್ತಾನೆ. ವ್ಯಯಸ್ಥಾನ ಶನಿ, ಮಂಗಳ ಆದಿ ಪಾಪಗ್ರಹಯುಕ್ತವಾಗಿ ಶುಭಗ್ರಹದ ದೃಷ್ಟಿ ಇರದಿದ್ದರೆ ಜಾತಕನಿಗೆ ಪಾಪ ಮೂಲಕ ಧನೋಪಾರ್ಜನೆಯಾಗುತ್ತದೆ. ಲಗ್ನೇಶ ವ್ಯಯಸ್ಥಾನಗತ ಹಾಗೂ ವ್ಯಯೇಶ ಲಗ್ನಗತನಾಗಿ ಶುಕ್ರ ಸಂಯುಕ್ತನಾಗಿದ್ದರೆ ಧರ್ಮ ಮೂಲಕ ಧನವ್ಯಯವಾಗುತ್ತದೆ.

ಈ ಅಂಶಗಳ ಜೊತೆಗೆ ಈ ಕೆಳಗಿನ ಅಂಶಗಳನ್ನು ವಿಮರ್ಶಿಸುವುದು.

ಕಾರಾವಾಸ – ದೂರ ಪ್ರವಾಸ, ಉದಾರತೆ, ನಿದ್ರೆಸುಖ, ಧನ ನಾಶ, ಖರ್ಚು, ಶತ್ರು ವಿರೋಧ, ಪೀಡಾ ದುಃಖ, ನರಕ ಪ್ರಾಪ್ತಿ, ಶರೀರ ವ್ಯಂಗ ಕಣ್ಣು ದಂಡ ಹಠ ಮನೋಕಷ್ಟ ಶತ್ರು ಭಯ, ಬಂಧನ, ವ್ಯಭಿಚಾರ ವ್ಯವಹಾರ, ವಿವಾಹ (ತೊಂದರೆ

ದಾಯಕ ಸಾಮಾನ್ಯ ಪ್ರೀತಿ ಇತ್ಯಾದಿ) ಅಧಿಕಾರ ತ್ಯಾಗ ಪ್ರಸಂಗ, ಅಧಿಕಾರ ನಾಶ, ಕ್ಷಯ ದೀನತಾ – ಮಾವನ ವಿರೋಧಿ, ತಾಯಿ ಭಾಗ್ಯ ವ್ಯಸನಗಳು – ಅನೀತಿವಂತರ ಗೆಳೆತನ, ಕಳ್ಳರ ಕಾಟ – ಆತ್ಮಹತ್ಯೆಯ ವಿಚಾರ – ಪ್ರಾಚೀನ ರೋಗ – ಗೆಳೆಯನ ಭಾಗ್ಯಾದಿಗಳನ್ನು – ವಿಶೇಷ – ಉಪ್ಪಿನ ವ್ಯವಸಾಯ – ಪಡಗು ಕಟ್ಟಿದ ಕಾರ್ಖಾನೆ – ನಾವಿಕ – ಲೋಕಸಭಾ, ರಾಜ್ಯ ಸಭಾ – ಪ್ರತಿನಿಧಿ – ಚುನಾಯಿತ ಸದಸ್ಯ ಈ ವಿಶೇಷ ಅಂಶವನ್ನು ಪರಿಗಣಿಸುವುದು.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ದ್ವಾದಶ ಭಾವ ಫಲಾಧ್ಯಾಯಃ ಸಮಾಪ್ತಃ

* * *

## ವಿಶೇಷ ವಿಮರ್ಶೆ

ಮುಂದಿನ ಭಾವಾಧೀಶ ಫಲಕ್ಕೂ ಅನುಕೂಲವಾಗುವಂತೆ ಜ್ಯೋತಿಷ್ಯಾಚಾರ್ಯರು ಆಕಾಶದಲ್ಲಿ 30 ಡಿಗ್ರಿಯ 12 ಭಾಗ ಮಾಡಿ – ಅಧಿಪತಿಗಳನ್ನು ನಿರ್ಧರಿಸಿದ್ದಾರೆ – ಲಗ್ನ – ಬದಲಾಗುತ್ತಿರುತ್ತದೆ.

1) ಕ್ಷಿತಿಜದ ಪ್ರಾರಂಭ – 0 ಡಿಗ್ರಿಯಿಂದ 30 ಡಿಗ್ರಿಕ್ಕೆ ಲಗ್ನವೆನ್ನುವೆವು. ಅಲ್ಲಿ ರಾಶಿ ಗ್ರಹಸ್ಥಾಪಿಸುತ್ತೇವೆ. 30 ಡಿಗ್ರಿ – 60 ಡಿಗ್ರಿ ಇದೇ ರೀತಿ 180 ಡಿಗ್ರಿ ಪೂರ್ವಕ್ಷಿತಿಜ ಆನಂತರ ಸಪ್ತಮದಿಂದ ಪಶ್ಚಿಮ ಕ್ಷಿತಿಜ 180 ಡಿಗ್ರಿ.



ಪೂರ್ವಕ್ಷಿತಿಜ ಪೃಥ್ವಿಯ ಮೇಲ್ಗಡೆ – ಕಾಂತ ವೃತ್ತವೆಂದು ಹಾಗೂ ಪಶ್ಚಿಮ ಕ್ಷಿತಿಜ ಪೃಥ್ವಿಯ ಕೆಳಗಡೆ ಕ್ಷಿತಿಜವೆಂದು – ದೃಶ್ಯ, ಅದೃಶ್ಯ ಭಾಗವೆಂದು ಪರಿಗಣಿಸ ಲಾಗಿದೆ. ಸಮಯ ಹಾಗೂ ಇತರ ಅಂಶದಿಂದ ಈ ರೀತಿ ಭಾಗ ಮಾಡಬಹುದು.

ಮೇಲೆ ಚಿತ್ರಿಸಿದ 12 ಭಾವಗಳನ್ನು ಋಷಿ ಮುನಿಗಳು ಜ್ಯೋತಿಷ್ಯ ಆಚಾರ್ಯರು –ಆ ಸಮಯದ ಸಮಾಜ ಪರಿಸರ ಹಾಗೂ ಆತ್ಮಜ್ಞಾನ ಮೂಲ ಈ ಸುಂದರವಾಗಿ, ವೈಜ್ಞಾನಿಕವಾಗಿ ನಿರ್ಧರಿಸಿದ್ದಾರೆ.

1) ಸೂರ್ಯನ ಉದಯ ಪೂರ್ವ – ಮುಂಜಾವು. ಪೂರ್ವದಿಂದ ಪಶ್ಚಿಮದ ಕಡೆಗೆ ಪ್ರಯಾಣ. ಸೂರ್ಯ ಪ್ರಕಟ ಬಿಂದು ಪೂರ್ವ ಕ್ಷಿತಿಜ. ಅದು ಅವನ ಜನನ. ಅರ್ಥಾತ್ ಜನ್ಮಭಾವವೇ ಲಗ್ನ. ಪ್ರಥಮ ಸ್ಥಾನದಲ್ಲಿ ಲಗ್ನ ಸ್ಥಾಪಿಸಿರುತ್ತಾನೆ. ಜನನ ಪ್ರಮುಖವಾಗಿ ಶಿರದಿಂದಲೇ ಆಗುತ್ತದೆ. ಲಗ್ನವೇ ಶಿರಭಾಗ – ಪ್ರಾತಃ ಕಾಲದಲ್ಲಿ ಶೌಚಾದಿಕ್ರಿಯೆ, ಮುಖ ಮಾರ್ಜನ, ಈಶ್ವರ ಚಿಂತನ, ಕೆಲಸ ಚಿಂತನೆ – ಅತಿಥಿಗಳ ಭೇಟಿ, ಋಷಿ ಮುನಿಗಳು ಹೋಮ ಹವನ – ಶಿಷ್ಯರಿಗೆ ವಿದ್ಯೆ ಭೋದನೆ – ಇದು ಪುರುಷಕಾರ್ಯ. ಸೂರ್ಯ ಪೂರ್ವದಿಂದ ಬಂದು ಕಾರ್ಯ ಪ್ರವೃತ್ತ ನಾಗುವನೋ ಆ ರೀತಿ ಪುರುಷಕಾರ್ಯ ಪ್ರಾರಂಭ. ಅದಕ್ಕೆ ಪುರುಷ ಭಾವವೆನ್ನು ವರು. ಅಷ್ಟಾಂಗ ಯೋಗದಲ್ಲಿ ಈ ಭಾವಕ್ಕೆ ಅಹಿಂಸಾಭಾಗ ಎಂದು, ಯಮ ಭಾಗವೆಂದು ಹೇಳಿದ್ದಾರೆ. ಈ ಕಾರ್ಯ 6, 8ರವರೆಗೆ....

2) ಪೂರ್ವ ಕ್ಷಿತಿಜದ ಮುಂದಿನ 30ಡಿಗ್ರಿ ದ್ವಾದಶಭಾವ ಆಗ... ಈ ಸಮಯದಲ್ಲಿ ವಂದಿ ಮಾಗದರು ರಾಜನ ಸ್ತುತಿ ಮಾಡುತ್ತಿದ್ದರು – ರಾಜನು ಅವರಿಗೆ ಪುರಸ್ಕಾರ ನೀಡುತ್ತಿದ್ದನು (ಖರ್ಚು) ಬ್ರಾಹ್ಮಣಾದಿ ಯಾಚಕರಿಗೆ ದಾನ ಸಮಯ, ಖರ್ಚಿನ ವಿಚಾರ ಸಮಯ – ಋಷಿಗಳು, ಗುರುಗಳು ಪಾಠ ಹೇಳುವ ಸಮಯ (ವೇದಾಂತ) ಅದಕ್ಕೆ ಮುಕ್ತಿ ಸ್ಥಾನವೆಂದು ಸಾಧಾರಣ ಜನರು ಅವಶ್ಯ ವಸ್ತು ಖರೀದಿಸುತ್ತಿದ್ದರು. ಈ ಎಲ್ಲ ಕೊಡುವ ತೆಗೆದುಕೊಳ್ಳುವಿಕೆ ಕಾರಣ ವ್ಯಯ (ಖರ್ಚು) ಎಂದು ಕರೆಯಲಾಗಿದೆ.

3) ಮುಂದಿನ 30 ಡಿಗ್ರಿ ಆಯಭಾಗ – ಸೂರ್ಯ ಗದ್ದದಿಂದ ನೇರ ಹಣೆಗೆ ಬರುವ ಸಮಯ. ಆಗ ರಾಜನು ದರ್ಬಾರದಲ್ಲಿ ಕುಳಿತು – ಕಪ್ಪ ಕಾಣಿಕೆ ಪಡೆಯು ತ್ತಿದ್ದನು. ಈಗ ಬ್ಯಾಂಕ್ ವ್ಯವಹಾರ – ರಾಜಕೀಯ ವ್ಯವಹಾರ – ಎಲ್ಲರೂ ಲಾಭದ ಕಡೆಗೆ ವ್ಯಸ್ಥರಾದ್ದರಿಂದ ಈ ಭಾವ (ಸಮಯ) ಲಾಭಸಮಯ ಲಾಭವಾಯಿತು.

4) ಈ ಸಮಯವೂ ಕಾರ್ಯ ಉದ್ಯೋಗದ ವಿಮರ್ಶೆ ಸಮಯ, ವಿಶ್ರಾಂತ ಸಮಯ, ಋಷಿಮುನಿಗಳು ಪೂಜಾದಿ ಕಾರ್ಯ ನಿರತರಾಗಿರುತ್ತಿದ್ದುದರಿಂದ ಕರ್ಮವಾದರೆ ಆಕಾಶ ಮಧ್ಯ ಬಿಂದು ಎಷ್ಟು ಎತ್ತರವೋ ಜೀವನದಲ್ಲಿ ತಂದೆ ಸ್ಥಾನವೂ ಅಷ್ಟೇ ಎತ್ತರವಾದ್ದರಿಂದ ಪಿತಾ ಆಜ್ಞಾಸ್ಥಾನಗಳೆಂದು ಹೆಸರು. ಇಲ್ಲಿ ಶನಿ, ರಾಹು ಆದಿಗ್ರಹಗಳಿದ್ದರೆ – ಜನರು ಯೋಗ ವೇದಾಂತ ಕಾರ್ಯದಲ್ಲಿ ಅಭಿರುಚಿಯುಳ್ಳವರೆಂದು ಹೇಳಿದೆ.

5) ಈ ಸಮಯದಲ್ಲಿ ಕಾಯ್ದೆ ಕಾನೂನು ವಿಚಾರ ಹಾಗೂ ಬ್ಯಾಂಕು ಆದಿಗಳಲ್ಲಿ ಜಮಾ ಖರ್ಚು – ದೇವಮಂದಿರ ವ್ಯವಸ್ಥೆ ಈ ಸಮಯದಲ್ಲಿ ಆಗುತ್ತಿದ್ದುದರಿಂದ ಹಾಗೂ ಸಾಧಾರಣ ಜನರು ಪುರಾಣಾದಿಗಳಿಗೆ ಹೋಗುವ ತಯಾರಿಯಲ್ಲಿರುತ್ತಿದ್ದುದರಿಂದ ಕಾರ್ಯವೇ ದೈವವಾದ್ದರಿಂದ ಜಂಜಾಟಮುಕ್ತರಾಗಿ ಕಾರ್ಯ ನಿರ್ವಹಿಸುತ್ತಿದ್ದುದರಿಂದ ಧರ್ಮ – ಭಾಗ್ಯ ಭಾವವಾಯಿತು.

6) ಪೂರ್ವ ಕ್ಷಿತಿಜದ ಅಂತ್ಯ ಇಲ್ಲಿಂದಲೇ ಆರಂಭವಾದುದರಿಂದ ಅಸ್ತಕ್ಕೆ ರವಿ ಸಮೀಪಿಸಿರುವುದರಿಂದ – ಅಸ್ತ – ಮೃತ್ಯು ಸಮಾನವಾದುದರಿಂದ ಮೃತ್ಯುಸ್ಥಾನವೆಂದರು. ಋಷಿಮುನಿ ಗೃಹಸ್ಥರು ಸಮಾಧಿಸ್ಥರಾಗುತ್ತಿದ್ದರು. (ಸಂಧ್ಯಾದಿ ಕಾರ್ಯ) – ಸಮಾಧಿ ಸ್ಥಿತಿಯಲ್ಲಿ ಆತ್ಮ ಶರೀರ ಬಿಟ್ಟು ಬ್ರಹ್ಮಚಕ್ರದಲ್ಲಿ ಮರ್ಯಾದಿತವಾಗುತ್ತಿದ್ದುದರಿಂದ ಜನರು ವಿಶ್ರಾಂತಿಯಲ್ಲಿರುತ್ತಿದ್ದುದರಿಂದ ಮೃತ್ಯುಸ್ಥಾನವೆಂದರು.

7) ಈ ಭಾವ ಪಶ್ಚಿಮ ಕ್ಷಿತಿಜದ 30 ಡಿಗ್ರಿ ಕೆಳಭಾಗವಾಗುತ್ತದೆ. ಸೂರ್ಯಾಸ್ತದಿಂದ ಸುಮಾರು ರಾತ್ರಿ 8 ಗಂಟೆ. ಈ ಸಮಯದಲ್ಲಿ ಸೈನ್ಯದವರು ಶತ್ರುಗಳ ಮೇಲೆ ಆಕ್ರಮಣ ಯೋಜನೆ ರೂಪಿಸುತ್ತಿದ್ದರೆ – ಋಷಿಮುನಿಗಳು ಮಕ್ಕಳಿಗೆ ಯೋಗ ಸಾಧನ ತಿಳಿಸುವ ಸಮಯ – ಮನೆಯಲ್ಲಿ ಸ್ತ್ರೀಯರು ಕೆಲಸದಲ್ಲಿ ನಿರತ ಸಮಯ – ಅವರಿಗೆ ಸಲಹೆ ಸೂಚನಾದಿಗಳಿಂದ ಸ್ತ್ರೀಭಾವವಾಗಿದೆ. ಕ್ಷಿತಿಜದ ಮೊದಲು ಭಾವ – ಪುರುಷ – ಅಂತ್ಯ ಸ್ತ್ರೀ ಸ್ಥಿತಿ ನಾಜೂಕಾಗಿರುವುದರಿಂದ ಸ್ತ್ರೀಭಾವವೆಂದೇ ಕರೆಯುವರು. ಈ ಮಧ್ಯ ಅಷ್ಟಮ, ದಶಮ ವ್ಯಯಭಾವ, ಪುರುಷಭಾವ ನವಮ, ಏಕಾದಶ ಅವರವರ ಇತ್ಯರ್ಥಕ್ಕೆ ಬಿಡಲಾಗಿದೆ. ಅಷ್ಟಾಂಗ ಯೋಗದಲ್ಲಿ ಧ್ಯಾನದ ಮುಖ್ಯಭಾವವೆನ್ನುವರು.

8) ಷಷ್ಠ ರಾತ್ರಿ 8ರಿಂದ 10ರವರೆಗಿನ ಸಮಯ – ಗುಪ್ತ ಚರ್ಚೆಯ ಸಮಯ. ಅವಶ್ಯಕ ಗುಪ್ತ ಸಮಾಲೋಚನೆ ಗುಪ್ತಚಾರರಿಂದ ಸಮಾಚಾರ ತಿಳಿಯುವುದು. ಶತ್ರುಗಳ ಬಗ್ಗೆ ವಿಶೇಷ ಚಿಂತನೆ ಸಮಯವಾದ್ದರಿಂದ ಶತ್ರುಭಾವ ಋಷಿಮುನಿಗಳ

ಸಿದ್ಧಿಗಾಗಿ ಪ್ರಯಾಸದ ಸಮಯ, ರೋಗಾದಿಗಳ ತೀವ್ರತೆಯಿಂದ – ರೋಗಭಾವ ವಾದರೆ ಅಷ್ಟಾಂಗ ಹೃದಯದಲ್ಲಿ ಧಾರಣಭಾಗವೆನ್ನುವರು.

9) 10ರಿಂದ 12ರವರೆಗೆ ಸ್ತ್ರೀ ಸಮಯ. ಅದಕ್ಕಾಗಿ ಇದಕ್ಕೆ ಪುತ್ರಸ್ಥಾನ ಎನ್ನುವರು. ಅಷ್ಟಾಂಗದಲ್ಲಿ ಪ್ರತ್ಯಾಹಾರ ವಿಚಾರ – ಮಕ್ಕಳ ತೀವ್ರ ಮನೆ ಅಭ್ಯಾಸದ ಸಮಯವಾದ್ದರಿಂದ ವಿದ್ಯಾಸ್ಥಾನವು ಆಗಿದೆ. ಈ ಸಮಯದಲ್ಲಿ ಉಗ್ರಪಂಥಿಗಳು ಚಾರಣ ಮಾರಣ ಉಚ್ಚಾಟಣ ಇತ್ಯಾದಿ ಕೆಲಸದಲ್ಲಿ ತೊಡಗುತ್ತಿದ್ದರಿಂದ ಮಂತ್ರಸ್ಥಾನವೂ ಹೌದು.

10) ನಾಲ್ಕನೇ ಭಾವ ಕಳ್ಳಕಾಕರು ಅಡವಿ ಪ್ರಾಣಿ ವ್ಯಭಿಚಾರಿಗಳನ್ನು ಹೊರತು ಪಡಿಸಿ ಉಳಿದೆಲ್ಲರ ನಿದ್ರಾ ಸಮಯವಾದ್ದರಿಂದ – ದಿನದ ಎಲ್ಲ ಆಯಾಸ ಕಳೆಯುವುದರಿಂದ ಇದಕ್ಕೆ ಸುಖಸ್ಥಾನವೆಂದು – ಮಾತೃ ಆಶ್ರಯದಲ್ಲಿ ಸುಖ ರೂಪವಾಗಿರುವುದರಿಂದ ಮಾತೃಸ್ಥಾನವೆಂದು ಕರೆಯುವರು. ಇದು ಪಾತಾಳ ಮಧ್ಯ ಬಿಂದು – ಆಕಾಶ ಬಿಂದು ಎಷ್ಟು ದೂರವೋ ಅಷ್ಟೇ ಪಾತಾಳ ಬಿಂದು ಅದಕ್ಕಾಗಿಯೂ ಮಾತೃಸ್ಥಾನವೆನ್ನುವುದು. ಜೀವನದ ಅತೀ ಮಹತ್ವದ ವ್ಯಕ್ತಿಗು ಮಾತೃ–ಪಿತೃ. ಅಷ್ಟಾಂಗ ಹೃದಯದಲ್ಲಿ ಸಾಧನ ವಿಚಾರ.

11) ಪರಾಕ್ರಮ ಸ್ಥಾನ – ಸ್ವಪ್ನದಲ್ಲಿ ಸುಪ್ತ ಪರಾಕ್ರಮ ಪ್ರಕಟಗೊಳ್ಳುವುದ ರಿಂದ ಹಿಡಿದಿಟ್ಟ ಆಸೆ, ಆಕಾಂಕ್ಷೆಗಳು ನಿರ್ಮಲವಾಗುವುದರಿಂದ ಇದಕ್ಕೆ ಪರಾಕ್ರಮ ವೆಂದಿರಲು ಸಾಕು. ಋಷಿ ಮುನಿಗಳು ಈಶ್ವರ ಚಿಂತನೆ ಕಾಲ, ಅಷ್ಟಾಂಗದಲ್ಲಿ ಪ್ರಾಣಾಯಾಮ.

12) ಧನ: 4ರಿಂದ 6ರ ಸಮಯ – ಸಾಮಾನ್ಯವಾಗಿ ತಮ್ಮ ಧನಾದಿಗಳ ನಿರೀಕ್ಷಣಾ ಕಾಲವೆಂದೇ ಹಿಂದಿನಿಂದ ಪ್ರಸಿದ್ಧಿ – ಈ ಸಮಯದಲ್ಲಿ ಕಳವು ಆಗುವುದು ಹೆಚ್ಚು – ಋಷಿ ಮುನಿಗಳ ಷಟ್‌ಸಾಧನ ಸಮಯವಾದ್ದರಿಂದ ಧನಭಾವವೆಂದು ಅಷ್ಟಾಂಗ ಯೋಗದಲ್ಲಿ 'ನಿಯಮ' ಭಾಗ.

**ಈ ಭಾವಗಳ ವಿಚಾರ ದೈನಿಕ ವ್ಯವಹಾರದ ಮೇಲೆ ವೈಜ್ಞಾನಿಕವಾಗಿ ನಿರ್ಧರಿತವಾದ ವಿಷಯ.**



## ೨೫ನೇ ಅಧ್ಯಾಯ

# ಅಥ ಭಾವಾಧೀಶ ಫಲಾಧ್ಯಾಯಃ

ಲಗ್ನೇಶೆ ಲಗ್ನಗೆ ಹೃಷ್ಟ – ಪುಷ್ಟಾಂಗಶ್ಚ ಪರಾಕ್ರಮೀ ।
ಮನಸ್ವಿ ಚಾತಿ ಚಪಲೋ ದ್ವಿಭಾರ್ಯಾಃ ಪರಗೋಪಿಚ ॥೧॥

ಲಗ್ನೇಶೆ ಧನಗೆ ವಿಜ್ಞೋ ಲಾಭಸೌಖ್ಯಾನ್ವಿತೋ ನಿಶಮ್ ।
ಸುಶೀಲೋ ಧರ್ಮಾವಿನ್ಮಾನಿ ಬಹುಭಾರ್ಯೋ ಗುಣೈರ್ಯುತಃ ॥೨॥

ಲಗ್ನೇಶೆ ಸಹಜೆ ಯಾತೆ ಸಿಂಹ ತುಲ್ಯ – ಪರಾಕ್ರಮಿ ।
ಸರ್ವಸಂಪದ್ಯುತೋ ಮಾನಿ ದ್ವಿಭಾರ್ಯೋ ಮತಿಮಾನ್ನರಃ ॥೩॥

ಲಗ್ನೇಶೆ ತುರ್ಯಗೆ ಜಾತೋ ಮಾತೃಸೌಖ್ಯ ಸಮನ್ವಿತಃ ।
ಬಹುಭ್ರಾತೃಯತಃ ಕಾಮಿ ಗುಣ ಸೌಂದರ್ಯ ಸಂಯುತಃ ॥೪॥

ಲಗ್ನೇಶೆ ಪುತ್ರಗೆ ಕ್ರೋಧೀ ಸುತ ಸೌಖ್ಯಂ ಚ ಮಧ್ಯಮಮ್ ।
ಪ್ರಥಮಾಪತ್ಯನಾಶಃ ಸ್ಯಾನ್ಮಾನವಾನ್ ರಾಜವಲ್ಲಭಃ ॥೫॥

ಲಗ್ನೇಶನು ಲಗ್ನದಲ್ಲಿರಲು ಜಾತಕ ದಷ್ಟ ಪುಷ್ಟಾಂಗನಾಗಿ ಪರಾಕ್ರಮಿ ಮಾನಿ ಮನಸ್ಸಿನಂತೆ ನಡೆಯುವವ ಅತಿ ಚಪಲ ಇಬ್ಬರು ಹೆಂಡತಿಯರು ಪರಸ್ತ್ರೀಗಾಮಿ ಧನಭಾವಗತನಾದರೆ – ಧನ, ಸಂಪತ್ತಿನಿಂದ ಕೂಡಿದವ ಲಾಬ, ಸೌಖ್ಯ, ಪೂರ್ಣ ಸುಶೀಲ ಧಮವೇತ್ತಾ, ಅಭಿಮಾನಿ ಅನೇಕ ಸ್ತ್ರೀ ಸಹಿತನಾಗಿದ್ದರೂ ಗುಣಯುತ ಸಹಜ ಭಾವದಲ್ಲಿ ಲಗ್ನೇಶ ಜಾತಕನನ್ನು ಸಿಂಹ, ತುಲ್ಯ ಪರಾಕ್ರಮಿ, ಎಲ್ಲ ಸಂಪತ್ತಿನಿಂದ ಯುಕ್ತ ಸ್ವಾಭಿಮಾನಿ. ಇಬ್ಬರು ಹೆಂಡತಿಯರು ಬುದ್ಧಿವಂತ, ನಾಲ್ಕನೇ ಭಾವಗತ – ಲಗ್ನೇಶ ಜಾತಕನಿಗೆ ಮಾತೃಸೌಖ್ಯ ಹಾಗೂ ಅನೇಕ ಅಣ್ಣ, ತಮ್ಮರ ಸುಖ, ಕಾಮಿ ಗುಣ, ನೋಡಲು ಸುಂದರ, ಲಗ್ನೇಶ ಪಂಚಮದಲ್ಲಿದ್ದರೆ ಮನುಷ್ಯ ಕ್ರೋಧಿ, ಮಾನಿ ಹಾಗೂ ರಾಜವಲ್ಲಭ – ಹಾಗೂ ಪ್ರಥಮ ಸಂತಾನ ನಷ್ಟವಾಗುತ್ತದೆ. ಅಲ್ಲದೆ ಪುತ್ರ ಸೌಖ್ಯವೂ ಮಧ್ಯಮವಾಗಿರುತ್ತದೆ.

ವಿಮರ್ಶೆ: ಈ ಐದು ಭಾವಗಳ ಫಲ ನಿರ್ದೇಶಿಸುವಾಗ ಯಾವ ಗ್ರಹಗಳು ಅಥವಾ ಲಗ್ನಾಧಿಪರು ಎಂಬುದರ ಮೇಲೆ ಫಲ ನಿರ್ದೇಶಿಸಬೇಕು. ಸಿಂಹ ಲಗ್ನ ಲಗ್ನೇಶ ರವಿಯಿದ್ದರೆ ಪರಾಕ್ರಮಿ ಸ್ವಯಂ ಪ್ರಯತ್ನ ಪ್ರಗತಿ ಇಬ್ಬರು ಹೆಂಡತಿಯರು ಚಂದ್ರ – ಚಂಚಲ ಮಂಗಳ ಇಬ್ಬರು ಹೆಂಡತಿಯರು (ಮೇಷ) ಸುಂದರ (ವೃಶ್ಚಿಕ)

ಹಾಗೂ ವಿಜಯಿ. ಗುರು–ಮನಸ್ವಿ, ಶುಕ್ರ–ಪರಸ್ತ್ರೀ ಸಂಬಂಧ, ಮಂಗಳ, ಶನಿ–ದಷ್ಟಪುಷ್ಟ ಶರೀರ ಈ ರೀತಿ ಗ್ರಹದ ಮೇಲಿಂದ ನೋಡುವುದು. ದ್ವಿತೀಯ ರವಿ ಗುಣವೇತ್ತ, ಚಂದ್ರ–ಧರ್ಮವೇತ್ತಾ, ಮಂಗಳ, ಶನಿ–ಅನೇಕ ಸ್ತ್ರೀಯರು, ಗುರು–ಧನವಂತ ಸಹಜ ಭಾವದಲ್ಲಿ ಲಗ್ನೇಶ, ಸಿಂಹ, ತುಲ್ಯ ಪರಾಕ್ರಮಿ ಮಂಗಳ, ರವಿ ಸಮಾನ ಗುರು, ಚಂದ್ರ ಸ್ವಾಭಿಮಾನಿ – ಶುಕ್ರ ಎಲ್ಲ ಸಂಪತ್ತಿನಿಂದ ಕೂಡಿದವ ಇಬ್ಬರು ಹೆಂಡತಿಯರು. ಶನಿ–ರವಿ ಸಮಾನಗೆ. ಚತುರ್ಥ–ಚಂದ್ರ, ಗುರು ಮಾತೃ ಸೌಖ್ಯ – ಬುಧ, ಮಂಗಳ ಅಣ್ಣ, ತಮ್ಮರು ಚಂದ್ರ ಸುಂದರ ಶನಿಯಿಂದ – ರಾಜ್ಯ ಮಾನ್ಯತೆ – ಇತ್ಯಾದಿ ಪರಿಗಣಿಸುವುದು ಪಂಚಮದಲ್ಲಿ ಲಗ್ನೇಶನ ಫಲ – ಕ್ರೋಧಿ ಪುತ್ರ ಸುಖಿ ಮಾರ್ಯಮಾದಿಗಳು ರವಿ, ಮಂಗಳರಿಂದ ಪರಿಗಣಿಸುವುದು – ಶುಭಫಲ ಇತರ ಗ್ರಹಗಳಿಂದ ಪರಿಗಣಿಸುವುದು. ಈ ಅಂಶ ಗಮನದಲ್ಲಿಟ್ಟುಕೊಂಡೇ ಫಲ ಹೇಳುವುದು.

ಲಗ್ನಾಧಿಪೆರಿಗೆ ಪಾಪಗ್ರಹಯುಕ್ತೆ ಕ್ಷಿತೇಪಿ ವಾ ।
ಶತ್ರೋಃ ಪಿಡಾ ಭವೇತಸ್ಯ ಕಷ್ಟಂ ಶಾರೀರಿಕಂ ತಥಾ ॥೬॥

ಲಗ್ನೇಶೆ ಸಪ್ತಮೇ ಕ್ರೂರೆ ಭಾರ್ಯಾ ತಸ್ಯ ನ ಜೀವತಿ ।
ವಿರಕ್ತೋವಾ ಪ್ರವಾಸೀ ವಾ ದರಿದ್ರೋ ವಾ ನೃಪೋಪಿ ವಾ ॥೭॥

ಲಗ್ನೇಶೇಷ್ಟಮ ಭಾವಸ್ಥೆ ಸಿದ್ಧಿವಿದ್ಯೋ ಗದಾ ಕುಲಃ ।
ಪರನಾರಿರತಶ್ಚೌರೌ ದ್ಯೂತಾಸಕ್ತೋತಿಕೋಪನಃ ॥೮॥

ಲಗ್ನೇಶೆ ನವಮೇ ಯಾತೆ ಭಾಗ್ಯವಾನ್ ಜನವಲ್ಲಭಃ ।
ವಿಷ್ಣು ಭಕ್ತಃ ಪಟುರ್ವಾಗ್ಮಿ ಪುತ್ರಾದಾರ ಧನ್ಯೈಯುತಃ ॥೯॥

ಲಗ್ನೇಶೆ ಕರ್ಮಗೆ ರಾಜ ಪೂಜ್ಯಸ್ತಾತ ಸುಖಾನ್ವಿತಃ ।
ನಿಜೋಪಾರ್ಜಿತ ವಿತ್ತೋತಿ ಪ್ರಸಿದ್ಧಃ ಪುರುಷೋ ಭವೇತ್ ॥೧೦॥

ಲಗ್ನೇಶೆ ಲಾಭ ಭಾವಸ್ಥೆ ಬಹುಲಾಭನ್ವಿತೋ ಜನಃ ।
ಸದ್ಯಶೋಗುಣ ಶೀಲಾಢ್ಯೋ ಬಹುದಾರಃ ಪ್ರಜಾಯತೆ ॥೧೧॥

ಲಗ್ನೇಶೆ ವ್ಯಯಗೆ ಜಾತಸ್ತನು ಸೌಖ್ಯಸಮಂಜಿತಃ ।
ನಿರರ್ಥ ವಯಕೃತ ಕ್ರೋಧಿ ನ ಯುಕ್ತೋ ನೇಕ್ಷಿತೆ ಶುಭೈಃ ॥೧೨॥

ಲಗ್ನೇಶನು ಷಷ್ಠ ಭಾವಗತನಾಗಿ ಪಾಪಗ್ರಹಯುಕ್ತ ಅಥವಾ ದೃಷ್ಟನಾಗಿದ್ದರೆ ಜಾತಕನಿಗೆ ಶತ್ರುಜನ್ಯ ಪೀಡಾ ಹಾಗೂ ಶಾರೀರಿಕ ಕ್ಲೇಷವಾಗುತ್ತದೆ. ಪಾಪಗ್ರಹ

ಲಗ್ನೇಶ ಸಪ್ತಮಸ್ಥನಾಗಿದ್ದರೆ ಜಾತಕ ಸ್ತ್ರೀ ವಿಹೀನನಾಗುತ್ತದೆ. ಇಂತಹ ಮನುಷ್ಯ ವಿರಕ್ತಿ, ಪರದೇಶ ಭ್ರಮಣಶೀಲ, ದರಿದ್ರ ಅಥವಾ ರಾಜನಾಗುವನು. ಲಗ್ನೇಶ ಅಷ್ಟಮಗತನಾಗಿದ್ದರೆ ಜಾತಕ ರೋಗಿ, ಪರಸ್ತ್ರೀಗಾಮಿ, ಕಳ್ಳ ದ್ಯೂತವಾಡುವವ, ಕ್ರೋಧಿ ಹಾಗೂ ಸಿದ್ಧಿ ವಿದ್ಯೆಯುಳ್ಳವನಾಗಿರುತ್ತಾನೆ. ಲಗ್ನೇಶ ನವಮ ಭಾವಗತ ನಾಗಿದ್ದರೆ ಜಾತಕ ಭಾಗ್ಯಶಾಲಿ, ಜನಪ್ರಿಯ ವಿಷ್ಣುಭಕ್ತ, ಮಿತಭಾಷಿ, ಪುತ್ರ ಸ್ತ್ರೀ ಧನದಿಂದ ಪೂರ್ಣನಾಗಿರುತ್ತಾನೆ. ಕರ್ಮಸ್ಥ ಲಗ್ನೇಶನಿದ್ದರೆ ಮನುಷ್ಯ ಪಿತೃಸೌಖ್ಯ, ಪೂರ್ಣ ರಾಜಪೂಜ್ಯ ಹಾಗೂ ತನ್ನ ಭುಜಬಲದಿಂದ ಧನೋಪಾರ್ಜನೆ ಮಾಡುವವ ನಾಗುತ್ತಾನೆ ಹಾಗೂ ಪ್ರಸಿದ್ಧ ಪುರುಷನಾಗುತ್ತಾನೆ. ಲಗ್ನೇಶ ಲಾಭಸ್ಥನಿಯಾಗಿದ್ದರೆ ಬಹಳ ವಿಧ ರಾಜ ಶುಭ್ರ ಯಶ ಸದ್ಗುಣ ಅನೇಕ ಸ್ತ್ರೀ ಸೌಖ್ಯವುಳ್ಳವನಾಗುತ್ತಾನೆ. ಲಗ್ನೇಶ ವ್ಯಯಸ್ಥನಾಗಿದ್ದರೆ ಜಾತಕ ಶರೀರ ಸುಖ ವಿಹೀನ ಹಾಗೂ ಶುಭಗ್ರಹ ಯೋಗ ದೃಷ್ಟನಾಗಿರದಿದ್ದರೆ ಜೀವನ ನಿರರ್ಥಕ ಕಳೆಯುವುದು. ಶುಭಗ್ರಹಗಳ ಸಂಯೋಗ ಉಪಯುಕ್ತ ಫಲ ಅರ್ಧರೂಪ ದೊರೆಯುತ್ತದೆ.

ವಿಮರ್ಶೆ: ಇಲ್ಲಿ ಲಗ್ನೇಶ ಷಷ್ಠಭಾವಸ್ಥನಾದಾಗ ಹೇಳಿದ ಅಶುಭ ಫಲ ಹೆಚ್ಚಾಗಿ ಲಗ್ನೇಶ ಚಂದ್ರನಾಗಿ (ಕರ್ಕ ಲಗ್ನ) ಷಷ್ಠದಲ್ಲಿದ್ದರೆ ಮಾತ್ರ ಹೆಚ್ಚು ಅನುಭವವೇದ್ಯವಾಗುತ್ತದೆ. ಉಳಿದ ಶುಭಗ್ರಹ – ಆರೋಗ್ಯ ಮಾತ್ರ ತೊಂದರೆ ದಾಯಕವಾಗಿರುತ್ತದೆ. ಸಪ್ತಮೇಶನ ಫಲ ಸಾಮಾನ್ಯ ಶುಭಗ್ರಹಗಳಾದ ಗುರು, ಶುಕ್ರರಿಂದ ಹೆಚ್ಚಾಗಿ ಅನುಭವ ವೇದ್ಯ (ವೃಷಭ, ತುಲಾ, ಧನು, ಮೀನ ಲಗ್ನದಲ್ಲಿ) ಹಾಗೂ ಮಿಥುನ, ಕರ್ಕ, ಸಿಂಹ, ಕನ್ಯಾ, ಮಕರ, ಕುಂಭ ಲಗ್ನಗಳಲ್ಲಿಯೂ ಅಶುಭ ಫಲ ದೃಷ್ಟಿಗೋಚರವಾಗುತ್ತದೆ. ಲಗ್ನೇಶ ಅಷ್ಟಮದ ಫಲದಲ್ಲಿ ಕಳ್ಳ – ದ್ಯೂತ ವನ್ನಾಡುವವ ಫಲ ಸಾಮಾನ್ಯ ಲಗ್ನೇಶ ಶುಕ್ರನ ಫಲ (ವೃಷಭ, ತುಲಾ ಲಗ್ನ) ಉಳಿದಂತೆ ಕ್ರೂರ ಗ್ರಹಗಳಿಂದ ನೋಡುವುದು. ನವಮ ಸ್ಥಾನದ ಶುಭಫಲ ರವಿ, ಚಂದ್ರ, ಮಂಗಳ, ಬುಧ, ಗುರುಗಳಿಂದಾಗುತ್ತ ಬುಧನಿಂದ ವಿಷ್ಣುಭಕ್ತಿ. ದಶಮದಲ್ಲಿ ಲಗ್ನೇಶನ ಫಲ ಹೇಳುವಾಗ ಮೇಷ, ಸಿಂಹ, ಧನು, ಮಕರ, ಕುಂಭ, ಮೀನ ಲಗ್ನವಾದರೆ – ಅನುಭವ ವೇದ್ಯ. ಲಾಭದ ವಿಷಯ ಗುರು ಲಗ್ನೇಶನಾಗಿದ್ದಾಗ ವಿಶೇಷ ಅನುಭವ ವೇದ್ಯ – ವ್ಯಯಸ್ಥಾನದ ಅಶುಭ ಫಲ ಚಂದ್ರ, ಬುಧ, ಗುರು ಲಗ್ನೇಶರಾಗಿದ್ದರೆ ವೇದ್ಯ.

## 'ಧನೇಶನ ಫಲ'

ಧನೇಶೇ ತನುಗೆ ಕಾಮಿ ಪರಕಾರ್ಯರತೋ ಧನಿ ।
ಕಂಟಕಃ ಸ್ವಕುಟುಂಬಸ್ಯ ನಿಷ್ಠುರಃ ಪುತ್ರವಾನ್ ಜನಃ ॥೧೩॥

ಧನೇಶೆ ಧನಗೆ ಬಾಲೋ ಧನವಾನ್ ಗರ್ವ ಸಂಯುತಃ ।
ದ್ವಿದಾರೊ ವಾ ತ್ರಿದಾರೋ ವಾ ಸುತಹೀನಃ ಪ್ರಜಾಯತೆ ॥೧೪॥

ಧನೇಶೆ ಸಹಜಸ್ಥೆ ತು ವಿಕ್ರಮಿ ಮತವಾನ್ ಗುಣೆ ।
ಲೋಲುಪಃ ಕಾಮುಕಃ ಪಾಪಯುಕ್ತೆ ಸ್ಯಾದ್ಯೇವ ನಿಂದಕಃ ॥೧೫॥

ಧನೇಶೆ ತುರ್ಯಗೆ ನಾನಾ ವಿಧ ಸಂಪತ್ತಿ ಸಂಯುತಃ ।
ಸಗುರೌ ಸಭೃಗೌ ವಾಪಿ ತುಂಗಸ್ಥೆ ರಾಜಸನ್ನಿಭಃ ॥೧೬॥

ಧನಾಧಿಪೆ ತು ಸೂನುಸ್ಥೆ ಸದಾರ್ಥಾರ್ಜನತತ್ಪರೈಃ ।
ಸೂನುಭಃಸ್ತೈರ್ಯುತೋ ಜಾತೋ ಜಾಯತೆ ಧನವಾನಪಿ ॥೧೭॥

ಧನೇಶೆ ರಿಪುಗೆ ಸೌಮ್ಯಯುತೆ ಶತ್ರೋರ್ಧನಾಗಮಃ ।
ಪಾಪೊಪೇತೇರ್ಥ ಹಾನಿಃ ಸ್ಯಾದ್ ಗುದೆ ಚೋರ್ವೋರ್ಭವೆಚ್ಚಾರುಕ್ ॥೧೮॥

ಧನೇಶೆ ಸಪ್ತಮೇ ಪಾಪೈರ್ಯುತೆ ದೃಷ್ಟೆ ಜನೋಭಿಷಕ್ ।
ಪರದಾರರತಸ್ತಸ್ಯ ಜಾಯಾ ಚ ವ್ಯಭಿಚಾರಿಣಿ ॥೧೯॥

ಧನೇಶೆ ಮೃತ್ಯು ಭಾವಸ್ಥೆ ಭೂಮಿ ದ್ರವ್ಯಾನ್ವಿತೊ ಜನಃ ।
ಜಾಯಾಸೌಖ್ಯಂ ಭವೇದಲ್ಪಂ ಜೇಷ್ಠೆ ಭ್ರಾತೃಸುಖಂ ನಹಿ ॥೨೦॥

ಧನೇಶೆ ಭಾಗ್ಯೇಗೆ ಜಾತೋ ಧನವಾನುದ್ಯಮಿ ಪಟುಃ ।
ಬಾಲ್ಯೆ ರೋಗಿ ಸುಖಿ ಪಶ್ಚಾದ್ ಯಾವದಾಯುಃ ಸಮಾಪ್ಯತೆ ॥೨೧॥

ಧನೇಶೆ ಧಶಮೇ ಯಸ್ಯ ಕಾಮಿಮಾನಿ ಸ ಪಂಡಿತಃ ।
ಬಹುದಾರಧನೈರ್ಯುಕ್ತಾಃ ಪುತ್ರಸೌಖ್ಯ ವಿವರ್ಜಿತಃ ॥೨೨॥

ಧನೇಶೆ ಲಾಭಗೆ ಜಾತಃ ಸರ್ವದೊದ್ಯೋಗ ತತ್ಪರಃ ।
ಯಶಸ್ವಿ ಮಾನ ಸಂಯುಕ್ತೋ ಭವೇಲ್ಲಾಭಾನ್ವಿತಃ ಸದಾ ॥೨೩॥

ಧನೇಶೆ ವ್ಯಯಗೆ ಜಾತೊ ಮಾನಸಾಹಸ ಸಂಯುತಃ ।
ಪರಾಶ್ರಯೀ ಭವೆ ಜ್ಯೇಷ್ಠ ಸೂನು ಸೌಖ್ಯ ಸಮುಂಜ್ಞಿತಃ ॥೨೪॥

ಧನೇಶ ಲಗ್ನಸ್ಥನಾಗಿದ್ದರೆ ಮನುಷ್ಯ ಧನಿಕ ನಿಷ್ಠ ಪುತ್ರವಂತ ಎರಡನೆಯವ ಕಾಯತತ್ಪರ. ತನ್ನ ಕುಟುಂಬದವರಿಗೆ ಮುಳ್ಳಿನ ಸ್ವರೂಪನಾಗಿರುತ್ತಾನೆ – ಧನೇಶ

ಧನ ಭಾವಗತನಾಗಿದ್ದರೆ ಜಾತಕ ಧನ ಅಭಿಮಾನಿ 2, 3 ಸ್ತ್ರೀಯರಿಂದ ಕೂಡಿದ್ದರೂ ಪುತ್ರಹೀನನಾಗುತ್ತಾನೆ. ಧನೇಶ ಸಹಜ ಭಾವದಲ್ಲಿದ್ದರೆ – ಗುಣಿ, ಬುದ್ಧಿವಂತ, ಪರಾಕ್ರಮಿ, ಲೋಭಿ, ಕಾಮಿಯಾಗಿರುತ್ತಾನೆ. ಅದು ಪಾಪಗ್ರಹವಾಗಿದ್ದರೆ ದೇವ ನಿಂದಕನಾಗುತ್ತಾನೆ. ಧನೇಶ ಸುಖದಲ್ಲಿ ಅನೇಕ ವಿಧ ಸಂಪತ್ತು ಯುಕ್ತಿ – ಧನೇಶ ಗುರು, ಶುಕ್ರ ಸಹಿತ ಉಚ್ಚಸ್ಥನಾಗಿದ್ದರೆ ಮನುಷ್ಯ ರಾಜನಾಗುತ್ತಾನೆ – ಧನೇಶ ಪಂಚಮ ಸ್ಥಾನದಲ್ಲಿದ್ದರೆ ಧನೋಪಾರ್ಜನೆ ಮಾಡುವ ಮಕ್ಕಳಿಂದ ಯುಕ್ತನಾಗಿ ಇರುತ್ತಾನೆ, ಧನವಂತನು ಆಗಿರುತ್ತಾನೆ. ಶುಭಯುಕ್ತ ಧನಾಧಿಪ ಷಷ್ಠದಲ್ಲಿ ಶತ್ರುವಿನಿಂದಲೂ ಅವನಿಗೆ ಧನಾಗಮನ. ಅದೇ ಅವನು ಪಾಪಯುಕ್ತನಾಗಿದ್ದರೆ ಧನಹಾನಿ ಹಾಗೂ ಗುದ ಎದೆಯಲ್ಲಿ ರೋಗ – ಸಪ್ತಮದಲ್ಲಿ ಪಾಪದೃಷ್ಟಿಯುತ ನಾದರೂ ವೈದ್ಯನಾಗುತ್ತಾನೆ ಹಾಗೂ ಅವನು ಅವನ ಸ್ತ್ರೀಯು ವ್ಯಭಿಚಾರಿಗಳಾಗಿ ರುತ್ತಾರೆ. ಅಷ್ಟಮ ಭಾವದಲ್ಲಿ ದ್ವಿತೀಯಾಧಿಪ ಮನುಷ್ಯನಿಗೆ ಭೂಮಿ, ದ್ರವ್ಯ ಆದಿ ಸೌಖ್ಯ, ಸ್ತ್ರೀ ಸುಖ ಅಲ್ಪ, ಜ್ಯೇಷ್ಠ – ಅಣ್ಣನ ಸುಖವಿರುವುದಿಲ್ಲ – ಭಾಗ್ಯ ಸ್ಥಾನಗತ ಧನೇಶ ಮನುಷ್ಯನನ್ನು ಧನಿ, ಉದ್ಯಮಿ, ಚಿಕ್ಕವಯಸ್ಸಿನಲ್ಲಿ ರೋಗಿ – ನಂತರ ಜೀವನಪರ್ಯಂತ ಸುಖಿಯನ್ನಾಗಿ ಮಾಡುತ್ತಾನೆ. ದಶಮದಲ್ಲಿ – ಕಾಮಿ ಪಂಡಿತ ಮಾನಿ ಸ್ತ್ರೀಯರ ಆದರೆ ಪುತ್ರಸುಖ ರಹಿತನನ್ನಾಗಿ ಮಾಡುತ್ತಾನೆ. ಲಾಭಗತ ಧನೇಶ ಉದ್ಯೋಗ ಶೀಲ ಹಾಗೂ ಯಶಸ್ವಿಯನ್ನಾಗಿ ಮಾಡುತ್ತಾನೆ – ವ್ಯಯಗತ ನಾದರೆ ಸಾಹಸಿಯಾಗಿದ್ದರೂ ಪರಾಕ್ರಮಿಯಾಗಿರಬೇಕಾಗುತ್ತದೆ. ಹಿರಿಯ ಮಗನಿಂದ ಯಾವುದೇ ಸುಖವಿಲ್ಲ.

ವಿಮರ್ಶೆ: ಗುರು, ಶುಕ್ರ, ಬುಧ, ಚಂದ್ರ ಧನೇಶರಾಗಿ ಲಗ್ನದಲ್ಲಿದ್ದರೆ ಪ್ರಥಮ ಭಾವ ಶುಭಫಲದಾಯಕ. ಉಳಿದ ಗ್ರಹಗಳಾದರೆ ವ್ಯತ್ಯಾಸ. ದ್ವಿತೀಯಭಾವ ವಿಚಾರ ದಲ್ಲಿ ಶನಿಯ ಅತಿರಿಕ್ತ – ಯಾವುದೇ ಗ್ರಹ ಧನಾಧಿಪನಾಗಿ ಧನದಲ್ಲಿದ್ದರೆ ಆಗುತ್ತದೆ. ಗುರು ಗ್ರಹ ಬಿಟ್ಟು ಉಳಿದ ಗ್ರಹಗಳಿಂದ ಅಲ್ಪ ಸ್ವಲ್ಪ ಅಶುಭವೂ ಉಂಟು – ತ್ರಯದಲ್ಲಿ ಅಶುಭಗ್ರಹ ಶುಭ ಫಲ ನೀಡಿದರೆ ಶುಭಗ್ರಹ ಅಶುಭ ಫಲವನ್ನು ದೇವನಿಂದಕ. ದೃಷ್ಟಿ ಸಹಿತ ವಿಚಾರಿಸುವುದು ಬುಧ, ಗುರು ಧನೇಶರಾಗಿದ್ದು ಚತುರ್ಥದಲ್ಲಿದ್ದರೆ – ನಿಶ್ಚಯವಾಗಿ ಮೇಲೆ ಹೇಳಿದ ಉತ್ತಮ ಫಲ ದೊರೆಯುತ್ತದೆ – ಪರಾಕ್ರಮಿ ಇತ್ಯಾದಿ ಫಲ ಪಾಪಗ್ರಹವಿದ್ದಾಗ ಸಾಧ್ಯ – ಶನಿಯೂ ಕೆಲವು ಸಲ ಶುಭದಾಯಕನಾಗುತ್ತಾನೆ. ಪಂಚಮದಲ್ಲಿ ಧನಾಧಿಪರು ಗುರು, ಶುಕ್ರ, ಬುಧರಾದರೆ ಧನಾರ್ಜನೆ ಮಾಡುವ ಮಕ್ಕಳ ಸುಖ ಹೇಳುವುದು. ಶನಿಯಿಂದ ಪ್ರಸಿದ್ಧಿ – ಜಿಪುಣಾದಿ ಫಲ ಹೇಳುವುದು ಷಷ್ಠದಿಂದ – ಶತ್ರುವಿನಿಂದ ಧನಪ್ರಾಪ್ತಿ. ಶುಭಗ್ರಹದಿಂದಾದರೂ ರೋಗವು ಕಂಡುಬರುತ್ತದೆ. ಪಾಪಗ್ರಹಗಳಿಂದ

ಅನ್ಯಫಲ ಹೇಳುವುದು. ಸಪ್ತಮದಲ್ಲಿ ರವಿ, ಮಂಗಳ – ಧನಾಧಿಪರಾದರೆ ಹಾಗೂ ಶುಕ್ರಯುತ ವೈದ್ಯವೃತ್ತಿಯನ್ನು ಶುಕ್ರ+ಮಂಗಳ ಯುತಯಾ ವೈದ್ಯ ವೃತ್ತಿ ವೃಶ್ಚಿಕ ಲಗ್ನವೂ ವೈದ್ಯ ವೃತ್ತಿಗೆ ಶುಭಕರ. ಆದರೆ ಅಶುಭ ಫಲ ಯಾವ ಗ್ರಹದಿಂದಲೂ ಸಿದ್ಧವಾಗಲಾರದು. ಹೀಗಾಗಿ ಅವರವರ ಅನುಭವಕ್ಕೆ ತಿಳಿದಂತೆ ಅಷ್ಟಮದಲ್ಲಿ ಹೇಳುವಾಗ ರವಿ, ಶನಿ, ಗುರು ಧನೇಶರಿದ್ದಾಗ ಶುಭ ಫಲ ಸಾಮಾನ್ಯ ಶುಭಗ್ರಹ ಇದ್ದಾಗ – ಅಶುಭ ಫಲಾದಿ ಹೇಳುವುದು. ಧನೇಶ ನವಮದಲ್ಲಿ – ಚಿಕ್ಕ ವಯಸ್ಸಿನಲ್ಲಿ ರೋಗಿ ಈ ವಿಷಯ ಶನಿ, ಮಂಗಳರು ದ್ವಿತೀಯೇಶರಾಗಿದ್ದಾಗ ಮಾತ್ರ ಸಾಧ್ಯ. ಉಳಿದಂಶ ಇತರ ಗ್ರಹದ ಮೇಲೆ ನೋಡುವುದು ದಶಮದಲ್ಲಿ ನೋಡುವಾಗ ಪುತ್ರ ರಹಿತ ಅಶುಭ ಗ್ರಹಗಳಿಂದ – ಪಂಚಮಾಧಿಪನ ದೃಷ್ಟಿಸಹಿತ ನೋಡುವುದು. ಉಳಿದಂತೆ – ಬುಧಾದಿಗಳು ಗಣಿತದಲ್ಲಿ ಗುರು – ತತ್ವಜ್ಞಾನದಲ್ಲಿ ಈ ರೀತಿ ನೋಡುವುದು – ಧನೇಶ ಲಾಭದಲ್ಲಿ ಈ ಅಂಶ – ರವಿ, ಶನಿಯನ್ನು ಬಿಟ್ಟು ಇತರ ಗ್ರಹಗಳು ಇದ್ದರೆ ಮಾತ್ರ ಹೇಳುವುದು. ವ್ಯಯದ ಬಗ್ಗೆ ನೋಡಿದಾಗ ರವಿ, ಶನಿಯಿದ್ದರೆ ಮಾನಿ – ಸಾಹಸಿ ನೋಡುವುದು. ಇತರ ಫಲ – ಇತರ ಎಲ್ಲ ಗ್ರಹಗಳಿಂದ ಸಿದ್ಧವಾಗುತ್ತದೆ.

## ತೃತೀಯೇಶ ಫಲಃ

ತನುಸ್ಥಿತೆ ತೃತೇಯೇಶೆ ಪುರುಷಾರ್ಥ ಪರೋರ್ಥವಾನ್ ।
ಅವಿದ್ಯಃ ಕಿಂತು ಮತಿಮಾನ್ ಜಾಯತೆ ಸಾಹಸಿ ನರಃ ॥೨೫॥

ಧನಸ್ಥೆ ಸಹಜೇಶೆ ತು ಪರದಾರಾರ್ಥಲೋಲುಪಃ ।
ನಿರ್ವಿ ಕ್ರಮೋ ಜನಃ ಸ್ಥಲಃ ಸ್ವಲ್ಪಾರಂಭಿ ನ ಸೌಖ್ಯಭಾಕ್ ॥೨೬॥

ತೃತೀಯಸ್ಥೆ ತೃತೀಯೇಶೆ ವಿಕ್ರಮ ಭ್ರಾತೃಸೌಖ್ಯಯುಕ್ ।
ಧನಪುತ್ರಾನ್ವಿತೋ ಹೃಷ್ಟೋ ಭುನಕ್ತಿ ಸುಖಮದ್‌ಭುತಮ್ ॥೨೭॥

ತೃತೀಯೇಶೆ ಸುಖಸ್ಥೆ ತು ಸುಖಿ ಭವತಿ ಮಾನವಃ ।
ಅತೀಕ್ರೂರಾ ತಸ್ಯಭಾರ್ಯಾ ಧನಾಢ್ಯೋ ಮತಿವಾನ್ ಸ್ವಯಂ ॥೨೮॥

ತೃತೀಯೇಶೆ ಸುತಸ್ಥೆ ತು ಜಾತಃ ಸುತಯುತೋ ಗುಣಿ ।
ಪಾಪಕ್ಷಿತ ಯತೆ ಕ್ರೂರಾ ಭಾರ್ಯಾ ತಸ್ಯ ಪ್ರಜಾಯತೆ ॥೨೯॥

ತೃತೀಯೇಶೆ ರಿಪೌ ಯಾತೆ ಭ್ರಾತೃ ಶತ್ರುರ್ಮಹಾ ಧನಿ ।
ಮಾತುಲಾನಂ ಸುಖಂನ ಸ್ಯಾನ್ಮಾತುಲ್ಯಾ ಭೋಗಮಿಚ್ಛತಿ ॥೩೦॥

ತೃತೀಯೇಶೆ ಸಪ್ತಮಸ್ಥೆ ಬಾಲ್ಯೆ ಕಷ್ಟಯುತಃ ಸದಾ ।
ಪಶ್ಚಾತ್ ಸೌಖ್ಯಂ ಚ ಲಭತೆ ನೃಪಾನುಗಮನೆ ರತಃ ॥೩೦॥

ತೃತೀಯೇಶೆಷ್ಟ ಮಸ್ಥೆ ತು ಜಾತಃ ಸ್ಯಾತ್‌ಸ್ತೇನಕರ್ಮಕೃತ್ ।
ಸೇವಾ ವೃತ್ತಿಪರಶ್ರಾಂತೆ ನೃಪಾಲಾನ್ಮೃತ್ಯಮಾದಿಶೇತ್ ॥೩೨॥

ತೃತೀಯೇಶೆ ತು ನವಮೇ ಸ್ತ್ರೀಭಿಭಾಗ್ಯೋದಯೋ ಭವೇತ್ ।
ಪಿತೃ ಸೌಖ್ಯೋಜ್ಝಿತೋ ಜಾತಃ ಕಿಂತು ಪುತ್ರಾದಿ ಸೌಖ್ಯಭಾಕ್ ॥೩೩॥

ತೃತೀಯೇಶು ಕರ್ಮಸ್ಥೆ ಬಾಹುಪಾರ್ಜಿತವಿತ್ತವಾನ್ ।
ದುಷ್ಟ ಸ್ತ್ರೀ ಪೋಷಣೆ ಸಕ್ತೊ ನಾನಾಸೌಖ್ಯ ಯುತೋ ನರಃ ॥೩೪॥

ತೃತೀಯೇಶೆ ತು ಲಾಭಸ್ಥೆ ಸ್ವಭುಜಾರ್ಜಿತ ವಿತ್ತವಾನ್ ।
ಮೂರ್ಖಃ ಕೃಪೊ ಮಹಾರೋಗಿ ಸಾಹಸಿ ಪರಸೇವಕಃ ॥೩೫॥

ತೃತೀಯೇಶೆ ವ್ಯಯಸ್ಥೆ ತು ವ್ಯಯಕೃದ್ ದುಷ್ಕುತೌ ಜನಃ ।
ತತ್ಪಿತಾ ಕ್ರೂರಚೇತಾಃ ಸ್ಯಾತ್ ಸ್ತ್ರೀಭಿರ್ಭಾಗ್ಯೋದಯೋ ಭವೇತ್ ॥೩೬॥

ತೃತೀಯೇಶ ಲಗ್ನದಲ್ಲಿದ್ದರೆ ಅಂತಹ ಜಾತಕ ಪುರುಷಾರ್ಥ ಸಾಧಕ (ಧರ್ಮ, ಅರ್ಥ, ಕಾಮ, ಮೋಕ್ಷ) ಧನವಂತ, ಸಾಹಸಿ, ಬುದ್ಧಿವಂತ – ಆಪದಗಳು ಬರುತ್ತವೆ. ರವಿ, ಮಂಗಳರು ಲಗ್ನಾಧಿ ಸ್ಥಾನದಲ್ಲಿದ್ದ ಪುರಷಾರ್ಥ ಸಾಧಕರಾದರೆ ಗುರು, ಶುಕ್ರಾದಿಗಳಿಂದ ಧನವಂತ, ಬುದ್ಧಿವಂತರಾಗಿರುತ್ತಾರೆ. ಧನಸ್ಥಾನದಲ್ಲಿ ಪರಸ್ತ್ರೀ ಗಾಮಿ, ಪರಧನ ಲಾಲಸಿ ಸ್ಥೂಲದೇಹ, ಕಾರ್ಯಾರಂಭದಲ್ಲಿ ಅರುಚಿ ಸೌಖ್ಯ ರಹಿತ ಇಲ್ಲಿ ಕೋಟಿ ಅಧಿಕಾಂಶ ಅಶುಭ ಫಲಗಳು – ರವಿ, ಮಂಗಳರಿಂದ ಸಿದ್ಧವಾಗುತ್ತವೆ. ಇತರ ಪಾಪಗ್ರಹಗಳಿಂದಲೂ ನಿಜವಾಗಿದ್ದರೆ ಶುಭಗ್ರಹಗಳಿದ್ದಾಗ ವಿಚಾರಣೀಯ. ಇದು ಬಂಧನಕಾರಕ ಸ್ಥಾನವಾದ್ದರಿಂದ ಗ್ರಹಗಳು ಸಂಪೂರ್ಣ ಫಲದಾಯಕಗಳು ಇಲ್ಲ. ಸಹಜೇಶ ಸಹಜ ಸ್ಥಾನದಲ್ಲಿರುವುದು – ಉತ್ತಮ ಯೋಗವೇ – ಪರಾಕ್ರಮಿ, ಮಾತೃಸೌಖ್ಯ ಪೂಣ, ಧನ ಪುತ್ರ ಸಂಪನ್ನ – ಸದಕಾಲ ಸುಖದಿಂದಿದ್ದು ಅದ್ಭುತ ಸೌಖ್ಯ ಭಾಗಿ – ಈ ಎಲ್ಲ ಶುಭ ಫಲಗಳು ತೃತೀಯೇ ಪಾಪಗ್ರಹವಾಗಿ ತೃತೀಯದಲ್ಲಿದ್ದರೆ ಸಿದ್ಧವಾಗುತ್ತದೆ. ಶುಭಗ್ರಹಗಳು ಶುಭ ಫಲ ನೀಡಲಾರವು. ಅಲ್ಲಿ ಕೊರತೆಯಿರುತ್ತದೆ. ಸಹಜೇಶ ಸುಖ ಸ್ಥಾನದಲ್ಲಿ ಸುಖ, ಧನವಂತ ಹಾಗೂ ಬುದ್ಧಿವಂತನಾಗಿರುತ್ತಾನೆ. ಆದರೆ ಅವನ ಹೆಂಡತಿ ಕ್ರೂರಿ ಒಟ್ಟು – ರವಿ, ಮಂಗಳ, ಗುರು, ಶುಕ್ರ, ಚಂದ್ರ, ಬುಧರಿಂದ ದೊರೆತರೆ ಶನಿಯಿಂದ ಕ್ರೂರ ಫಲವಾದರೂ –

ರಾಶ್ಯಾಂತರ ಯೋಗವಿದ್ದರೆ ಅದೂ ಕೂಡ ಅಲ್ಲಿ ಸಹಜೇಶನ ಪಂಚಮಭಾವ ಫಲ ಗುಣಿ, ಪುತ್ರ ಸೌಖ್ಯ ಯಕ್ತಿ – ಕ್ರೂರ ಗ್ರಹ ಜೊತೆಗೆ ಪಂಚಮದಲ್ಲಿದ್ದರೆ ಹೆಂಡತಿ ಕ್ರೂರಿ. ಬುದ್ಧಿ ದುಷ್ಟತನಕ್ಕಾಗಿ ಉಪಯೋಗವಾಗುತ್ತದೆ – ಶುಭ ಗ್ರಹಗಳಿಂದ ಶುಭಫಲ ಹೇಳುವುದು. ತೃತೀಯೇಶ ಷಷ್ಠದಲ್ಲಿದ್ದರೆ – ಸಹೋದರರೊಂದಿಗೆ ಶತ್ರುತ್ವ ಹಾಗೂ ಅತ್ತೆ, ಮಾವಂದಿರನ್ನು ಪ್ರೀತಿಸುವ ಜಾತಕನಾಗುತ್ತಾನೆ. ಇಲ್ಲಿ ಗುರು, ಶನಿ, ತೃತೀಯೇಶರಾಗಿದ್ದರೆ ಮೇಲಿನ ಫಲ ಸ್ಪಷ್ಟ ಗೋಚರವಾಗುತ್ತದೆ. ಇತರ ಗ್ರಹಗಳಿಗೆ ಸಾಮಾನ್ಯ ಫಲ – ಸಪ್ತಮದಲ್ಲಿದ್ದರೆ ಚಿಕ್ಕವಯಸ್ಸಿನಲ್ಲಿ ದುಃಖಿ–ನಂತರ ಸುಖಿ ಹಾಗೂ ರಾಜನ ಮರ್ಜಿ(ಮನಸ್ಸು) ನಡೆಯುವವ – ಅದರಿಂದ ಸುಖವೂ ಇದೆ. ಚಿಕ್ಕವಯಸ್ಸಿನಲ್ಲಿ ದುಃಖಿ. ಇದು ಶನಿ, ಮಂಗಳರಿಂದ – ಮುಂದಿನ ಶುಭಫಲ. ಎಲ್ಲ ಶುಭಗ್ರಹಗಳೂ ತೃತೀಯೇಶರಾಗಿದ್ದರೆ ದೊರೆಯುವುದು. ಅಷ್ಟಮದಲ್ಲಿ – ಕಳ್ಳನಾಗುತ್ತಾನೆ, ಸೇವಾ ವೃತ್ತಿಯಲ್ಲಿಯೇ ಕಾಲ ಕಳೆಯಬೇಕಾಗುತ್ತದೆ. ಎಂದೂ ಮಾಲಿಕನಾಗಲಾರ ಹಾಗೂ ಅಂತ್ಯದಲ್ಲಿ ಸರಕಾರದ ಅವಕೃಪೆಯಿಂದ ಮೃತ್ಯು. ಈ ಎಲ್ಲ ಫಲಗಳು ರವಿ, ಚಂದ್ರ, ಬುಧನನ್ನು ಬಿಟ್ಟು ಅನ್ಯಗ್ರಹಗಳಿಂದ ದೊರೆಯುತ್ತದೆ. ರವಿ, ಚಂದ್ರ, ಬುಧರಿಂದ ಅಲ್ಪ ಸುಖವು ಹೇಳುವುದು. ಈ ಜಾತಕನ ತಂದೆಗೆ ಸುಖ ಸಿಗುವುದೇ ಇಲ್ಲ. ಆದರೆ ಜಾತಕನಿಗೆ ಪುತ್ರಾದಿ ಸೌಖ್ಯ ದೊರೆಯುತ್ತದೆ – ರವಿಯಿದ್ದರೆ ಸ್ತ್ರೀಯಿಂದ ಭಾಗ್ಯೋದಯ – ಇತರ ಗ್ರಹದಿಂದ ಪುತ್ರಾದಿ ಸೌಖ್ಯ – ತಂದೆಗೆ ಸುಖವಿಲ್ಲವೆನ್ನುವ ಅಂಶವನ್ನು ಗ್ರಹ ಸಂಯೋಗದಿಂದ ಹೇಳುವುದು–ಕೇವಲ ತೃತೀಯೇಶನಿಂದ ಸಾಧ್ಯವಿಲ್ಲ – ದಶಮದಲ್ಲಿ – ತನ್ನ ಬಾಹುಬಲದಿಂದ ಧನೋಪಾರ್ಜನೆ ಮಾಡುವನು. ಅನೇಕ ವಿಧ ಸೌಖ್ಯ, ದುಷ್ಟ ಸ್ತ್ರೀ ಪೋಷಣೆ – ಸಮ್ಮಿಶ್ರ ಫಲ. ಇತರ ಗ್ರಹಗಳ ಮೇಲಿಂದಲೇ ಹೇಳುವುದು – ಎಲ್ಲ ಗ್ರಹಗಳು ಶುಭ ಫಲದಾಯಕಗಳೇ – ಏಕಾದಶದಲ್ಲಿ – ಜಾತಕ ಮೂರ್ಖ, ದುರ್ಬಲ, ರೋಗಿ, ಸಾಹಸಿ, ಎರಡನೆಯವರ ಸೇವಕ ಸ್ವಗಳರೆ ಮೇಲೆ ಉಪಜೀವನ – ಈ ಯೋಗಗಳು ಎಲ್ಲ ಗ್ರಹಗಳ ಮೇಲಿಂದ ಸಿದ್ಧವಾಗಿವೆ. ವ್ಯಯದಲ್ಲಿ ಮನುಷ್ಯ ದುಷ್ಕರ್ಮಿ – ಆ ವಿಷಯದಲ್ಲಿಯೇ ಚರ್ಚೆ, ನಿಷ್ಠುರ ಸ್ವಭಾವದವನು – ಈ ಸ್ಥಾನದ ತೃತೀಯೇಶ ಮುಖ್ಯ ಅಂಶ. ಈ ಜಾತಕನ ಭಾಗ್ಯೋದಯ ಸ್ತ್ರೀಯಿಂದಲೇ ಆಗುತ್ತದೆ. ದುಷ್ಟ ಫಲಗಳು ಕ್ರೂರ ಗ್ರಹಗಳಿಂದಲೇ ದೊರೆಯುತ್ತದೆ. ಸ್ತ್ರೀಯಿಂದ ಭಾಗ್ಯೋದಯ ರವಿ ದೊರೆಯುತ್ತದೆ. ಶುಕ್ರ, ಚಂದ್ರರನ್ನು ಅನುಸರಿಸಿ ಫಲ ದೊರೆಯುತ್ತದೆ.

ಈ ಭಾಗದಲ್ಲಿ ವಿಮರ್ಶೆ ಆಯಾ ಸ್ಥಾನ ಫಲದ ಜೊತೆಗೆ ಮಾಡಲಾಗಿದೆ.

## ಚತುರ್ಥ ಭಾವೇಶ

ತುರ್ಯೇಶೇ ತನುಭಾವಸ್ಥೆ ಜನನೀ ಸೌಖ್ಯ ಸಂಯುತಃ ।
ವಿದ್ಯಾಸದ್ಗುಣ ಸಂಪನ್ನೋ ಭೂಮಿ ವಾಹನ ವಾನ್ನರಃ ॥೩೭॥

ತುರ್ಯೇಶೇ ತು ದ್ವಿತಿಯಸ್ಥೆ ನಾನಾ ಸಂಪತ್ಸವನ್ವಿತಃ ।
ಕುಟುಂಬ ಸಾಹಸಿ ಮಾನಿ ಭೋಗಿ ಚ ಕುಹಕಾನ್ವಿತಃ ॥೩೮॥

ತುರ್ಯೇಶೇ ಸಹಜಸ್ಥೇತು ಸ್ವಬುಜಾರ್ಜಿತ ವಿತ್ತವಾನ್ ।
ಉದಾರೋ ಗುಣವಾನ್ ದಾತಾ ದಾಸಯುಕ್ತಃ ಪರಾಕ್ರಮಿ ॥೩೯॥

ತುರ್ಯೇಶೇ ತು ತುರಿಯಸ್ಥೆ ಮಂತ್ರಿ ಸರ್ವ ಧನಾಧಿಪಃ ।
ಚತುರಃ ಶೀಲವಾನ ಮಾನಿ ಸುವಿಜ್ಞಾಃ ಸ್ತ್ರೀಪ್ರಿಯಃ ಸುಖಿ ॥೪೦॥

ತುರ್ಯೇಶೇ ಸುತ ಭಾವಸ್ಥೆ ಸುಖಿ ಸರ್ವಜನ ಪ್ರಿಯಃ ।
ವಿಷ್ಣು ಭಕ್ತಿರತೋ ಮಾನಿ ಸ್ವಭುಜಾರ್ಜೀವಿತ್ತವಾನ್ ॥೪೦॥

ತುರ್ಯೇಶೇ ಶತ್ರು ಭಾವಸ್ಥೆ ಹತ ಮಾತ್ರು ಸುಖೋ ಭವೆತ್ ।
ಮನಸ್ವಿ ವ್ಯಭಿಚಾರಿಚ ಚೌರಃ ಕ್ರೋಧಿ ದುರಾತ್ಮವಾನ್ ॥೪೨॥

ತುರ್ಯೇಶೇ ಸಪ್ತಮಗತೆ ಬಹುವಿದ್ಯಾಸಮನ್ವಿತಃ ।
ಪಿತ್ರಾರ್ಜಿತ ಧನತ್ಯಾಗಿ ಸಭಾಯಾಂ ಮೂಕವದ್ ಭವೇತ್ ॥೪೩॥

ತುರ್ಯೇಶೆಷ್ಟಮಗೆ ಜಾತೋ ಗೇಹಾದಿ ಸುಖ ವಂಚಿತಃ ।
ಮಾತಾಪಿತ್ರೋಃ ಸುಖಂ ಸ್ವಲ್ಪಂ ಕ್ಲೀಬೋವಾಜಾರಜೋ ಭವೇತ್ ॥೪೪॥

ತುರ್ಯೇಶೆ ಭಾಗ್ಯಗೆ ಲೋಕಪ್ರಿಯೋನೇಕ ಸುಖಾನ್ವಿತಾಃ ।
ಮಾನಿ ಗುಣಾನ್ವಿತೋ ವಿಷ್ಣು ಭಕ್ತಿಯುಕ್ತೋ ಭವೆನ್ನರಃ ॥೪೫॥

ಸುಖೇಶೆ ಕರ್ಮ ಗೇಹಸ್ಥೆ ರಾಜಮಾನ್ಯೋ ಭವೆನ್ನರಃ ।
ರಸಾಯನಿ ಮಹಾಹುಷ್ಟೋ ಯತಾತ್ಮ ಸುಖ ಸಂಯುತಃ ॥೪೬॥

ತುರ್ಯೇಶೆ ಲಾಭ ಭಾವಸ್ಥೆ ಸದ್ವೈವಾನ್ಯೋಪ ಕಾರಕಃ ।
ಉದಾರೋ ಗುಣವಾನ್ ದಾತಾ ನಿತ್ಯರೋಗಿ ಜನೋ ಭವೇತ್ ॥೪೭॥

ತುರ್ಯೇಶೆ ವ್ಯಯಗ ಹೀನ ಭವನ ದಿ ಸುಖೋ ನರಃ ।
ಮೂರ್ಖೋ ದುರ್ವ್ಯಸನಾಸಕ್ತೋಲಮಶ್ರಾಪಿ ಪ್ರಜಾಯತೆ ॥೪೮॥

ಸುಖೇಶನು ಲಗ್ನದಲ್ಲಿದ್ದರೆ ಮನುಷ್ಯನಿಗೆ ಮಾತೃ ಸೌಖ್ಯ, ವಿದ್ಯಾ, ಭೂಮಿ, ವಾಹನ – ಎಲ್ಲ ಸುಖವೂ ಪೂರ್ಣ ದೊರೆಯುತ್ತದೆ. ಗುಣ ಸಮಚಿತ್ತವಾಗಿ ಇರುತ್ತದೆ – ವಾಹನ ಸುಖಾದಿಗಳು ಗುರು, ಶುಕ್ರ, ಬುಧ, ರವಿಗಳಿಂದ – ವಾಹನ ಸುಖ – ಶುಕ್ರನಿಂದ – ಇತರ ಅಂಶ ರವಿ, ಚಂದ್ರ, ಗುರುಗಳಿಂದ ಸಿದ್ಧವಾಗುತ್ತದೆ – ಧನಸ್ಥಾನದಲ್ಲಿ ಸರ್ವ ವಿಧ ಸಂಪತ್ತಿನಿಂದ ಕೂಡಿದವ ಸಾಹಸಿ ಮಾನಿ ಅನೇಕ ಪರಿವಾರ ಜನಸಹಿತ ಮಾಯಾವಿ – ವಿಲಾಸಶೀಲನಾಗಿರುತ್ತಾನೆ. ಮೊದಲಿನ ಭಾಗ ರವಿ, ಚಂದ್ರ, ಗುರುಗಳಿಂದಾದರೆ ಬಹುಪರಿವಾರ ಯುಕ್ತ, ಮಂಗಳನಿಂದ ವಿರೋಧ ಫಲದಾಯಕವಾದರೆ, ಶನಿಯಿಂದ ಮಾಯಾವಿ ಫಲ – ಸುಖೇಶನು ಸಹಜಸ್ಥಾನ ಗತನಾಗಿದ್ದರೆ ಉದಾರ ಗುಣಿ, ದಾನದಲ್ಲಿ ಎತ್ತಿದ ಕೈ, ಪರಾಕ್ರಮಿ, ಆಳುಕಾಳು ಗಳಿಂದ ಕೂಡಿದವ ಹಾಗೂ ತನ್ನ ಭುಜಬಲದಿಂದ ಧನೋಪಾರ್ಜನೆ ಮಾಡುವವ, ಉದಾರ ಆದಿ ಗುಣಗಳು ಶನಿ, ರವಿಯಿದ್ದರೆ ವಿಶೇಷವಾಗಿರುತ್ತದೆ. ಪರಾಕ್ರಮಿ ಶನಿಯಿದ್ದರೆ ಅಥವಾ ಮಂಗಳನಾಗಿದ್ದರೆ, ಉಳಿದ ಗುಣ ಚಂದ್ರ, ಗುರು, ಶುಕ್ರಾದಿ ಗಳಿಂದ – ಸ್ವಸ್ಥಾನ ಸುಖದಲ್ಲಿ ಸರ್ವ ಸಂಪತ್ತು ಯುಕ್ತ, ಮಂತ್ರಿ ಸುಶೀಲ ಚತುರ, ಸರ್ವಥಾ ಸುಖಿ, ಸುವಿಜ್ಞಮಾನಿ – ಹೆಂಡತಿಯನ್ನು ಅಧಿಕವಾಗಿ ಪ್ರೀತಿಸುವವ – ಈ ಫಲಗಳು ಸಾಮಾನ್ಯವಾಗಿ ಎಲ್ಲ ಗ್ರಹ ಲಗ್ನಗಳಿಂದಲೂ ದೊರೆಯುತ್ತದೆ. ಇಲ್ಲಿ ಮಾತೃ ಸುಖಿ ಮಂಗಳನಿಂದ ಕಡಿಮೆ ಪ್ರಮಾಣದಲ್ಲಿ – ಉಳಿದೆಲ್ಲ ಗ್ರಹಗಳಿಂದ ಕಥಿತ ಫಲ ದೊರೆಯುತ್ತದೆ – ಹೆಂಡತಿ ಸುಖ ದೊರೆತರೆ – ಮಾತೃಸೌಖ್ಯ ಕಡಿಮೆ – ಎರಡು ಇದ್ದರೆ ಉಳಿದ ಸುಖ ಕಡಿಮೆ ಈ ರೀತಿ ನೋಡುವುದು. ಚುತುರ್ಥೇಶ ಪಂಚಮದಲ್ಲಿ – ಸುಖಿ, ಸರ್ವಜನ ಪ್ರಿಯ, ದೇವತಾ ಭಕ್ತ ಭುಜಬಲದಿಂದ ಧನ ಸಂಪಾದನೆ – ದೇವತಾ ಭಕ್ತ, ಶನಿಯಿಂದ ಸರ್ವಜನಪ್ರಿಯ, ಗುರು, ಶುಕ್ರರಿಂದ – ರವಿಯಿಂದ ಸ್ವಭುಜ ಬಲದಿಂದ ಧನಪ್ರಾಪ್ತಿ. ಎಲ್ಲ ಗ್ರಹಗಳು ಶುಭ ಫಲ ದಾಯಕಗಳೆ. ಷಷ್ಠದಲ್ಲಿ – ಮಾತೃ ಸುಖ ವಿಹೀನ ಕ್ರೋಧಿ, ವ್ಯಭಿಚಾರಿ, ದುರಾತ್ಮಾ – ಮನಸ್ಸಿನಂತೆ ನಡೆಯುವವ – ಕೆಟ್ಟ ಫಲ ಮಂಗಳನಿಂದ ಮಾತ್ರ ದೊರೆಯುತ್ತದೆ – ಸಾಧಾರಣ ಶುಭಫಲ ಇತರ ಗ್ರಹಗಳಿಂದ – ಸಪ್ತಮದಲ್ಲಿ – ಅನೇಕ ವಿದ್ಯಾವೆತ್ತ ಪೌತ್ರಾದಿ ಸಂಪತ್ತು ಜಿದ್ದಿನ ಮನುಷ್ಯ ಎಲ್ಲ ಆಸ್ತಿ ಮಕ್ಕಳಿಗೆ ಬಿಡುವನು. ಎಲ್ಲ ಶುಭಫಲಗಳು ಗುರು, ಶುಕ್ರ, ಬುಧ ಹಾಗೂ ಚಂದ್ರರಿಂದ – ಮಕ್ಕಳಿಗೆ ಆಸ್ತಿ ಬಿಡುವ ಜಿದ್ದ ಶನಿ, ರವಿಯಿಂದ ದೊರೆಯುತ್ತದೆ – ಅಷ್ಟಮದಲ್ಲಿ – ಜಾತಕ ಗ್ರಹಾದಿ ಸುಖಹೀನ, ನಪುಂಸಕ ಅಥವಾ ಜಾರಸ್ತ್ರೀಯಿಂದ ಉತ್ಪನ್ನ ಈ ಜಾತಕನಿಗೆ ಮಾತೃ, ಪಿತೃ ಸೌಖ್ಯವೂ ಕಡಿಮೆಯೇ. ಇಲ್ಲಿ ಜಾರ ಸ್ತ್ರೀಯಿಂದ ಶುಕ್ರನಿಂದ – ಅನುಭವಕ್ಕೆ ಬರುವ ಅಂಶ ನಪುಂಸಕ ಭಾವನೆ. ಶನಿಯಿಂದ – ಉಳಿದೆಲ್ಲ ಫಲ. ಶನಿಯಿಂದ ವಿಶೇಷ ಫಲದಾಯಕ – ನವಮದಲ್ಲಿ ಅನೇಕ ಸೌಖ್ಯರತ ಅನ್ನಪ್ರಿಯ

ಮಾನಿ ವಿಷ್ಣುಭಕ್ತ ಈ ಎಲ್ಲ ಫಲಗಳು ರವಿ, ಗುರು, ಬುಧ, ಶುಕ್ರ, ಪೂರ್ಣ ಚಂದ್ರರಿಂದ ಅನುಭವಸಿದ್ಧವಾದವು. ಶನಿ, ಮಂಗಳ ಸಾಮಾನ್ಯ ಫಲ, ದಶಮದಲ್ಲಿ – ರಾಜಕೃಪಾ, ರಾಜ ಪೂಜ್ಯ ಪರಮ ಸುಖಿ, ಜಿತೇಂದ್ರಿಯ – ರಸಾಯನ ವಸ್ತುಗಳ ತಯಾರಕ – ವಿಶೇಷವಾಗಿ ಎಲ್ಲ ಶುಭ ಫಲ ಮೇಷ, ಸಿಂಹ, ಧನು, ಮಕರ ಲಗ್ನಾದಿ ಗಳಲ್ಲಿ ಹಾಗೂ ಶನಿಯನ್ನು ಬಿಟ್ಟು ಇತರ ಎಲ್ಲ ಗ್ರಹಗಳು ಶುಭದಾಯಕರು – ಲಾಭದಲ್ಲಿ ಸುಖೇಶ, ಉದಾರ, ಪರೋಪಕಾರಿ, ಗುಣಿ – ಸತತರೋಗಿ – ಎಲ್ಲ ಶುಭಫಲ ರವಿ, ಶನಿ ಬಿಟ್ಟು ಅನ್ಯಗ್ರಹಗಳಿಂದ ದೊರೆತರೂ ರವಿ, ಶನಿಯಿಂದ ನಿತ್ಯರೋಗಿ ಎಂಬುದು ಸಿದ್ಧ – ವ್ಯಯದಲ್ಲಿ ಸುಖೇಶ ಸೌಖ್ಯ ವಿಹಿನ ಮೂರ್ಖ, ದುರ್ವ್ಯಸನಯುಕ್ತ ಆಲಸಿಯಾಗಿರುತ್ತಾನೆ –ಎಲ್ಲ ಅಶುಭಫಲ, ವಿದ್ಯ ಕೇವಲ ರವಿ, ಶನಿಗಳಿಂದ – ಪೂರ್ಣ ಸಿದ್ಧವಾದರೆ – ಇತರ ಗ್ರಹಗಳಿಂದ ಸಾಮಾನ್ಯ.

## ಪಂಚಮೇಶನ ಫಲ

ಸುತೇಶೆ ತನುಗೆ ಸೂರಿರನ್ಯ ವಿತ್ತಾಪಹಾರಕಃ ।
ಕೃಪಣಃ ಕುಟಿಲಶ್ಚೈವ ಸುತಸೌಖ್ಯಾನ್ವಿತೋ ಜನಃ ॥೪೯॥

ಸುತೇಶೆ ಧನಗೇನೇಕ – ಸೂನುರ್ಧನಯಶೋನ್ವಿತಃ ।
ಮಾನಿ ಸ್ತ್ರೀವಲ್ಲಭೋ ಜಾತಃ ಕುಟುಂಬ ಪರಿಪಾಲಕಃ ॥೫೦॥

ಸುತೇಶೆ ತು ತೃತೀಯಸ್ಥೆ ಜಾತಃ ಸ್ಯಾದ್ ಭ್ರಾತೃವಲ್ಲಭಃ ।
ಮಾಯಾವಿ ಪಿಶುನಶ್ಚೈವ ಕೃಪಣಃ ಸ್ವಾರ್ಥಸಾದಕಃ ॥೫೧॥

ಸುತೇಶೆ ತುರ್ಯಗೆ ಜಾತೋ ಮಾತೃಸೌಖ್ಯಾನ್ವಿತಃ ಸದಾ ।
ಲಕ್ಷ್ಮೀಯುಕ್ತಃ ಸಂಬುದ್ಧಶ್ಚ ಸಚಿವೋಪ್ಯಥವಾ ಗುರುಃ ॥೫೨॥

ಸುತೇಶೆ ಸುತಗೆ ಸೌಮ್ಯಯುಕ್ತೆ ಜಾತಃ ಸುತಾನ್ವಿತಃ ।
ಸಪಾಪೆ ಸುತಹೀನೋಽಪಿ ಗುಣಯುಕ್ತಃ ಸೃಹುತ್ಪ್ರಿಯಃ ॥೫೩॥

ಪಂಚಮೇಶನು ಲಗ್ನಸ್ಥನಾದರೆ ಜಾತಕ ಕೃಪಣ. ಕುಟಿಲ ವಿದ್ವಾನ್ ಪುತ್ರ ಸೌಖ್ಯ ವಿಹೀನ ಹಾಗೂ ಪರಧನ ಅಪಹಾರಕ – ಕುಟಿಲ ಪರದ್ರವ್ಯ ಅಪಹಾರಕ – ಶನಿ, ಮಂಗಳರು ಪಂಚಮಾಧಿಪರಾದರೆ ಸಾಧ್ಯ. ಇತರ ಗ್ರಹಗಳಿಂದ ವಿದ್ವಾನ್ – ರವಿ ಹಾಗೂ ಕ್ರೂರಗ್ರಹ ಸಂಯೋಗದಿಂದ ಪುತ್ರಸೌಖ್ಯವಿಹೀನ – ದ್ವಿತೀಯದಲ್ಲಿ – ಪುತ್ರ ಧನ ಯಶಾದಿ ಪರಿಪೂರ್ಣ ಮಾನಿ ಸ್ತ್ರೀ ಜನಪ್ರಿಯ – ಪರಿಜನ ಪಾಲಕನೂ ಆಗುತ್ತಾನೆ – ಎಲ್ಲ ಶುಭಗ್ರಹಗಳು ಶುಭಫಲ ನೀಡಿದರೆ – ಕ್ರೂರ ಗ್ರಹಗಳು –

ಶುಭದೃಷ್ಟಿಯಿಂದ ಶುಭದಾಯಕವಾಗುತ್ತವೆ – ತೃತೀಯಾರ್ಧ ಅಣ್ಣ, ತಮ್ಮಂದಿರ ಪ್ರಿಯ ಮಾಯಾವಿ – ಥಾಡಿ ಖೋರ ಜಿಪುಣಾಗ್ರೇಸರ ಸ್ವಾರ್ಥಸಾಧಕ.

ಇಲ್ಲಿ ಜಿಪುಣ, ಸ್ವಾರ್ಥ ಸಾಧಕ, ಕಂಜೂಷ, ಥಾಡಿಖೋರಾದಿ ಗುಣಗಳು ಶನಿ, ಮಂಗಳರಿಗೆ ಅನ್ವಯಿಸಿದ ಬಂಧು, ಪ್ರೇಮಾದಿಗಳು ಶುಭಗ್ರಹಗಳಿಗೆ ಸರಿ ಹೊಂದುತ್ತದೆ. ಸುಖಭಾವದಲ್ಲಿ ಪಂಚಮೇಶನಾದರೆ ಮಾತ್ರ ಸುಖ, ಸಂಪನ್ನ, ಧನವಂತ, ಮಿತಿವಂತ, ಮಂತ್ರಿ ಅಥವಾ ಗುರು ಆಗುತ್ತಾನೆ. ಮಂತ್ರಿ, ಗುರು – ಗುರುವಾಗಿದ್ದರೆ ಧನವಂತ ಮಾತ್ರ ಸುಖಾದಿಗಳು – ಇತರ ಗ್ರಹಗಳು – ಪಂಚಮಾಧಿಪರಾಗಿದ್ದರೆ ಹೇಳುವುದು. ಶನಿ ಮಂತ್ರಿಯನ್ನು ಮಾಡುತ್ತಾನೆ. ಪಂಚಮೇಶ ಪಂಚಮದಲ್ಲಿ ಶುಭಗ್ರಹಯುಕ್ತನಾಗಿದ್ದರೆ ಪುತ್ರಾದಿ ಸೌಖ್ಯ, ಪಾಪಗ್ರಹಯುಕ್ತ ಪುತ್ರವಿಹೀನ – ಯಾವುದೇ ಗ್ರಹ ಗುಣವಂತ ಅಶುಭ ಗ್ರಹ ವಿದ್ಯೆಯಲ್ಲಿ ಅಡಚಣೆ.

ಸುತೇಶೆ ಶತ್ರುಗ್ರಹಗೆ ಸುತಃ ಶತ್ರುತ್ವಮಾಪ್ನುಯಾತ್ ।
ಮೃತೋ ವಾ ದತ್ತಕಃ ಕಿಂವಾ ಕ್ರಿತೋ ವಾ ತನಯೋ ಭವೇತ್ ॥೫೪॥

ಸುತೇಶೆ ಕಾಮಗೆ ಮಾನಿ ಸರ್ವಧರ್ಮ ಸಮನ್ವಿತಃ ।
ಸದೋಪಕಾರನಿರತಃ ಸುತಸೌಖ್ಯಯುತೋ ನರಃ ॥೫೫॥

ಸುತೇಶೆಷ್ಟಮಗೆ ಜಾತೋ ಮಿತಸೂನುಸುಖೋ ಭವೇತ್ ।
ಕಾಸಶ್ವಾಸೀ ಕ್ರೋಧಯುಕ್ತಃ ಸುಖಹಿನಶ್ಚ ಜಾಯತೆ ॥೫೬॥

ಸುತೇಶೆ ನವಮೇ ಯಸ್ಯ ತತ್ಸುತೋ ನೃಪಸನ್ನಿಭಃ ।
ಜನೋಽಸೌ ಗ್ರಂಥ ನಿರ್ಮಾತಾ ವಿಖ್ಯಾತಃ ಕುಲದಿಪಕಃ ॥೫೭॥

ಸುತೇಶೆ ಕರ್ಮಗೇಹಸ್ಥೆ ಜಾಯತೆ ಜಾತಕೋನೃಪಃ ।
ಶುಭಕೀರ್ತಿಃ ಪ್ರಭುರ್ನಾನಾ ವಿಧಸೌಖ್ಯ ಸಮನ್ವಿತಃ ॥೫೮॥

ಸುತೇಶೆ ಲಾಭ ಭಾವಸ್ಥೆ ವಿದ್ವಾನ್ ಲೋಕಪ್ರಿಯೋ ಜನಃ ।
ಚತುರೋ ಗ್ರಂಥ ನಿರ್ಮಾತಾ ಧನಕೋನೇಕ ಸೂನುಯುಕ್ ॥೫೯॥

ಸುತೇಶೆ ರಿಪ್ಪ ಭಾವಸ್ಥೆ ಪುತ್ರಸೌಖ್ಯ ವಿವರ್ಜಿತಃ ।
ಜಾತಕಃ ಕ್ರೀತತನಯೋ ಗ್ರಾಹ್ಯಪುತ್ರೋಥವಾ ಭವೇತ್ ॥೬೦॥

ಸುತೇಶನು ಷಷ್ಠಭಾವ ಗತನಾಗಿದ್ದರೆ ಮಗನು ಸಾಯುವುದು ನೋಡ ಬೇಕಾಗುವುದು – ಅವನ ಮಗನೇ ಅವನಿಗೆ ಶತ್ರು ಸಮಾನ – ಈ ಎಲ್ಲ ಫಲಗಳು

ಸಾಮಾನ್ಯ ಪಾಪಗ್ರಹಗಳಿಂದ ವಿಶೇಷ ಫಲ ಶುಭಗ್ರಹಗಳಿದ್ದಾಗ ಸ್ವಲ್ಪ ಸೌಮ್ಯಫಲ – ಸಪ್ತಮದಲ್ಲಿದ್ದರೆ ಮನುಷ್ಯ ಮಾನಿ ಧಾರ್ಮಿಕ ಪರೋಪಕಾರಿ, ಪುತ್ರ ಸೌಖ್ಯ ಪೂರ್ಣ, ಸಾಮಾನ್ಯ ರವಿ, ಗುರುವನ್ನು ಹೊರತುಪಡಿಸಿ ಎಲ್ಲ ಗ್ರಹಗಳಿಂದಲೂ ಈ ಫಲ ದೊರೆಯುತ್ತದೆ. ಮಂತ್ರೇಶ್ವರರ ಫಲ ಸ್ತ್ರೀ ಮೃತ್ಯು ರವಿ, ಗುರುಗಳಿಂದ ಆಗುತ್ತದೆ. ಅಷ್ಟಮದಲ್ಲಿ – ಜಾತಕ ಕ್ರೋಧಿ, ಕಾಸ – ಶ್ವಾಸ ರೋಗಯುಕ್ತ ದುಃಖಿ ಹಾಗೂ ಅಲ್ಪ ಪುತ್ರಸೌಖ್ಯ. ಈ ಎಲ್ಲ ಅರಿಷ್ಟಫಲ ಪಂಚಮೇಶ ಪಾಪಗ್ರಹವಾಗಿ ಶತ್ರು ಸ್ಥಾನದಲ್ಲಿದ್ದರೆ ವಿಶೇಷ ನವಮದಲ್ಲಿ – ರಾಜನ ಸಮಾನ ಕೀರ್ತಿ, ಐಶ್ವರ್ಯವಂತ – ಗ್ರಂಥ ಲೇಖನಕಾರ ವಂಶದಲ್ಲಿಯೇ ವಿಖ್ಯಾತ – ಇಲ್ಲಿ ಶನಿಯನ್ನು ಬಿಟ್ಟು ಇತರ ಗ್ರಹಗಳಿಂದ ಈ ಫಲ ದೊರೆಯುತ್ತವೆ – ದಶಮದಲ್ಲಿ – ರಾಜನೇ ಆಗುತ್ತಾನೆ. ನಿರ್ಮಲ ಯಶಸ್ಸು ವ್ಯಾಪ್ತವಾಗಿರುತ್ತದೆ. ಅನೇಕ ತರಹದ ರಾಜಸೌಖ್ಯ – ಎಲ್ಲ ಗ್ರಹಗಳ ವಿಷಯದಲ್ಲಿ ಈ ಫಲ ಶನಿಯಿದ್ದರೆ ದೂರ ಪ್ರದೇಶದಲ್ಲಿರುವ – ತೊಂದರೆ. ಏಕಾದಶದಲ್ಲಿ ವಿದ್ವಾನ್, ಜನಪ್ರಿಯ ಧನಿ, ಗ್ರಂಥನಿರ್ಮಾಣ ಕುಶಲ ಅನೇಕ ಪುತ್ರಯುಕ್ತ –ಕ್ರಮಶಃ ಪುಣ್ಯಗ್ರಹ, ಪಾಪಗ್ರಹಾನುಸಾರ ವ್ಯತ್ಯಾಸದಿಂದ ಶುಭಫಲ ದೊರೆಯುತ್ತದೆ. ವ್ಯಯದಲ್ಲಿ ಪುತ್ರಸೌಖ್ಯ ಹೀನ ದತ್ತಕ ಪುತ್ರ ಇತ್ಯಾದಿ ಫಲ – ಸಾಮಾನ್ಯ ಪಾಪಗ್ರಹಗಳಿಂದ ಈ ಫಲ ವಿಶೇಷವಾಗಿರುತ್ತದೆ. ಶುಭಗ್ರಹವಿದ್ದಲ್ಲಿ ಸ್ವಲ್ಪ ಕಡಿಮೆ.

## ರೋಗೇಶ ಫಲ

ಷಷ್ಠೇಶೆ ತನುಗೆ ಮಾನಿ ಜಾತಕಸ್ತು ರುಜಾನ್ವಿತಃ ।
ಕೀರ್ತಿಂವಿತ್ತ ಗುಣೋಪೇತೋ ಜ್ಞಾತಿಶತ್ರುಶ್ಚ ಸಾಹಸಿ ॥೬೧॥

ಷಷ್ಠೇಶೆ ವಿತ್ತಗೆ ಜಾತೋ ವಂಶಖ್ಯಾತೋತಿಸಾಹಸಿ ।
ವಕ್ತಾ ಸುಖಿ ಪ್ರವಾಸಿ ಚ ಸ್ವಕರ್ತವ್ಯಪರೋ ಭವೇತ್ ॥೬೨॥

ಷಷ್ಠೇಶೆ ವಿಕ್ರಮಸ್ಥೆ ತು ಭ್ರಾತೃಶತ್ರುಃ ಕ್ರುಧಾನ್ವಿತಾ ।
ಜಾತೋ ವಿಕ್ರಮಹೀನಃ ಸ್ಯಾದ್ ದಾಸಸ್ಯಸ್ಯೋತ್ತರ ಪ್ರದಃ ॥೬೩॥

ಷಷ್ಠೇಶೆ ತುರ್ಯಭಾವಸ್ಥೆ ಜಾತೋ ಮಾತೃಸುಖೋಂಜ್ಞಿತಃ ।
ಮನಸ್ವಿ ಪಿಶನೋ ದ್ವೇಷಿ ಚಲಚಿತ್ತೋಪಿ ವಿತ್ತವಾನ್ ॥೬೪॥

ಷಷ್ಠೇಶೆ ಸುತಗೆ ಜಾತಶ್ಚಲ ಮಿತ್ರಧನಾದಿಕಃ ।
ಸ್ವಾರ್ಥೀ ದಯಾಲುಃ ಸುಖಿತೋ ದ್ವೇಷಕೃತ್ತನಯಾದಿಭಿಃ ॥೬೫॥

ಷಷ್ಠೇಶೆ ರಿಪುಭಾವಸ್ಥೆ ಶತ್ರುತಾ ಜ್ಞಾತಿಭಿಃಸದಾ ।
ಮಿತ್ರತ್ವಮನ್ಯಜಾತೀಯ್ಯೈಃ ಮಧ್ಯಮರ್ಥಾದಿಜಂ ಸುಖಮ್ ॥೬೬॥

ಷಷ್ಠೇಶೆ ಸಪ್ತಮೆ ಜಾತೋ ಜಾಯಾಸುಖವಿವರ್ಜಿತಃ ।
ವಿತ್ತಕೀರ್ತಿ ಗುಣಪೇತಃ ಸಾಹಸಿ ಮಾನವಾನ್ ಭವೇತ್ ॥೬೭॥

ಷಷ್ಠೇಷ್ಠಮಗೆ ರೋಗಿ ವೈರಯುಕ್ತೊ ಮನಿಷಿಭಿಃ ।
ಪರಸ್ತ್ರೀವಿತ್ತಲಾಭಾರ್ಥಿ ಜಾತಕಃ ಶೌಚವರ್ಜಿತಃ ॥೬೮॥

ಷಷ್ಠೇಶೆ ನವಮೇ ಜಾತಃ ಕಾಷ್ಟಪಾಪಣ ವಿಕ್ರಯಿ ।
ವ್ಯವಹಾರೆ ಕಚ್ಚದ್ಧಾನಿಃ ಕಚ್ಚಿದೃಶ್ಚ ತಸ್ಯಹಿ ॥೬೯॥

ಷಷ್ಠೇಶೆ ಕರ್ಮಗೆ ಜಾತೋ ವಕ್ತಾ ಖ್ಯಾತೋ ನಿಜಾನ್ವಯೇ ।
ಪಿತೃಭಕ್ತಿ ವಿಹಿನಶ್ಚ ಪ್ರವಾಸೆ ಸುಖಿತೋ ಭವೇತ್ ॥೭೦॥

ಷಷ್ಠೇಶೆ ಲಾಭ ಭವನೇ ಧನಾಪ್ತಿ ರಿಪುತೋ ಭವೇತ್ ।
ಧನವಾನ್ ಗುಣವಾನ್ ಮಾನಿ ಸಾಹಸಿ ಸುತವರ್ಜಿತಃ ॥೭೧॥

ಷಷ್ಠೇಶೆ ರಿಪ್ಪಗೆ ಜಾತೋ ವಿದ್ಯೆಷ್ಟಾ ಸ್ಯಾನ್ಮನಿಷಿಣಾಮ್ ।
ವ್ಯಸನೇರ್ಥವ್ಯಯ ಜೀವಹಿಂಸಾಸಕ್ತಶ್ಚ ಜಾಯತೆ ॥೭೨॥

ಆರನೇ ಸ್ಥಾನಾಧಿಪ ಲಗ್ನಗತನಾದರೆ ಜಾತಕ ಸದಾ ರೋಗಿ. ಮಾನಿ ಯಶಸ್ವಿ, ಧನಿ, ಗುಣಿ, ಸಾಹಸಿ ಆದರೆ ಸಂಬಂಧಿಗಳ ಶತ್ರು. ಸಾಮಾನ್ಯ ಎಲ್ಲ ಫಲ ಶನಿ, ರವಿ, ಮಂಗಳ, ಗುರು ಇವರಿಂದ ಅನುಭವ ವೇದ್ಯವಾದರೂ ಇತರ ಗ್ರಹಗಳು ಸಂಪರ್ಕ ದಿಂದ ವಿಶೇಷ ಫಲದಾಯಕ. ದ್ವಿತೀಯದಲ್ಲಿ – ವಂಶದಲ್ಲಿ ವಿಖ್ಯಾತ, ಸಾಹಸಿ, ವಕ್ತಾ ಸುಖಿ, ಪರದೇಶದಲ್ಲಿರುವವ ಹಾಗೂ ಸದಾ ತನ್ನ ಕರ್ತವ್ಯನಿರತ. ಈ ಅನುಭವಗಳು ರವಿ, ಶನಿ, ಶುಕ್ರ, ಬುಧ, ಮಂಗಳರಿಂದ ವೇದ್ಯವಾದರೆ ಇತರರು ಹೇಳಿದ ಫಲ ಇತರ ಗ್ರಹಗಳಿಂದ ಸಹಜಗತನಾದರೆ – ಅಣ್ಣಾ, ತಮ್ಮಂದಿರೇ ಶತ್ರು ಗಳಾಗುವರು. ಕ್ರೋಧಿ, ಪರಾಕ್ರಮಿ ಹೀನ ಯಾವಾಗಲೂ ಮತ್ತೊಬ್ಬರ ಸೇವೆಯಲ್ಲಿ ಕಾಲ ಕಳೆಯುವವ – ಈ ಫಲಗಳು ಪಾಪಗ್ರಹದಿಂದ ಅನುಭವ ಸಿದ್ಧ – ಶುಭಗ್ರಹಗಳಿಂದ ಶುಭಫಲಗಳಿವೆ. ಅದೇ ಅವನು ಸುಖ ಸ್ಥಾನಗತನಾದರೆ – ಮಾತೃ ಸುಖ ವಂಚಿತ –ಮನಸ್ವಿಯೂ ಛಾಡಿ ಕೋರ. ಎರಡನೆಯವರ ದೋಷ ಎತ್ತಿ ಹಿಡಿಯುವವ, ಚಂಚಲ ಪ್ರಕೃತಿಯಾದರೂ ಧನಿ – ಇವು ಎಲ್ಲ ಗ್ರಹಗಳ ಬಲಾಬಲದ ಮೇಲಿಂದ ನಿರ್ಧರಿಸುವುದು, ಛಾಡಿ ಹೇಳುವುದು, ದೋಷ ಎತ್ತಿ

ತೋರಿಸುವ ವಿಶೇಷ ಗುಣ ಶನಿಯಿಂದಲೇ ಸಾಧ್ಯ – ಪಂಚಮದಲ್ಲಿದ್ದರೆ ಧನ, ಮಿತ್ರ ಎಲ್ಲವೂ ಅವನಿಗೆ ಅಸ್ಥಿರವಾದವುಗಳು ಹಾಗೂ ಅವನು ಸ್ವಾರ್ಥಿಯೂ, ಆದರೆ ಕೆಲವು ಸಲ ದಯಾವಂತ – ಸುಖಿಯಾದರೂ ಪುತ್ರಾದಿಗಳನ್ನು ದ್ವೇಷ ಮಾಡುವವನು, ಷಷ್ಠೇಶ ಪಾಪಗ್ರಹವಿದ್ದರೆ ಫಲ ವಿಶೇಷ ರೂಪವಾಗಿಯೇ ದೊರೆಯುತ್ತದೆ. ಶುಭಗ್ರಹಗಳು ದಯಾ, ಗುಣ, ಧನನಾದರೂ ಅಸ್ಥಿರನಾದ್ದರಿಂದ – ತೊಂದರೆಗೆ ಸಿಕ್ಕಿಕೊಳ್ಳುವನು. ಷಷ್ಠೇಶನು ಷಷ್ಠದಲ್ಲಿದ್ದರೆ – ತನ್ನ ಸಂಬಂಧಗಳೊಡನೆ ಸದಾ ದ್ವೇಷ ಭಾವನೆಯಿಂದ ನಡೆದುಕೊಳ್ಳುವನು. ಎರಡನೇ ಜೊತೆಯವರೊಡನೆ ಮಿತ್ರತ್ವ ಹೊಂದಿರುವನು ಹಾಗೂ ಸಾಮಾನ್ಯ ಧನಾದಿಗಳಿಂದ ಕೂಡಿದವನು. ಇಲ್ಲಿ ಪಾಪಗ್ರಹಗಳಿದ್ದರೆ ಶುಭಫಲ ಶುಭಗ್ರಹಗಳಿದ್ದರೆ ಎಲ್ಲ ಕೆಟ್ಟ ಫಲಗಳು – ಗುರು ಸ್ವಜನ ದ್ವೇಶಿಯನ್ನಾಗಿ ಮಾಡುತ್ತಾನೆ. ಸಪ್ತಮದಲ್ಲಿದ್ದರೆ ಸ್ತ್ರೀ ಸೌಖ್ಯ ವಿಹೀನ, ಧನ, ಗುಣ ಸಂಪನ್ನ, ಸಾಹಸಿ ಮಾನಿಯಾಗುತ್ತಾನೆ – ಪಾಪಗ್ರಹ ವಿದ್ದು – ಶುಭಗ್ರಹ ಅಥವಾ ಅಶುಭಗ್ರಹವಿದ್ದು. ಕ್ರೂರಗ್ರಹ ಸಂಬಂಧವಾದರೆ ಸ್ತ್ರೀ ಸುಖ ವಿಹೀನ, ಮಾನಸಿಕವಾಗಿ ನಪುಂಸಕ ಭಾವನೆ – ಮಧ್ಯವಯಸ್ಸಿನಲ್ಲಿ ಸುಖಿ, ಅಷ್ಟಮ ಭಾವಸ್ಥನಾಗಿದ್ದರೆ ರೋಗಿ, ವಿದ್ವದ್ ಜನರ ದ್ವೇಷಿ, ಎರಡನೆಯವರ ಹಣ ಸ್ತ್ರೀಯ ಮೇಲೆ ಕಣ್ಣು, ಅಪವಿತ್ರನೂ ಆಗಿರುತ್ತಾನೆ – ಈ ಅನುಭವ ಮಂಗಳ, ಶುಕ್ರ, ಶನಿಯ ವಿಷಯದಲ್ಲಿ ಸತ್ಯವಾದರೆ ರವಿ, ಚಂದ್ರರ ವಿಷಯದಲ್ಲಿ ಹಾಗೂ ಯೋಗಗಳಲ್ಲಿ ಫಲ ವ್ಯತ್ಯಾಸವನ್ನು ಹೇಳುವುದು. ಅದೇ ಷಷ್ಠೇಶ ನವಮದಲ್ಲಿದ್ದರೆ – ಅಂತಹ ಮನುಷ್ಯ ಕಟ್ಟಿಗೆ, ಕಲ್ಲಿನ ವ್ಯಾಪಾರಿಯಾಗಿರುತ್ತಾನೆ. ಆದರಿಂದ ಲಾಭವೂ ಉಂಟು. ಆದರೆ ಕೆಲವು ಸಲ ಹಾನಿ, ಲಾಭಗಳಲ್ಲಿ ಸಾಗುತ್ತದೆ – ಮೇಷದ ಶನಿಯಿದ್ದರೆ ಸಿಂಹ ಲಗ್ನವಿದ್ದರೆ ಕಟ್ಟಿಗೆ ವ್ಯಾಪಾರಿ – ಲಾಭ ಹಾನಿ ಕಂಡುಬರುತ್ತದೆ. ಉಳಿದ ಗ್ರಹದ ಮೇಲಿಂದ ವ್ಯಾಪಾರ ಹೇಳಿದರು – ಲಾಭ ಹಾನಿ ಹೇಳುವುದು – ದಶಮದಲ್ಲಿದ್ದರೂ ಕೂಡ ವಂಶದಲ್ಲಿ ವಿಖ್ಯಾತ, ವಕ್ತಾ ಪಿತೃಭಕ್ತಿ ವಿಹೀನ, ಸುಖಿ ಪೂರ್ವಕ ಪರದೇಶದಲ್ಲಿ ವಾಸ – ವಿಖ್ಯಾತಾದಿಗಳು ಶನಿ, ಮಂಗಳರಿಂದ ಕಂಡು ಬರುತ್ತದೆ. ಪಿತೃಭಕ್ತಿ ವಿಹೀನ ಕೇವಲ ಶನಿಯಿಂದ ಸಾಧ್ಯ. ಇತರೆಲ್ಲ ಗ್ರಹಗಳು ಸಾಮಾನ್ಯ ಫಲ ಗ್ರಹಗಳು ಬಲಹೀನವಾಗಿದ್ದರೆ ಪ್ರಾಂತ ಬಿಟ್ಟು ವಾಸ – ಏಕಾದಶದಲ್ಲಿ – ಶತ್ರುಗಳಿಂದ ಕೂಡ ದಾನ ಪಡೆಯುವವ ಧನವಂತ, ಗುಣಿ, ಮಾನಿ ಸಾಹಸಿ, ಅಪುತ್ರವಂತ – ಚಂದ್ರ, ಮಂಗಳರಿಂದ ಅಪುತ್ರವಂತ – ಇನ್ನುಳಿದ ಎಲ್ಲಾ ಗ್ರಹಗಳಿಂದ – ಮೇಲಿನ ಎಲ್ಲ ಶುಭಫಲಗಳು – ದ್ವಾದಶದಲ್ಲಿ ಷಷ್ಠೇಶ– ಜಾತಕರ ದ್ವೇಷಿ, ದುರ್‌ವ್ಯಸನಿ, ಖರ್ಚಿಕ – ಜೀವ ಹಿಂಸಕ ಕೊಲೆಗಾರ

– ಗುರು, ಚಂದ್ರ, ರವಿ – ಪಾಪಯುಕ್ತ(ರಾಹು, ಕೇತು, ಹರ್ಷಲ)ರಾದರೆ ಜೀವ ಹಿಂಸಕ, ಉಳಿದ ಗ್ರಹಗಳಿಂದ ಖರ್ಚಿಕ ವ್ಯಸನಿ.

ಈ ಎಲ್ಲ ಫಲದಲ್ಲಿ ಗ್ರಹಯೋಗ ಮಹತ್ವವೆ.

## ಸಪ್ತಮೇಶನ ಫಲ

ಜಾಯೇಶೆ ತನುಗೆ ಜಾತಃ ಪರಜಾಯಾಸು ಲಂಪಟಃ ।
ದುಷ್ಟೋ ಧೀರೋತಿಚತುರೋ ಭವೇದ್ ವಾತಾಮಯಾದಿತಃ ॥೭೩॥

ಜಾಯೇಶೆ ಧನಭಾವಸ್ಥೇನೇಕಸ್ತ್ರೀಭಿಃ ಸಮಾಗತಃ ।
ಸ್ತ್ರೀದ್ವಾರಾ ಮಿತ್ರಸಂಲಾಭಃ ದೀರ್ಘಸೂತ್ರಿ ಚ ಜಾಯತೆ ॥೭೪॥

ಜಾಯೇಶೆ ಸಹಜಸ್ಥೆ ತು ಜಾಯತೆ ಮೃತಸಂತತಿಃ ।
ತದಾಚಿದ್ ದುಹಿತುಃ ಪ್ರಾಪ್ತಿ ರ್ಜೀವೇದ್ಯತ್ನಾತ್ತು ತತ್ಸುತಃ ॥೭೫॥

ಜಾಯೇಶೆ ತುರ್ಯಭಾವಸ್ಥೆ ಜಾಯಾ ನೈವ ಪತಿವ್ರತಾ ।
ಧರ್ಮಾತ್ಮಾ ಸತ್ಯ ಸಂಯುಕ್ತಃ ಸ್ವಯಂ ದಂತರುಜಾನ್ವಿತಃ ॥೭೬॥

ಸಪ್ತಮೇಶ ಲಗ್ನಗತನಾಗಿದ್ದರೆ ಆ ಮನುಷ್ಯ ಸ್ತ್ರೀ ಲಂಪಟ, ದುಷ್ಟ, ಗಂಭೀರ, ಅತಿ ಚತುರ ಹಾಗೂ ವಾತರೋಗಿಯಾಗಿರುತ್ತಾನೆ – ಇಲ್ಲಿ ಸ್ತ್ರೀ ಲಂಪಟ ಈ ಫಲ ಗುರು, ಬುಧ, ಶುಕ್ರರಿಂದಾದರೆ, ದುಷ್ಟ, ಗಂಭೀರ ವಾತರೋಗ ಶನಿಯಿಂದ ವಿಶೇಷ – ಧನಭಾವಗತನಾಗಿದ್ದರೆ ಹಾಗೂ ದೀರ್ಘಸೂತ್ರಿಯಾಗುವನು. ಈ ಎಲ್ಲ ಫಲಗಳು ಶನಿಯನ್ನು ಬಿಟ್ಟು – ಇತರ ಗ್ರಹಗಳಿಂದ ದೊರೆತರೆ ಶನಿಯಿಂದ ದೀರ್ಘ ಸೂತ್ರಿಯಾಗುವನು. ತೃತೀಯದಲ್ಲಿ – ಆ ಜಾತಕನಿಗೆ ಮೃತ ಸಂತತಿ – ಪುತ್ರರಿಲ್ಲದೆ ಪುತ್ರಿಯರ – ಜನನ ಬಹಳ ಪ್ರಯತ್ನ (ಯಂತ್ರ ಮಂತ್ರಾದಿ ಔಷಧ) ಒಬ್ಬ ಮಗ ಜೀವಿತನಾಗಿರಲು ಸಾಧ್ಯ – ಈ ಅನುಭವಗಳು ವಿಶೇಷ ಪಾಪಗ್ರಹ ದಿಂದ ಕಂಡು ಬರುತ್ತವೆ. (ಇಲ್ಲಿ ಇಬ್ಬರ ಜಾತಕಕಾರರು ಹೇಳಿದ ಪತ್ನಿಗೆ ಮೈದುನನ ಸಂಪರ್ಕ ಈ ಅಂಶ ಪರೀಕ್ಷಿಸುವುದು) ನಾಲ್ಕನೇ ಸ್ಥಾನದಲ್ಲಿ ಜಾತಕ ಪತ್ನಿಯೂ ಪತಿವ್ರತೆಯಾಗಿರುವುದು ಸಂಶಯ. ಆದರೆ ಆ ವ್ಯಕ್ತಿ ಧರ್ಮಾತ್ಮನಾಗಿರುತ್ತಾನೆ. ಇಲ್ಲಿ ಲೋಮೇಶರು 'ತಸ್ಯ ಜಾಯಾ ಪತಿವ್ರತಾ' ಎಂದರೆ ಪರಾಶರರು 'ನೈವ ಪತಿವ್ರತೆ' ಎಂದಿರುವ ವಿರೋಧಾಭಾಸವಾದರೂ – ಎಲ್ಲ ಗ್ರಹಗಳಿಂದ ಫಲ ಹೇಳಿದರೂ– ಜಾಯೇಶ ಅತಿ ನಿರ್ಬಲನಾಗಿ ಪಾಪಯುಕ್ತನಾದರೆ ಮಾತ್ರ. 'ನೈವ ಪತಿವ್ರತಾ' ಎಂದು ಹೇಳುವುದು. ಶುಭ ಸಂಪರ್ಕವಿದ್ದರೆ 'ಪತಿವ್ರತಾ' ಎಂದೇ ತೆಗೆದು ಕೊಳ್ಳುವುದು.

ಜಾಯೇಶೆ ಸುತಗೆ ಮಾನಿ ಭವೇತ್ ಸರ್ವಧನಾಧಿಪಃ ।
ಸದೈವ ಹರ್ಷಸಂಯುಕ್ತೋ ನರಃ ಸರ್ವಗುಣೈರ್ಯುತಃ ॥೭೭॥

ಜಾಯೇಶೆ ಶತೃಭಾವಸ್ಥೆ ಜಾಯಾ ತಸ್ಯಚ ರೋಗಿಣಿ ।
ತಯಾವಾ ಸಹ ವಿದ್ವೇಷಃ ಕ್ರೋಧನಃ ಸ ಚ ನಿಸುಖಾ ॥೭೮॥

ಜಾಯೇಶೆ ಸಪ್ತಮೇ ಜಾತೋ ಜಾಯಾಸುಖ ಸಮನ್ವಿತಃ ।
ಧೈರ್ಯ ಬುದ್ಧಿಯುತೋ ವಿದ್ವಾನ್ ವಾತರೋಗಿ ಚ ಜಾಯತೆ ॥೭೯॥

ಜಾಯೇಶೆ ರಂಧ್ರಗೆ ಜಾಯಾ ಸುಖಂ ನ ಲಭತೆ ಕಚ್ಚಿತ್ ।
ದುಃಶೀಲಾ ರೋಗಿಣಿ ತಸ್ಯ ಭಾರ್ಯಾ ನೈವ ವಂಶವದಾ ॥೮೦॥

ಜಾಯೇಶೆ ನವಮಸ್ಥೆತು ನಾನಾ ಸ್ತ್ರೀಭಿಃ ಸಮಾಗಮಃ ।
ನಾನಾರಂಭೀ ಭವೇತ್ ತಸ್ಯ ಸ್ತ್ರೀಷು ಚಿತ್ತಂ ಹಿ ಕೇವಲಮ್ ॥೮೧॥

ಜಾಯೇಶೆ ಕರ್ಮಗೆ ಜಾತಃ ಸುತವಿತ್ತಾದಿ ಸಂಯುತಃ ।
ಧರ್ಮಾತ್ಮಾ ಜಾಯತೆ ಕಿಂತು ವಶ್ಯಾ ತಸ್ಯ ನಹಿ ಪ್ರಿಯಾ ॥೮೨॥

ಜಾಯೇಶೆ ಲಾಭಗೆ ಜಾತೋ ಜಾಯಾತೋ ವಿತ್ತವಾನ್ ಭವೇತ್ ।
ಸುತಾದಿಜಂ ಸುಖಂ ಸ್ವಲ್ಪಂ ಕನ್ಯಾಧಿಕ್ಯ ಚ ಜಾಯತೆ ॥೮೩॥

ಜಾಯೇಶೆ ರಿಪ್ಪಗೆ ಜಾತೋ ದರಿದ್ರಃ ಕೃಪಣಸ್ತಥಾ ।
ವಸ್ತ್ರಜೀವಿ ಪುಮಾನ್ ಕಿಂತು ವ್ಯಯಶೀಲಾ ಚ ತತ್‌ಪ್ರಿಯಾ ॥೮೪॥

ಜಾಯೇಶ ಪಂಚಮದಲ್ಲಿ – ಆ ಮನುಷ್ಯ ಮಾನಿ ಸಂಪತ್ತಶಾಲಿ, ಯಾವಾಗಲೂ ಪ್ರಸನ್ನಚಿತ್ತ ಹಾಗೂ ಎಲ್ಲ ಸದ್ಗುಣಗಳ ಆಗರವಾಗಿರುತ್ತಾನೆ – ಈ ಎಲ್ಲ ಶುಭ ಗ್ರಹಗಳು ಶನಿ (ಕುಂಭ, ಸಪ್ತಮ ವಿಶೇಷ) ಚಂದ್ರ, ಬುಧ, ಶುಕ್ರರ ವಿಷಯದಲ್ಲಿಯೂ – ಅನುಭವಸಿದ್ಧ ಇತರ ಗ್ರಹಗಳಿಂದ – ಬೇರೆ ಋಷಿವದಿತ ಫಲ ಹೇಳುವುದು. ಆರನೇ ಸ್ಥಾನದಲ್ಲಿ ಪತ್ನಿ ಸದಾಕಾಲ ರೋಗಿ, ಹೆಂಡತಿ ವಿಷಯ ದಲ್ಲಿ ದ್ವೇಷವೂ – ಕ್ರೋಧಿ, ಸದಾ ದುಃಖಿ – ಈ ಫಲಗಳು ರವಿ, ಮಂಗಳರಿಂದ ವಿಶೇಷವಾಗಿ ಕಂಡು ಬರುತ್ತವೆ. ಶುಭಗ್ರಹಗಳಿಂದ ವಿರುದ್ಧ ಫಲವೂ ಇದೆ. ಸಪ್ತಮೇಶ ಸಪ್ತಮದಲ್ಲಿ ಪತ್ನಿ ಸುಖಿಯುಕ್ತ ಧೀರನೂ, ಸುಬುದ್ಧಿಯುಳ್ಳವನು ಹಾಗೂ ವಿದ್ವಾಂಸನೂ – ವಾತರೋಗಿಯು ಆಗುವನು. ವಿಶೇಷ ಗುರು, ಚಂದ್ರ, ಮಂಗಳರ ವಿಷಯದಲ್ಲಿ ಮೇಲಿನ ಫಲ ಅನುಭಸಿದ್ಧವಾಗಿದ್ದರೆ ಉಳಿದ ಗ್ರಹ

ವಿಚಾರದಲ್ಲಿ ಶನಿ, ಶುಕ್ರರ ವಿಚಾರ ಹಾಗೂ ಆ ಗ್ರಹಗಳೊಡನೆ ಯುತ ಗ್ರಹದಿಂದ ಕೆಲವು ಅನಿಷ್ಟ ಫಲಗಳು ಹೇಳಬಹುದು. ಅಷ್ಟಮದಲ್ಲಿ ಸ್ತ್ರೀಸುಖ ವಿಹೀನ ಹೆಂಡತಿ ದುಃಶಿಲೆ – ರುಗ್ಣಳಾಗಿದ್ದು ಯಾರ ವಶದಲ್ಲಿಯೂ ಬರಲಾರಳು. ಈ ಫಲಗಳು ವಿಶೇಷ ಶುಕ್ರ, ಚಂದ್ರ, ಮಂಗಳರಿಂದ ದೊರೆಯುತ್ತದೆ. ಸಪ್ತಮೇಶ – ನವಮದಲ್ಲಿ ಅನೇಕ ಸ್ತ್ರೀ ಸಂಭೋಗ, ಅನೇಕ ಕಾರ್ಯ ಆರಂಭ ಮಾಡುತ್ತಾನೆ. ಚಿತ್ತ ಮಾತ್ರ ಸ್ತ್ರೀಯರ ಮೇಲಿರುತ್ತದೆ. ಇಲ್ಲಿ ಪರಾಶರರ – ಫಲಾದೇಶ ಉಳಿದ ಮುನಿಗಳಿಗಿಂತ ಭಿನ್ನವಾಗಿದ್ದರೂ ಶನಿ, ಮಂಗಳರ ವಿಚಾರದಲ್ಲಿ ಸಿದ್ಧವಾದರೂ ಉಳಿದವರ ವಿಚಾರದಲ್ಲಿ ಶುಭವಿದೆ – ಪಾಪಗ್ರಹ ನಪುಂಸಕತ್ವದ ಭಯ ಹುಟ್ಟಿಸುತ್ತಾನೆ. ಅದೇ ಜಾಯೇಶ ದಶಮದಲ್ಲಿದ್ದರೆ – ಧರ್ಮಾತ್ಮ ಪುತ್ರ ವಿತ್ತ ಆದಿ ಯುಕ್ತನಾಗಿರುತ್ತಾನೆ. ಆದೆ ಹೆಂಡತಿ ಅವನ ಅಧೀನಳಾಗಿರುವುದಿಲ್ಲ. ಈ ಗ್ರಹಗಳ ಫಲ ಮುಖ್ಯವಾಗಿ ಪರಿಗಣಿಸಿ ಅವು ರವಿ, ಮಂಗಳ, ಶನಿ – ಉಳಿದ ಗ್ರಹಗಳಿಂದ ಶುಭಫಲ ಕಂಡು ಬರುತ್ತದೆ -- ಲಾಬದಲ್ಲಿ ಜಾಯೇಶ ಸ್ತ್ರೀ ಮುಖಾಂತರ ಧನ ಲಾಭ. (ನೌಕರಸ್ಥ ಹೆಂಡತಿ). ಪುತ್ರಸೌಖ್ಯ ಮಾತ್ರ ಅಲ್ಪವಾಗಿರುತ್ತದೆ. ಆದರೆ ಕನ್ಯಾ ಸಂತತಿ ಹೆಚ್ಚು. ಈ ಎಲ್ಲ ಸಂಗತಿ ಎಲ್ಲ ಗ್ರಹಗಳಿಂದ ಪರಿಶೀಲನಾರ್ಹವೆ. ವ್ಯಯದಲ್ಲಿ – ದರಿದ್ರ ಕೃಪಣ – ವಸ್ತ್ರ ಮಾರಾಟದಿಂದ ಜೀವನ ನಿರ್ವಹಣೆ , ಹೆಂಡತಿ ಅಧಿಕ ಖರ್ಚಿನ ವಳು. ಈ ಫಲಗಳು ರವಿ, ಮಂಗಳ, ಶನಿ, ಗುರುಗಳಿಂದ ಕಂಡುಬರುತ್ತದೆ. ಉಳಿದ ಗ್ರಹಫಲಯುತ ಗ್ರಹದ ಜೊತೆಗೆ ಅವಲೋಕಿಸುವುದು.

## ಅಷ್ಟಮೇಶ ಫಲ

ಅಷ್ಟಮೇಶ ತು ತನುಗೆ ಸುರ ಭೂಸುರ ನಿಂದಕಃ ।
ಹತದೇಹಸುಖೋ ನಿತ್ಯಂ ಜಾತಕಃ ಸ್ಯಾದ್ ವ್ರಣಾನ್ವಿತಃ ॥೮೫॥

ಅಷ್ಟಮೇಶೆ ಧನಗತೆ ಜಾತೋ ಬಾಹುಬಲೋಜ್ಝಿತಃ ।
ಸ್ವಲ್ಪ ವಿತ್ತಯುತಸ್ತಸ್ಯ ನಷ್ಟರ್ಥಾಪ್ತಿಃ ಪ್ರಜಾಯತೆ ॥೮೬॥

ಅಷ್ಟಮೇಶೆ ತೃತೀಯಸ್ತೆ ಹತಭ್ರಾತೃ ಸುಖೋ ನರಃ ।
ದುರ್ಬಲೋ ದಾಸ ರಹಿತ ಶ್ಚಾಲಸೋಪಿ ಪ್ರಜಾಯತೆ ॥೮೭॥

ಅಷ್ಟಮೇಶೆ ತು ಸುಖಗೆ ಸುದ್‌ದ್ರೋಹಪರಃ ಪುಮಾನ್ ।
ಜನನಿ ಗೇಹ ಭೂಸೌಖ್ಯ – ಸಹಿತೋಪಿ ಭಯಾನ್ವಿತಃ ॥೮೮॥

ಅಷ್ಟಮೇಶೆ ಸುತಸ್ಥೆ ತು ಸ್ವಲ್ಪಾಪತ್ಯೋರ್ಥವಾನ್ನರಃ ।
ಜಾಯತೆಮಂದಧಿಫಣೋ ದೀರ್ಘಾಯುಷ್ಯ ಸಮನ್ವಿತಃ ॥೮೯॥

ಶುಭದೃಷ್ಟಿ ಅನ್ನು 1/4 ಸೇರಿಸಿ ಹಾಗೂ ಪಾಪಗ್ರಹ ದೃಷ್ಟಿಯ 1/4 ಕಳೆದು – ಗುರುವಿನ ದೃಷ್ಟಿಯಿದ್ದರೆ ಆ ದೃಷ್ಟಿ ಸೇರಿಸಿದರೆ ಹಾಗೂ ಆ ಸ್ವಾಮಿಯ ಬಲವನ್ನು ಸೇರಿಸಿದರೆ ಭಾವಸ್ಫುಟ ಬಲ ಬರುತ್ತದೆ. ಈ ರೀತಿ ಬಲ ತೆಗೆದ ಮೇಲೆ

## ಭಾವ ಬಲದ ವಿಶೇಷತೆ

ವಿದಿಜ್ಯೋವೇತ ಭಾವಸ್ಯ ಬಲಮೇಕೇನ ಸಂಯುತಮ್ ।
ಮಂದಾರ ರವಿಯುಕ್ತಸ್ಯ ಬಲಮೇಕೇನ ವರ್ಜಿತಮ್ ॥೩೦॥

ದಿವಾಶೀರ್ಷೋದಯಾಶ್ಚೈವ ಸಂಧ್ಯಾಯಾಮುಭಯೋ ದಯಾಃ ।
ನಕ್ತಂ ಪೃಷ್ಠೋದಯಾಶ್ಚೈವ ದದ್ಯುರಂಗಿಂಘ್ರುವಿತಂ ಬಲವ್ ॥೩೧॥

ಭಾವವು ಬುಧ, ಗುರು ಯುತವಾಗಿದ್ದರೆ ಭಾವ ಬಲದಲ್ಲಿ 1ನ್ನು (60') ಸೇರಿಸಿರಿ. ಅದೇ ಶನಿ, ಮಂಗಳ, ಸೂರ್ಯಾದಿ ಪಾಪಗ್ರಹ ಯುಕ್ತವಾಗಿದ್ದರೆ 1ಡಿಗ್ರಿ ಕಳೆಯಿರಿ – ಹಗಲಿನಲ್ಲಿ ಜನನ (ಅಥವಾ ಪ್ರಶ್ನೆ)ವಾಗಿ ಶೀರ್ಷೋದಯ – ರಾಶಿ ಭಾವದಲ್ಲಿದ್ದರೆ ರಾತ್ರಿಗತ ಜನನವಾಗಿದ್ದರೆ ಪೃಷ್ಠೋದಯ ರಾಶಿಯಿದ್ದರೆ ಸಂಧ್ಯಾಗತ ಜನನ ಕಾಲವಾಗಿ ಉಭಯೋದಯ – ರಾಶಿಯಾಗಿದ್ದರೆ ಅಲ್ಲಿ – ಮೊದಲು ಬಂದ ಭಾವ ಬಲಕ್ಕೆ 1 ಚರಣ (15') ಸೇರಿಸಿರಿ.

ಆಗ ಭಾವ ಬಲ ಸ್ಪಷ್ಟವಾಗುವುದು. ಭಾವ ಗ್ರಹ ಬಲ ತೆಗೆಯದೆ – ಸರಿಯಾಗಿ ಹೇಳಲಾಗದು.

## ಸುಬಲತ್ವಾದಿ ಪ್ರತಿಪಾದನ

ಅಂಗಾಗ್ನಯೋಂಗರಾಮಶ್ಚ ಖರಸಾಃ ಕರಸಿಂಧವಃ ।
ನವಾಗ್ನಯಃ ಕ್ಷುರಾಃ ಶೂನ್ಯಗ್ನಯೋ ದಿಗುಣಿತಃ ಕ್ರಮಾತ್ ॥೩೨॥

ಚೆದ್ದಲೈಕ್ಯಮಿನಾದೀನಾಂ ಜ್ಞೇಯಃ ಸುಬಲನಸ್ತದಾ ।
ತತೋಪಿಚ ಬಲಾಧಿಕ್ಯೆ ಪೂರ್ಣತೋ ಬಲನೋಮತಾಃ ॥೩೩॥

ರವ್ಯಾದಿ ಸಪ್ತಗ್ರಹಗಳ ಷಡ್‌ಬಲೈಕ್ಯವು ಕ್ರಮಶಃ 390, 360, 300, 420, 390, 330 ಹಾಗೂ 300 (ರಾಶ್ಯಾದಿ ಸಪ್ತಗ್ರಹ ಸಬಲ ಎಂದು ಕರೆಸಿಕೊಳ್ಳುತ್ತದೆ. ಮೇಲಿನ ಸಂಖ್ಯೆಗಿಂತ ಬಲ ಹೆಚ್ಚಾದರೆ ಪೂರ್ಣಬಲ. ಕಡಿಮೆಯಾದರ ಮಧ್ಯ, ಅತಿ ಕಡಿಮೆ ಇದ್ದರೆ ಅಲ್ಪ ಬಲ ಎಂದು ಪರಿಗಣಿಸುವುದು. ಈ ಬಲಾಬಲದ ಮೇಲೆಯೇ ಫಲ ನಿರ್ದೇಶಿಸಬೇಕು.

## ಸ್ಥಾನಾದಿ ಬಲಗಳಲ್ಲಿ ಸಬಲತ್ವ ಸಂಖ್ಯಾ

ಗುರುಸೌಮ್ಯ ರವಿಣಾಂ ತು ಭೂತಷಟ್‌ಕೇಂದ್ರವೊದ್ವಿಜ ।
ಪಂಚಗ್ನಯಃ ಸ್ವಭೂತಾನಿ ಕರಭೂಮಿ ಸುಧಾಕರಾಃ ॥೩೪॥

ಖಗ್ನಯಶ್ಚ ಕ್ರಮಾತ್ ಸ್ಥಾನದಿಕ್ ಚೇಷ್ಟಾಸಮಯಾಯನೇ ।
ಸಿತೇಂದ್ವೊ ಸ್ತ್ರ್ಯಗ್ನಿ ಚಂದ್ರಾಶ್ಚ ಖೇಶವಃ ಖಗ್ನಯಶತಮ್ ॥೩೫॥

ಖಾಬ್ದಯೋ ಲಿಪ್ತಿಕಾ ಭೌಮ ಮಂದಯೋಃ ಷಡ್‌ನವಕ್ರಮಾತ್ ।
ತ್ರಿಂಶತ್ ಖವೇದಾಃ ಸಪ್ತಾಂಗಾ ನಖಾಶ್ಚೈತ್ಥಮದೀರಿತಾಃ ॥೩೬॥

ಗುರು, ಬುಧ, ರವಿಗಳ ಸ್ಥಾನಬಲ, ದಿಗ್‌ಬಲ, ಕಾಲಬಲ, ಚೇಷ್ಟಾಬಲ ಹಾಗೂ ಅಯನ ಬಲಗಳೂ ಬಲಾಂಕ ಕ್ರಮಶಃ 165', 35', 50', 112', 30' ಇವು ಇದ್ದರೆ ಹಾಗೂ ಶುಕ್ರ, ಚಂದ್ರರ 133', 50', 30', 100', 40' ಅದರಂತೆ ಮಂಗಳ, ಶನಿಯರ ಬಲ 96ಡಿಗ್ರಿ–30', 40ಡಿಗ್ರಿ–67 20' ಇದ್ದರೆ ಸ್ಥಾನಾದಿ ಬಲದಲ್ಲಿಯೂ ಸಬಲಗಳಾಗಿರುತ್ತವೆ.

## ಸಾಮಾನ್ಯ ಬಲ ಚಕ್ರ

| ಗ್ರಹ–7 ಬಲ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಸುಯಿಕ್ತಾರಕ |
|---|---|---|---|---|---|---|---|---|
| ಆರು ಬಲ | 390' | 360' | 300 | 430' | 390' | 330' | 300' | ,, |
| ಸ್ಥಾನ ಬಲ | 165' | 136' | 9'–6 | 165' | 165' | 113' | 9'-6 | ,, |
| ದಿಗ್ ಬಲ | 35' | 50' | 30' | 35' | 35' | 50' | 30' | ,, |
| ಚೇಷ್ಟಾ ಬಲ | 50' | 30' | 40' | 50' | 50' | 30' | 40' | ,, |
| ಕಾಲ ಬಲ | 112' | 100' | 60' | 112' | 112' | 100' | 67' | ,, |
| ಅಯನ ಬಲ | 60' | 40' | 20' | 30' | 30' | 40' | 20' | ,, |

## ಭಾವ ಫಲಪ್ರದ ಗ್ರಹ

ಏವಂಕೃತೆ ಬಲೈಕ್ಯೆ ತು ಫಲಂ ವಾಚ್ಯಂ ಸದಾ ಬುಧೈಃ ।
ಭಾವಸ್ಥಾನ ಗ್ರಹೈಃ ಪ್ರೊಕ್ತಯೋಗೆಯೋ ಯೋಗಹೇತವಃ ॥೩೭॥

ಬಲಿತೇಷುಚ ಯಃ ಕರ್ತಾಸ ಏವಾಸ್ಯ ಫಲಪ್ರದಃ ।
ಯೋಗೇಷ್ಟಾಪ್ತೆಷು ಬಹು ಷುಃ ನ್ಯಾಯಾ ಏವಂ ಪ್ರಕೀರ್ತಿತಃ ॥೩೮॥

ಈ ರೀತಿ ಗ್ರಹಗಳ ಬಲಾಬಲ ತಿಳಿದ ಮೇಲೆ ಫಲಾದೇಶ ಮಾಡುವುದು ಭಾಗ ಹಾಗೂ ಗ್ರಹಸ್ಥಿತಿಗಳಿಂದ ಯಾವ ಯೋಗ ಹೇಳಿದೆಯೋ ಅದರಲ್ಲಿ ಯೋಗಕಾರಕ ಗ್ರಹಗಳು ಬಹಳ ಬಲಿಯಾಗಿರುತ್ತವೆ. ಅವಕ್ಕೆ ಕರ್ತಾ(ಯೋಗಕಾರಕ)ವೆಂದು ಹೆಸರು. ಅದೇ ಗ್ರಹ ತನ್ನ ಗುಣ ಸ್ವಭಾವಾನುಸಾರ ಫಲ ಪ್ರದವಾಗುತ್ತದೆ. ಅನೇಕ ಗ್ರಹ ಒಂದೇ ಭಾವದ ಬಹುವಿಧ ಯೋಗ ಮಾಡುವವುಗಳಾಗಿರುತ್ತವೆ – ಅದೇ ನ್ಯಾಯ ಸಮ್ಮತ ಫಲ. ಅನೇಕ ಗ್ರಹಗಳಲ್ಲಿ ಕೆಲವು ಭಾಗ್ಯವು ದ್ವಿಕಾರಕ ಹಾಗೂ ಕೆಲವು ಭಾಗ್ಯಕ್ಷಯಕಾರಕ ಗ್ರಹಗಳದ್ದು – ಎರಡೂ ಗ್ರಹಗಳ ಬಲೈಕ್ಯ ಮಾಡುವುದು ಅಧಿಕ ಬಲೈಕ್ಯ ಬಲಗ್ರಹ – ತನ್ನ ಪೂರ್ಣ ಫಲ ಕೊಡುತ್ತಿದೆ – ಆ ರೀತಿಯಾಗಿಯೇ ಫಲಾದೇಶ ಮಾಡುವುದು.

## ಫಲಾದೇಶ ಅಧಿಕಾರಿ

ಗಣಿತೇಷು ಪ್ರವೀಣೋಥ ಶಬ್ದಶಾಸ್ತ್ರೆ ಕೃತಶ್ರಮಃ ।
ನ್ಯಾಯವದ್ ಬುದ್ಧಿಮಾನ್ ಹೋರಾ ಸ್ಕಂಧಶ್ರವಣ ಸಮ್ಮತಃ ॥೩೯॥

ಊಹಾಪೋಹ – ಪಟುರ್ದೇಶಕಾಲವತ್ ಸಂಯತೇಂದ್ರಿಯಃ ।
ಏವಂ ಭೂತಸ್ತು ದೈವಜ್ಞೋ ಸಂಶಯಂ ಸತ್ಯಮಾದಿಶೇತ್ ॥೪೦॥

ಜ್ಯೋತಿಷಿ – ಗಣಿತ ಶಾಸ್ತ್ರ ಪ್ರವೀಣ, ವ್ಯಾಕರಣದಲ್ಲಿ ಶ್ರಮಶೀಲ – ನ್ಯಾಯದಲ್ಲಿ ತಿಳುವಳಿಕೆ, ಬುದ್ಧಿವಂತ, ಜ್ಯೋತಿಷ್ಯದ ಹೋರಾಸ್ಕಂದದ ಶ್ರವಣ ಮನನದಲ್ಲಿ ನಿಪುಣತಾ ಊಹಾಪೋಹ (ಸದ್ ಅನುಮಾನ) ಪಟು ದೇಶಕಾಲವೆತ್ತಾ ಹಾಗೂ ಜಿತೇಂದ್ರಿಯನೇ ಸತ್ಯ ಫಲಾದೇಶ ಮಾಡಲು ಶಕ್ಯ.

ವಿಶೇಷ ಸೂಚನೆಯಾಗಿ – ಗ್ರಹಗಳ ಬಲಾ ಬಲವನ್ನು ಸಾವಧಾನದಿಂದ ತೆಗೆದು ಫಲ ನಿರ್ದೇಶಿಸ ಬೇಕೇ ವಿನಃ ಒಂದೇ ಗ್ರಹದಿಂದ ಅಲ್ಲ – ಭಾವಗ್ರಹ, ರಾಶಿಗಳ ಬಲಾಬಲ ಹಾಗೂ ಸ್ಥಾನಬಲವನ್ನು ವಿಶೇಷ ಎಲ್ಲ ರೀತಿಯಿಂದ ಪರೀಕ್ಷಿಸಿ ಹೇಳುವುದು. ಇದೊಂದು ಚಿಕಿತ್ಸಕ ಶಾಸ್ತ್ರವಿದ್ದಂತೆ.

ಇತಿ ಬೃಹತ್ ಪರಾಶರ ಹೋರಾ ಶಾಸ್ತ್ರೇ ಸ್ವಷ್ಟ ಬಲ ನಿರ್ಣಯಾಧ್ಯಾಯಃ ಸಮಾಪ್ತಃ

( ೨೯ನೇ ಅಧ್ಯಾಯ )

# ಅಥೆಷ್ಟ—ಕಷ್ಟ ವಿವೇಚನಾಧ್ಯಾಯಃ

**ಪರಾಶರ ಉವಾಚ:**

ಶೃಣು ಮೈತ್ರೇಯ । ತೆವಾಚ್ಯಿ ಖೇಟಾನಾಮಿಷ್ಟ ಕಷ್ಟಕವ್ ।
ದಶಾಶುಭಾ ಶುಭ ಫಲಂ ಯದ್‌ವಶಾತ್ ಪ್ರದಿಶಂತಿತೆ ॥೧॥

**ಪರಾಶರರು ಹೇಳಿದರು—**

ಹೇ ಮೈತ್ರೇಯ – ಈಗ ಗ್ರಹಗಳ ಇಷ್ಟ – ಕಷ್ಟದ ವರ್ಣನೆ ಮಾಡುತ್ತೇನೆ – ಗ್ರಹ ದಶಾ ಶುಭಾಶುಭ ಫಲ – ಈ ರೀತಿಯಾಗಿಯೇ ನೋಡುವುದು.

## ಉಚ್ಚರಶ್ಮಿಯ ಆನಯನ

ನೀಚೋನಂ ತು ಗ್ರಹಂ ಮಾರ್ಧಾದಿಕ್ಯೇ ಚಕ್ರಾದ್ ವಿಶೋಧಯೇತ್।
ಉಚ್ಚರಶ್ಮಿರ್ಭವೇದ್ರಾಶಿಃ ಸೈಕೋ ದ್ವಿಘ್ನಾಂಶ ಸಂಯುತಃ ॥೨॥

ಉಚ್ಚ, ನೀಚ ರಶ್ಮಿ ಪೂರ್ವ, ರಶ್ಮಿ ಅನುನಯನಕ್ಕಾಗಿ ಪ್ರತಿಗ್ರಹದ ಅದರ ನೀಚ ರಾಶ್ಯಾದಿಗಳನ್ನು ಕಳೆದು – ಶೇಷರಾಶಿಯಲ್ಲಿ ಒಂದು ಸೇರಿಸಿ ಅಂಶಾದಿಗಳನ್ನು ದ್ವಿಗುಣಿತ ಮಾಡಿದರೆ ಉಚ್ಚರಶ್ಮಿಯಾಗುತ್ತದೆ. ನಿಟೊಚ್ಚ ಗ್ರಹ 6 ರಾಶಿಗಿಂತ ಅಧಿಕವಾದರೆ 12 ರಾಶಿಯಲ್ಲಿ ಕಳೆದು ನಂತರ – ಉಳಿದ ಕ್ರಿಯೆ ಮಾಡುವುದು.

ಉದಾ:– ಕಲ್ಪಿತ ಕುಂಡಲಿಗೆ ಈಗ ಶುಕ್ರ ದಶಾ (ರಾಶಿವತ್) ಇದೆ ಎಂದು ಪರಿಗ್ರಹಿಸಿದರೆ ಶುಕ್ರ ಸ್ಪಷ್ಟ 5 – 26 – 31 ಇದ್ದು, ಶುಕ್ರ ನೀಚ ರಾಶಿಯೂ 5 – 27 – 00 ನೀಚಾಂಶವಿದೆ. ಶುಕ್ರ ಸ್ಪಷ್ಟ – ಶುಕ್ರ ನೀಚ ಅಂದರ (5 – 26 – 31) – (5 – 27 – 00) = 11 – 29 – 31 ವಿಕಲಾ 6 ರಾಶಿಗೂ ಅಧಿಕವಾದ್ದರಿಂದ 12 ರಾಶಿಯಲ್ಲಿ ಕಳೆಯುವುದು. (12 – 0 – 0) – (11 – 29 – 31) = ಕೇವಲ $20^0$ ($0^0$ ರಾಶಿ 2'ಅಂಶ – 29) ಕಲಾ ಇದಕ್ಕೆ 1 ಅಂಶ ಸೇರಿಸಿದೆ. 1 – 0 – 29 ದ್ವಿಗುಣಿತ (ಅಂಶಾದಿ ಮಾತ್ರ) 1 – 0 – 48 ಕಲಾ ಉಚ್ಚರಶ್ಮಿಯಾಯಿತು.

## ಚೇಷ್ಟಾ ರಶ್ಮಿ

ಭೌಮಾದೀನಾಂ ಪುರೋಕ್ತಂ ಯ ಚ್ಚೆಷ್ಟಾಕೇಂದ್ರಂ ದ್ವಿಜೋತ್ತಮ ।
ತತಃ ಸಂಸಾದಯೇತ್ ತೇಷಾಂ ರಶ್ಮಿಮುಕ್ತೆಚ್ಚರಶ್ಮಿವತ್ ॥೩॥

ಸತ್ರಭಿಃ ಸಾಯನಾರ್ಕೋತ ವ್ಯರ್ಕೆಂದುಶ್ಚ ಯಥಾಕ್ರಮಾವ್ ।
ಚೇಷ್ಟಾಕೇಂದ್ರಂ ರವೀಂದೋಸ್ತ್ರಚ್ಚೊಧ್ವ್ಯ ಮಥಗಾಧಿಕೋರ್ಕತಃ ॥೪॥

ಹೇ ವಿಪ್ರನೆ, ಭೌಮಾದಿ ಐದು ಗ್ರಹಗಳ ಚೇಷ್ಟಾಕೇಂದ್ರವನ್ನು ಈ ಮೊದಲೇ ಹೇಳಿದೆ. ಅದರ ಮುಖಾಂತರ ಪೂರ್ವೋಕ್ತ ಉಚ್ಚರಾಶಿ ರಶ್ಮಿಯಂತೆ ಉಚ್ಚರಶ್ಮಿ ಸಾಧನ ಮಾಡುವುದು.

ಸಾಯನ ಸೂರ್ಯನಲ್ಲಿ 3 ರಾಶಿ ಸೇರಿಸಿ – ಸೂರ್ಯ ರಾಶಿಯಲ್ಲಿ ಚಂದ್ರ ರಾಶಿ ಕಳೆದು – ಚಂದ್ರನ ಚೇಷ್ಟಾರಶ್ಮಿ ತೆಗೆಯುವರು. ಇದು ಚೇಷ್ಟಾಕೇಂದ್ರ ವಾಗುವರು. ಈ ಚೇಷ್ಟಾ ಕೇಂದ್ರ 6 ರಾಶಿಗಿಂತ ಅಧಿಕವಾಗಿದ್ದರೆ 12 ರಾಶಿಯಲ್ಲಿ ಕಳೆಯುವರು. ಪುನಃ ಉಚ್ಚರಶ್ಮಿ ಸಾಧನದಂತೆ – ತೆಗೆದು ರಾಶಿ ಸ್ಥಾನದಲ್ಲಿ ಬಿಂದು ಸೇರಿಸಿ ಅಂಶಾದಿಗಳನ್ನು ದ್ವಿಗುಣಿತ ಮಾಡಲು ಚೇಷ್ಟಾರಶ್ಮಿಯಾಗುತ್ತದೆ.

### ಶುಭಾಶುಭ ರಶ್ಮಿ ನಿರ್ಣಯ

ಉಚ್ಚರಶ್ಮಿವದಾನೀಯ ಚೇಷ್ಟಾರಶ್ಮಿಂ ದ್ವಯೋರ್ಯುತೇಃ ।
ದಲಂ ತು ಶುಭರಶ್ಮಿಃ ಸ್ಯಾದಷ್ಟಭ್ಯೋ ವರ್ಜಿತೋ ಶುಭಃ ॥೫॥

ಆಯಾ ಗ್ರಹಗಳ ಉಚ್ಚರಶ್ಮಿ ಚೇಷ್ಟಾರಶ್ಮಿಗಳ ಯೋಗಾರ್ಧ (ಕೂಡಿಸಿ ಅರ್ಧ ಮಾಡುವರು) ಶುಭ ರಶ್ಮಿಯಾಗುತ್ತದೆ. ಕಳೆದರೆ ಶೇಷ ಅಶುಭ ರಶ್ಮಿಯಾಗುತ್ತದೆ. 8ರಲ್ಲಿ ಕಳೆದ ಅಶುಭ.

ವ್ಯೊಕೌ ಚೇಷ್ಟಾ ರಶ್ಮಿ ತು ಸಂಗುಣ್ಯ ದಶಭಿಸ್ತಯೋಃ
ಯೋಗಾರ್ಧ ಮಿಷ್ಟಮುದಿತಂ ಕಷ್ಟಮಿಷ್ಟೊನಖಾಂಗಕವಮ್ ॥೬॥

### ಇಷ್ಟ ಕಷ್ಟಾನಯನ

ಚೇಷ್ಟಾರಶ್ಮಿ, ಉಚ್ಚ ರಶ್ಮಿ ಎರಡರಲ್ಲಿಯೂ 1, 1 ಕಳೆದು (ಒಂದೊಂದು) ಪ್ರಥಕ್ (10)ರಿಂದ ಗುಣಿಸಿ ಯೋಗಾರ್ಧ ಇಷ್ಟ ಶುಭವಾದರೆ ರಶ್ಮಿಯಾಗುತ್ತದೆ. ಇಲ್ಲಿ ಇಷ್ಟವನ್ನು 60ರಲ್ಲಿ ಕಳೆದರೆ ಶೇಷ ಕಷ್ಟ ರಶ್ಮಿಯಾಗುತ್ತದೆ.

### ಸ್ಥಾನವಶ ಸಪ್ತವರ್ಗಜ ಶುಭಾಶುಭ ನಯನ

ಸ್ವೋಚ್ಚೆ ಮೂಲ ತ್ರಿಕೋಣೆ ಚ ಸ್ವಕ್ಷೇಧಿ ಸಹೃದಿ ದ್ವಿಜ ।
ಮಿತ್ರಕ್ಷೇತ್ರೆ ಚ ಸಮಕ್ಷೆ ಚ ಶತ್ರುಭೆ ಚಾತಿಶತ್ರುಭೆ ॥೭॥

ನೀಚೆ ಚ ಷಷ್ಟಿ – ಪಂಚಾಬ್ಧಿ ಸ್ವಾಗ್ನ್ಯಾಕೃತಿ ಶರೆಂದವಃ ।
ನಾಗಾ ವೇದಾಃ ಕರೌ ಶೂನ್ಯಂ ಶುಭಮೇತತ್ ಫಲಂ ಕ್ರಮಾತ್ ॥೮॥

ವಿರ್ಜಿತಂ ಷಷ್ಟಿತಶ್ಚೈತದ ವಶಿಷ್ಟಮಾಸದ್ ಗೃಹೆ ।
ತದರ್ಧ ತು ಫಲಂ ಪ್ರೋಕ್ತಮಾನ್ಯ ವರ್ಗೆ ಶುಭಾಶುಭಮ್ ॥೯॥

ಗ್ರಹಗಳು ತಮ್ಮ ಉಚ್ಚ ಮೂಲ ತ್ರಿಕೋನ ಸ್ವಗ್ರಹ ಅಧಿಮಿತ್ರ ಗ್ರಹ, ಮಿತ್ರಗ್ರಹ, ಸಮಗ್ರಹ, ಶತ್ರುಗ್ರಹ, ಅಧಿಶತ್ರು ಗ್ರಹ ಸ್ವನೀಚ ಈ ಭಾವಗಳಲ್ಲಿ ಕ್ರಮಶಃ 60', 45', 30', 22', 15', 8', 4', 2', 20' ಶುಭ ಗ್ರಹಾಂಶವಿರುತ್ತದೆ. ಈ ಅಂಶಗಳನ್ನು 60ರಲ್ಲಿ ಕಳೆಯಲಾಗಿ – ಉಳಿದ ಶೇಷ ಅಶುಭ ಫಲವೆಂದು ತಿಳಿಯುವುದು.

ಇದೇ ರೀತಿ ಹೋರಾದಿ ಷಡ್ ವರ್ಗದಲ್ಲಿ ಬಂದು ಅಂಶಗಳ ಅರ್ಧ ಭಾಗ ಶುಭಾಶುಭವೆಂದು ತಿಳಿಯುವುದು. ಹೋರಾದಿಗಳಲ್ಲಿ ಪ್ರಾಪ್ತಿಯ ಅಧಿಕ – ರವಿ ನೀಚನಾಗಿರುವುದರಿಂದ 2' ಶುಭ, 58' ಅಶುಭವಿದ್ದು ಹೋರಾದಲ್ಲಿ ಮಿತ್ರನ ಮನೆಯಲ್ಲಿ 15' – ಇದರ ಅರ್ಧ 7' – 30" ಶುಭ ಹೋರಾ ಲಗ್ನ ಸೇರಿ 9' – 30' ಶುಭ ಈ ರೀತಿ ಷಡ್‌ವರ್ಗ ಬಲ ತೆಗೆದು ಶುಭಾಶುಭ ಹೇಳುವುದು.

### ಉಚ್ಚಾದಿಯಲ್ಲಿ ಶುಭಹಾ ಅಶುಭ

ಪಂಚ ಸ್ವಿಷ್ಟಫಲಂ ಷಷ್ಠೆ ಸಮೇ ತಸ್ಮಾತ್‌ಪರಂ ತ್ರಿಷು ।
ಅಶುಭಂ ತು ಫಲಂ ಜ್ಞೇಯಮಿತಿ ವಿಜ್ಞೈ ರುದಾಹೃತಮ್ ॥೧೦॥

ಉಚಾದಿ (ಉಚ್ಚ ಮೂಲ ತ್ರಿಕೋನ ಸ್ವಗ್ರಹ ಅಧಿಮಿತ್ರ ಗ್ರಹ ಹಾಗೂ ಮಿತ್ರಗ್ರಹ ಸ್ಥಾನಗಳಲ್ಲಿ ಯಾವುದೇ ಗ್ರಹ (ತಾರಕ – ಮಾರಕ) ಶುಭ ಷಷ್ಠ ಸ್ಥಾನದಲ್ಲಿ ಸಮ ಹಾಗೂ ಅನ್ಯಶತ್ರು, ಅಧಿಶತ್ರು ನೀಚ ಈ ರಾಶಿಗಳಲ್ಲಿ ಎಲ್ಲಿಯೇ ಇದ್ದರೂ ಅಶುಭ.

### ದಿಗ್ ಬಲಾದಯಲ್ಲಿ ಶುಭಾಶುಭ

ದಿಗ್‌ಬಲಂ ದಿಕ್‌ಫಲಂ ತಸ್ಯ ತಥಾ ದಿನಫಲಂ ಭವೇತ್ ।
ತಯೋಃ ಫಲಂ ಶುಭಂ ಪ್ರೋಕ್ತಮೂನಿತಂ ಷಷ್ಟಿ ತೋ ಶುಭಮ್ ॥೧೧॥

ಶುಭಾಧಿಕ್ಯೆ ಫಲಂ ಸತ್ಯಾದಿತರಚ್ಚ ತತೋನ್ಯಥಾ ।
ದಶಾಫಲಂ ತಥಾ ಭಾವಫಲಂ ಗ್ರಹಗಣಸ್ಯ ವೈ ॥೧೨॥

ದಿಗ್ ಬಲವೇ ಆ ದಿಕ್ಕಿನ ಶುಭಾಶುಭ ಫಲ, ಅದರಂತೆ ದಿನ ಬಲ ತಿಳಿಯುವುದು – ದಿಗ್ ಹಾಗೂ ದಿನ ಬಲವನ್ನು 60' ಕಲೆಯಲ್ಲಿ ಕಳೆಯಲಾಗಿ ಆ ದಿಕ್ಕಿನ ಶುಭಾಶುಭ ತಿಳಿಯುವುದು. ಕಳೆದ ಶೇಷ ಅಶುಭ, ಶುಭದ ಅಧಿಕತೆಯಿಂದ ಶುಭ ಪರಿಗ್ರಹಿಸುವುದು – ಯಾವ ಗ್ರಹ ದಿಗ್ ಬಲದಲ್ಲಿ ಅತೀ ಬಲಿಷ್ಠವೋ ಆ ದಿಕ್ಕಿನ ಶುಭ ಪ್ರದ – ದಿಗ್ ಬಲದ ಅಧಿಕತೆಯಲ್ಲಿ ದಶಾಫಲವು ಶುಭಪ್ರದವಾಗುವುದು. ಅಶುಭದ ಅಧಿಕತೆಯಿಂದ ಅಶುಭವೇ ಹೆಚ್ಚು.

## ಶುಭಾಶುಭ ಸ್ಪಷ್ಟತೆ

ಬಲೈಃ ಷಡ್‌ಭಸ್ತು ಸಂಗುಣ್ಯ ಹರೆತದ್ ಬಲಯೋಗತಃ ।
ತತ್ರದೂ ಬಲ ಫಲಾನಿ ಸ್ಯುರಶುಭಾನಿ – ಶುಭಾನಿ ಚ ॥೧೩॥

ಶುಭ ಪಾಪಫಲಭ್ಯಾಂ ಚ ದೃಷ್ಟಿಂ ಹನ್ಯಾದ್ ಬಲಂ ತದಾ ।
ಶುಭ ಪಾಪೋತ್ಥಿತೆ ದೃಷ್ಟಿ ಬಲೆಸ್ಯಾತಾಂ ತಥೈವ ತೆ ॥೧೪॥

ಈ ಮೊದಲು ಹೇಳಿದ ಫಲಗಳನ್ನೆಲ್ಲ ದಿಗ್ × ದಿನ ಈ ರೀತಿ ಗುಣಿಸಿ ಷಡ್‌ಬಲ ಯೋಗ(ಕೂಡಿಸಿದ)ದಿಂದ ಭಾಗಿಸಿ, ಭಾಗಲಬ್ದವು ಶುಭ, ಅಶುಭ ಪರಿಗಣಿಸುವುದು – ತಮ್ಮ ತಮ್ಮ ಶುಭಾಶುಭ ಫಲದ ಜೊತೆಗೆ ದೃಷ್ಟಿ ಹಾಗೂ ತಮ್ಮ ತಮ್ಮ ಬಲ ಗುಣಿಸಿ ಶುಭಾಶುಭ ದೃಷ್ಟಿಯನ್ನು ಪರಿಗಣಿಸುವದು.

## ಗ್ರಹಭಾವಫಲ ವಿಶೇಷತಾ

ಭಾವಾನಾಂ ಚ ಫಲೆ ಪ್ರೋಕ್ತೆ ಪತಿನಾಂ ಚ ಫಲೆ ಉಭೆ ।
ರಾಶಿಃ ಸದ್‌ಗ್ರಹಯುಕ್ತಶ್ಚೆದ್ ಭಾವ ಸಾಧನಜಂ ಫಲಮ್ ॥೧೫॥

ಶುಭೆ ಯತ್ಸ್ಯಾದ್ ವಿಯತ್ರ್ಯತ್ರತ್ವಶುಭೆ ತತ್ಸ್ಫುಟಂ ಭವೇತ್ ।
ಪಾಪಶ್ಚೆದನ್ಯಥಾ ಚೈವಂ ಬಲೆ ದೃಷ್ಟ್ಯದ್ಯಾಂ ದ್ವಿಜೋತ್ತಮ ॥೧೬॥

ತುಂಗಾದಿಸ್ತೆ ಫಲಂ ಯುತ್ಸ್ಯಾನ್ನಿಚರಾಸ್ಥೆ ಗೃಹೆನ್ಯಥಾ ।
ಇತ್ಥಂ ವಿಜ್ಞಾಯ ವಕ್ತವ್ಯಂ ಶುಭಾಶುಭ ಫಲಂ ಬುಧ್ಯೈಃ ॥೧೭॥

ಏವಂ ರೀತ್ಯಾಷ್ಟವರ್ಗೇಪಿ ಫಲಂ ಜ್ಞೇಯಂ ಮನಿಷಿಭಿಃ ।
ಸ್ಥಾನ – ಸಂಕಲನಂ ಕಾರ್ಯ ಕರಣೆ ತು ತದನ್ಯಥಾ ॥೧೮॥

ರಾಶಿದ್ವಿಯ ಗತೆ ಭಾವೆ ತದ್ರಾಸ್ಯಾಧಿ ಪತೇಃ ಕ್ರಿಯಾ ।
ಸ್ಥಾನಾಧಿಕೇನ ಭಾವೇನ ಭಾವಲಾಭಃ ಪ್ರಕೀರ್ತತಃ ॥೧೯॥

**ತತ್ಸಮಾನೆ ಚ ತದ್ ಭಾವೆ ತದಾನಿ ಸ್ಥಾನದಾನ್ ಗ್ರಹಾನ್ ।**
**ಸಂಯೋಜ್ಯ ಸ್ಥಾನಸಂಖ್ಯಾಯಾ ದಲಮೇತತ್ ಫಲಂ ಭವೇತ್ ॥೨೦॥**

**ಶುಭಾಶುಭಫಲಂ ಭೋದ್ಯಮೇವಂ ಸಗ್ರಹಭಾವಜವಮ್ ।**

ಈಗಾಗಲೇ ಭಾವ ಭಾವಾಧಿ ಪತಿಯ ಶುಭಾಶುಭ ಫಲ ಹೇಳಿದ್ದೇನೆ – ಎರಡರ ಫಲಯೋಗ ವಾಸ್ತವ ಫಲವಾಗುತ್ತದೆ (ಕೇವಲ ಶುಭ ಅಥವಾ ಅಶುಭ ದಲ್ಲಿ) ಭಾವ ಒಂದು ವೇಳೆ ಶುಭಗ್ರಹ ಯುಕ್ತವಾಗಿದ್ದರೆ ಭಾವಜ ಫಲವನ್ನು ಶುಭ ಫಲದಲ್ಲಿ ಜೋಡಿಸುವುದು. ಅಶುಭ ಫಲದಲ್ಲಿ ಕಳೆದರೆ ವಾಸ್ತವ ಶುಭಾಶುಭ ಫಲ ದೊರೆಯುತ್ತದೆ. ಒಂದು ವೇಳೆ ಭಾಗ ಪಾಪಗ್ರಹಯುಕ್ತವಾಗಿದ್ದರೆ – ಭಾವಫಲ ವನ್ನು ಅಶುಭ ಫಲದಲ್ಲಿ ಕೂಡಿಸಿದಾಗ – ಶುಭ ಫಲದಲ್ಲಿ ಕಳೆದಾಗ ವಾಸ್ತವ ಫಲ ಸಿಗುತ್ತದೆ. ಇದೇ ಪ್ರಕಾರ ದೃಷ್ಟಿ ಬಲವನ್ನು ಮಾಡುವುದು ಗ್ರಹ ಉಚ್ಚಾದಿ (ಉಚ್ಚ ಸ್ವಗ್ರಹ ಮೂಲ ತ್ರಿಕೋಣ ಅಧಿಮಿತ್ರಗ್ರಹ, ಮಿತ್ರ ಗ್ರಹ) ಸ್ಥಾನಗತವಾಗಿ ದ್ದರೆ ಆ ಗತ ಫಲ ಶುಭ ಫಲದಲ್ಲಿ ಸೇರಿಸುವುದು. ಅಶುಭ ಫಲದಲ್ಲಿ ಕಳೆಯುವುದು – ಇದೇ ರೀತಿ ಅಷ್ಟವರ್ಗದಲ್ಲಿಯೂ ಫಲಾಫಲದಲ್ಲಿ ಶುಭಾಶುಭ ನೋಡಿಯೇ ಹೇಳುವುದು – ಅಷ್ಟಕ ವರ್ಗದಲ್ಲಿ ಅಧಿಕ ರೇಖೆ ಹೊಂದಿದ್ದರೆ ವೃದ್ಧಿಯನ್ನು – ಗ್ರಹ ಸಮಾನ ಭಾವವಿದ್ದರೆ – ಗ್ರಹ ಭಾವ ಯೋಗದ ಅರ್ಧ ಫಲದ ಸಮಾನ ಫಲ ದೊರೆಯುತ್ತದೆ. ಈ ರೀತಿಯಾಗಿಯೇ ಗ್ರಹ ಹಾಗೂ ಭಾವ ಫಲವನ್ನು ನೋಡುವುದು.

ಇಲ್ಲಿ ವಿಮರ್ಶೆಯ ಮುಖ್ಯ ವಿಷಯ ಮೇಲು ನೋಟಕ್ಕೆ ಕಾಣುವ ಶುಭಾಶುಭ ಫಲ ತ್ವರಿತದಲ್ಲಿ ಹೇಳುವುದನ್ನು ಜ್ಯೋತಿಷಿಗಳು ಇನ್ನೊಮ್ಮೆ ಪರಾಮರ್ಶಿಸ ಬೇಕಾಗಿದೆ. ಕೂಲಂಕಶವಾಗಿ – ಸಾವಧಾನದಿಂದ ಅಭ್ಯಸಿಸಿಯೇ ಫಲ ಹೇಳಬೇಕಾ ದುದು ಅತಿ ಅವಶ್ಯ. ಮೇಲನೋಟಕ್ಕೆ ಅಶುಭವಾದುದು. ಅಂತರಂಗದಲ್ಲಿ ಶುಭವೂ ಆಗಿರಬಹುದು – ಇದೊಂದು ಸವಾಲಿನ ಅಂಶವೇ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಇಷ್ಟ ಕಷ್ಟ
ವಿವೇಚನಾಧ್ಯಾಯಃ ಸಮಾಪ್ತಃ

## ಅಥಾ ರೂಢಪದಾಧ್ಯಾಯಃ

**ಪರಾಶರ ಉವಾಚ:**

ಅಥ ವಾಚ್ಮಿ ನಭೋಗಾನಾಂ ಭಾವಾನಾಂ ಚ ವಿಶೇಷತಃ ।
ಫಲಾದೇಶ ವಿಧಾನ್ನಾಯ ರಾಶ್ಯಾರೂಢಪದಂ ದ್ವಿಜ ॥೧॥

ಯಾವದುನ್ನಿತಭೆ ತಿಷ್ಠೆಲ್ಲಗ್ನತೋ ಲಗ್ನಪಃ ಕ್ರಮಾತ್ ।
ತಾವದುನ್ನಿತಭೆ ತಸ್ಮಾತ್ಪದಂ ಲಗ್ನಸ್ಯ ಕೀರ್ತ್ಯತೆ ॥೨॥

ಇತ್ಥಮೇವ ಪದಂ ಚಾನ್ಯ ಭಾವಾನಾಮಪಿ ಜಾಯತೆ ।
ಪ್ರಾಧಾನ್ಯತತ್ರ ವಿಜ್ಞೇಯಂ ಮುನೆ ಲಗ್ನಪದಸ್ಯವೈ ॥೩॥

**ಪರಾಶರರು ಹೇಳಿದರು–**

ಹೇ ಮೈತ್ರೇಯನೆ, ಈಗ ವಿಶೇಷ ಫಲಕ್ಕಾಗಿ ಭಾವಗಳ ರಾಶ್ಯಾರೂಢ, ಭಾವರೂಢ ಪದ ಹೇಳುತ್ತೇನೆ. ಲಗ್ನೇಶನು ಲಗ್ನದಿಂದ ಎಷ್ಟನೇ ಮನೆಯಲ್ಲಿರುವನೋ – ಆ ರಾಶಿಯಿಂದ ಅಷ್ಟು ಮುಂದಿನ ರಾಶಿಯಲ್ಲಿ ಪದವಿರುತ್ತದೆ. ಇದೇ ರೀತಿ ಅನ್ಯಗ್ರಹಗಳ ಪದಗಳನ್ನು ತಿಳಿಯುವರು – ಮೇಷ ಲಗ್ನವಿದೆ ಲಗ್ನೇಶ ಭೌಮ ಸಿಂಹದಲ್ಲಿದ್ದಾನೆಂದರೆ – ಸಿಂಹದಿಂದ ಪಂಚಮಸ್ಥಾನ (ರಾಶಿ) ಧನುವಿನಲ್ಲಿ ಅವನ ಪದವಿರುತ್ತದೆ. ಇದೇ ರೀತಿ ಯಾವುದೇ ಭಾವದಿಂದ ಆ ಭಾವಾಧಿಪತಿಯಿರುವನೋ ಅವನಿಂದ ಅಷ್ಟು ದೂರದಲ್ಲಿ ಅವನ ಪಾದವಿರುತ್ತದೆ – ಇದರಲ್ಲಿ ಪರೋಚ್ಚ ಲಗ್ನಪಾದ ಪ್ರಮುಖವಾಗಿರುತ್ತದೆ. ಸಾಧಾರಣತಃ ಲಗ್ನಗ್ರಹ ಪದವನ್ನೇ ವಿಶೇಷ ನೋಡುತ್ತಾರೆ.

### ಅಪವಾದಗಳು

ಸ್ವಸ್ಥಾನಸ್ಯ ಪದತ್ವೆತು ದಶಮಂ ಪದಮಿಷ್ಯತೆ ।
ಸಪ್ತಮಸ್ಯ ತಥಾತ್ವೆತು ತುರೀಯಂ ಪದಮೀರಿತಮ್ ॥೪॥

ತುರಿಯಸ್ಥೆಧಿಪೆ ಪ್ರೋಕ್ತಂ ತುರ್ಯಮೇವ ಯಥಾಪದಮ್ ।
ಸಪ್ತಮಸ್ಥೆಧಿಪೆ ಚೈವಂ ದಶಮಂ ಪದಮಿಕ್ಷಿತಮ್ ॥೫॥

ಸ್ವಸ್ಥಾನದಲ್ಲಿ ಪದ ಬಂದರೆ – ಪದವನ್ನು ದಶಮದಲ್ಲಿ ಎಂದು ಪರಿಗ್ರಹಿಸು

ವುದು. ಇದೇ ರೀತಿ ಗ್ರಹಪಾದ ಸಪ್ತಮದಲ್ಲಿ ಬಂದರೆ ಚತುರ್ಥದಲ್ಲಿ ಪಾದವೆಂದು ಪರಿಗ್ರಹಿಸುವುದು ಅರ್ಥಾತ್ ಸಪ್ತಮಸ್ಥಾನ ಹಾಗೂ ಸಪ್ತಮಕ್ಕೆ ಪಾದವಿರುವುದಿಲ್ಲ. ಒಂದು ವೇಳೆ ಲಗ್ನೇಶ ಚತುರ್ಥದಲ್ಲಿದ್ದು ಅವನ ಪಾದ ಚತುರ್ಥದಿಂದ ಚತುರ್ಥ ಅಂದರೆ ಸಪ್ತಮದಲ್ಲಾದರೂ ಅದನ್ನು ಪರಿಗ್ರಹಿಸಿದೆ. ಆ ಗ್ರಹದ ಪಾದವೂ ಚತುರ್ಥವೆಂದೇ ಗ್ರಹಿಸುವುದು – ಅದರಂತೆ ಲಗ್ನಾಧಿಪ ಸಪ್ತಮದಲ್ಲಿದ್ದರೆ ಅವನ ಪಾದ ಲಗ್ನದಲ್ಲಾದರೂ ಸ್ವಸ್ಥಾನವಾಗುವುದರಿಂದ – ಅಲ್ಲಿ ಅವನ ಪಾದ ದಶಮವೆಂದು ಪರಿಗ್ರಹಿಸುವುದು.

## ಉದಾಹರಣೆ

ಈ ಮೊದಲೇ ತಿಳಿಸಿದ ಕುಂಡಲಿಯು ಕರ್ಕ ಲಗ್ನವಾಗಿದ್ದು ಲಗ್ನಾಧಿಪ ತುಲಾ ರಾಶಿಯಲ್ಲಿದ್ದು ಅವನ ಪಾದ – ಸಪ್ತಮದಲ್ಲಿ ಬರುವುದರಿಂದ ಹಾಗೇ ಗ್ರಹಿಸಿದರೆ ಗ್ರಹ ಹಾಗೂ ಪಾದ ಎರಡು ಚತುರ್ಥದಲ್ಲಿಯೇ ಪರಿಗ್ರಹಿಸುವುದು ಅದರಂತೆ ಯಾವುದೇ ಲಗ್ನದಲ್ಲಿ – ಗ್ರಹ ಸಪ್ತಮದಲ್ಲಿ (ಲಗ್ನೇಶ) ಬಂದರೆ ಅವನ ಪಾದ ಲಗ್ನವಾಗುವುದಾದರೂ ಸ್ವರಾಶಿಯಾಗುವುದರಿಂದ ಅವನ ಪಾದ ದಶಮದಲ್ಲಿ ಬರುವುದು.

### ಪಾದ ವಿವರಣೆ ಕೊಟ್ಟ ಕುಂಡಲಿಯಂತೆ

5 ಶು ಪಾ
3
ಕೆ 2 ಶನಿ ಪಾದ
6 ಶುಕ್ರ
4
7 ರ. ಚ,ಬು ಚ. ಪಾ ವಂ. ಪಾ
1 ಗು ಪಾ
8 ಪಾದ ಬುಧ ಗು ಪಾ
10 ಗು, ಮ
12 ಶನಿ ಮಂಪಾದ (ಉಪಪದ)
9 ರ ಪಾ
11

| ಶನಿ ವಹಿಸಾ ಉಪದ | ಗು. ಪಾ | ಕೆ ಶನಿಪಾದ | |
|---|---|---|---|
| | | | |
| ಗು ಮ | | | ಶು ಪಾದ |
| ರ ಪಾ | ರಾ ಬುಧ ಗು ಪಾದ | ರ ಬು ಚ ಚ ಪಾ ವಂ ಪಾದ | ಶು |

ಇಲ್ಲಿ ಗುರು, ಶನಿಗಳ ಬಲಿಷ್ಠ ರಾಶಿ ಮೀನ ಹಾಗೂ ಮಕರವೆಂದು ಪರಿಗಣಿಸಿದೆ. ಏಕೆಂದರೆ ಕೇಂದ್ರದಲ್ಲಿ ನೀಚ ಬಲಿಷ್ಟ ಕರ್ಕಕ್ಕೆ ಯೋಗಕಾರಕ ಗುರು ನವಮ ಸ್ಥಾನಾಧಿಪನಾದ್ದರಿಂದ ಭೌಮಾದಿ 5 ಗ್ರಹಗಳಿಗೆ 2 ರಾಶಿಗಳ ಸ್ವಾಮಿತ್ವ ವಿರುವುದರಿಂದ – ಎರಡು ರಾಶಿಗಳಿಂದಲ್ಲ – ಅದರಲ್ಲಿ ಬಲಿಷ್ಠ ರಾಶಿಯಿಂದ.

ಆ ರೂಢ ಪಾದ ತೆಗೆಯುವುದು – (ಸ್ವಕ್ಷೇತ್ರದಲ್ಲಿ ಮೂಲ ತ್ರಿಕೋನ ಅಥವಾ ಲಗ್ನಕ್ಕೆ ಕಾರಕ ಸ್ಥಾನದ ಮೇಲಿಂದ)

ಯತೋ ನಭೋಗತೋ ಯಾವನ್ಮಿತೆ ಭೆ ತದ್‌ಗ್ರಹಂ ಭವೇತ್ ।
ತತ್‌ಸ್ಥಾವನ್ಮಿತಂ ಭಂ ತು ಗ್ರಹಾರೂಢಂ ಬುಧಾ ವಿದುಃ ॥೬॥

ಗ್ರಹದ್ವಯ ಏತಾಮೇವಂ ಸಬಲಂ ಭವನಂ ಚ ಯತ್ ।
ಗುಣಯೇತ್ತದವದ್ಯೆವಂ ಪದಂ ಭೋದ್ಯಂ ತತೋ ಬುಧೈಃ ॥೭॥

ಗ್ರಹದಿಂದ ಎಷ್ಟು ದೂರ ಅರ್ಥಾತ್ ಗ್ರಹದ ಸ್ವಗ್ರಹ – ಅಷ್ಟ ಸಂಖ್ಯಕ ಸ್ಥಾನವನ್ನು ಗ್ರಹಗಳ ಆರೂಢ ಅಥವಾ ಪಾದವೆನ್ನುತ್ತೇವೆ. ಭೌಮಾದಿ ಐದು ಗಳಿಗೆ (ಮಂಗಳ, ಬುಧ, ಗುರು, ಶುಕ್ರ, ಶನಿ) ಎರಡು ರಾಶಿಗಳ ಆಧಿಪತ್ಯವಿದೆ – ಅದಕ್ಕಾಗಿ ಆಯಾ ಗ್ರಹಗಳ ಯಾವ ರಾಶಿ ಪ್ರಬಲವೋ (ಲಗ್ನದಂತೆ) ಆ ಸ್ವಭವನದಿಂದ ಪರಿಗಣಿಸುವುದು – ಆ ರೀತಿಯೇ ಆ ರೂಢ ತೆಗೆಯುವುದು.

## ಏಕಾದಶ ಸ್ಥಾನಫಲ

ಅಧುನಾ ಸಂಪ್ರವಕ್ಷ್ಯಾಮಿ ಕಿಂಚಿತ್ ಪದಗತಂ ಫಲಮ್ ।
ಪದಾದ್ವೇಕಾದಶೆ ಸ್ಥಾನೆ ಶುಭಗ್ರಹಯುತೆಕ್ಷಿತೆ ॥೮॥

ಲಕ್ಷ್ಮಿವಾನ್ ಜಾಯನೆ ಬಾಲೋನ್ಯಾಯೋಪರ್ಜಿತವಿತ್ತಕಃ ।
ಪಾಪಕ್ಷಿತಯುತೆ ತತ್ರ ಭವೆದನ್ಯಾ ಯತೋರ್ಥವಾನ್ ॥೯॥

ಪದಾಶ್ರಿತಿ ಫಲ ಹೇಳುತ್ತೇನೆ ಕೇಳು – ಪದದಿಂದ ಏಕಾದಶ ಸ್ಥಾನ ಶುಭಗ್ರಹಯುಕ್ತ ಅಥವಾ ದೃಷ್ಟವಾಗಿದ್ದರೆ ಜಾತಕ ನ್ಯಾಯ ಮಾರ್ಗದಿಂದ ಸಂಪತ್ತು ಗಳಿಸುತ್ತಾನೆ. ಅದೇ ಸ್ಥಾನ ಪಾಪಗ್ರಹಯುಕ್ತ ಅಥವಾ ಪಾಪ ದೃಷ್ಟವಾದರೆ ಅನ್ಯಥಾ (ಬೇರೆ ಮಾರ್ಗ – ಕಮಾರ್ಗ)ದಿಂದಲೂ ಧನ ಸಂಪಾದಿಸುತ್ತಾನೆ.

ಮಿಶ್ರೈರ್ಮಿಶ್ರಫಲಂ ಜ್ಞೇಯಮುಚ್ಚಮಿತ್ರಾದಿವೆಶ್ಮಗೈಃ ।
ಬಹುದಾ ಜಾಯತೆ ಲಾಭ ಸುಖಾಪ್ತಿ ಶ್ರಾಪ್ಯನೇ ಕಥಾ ॥೧೦॥

ಆ ರೂಢಾ ಲಾಭ ಭವನಂ ಪಶ್ಯೇಯುಶ್ಯೆಂನ್ನಭಶ್ವರಾಃ ।
ಖಗದೃಷ್ಟೆ ವ್ಯಯೋ ತರ್ಹಿ ಜಾತಃ ಸ್ಯಾದ್ರಾಜ ಸನ್ನಿಭಃ ॥೧೧॥

ಪದಾದಾಯೇ ದ್ಯುಸದ್ ದೃಷ್ಟಿಯುತ್ಯಾಧಿಕ್ಯೆ ದ್ವಿಜೋತ್ತಮ ।
ಸಾರ್ಗಲೆ ಚಾಪಿ ತತ್ರಾಪಿ ಬಹುರ್ಗಲಸಮಾಗಮೆ ॥೧೨॥

ಶುಭ ಗ್ರಹಾರ್ಗಲೆ ಬ್ರಹ್ಮನ್ ತತ್ರಾಪ್ಯುಚ್ಚ ಗ್ರಹಾರ್ಗತಿ ।
ಶೋಭನ ಸ್ವಾಮಿನಾ ದೃಷ್ಟೆ ಲಗ್ನ ಭಾಗ್ಯಾದಿಗೇನವಾ ॥೧೩॥

ಜಾತಸ್ಯ ಪ್ರಬಲಂ ಭಾಗ್ಯಂ ನಿರ್ದಿಶೆದುತ್ತರೋತ್ತರಮ್ ।
ಖಗಶ್ಚೆದುಕ್ತಯೋಗೇಷು ದ್ವಾದಶಂ ನಹಿ ಪಶ್ಯತಿ ॥೧೪॥

(ಉಪಯುಕ್ತ ಪದ ಏಕಾದಶ ಸ್ಥಾನದಲ್ಲಿ) ಮಿಶ್ರಗ್ರಹ ಶುಭ, ಪಾಪ ಎರಡು ಸಹಿತ ಅಥವಾ ದೃಷ್ಟವಾಗಿದ್ದರೆ – ಸುಮಾರ್ಗ, ದುರ್ಮಾಗ ಎರಡು ಕಡೆಯಿಂದ ಧನ ಲಾಭ ಬಂದು ದೇಶೇಗ್ರಹ ತನ್ನ ಉಚ್ಚಾದಿಯಲ್ಲಿದ್ದರೆ ಅನೇಕ ರೂಪದಿಂದ ಲಾಭ ಹಾಗೂ ಸುಖಪ್ರಾಪ್ತಿ – ಪದ ಸಹಿತ ಏಕಾದಶ ಸ್ಥಾನವನ್ನು ಎಲ್ಲ ಗ್ರಹಗಳು ವೀಕ್ಷಿಸುತ್ತಿದ್ದರೆ ಹಾಗೂ ವ್ಯಯ ಸ್ಥಾನದಲ್ಲಿ ಯಾವುದೇ ಗ್ರಹವಿರದ್ದಿರೆ ಆ ವ್ಯಕ್ತಿ ರಾಜನ ಸಮಾನನಾಗುತ್ತಾನೆ. ಪದದಿಂದ ಏಕಾದಶದಲ್ಲಿ ಅಧಿಕ ಗ್ರಹಗಳ ದೃಷ್ಟಿಯಿದ್ದರೆ ಅಥವಾ ಯೋಗವಿದ್ದರೆ ಭಾಗ್ಯ ವೃದ್ಧಿ. ಅದರಲ್ಲಿಯೂ ಏಕಾದಶ ಸಾರ್ಗಳವಾದರೆ ಅಧಿಕ ಭಾಗ್ಯ ವೃದ್ಧಿ. ಅನೇಕ ಗ್ರಹಗಳ ಅರ್ಗಳಗಳ ಸ್ಥಿತಿಯಲ್ಲಿ ಶುಭಗ್ರಹಕೃತ ಅರ್ಗಳವಿದ್ದರೆ – ಹೆಚ್ಚಿನ ಭಾಗ್ಯ ವೃದ್ಧಿಯಾಗುತ್ತದೆ. ಅದರಲ್ಲಿಯೂ ಆ(ಏಕಾದಶ)ಸ್ಥಾನ ಲಗ್ನ ಭಾಗ್ಯ ಆದಿಶುಭ ಸ್ವಾಮಿಗಳಿಂದ ದೃಷ್ಟಿತವಾದರೆ ಸಂಪೂರ್ಣ ಭಾಗ್ಯ ವೃದ್ಧಿಯನ್ನು ವಿಶೇಷಚವಾಗಿ ಹೇಳುವುದು. ಈ ರೀತಿಯಾಗಿ ಉತ್ತರೋತ್ತರ ಭಾಗ್ಯ ವೃದ್ಧಿ ಜಾತಕವಿರುತ್ತದೆ – ಆದರೆ ದ್ವಾದಶ ಸ್ಥಾನ ಯಾವುದೇ ಗ್ರಹವಿದ್ದರೂ ಪ್ರಗತಿಗೆ ಸ್ವಲ್ಪ ಮಾರಕ.

### ಪದದಿಂದ ದ್ವಾದಶ ಫಲ

ಪದಾದ್ ವ್ಯಯೇತು ಮೈತ್ರೇಯ । ಶುಭ ಪಾಪಯುತೇಕ್ಷಿತೆ ।
ವ್ಯಯಾಧಿಕ್ಯಂ ಭವೇದೇವಂ ವಿಶೇಷೆ ಪಾರ್ಜನಾತ್ ಸದಾ ॥೧೫॥

ಸುಮಾರ್ಗಾತ್ ಶೋಭನಖಗೈಃ ಕುಮಾರ್ಗಾತ್ ಪಾಪಖೇಚರೈಃ ।
ಮಿಶ್ರೈಮಿಶ್ರಫಲಂ ವಾಚ್ಯಂ ಧನಾಪ್ತಿರ್ಲಾಭಗೆ ಭವೇತ್ ॥೧೬॥

ಪದಾರೂಢಾದ್ ವ್ಯಯೇ ಶುಕ್ರ ಭಾನು ಸ್ವರ್ಭಾನು ವೀಕ್ಷತೆ ।
ರಾಜಮಾಲಾದ್ ವ್ಯಯೇ ವಾಚ್ಯಶ್ಚಂದ್ರ ದೃಷ್ಟ್ಯಾ ವಿಶೇಷತಃ ॥೧೭॥

ಪದಾರೂಢಾದ್ ವ್ಯಯೇ ಸೌಮ್ಯೆ ಶುಭಖೇಟಯುತೆಕ್ಷಿತೆ ।
ಜ್ಞಾನಿಮದ್ಯೆ ವ್ಯಯೋ ನಿತ್ಯಂ ಪಾಪದೃಷ್ಟಯಾ ಕಲೆರ್ವ್ಯಯಃ ॥೧೮॥

ಪದಾದ್ ವ್ಯಯೆ ಸುರಾಚಾರ್ಯೇತ ವೀಕ್ಷಿತೆ ಚಾನ್ಯಖೇಚರೈಃ ।
ಕರಮುಲಾದ್ ವ್ಯಯೋ ವಾಚ್ಯೋ ಜಾತಕಸ್ಯ ದ್ವಿಜೋತ್ತಮ ॥೧೯॥

ಆ ರೂಢಾದ್ ದ್ವಾದಶೆ ಸೌರೆ ಧರಾಪುತ್ರೇಣ ಸಂಯ್ಯುತೆ ।
ಅನ್ಯಗ್ರಹೆಕ್ಷಿತೆ ವಿಪ್ರ । ಭಾತೃಮೂಲಾದ್ವನವ್ಯಯಃ ॥೨೦॥

ಪದಾತು ದ್ವಾದಶೆ ಸ್ಥಾನೆ ಯೋ ಯೋಗಾ ಕಥಿತಾಮಯಾ ।
ಲಾಭ ಭಾವೇಪಿ ತೇಯೋಗಾ ಲಾಭಯೋಗ ಕರಾಃ ಸದಾ ॥೨೧॥

ಹೇ ಮೈತ್ರೇಯನೆ, ಪದದಿಂದ 12ನೇ ಸ್ಥಾನ (ಸಾಮಾನ್ಯ ಲಗ್ನಾಧೀಶ ಪದ) ಶುಭಾಶುಭ ಗ್ರಹಗಳ ಯೋಗ ಅಥವಾ ಅವುಗಳ ದೃಷ್ಟಿಯಿದ್ದರೆ ಬಹಳ ಖರ್ಚು, ಶುಭಗ್ರಹಯುತ ಅಥವಾ ದೃಷ್ಟಿಯಲ್ಲಿ ಸನ್ಮಾರ್ಗದಿಂದ ಪಾಪಗ್ರಹ ದೃಷ್ಟಿಯಲ್ಲಿ ಕುಮಾರ್ಗದಿಂದ (ಇಲ್ಲಿ ಯೋಗವನ್ನು ಪರಿಗಣಿಸುವುದು) ಖರ್ಚು ಮಿಶ್ರಗ್ರಹ (ಶುಭ, ಪಾಪ)ಗಳ ಯುತ ಅಥವಾ ದೃಷ್ಟಿ ಮಿಶ್ರಫಲವನ್ನು ಹೇಳುವುದು (ಆಯ-ವ್ಯಯ ಎರಡು) ಪದದಿಂದ ಲಾಭ ಸ್ಥಾನದಲ್ಲಿ ಗ್ರಹಗಳ ಯುತ ದೃಷ್ಟಿ ಇದ್ದರೆ ಧನಲಾಭ ಪದದ ದ್ವಾದಶದಲ್ಲಿ ಶುಕ್ರ, ಸೂರ್ಯ, ರಾಹುಗಳ ದೃಷ್ಟಿಯಿದ್ದರೆ ರಾಜ ಮೂಲದಿಂದ ಧನಕ್ಷಯ ಚಂದ್ರನ ದೃಷ್ಟಿಯಿದ್ದರೆ ವಿಶೇಷ ರೂಪವಾಗಿ ರಾಜನಿಂದ ಧನವ್ಯಯ ಪದದಿಂದ ದ್ವಾದಶದಲ್ಲಿ ಬುಧನಿದ್ದರೆ ಹಾಗೂ ಶುಭ ಗ್ರಹನಿಂದ ದೃಷ್ಟಿತ ಅಥವಾ ಯೋಗ ಮಾಡುತ್ತಿದ್ದರೆ ಮನೆ ಜನರು, ಸಂಬಂಧಿಗಳಿಗಾಗಿ ದಿನ ಹಣ ವ್ಯಯ ಪಾಪಗ್ರಹಯುತ ಅಥವಾ ದೃಷ್ಟನಾಗಿದ್ದರೆ ಕಲಹದ ಕಾರಣ ವ್ಯಯ – ಉಕ್ತ ಸ್ಥಾನದಲ್ಲಿ ಗುರು ಅಥವಾ ಅನ್ಯಗ್ರಹಗಳ ದೃಷ್ಟಿಯಿದ್ದರೆ ಅಣ್ಣ, ತಮ್ಮರಿಂದ ಧನವ್ಯಯ – ಈ ರೀತಿ ದ್ವಾದಶ ಸ್ಥಾನ ಯೋಗಗಳನ್ನು ಹೇಳಿದ್ದರು. ಈ ಯೋಗ ಗಳಿಗೆ ಪದದ ಏಕಾದಶ ಸ್ಥಾನದ ಸಂಪರ್ಕವಿದ್ದರೆ ಧನ ಲಾಭಕರವಾಗುತ್ತದೆ.

## ಆರೂಢದಿಂದ ಸಪ್ತಮ ಫಲ

ಪದತಃ ಸಪ್ತಮೆ ರಾಹುರಥವಾ ಸಂಸ್ಥಿತಃ ಶಿಖಿ ।
ಕುಕ್ಷಿವ್ಯಥಾಯುತೋ ಬಾಲಃ ಶಿಖಿನಾ ವಾ ತಿಪಿಡಿತಃ ॥೨೨॥

ಪದಾತ್ ಸಪ್ತಮಗೆ ಕೇತೌ ಪಾಪಖೇಟಯುತೆಕ್ಷಿತೆ ।
ಸಾಹಸಿ ಶ್ವೇತ ಕೇಶೀಚ ದೀರ್ಘಲಿಂಗೀ ಭವೆನ್ನರಃ ॥೨೩॥

ಪದತಃ ಸಪ್ತಮೇ ಸ್ಥಾನೆ ಗುರು ಶುಕ್ರ ನಿಶಾಕರಾಃ ।
ಏಕೋ ದ್ವಯಂ ತ್ರಯೋ ವಾಪಿ ಲಕ್ಷ್ಮಿವಾನ್ ಜಾತಕೋ ಭವೇತ್ ॥೨೪॥

ಪದಾತ್ತು ಸಪ್ತಮೇ ತುಂಗೆ ಶುಭೆ ವಾಪ್ಯ ಶುಭೊ ಗ್ರಹಃ ।
ಶ್ರೀಮಾನ್‌ಸೋಪಿ ಭವೇನ್ನೂನಂ ಸತ್ಕೀರ್ತಿ ಸಹಿತೋ ದ್ವಿಜ ॥೨೫॥

ಯೋಪದಾತ್ ಸಪ್ತಮೇ ಭಾವೆ ಯೋಗಾಃ ಪ್ರಾಗು ದಿತಾಯಥಾ ।
ತೆ ತಥೈವ ಬುಧೈರ್ಬೋಧ್ಯಾ ದ್ವಿತೀಯೋಪಿ ದ್ವಿಜೋತ್ತಮ ॥೨೬॥

ಪದದಿಂದ ಸಪ್ತಮದಲ್ಲಿ ರಾಹು ಅಥವಾ ಕೇತುಯಿದ್ದರೆ ಜಾತಕ ಹೊಟ್ಟೆ ನೋವಿನಿಂದ ಬಳಲುತ್ತಾನೆ. ಸಪ್ತಮಸ್ತ ಕೇತು ಪಾಪಗ್ರಹ ಯುಕ್ತ ದೃಷ್ಟನಾಗಿದ್ದರೆ ಜಾತಕ ಸಾಹಸಿ – ಬಿಳಿ ಕೂದಲಿನವನಾಗುತ್ತಾನೆ ಹಾಗೂ ದೀರ್ಘಲಿಂಗಿಯೂ ಆಗಿರುತ್ತಾನೆ. ಉಕ್ತ ಸ್ತಾನದಲ್ಲಿ ಗುರು, ಚಂದ್ರ, ಶುಕ್ರ ಇವರಲ್ಲಿ ಯಾರೊಬ್ಬರು ಅಥವಾ ಇಬ್ಬರು ಅಥವಾ ಮೂವರಿದ್ದರೆ ಮನುಷ್ಯ ಸಂಪತ್ತುಯುಕ್ತನಾಗುತ್ತಾನೆ. ಉಚ್ಚಸ್ಥ ಯಾವುದೇ (ಶುಭ, ಅಶುಭ) ಗ್ರಹವಿದ್ದರೂ ಜಾತಕ ಯಶಸ್ವಿ ಸಂಪತ್ತುಶೀಲನಾಗುತ್ತಾನೆ. ಪದದಿಂದ ಸಪ್ತಮದಲ್ಲಿ ಗ್ರಹವಿದ್ದರೆ ಹೇಳಿದಂತೆ ಫಲ ಹೇಳದೆ – ಅದನ್ನೇ ದ್ವಿತೀಯ ಭಾವಕ್ಕೂ ಅನ್ವಯಿಸಿಕೊಳ್ಳುವುದು.

ತುಂಗಸ್ಥಃ ಶಶಿಜಃ ಕಿಂವಾ ಜೀವೋ ವಾ ಕವಿರೇವ ವಾ ।
ಏಕೋ ಬಲಿ ಧನಾಗತಃ ಶ್ರೀಯಂ ದಿಶತಿ ದೇಹಿನಃ ॥೨೭॥

ಯೇ ಯೋಗಾಶ್ಚ ಪದೆ ಲಗ್ನೆ ಯಥಾವದುದಿತಾ ಮುನೆ ।
ಕಾರಕಾಂಶಸ್ಯ ಕುಂಡಲ್ಯಾಂ ನಿರ್ಬಾದಂ ತೆ ಸತಾಂ ಮತಃ ॥೨೮॥

ಉಚ್ಚಸ್ಥ ಬುಧ, ಗುರು, ಶುಕ್ರರಲ್ಲಿ ಅಥವಾ ಬೇರೆ ಯಾವುದೇ ಅನ್ಯಗ್ರಹ (ಬಲಿಗ್ರಹ) ಪದದಿಂದ 2ನೇ ಸ್ಥಾನದಲ್ಲಿದ್ದರೆ ಮನುಷ್ಯ ಶ್ರೀಮಂತನಾಗುವನು. ಪದ ಅಥವಾ ಲಗ್ನವಶ ಭಾವದ ಯಾವ ಫಲವಿದೆಯೋ ಅದೇ ಫಲ ಕಾರಕಾಂಶ ಕುಂಡಲಿ ಯಿಂದಲೂ ತಿಳಿಯುವುದು. (ಲಗ್ನಕಾರಕ, ದ್ವಿತೀಯಕಾರಕ ಹೀಗೆ ಕಾರಕ ಕುಂಡಲಿ ಯನ್ನು ಹಾಕಿಡುವುದು ವಿಹಿತ).

ಆ ರೂಢಾತ್ ವಿತ್ತಭೆ ಸೌಮ್ಯೆ ಸರ್ವದೇಶಾಧಿಪೋ ಭವೇತ್ ।
ಸರ್ವಜ್ಞೋ ಜಾತಕೋ ವಾಥ ಕವಿರ್ವಾಧಿಚ ಭಾರ್ಗವೆ ॥೨೯॥

ಆ ರೂಢಾತ್ ಕೇಂದ್ರ ತ್ರಿಕೋಣೇಶು – ಕಲತ್ರಪದ ಸಂಸ್ಥಿತೆ ।
ಲಗ್ನಾದೂನಪದೆ ವಾಪಿ ಬಲವತ್‌ಖ ಚರಾನ್ವಿತೆ ॥೩೦॥

ಶ್ರೀಮಾಂಶ್ಚ ಜಾಯತೆ ನೂನಂದೇಶೆ ವಿಖ್ಯಾತಿಮಾನ್ ಭವೇತ್ ।
ಷಷ್ಠಾಷ್ಟಮ ವ್ಯಯೋ ಜಾಯಾಪದೆ ನಿಃಸ್ವೋ ಹಿ ಜಾತಕಃ ॥೩೧॥

ಪದೆ ದ್ಯೂನೋಪಿ ಕೇಂದ್ರೇಕೋಣೆ ಚೋಪಚಯೇ ಯದಿ ।
ಸುವೀರ್ಯಃ ಸಂಸ್ಥಿತಃ ಖೇಟೆ ಭಾರ್ಯಾ ಭಾರ್ತ್ರ್ಯ ಸುಖಪ್ರದಃ ॥೩೨॥

ಆ ರೂಢಾತ್ ಸಪ್ತಮಪದೆ ಸ್ಥಿತಂ ಕೇಂದ್ರ ತ್ರಿಕೋಣಯೋಃ ।
ಸೌಹಾರ್ದ ಬಲು ದಂಪತ್ಯೋ ಶತೃತ್ವಂ ಸ್ಯಾತ್‌ತಿಕ್ ಧ್ರುವಮ್ ॥೩೩॥

ಏವಂ ಲಗ್ನ ಪದಾದ್ ವಿಪ್ರ । ಪುತ್ರಾದೀನಾಂ ಪದೆ ಸತಿ ।
ಮಿತ್ರಾಮಿತ್ರೆ ವಿಜಾನೀಯಾದ್ದನಿ ವೃದ್ಧಿ ಚ ದೈವವಿತ ॥೩೪॥

ತನುದ್ಯೂನಪದೆ ಕೇಂದ್ರಕೋಣೆ ವಾಪಿ ತ್ರಿಲಾಭಯೋಃ ।
ಸ್ಥಿತೆ ಸತಿ ಭವೇಜ್ಞಾತೋ ನೂನಂ ರಾಜಾ ಧರಾಧಿಪಃ ॥೩೫॥

ವಿಲಗ್ನ ಪದತಶ್ಚೈವಂ ವಿತ್ತಾದಿಕ ಪದಾದಪಿ ।
ಪದ ದ್ವಿತಯಮಾಲೋಕ್ಯ ಫಲಂ ವಾಚ್ಯಂ ಸದಾ ಬುಧೈಃ ॥೩೬॥

ಆರೂಢ (ಪದ) – ದ್ವಿತೀಯ ಸ್ಥಾನ ಶುಭಗ್ರಹಯುಕ್ತವಾಗಿದ್ದರೆ ಜಾತಕ ಸಾರ್ವಭೌಮ ರಾಜ ಅಥವಾ ಸರ್ವಜ್ಞನಾಗುತ್ತಾನೆ. ಶುಕ್ರ ದ್ವಿತೀಯದಲ್ಲಿದ್ದರೆ – ಅವನು ಕವಿ ಅಥವಾ ವಿವಾದ ಶೀಲನಾಗುತ್ತಾನೆ. ಪದದಿಂದ 1, 4, 7, 10, 9, 5ರಲ್ಲಿ (ಲಗ್ನ ಪದದಿಂದ ಸಪ್ತಮ ಪದವಿದ್ದರೆ ಎರಡು ಪದಗಳು ಸಬಲ ಗ್ರಹಯುಕ್ತವಾಗಿದ್ದರೆ ನಿಶ್ಚಯವಾಗಿ ವಿಖ್ಯಾತ ಧನಿ ಆಗುವನು. ಅದೇ ಸಪ್ತಮ ಪದವು ಆರೂಢ (ಲಗ್ನ) ಪದದಿಂದ ತ್ರಿಕ್ (3, 6, 8)ಗತವಾದರೆ ಜಾತಕ ದರಿದ್ರ ನಾಗುತ್ತಾನೆ. ಪದ ಅಥವಾ ಅದರ ಸಪ್ತಮ ಕೇಂದ್ರಕೋನ ಉಪಚಯ (7, 1, 4, 7, 10, 9, 5, 3, 11)ಗಳಲ್ಲಿ ಬಲಿಷ್ಠ ಗ್ರಹವಿದ್ದರೆ – ಜಾತಕನಿಗೆ ದಾಂಪತ್ಯ ಸುಖ ದೊರೆಯುತ್ತದೆ. ಪದದ ಸಪ್ತಮ ಪದ ಕೇಂದ್ರ ಅಥವಾ ತ್ರಿಕೋನದಲ್ಲಿದ್ದರೆ – ಪರಸ್ಪರರಲ್ಲಿ ಸೌಹಾರ್ದವಿರುತ್ತದೆ. ಆದರೆ ತ್ರಿಕ್‌ದಲ್ಲಿದ್ದರೆ ಇಬ್ಬರಲ್ಲಿಯೂ ಶತ್ರುತ್ವವಿರುತ್ತದೆ. ಹೇ ವಿಪ್ರನೆ ಇದೇ ರೀತಿ ಲಗ್ನ ಪದದಿಂದ ಪುತ್ರಾದಿ ಪದ ಕೇಂದ್ರ ಅಥವಾ ತ್ರಿಕೋನದಲ್ಲಿದ್ದರೆ ಪುತ್ರಾದಿಗಳೊಡನೆ ಮೈತ್ರಿ ತ್ರಿಕ್‌ದಲ್ಲಿದ್ದರೆ ಶತ್ರುತ್ವವಾಗುತ್ತದೆ. ಇದೇ ತರಹ – ಯಾವ ಭಾವ ಪದ ಲಗ್ನಪದದಿಂದ ಕೇಂದ್ರ ತ್ರಿಕೋನದಲ್ಲಿರುತ್ತದೆಯೋ ಆ ಭಾವ ವೃದ್ಧಿಸುತ್ತದೆ. ಅದೇ ತ್ರಿಕ್‌ದಲ್ಲಿದ್ದರೆ ಹಾನಿಯಾಗುತ್ತದೆ.

ಲಗ್ನ ಹಾಗೂ ಸಪ್ತಮ ಪದಗಳೆರಡು ಕೇಂದ್ರ ಅಥವಾ ತ್ರಿಕೋನದಲ್ಲಾದರೆ ಅಥವಾ ಉಪಚಯ ಮಾತ್ರ(3, 11)ರಲ್ಲಿ ಆದರೆ ಜಾತಕ ಪೃಥ್ವಿಯ ರಾಜನಂತಾಗುತ್ತಾನೆ. ಇದೇ ತರಹ ಲಗ್ನಪದದೊಂದಿಗೆ ಧನಾದಿಭಾಪ ಪದ ಸ್ಥಾನ ನೋಡಿ ಫಲ ವಿವರಿಸುವುದು.

ವಿಮರ್ಶೆ ಪದದ ಕುಂಡಲಿ ಈ ರೀತಿ ಹಾಕಿದರೂ ಸರಿಯೋ ಉದಾರಿತ ಕುಂಡಲಿಯಂತೆ.

## ಆರೂಢ ಪದ (ಲಗ್ನ) ಕುಂಡಲಿ ಚಿತ್ರ

1<br>
2 ಕೇ ಶನಿಪದ<br>
3<br>
4<br>
5 ಶುಪದ<br>
6 ಶುಕ್ರ<br>
7 ರ.ಚ.ಬು ಚಂ ಪದ ಮಂ<br>
8 ರಾಹು ಬು ವಾ ಗು<br>
9 ರ ವಾ<br>
10 ಗು. ಮಂ<br>
11<br>
12 ಶನಿ ಉಪಪದ

| ಶನಿ ಉಪವರ | | ಕೆ ಶನಿ ಪರ | |
|---|---|---|---|
| | | | |
| ಗು ವಾ | | | ಶು ಪದ |
| ರ ಪದ | ರಾಹು ಬು ಗು ಪದ | ರ ಚ ಬು ಚ ವಾ ಪದ | ಶುಕ್ರ |

ಮೇಲಿನ ಕುಂಡಲಿ ಸುಲಭವಾಗಿ ಅರಿಯಲು ಅನುಕೂಲಕರವಷ್ಟೆ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಆರೂಢಾಧ್ಯಾಯಃ ಸಮಾಪ್ತಃ**

# ಅಥೋಪ ಪದಫಲಾಧ್ಯಾಯಃ

**ಪರಾಶರ ಉವಾಚ:**

ಅಧುನಾ ತೇ ಫಲಂ ವಕ್ಷ್ಯೆ ಬ್ರಹ್ಮನ್ನುಪಪದಾ ಶ್ರೀತಮ್ ।
ಯಜ್ಞಾನಾಜ್ಞಾಯತೆ ವಿಜ್ಞೊ ಜಾತಸ್ಯ ಫಲಸೂಚಕಃ ॥೧॥

ಪ್ರಧಾನ ಸ್ಯಾಂಗ ಭಾವಸ್ಯಾನು ಚರಸ್ಯ ಪದಂ ಹಿ ಯತ್ ।
ತದೇವೋಪಪದಂ ಗೌಡಂ ಕಿಂವೋ ಪಾರೂಢಮುಚ್ಯತೆ ॥೨॥

ತಸ್ಮಿನ್ನುಪದೆ ಸೌಮ್ಯಗೇಹೆ ಶುಭಯುತೆಕ್ಷಿತೆ ।
ಜ್ಞೇಯಂ ಚಾರುತರಂ ಸೌಖ್ಯಂ ಪುತ್ರ ಸ್ತ್ರೀ ಸಂಭವಂ ಮುನೆ ॥೩॥

ಸಪಾಪೆ ಪಾಪ ದೃಷ್ಟೆ ವಾತಸ್ಮಿನ್ನೇವ ಹಿ ಪಾಪಭೆ ।
ದಾರಾದಿಸುಖ ಹೀನೋ ವಾ ಪರಿವ್ರಜತಿ ಜಾತಕಃ ॥೪॥

ತತ್ರಸದ್‌ಗ್ರಹ ದೃಗ್‌ಯೋಗೆ ದಾರಾನಾಶೋ ನ ಜಾಯತೆ ।
ಸ್ವತುಂಗ ಸ್ವಭಮಿತ್ರರ್ಕ್ಷೇತೋ ಭಾನುರ್ನ ಪಾಪವಾನ್ ॥೫॥

ನೀಚಾರಿಭವನಸ್ಥ ಪಾಪೋಸೌ ಗದಿತೋ ಬುಧ್ಯೆಃ ॥

**ಪರಾಶರರು ಹೇಳಿದರು–**

ಹೇ ಬ್ರಾಹ್ಮಣನೇ, ಈಗ ನಾನು ಉಪಪದ ಫಲ ಹೇಳುತ್ತೇನೆ. ಅದರ ಜ್ಞಾನದಿಂದ ಜಾತಕನಿಗೆ ಫಲಾದೇಶ ಮಾಡಲು ವಿಶೇಷ ಸಮರ್ಥನಾಗುತ್ತೀಯೇ? ಅಂಗ (ಲಗ್ನ) ಭಾವ ಸಾಧನೆ ಪ್ರಧಾನವಾದರೆ ಅದರ ಅನುಸಾರ ಅದರ ಅನುಚರ, ಸುತಭಾವದ ಪದವು ಉಪಪದವೆಂದು ಕರೆಯಿಸಿಕೊಳ್ಳುತ್ತದೆ. ಇದಕ್ಕೂ ಆರೂಢ ಅಥವಾ ಗೌಡವೆಂದು ಕರೆಯುತ್ತಾರೆ. ಈ ಉಪಪದ ಶುಭಗ್ರಹದ ಮನೆಯಲ್ಲಿದ್ದರೆ ಹಾಗೂ ಆ ಮನೆ ಶುಭ ಗ್ರಹಗಳ ಯೋಗದಿಂದ ಕೂಡಿದ್ದರೆ – ದೃಷ್ಟಿಯುತ ವಾಗಿದ್ದರೆ ಜಾತಕನಿಗೆ ಸ್ತ್ರೀ ಪುತ್ರಾದಿಯ ಪೂರ್ಣ ಸುಖ ದೊರೆಯುತ್ತದೆ. ಅದೇ ಉಪಪದ ಪಾಪಗ್ರಹ ಮನೆಯಲ್ಲಿದ್ದ ಪಾಪಯುಕ್ತ ಪಾಪದೃಷ್ಟಿತವಾಗಿದ್ದರೆ – ಸ್ತ್ರೀವಿಹೀನನಾಗುತ್ತಾನೆ ಅಥವಾ ಪರಿವ್ರಾಜಕ(ಸಂನ್ಯಾಸಿ)ನಾಗುತ್ತಾನೆ. ಅದರ ಮೇಲೆ ಶುಭ ದೃಷ್ಟಿಯಿದ್ದರೆ – ಯುತಯಿದ್ದರೆ ಸ್ತ್ರೀ ನಾಶ ಹೇಳಬಾರದು. ತನ್ನ

ಉಚ್ಚ ದಿ ಸೂರ್ಯ ಪಾಪಗ್ರಹವಾಗಲಾರದು ನೀಚ ಶತ್ರು ಗ್ರಹವಾದರೆ ಪಾಪವಾಗು ತ್ತದೆ.

ದ್ವಿತೀಯೇ ತೂಪಪದತಃ ಸೌಮ್ಯ ಗ್ರಹ ನಿರೀಕ್ಷಿತೆ ॥೬॥

ಸುಭರ್ಷೆ ಶುಭ ಸಂಯೋಗೆ ಫಲಂ ಪೂರ್ವವದಾದಿ ದಿಶೇತ್ ।
ದ್ವಿತೀಯೇ ತು ಪಪದತೋ ನೀಚಾಂಶೆ ನೀಚಖೇಡರ್ಯೆಃ ॥೭॥

ಪಾಪೈರ್ವಾ ಸಂಯುತೆ ಜಾತೋ ಭವೇದ ದಾರಾವಿನಾಶಕಃ ।
ತುಂಗಂಶೆ ತುಂಗಸಂಸ್ಥೆ ವಾ ದೃಷ್ಟೆ ವೋಚ್ಚ ಸ್ಥಖೈಚರೈಃ ॥೮॥

ರೂಪಲಕ್ಷಣ ಸಂಪನ್ನಾನೇಕದಾರೋ ನರೋ ಭವೇತ್ ।
ದ್ವಿತಿಯೇ ವೊಪಪದಕೆ ಮಿಥುನರ್ಕ್ಷೆ ಸ್ಥಿತೆ ಜನಃ ॥೯॥

ಜಾಯತೆ ತರ್ಹಿ ನಿಯತಂ ಬಹುಭಾರ್ಯಾ ಸಮನ್ವಿತಃ ।
ದ್ವಿತೀಯೇ ವೊಪಪದಕೆ ಸ್ವಸ್ವಾಮಿಖಚರಾನ್ವಿತೆ ॥೧೦॥

ಸ್ವರಾಶಿಸ್ಥೆ ತದೀಶೆ ವಾ ತತೋನ್ಯತ್ರಾಪಿ ಸಂಸ್ಥಿತೆ ।
ಉತ್ತರಾಯಪಿ ನಿರ್ದಾರೋ ಭವತ್ಯೇವ ನ ಸಂಶಯಃ ॥೧೧॥

ಉಪಪದದಿಂದ ಎರಡನೇ ಸ್ಥಾನ ಶುಭರಾಶಿ ಶುಭ ಗ್ರಹಯುಕ್ತ ಅಥವಾ ಶುಭ ದೃಷ್ಟವಾದರೆ ಪೂರ್ವಗತ ಸ್ತ್ರೀ ಪುತ್ರಾದಿ ಸುಖ ಹೇಳುವುದು.

ಉಪಪದದಿಂದ ಎರಡನೇ ಸ್ಥಾನ ನೀಚಸ್ಥ ಗ್ರಹದ ನವಾಂಶವಾಗಿದ್ದರೆ ಹಾಗೂ ನೀಚರಾಶಿಸ್ಥ ಗ್ರಹಗಳಿಂದ ಅಥವಾ ಪಾಪಗ್ರಹ ಯುಕ್ತವಾಗಿದ್ದರೆ ಜಾತಕನ ಸ್ತ್ರೀ ನಾಶವಾಗುತ್ತಾಳೆ(ಮೃತ್ಯು). ಅದೇ ಉಪಪದದ ಎರಡನೇ ಸ್ಥಾನ ಉಚ್ಚಸ್ಥ ಗ್ರಹದ್ದಾಗಿದ್ದರೆ ಅಥವಾ ನವಾಂಶವಾಗಿದ್ದರೂ ಅಥವಾ ಯಾವುದೇ ಗ್ರಹದ ಉಚ್ಚವಾಗಿದ್ದರೂ ಅಥವಾ ಉಚ್ಚಸ್ಥ ಗ್ರಹದಿಂದ ನೋಡಲ್ಪಟ್ಟಿದ್ದರೆ ಜಾತಕನಿಗೆ ರೂಪ ಹಾಗೂ ಲಾವಣ್ಯಯುಕ್ತ ಅನೇಕ ಸ್ತ್ರೀಯರ ಉಪಭೋಗ – ಉಪಪದ ಅಥವಾ ಅದರ ಎರಡನೇ ಮನೆ ಮಿಥುನ ರಾಶಿಯಾಗಿದ್ದರೆ ನಿಶ್ಚಿತ ಜಾತಕನಿಗೆ ಅನೇಕ ಸ್ತ್ರೀಯರಿರುತ್ತಾರೆ. ಉಪಪದ ಅಥವಾ ಅದರ ಎರಡನೇ ಮನೆ ತನ್ನ ಸ್ವಾಮಿಯಿಂದ ಯುಕ್ತ ಅಥವಾ ದೃಷ್ಟ ಅಥವಾ ಉಚ್ಚ ಸ್ವರಾಶಿಸ್ಥನಾಗಿದ್ದರೂ – ಅವನು ಅಂತಿಮ ಸಮಯದಲ್ಲಿ ಸ್ತ್ರೀವಿಹೀನನಾಗುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ.

ಸ್ವರಾಶೌ ಸಂಸ್ಥಿತೆ ಖೇಟೆ ನಿತ್ಯಾಖ್ಯೆ ದಾರಕಾರಕೆ ।
ಉತ್ತರಾಯುಪಿ ನಿರ್ಧಾರೋ ಭವತ್ಯೇವ ನ ಸಂಶಯಃ ॥೧೨॥

ತುಂಗರ್ಕ್ಷೆ ತೂಪಪದೆ ನಿತ್ಯೆ ವಾ ದಾರಾಕಾರಕೆ ।
ಸದ್‌ವಂಶಾದಾರಲಾಭಃ ಸ್ಯಾನ್ನೈಚಸ್ಥೆ ತದ್‌ವಿಪರ್ಯಯಃ ॥೧೩॥

ಸೌಮ್ಯಸಂಬಂಧ ತಶ್ಚೋಽಪಪದೆ ಕಿಂ ವಾ ದ್ವಿತೀಯಕೆ ।
ಸುರೂಪ ಗುಣಸಂಪನ್ನಾ ಜಾಯಾ ಜಾತಸ್ಯ ಜಾಯತೆ ॥೧೪॥

ನಿತ್ಯ ಸ್ತ್ರೀಕಾರಕ ಗ್ರಹ (ಸಪ್ತಮೇಶ–ಶುಕ್ರ–ಇತ್ಯಾದಿ ಬಲಿಷ್ಠ) ಅಥವಾ ಉಪಪದೇಶ (ಉದಾಹರಣೆ ಉಪಪದ ಮೀನದಲ್ಲಿದೆ ಅದರೀಶ ಗುರು) ಉಚ್ಚರಾಶಿಸ್ಥವಾಗಿದ್ದರೆ ಸದ್‌ವಂಶದ ಸ್ತ್ರೀ ಲಭ್ಯಳು. ಅವನ ನೀಚಸ್ಥವಾಗಿರಲು ನೀಚ ವಂಶೋತ್ಪನ್ ಸ್ತ್ರೀ ದೊರೆಯುತ್ತಾಳೆ. (ನೀಚ ಭಂಗಾದಿಯನ್ನು ಪರಿಗಣಿಸುವುದು). ಉಪಪದ ಅದರ ಎರಡನೇ ಸ್ಥಾನದ ಮೇಲೆ ಶುಭದೃಷ್ಟಿ ಅಥವಾ ಯೋಗವಾದರೆ ಆ ಜಾತಕನ ಸ್ತ್ರೀ ಸುಂದರಿ, ಗುಣ ಯುಕ್ತಳಾಗಿರುತ್ತಾಳೆ.

ದ್ವಿತೀಯೇ ತೂಪಪದತೋ ಮಂದ ರಾಹುಯುತೆ ಸತಿ ।
ತ್ಯಾಗೋಪವಾದತಃ ಪತ್ನ್ಯಾಸ್ತನ್ಮೃತಿರ್ವಾ ಪ್ರಜಾಯತೆ ॥೧೫॥

ತತ್ರೈವ ಸೀತಕೇತುಭ್ಯಾಮುಪಾ ರೂಢೇಪಿ ವಾ ಯುತೆ ।
ರಕ್ತಪ್ರದರ ರೋಗಾರ್ತಾ ಜಾಯತೆ ತಸ್ಯ ಭಾಯಿನಿ ॥೧೬॥

ಅಸ್ತಿ ಸ್ರಾದಯುತಾ ಜಾಯಾ ತತ್ರ ಸೌಮ್ಯಧ್ವಜಾನ್ವಿತೆ ।
ತತ್ರ ಮಂದಾ ಗುರು ವಯೋ ಜಾಯಾಸ್ಥಿ ಜ್ವರಕಾರಕಾಃ ॥೧೭॥

ಸ್ಥೂಲಾಂಗಿ ಕುರುತೋ ಬಾಲಾಂ ವಿದಗೂ ತತ್ರ ಸಂಸ್ಥಿತೌ ।
ಮಂದಾರೌ ವಿದ್‌ಗ್ರಹೆ ಚೇತ್ತು ಜಾಯೋನಾಸಾ ರುಜಾನ್ವಿತಾ ॥೧೮॥

ಈದೃಗೇವ ಫಲಂ ಭೌಮಗೇಹೇಪಿ ಗದಿತಂ ಬುಧೈಃ ।
ತತ್ರೈವ ಗುರು ಮಂದಾಭ್ಯಾಂ ಜಾಯಾಕರ್ಣಾಕ್ಷಿ ರೋಗಯುಕ್ ॥೧೯॥

ತತ್ರೆ ತರಕ್ಷ್ಣಗೌ ಜ್ಞಾರೌ ರಾಹುಜೀವೌ ಯದಾಪಿ ವಾ ।
ತದಾ ಜಾತಸ್ಯ ಜಾಯಾ ಸ್ಯಾದ್ದಂತ ರೋಗಾನಿ ಪೀಡಿತಾ ॥೨೦॥

ಮಂದಾಗೂ ಮಂದಭವನೆ ಪಂಗುರ್ವಾತಾರ್ದಿತಾ ಪ್ರಿಯಾ ।
ಸೌಮ್ಯೆ ಕ್ಷಿತಯತೆ ತತ್ರ ನ ದಿಶೆತ್ ಫಲಮಿದೃಶಮ್ ॥೨೧॥

ಉಪಪದದಿಂದ ಎರಡನೇ ಸ್ಥಾನದಲ್ಲಿ ಶನಿ, ರಾಹುಗಳ ಸಂಯೋಗವಿದ್ದರೆ ಜಾತಕ ಅಪವಾದಕಾರಣೆ. ಸ್ತ್ರೀಯನ್ನು ಬಿಡಿಯುತ್ತಾನೆ ಅಥವಾ ಸ್ತ್ರೀ ಮೃತ್ಯುವನ್ನು

ತೋರಿಸುತ್ತದೆ. ಉಪಪದ ಅಥವಾ ಅದರಿಂದ ಎರಡರಲ್ಲಿ ಶುಕ್ರ, ಕೇತುಗಳಿದ್ದರೆ ರಕ್ತಪ್ರದರ ದೋಷದಿಂದ ಸ್ತ್ರೀ ಪೀಡಿತಳಾಗಿರುತ್ತಾಳೆ. ಅದೇ ಬುಧ, ಕೇತು ಸಂಯೋಗವಾದರೆ – ಅಸ್ಥಿಯಲ್ಲಿ ರಕ್ತಣಮ್ಯವದಿಂದ, ಶನಿ, ರವಿ, ಸೂರ್ಯರ ಇರುವಿಕೆಯಿಂದ ಅಸ್ಥಿ ಜ್ವರ ಪೀಡಿತ ಸ್ತ್ರೀಯಾಗಿರುತ್ತಾಳೆ. ಅದೇ ಸ್ಥಾನ (ದ್ವಿತೀಯ) ಬುಧ, ರಾಹುಗಳಿದ್ದರೆ ಸ್ತ್ರೀ ಸ್ಥೂಲ ಶರೀರದವಳಾಗಿರುತ್ತಾಳೆ. ಬುಧ ಕ್ಷೇತ್ರ (ಕನ್ಯಾ, ಮಿಥುನ) ಶನಿ, ಮಂಗಳರಿದ್ದರೆ – ಮೂಗಿನ ರೋಗಯುಕ್ತ ಸ್ತ್ರೀ. ಮಂಗಳ ಮನೆ(ಮೇಷ, ವೃಶ್ಚಿಕ)ಯಲ್ಲಿ ಮೇಲಿನಂತೆಯಿದ್ದರೆ ಇದೇ ರೀತಿ ಮೂಗಿನ ಪಿನಸಿ ರೋಗ, ವಕ್ರ ಗುರು ಶನಿಗಳಿದ್ದರೆ ಸ್ತ್ರೀಯ ಕಿವಿ, ಕಣ್ಣಿನ ರೋಗದಿಂದ ಬಳಲುವಳು. ಉಪಪದದ ದ್ವಿತೀಯ ರಾಶಿ ಸ್ವರಾಶಿ ಭಿನ್ನವಾಗಿ ಬೇರೆ ರಾಶಿಗಳಲ್ಲಿ ಮಂಗಳ, ಬುಧ, ರಾಹು, ಗುರುಗಳಿದ್ದರೆ ಸ್ತ್ರೀ ದಂತರೋಗಿಯಾಗಿರುತ್ತಾಳೆ. ಅದೇ ಶನಿಕ್ಷೇತ್ರ(ಮಕರ, ಕುಂಭ)ದಲ್ಲಿ ಶನಿ, ರಾಹುಗಳಿದ್ದರೆ ಸ್ತ್ರೀ ವಾತರೋಗಿಯಾಗಿರುತ್ತಾಳೆ.

ಪದೋಪಪದ ಲಗ್ನೆಭ್ಯೋ ಯದ್ ಭಂ ಸಪ್ತಮಗಂ ಭವೇತ್ ।
ತತ್‌ಸ್ತದಧಿಪಾತ್ತಸ್ಯ ನವಾಂಶಾದ್ ವಾ ಫಲಂ ದಿಶೇತ್ ॥೨೨॥

ಇದೇ ರೀತಿಯಾಗಿ ಪದ ಉಪಪದ ಲಗ್ನದಿಂದ ಸಪ್ತಮ ರಾಶಿ ಹಾಗೂ ಅದರ ಅಧಿಪರಿಂದ ಅಥವಾ ನವಾಂಶದಿಂದ ಫಲ ಹೇಳುವುದು.

## ಪುತ್ರ ವಿಚಾರ

ನವಮೆ ಮಂದ ಉಚ್ಚಂದ್ರೈರುಕ್ತೇಭ್ಯೋ ದ್ವಿಜ ಸಂಸ್ಥಿತೈಃ ।
ಅನಪತ್ಯಮಥೊ ರಾಹು ಜೀವಾರ್ಕ ಬಹುಸೂನುತಾ ॥೨೩॥

ತತ್ರೇಂದುನೈಕಪುತ್ರಸ್ತು ತತೌಖ್ಯಂ ಮಿಶ್ರತಶ್ಚ ರಾತ್ ।
ದೇವೇಜ್ಯೇಹೆ ಲಿಫಣಿಭಿಃ ಪ್ರತಾಪಿ ಬಲವೀರ್ಯಯುಕ್ತ್ ॥೨೪॥

ಪ್ರಚಂಡ ವಿಜಯಿ ಪುತ್ರೋ ರಿಪುನಿಗ್ರಹಕಾರಕಃ ।
ಭೌಮಾ ಕಿಂಭ್ಯಾಂ ಯುತೆ ತಸ್ಮಿನ್ನಪುತ್ರೋ ಜಾಯತೆ ನರಃ ॥೨೫॥

ಪರಪುತ್ರಯುತೋವಾಪಿ ಸಹೊತ್ಥ ಸುತವಾನ್ ಭವೇತ್ ।
ತಸ್ಮಿನ್ನೊಜಗತೆ ರಾಶೌ ಜತಶ್ಚಾನೇಕ ಪುತ್ರವಾನ್ ॥೨೬॥

ಅನೋಜೆ ಸತಿ ಮೈತ್ರೇಯ ಸ್ವಲ್ಪಾಪತ್ಯಃ ಪ್ರಜಾಯತೆ ।

ಮೇಲೆ ಹೇಳಿದ ಸ್ಥಾನದಿಂದ (ಲಗ್ನ ಪದ ಉಪಪದ ಅದರ ಅಧಿಪ) ನವಮದಲ್ಲಿ ಶನಿ, ಬುಧ, ಚಂದ್ರರಿದ್ದರೆ ಜಾತಕ ನಿಃಸಂತಾನಿತನಾಗುತ್ತಾನೆ. ಒಂದು

ವೇಳೆ ಗುರು, ರಾಹು, ಸೂರ್ಯರಿದ್ದರೆ ಬಹುಪುತ್ರವಂತ, ನವಮದಲ್ಲಿ ಚಂದ್ರನೊಬ್ಬನೇ ಇರುವುದರಿಂದ ಒಬ್ಬ ಪುತ್ರನಿಂದ ಸೌಖ್ಯ — ಒಂದು ವೇಳೆ ಅವನ ಜೊತೆಗೆ ಗ್ರಹಗಳಿದ್ದರೆ ವಿಲಂಬಿತವಾಗಿ ಪುತ್ರ ಸೌಖ್ಯ ದೊರೆಯುತ್ತದೆ. ಗುರು, ಸೂರ್ಯ, ರಾಹು, ಶನಿ ಅಲ್ಲಿದ್ದರೆ ಜಾತಕ ಪ್ರತಾಪಿ ಬಲವೀರ್ಯಾಯುಕ್ತ ಶತ್ರುಗಳ ಮೇಲೆ ವಿಜಯ ಸಾಧಿಸುವವನು ಆಗುತ್ತಾನೆ. ಒಂದು ವೇಳೆ ಮಂಗಳಯುಕ್ತನಾದರೆ ಹಾಗೂ ಅಲ್ಲಿ ವಿಷಮ ರಾಶಿಯಿದ್ದರೆ ಅನೇಕ ಪುತ್ರರು ಸಮರಾಶಿಯಿದ್ದರೆ ಅಲ್ಪಪುತ್ರರನ್ನು ಹೇಳುವುದು.

ಮುನೆ ಸಿಂಹೆ ತೂಪಪದೆ ನಿಶಾನಾಥ — ಯುತೇಕ್ಷಿತೆ ॥೨೭॥

ಸ್ವಲ್ಪ ಪ್ರಜೋಂಗನಾಯಾಂ ತು ನರಃ ಕನ್ಯಾಪ್ರಜೋ ಭವೇತ್ ।
ಸುತಭಾವ ನವಾಂಶಾಶ್ಚ ತಥಾ ಸಂತಾನ ಕಾರಕಾತ್ ॥೨೮॥

ಇತ್ಥ ತ್ರಿಶಾಂಶಕುಂಡಲ್ಯಾಂ ಯೋಗಂ ಚಾಪಿ ವಿಲೋಕಯೇತ್ ॥

ಸಿಂಹದಲ್ಲಿ ಅಧಿಕ ಕನ್ಯಾ ಅಲ್ಪ ಪುತ್ರ ಇದೇ ಪ್ರಕಾರ ಪುತ್ರ ಭಾವದ ನವಾಂಶ, ಸಂತಾನಕಾರಕ ಗ್ರಹ ಹಾಗೂ ತ್ರಿಶಾಂಸ ಕುಂಡಲಿಯ ಯೋಗಗಳ ವಿಚಾರ ಮಾಡುವುದು.

## ಸಹಜ ವಿಚಾರ

ಪರತಸ್ಖ್ಯಾಗೌ ಮಂದರಾಹು ಭ್ರಾತೃ ವಿನಾಶಿ ಗೌ ॥೨೯॥

ತತ್ರಾಯೇ ಜ್ಯಾಯಸೋ ಭ್ರಾತುಸ್ತೃತೀಯೇ ಚಾನುಜನ್ಮನಃ ।
ಸ್ವವ್ಯವಹಿತಗರ್ಭಸ್ಯ ನಾಶಸ್ತತ್ರಸ್ಥಿತೆ ಸಿತೆ ॥೩೦॥

ಲಗ್ನೆ ಪದೆ ಲಯೋ ವಾಪಿ ದೈತ್ಯಾಚಾರ್ಯಯುತೆಕ್ಷಿತೇ ।
ನಿರ್ದಿಶಂತಿ ಫಲಂ ಹೋರಾತತ್ವಜ್ಞಾಸ್ತಾ ದೃಶಂ ದ್ವಿಜ ॥೩೦॥

ತ್ಯಾಯಗಾಃ ಶಶಿ ಭೌಮಜ್ಞ ಸುರಾಚಾರ್ಯಾ ದ್ವಿಜೋತ್ತಮ ।
ಬಲವೀರ್ಯ ಪ್ರಾತಾಪಾಢ್ಯ —ಬಬಹುಭ್ರಾತೃ ಪ್ರದಾಯನಃ ॥೩೨॥

ಮಂದ ಭೌಮಯುತೆ ದೃಷ್ಟೆ ತೃತೀಯೈಕಾದಶೆ ಸತಿ ।
ಕನಿಷ್ಠ ಜ್ಯೇಷ್ಠಯೋರ್ನಾಂಶ ವದಂತಿ ಮುನಿಪುಂಗವಃ ॥೩೩॥

ಯದಾ ಲಾಭೆ ತೃತೀಯೆ ವಾಶೌರಿರೇಕೋ ಹಿ ಸಂಸ್ಥಿತಃ ।
ತದಾ ಜಾತಂ ವಿಹಾಯಾ ನ್ಯೆ ವಿನಶ್ಯಂತಿ ಸಹೋದರಾಃ ॥೩೪॥

ತೃತೀಯೈಕಾದಶೆ ಕೇತೌ ಭಗಿನ್ಯಾ ಬಹುಶಃ ಸುಖಮ್ ।
ಭ್ರಾತುರಲ್ಪಸುಖಂ ತಸ್ಯ ನಿರ್ವಿಶಂಕಂ ದ್ವಿಜೋತ್ತಮ ॥೩೫॥

ಪದದಿಂದ 3 ಅಥವಾ 11ರಲ್ಲಿ ಸ್ಥಿತ ಶನಿ, ರಾಹು, ಭ್ರಾತೃಘಾತಕನಾಗಿ ಇರುತ್ತಾನೆ. 11ರಲ್ಲಿ ಕಿರಿ ತಮ್ಮನಿಗೆ ವಿನಾಶಕಾರಕನಾಗಿರುತ್ತಾನೆ. ಈ ಸ್ಥಾನದಲ್ಲಿ ಶುಕ್ರನಿದ್ದರೆ – ತನ್ನ ಮುಂದಿನ ಮಾತೃ ಗರ್ಭನಾಶಕಾರಕನಾಗಿರುತ್ತಾನೆ. ಲಗ್ನದಲ್ಲಿ ಅಥವಾ ಅಷ್ಟಮದಲ್ಲಿ ಶುಕ್ರನಿದ್ದರೆ ಅಥವಾ ಆ ಸ್ಥಾನದಲ್ಲಿ ಶುಕ್ರ ದೃಷ್ಟಿಯಿದ್ದರೆ – ಕೂಡ ಇದೇ ರೀತಿ ಫಲವಿರುತ್ತದೆ (ಗರ್ಭನಾಶ). 3, 11ರಲ್ಲಿ ಚಂದ್ರ ಭೌಮ ಬುಧ, ಗುರು ಇದ್ದರೆ ಬಲ ಪರಾಕ್ರಮ ಹಾಗೂ ಪ್ರತಾಪಶಾಲಿ – ಅಣ್ಣ, ತಮ್ಮರ ಹೆಚ್ಚಳವಿರುತ್ತದೆ. 3, 11ರಲ್ಲಿ ಶನಿ, ಮಂಗಳರಿದ್ದರೆ ಅಥವಾ ದೃಷ್ಟಿಯಿದ್ದರೆ ಹಿರಿಯಣ್ಣ, ಕಿರಿತಮ್ಮರ ವಿನಾಶ ಹೇಳಿದ ಎರಡೂ ಸ್ಥಾನ (3, 11)ರಲ್ಲಿ ಶನಿ ಒಬ್ಬನೇ ಇದ್ದರೆ ಉಳಿದ ಸಹೋದರರ ನಾಶಕಾರಕನು ಆಗಿರುತ್ತಾನೆ. 11, 3ರಲ್ಲಿ ಕೇತು ಇದ್ದರೆ ಅಕ್ಕ, ತಂಗಿಯರ ಸುಖ – ಹೆಚ್ಚಾಗಿ ದೊರೆತು ಅಣ್ಣ, ತಮ್ಮರಿಗೆ ಸುಖವಿರುವುದಿಲ್ಲ.

ಆರೂಢಾತ್ ಶತ್ರುಭಾವಸ್ಥೆ ಪಾಪೆ ತು ಶುಭವರ್ಜಿತೆ ।
ಶುಭ ಸಂಬಂಧರಹಿತೆ ಚೌರೋ ಭವತಿ ನಿಶ್ಚಿತಮ್ ॥೩೬॥

ಸಪ್ತಮೇ ದ್ವಾದಶೆ ಸ್ಥಾನೆ ಸೈಹಿಕೇಯ ಯುತೇಕ್ಷಿತೆ ।
ಜ್ಞಾನವಾಂಶ್ಚ ಭವೇದ್ ಬಾಲೋಬಹುಭಾಗ್ಯಯುತೋ ದ್ವಿಜ ॥೩೭॥

ಆರೂಢೆ ಸಂಗತೆ ಸೌಮ್ಯೇ ಸರ್ವದೇಶಾಧಿಪೋ ಭವೇತ್ ।
ಸರ್ವಜ್ಞಸ್ತತ್ರಜೀವೇ ತು ಕವಿರ್ವಾದೀಚ ಭಾರ್ಗವೆ ॥೩೮॥

ಪದಾದುಪ ಪದಾದ್ವಾಪಿ ಧನಸ್ಥೆ ಶುಭಖೇಚರೆ ।
ಸರ್ವದ್ರವ್ಯಾಧಿಪಃ ಶ್ರೀಮಾನ್ ಜಾಯತೆ ದ್ವಿಜಸತ್ತಮ ॥೩೯॥

ಯಸ್ಯೋಪಪದತೊ ವಿತ್ತಾಧಿಪತೌ ವಿತ್ತಸಂಸ್ಥಿತೆ ।
ಪಾಪಖೇಚರ ಸಂಯುಕ್ತೆ ಚೌರೋ ಭವತಿ ನಿಶ್ಚಯಮ್ ॥೪೦॥

ಪದದಿಂದ ಷಷ್ಠಭಾವಸ್ಥ ಪಾಪಗ್ರಹ ಅಥವಾ ಶುಭ ಸಂಬಂಧ ರಹಿತವಾಗಿದ್ದರೆ ಜಾತಕ ಕಳ್ಳನಾಗುವನು. ಸಪ್ತಮ ಅಥವಾ ದ್ವಾದಶ ಸ್ಥಾನ ರಾಹುವಿನಿಂದ ಯುಕ್ತ ಅಥವಾ ದೃಷ್ಟವಾಗಿದ್ದರೆ ಜಾತಕ ಜ್ಞಾನಿಯಾಗುವನು ಹಾಗೂ ಭಾಗ್ಯಶಾಲಿಯೂ

ಆಗುವನು. ಪದ ಬುಧ ಯುಕ್ತವಾಗಿದ್ದರೆ ಮನುಷ್ಯ ಎಲ್ಲ ದೇಶದ ಅಧಿಪತಿ ಅಥವಾ ವಿದ್ಯಾಪಾರಂಗತನಾಗುವನು. ಗುರು ಪದಗತನಾಗಿದ್ದರೆ ಜಾತಕ ಸರ್ವಜ್ಞ, ಶುಕ್ರನಿದ್ದರೆ ಕವಿ ಹಾಗೂ ವಾದಿ, ಪದ ಉಪಪದದ ದ್ವಿತೀಯ ಸ್ಥಾನ ಶುಭಗ್ರಹ ಯುಕ್ತವಾಗಿದ್ದರೆ ಜಾತಕ ಸರ್ವದ್ರವ್ಯಾಧಿಪ ಬುದ್ಧಿವಂತನಾಗುವನು. ಧನೇಶ ಉಪಪದದ ದ್ವಿತೀಯ ಸ್ಥಾನಗತನಾಗಿ ಪಾಪಗ್ರಹಯುಕ್ತನಾಗಿದ್ದರೆ ಜಾತಕ ನಿಶ್ಚಿತ ಕಳ್ಳನಾಗಿ ತೀರುವನು.

**ಉಪಾರೂಢಕಲತ್ರೆ ಶಾದಗೌ ಮೈತ್ರೇಯ । ವಿತ್ತಗೆ ।**
**ದಂತುರೋ ಜಾಯತೆ ಜಾತಃ ಕೇತೌ ಚಾಪ್ಯಸ್ಫುಟೋಕ್ತಿಮಾನ್ ॥೪೮॥**

**ಯದಿ ತತ್ರೈವ ಮಂದಃ ಸ್ಯಾತ್ತದಾ ಕುತ್ಸಿತ ರೂಪವಾನ್ ।**
**ಮಿಶ್ರಖೇಚರ ಸಂಯೋಗಾತ ಫಲಂ ಮಿಶ್ರಂ ವಿನಿರ್ಧಿಶೇತ್ ॥೪೨॥**

ಉಪಪದದಿಂದ ಸಪ್ತಮೇಶನಿಂದ ದ್ವಿತೀಯ ಸ್ಥಾನದಲ್ಲಿ ರಾಹು ಇದ್ದರೆ ಜಾತಕ – ಉದ್ದ(ಕೋರೆ)ಹಲ್ಲಿನವನಾಗುವನು. ಕೇತು ಇದ್ದರೆ – ಅಸ್ಪಷ್ಟವಾಗಿ ಮಾತಾಡುವವನು, ಶನಿಯಿದ್ದರೆ ಕುರೂಪಿ, ಶುಭ ಪಾಪಗಳ ಸಂಯೋಗವಿದ್ದರೆ ಮಿಶ್ರಿತ ಫಲ ಹೇಳುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಉಪಪದ ಫಲಾಧ್ಯಾಯಃ ಸಮಾಪ್ತಿಃ**

## ೩೨ನೇ ಅಧ್ಯಾಯ

# ಅಥರ್ಗಲಾಫಲಾಧ್ಯಾಯಃ

**ಮೈತ್ರೇಯ ಉವಾಚ:**

ಮಹರ್ಷೇ । ದಯಾಯ ಯಾಮೇ ಗದಿತಾ ಪ್ರಾಣಹಾರ್ಗಲಾ ।
ತಸ್ಯಾರೂಪಂ ಫಲಂ ಚಾಂಪಿ ಶ್ರೋತುಮಿಚ್ಛಾಮಿ ಸಾಂಪ್ರತಮ್ ॥೧॥

**ಮೈತ್ರೇಯ ಹೇಳಿದರು–**

ಹೇ ಮಹರ್ಷಿವರನೇ, ನನ್ನ ಮೇಲೆ ಕೃಪೆಯಿಂದ ತಾವು ಯಾವ ಅರ್ಗಳವೆಂದು ಈ ಮೊದಲು ಹೇಳಿದ್ದೀರೋ ಅದರ ಸ್ವರೂಪ ಫಲ – ಹೇಳಿರಿ. ನಾನು ತಿಳಿಯಲು ಇಚ್ಛಿತನಾಗಿದ್ದೇನೆ.

**ಪರಾಶರ ಉವಾಚ:**

ಭಾವಖೇಟಫಲಂ ಷಿಪ್ರ । ಯಥಾ ಭವತಿ ನಿಶ್ಚಿತವ್ ।
ಸಾರ್ಗಲಾ ಮುನಿಭಿಃ ಪ್ರೋಕ್ತಾ ವಾಚ್ಮಿತಾಂ ಶೃಣುಯತ್ನತಃ ॥೨॥

ತುರ್ಯೋ ದ್ವಿತೀಯೇ ಲಾಭೆ ಚ ಗ್ರಹೆ ಸತಿತು ಸಾರ್ಗಲಾ ।
ತಸ್ಯಾಸ್ತು ಬಾಧಕಾಃ ಖೇಟ ವ್ಯೊಮಲಿಷ್ಪ ತೃತೀಯಗಾಃ ॥೩॥

ದುರ್ಬಲಾಃ ಸ್ವಲ್ಪಸಂಖ್ಯಾವಾ ಖೇಟಃ ಸ್ಯುನ್ನೈವ ಬಾಧಕಾಃ ।
ತೃತಿಯೇ ಬಹವಃ ಕ್ರೂರಾ ಯತ್ರ ಬಾಧಾವಿಧಾಯನಃ ॥೪॥

ವಿಪರೀತಾರ್ಗಲಾ ವೇದ್ಯಾ ತತ್ರಾಪಿ ಮುನಿಸತ್ತಮ ।
ಸಾರ್ಗಲಂ ಗ್ರಹಭಾವೋತ್ಥಂ ತಥಾಪಿ ಫಲಮೀರಿವ್ ॥೫॥

ಪಂಚಮಂ ಚಾರ್ಗಲಾಸ್ಥಾನಂ ನವಮಂ ತದ್ ವಿರೋಧಕವ್ ।
ವೈಪರಿತ್ಯೇನ ತಮಸೋರ್ಗ್ರಹಯೋರರ್ಗಲಾ ಭವೇತ್ ॥೬॥

ಏಕಗ್ರಹಾರ್ಗಲಾ ಪ್ರೋಕ್ತಾ ಮುನಿಭಿಸ್ತು ದವಿಯಸಿ ।
ದ್ವಿಗ್ರಹಾ ಮಧ್ಯಮಾ ತ್ರಯಾದಿ ಗ್ರಹಾ ಚೈವೊತ್ತಮಾ ಮತಾ ॥೭॥

ದ್ವಿವಿಧಾ ತ್ವರ್ಗಲಾ ಪ್ರೋಕ್ತಾ ರಾಶಿಗತಃ ಖೇಟತಸ್ತಥಾ ।
ಬಾಧಾ ವಿರಹಿತಾ ಭವ್ಯಫಲದಾ ನಿಷ್ಫಲಾನ್ಯಥಾ ॥೮॥

ಯೇ ರಾಶಿರ್ಯೋ ಗ್ರಹಶ್ಚಾಪಿ ಸಾರ್ಗಲೋ ಜಾಯತೆದ್ವಿಜ ।
ತಸ್ಯಪಾಕದಶಾಮಧ್ಯೇ ಫಲಂ ನಿಃಸಂಶಯಂ ಭವೇತ್ ॥೯॥

## ಪರಾಶರರು ಹೇಳಿದರು–

ಹೇ ಮೈತ್ರೇಯ । ಯಾವ ಅರ್ಗಳ ಮುಖಾಂತರ ಭಾಗ ಹಾಗೂ ಗ್ರಹದ ಫಲ ನಿಶ್ಚಿತ ರೂಪದಿಂದಾಗುವುದೋ ಆ ಅರ್ಗಳದ ಬಗ್ಗೆ ಹೇಳುತ್ತೇನೆ. ಯಾವುದೇ ಗ್ರಹದ ಸ್ಥಾನದಿಂದ ಆ (ಚತುರ್ಥ) 2 (ದ್ವಿತೀಯ) ಅಥಾ ಏಕಾದಶ ಸ್ಥಾನದಲ್ಲಿ ಗ್ರಹವಿದ್ದರೆ ಅರ್ಗಳಯೋಗವಾಗುತ್ತದೆ. ಈ ಮೂರು ಸ್ಥಾನೀಯ ಅರ್ಗಳಕ್ಕೆ ಕ್ರಮಶಃ 10, 12, 3 ಸ್ಥಾನಗತ ಗ್ರಹಬಾಧಕವಾಗುತ್ತದೆ. ಅರ್ಥಾತ್ ಅರ್ಗಳ ಯೋಗವಿದ್ದಾಗ್ಯೂ ಬಾಧಕಯೋಗವಿದ್ದರೆ ಅರ್ಗಳದ ಪ್ರಭಾವವಾಗಲಾರದು. ಅರ್ಗಲ ಪ್ರತಿಬಂಧಕ ಅರ್ಗಳಕಾರಕ ಗ್ರಹಕ್ಕಿಂತ ದುರ್ಬಲ ಅಥವಾ ಸಂಖ್ಯಾದಲ್ಲಿ ಅಲ್ಪವಿದ್ದರೆ ಅರ್ಗಳಕ್ಕೆ ಪ್ರತಿಬಂಧಕ ಮಾಡಲಾರದು. 3ನೇ ಸ್ಥಾನದಲ್ಲಿ ಬಹಳ ಪಾಪಗ್ರಹಗಳು (3 ಹಾಗೂ 3ಕ್ಕೂ ಹೆಚ್ಚು) ಅರ್ಗಳ ಯೋಗ ಬಾಧಕವಾಗಿದ್ದರೆ ವಿಪರೀತಾರ್ಗಳವಾಗುತ್ತದೆ. ಅರ್ಥಾತ್ ಬಾಧಕರಹಿತವಾಗುತ್ತದೆ. ಪಂಚಮದಲ್ಲಿ ಗ್ರಹವಿರಲು ಅರ್ಗಳ ಯೋಗವಾಗುತ್ತದೆ. ಆದರೆ ನವಮದಲ್ಲಿಯೂ ಗ್ರಹವಿದ್ದರೆ ಆ ಅರ್ಗಳಕ್ಕೆ ಪ್ರತಿ ಬಂಧಕವಾಗುತ್ತದೆ. ವಕ್ರಗತಿಯ ರಾಹು, ಕೇತುಗಳ ಅರ್ಗಳ ಹಾಗೂ ಅವುಗಳ ಬಾಧಕತೆ ವಿಪರೀತ ತಿಳಿಯುವುದು. ಅರ್ಥಾತ್ ರಾಹು, ಕೇತುಗಳಿಂದ 10, 12, 3 ಸ್ಥಾನಗಳಲ್ಲಿ ಗ್ರಹವಿರಲು ಅರ್ಗಳಯೋಗ ಹಾಗೂ ಕ್ರಮಶಃ 4, 2, 11 ಸ್ಥಾನಗಳಲ್ಲಿ ಗ್ರಹವಿರುವುದರಿಂದ ಪ್ರತಿಬಂಧ ಹೇಳುವುದು. ಒಂದು ಗ್ರಹದಿಂದಾದ ಅರ್ಗಳ ಚಿಕ್ಕದಾಗಿದ್ದಾರೆ, ಎರಡು ಗ್ರಹಾರ್ಗಳ ಮಧ್ಯಮ, ಮೂರು ಗ್ರಹಗಳಿಂದಾದ ಅರ್ಗಳ ಪ್ರಬಲವಾಗುತ್ತದೆ. ಈ ರೀತಿ ರಾಶಿ ಹಾಗೂ ಗ್ರಹಗಳಿಂದ ದ್ವಿವಿಧ ಅರ್ಗಳ ಹೇಳಲಾಗಿದೆ. ಬಾಧಾರಹಿತ ಅರ್ಗಳ ಭವ್ಯ ಫಲ ಕೊಟ್ಟರೆ ಬಾಧಿತ ಅರ್ಗಳ ಫಲ ರಹಿತವಾಗಿರುತ್ತದೆ. ಯಾವ ರಾಶಿ ಅಥವಾ ಗ್ರಹ ಸಾರ್ಗಳವಾಗಿರುತ್ತದೋ ಅದರ ಫಲ ದಶಾಫಲದಲ್ಲಿ ನಿಶ್ಚಿತ ರೂಪದಲ್ಲಿ ದೊರೆಯುತ್ತದೆ.

## ಉದಾಹರಣೆ

ಮೊದಲೇ ಉಲ್ಲೇಖಿಸಿದ ಕುಂಡಲಿ

5 4 3
2 ಕೆ
6 ಶುಕ್ರ
7 ರ. ಬು. ಚ
1
10 ಗು. ಮ
8 ರಾ
12 ಶನಿ (ವಕ್ರ)
9 11

| ಶನಿ | | ಕೆ | |
|---|---|---|---|
| | | | |
| ಗು ಮ | | | |
| | ರಾ | ರ ಬು ಚ | ಶು |

ಈ ಕುಂಡಲಿಯ ಮೇಲಿಂದ ಗ್ರಹಾರ್ಗಳ ಹಾಗೂ ರಾಶಿ ಅರ್ಗಳ ಈ ರೀತಿ ಎರಡು ಪ್ರಕಾರದ ಅರ್ಗಳ ಈ ರೀತಿಯಾಗಿದೆ.

ಮೊದಲು ಗ್ರಹಾರ್ಗಳ ನಂತರ ರಾಶಿ ಅರ್ಗಳ ನೋಡುವಾ.

### ಗ್ರಹಾರ್ಗಳ:

ಗ್ರಹಾರ್ಗಳ – ರವಿ, ಚಂದ್ರ, ಬುಧ – 4ನೇ ಸ್ಥಾನದಲ್ಲಿ ಮಂಗಳ, ಗುರುಗಳಿರುವುದರಿಂದ – ಅರ್ಗಳಯೋಗವಾಗುತ್ತದೆ.

(ವ್ಯಯದಲ್ಲಿ ಶುಕ್ರನಿದ್ದರೂ ಅವನು ನೀಚನಾಗಿದ್ದು ನಿರ್ಬಲನಾದ್ದರಿಂದ... ಇಲ್ಲಿ 3 ಗ್ರಹಾರ್ಗಳವಿರುವುದರಿಂದ ಬಾಧಕನಾಗಲಾರ) (ನಾಲ್ಕನೇ ಸ್ಥಾನ ರವಿ, ಬುಧ, ಚಂದ್ರಾರ್ಗಳ)

2) ಮಂಗಳ, ಗುರುವಿನಿಂದ – 11ನೇ ಸ್ಥಾನದಲ್ಲಿ ರಾಹು ಅರ್ಗಳವಾಗುತ್ತದೆ. (ಇಲ್ಲಿ 3ರಲ್ಲಿ ಶನಿ, 10ರಲ್ಲಿ ರವಿ, ಬುಧ, ಚಂದ್ರಾದಿಗಳಿಂದ ಈ ಅರ್ಗಳ ಬಾಧಕವಾಗುತ್ತದೆ. ಫಲವಿಲ್ಲ.)

3) ಶುಕ್ರನಿಂದ – ದ್ವಿತೀಯದಲ್ಲಿ – ರವಿ, ಚಂದ್ರ, ಬುಧ – ಅರ್ಗಳ ಯೋಗ – ಯಾವುದೇ ಬಾಧಕವಿಲ್ಲ. ರಾಹು 3ರಲ್ಲಿದ್ದರೂ ರಾಶಿ ಬಲವಿಲ್ಲದ ಕಾರಣ.

4) ಶನಿ ವಕ್ರನಾಗಿರುವುದರಿಂದ – ವಕ್ರಾಚಾರ 2, 4, 11ರಲ್ಲಿ 11ರಲ್ಲಿ

ಕೇತುವಿನೊಡನೆ ಅರ್ಗಳವಾದರೂ 3ರಲ್ಲಿ (ವಕ್ರವಾಗಿ) ಗುರು, ಮಂಗಳರಿರುವುದ ರಿಂದ ಬಾಧಕ ಅರ್ಗಳ ಫಲರಹಿತವಾಗಿದೆ.

5) ರಾಹುವಿನಿಂದ ವ್ಯಯದಲ್ಲಿ ರವಿ, ಚಂದ್ರ, ಮಂಗಳರಿಂದ ಅರ್ಗಳ (ಏಕಾದಶ ಶುಕ್ರ ನಿರ್ಬಲ) – ಅರ್ಗಳವಾಗುತ್ತದೆ.

## ಅರ್ಗಳ

1) ರವಿ, ಚಂದ್ರ, ಬುಧ – 4ನೇ ಸ್ಥಾನಾರ್ಗಳ

2) ಶುಕ್ರನಿಂದ ದ್ವಿತೀಯ ಅರ್ಗಳ

3) ರಾಹುವಿನಿಂದ ಅರ್ಗಳ–(ವ್ಯಯ)

ರಾಶಿ ಪರಿತ್ವದಲ್ಲಿ – ಯಾವ ರಾಶಿಗೆ ಅರ್ಗಳವಾಗಿದೆಯೋ ಅದನ್ನು ವಿವರಿಸಿ, ಉಳಿದಂತೆ ಇಲ್ಲಿ ಅಥವಾ ಬಾಧಕವೆನ್ನಲಾಗಿದೆ.

1) ಕರ್ಕ–4ರಲ್ಲಿ – ರವಿ, ಬುಧ, ಚಂದ್ರ ಅರ್ಗಳ (ತೃತೀಯ ಶುಕ್ರ) ಬಾಧಕನಲ್ಲಿ ಏಕಾದಶ ಕೇತು – ಅರ್ಗಳ.

2) ಸಿಂಹ – ಬಾಧಕ.

3) ಕನ್ಯಾ – ದ್ವಿತೀಯ ರವಿ, ಚಂದ್ರ, ಬುಧ (ತೃತೀಯ ರಾಹು ನಿರ್ಬಲ) ಅರ್ಗಳ.

4) ತುಲಾ – ದ್ವಿತೀಯ ರಾಹು ನಾಲ್ಕರಲ್ಲಿ ಗುರು, ಮಂಗಳ ಅರ್ಗಳ (ವ್ಯಯ ಶುಕ್ರ ನಿರ್ಬಲ)

5) ವೃಶ್ಚಿಕ – ಏಕಾದಶ ಶುಕ್ರ ಆದರೆ ತೃತೀಯ ಗುರು, ಮಂಗಳ ಬಾಧಕ ಇಲ್ಲ.

6) ಧನು – ದ್ವಿತೀಯದಲ್ಲಿ ಗುರು, ಮಂಗಳ, ಏಕಾದಶ, ರವಿ, ಬುಧ, ಚಂದ್ರ – ದ್ವಾದಶ ರಾಹು ಹಾಗೂ ದಶಮ ಶುಕ್ರ ನಿರ್ಬಲರಾದ್ದರಿಂದ ಬಾಧಕವಿಲ್ಲ.

7) ಮಕರ – ಏಕಾದಶ ರಾಹು ಇದ್ದರೂ ರಶಮ ಚಂದ್ರ, ರವಿ, ಬುಧ, ತೃತೀಯ ಶನಿ – ಬಾಧಕವಿಲ್ಲ.

8) ದ್ವಿತೀಯದಲ್ಲಿ ಶನಿ ಇದ್ದರೂ ಕುಂಭಕ್ಕೆ ವ್ಯಯದಲ್ಲಿ ಗುರು, ಮಂಗಳ ಬಾಧಕವಿಲ್ಲ.

9) ಮೀನ 11ರಲ್ಲಿ ಗುರು, ಮಂಗಳ – ಏಕಾದಶದಲ್ಲಿ ತೃತೀಯದಲ್ಲಿ ಇದ್ದರೂ ನಿರ್ಬಲ ಬಾಧಕವಿಲ್ಲ.

10) ಮೇಷ – ದ್ವಿತೀಯ ಕೇತು ಇದ್ದರೂ ವ್ಯಯ ಶನಿ. ಬಾಧಕವಿಲ್ಲ.

11) ವೃಷಭ – ಏಕಾದಶದಲ್ಲಿ ಶನಿ – ಪೂರ್ಣಬಲ

12) 4ರಲ್ಲಿ ನಿರ್ಬಲ ಶುಕ್ರ – ಅಷ್ಟನಿರ್ಬಲ ಕೇತು ವ್ಯಯದಲ್ಲಿ ಹೀಗಾಗಿ ಅತಿ ದುರ್ಬಲ ಅರ್ಗಳವಿಲ್ಲ.

## ಗ್ರಹಾರ್ಗಳ

4ನೇ ಸ್ಥಾನ – ರವಿ, ಬುಧ, ಚಂದ್ರ

3ನೇ ಸ್ಥಾನ – ಶುಕ್ರ

5ನೇ ಸ್ಥಾನ – ರಾಹು

## ಸ್ಥಾನಾರ್ಗಳ ರಾಶಿ

1ನೇ ಸ್ಥಾನ ಕರ್ಕ ರಾಶಿ

3ನೇ ಸ್ಥಾನ ಕನ್ಯಾ ರಾಶಿ

4ನೇ ಸ್ಥಾನ ತುಲಾ ರಾಶಿ

6ನೇ ಸ್ಥಾನ ಧನು ರಾಶಿ

11ನೇ ಸ್ಥಾನ ವೃಷಭ ರಾಶಿ

ಈ ರೀತಿ ಅರ್ಗಳ ಸ್ಥಾನ ತಮ್ಮ ಕುಂಡಲಿಯಲ್ಲಿ ಗುರುತಿಸಿ ಫಲ ಹೇಳುವುದು.

### ಅರ್ಗಳ ಫಲ

ಪದೆ ಲಗ್ನೆ ಸಪ್ತಮೇ ವಾ ನಿರಾಭಾಸಾರ್ಗಲಾ ಯದಿ ।
ಪ್ರಸಿದ್ಧ ಪ್ರರ್ಹಿ ಸದ್ ಭಾಗ್ಯಶಾಲಿ ಜಾಯತೆ ಮಾನವಃ ॥೧೦॥

ಗ್ರಹ ಕ್ರೂರೋಥವಾ ಸೌಮ್ಯೋಯಸ್ಯ ನಿರ್ಬಾಧಕಾರ್ಗಲೆ ।
ಸ್ಥಿತಸ್ತದ್ ವೀಕ್ಷಿತೆ ಲಗ್ನೆ ಪ್ರಾಬಲ್ಯಯೋಪ ಕಲ್ಪತೆ ॥೧೧॥

ಅರ್ಗಲಾಯುಜೆ ವಿತ್ತೆತು ತಸ್ಯಸಂಪತ್‌ಸಮನ್ವಿತಃ ।
ವಿಕ್ರಮೆ ಸಹಜಾದೀನಾಂ ಸದಾ ಸುಖ ಮುದೀರಿತಮ್ ॥೧೨॥

ತಾದೃಶೆ ತುರ್ಯಭಾವೆ ತು ಗೇಹಾದಿ ಸುಖಸುತ್ತಮಮ್ ।
ಸುತೆ ತಥಾವಿಧೆ ಜಾತೆ ಮತಿಮಾನ್ ಸುತಸೌಖ್ಯವಾನ್ ॥೧೩॥

ಶತ್ರುಭಿಃ ಸಾರ್ಗಲೆ ಶತ್ರು ದ್ಯೂನೆ ಜಾಯಾದಿಜಂ ಸುಖಮ್ ।
ರಂಧ್ರೆ ತು ಬಹುಶಃ ಕ್ಲೇಶೋ ಭಾಗ್ಯೆಸ್ಯಾದ್ ಭಾಗ್ಯವಾಗ್ಜನಃ ॥೧೪॥

ರಾಜಪೂಜ್ಯೋ ನರೋ ವ್ಯೋಮ್ನಿ ಸದಾಯೇ ಸ್ಯಾದ್ಧನಾಗಮಃ ॥
ತಾದೃಶೆ ರಿಪ್ಪಭಾವೆತು ಸರ್ವತ್ರೈವ ವ್ಯಯೋಧಿಕಃ ॥೧೫॥

ಶುಭಗ್ರಹಾರ್ಗತಿ ನೂನಂ ಸುಖಂ ನೈಕವಿಧಂ ಸ್ಮೃತಾವಮ್ ।
ಪಾಪೇತು ತಾದೃಶೆ ಚಾಲ್ಪಂ ಮಿಶ್ರೇ ಮಧ್ಯಂ ವಿನಿರ್ದಿಶೇತ್ ॥೧೬॥

ತ್ರಿಕೋಣೆ ಸಾರ್ಗಲೆ ಜಾತೆ ಜಾಯತೆ ಯೋಹಿ ಜಾತಕಃ ।
ಸುಖ ಸೌಭಾಗ್ಯ – ಸಂಪನ್ನೋ ನೃಪೊ ವಾ ನೃಪಸನ್ನಿಭಃ ॥೧೭॥

ಪದ ಲಗ್ನ ಅಥವಾ ಸಪ್ತಮದಲ್ಲಿ ನಿರ್ಬಾಧ ಅರ್ಗಳವಿದ್ದರೆ ಜಾತಕನು ಸೌಭಾಗ್ಯಶೀಲ ಹಾಗೂ ವಿಖ್ಯಾತನಾಗುವನು. ಅವನ ಅರ್ಗಳ ಸ್ಥಾನದಲ್ಲಿ ಶುಭ ಅಥವಾ ಅಶುಭಗ್ರಹ ಅವಧಿತ ರೂಪದಲ್ಲಿದ್ದರೆ ಗ್ರಹ ದೃಷ್ಟಿ ಲಗ್ನದ ಮೇಲಿದ್ದರೆ – ಉಕ್ತಯೋಗ ಅತಿ ಪ್ರಬಲವಾಗುತ್ತದೆ (ಗೋಚಾರ) ಜಾತಕ ಪೂರ್ಣ ಸೌಭಾಗ್ಯಶಾಲಿ ಹಾಗೂ ವಿಖ್ಯಾತನಾಗುತ್ತಾನೆ. ಧನ ಹಾಗೂ ಸಹಜ ಭಾವದಲ್ಲಿ ಅರ್ಗಳವಾದರೆ ಧನಾದಿ ಸಂಪತ್ತಿನಿಂದ ಸಹಜ ಸೌಖ್ಯಯುತನೆಂದು ಹೇಳುವುದು. ತುರ್ಯಭಾವ (4) ಅರ್ಗಳವಾಗಿದ್ದ ಪಶುವಾದಿ ಸೌಖ್ಯ – ಮನೆಯ ಸೌಖ್ಯ, ಸುತ ಭಾವ ಅರ್ಗಳಸಹಿತವಾದರೆ ಜಾತಕ ಬುದ್ಧಿವಂತ ಹಾಗೂ ಪುತ್ರಸೌಖ್ಯಪೂರ್ಣ. ಆರನೇ ಸ್ಥಾನ ಅರ್ಗಳವಾದರೆ ಶತ್ರುಭಯ, ಸಪ್ತಮಾರ್ಗಳವಾದರೆ ಸ್ತ್ರೀ ಸುಖ, ಅಷ್ಟಮಾರ್ಗಳವಾದರೆ ಬಹುವಿಧಕ್ಲೇಶ, ನವಮ ಸಾರ್ಗಳವಾದರೆ ಭಾಗ್ಯವಂತ, ದಶಮಾರ್ಗಳವಾದರೆ ರಾಜ ಪೂಜ್ಯ, ಏಕಾದಶಾರ್ಗಳವಾದರೆ ಧನಾಗಮ, ವ್ಯಯ – ಸರ್ಗಳವಾದರೆ ಅತಿ ವೆಚ್ಚದ ಪ್ರಸಂಗ – ಶುಭ ಗ್ರಹದ ಅರ್ಗಳ ಅನೇಕವಾದರೆ ಪಾಪಗ್ರಹ ಅಲ್ಪಸುಖಿ – ಮಿಶ್ರಗ್ರಹ ಮಿಶ್ರಸುಖಿ, ಲಗ್ನ ನವಮ ಹಾಗೂ ಪಂಚಮ ಸರ್ಗಳವಾದರೆ ಜಾತಕ ತನ್ನ ವಿಷಯದಲ್ಲಿ ರಾಜನ ಸಮಾನ, ದಶಾಕಾಲದಲ್ಲಿ ಈ ಫಲ ವಿಶೇಷ.

ವಿಮರ್ಶೆ: ಈ ಅರ್ಗಳ ಹಾಗೂ ಪ್ರತಿಬಂಧಕಾದಿಗಳು ಜೈಮಿನಿ ಸೂತ್ರದಲ್ಲಿಯೂ ಸ್ಪಷ್ಟವಾಗಿ ನೋಡಲು ಸಿಗುತ್ತದೆ. ಇವು ದೃಶ್ಯ ದೃಷ್ಟ ಗ್ರಹಗಳ ಆಧಾರದ ಮೇಲಿಂದ ಸ್ವಾನುಭವದಿಂದ ಮಹರ್ಷಿಗಳು ಕಂಡುಕೊಂಡಿದ್ದಾರೆ. ಆದರೆ

ಬಹಳಷ್ಟು ಜನ ಜಾತಕಕಾರರು ಈ ವಿಷಯ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿಲ್ಲ. ಹೀಗಾಗಿ ನಮ್ಮ ಭವಿಷ್ಯ ಕಥನವೂ ಅಲ್ಪ ರೂಪವಾಗಿದೆ. ಮಹರ್ಷಿ ಜೈಮಿನಿ ತನ್ನ ಸೂತ್ರ ಅರ್ಗಳ ಯೋಗಕಾರಕ ಸೂತ್ರ 'ದುರಾಭಾಗ್ಯ ಶೂಲಸ್ಥಾ ಗರ್ಗಲಾ ನಿಧ್ಯಾತುಃ।' ಎಂದು ಹೇಳಿದ್ದಾರೆ. ಇಲ್ಲಿ ದಾರ ಭಾಗ್ಯಶೂಲದ ಆಶಯ ಚತುರ್ಥ, ದ್ವಿತೀಯ, ಏಕಾದಶ ಕ್ರಮಶಃ ಆಗುತ್ತವೆ. ಸಾಂಕೇತಿಕ ಆಧಾರದ ಮೇಲೆ ಈ ಅರ್ಥ ನಿಷ್ಪನ್ನ ವಾಗುತ್ತವೆ. ಸಾಂಕೇತಿಕ ಅರ್ಥ ನಿಷ್ಪಾದನಕ್ಕಾಗಿ 'ಕಟಪಯವರ್ಗ ಭವೈರಿಹ ಪಿಂಡಾನ್ತ್ಯೈರಕ್ಷರೈ ರಂಗಾಃ। ನತೆಚಸೂನ್ಯೆ ಜ್ಞೇಯ ತಥಾಸ್ವರೆ ಕೇವಲೆ ರುಧಿತಮ್।' ಎಂಬ ವೃದ್ಧಿಕಾರಿಕಾದ ಈ ವಚನ ಸರ್ವಥಾ ಆದರಣೀಯವೆ. ಅಂಕ ಜ್ಞಾನಕ್ಕಾಗಿ 'ಕಾ'ದಿ ಒಂಭತ್ತು, 'ಟಾ'ದಿ ಒಂಭತ್ತು, 'ಪಾ'ದಿ ಐದು, 'ಯಾ'ದಿ ಎಂಟು ಈ ನಾಲ್ಕು ವರ್ಗಗಳಿವೆ. ನಕಾರ ನ್ಯಕಾರ ಹಾಗೂ ಸ್ವರವನ್ನು ಶೂನ್ಯವೆಂದು ಪರಿಗಣಿಸಲಾಗಿದೆ. ಈ ನಿಯಮದ ಪ್ರಕಾರ ದಾರದ ಅರ್ಥ ಚತುರ್ಥ, ಭಾಗ್ಯದ ಅರ್ಥ ದ್ವಿತೀಯ, ಶೂಲದ ಅರ್ಥ ಏಕಾದಶವಾಗುತ್ತದೆ. ಇಲ್ಲಿ 'ಅಂಕಾನಾಮ ವಾಮತೋಗತಃ'ಯ ಅನುಸಾರ 'ಕಟಪಯಾದಿ' ವರ್ಗಾಧಾರದ ಮೇಲೆ ಬಂದ ಅಂಕದ ನ್ಯಾಸ ಮಾಡಿ ಭಾವಗಳ ಸಂಖ್ಯೆ 12 ಇದ್ದುದರಿಂದ 12ರಿಂದ ಭಾಗಿಸಲು ಭಾಗ 2 ಶೇಷದಿಂದ ಭಾವಬೋಧವಾಗುತ್ತದೆ. ದಾರದಲ್ಲಿ ದ್+ಆ+ರ್+ಅ= ಈ ನಾಲ್ಕು ವರ್ಣಗಳಿವೆ. ದ, ರದ ಸಲುವಾಗಿ 28 ಅಂಕ ಉಪಲಬ್ದ ಸ್ವ ಆ, ಅ ಗಳಿಗೆ ಶೂನ್ಯ – ಉಪಲಬ್ದ 28 ಮಾತ್ರ – 28(ಭಾಗಿಸುವ ಚಿಹ್ನೆ)12= 4 ಶೇಷ ಉಳಿಯುವುದ ರಿಂದ ದಾರದಿಂದ 4ನೇ ಭಾವ. ಇದೇ ರೀತಿ ಭಾಗ್ಯದಿಂದ ದ್ವಿತೀಯ, ಶೂಲದಿಂದ ಏಕಾದಶ ಭಾವದ ಬೋಧವಾಗುವುದು. ಈ ರೀತಿ ಮಹರ್ಷಿ ಜೈಮಿನಿ ದ್ವಾರಾ ಪ್ರತಿಪಾದಿತ ಅರ್ಗಳ ಯೋಗವು ಪರಾಶರರು ಹೇಳಿದ 'ತುರ್ಯೋ ದ್ವಿತೀಯೇ ಲಾಭೆ ಚ ಗೃಹೆ ಸತಿ ತು ಅರ್ಗಲಾ' – ಒಂದೇ ಎಂಬುದು ನಿರ್ವಿವಾದ ಜೈಮಿನಿಗಳು ಮುಂದುವರಿದು 'ಕಾಮಸ್ಥಾ ಭೂಯಸಾ ಪಾಪನಾಮ್' ಎಂದು ಹೇಳಿರುವುದರ ತಾತ್ಪರ್ಯ ತೃತೀಯ ಸ್ಥಾನ ಸ್ಥಿತ ಅರ್ಗಳ ಪಾಪಗ್ರಹಗಳ ಬಹಳ ಸಂಖ್ಯೆಯಿಂದಾಗು ತ್ತದೆ. ಅರ್ಥಾತ್ ದೃಷ್ಟಾದಿಂದ ತೃತೀಯ ಸ್ಥಾನದಲ್ಲಿ ಎರಡರಿಂದ ಅಧಿಕ ಪಾಪಗ್ರಹವಿದ್ದರೆ ನಿರ್ಬಾಧ ಅರ್ಗಳವಾಗುತ್ತದೆ. ಪರಾಶರರು 'ತೃತೀಯೋ ಬಹವಃ ಕ್ರೂರಾಯತ್ರ ಬಾಧಾವಿಧಾಯನಃ ವಿಪರೀತಾರ್ಗಲ ವೇದ್ಯ ತತ್ರಾಪಿ ಮುನಿಸುತ್ತಮ' ಎಂದಿದ್ದಾರೆ.

ಈ ಅಂಶದಿಂದ ನಿರ್ಬಂಧ ಅರ್ಗಳವೇ ವ್ಯಕ್ತವಾಗುತ್ತದೆ. ಜೈಮಿನಿಯವರು ಬಾಧಕ ಸ್ಥಾನ ಹಾಗೂ ಪ್ರತಿಬಂಧಖಿಬಲಾಶ್ಚ' ಈ ಎರಡು ಸೂತ್ರಗಳ ಮತಿತಾರ್ಥ ರಿಪ್ಪನೀಚ ಕಾಮದ ಅರ್ಥ ಪೂರ್ವೋಕ್ತ ರೀತಿಯಿಂದ ದಶಮ, ದ್ವಾದಶ ಹಾಗೂ

ತೃತೀಯನೆ ಆಗುತ್ತದೆ. ಚತುರ್ಥ ಸ್ಥಾನಸ್ಥ ಅರ್ಗಲಕ್ಕೆ, ದಶಮ ಭಾವಸ್ಥಗ್ರಹ ಬಾಧಕ, ದ್ವಿತೀಯ ಸ್ಥಾನ ಅರ್ಗಳಕ್ಕೆ ದ್ವಾದಶಸ್ಥ ಗ್ರಹ ಹಾಗೂ ಏಕಾದಶಾರ್ಗಳಕ್ಕೆ ತೃತೀಯ ಭಾವಗತಗ್ರಹ ಬಾಧಕ ಇಲ್ಲಿ ಅಪೇಕ್ಷ ಸಂಖ್ಯಾ ನ್ಯೂನ ನಿರ್ಬಲವಾದರೆ – ಪ್ರತಿಬಂಧ ಅರ್ಥಹೀನವಾಗುತ್ತದೆ.

**ಪರಾಶರರು ಉವಾಚ:**

ತಯಾಸ್ತು ಬಾಧಕಾ ಖೇಟಾ ವ್ಯೋಮರಿಷ್ಪ ತೃತೀಯಗಾಃ ।
ದುರ್ಬಲಾಃ ಸ್ವಲ್ಪಸಂಖ್ಯಾವಾ ಖೇಟಾಃ ಸ್ಯುನ್ನೈವ ಬಾಧಕಾಃ ॥

ಈ ಈರ್ವರ ವಿಷಯವು ಒಂದೇಯಾಗಿದೆ. ಅವರವರ ಶೈಲಿ ಮಾತ್ರ ಭಿನ್ನ. ಪರಾಶರರು ಅತಿ ಆಡು ಭಾಷೆಯಲ್ಲ, ಸರಳವಾಗಿ ವಿಸದೀಕಲಿಸಿದರೆ ಜೈಮಿನಿ ಯವರು ಸೂತ್ರ ರೂಪವಾಗಿ ಹೇಳಿದ್ದಾರೆ. ಇಲ್ಲಿ ಅನುಕರಣ ಪ್ರಶ್ನೆಯಲ್ಲಿ ಈರ್ವರ ಮಹರ್ಷಿಗಳಾದ್ದರಿಂದ ತಮ್ಮ ಜ್ಞಾನ ದೃಷ್ಟಿಯಿಂದಲೇ ಕಂಡುಕೊಂಡ ಸತ್ಯ. ಇರ್ವರ – ಪ್ರಾಚೀನತೆಯು – ಅದರ ಪ್ರಮಾಣವು ಜಟಿಲವೆ. ಆದರೆ ಇವರ ಗ್ರಂಥಗಳಲ್ಲಿ ಅರ್ಗಳದ ವಿಷಯ ಪ್ರತಿಪಾದನೆ ವಿಶಿಷ್ಟ ಅಭಿಧಾನದಿಂದ ಕೂಡಿವೆ.

ಫಲ ನಿರ್ದೇಶನ ಪ್ರಮುಖ ಅಂಶವಾಗಿದೆ ಹಾಗೂ ವಿಶಿಷ್ಟವಾಗಿದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅರ್ಗಳ ಫಲಾಧ್ಯಾಯಃ ಸಮಾಪ್ತಿ

   

# ಅಥ ಕಾರಕಾಧ್ಯಾಯಃ

ಪರಾಶರ ಉವಾಚ:

ಅಥ ವಕ್ಷ್ಯಾಮಿ ಖೇಟಾನಾಮಾತ್ಮಪ್ರಭೃತಿಕಾರಕಾನ್ ।
ಸೂರ್ಯಾದಿ ಮಂದಪರ್ಯಂತಾನ್ ರಾಹ್ವಂತಾನ್ ವಾ ದ್ವಿಜೋತ್ತಮ ॥೧॥

ಯದಿಖೇಟೌ ಸಮಾಂಶೌ ರಾಹ್ವಂತಾನ್ ಗುಣಯೇದ್ ದ್ವಿಜ ।
ಏವಂ ಸಪ್ತಾಥವಾಷ್ಟಾ ಸ್ಯುಃ ಕಾರಕಃ ಸಮ್ಮತಾಃ ಸತಾಮ್ ॥೨॥

ಮಧ್ಯೆ ರವ್ಯಾದಿ ಖೇಟಾನಾಂ ಯೋಗ್ರಹೋಂಶಾದಿಕೋ ಭವೇತ್ ।
ಸ ವೇದ್ಯಃ ಕಾರಕಾಧೀಶೋ ಬುಧ್ಯೈರಾತ್ಮಾಖ್ಯಕಾರಕಃ ॥೩॥

ಕಲಾಧಿಕಸ್ತ್ವ ರ ಸಾಮ್ಯೆ ಕಲಾ ಸಾಮ್ಯೆ ಗ್ರಹೋ ಮುನೆ ।
ವಿಕಲಾಧಿಕ ಏವಾತ್ಮಾಭಿಧಃ ಕಾರಕ ಉಚ್ಯತೆ ॥೪॥

ನ ಭವೇದ್ರಾಶಿಕಲಯೋ ರಾಧಿಕ್ಯಾದಾತ್ಮ ಕಾರಕಃ ।
ಕಾರಕೋ ರಾಧಿಕೋ ಗ್ರಾಹ್ಯೋಹ್ವಾಲ್ಪಾಂಶಃ ಕಾರಕೋಂತಮಃ ॥೫॥

ಮಧ್ಯಾಂಶೋ ಮಧ್ಯ ಖೇಟಃ ಸ್ಯಾದುಪಖೇಟಃ ಸ ಏವ ಹಿ ।
ವಿಪರೀತಗತೆರ್ಭಾಗಾ ಅಗೋಃ ಶೋಧ್ಯಾನಭೋಗ್ನಿತಃ ॥೬॥

ಭಾಗಕ್ರಮಾದಧೋಧಃ ಸ್ಥಾನಭೋಗಾತ್ಸರಕಾರಕಾಃ ।
ತೇಷಾಂ ಮಧ್ಯೆ ಪ್ರಧಾನಂ ಸ್ಯಾದಾತ್ಮಕರಕ ಏ ವಹಿ ॥೭॥

ಸ ಏವ ಜಾತಕೆಶೋಪಿ ಮುನೆ ಸದ್ಭಿಗುದೀರಿತಃ ।
ಯಥಾ ಭೂಮೌ ಪ್ರಸಿದ್ಧೋಸ್ತಿ ನರಾಣಾಂ ಕ್ಷಿತ ಪಾಲಕಃ ॥೮॥

ಸರ್ವವಾರ್ತಾಧಿಕಾರಿ ಚ ಬಂಧು ಕೃನ್ಮೋಕ್ಷಕೃತ ತಥಾ ।

ಪರಾಶರರು ಹೇಳಿದರು–

ಹೇ ಮೈತ್ರೇಯ, ಈಗ ನಾನು ಸೂರ್ಯಾದಿ – ಶನಿ ಪರ್ಯಂತ ಸಪ್ತಗ್ರಹಗಳ ಅಥವಾ ಸೂರ್ಯಾ, ರಾಹು ಸಹಿತ ಎಂಟು ಗ್ರಹಗಳ ಕುರಿತು ಆತ್ಮಾದಿಕಾರಕವನ್ನು

ಹೇಳುತ್ತೇನೆ – ಒಂದು ವೇಳೆ ಎರಡು ಗ್ರಹಗಳು ಅಂಶಾಧಿಕದಲ್ಲಿ ಸಮಾನವಾಗಿದ್ದರೆ – ರವ್ಯಾದಿ 8 ಗ್ರಹಗಳ (ರಾಹುವಿನವರೆಗೆ) ವಿಚಾರ ಮಾಡುವುದು – ಈ ಸೂರ್ಯಾದಿ ಗ್ರಹಗಳಲ್ಲಿ ಯಾವುದು ಅಧಿಕ ಅಂಶವುಳ್ಳದ್ದಾಗಿರುವುದೋ ಅದು ಆತ್ಮಕಾರಕ. (ಎಂಟು ಗ್ರಹ ವಿಚಾರವೂ ವಿದ್ವಾಂಸರ ಮತ) ಅಂಶಗಳಲ್ಲಿ ಎರಡು ಗ್ರಹಗಳು ಸಮಾನವಾಗಿದ್ದರೆ ಕಲಾ ನೋಡುವುದು ಕಲೆಯಲ್ಲಿಯೂ ಸಮಾನವಾದರೆ ವಿಕಲೆ – ನೋಡಿ ಆತ್ಮಾದಿಕಾರಕ ಹೇಳುವುದು – ಅಂಶ ಕಲೆ, ವಿಕಲೆ, ಪ್ರವಿಕಲೆಯಲ್ಲಿ ಸಮಾನವಾಗಿದ್ದರೆ ಬಲ(ಲಿ)ಗ್ರಹವನ್ನು – ಗಣಿಸುವುದು – ರಾಶಿಯಿಂದ ಅಧಿಗತೆ ನೋಡಕೂಡದು. ಅದರಂತೆ ಕೇವಲ ಕಲೆ ಅಧಿಕವಾಗಿದ್ದರೂ ಪರಿಗಣಿಸಕೂಡದು. ಅಂಶ ಕಲೆ, ವಿಕಲೆ ಈ ರೀತಿಯೇ ಪರಿಗಣಿಸುವುದು. ಆತ್ಮಕಾರಕ ಹಾಗೂ ಸರ್ವಾಲ್ಪ ಅಂಶದ ಗ್ರಹ ಅಂತಿಮಕಾರಕವಾಗುತ್ತದೆ. ಮಧ್ಯ ಅಂಶವಿದ್ದ ಗ್ರಹ ಮಧ್ಯಗ್ರಹ ಅದಕ್ಕೆ ಉಪಗ್ರಹವೆಂದು ಕರೆಯಲಾಗುತ್ತದೆ. ವಿಪರೀತ ಗತಿಯ ರಾಹು ಇತ್ಯಾದಿ ಗ್ರಹಗಳ ಕಾರಕ ವಿಚಾರ ಮಾಡುವಾಗ – ವಕ್ರಗತಿ ಗ್ರಹಗಳ ಅಂಶಾದಿಗಳನ್ನು 30 ಡಿಗ್ರಿಯಲ್ಲಿ ಕಳೆದು ಶೇಷ ಅಂಶ ಕಾರಕ್ಕೆ ಹಿಡಿಯುವುದು. ಈ ಪ್ರಕಾರ ಅಂಶಾನು ಕ್ರಮದಿಂದ ಚರಕಾರಕವಾಗುತ್ತವೆ. ಆದರೆ ಪ್ರಧಾನ ಆತ್ಮಕಾರಕವೇ ಆಗುತ್ತದೆ. ಅದನ್ನೇ ಜಾತಕೇಶನೆಂದು ಕರೆಯುತ್ತಾರೆ. ಪೃಥ್ವಿಯಲ್ಲಿ – ಮನುಷ್ಯರ ಮಧ್ಯೆ (ರಾಜ) ಈಗ ರಾಷ್ಟ್ರಪತಿ ಎಲ್ಲ ವಿಷಯ ಅಧಿಕಾರಿ ಎನ್ನುತ್ತೇವೆಯೋ ಹಾಗೆ – ಆತ್ಮಕಾರಕಗ್ರಹವನ್ನು ಪರಿಗ್ರಹಿಸುವುದು.

ಯಥಾ ರಾಜಾಜ್ಞಯಾ ಷಿಪ್ರ । ಪುತ್ರಾಮಾತ್ಯಾದಯಃ ಸದಾ ।<br>
ಸಮರ್ಥಾ ಲೋಕಕಾರ್ಯೇಷು ತಥೈವಾನ್ಯೇಪಿ ಕಾರಕಃ ॥೯॥

ಆತ್ಮಾನುಕೂಲ ವಶತಃ ಸ್ಯುಃ ಸ್ವಕೀಯ ಫಲ ಪ್ರದಾಃ ।<br>
ಯಥಾ ವಿರುದ್ಧೇ ನೃಪತೌ ಸರ್ವೇಮಾತ್ಯಾದಯೋ ದ್ವಿಜ ॥೧೦॥

ನ ಕಾರ್ಯ ಕರ್ತುಮಾತ್ಮೀಯಜನಾನಂ ಪ್ರಭವಂತಿ ಹಿ ।<br>
ತಥಾ ಸತ್ಫಲದಾ ನಾನ್ಯೆ ವಿರುದ್ಧೆ ತ್ವಾತ್ಮಕಾರಕೆ ॥೧೧॥

ಯಥಾನುಕೂಲೆ ನೃಪತೌ ಸಮೇಮಾತ್ಯಾದಯೇ ಮುನೆ ।<br>
ನ ಕ್ಷಮಾಃ ಕರ್ತುಮ ಶುಭಂ ತಥಾನ್ಯೆ ನಾಶುಭಪ್ರದಾಃ ॥೧೨॥

ಹೇ ಮೈತ್ರೇಯನೆ, ರಾಜನ ಆಜ್ಞೆಯಂತೆ ರಾಜಕುಮಾರ ಆದಿ ಮಂತ್ರಿ ಹಾಗೂ ಇತರರೆಲ್ಲರೂ ಜನಕಾರ್ಯದಲ್ಲಿ ಸಮರ್ಥರಾಗುತ್ತಾರೋ ಆ ರೀತಿ ಆತ್ಮಕಾರಕ ಗ್ರಹದಿಂದ, ಅದರ ಅನುಕೂಲತೆಯಿಂದ ತಮ್ಮ ತಮ್ಮ ಫಲ ಪ್ರದಾನ ಮಾಡುತ್ತವೆ

– ರಾಜನ ಆಜ್ಞೆಯಿಲ್ಲದೆ ಮಂತ್ರಿ ಆದಿಗಳು ಕೂಡ ಕಾರ್ಯ ನಿರ್ವಹಿಸಲು ಅಸಮರ್ಥರೋ ಹಾಗೆ ಆತ್ಮಕಾರಕ ಗ್ರಹದ ಬಲದಿಂದ ಎಲ್ಲ ಗ್ರಹಗಳು ಕಾರ್ಯ ನಿರ್ವಹಿಸುತ್ತವೆ – ಆತ್ಮಕಾರಕ ಗ್ರಹ ಪ್ರತಿಕೂಲವಿದ್ದರೆ ಯಾವ ಕಾರಕಗಳ ಶುಭ ಫಲವು – ಸಮರ್ಥವಾಗಿ ಉಪಯೋಗಕ್ಕೆ ಬರಲಾರವು – ಅಂದರೆ ಶುಭ ಫಲ ಕೊಡಲಾರವು – ರಾಜನು ಅನುಕೂಲನಾಗಿದ್ದರೆ – ಅಮಾತ್ಯಗಣ ಸಹಿತ ಎಲ್ಲರೂ ಅನುಕೂಲಕರರೆ. (ಆತ್ಮಕಾರಕಗ್ರಹ ರಾಜನಿದ್ದಂತೆ – ಅಂದರೆ ಕುಂಡಲಿಯಲ್ಲಿ ಪ್ರಧಾನ ಗ್ರಹ)

## ಅನ್ಯಕಾರಕಗಳು

ಆತ್ಮಕಾರಕಗಂಶೆಭ್ಯಃ ಸ್ವಲ್ಪಾಂಶೋಮಾತ್ಯಕಾರಕಃ ।
ತದೂನಭಾಗಕೋ ಭ್ರಾತಾ ತದಲ್ಪೋ ಮಾತೃಕಾರಕಃ ॥೧೩॥

ತದಲ್ಪಾಂಶಸ್ತು ಜನಕಃ ತದೂನಾಂಶಃ ಸುತಾಭಿಧಃ ।
ತದೂನಭಾಗಕೋ ಜ್ಞಾತಿರ್ಹೀನಭಾಗಸ್ತತಸ್ತು ಯಃ ॥೧೪॥

ಸ ಏವ ಮುನಿಭಿಃ ಪ್ರೋಕ್ತಃ ಕಾರಕೋ ದಾರಸಂಜ್ಞಕಃ ।
ಬ್ರಹ್ಮಣೈವ ಪುರಾ ಪ್ರೋಕ್ತಾಃ ಸಪ್ತೈತೆ ಚರ ಕಾರಕಾಃ ॥೧೫॥

ಜನನೀಕಾರಕಂ ಕೇಚಿದಾಮನಂತಿ ಸುತಾಭಿಧಮ್ ।
ಅಂಶೌ ಸಮಮೌ ಗ್ರಹೌ ದ್ವೌಚ ಜಾಯೇತಾಂ ಯಸ್ಯಜನ್ಮನಿ ॥೧೬॥

ತತೋಗ್ರಿಮಃ ಕಾರಕಸ್ತು ವಿಪ್ರ ಲುಪ್ಯತಿ ನಿಶ್ಚಿತಮ್ ।
ತತ್ಫಲಂ ಸದಸಜ್ಞೇಯಂ ಸ್ಥಿರ ಕಾರಕತೋ ಮುನೆ ॥೧೭॥

ಆತ್ಮಕಾರಕ ಗ್ರಹಕ್ಕಿಂತ ಅಲ್ಪಅಂಶವುಳ್ಳದ್ದು ಅಮಾತ್ಯಕಾರಕ – ಅದಕ್ಕೂ ಕಡಿಮೆಯಿದ್ದುದು ಭ್ರಾತೃಕಾರಕ, ಅದಕ್ಕೂ ನ್ಯೂನವಿದ್ದುದು – ಮಾತೃಕಾರಕ, ಅದಕ್ಕಿಂತ ಕಡಿಮೆಯಿದ್ದುದು ಪಿತೃಕಾರಕ, ಅದಕ್ಕೂ ಕಡಿಮೆಯಿದ್ದ ಗ್ರಹ ಪುತ್ರಕಾರಕ, ಅದಕ್ಕಿಂತ ಕಡಿಮೆ ಅಂಶವುಳ್ಳದ್ದು ಜ್ಞಾತಕಾರಕ, ಅದಕ್ಕೂ ಕಡಿಮೆಯಿದ್ದುದು ಸ್ತ್ರೀಕಾರಕವಾಗುತ್ತದೆ. ಈ ಏಳು ಕಾರಕಗಳನ್ನು ಬ್ರಹ್ಮದೇವರು ಹೇಳಿದ್ದಾರೆ. ಕೆಲ ಆಚಾರ್ಯರು ಭ್ರಾತೃಕಾರಕವನ್ನೇ ಪುತ್ರಕಾರಕವೆನ್ನುತ್ತಾರೆ. ಒಂದುವೇಳೆ ಎರಡು ಗ್ರಹ ಅಂಶಾದಿ – ತುಲ್ಯ ಸಮಾನತೆಯಾಗಿ ಎರಡು ಒಂದೇ ಕಾರಕವೆಂದು ಮುಂದಿನದು ಲಿಪ್ತಕಾರಕವೆಂದು ಗ್ರಹಿಸುತ್ತಾರೆ. ಈ ಸ್ಥಿತಿಯಲ್ಲಿ ಅಗ್ರಿಮಕಾರಕದ ಶುಭಾಶುಭದ ಫಲಾದೇಶ ಸ್ಥಿರಕಾರಕಾದಿಗಳ ಮೇಲಿಂದಲೂ ಹೇಳುತ್ತಾರೆ.

## ಉದಾಹರಣೆ

### ಉದಾಹರಿತ ಕುಂಡಲಿಯ ಸ್ಪಷ್ಟಗ್ರಹಗಳು—(8)

| ಗ್ರಹ ಅಂಶಕಲಾ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು ರಾ |
|---|---|---|---|---|---|---|---|---|
| ರಾಶಿ | 6 | 6 | 9 | 6 | 9 | 5 | 11 | 7 |
| ಅಂಶ | 17 | 24 | 4 | 19 | 1 | 26 | 2 | 14 |
| ಕಲಾ | 35 | – | 44 | 01 | 14 | 31 | 47 | 18 |
| ವಿಕಲಾ | – | – | – | – | – | – | – | – |
| ಅವಸ್ಥೆ | – | – | – | ಅಸ್ತ | – | ಉದಯ | ವಕ್ರ | ವಕ್ರ |

ಇಲ್ಲಿ ರಾಹು, ಶನಿ, ವಕ್ರ ಗ್ರಹಗಳಾದ್ದರಿಂದ 30 ಡಿಗ್ರಿಯಲ್ಲಿ ಕಳೆಯಲಾಗಿದೆ.

ಶನಿ – (30 – 0 – 0) – (2 – 47 – 0) = 11 – $27^0$ – 13'

ರಾಹು – (30 – 0 – 0) – (14 – 18 – 0) = 7 – $15^0$ – 32'

ಶನಿ – $27^0$ – 13' (ಅತೀ ಹೆಚ್ಚು) = ಆತ್ಮಕಾರಕ

ಶುಕ್ರ – $26^0$ – 31' – ಅಮಾತ್ಯಕಾರಕ

ಚಂದ್ರ – $24^0$ – 0' ಭ್ರಾತೃಕಾರಕ

ಬುಧ – $19^0$ – 01 (ಯುದ್ಧ ಜಯಿಸಿದ್ದಾನೆ) ಮಾತೃಕಾರಕ

ರವಿ – $17^0$ – 35' ಪಿತೃಕಾರಕ

(ಎರಡು ಗ್ರಹಗಳು ಸಮಾನಾಂಶದಲ್ಲಿ ಇಲ್ಲದಿರುವುದರಿಂದ ರಾಹುವನ್ನು ಪರಿಗಣಿಸುವ ಅವಶ್ಯಕತೆಯಿಲ್ಲ)

ಮಂಗಳ – $4^0$ – 44' ಪುತ್ರಕಾರಕ

ಗುರು – $1^0$ – 14' ಸ್ತ್ರೀಕಾರಕ

ಇವು ಚರಕಾರಕ – ಅಂದರೆ ಈ ಜಾತಕನಿಗೆ ಮಾತ್ರ ಕಾರಕ ಗ್ರಹಗಳು – ಅತಿ ಮಹತ್ವದ ಗ್ರಹ ಶನಿ ನವಮದಲ್ಲಿರುವುದರಿಂದ ಜೀವನದಲ್ಲಿ ಅವನ ಪ್ರಭಾವ ಹೆಚ್ಚು.

ಈ ರೀತಿ ಎಲ್ಲ ಕುಂಡಲಿಗಳಿಗೂ ಕಾರಕಗ್ರಹಗಳನ್ನು ಕಂಡುಹಿಡಿದು ಆ ಗ್ರಹಗಳ ಪ್ರಭಾವವನ್ನು ಹೇಳುವುದು.

ಅಥ ಸ್ಥಿರನ್‌ಕಾರಕಾಂಸ್ತೆ ಕಥಯಾಮಿ ದ್ವಿಜೋತ್ತಮ ।
ಬಲವಾನ್‌ರ್ಕ ಸಿತಯೋಃ ಸ ವೇದ್ಯಃ ಪಿತೃಕಾರಕಃ ॥೧೮॥

ಗ್ರಹೋ ಬಲೀಂದು ಕುಜಯೋಃ ಕಥ್ಯತೆ ಮಾತೃಕಾರಕಃ ।
ಕುಜಾತ್ ಸ್ವಸಾಪಿ ಚ ಶ್ಯಾಲೋನುಜೋ ಮಾತಾಪಿ ಚಿಂತ್ಯತೆ ॥೧೯॥

ಬುಧತೋ ಮಾತೃಜಾತೀಯಾ ವಿಜ್ಞೇಯಾ ಮಾತುಲಾದಯಃ ।
ಜೀವಾತ್ ಪಿತಾಮಹಃ ಸ್ವಾಮಿ ಸಿತತಃ ಶನಿತಃ ಸುತಾಃ ॥೨೦॥

ಕೇತುತಃ ಸ್ತ್ರೀ ಪಿತಾ ಮಾತಾ ಶ್ವಶ್ರೂಃ ಶ್ವಶುರ ಏವಚ್ಚ ।
ಮಾತಾಮಹಪ್ರಭೃತಯೋ ವಿಚಾರ್ಯಾಃ ಸ್ಥಿರಕಾರಕೈಃ ॥೨೧॥

ಮೈತ್ರೇಯನೆ, ಈಗ ಸ್ಥಿರಕಾರಕ ಗ್ರಹಗಳ ಬಗ್ಗೆ ಹೇಳುತ್ತೇನೆ – ಸೂರ್ಯ, ಶುಕ್ರರಲ್ಲಿ ಬಲಿ ಪಿತೃಕಾರಕ, ಚಂದ್ರ ಭೌಮರಲ್ಲಿ ಪ್ರಬಲ ಗ್ರಹ ಮಾತೃಕಾರಕ, ಮಂಗಳನಿಂದ ಅಕ್ಕ, ತಂಗಿ – ಅಳಿಯ, ತಮ್ಮ ಹಾಗೂ ತಾಯಿ ವಿಚಾರ ಮಾಡಲು ಬರುವುದು. ಬುಧನಿಂದ ಮಾತೃಪಕ್ಷೀಯ – ಜನರು ಅಜ್ಜ ಇತ್ಯಾದಿ ಗುರುವಿನಿಂದ ಪಿತಾಮಹ, ಶುಕ್ರನಿಂದ ಸ್ವಾಮಿ (ಅಧಿಕಾರಿ), ಶನಿಯಿಂದ ಮಕ್ಕಳು, ಕೇತುವಿನಿಂದ ಸ್ತ್ರೀಯ ವಿಚಾರ ಪಿತಾ, ಮಾತಾ, ಅತ್ತೆ, ಮಾವ, ತಾಯಿಯ ತಾಯಿಗಳ ವಿಚಾರ ಮಾಡಲು ಬರುತ್ತದೆ – ಇದಕ್ಕೆ ಸ್ಥಿರ ಕಾರಕವೆನ್ನುವರು.

ವಿಮರ್ಶೆ : ಈ ಕಾರಕಾದಿ ವಿಷಯದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ನಾಡಿ ಗ್ರಂಥದರಂತೆ ಕಾರಕಾದಿಗಳ ವಿಷಯವೇ ಭಿನ್ನವಾಗುತ್ತದೆ – ಸ್ವಲ್ಪ ಭಿನ್ನತೆ ಎದ್ದು ತೋರುತ್ತದೆ. ಇಲ್ಲಿ ಜೈಮಿನಿ ಸೂತ್ರಕಾರರು – ತಮ್ಮ ಆತ್ಮ ಕಾರಕ ಸೂತ್ರದಲ್ಲಿ – 'ಆಸ್ಮಾಧಿಕಃ ಕಲಾದಿಭಿರ್ನಭೋಗಃ ಸಪ್ತನಾಮಷ್ಟಾನಾಂ ವಾ' – ಎಂದಿರುವುದು 'ಕಲಾದಿಭಿಃ' ಎಂಬುದರ ಅರ್ಥ ಅಂಶಾದಿಬಿಃ ಎಂದೇ ತೆಗೆದುಕೊಳ್ಳುವುದು – ಇಲ್ಲವಾದಲ್ಲಿ ಚರಕಾರಕದ ಅಂಶವೇ ತಪ್ಪುತ್ತದೆ. ಅದರ ನಂತರ – 'ತಸ್ಯಾನುಸರಣಾದಮಾತ್ಯಃ ತಸ್ಯ ಭ್ರಾತಾ, ತಸ್ಯ ಮಾತಾ, ತಸ್ಯ ಪುತ್ರಃ, ತಸ್ಯ ಜ್ಞಾತಿ, ತಸ್ಯ ದಾರಾಶ್ಚ ಮಾತ್ರಾ ಸಹ ಪುತ್ರಮೇಕೆ ಸಮಾಮನಂತಿ' ಈ ಎಂಟು ಸೂತ್ರದಲ್ಲಿ ಎಲ್ಲ ವಿಷಯವನ್ನು ಮನದಟ್ಟಾಗುವಂತೆ ವಿವರಿಸಿದ್ದಾರೆ. ಇದೇ ಅಂಶವನ್ನು ಪರಾಶರರು ಈ ಅಧ್ಯಾಯದ ಆರಂಭದಿಂದ 151/2 ಶ್ಲೋಕಗಳಲ್ಲಿ ವ್ಯಕ್ತ ಮಾಡಿದ್ದಾರೆ. ಆತ್ಮಕಾರಕದ ಪ್ರಧಾನತೆಯನ್ನು ಜೈಮಿನಿಗಳು ವ್ಯಕ್ತ

ಮಾಡಿದ್ದಾರೆ – ಆದರೆ ಪರಾಶರರಿಂದ ಭಿನ್ನವಾಗಿದೆ. ಸ್ಥಿರ ಕಾರಕವನ್ನು ಜೈಮಿನಿಗಳು 'ಭಗಿನ್ಯಾರತಃ ಶ್ಯಾಲಃ ಶನಿಚಾನ್ ಜನನಿ ಚ' ಅರ್ಥಾತ್ ಮಂಗಳನಿಂದ ಅಕ್ಕ, ತಂಗಿ, ಅಳಿಯ, ಚಿಕ್ಕತಮ್ಮ, ತಾಯಿ ವಿಚಾರ ಮಾಡಲು ತಿಳಿಸಿದ್ದಾರೆ. 'ಮಾತುಲಾದಯೋ ಬಂದವೋ ಮಾತೃ ಸಜಾತಿಯಾ ಇತ್ಯುತ್ತರತಃ' ಬುಧನಿಂದ ಮಾತುಲ ಪಕ್ಷದ ವಿಚಾರ ಮಾಡಲು ತಿಳಿಸಿದ್ದಾರೆ. 'ಪಿತಾಮಹಃ ಪತಿ ಪುತ್ರೌ ಗುರು ಮುಖಾದೇವ ಜಾನೀಯಾತ್' ಗುರುವಿನಿಂದ ಪಿತಾಮಹ ಪತಿ ಪುತ್ರಾದಿಗಳ ವಿಚಾರ ಹೇಳಿದ್ದಾರೆ. ಮುಂದಿನ ಸೂತ್ರದಲ್ಲಿ ಜೈಮಿನಿಗಳು 'ಪತ್ನಿ ಪಿತರೌ ಶ್ವಶುಕಾ ಮಾತಾ ಮಹಃ ಇತ್ಯಂತೆ ವಾಸಿನಃ' ಎಂದು ಅಂತೆದಾಸಿಯ ಅರ್ಥ ವಿದ್ಯಾರ್ಥಿ ಎಂದು ಪರಿಗಣಿಸುವುದು. ಅನರಂತೆ ಕೆಲವು ವಿದ್ವಾಂಸರು ಗುರುವಿನ ಶಿಷ್ಯ ಶುಕ್ರನೆಂದು ತಿಳಿದು ಶುಕ್ರನಿಂದ ಸ್ತ್ರೀ ಮಾತಾ, ಪಿತಾ ಮಾವ, ಅತ್ತೆ, ಮಾತಾಮಹರ ವಿಚಾರ ಮಾಡಲು ತಿಳಿಸಿದ್ದಾರೆ. ಆದರೆ 'ಅಂತೋದಾಸಿ'ಯ ಯೌಗಿಕಾರ್ಥವು. ಗ್ರಹಗಳ ಅಂತ ಪರಿಗಣಿತ ಆಗುವುದರಿಂದ – ಕೇತು ಗ್ರಹವು ಆಗುತ್ತದೆ. ಕೇತು ಗ್ರಹದ ಪರಿಗಣನೆ ಯನ್ನು ಪರಾಶರರು ಮಾಡಿದ್ದಾರೆ. ಹೀಗಾಗಿ ಕೇತು ಸ್ಥಿರಕಾರಕನೆನ್ನಲು ಯಾವ ತೊಂದರೆಯಿಲ್ಲ – ಇಲ್ಲಿ – ಸಾಮಾನ್ಯದಲ್ಲಿ ಎರಡು ಅಂದರೆ ಜೈಮಿನಿ ಪರಾಶರೋಕ್ತಿಗಳು ಸಾಮ್ಯಯುತವಾಗಿವೆ. ನಂತರದ ನಾಡಿ ಆದಿ ಗ್ರಂಥಗಳ ಕಾರಕತ್ವವನ್ನು ಪಂಡಿತರು ತಮ್ಮ ಅನುಭವದಿಂದ ಸಿದ್ಧವಾದ ನಂತರವೇ ವಿವರಿಸುವುದು.

ಕಾರಕಾನಥ ತೆ ವಚ್ಮಿ ಗ್ರಹಭಾವಾನುಸಾರತಃ ।
ಸೂರ್ಯಾತಃ ಪುಣ್ಯಭೆ ತಾತೋ ವಿಧೋರ್ಮಾತಾತುರಿಯಕೆ ॥೨೨॥

ಕುಜಾತ್ ತೃತೀಯತೋ ಭ್ರಾತಾ ಮಾತುಲಃ ಶಶಿಜಾದ್ರಿಪೌ ।
ಸುರೇಜ್ಯಾತ್ ಪಂಚಮಾತ್ ಪುತ್ರ ಕಲತ್ರಂ ಸಪ್ತಮೇ ಸಿತಾತ್ ॥೨೩॥

ಮಂದಾದಷ್ಟಮತೋ ಮೃತ್ಯುಸ್ತಾತಾದೀನಾಂ ವಿವಿಚ್ಯತೆ ।
ಇತ್ಥಂ ವಿಚಿಂತ್ಯ ಗಣಕೈರ್ವಾಚ್ಯಂ ತತ್ತತ್ಫಲಂ ಮುನೆ ॥೨೪॥

ಹೇ ಮುನಿಯೇ, ಈಗ ನಾನು ಕಾರಕಗ್ರಹ ಹಾಗೂ ಭಾವಾನುಸಾರ ಕಾರಕಗಳ ಫಲ ಹೇಳುತ್ತೇನೆ. ಸೂರ್ಯನಿಂದ ನವಮ ಪಿತೃಕಾರಕ, ಚಂದ್ರನಿಂದ ಚತುರ್ಥ ಮಾತೃಕಾರಕ, ಬುಧನಿಂದ ಷಷ್ಠ ಮಾತುಲಕಾರಕ, ಗುರುವಿನಿಂದ ಪಂಚಮ ಪುತ್ರಕಾರಕ, ಶುಕ್ರನಿಂದ ಸಪ್ತಮ ಸ್ತ್ರೀಕಾರಕ, ಶನಿಯಿಂದ ಅಷ್ಟಮ ಪಿತಾನ ಮೃತ್ಯುಕಾರಕವೆಂದು ತಿಳಿದು ಫಲ ನಿರ್ದೇಶಿಸುವುದು.

ಸ್ವಷ್ಟಾರ್ಥ – ವಿವರಣೆ – ದತ್ತ ಕುಂಡಲಿಯಂತೆ

5
3 ಪಿತೃ
6 ಶುಕ್ರ
4
2 ಕೆ ಪುತ್ರ
7 ಬು ಪಿತೃವಾಕ್ಯ ಚಂ
1
8 ರಾ
10 ಗು ಮಂ ಮಾತೃ
ಸ್ತ್ರೀಕಾರಕ ವರಾತುಲ(ಮಾಪ) 12 ಶನಿ ಭ್ರಾತೃ
9

| | | | |
|---|---|---|---|
| ಸ್ತ್ರೀಕಾರಕ ಭ್ರಾತೃ | | ಕೆ ಪುತ್ರ | ಪಿತೃ |
| | | | |
| ಗು.ಮ ಮಾತೃ | | | |
| | ರಾ | ಬು ಪಿತೃ ಚ | ಶು |

ಈ ರೀತಿ ಕಾರಕ ಪರಿಗಣಿಸುವುದು. ಆಯಾ ಸ್ಥಾನದಿಂದ ಆಯಾ ಫಲ ನಿರ್ದೇಶಿಸುವುದು.

## ಯೋಗಕಾರಕ ಗ್ರಹ

ಅಧುನಾ ಸಂಪ್ರವಕ್ಷ್ಯಾಮಿ ಯೋಗಾನಾಂ ಕಾರಕಾನ್ ಗ್ರಹಾನ್ ।
ಜಾತಕಸ್ಯ ತು ಜನ್ಮಾಂಗೆ ಜಾಯಂತೆಯ ಸ್ಥಿತೇರ್ವಶಾತ್ ॥೨೫॥

ಸ್ವರ್ಕ್ಷೆತುಂಗೆ ಚ ಮಿತ್ರರ್ಕ್ಷೇನ್ಯೋನ್ಯಂ ಕೇಂದ್ರಗತಾ ಗ್ರಹಾಃ ।
ಭವೇಯುಃ ಕಾರಕಾಸ್ತತ್ರಕರ್ಮಗಸ್ತು ವಿಶೇಷತಃ ॥೨೬॥

ಖಗಾಸ್ತಾನೌ ತುರಿಯೇಸ್ತೆ ಸ್ವಮತುಂಗಗತಾ ಯಥಾ ।
ಸ್ಯುರ್ಯೋಗಕಾರಕಾಸ್ತೆ ತು ವಿಶೇಷಾತ್ ಕರ್ಮ ಭಾವಗಾಃ ॥೨೭॥

ಸ್ವಮಿತ್ರೋಚ್ಚರ್ಕ್ಷಗೋ ಹೇತುರ್ಮಿದಕ್ಷಿತ್ಕೇಂದ್ರ ಸಂಸ್ಥಿತಃ ।
ಲಗ್ನಾತ್ ಕೇಂದ್ರೆತರೆ ಗೇಹೆಸೋಪಿ ಕಾರಕ ಈ ರಿತಃ ॥೨೮॥

ನೀಚಾವಂಶೋದ್ಭವೋಯಸ್ತುವರ್ತಮಾನೆ ಚ ಕಾರಕೆ ।
ಮೈತ್ರೇಯ । ಸೋಪಿನೃಪವದ್ ಧನಸೌಖ್ಯಯುತೋ ಭವೇತ್ ॥೨೯॥

ನೃಪಾನ್ವಯ ಪ್ರಸೂತಸ್ತು ರಾಜಾ ಸ್ಯಾನ್ನಾತ್ರ ಸಂಶಯಃ ।
ಏವಂ ಕುಲಾನುಸಾರೇಣ ಫಲಂ ಕಾರಕತೋ ಪದೇತ್ ॥೩೦॥

ಈಗ ನಾನು ಜಾತಕನ ಕುಂಡಲಿಯ ಯೋಗಕಾರಕ, ಕಾರಕ ಗ್ರಹಗಳ ಬಗ್ಗೆ ವಿವರಿಸುತ್ತೇನೆ. ಗ್ರಹ ತನ್ನ ಮನೆ ಉಚ್ಚ ಮಿತ್ರ ಕ್ಷೇತ್ರದಲ್ಲಿದ್ದು ಪರಸ್ಪರ ಕೇಂದ್ರಗತವಾಗಿದ್ದರೆ ಯೋಗಕಾರಕ(ವಿಶೇಷ ಶುಭ ಫಲ)ದಾಯಕವಾಗುತ್ತದೆ. ದಶಮದಲ್ಲಿ ಅತಿ ವಿಶೇಷ ಯೋಗಕಾರಕವಾಗುತ್ತದೆ. ಸ್ವಭವನ ಸ್ವೋಚ್ಚದಲ್ಲಿದ್ದ ಗ್ರಹ ಲಗ್ನ ಚತುರ್ಥ, ಸಪ್ತಮದಲ್ಲಿರಲು ಶುಭ ಫಲದಾಯಕವಾಗುತ್ತದೆ. ದಶಮದಲ್ಲಿ ವಿಶೇಷ ರೂಪದಿಂದ ಫಲವನ್ನು ಕೊಡುತ್ತದೆ. ಇದೇ ಪ್ರಕಾರ ಲಗ್ನದಿಂದ ಕೇಂದ್ರ ಭವನದಲ್ಲಿ ತಮ್ಮ ತಮ್ಮ ಉಚ್ಚಾದಿ ಗ್ರಹ ಪರಸ್ಪರ ಕೇಂದ್ರದಲ್ಲಿದ್ದರೆ – ಉಚ್ಚಾದಿ ಗ್ರಹ ಪರಸ್ಪರ ತಮ್ಮ (1, 4, 7, 10)ರಲ್ಲಿದ್ದರೆ ಯೋಗಕಾರಕವೆ. ಈ ಯೋಗದಲ್ಲಿ ಉತ್ಪನ್ ಜಾತಕ ನೀಚ ನವಾಂಶಗತನಾದರೆ ರಾಜ ತುಲ್ಯ ಹಾಗೂ ಸೌಖ್ಯ ಸಂಪನ್ನ ಹಾಗೂ ರಾಜವಂಶೀಯ ಜಾತಕವಾಗುತ್ತದೆ. ಇದು ಕಾರಕ ಗ್ರಹಗಳಿಗೆ ಮಾತ್ರ ಅನ್ವಯ.

ಅಧುನಾ ಸಂಪ್ರವಕ್ಷ್ಯಾಮಿ ವಿಶೇಷಂ ಭಾವಕಾರಕಾನ್ ।
ಜಾತಸ್ಯ ಯಜ್ಞನುರ್ಲಗ್ನಂ ತದ್ ವಿದ್ಯಾದಾತ್ಮಕಾರಕವ್ ॥೩೦॥

ಧನಭಾವಂ ವಿಜನೀಯಾದ್ ದಾರಕಾರಕಮೇವತು ।
ಏಕಾದಶೆ ಚಾ ಗ್ರಜಸ್ಯ ಕನಿಷ್ಟಸ್ಯ ತೃತೀಯಕೆ ॥೩೨॥

ಸುತೆ ಸುತಂ ವಿಜಾನೀಯಾಜ್ಞಯಾಮ ಸಪ್ತಮ ಭಾವತಃ ।
ಸುತಸ್ಥಾನೆ ತುಯಃ ಖೇಟಃ ನೋಽಪಿ ಕಾರಕ ಉಚ್ಯತೆ ॥೩೩॥

ಈಗ ನಾನು ಭಾವಗಳಿಂದ ಕಾರಕ ಹೇಳುತ್ತೇನೆ. ಜಾತಕನ ಜನ್ಮ ಲಗ್ನ ಆತ್ಮಕಾರಕ ಧನಭಾವ ಜಾಯಾಕಾರಕ ಏಕಾದಶ ಹಿರಿಯಣ್ಣ, ತೃತೀಯ ಕನಿಷ್ಠ ಭ್ರಾತೃ, ಪಂಚಮ ಪುತ್ರಕಾರಕ, ಸಪ್ತಮ ಸ್ತ್ರೀಕಾರಕ ಹಾಗೂ ಪಂಚಮವನ್ನು ಸ್ತ್ರೀಕಾರಕವಾಗಿ ತಿಳಿಯುವುದು.

## ದ್ವಾದಶ ಭಾವಕಾರಕ

ಸೂರ್ಯೋ ಗುರುಃ ಕುಜಃ ಸೋಮೋ ಗುರುರ್ಭೌಮಃ ಸಿತಾಶನಿಃ ।
ಗುರುಶ್ಚಂದ್ರ ಸುತೋ ಜೀವೋ ಮಂದಶ್ಚ ಭಾವಕಾರಕಃ ॥೩೪॥

ಸೂರ್ಯ, ಗುರು, ಮಂಗಳ, ಚಂದ್ರ, ಗುರು ಭೌಮ, ಶುಕ್ರ, ಶನಿ, ಗುರು ಬುಧ, ಗುರು ಶನಿ ಈ ಕ್ರಮಶಃ ಗ್ರಹಗಳು ತನ್ವಾದಿ ಭಾವಗಳ ಕಾರಕಗಳಾಗಿವೆ. ಭಾವ ವಿವೇಚಿಸುವಾಗ ಸ್ಥಾನ ಭಾವಕಾರಕ ಗ್ರಹ ಭಾವ ಕಾರಕಾದಿಗಳನ್ನು ವಿವೇಚಿಸುವುದು

ವಿಹಿತ. ಹಾಗೂ ಸ್ಥಾನಾಧಿಪರನ್ನು ಈ ಅಂಶದಲ್ಲಿ ಪೂರ್ಣ ಗಣನೆಗೆ ತೆಗೆದುಕೊಳ್ಳು ವುದು ಹಾಗೂ ಸ್ಥಾನದಲ್ಲಿದ್ದ ಗ್ರಹವನ್ನು ಪರಿಗಣಿಸುವುದು. ಈ ರೀತಿ ಸರ್ವಮೂಲ ದಿಂದ ಫಲಾದೇಶ ನೀಡಿದಾಗ ಫಲವೂ ಸತ್ಯವಾಗುತ್ತದೆ.

## ಸಂಕ್ಷಿಪ್ತ ವಿವರ

ಭಾವಾತ್‌ಕಾರಕ (ಉದಾಹರಿತ ಕುಂಡಲಿ) ಗ್ರಹಾತ್‌ಕಾರಕ

5ನೇ ಜಾಯಾಕಾರಕ
4 ಆತ್ಮ ಕಾರಕ
3
2 ಕೆ ಹಿರಿಯಣ್ಣ
6 ಕನಿಷ್ಟ ಭ್ರಾತೃ ಶುಕ್ರ
7 ರ.ಬು.ಚ
1
8 ಪುತ್ರ ರಾ ಸ್ತ್ರಿ
10 ಸ್ತ್ರೀಕಾರಕ ಗು ಮಂ
12 ಶನಿ
9
11

| ಶನಿ | | 2 ಕೆ ಹಿರಿಯಣ್ಣ | |
|---|---|---|---|
| | | | ಆತ್ಮ ಕಾರಕ |
| ಗು ಮ ಸ್ತ್ರೀಕಾರಕ | | | ಜಾಯಾ ಕಾರಕ |
| | ರಾಹು ಪುತ್ರ ಸ್ತ್ರಿ ಕಾರಕ | ರ ಬು ಚ | ಕನಿಷ್ಟ ಭ್ರಾತೃ |

5ನೇ ಗುರು
4 ರವಿ
3 ಶನಿ
2 ಕೆ ಗುರು
6 ಮಂಗಳ ಶುಕ್ರ
7 ರಬುಚು ಚಂದ್ರ
ಪ 1 ಬುಧ
8 ಗುರು ರಾ
10 ಗು. ಮ ಶುಕ್ರ
12 ಶನಿ ಗುರು
9 ಮಂಗಳ
11 ಶನಿ

| ಗು | ಬು | ಗುರು | ಶ |
|---|---|---|---|
| ಶನಿ | | | ರವಿ |
| ಶುಕ್ರ | | | ಗುರು |
| ಮಂಗಳ | ಗುರು | ಚಂದ್ರ | ಮಂಗಳ ಶುಕ್ರ |

ಗ್ರತಕಾರಕದಲ್ಲಿ ಅನೇಕ ವ್ಯತ್ಯಾಸಗಳಿದ್ದರೂ ಪ್ರಮುಖತಃ ದಶಮ, ಏಕಾದಶಗಳ ಬಗ್ಗೆ ವಿಶೇಷ ವ್ಯತ್ಯಾಸವಿದ್ದರೂ ತಮ್ಮ ತಮ್ಮ ಅನುಭವದಂತೆ ತಿಳಿಯುವುದು. ಭಾವಕಾರಕದಲ್ಲಿ ವಿವರ ಲಭ್ಯವಿಲ್ಲ – ಒಂದೆರಡು ಶ್ಲೋಕ – ಕಳಚಿಕೊಂಡಿರುವ ಸಾಧ್ಯತೆಯಿದೆ – ಮೂಲ ಪ್ರತಿಗಳು ಅಲಭ್ಯವೆ..

## ಭಾವಗಳ ಶುಭಾಶುಭತ್ವ

ಪುನಸ್ತನ್ವಾದಯೋ ಭಾವಾ ಸ್ಥಾಪ್ಯಾಸ್ತೇಷಾಂ ಶುಭಾಶುಭಮ್ ।
ಲಾಭಸ್ತೃತೀಯೇ ರಂಧ್ರುಶ್ಚ ರಿಪುರ್ವಿತ್ತಂ ವ್ಯಯಸ್ತಥಾ ॥೩೫॥

ಜ್ಯೋತಿರ್ವಿದ್ಭಿರಿಮೇ ಭಾವಾ ಅಶುಭಾಃ ಸಮುದಿರಿತಾಃ ।
ಏಷಾಂ ಯೋಗೇನ ಯೋ ಭಾವೋ ನಾಶಂ ತಸ್ಯ ವಿನಿರ್ದಿಶೇತ್ ॥೩೬॥

ಕೇಂದ್ರತ್ರಿಕೋಣನಾಮಾನೋ ಭಾವಾ ಭದ್ರಾಃ ಪ್ರಕೀರ್ತಿತಾಃ ।
ಏತೇಷಾಂ ಯೋಗಮಾತ್ರೇಣ ಹ್ಯಾಶುಭೋಪಿ ಶುಭೊ ಭವೇತ್ ॥೩೭॥

ಲಗ್ನಾದಿ 12 ಭಾವಗಳಲ್ಲಿ 11, 3, 8, 6, 2, 12 ಈ ಭಾವಗಳು ಅಶುಭ ಭಾವಗಳಾಗಿವೆ. ಈ ಭಾವಾಧಿಪರ ಯೋಗದಿಂದ ಯಾವ ಭಾವವಿದೆಯೋ ಆ ಭಾವ ಲೋಪ ಫಲವೆನ್ನುವುದು ಅಥವಾ ಅಶುಭ ಮಿಶ್ರಿತ ಫಲ ಶೇಷ 1, 4, 7, 10, 5, 9 ಈ ಭಾವಗಳು ಕೇಂದ್ರ ತ್ರಿಕೋನಗಳಾಗಿದ್ದು ಶುಭ ಫಲದಾಯಕವೆ – ಈ ಭಾವಾಧಿಪರಿಂದ ಕೂಡಿದ ಭಾವ ಶುಭಕರವೆ.

ಗ್ರಹಾದಿ ಸಾಧನಾಧ್ಯಾಯದಲ್ಲಿ ಭಾವಗಳ ಅನುನಯನವು ಈ ಹಿಂದೆ ಸೇರಿಸಲಾಗಿದೆ – ಶುಭಗ್ರಹ ಸಂಯೋಗದಿಂದ (ಅಂದರೆ ಭಾವಪರತ್ವ) ಅಶುಭ ಭಾವವೂ ಶುಭವೆ, ಅಶುಭ ಭಾವದಿಂದ ನಿಷ್ಪನ್ ಭಾವ ಅಶುಭವೆ. ಇದಲ್ಲದೆ ಲಗ್ನಾದಿ ಕಾರಕ ಮಾರಕ ಗ್ರಹಾದಿಗಳ ಮೇಲಿಂದ ಫಲ ಹೇಳುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಕಾರಕಾಧ್ಯಾಯಃ
ಸಮಾಪ್ತಿಃ

ಇಳನೇ ಅಧ್ಯಾಯ

# ಅಥ ಕಾರಕಾಂಶ ಫಲಾಧ್ಯಾಯಃ

## ಕಾರಕಾಂಶ ಫಲ

ಕಾರಕಾಂಶ ಗ್ರಹ ಫಲಂ ವಾಚ್ಮಿ ವಿಪ್ರಶ್ರೃಣುಷ್ವ ಯದ್ ।
ನವಾಂಶೇಜಾದಿ ರಾಶಿಸ್ಥೆ ವಿಧಿನಾ ಭಾ ಷಿತಂ ಪುರಾ ॥೧॥

ಆತ್ಮಾಖ್ಯ ಕಾರಕೇಜಾಂಶೆ ಶಾಶ್ವದ್ ಭೀತಿಪ್ರದಾ ಗ್ರಹೆ ।
ಭವೇಯುರಾಖುಮಾರ್ಜಾರಾ ವಿಶೇಷಾತ್ ಕ್ರೂರಯೋ ಗತಃ ॥೨॥

ವೃಶಾಂಶಗೆ ಭವೇತ್ ಸೌಖ್ಯಂ ಚತುಷ್ಪದ ಸಕಾಶತಃ ।
ಮಿಥುನಾಂಶೆ ತು ಜಾಯೇರನ್ ಕಂಡೂಪ್ರಭೃತಯೋ ಗದಾಃ ॥೩॥

ಕರ್ಕಟಾಂಶೆ ಭಯಂ ತ್ವದ್‌ಭ್ಯಃ ಸಿಂಹಾಂಶೆ ಶ್ವಪದಾತ್ತು ತತ್ ।
ಕನ್ಯಾಂಶೆ ಸ್ಥೂಲತಾ ಕಂಡೂಸ್ತಥಾ ಭೀರನಲಾದ್ ಭವೇತ್ ॥೪॥

ತುಲಾಂಶೆ ಸ್ಯಾದ್ ವಣಿಗ್ ವೃತ್ತಿರ್ನಿರ್ಮಾತಾ ವಾಸಸಾಮ ಪಿ ।
ವೃಶ್ಚಿಕಾಂಶೆ ಭಯಮಹೆಃ ಮಾತುರತ್ರಿಸ್ತಥಾಸ್ತನೆ ॥೫॥

ಚಾಪಾಂಶೆ ತೂಚ್ಚಿತಃ ಪಾತೋಥವಾ ವಾಹನತೋ ಭವೇತ್ ।
ನಕ್ರಾಂಶೆ ಜಲಜಂತುಭ್ಯಃ ಕಂಬುಮುಕ್ತಾಪ್ರವಾಲತಃ ॥೬॥

ವಿಹಗೆ ಬ್ಯೋಪಿ ಲಾಭಃ ಸ್ಯಾಜ್ಜಾತಕಸ್ಯ ನ ಸಂಶಯಃ ।
ಘಟಾಂಶೆ ತು ತಡಾಗಾದಿ ನಿರ್ಮಾಣಾತ್ ಕೀರ್ತಿಮಾನ್ ಭವೇತ್ ॥೭॥

ಮೀನಾಂಶೆ ಜಾಯತೆ ವಿಪ್ರ । ಜಾತಃ ಸಾಯುಜ್ಯಮುಕ್ತಿಭಾಕ್ ।
ಅಶುಭಂ ನೈವ ಸದ್ರುಷ್ಟತ್ಯಾ ಶುಭಂ ನಾ ಶುಭದೃಷ್ಟಿತಃ ॥೮॥

ಹೇ ವಿಪ್ರನೆ, ಈಗ ನಾನು ಮೇಷಾದಿ ನವಾಂಶ ಗತ ಆತ್ಮ ಕಾರಕ ಗ್ರಹದ ಫಲ ಹೇಳುತ್ತೇನೆ – ಈ ಅಂಶ ಬ್ರಹ್ಮದೇವರಿಂದ ನಾನು ಈ ಹಿಂದೆ ಕೇಳಿದ್ದೆನು – ಆತ್ಮ ಕಾರಕ ಗ್ರಹ ಮೇಷ ನವಾಂಶದಲ್ಲಿದ್ದರೆ – ಮನೆಯಲ್ಲಿ ಇಲಿ – ಇತ್ಯಾದಿಗಳ ಕಾಟ ವಿಶೇಷ ಪಾಪಗ್ರಹ ಸಂಯೋಗ ದೃಷ್ಟಿಯಿಂದ ವೃಷಭ ನವಾಂಶಗತ ಆತ್ಮ ಕಾರಕ ಗ್ರಹದಿಂದ – ಚತುಷ್ಪಾದ (ಹಸು, ಎಮ್ಮೆ, ಕುದುರೆ ಇತ್ಯಾದಿ) ಪಶುಗಳಿಂದ ಸುಖ. ಮಿಥುನ ನವಾಂಶ ಗತನಾದರೆ ಭುಜ ಆದಿ ರೋಗದಿಂದ ಬಳಲುವನು. ಕರ್ಕ ನವಾಂಶ

ಗತನಾದರೆ ನೀರಲ್ಲಿ ಮುಳುಗುವ ಭಯ. ಸಿಂಹ ನವಾಂಶ ಗತವಾದರೆ ಹಿಂಸ್ರ ಪಶುಗಳ ಭಯ. ಕನ್ಯಾ ನವಾಂಶ ಗತವಾದರೆ – ಸ್ಥೂಲ ಶರೀರ ಹಾಗೂ ರೋಗ ಭಯ, ಅಗ್ನಿ ಭಯ. ತುಲಾ ನವಾಂಶ ಗತವಾದರೆ ವ್ಯಾಪಾರ, ವಸ್ತ್ರ ನಿರ್ಮಾಣ ಕೌಶಲ. ವೃಶ್ಚಿಕ ನವಾಂಶದಲ್ಲಿ ಆತ್ಮಕಾರಕ ಗ್ರಹವಿದ್ದರೆ ಸರ್ಪಭಯ, ತಾಯಿಗೆ ಪೀಡೆ. ಧನು ನವಾಂಶ ಗತವಾದರೆ ಎತ್ತರ ಸ್ಥಳದಿಂದ ಬಿದ್ದು – ತೊಂದರೆ, ಆದರೆ ಶಂಖ, ಮುತ್ತು, ವಜ್ರ, ಹವಳಗಳ ಲಾಭ. ಕುಂಭದಲ್ಲಿ ಆತ್ಮಕಾರಕ ಗ್ರಹವಿದ್ದರೆ – ಕೆರೆ ಕೊಳ್ಳ, ಬಾವಿ ಕಟ್ಟಿಸುವುದರಿಂದ ಪ್ರಸಿದ್ಧಿ, ಮೀನ ನವಾಂಶಗತನಾಗಿದ್ದರೆ ಸಾಯುಜ್ಯ ಮುಕ್ತಿ ದೊರೆಯುತ್ತದೆ. ಯಾವುದೇ ನವಾಂಶದಲ್ಲಿದ್ದರೂ ಶುಭಗ್ರಹ ದೃಷ್ಟಿಯಿದ್ದರೆ – ಶುಭ ಫಲ, ಅಶುಭ ದೃಷ್ಟಿಯಿದ್ದರೆ ಅಶುಭ ಫಲ ದೊರೆಯುತ್ತದೆ – ಶುಭ ದೃಷ್ಟಿಯಲ್ಲಿ ಶುಭವನ್ನೇ ಹೇಳುವುದು.

ಕಾರಕಾಂಶೆಥವಾ ಲಗ್ನಸ್ಯಾಂಶೆ ಸೌಮ್ಯೆ ಸತಿಗ್ರಹೆ ।
ಮೈತ್ರೇಯ ಸೌಮ್ಯದೃಷ್ಟೆ ಸ್ಯಾನ್ನೃಪೋ ಜಾತೋನ ಸಂಶಯಃ ॥೯॥

ಕಾರಕಾಂಶಾದ್ ಗ್ರಹಃ ಸೌಮ್ಯಾಃ ಪಾಪದೃಗ್ ಯೋಗವರ್ಜಿತಾಃ ।
ಕೇಂದ್ರಕೋಣಗತಾಃ ಕುರ್ಯುರ್ಧನಿನಾಂ ಚ ಬುಧಂ ನರವ್ ॥೧೦॥

ಮಿಶ್ರಗ್ರಹೈಃ ಫಲಂ ಮಿಶ್ರಂ ಜ್ಞೇಯಂ ವಿದ್ಧಿಃ ಶುಭಾ ಶುಭವ್ ।
ಸ್ವಭೆ ಸ್ವತುಂಗೆ ಸೌಮ್ಯರ್ಕ್ಷೆ ಸ್ಥಿತೆ ತೂಪಗ್ರಹೆ ಸತಿ ॥೧೧॥

ಪಾಪೈರ ದೃಷ್ಟೆ ಚೈವಾಂತೆ ಕೈವಲ್ಯಂ ತಸ್ಯ ನಿರ್ದಿಶೇತ್ ।

ಆತ್ಮಕಾರಕ ಅಥವಾ ಲಗ್ನದ ನವಾಂಶದಲ್ಲಿ ಶುಭಗ್ರಹಗಳ ಸಂಯೋಗವಾದರೆ ಅಥವಾ ಅದರ ಮೇಲೆ ಶುಭಗ್ರಹ ದೃಷ್ಟಿಯಿದ್ದರೆ ಜಾತಕ ನಿಃಸಂದೇಹ ರಾಜ ನಾಗುತ್ತಾನೆ. ಕಾರಕಾಂಶದಿಂದ ಕೇಂದ್ರ (1, 4, 7, 10) ಅಥವಾ ಕೋನ (5, 9)ರಲ್ಲಿ ಶುಭಗ್ರಹವಿದ್ದು ಅದರ ಜೊತೆಗೆ ಅಥವಾ ಪಾಪಗ್ರಹದ ದೃಷ್ಟಿಯು ಇರದಿದ್ದರೆ ಜಾತಕ ಧನವಂತ ಹಾಗೂ ವಿದ್ವಾನನಾಗುವನು. ಮಿಶ್ರಗ್ರಹ (ಶುಭ – ಅಶುಭ) ಗಳಿಂದ ಮಿಶ್ರಫಲ ತಿಳಿಯುವುದು. ಮಧ್ಯಮಾಂಶ ಸ್ವಗ್ರಹ ಅಥವಾ ಸ್ವೋಚ್ಚ – ಶುಭಗ್ರಹ ರಾಶಿಯಲ್ಲಿ ಇದ್ದು ಪಾಪ ದೃಷ್ಟವಾಗಿದ್ದರೂ – ಜೀವನಾಂತ್ಯದಲ್ಲಿ ಮುಕ್ತಿಯಾಗುತ್ತಾನೆ.

ಇಂದ್ರಾರಭ್ಯಗುವರ್ಗಸ್ಥೆ ಕಾರಕೆ ಪಾರದಾರಿಕಃ ।
ಅನ್ಯಥಾ ಸಂಸ್ಥಿತೆ ತಸ್ಮಿನ್ನನ್ಯಥಾ ಫಲಮಾದಿಶೇತ್ ॥೧೨॥

ಚಂದ್ರ ಭೌಮ ಶುಕ್ರ ವರ್ಗದಲ್ಲಿ ಆತ್ಮಕಾರಕ ಗ್ರಹವಿದ್ದರೆ ಎರಡನೇ ಹೆಣ್ಣು ಮಗಳಲ್ಲಿ ಮಗಳಲ್ಲಿ ಲೀನ, ಅನ್ಯತ್ರವಿದ್ದರೆ ಅನ್ಯಥಾ ಫಲ ತಿಳಿಯುವುದು. ಈ ಅಂಶ ವಿಚಾರಿಸುವಾಗ ದೃಷ್ಟಿ ಪರಿಶೀಲಿಸುವುದು.

ಕಾರಕಾಂಶೆ ಸ್ಥಿತೆ ಸೂರ್ಯೆ ರಾಜಕಾರ್ಯ ರತೊ ಭವೇತ್ ।
ಸ್ಥಿತೆಕ್ಷಿತೆ ವಿಧೌ ಪೂರ್ಣೆ ಜಾತೋ ಭೋಗಿ ಸುಧಿರಪಿ ॥೧೩॥

ಬಲಾಢ್ಯೆ ಮಂಗಲೆ ತತ್ರ ಜಾತಕಃ ಕುಂತಧಾರಕಃ ।
ಅಗ್ನ್ಯಾಜೀವಿ ಭವೇತ್ ಕಿಂವಾ ರಸವಾದಿ ನ ಸಂಶಯಃ ॥೧೪॥

ತತ್ರಸ್ಥೆ ಸಬಲೆ ಸೌಮ್ಯೆ ವಾಣಿಜ್ಯೆ ನಿಪುಣಃ ಸುಧಿಃ ।
ಕಲಾಸು ಶಿಲ್ಪಕೃತ್ಯೇವ ಪ್ರವೀಣಃ ಪರಮೋ ಭವೇತ್ ॥೧೫॥

ನಿಗಮಾಗಮ ವಿಜ್ಞಾನಿ ಸತ್ಕರ್ಮಾ ತತ್ರಗೆ ಗುರೌ ।
ಭೃಗೌ ತತ್ರ ಶತಾಬ್ದಾಯುಃ ಕಾಮುಕೋ ನೃಪಕಾರ್ಯಕೃತ್ ॥೧೬॥

ವಿಶಿಷ್ಟ ಕರ್ಮತಃ ಖ್ಯಾತೋ ರಾಜಮಾನ್ಯೋಪಿ ಸೂರ್ಯಜೆ ।
ಅಗೌ ಧನುರ್ಧರಶ್ಚೌರೋ ಲೋಹಯಂತ್ರಾದಿ ಕಾರಕಃ ॥೧೭॥

ಭಿಷಗ್ ವಿಷಾಣಾಮಪಿ ವಾ ಕೇತೌ ಸ್ತೇನಃ ಪ್ರಜಾಯತೆ ।
ವ್ಯವಹಾರೀ ಗಜಾದೀನಾಮಿತೀ ವಿಜ್ಞೈಃ ಪ್ರಕೀರ್ತಿತವ್ ॥೧೮॥

ಆತ್ಮಕಾರಕನ ನವಾಂಶದಲ್ಲಿ ಸೂರ್ಯನಿದ್ದರೆ ಜಾತಕ ರಾಜಕಾರ್ಯ ನಿರತ. ಶುಕ್ರ ದೃಷ್ಟಿ ಪೂರ್ಣಚಂದ್ರನಿದ್ದರೆ ವಿದ್ವಾನ್ ಹಾಗೂ ಭೋಗಿಯಾಗುತ್ತಾನೆ. ಸಬಲ ಮಂಗಳ ಅಲ್ಲಿದ್ದರೆ ಒಳ್ಳೆ ವಸ್ತ್ರಧಾರಣವುಳ್ಳವನು, ಅಗ್ನಿಯ ಮೇಲೆ ಉಪಜೀವನ ಹಾಗೂ ರಸವಾದಿ (ರಸಾಯನ ತಜ್ಞ ಪಾರಶಾಸ್ತ್ರ ನಿಪುಣ) ಆತ್ಮಕಾರಕ ನವಾಂಶ ದಲ್ಲಿ ಪ್ರಬಲ ಬುಧನಿದ್ದರೆ ಜಾತಕ ವಾಣಿಜ್ಯ ವೃತ್ತಿಯಲ್ಲಿ ನಿಪುಣ, ಶಿಲ್ಪಕಲಾ ನಿಪುಣ ಹಾಗೂ ವಿದ್ವಾನ್‌ನಾಗುತ್ತಾನೆ. ಗುರು ಅಲ್ಲಿದ್ದರೆ ಜಾತಕ ವೇದಶಾಸ್ತ್ರ ಪಾರಂಗತ, ಸತ್ಕಾರ್ಯ ನಿರತ, ಶುಕ್ರನಿದ್ದರೆ ಕಾಮಿ, ರಾಜಕಾರ್ಯ ಕರ್ತಾ ಹಾಗೂ ಶತಾಯು ಆಗುತ್ತಾನೆ. ಶನಿ ಆತ್ಮಕಾರಕನ ನವಾಂಶದಲ್ಲಿದ್ದರೆ – ಜಾತಕ ವಿಶಿಷ್ಟ ಕಾರ್ಯ ವಿಖ್ಯಾತ ಹಾಗೂ ರಾಜ ಪೂಜ್ಯನಾಗುತ್ತಾನೆ. ರಾಹು ಅಲ್ಲಿದ್ದರೆ ಜಾತಕ ಕಳ್ಳ–ಅಸ್ತ್ರ ಸಹಿತ – ಲೋಹದ ವಸ್ತು ನಿರ್ಮಾಪಕನಾಗುತ್ತಾನೆ ಹಾಗೂ ವಿಷ ವೈದ್ಯನಾಗುತ್ತಾನೆ. ಕೇತು ಅಲ್ಲಿದ್ದರೆ ಕಳ್ಳ ಹಾಗೂ ಆನೆ ದಂತ ವ್ಯಾಪಾರಿಯಾಗು ತ್ತಾನೆ. ಈ ರೀತಿ ಎಲ್ಲ ವಿದ್ವಾಂಸರು ಹೇಳಿದ್ದಾರೆ.

ಕಾರಕಾಂಶೆ ಯದಾರ್ಕಾಗೂ ತದಾಭಯಮಹೇಭೆರ್ವತ್ ।
ಸೌಮ್ಯದೃಷ್ಟೌ ನ ಭೀತಿಃ ಸ್ಯಾನ್ಮೃತ್ಯುಃ ಸ್ಯಾತ್ ಕ್ರೂರ ವೀಕ್ಷಿತೌ ॥೧೯॥

ಸೌಮ್ಯಪಡ್ ವರ್ಗಗೌ ತೌ ಚೇದ್‌ಭಿಷಗ್ ವಿಷವಿನಾಶಕಃ ।
ಭೌಮೇಕ್ಷಿತೆ ಕಾರಕಾಂಶೆ ಭಾನು ಸ್ವರ್ಭಾನು ಸಂಯುತೆ ॥೨೦॥

ಅನ್ಯ ಗ್ರಹಾನ ಪಶ್ಯಂತಿ ಸ್ವವೇಶ್ಮಪರದಾಹಕಃ ।
ತತ್ರೇಂದು ಜೇನ ಸಂದೃಷ್ಟೆ ನಾಗ್ನಿದೋ ಜಾಯತೆ ಜನಃ ॥೨೧॥

ಜೀವದೃಷ್ಟೆತು ಪಾಪೇಕ್ಷೆ ಸಮೀಪ ಗೃಹದಾಹಕಃ ।
ಸಿತೇಕ್ಷಿತ ತು ನೈವ ಸ್ಯಾದ್ದಹನಂ ವೇಶ್ಮನೋ ಮುನೆ ॥೨೨॥

ಆತ್ಮಕಾರಕನ ನವಾಂಶದಲ್ಲಿ ಸೂರ್ಯ, ರಾಹು ಎರಡೂ ಗ್ರಹಗಳಿದ್ದರೆ ಸರ್ಪಭಯ, ಅದರ ಮೇಲೆ ಶುಭಗ್ರಹ ದೃಷ್ಟಿಯಿದ್ದರೆ ಭಯಕ್ಕೆ ಕಾರಣವಲ್ಲ. ಪಾಪದೃಷ್ಟಿ – ಮೃತ್ಯು ಶುಭವರ್ಗದ ಷಡ್‌ವರ್ಗದಲ್ಲಿ ಆ ಎರಡು ಗ್ರಹಗಳಿದ್ದರೆ ಜಾತಕ ವಿಷ ವೈದ್ಯನಾಗುವನು. ಆತ್ಮಕಾರಕನ ನವಾಂಶದಲ್ಲಿ ಮಂಗಳನ ದೃಷ್ಟಿ ಸಹಿತ ಸೂರ್ಯ, ರಾಹುವಿನಿಂದ ಯುಕ್ತನಾಗಿದ್ದರೆ ತನ್ನ ಮನೆ ಹಾಗೂ ಇತರ ಮನೆಗಳಿಗೆ ಬೆಂಕಿ ಹಚ್ಚುವನು. (ಅದರ ಮೇಲೆ ಬೇರೆ ಗ್ರಹ ದೃಷ್ಟಿಯಿರಬಾರದು) ರಾಹು, ಸೂರ್ಯರ ಮೇಲೆ ಬುಧ ದೃಷ್ಟಿದಾಯಕನಾಗಲಾರ (ಬುಧನ ದೃಷ್ಟಿಯಿರಲು ಸಾಧ್ಯವಿಲ್ಲ – ಬುಧ ಜೊತೆಗಿದ್ದರೆ ಎಂದು ತಿಳಿಯುವುದು) ಒಂದು ವೇಳೆ ಪಾಪಷಡ್‌ವರ್ಗದ ಗುರು ದೃಷ್ಟಿತವಾದರೆ ನೆರೆಹೊರೆಯವರ ಮನೆಗೆ ಬೆಂಕಿ ಹಚ್ಚುತ್ತಾನೆ – ಆದರೆ ಶುಕ್ರ ದೃಷ್ಟಿಯಿದ್ದರೆ ಗೃಹದಾಹವಾಗಲಾರದು.

### ಸಗುಳಿಕ

ಕಾರಕಾಂಶೆ ಸಗುಳಿಕೆ ದೃಷ್ಟೆ ಪೂರ್ಣೇಂದುನಾ ಸತಿ ।
ಜಾತಕಃ ಸ್ತೇನನೀತಸ್ವಃ ಸ್ವಯಂ ಚೌರೋಥವಾ ಭವೇತ್ ॥೨೩॥

ಖಿಗಾದೃಷ್ಟೆ ಸಮಾಂದೌ ತು ಗರದೋ ವಾ ಗರೈರ್ಮೃತಃ ।
ನಿಃಸಂಶಯಂ ಭವೇ ದಂಡ ವೃದ್ಧಿ ನಿಂದು ಸುತೇಕ್ಷಿತೇ ॥೨೪॥

ಕಾರಕಾಂಶ ಧ್ವಜೋಪೇತೆ ಪಾಪಖೇಚರ ವೀಕ್ಷಿತೇ ।
ಕರ್ಣಚ್ಛೆದೋಥವಾ ಕರ್ಣರೋಗ ಜಾತಸ್ಯ ಜಾಯತೆ ॥೨೫॥

ತತ್ರ ಭಾರ್ಗವ ಸಂದೃಷ್ಟೆ ಯಜ್ಞಕರ್ಮರತೋ ನರಃ ।
ಸೌಮ್ಯಸೌರಿಕ್ಷಿತೆ ತು ಸ್ಯಾದ್ ವೀರ್ಯಹಿನೋ ಜನೋ ಧ್ರುವಮ್ ॥೨೬॥

ದಾಸಿಪುತ್ರೋ ಭವೆ ತತ್ರ ಸೌಮ್ಯ ಭಾರ್ಗವ ವೀಕ್ಷಿತೆ ।
ಕಿಂವಾಪೌನರ್ಭವಃ ಪುತ್ರೋ ಮುನೆ । ನಿಃಸಂಶಯಂ ಭವೇತ್ ॥೨೭॥

ತಾಪಸೋ ಮಂದ ಸಂದೃಷ್ಟೆ ದಾಸೋ ವಾ ಜಾತಕೋ ಭವೇತ್ ।
ಕೇವಲೆನಾರ್ಕಿಣಾ ತತ್ರ ದೃಷ್ಟೆ ಸನ್ಯಾಸ ವಾಂಜ್ಞನಃ ॥೨೮॥

ಸಿತಸೂರ್ಯೆಕ್ಷಿತೆ ತತ್ರರಾಜ್ಞೊ ಭೃತ್ಯುಃ ಪ್ರಜಾಯತೆ ।
ಇತಿರಿತಂ ಸಮಾಸೇನ ಕಾರಕಾಂಶ ಫಲಂ ಮುನೆ ॥೨೯॥

ಆತ್ಮಕಾರಕ ಗ್ರಹದ ನವಾಂಶದಲ್ಲಿ ಗುಳಿಕ (ಅಪ್ರಕಾಶ ಗ್ರಹ) ಇದ್ದರೆ ಹಾಗೂ ಅವನ ಮೇಲೆ ಪೂರ್ಣ ಚಂದ್ರನ ದೃಷ್ಟಿಯಿದ್ದರೆ ಆ ಜಾತಕ ಸ್ವಯಂ ಕಳ್ಳವೃತ್ತಿ ನಿರತನಾಗಿರುತ್ತಾನೆ ಅಥವಾ ಕಳ್ಳರಿಂದ ಅವನ ಧನವೆಲ್ಲ ಅಪಹರಿಸಲ್ಪಡುತ್ತದೆ. ಸಗುಳಿಕ ಆತ್ಮಕಾರಕ ಗ್ರಹದ ನವಾಂಶದಲ್ಲಿದ್ದರೆ ಹಾಗೂ ಯಾವುದೇ ಗ್ರಹ ದೃಷ್ಟಿಯಿರದಿದ್ದರೆ ಜಾತಕ ವಿಷ ಕೊಡುವವನಾಗುತ್ತಾನೆ. ಸ್ವತಃ ವಿಷದಿಂದ ಮರಣವನ್ನಪ್ಪುತ್ತಾನೆ. ಬುಧನ ದೃಷ್ಟಿಯಿದ್ದರೆ ನಿಸ್ಸಂದೇಹವಾಗಿ ಅಂಡ ವೃದ್ಧಿ ಯಾಗುತ್ತದೆ. ಆತ್ಮಕಾರಕ ನವಾಂಶದಲ್ಲಿ ಕೇತು ಇದ್ದು ಪಾಪಗ್ರಹ ಅದರ ಮೇಲೆ ದೃಷ್ಟಿ ಹಾಕಿದರೆ ಜಾತಕನ ಕರ್ಣ ಕತ್ತರಿಸಲ್ಪಡುತ್ತದೆ ಹಾಗೂ ಕರ್ಣ ರೋಗ ವುಂಟಾಗುತ್ತದೆ – ಅದರ ಮೇಲೆ ಶುಕ್ರನ ದೃಷ್ಟಿಯಿದ್ದರೆ ಜಾತಕ ಯಜ್ಞಕಾರ್ಯ ಗತನಾಗುತ್ತಾನೆ. ಬುಧ, ಶನಿಗಳ ದೃಷ್ಟಿಯಿದ್ದರೆ ಮನುಷ್ಯ ನಿರ್ವಿರ್ಯನಾಗುತ್ತಾನೆ. ಆತ್ಮಕನ ನವಾಂಶದಲ್ಲಿ ಬುಧ, ಶುಕ್ರರ ದೃಷ್ಟಿ ಇದ್ದರೆ ಜಾತಕ ದಾಸಿ ಪುತ್ರ ಅಥವಾ ಪುನರ್ಭೂ ಸ್ತ್ರೀಯ ಪುತ್ರನಾಗಿರುತ್ತಾನೆ. ಶನಿಯ ದೃಷ್ಟಿಯಿರಲು ಜಾತಕ – ತಾಪಸ ಅಥವಾ ದಾಸನಾಗಿರುತ್ತಾನೆ – ಕೇವಲ ಶನಿ ದೃಷ್ಟಿಯಿದ್ದರೆ ಸನ್ಯಾಸಿ. ಸೂರ್ಯ, ಶುಕ್ರ ದೃಷ್ಟಿಯಿಂದ ರಾಜಪ್ರೇಷ್ಯನಾಗುತ್ತಾನೆ. ಈ ಎಲ್ಲ ಫಲ ಸಂಕ್ಷೇಪ ರೂಪವಾಗಿದೆ.

ವಿಮರ್ಶೆ: ಪರಾಶರ ಜೈಮಿನಿಗಳಲ್ಲಿ ಯಾರು ಪೂರ್ವಜರು ಯಾರು ನಂತರದ ವರು ಹೇಳುವುದು. ಕಷ್ಟವಾದರೂ, ಕಾರಕಾಂಶಾಧ್ಯಾಯ ನಮಗೆ ನಕಲಿನಂತೆ ಭಾಸವಾದರೂ ನಕಲು ಎನ್ನಲು – ಸಾಧ್ಯವಿಲ್ಲ. ಈರ್ವರೂ ತಪೋಧನರು – ಮಂತ್ರ ದ್ರಷ್ಟಾರರು – ಸೂತ್ರದಾರರು – ಹೀಗಿದ್ದಾಗ ನಕಲು ಎನ್ನಲು

ಸಾಧ್ಯವಿಲ್ಲ. ವೇದಗಳಲ್ಲಿ ಒಂದೇ ಮಂತ್ರ – ಅನೇಕ ಋಷಿಗಳಿಗೆ ದೃಷ್ಟಿ ಗೋಚರ ವಾದಂತೆ ಆಗಿರಲು ಸಾಕು. ಏನೇ ಆದರೂ ಫಲ ನಿಷ್ಠುರ ಸತ್ಯವೆಂಬುದು ನಿರ್ವಿವಾದ ಫಲ ಅದೇ ಇದ್ದಾಗ ಬೇರೆ ಹೇಳಲು ಸಾಧ್ಯವಿಲ್ಲ.

## ಜೈಮಿನಿ ಸೂತ್ರ:

ಅಥಸ್ವಾಂಶೋ ಗ್ರಹಣಾವಮ್ ಪಂಚಮೂಷಿ ಕವಿರಾರ್ಜರಾಃ ತತ್ರಚತುಷ್ಪಾದಃ ಶೀಷಾಃ ಶ್ವಪದಾನಿ ಸಮೆ । ವಾಹನಾದುಚ್ಚಾಚ್ಚಪತಮನ್ ತತ್ರರವೌ ರಾಜಕಾರ್ಯಲಪರಃ ಪೂರ್ಣೆಂದು ಶುಕ್ರಯೋರ್ಭೋಗಿ ವಿದ್ಯಾಜೀವೀ ಚ ಧಾತುವಾದಿ ಕುಂತಾಯುಧೊ ವಹ್ನಿಜೀವಿ ಚ ಭೌಮೆ ವಾಣಿಜ ಸ್ತಂತುವಾಯಾಃ ಶಿಲ್ಪಿನೋ ವ್ಯವಹಾರ ವಿದಶ್ಚ ಸೌಮ್ಯೆ ಕರ್ಮಜ್ಞಾನ ನಿಷ್ಠಾ ವೇದ ವಿದಶ್ಚ ಜೀವೆ ರಾಜಕ್ರಿಯಾಃ ಕಾಮಿನಃ ಶತೇಂದ್ರಿಯಾಶ್ಚ ಶುಕ್ರೆ । ಪ್ರಸಿದ್ಧ ಕರ್ಮಾ ಜೀವಿಃ ಶನೌ ಧಾನುಷ್ಕಾ ಶ್ಚೌರಾಶ್ಚ ಆಂಗಲೀಕಾಹ ತಾಹಯಂತ್ರಾಣಶ್ಚ ರಾಹೌ । ಗಜವ್ಯವಹಾರಿಣಶ್ಚೌರಾಶ್ಚಕೇತೌ । ರವಿರಾಹುಭ್ಯಾಂ ಸರ್ಪ ನಿಧನಮ್ ಶುಭ ದೃಷ್ಟೆ ತನ್ನವೃತ್ತಿಃ ಕುಜ ಮಾತ್ರ ದೃಷ್ಟೆ ಗ್ರಹ ದಾಹಕೋಗ್ನಿ ದೋನಾ ಶುಕ್ರ ದೃಷ್ಟೆನ ದಾಹಃ ಗುರು ದೃಷ್ಟೆ ಸ್ವಸಮೀಪ ಗ್ರಹಾತ್। ಸಗುಳಿಕೋ ವಿಷದೊ ವಿಷಹತೋ ವಾ। ಚಂದ್ರ ದೃಷ್ಟೆ ಚೌರಾಪಹುತಧನಶ್ಚಾರೋ ವಾ। ಬುಧ ಮಾತ್ರ ದೃಷ್ಟೆ ಬೃಹದ್ ಬೀಜಃ ತತ್ರ ಕೇತೌ ಪಾಪ ದೃಷ್ಟೆ ಕರ್ಣಚ್ಛೆದಃ ಕರ್ಣರೋಗ ವಾ। ಬುಧ ಶನಿ ದೃಷ್ಟೆ ನಿರ್ವೀರ್ಯಃ। ಬುಧ ಶುಕ್ರ ದೃಷ್ಟೆ ಪೌನಃ ಪುನಿಕೋ ದಾಸಿಪುತ್ರೋ ವಾ। ಶನಿ ದೃಷ್ಟೆ ತಪಸ್ವಿ ಪ್ರೇಕ್ಷೊ ವಾ। ಶನಿ ಮಾತ್ರ ದೃಷ್ಟೆ ಸನ್ಯಾಸೌ ಭಾಸಃ ರವಿ। ಶುಕ್ರ ದೃಷ್ಟೆ ರಾಜಪ್ರೇಷ್ಯಃ॥

ಈ ಎಲ್ಲ ಅಂಶಗಳನ್ನು ಅಕ್ಷರಶಃ – ಪರಾಶರ ಸೂತ್ರಕಾರರಂತೆ ಇದೆ. ಹೀಗಾಗಿ ಯಾರದ್ದು ಏನು ಎಂಬುದು – ಗೊಂದಲವೇ. ಆಗ ಮುದ್ರಣಾದಿಗಳು ಇರದಿದ್ದರಿಂದ ನಕಲು ಅಷ್ಟು ಸುಲಭವಲ್ಲದ್ದರಿಂದ – ಜ್ಞಾನದೃಷ್ಟಿ ಗೋಚರ ಎನ್ನದೆ ಅನ್ಯಮಾರ್ಗವಿಲ್ಲ. (ಜೈಮಿನಿ ವ್ಯಾಸ ಶಿಷ್ಯರು. ಪರಾಷರ ವ್ಯಾಸರ ತಂದೆ)

### ಕಾರಕಾಂಶದಿಂದ ದ್ವಿತೀಯಾದಿ ಫಲ

ಕಾರಕಾಂಶಾದ್ ದ್ವಿತೀಯೆ ತು ವರ್ಗೆ ಶುಕ್ರಾರಯೋರ್ಜನಃ ।
ಪರಸ್ತ್ರೀ ನಿರತೋ ದೃಷ್ಟಿಯೋಗಾತೋ ಜೀವನಾವಧಿ ॥೩೦॥

ಕೇತೌ ತತ್ರ ಫಲಾಭಾವೋ ದೇವೆಜ್ಯ ಸ್ತ್ರೀರತಃ ಸದಾ ।
ಅಗೌ ದ್ರವ್ಯವಿನಾಶಃ ಸ್ಯಾದ್ದನಗೆ ಕಾರಕಾಂಶತಃ ॥೩೦॥

ಕಾರಕಾಂಶದ್ ವಕ್ರಮಸ್ಥೆ ಕ್ರೂರೆ ಜಾತಃ ಸುವೀರ್ಯವಾನ್ ।
ಶುಭೆ ತತ್ರಗತೆ ಖೇಟೆ ಜಾತೋಭೀರುರ್ನ ಸಂಶಯಃ ॥೩೨॥

ತತಸ್ತುರ್ಯೆ ತು ಶೀತಾಂಶುಸಿತ ಸಂಯುತ ವೀಕ್ಷಿತೆ ।
ಅಪಿ ವಾ ತುಂಗಗೆ ತತ್ರ ಗೃಹೆ ಜಾತಸ್ತು ಹರ್ಮ್ಯವಾನ್ ॥೩೩॥

ಜೀವೆ ದಾರುಮಯಂ ತತ್ರ ಮಂದಾಗುಭ್ಯಾಂ ಶಿಲಾಮಯಮ್ ।
ಭೌಮ ಧ್ವಜಾಭ್ಯಾಂ ಯುಕ್ತೆ ತು ಗೃಹಂ ಸ್ಯಾದಿಷ್ಟಕಾಮಯಮ್ ॥೩೪॥

ತೃಣಸ್ಯ ರವಿಣಾವೇದ್ಯಂ ಶಶಿನಾನಾ ವೃತಸ್ಥಲೆ ।
ಪತ್ಸ್ಯಾಸಹ ಭವೆದ್ಯೋಗ ಇತಿ ಶಾಸ್ತ್ರೇಷು ನಿಶ್ಚಿತವಮ್ ॥೩೫॥

ಕಾರಕಾಂಶದಿಂದ ಎರಡರಲ್ಲಿ ಶುಕ್ರ, ಮಂಗಳರ ಷಡ್‌ಮಾರ್ಗವಾದರೆ ಮನುಷ್ಯ ಪರಸ್ತ್ರೀ ಸಂಸಕ್ತ ಈ ಎರಡು ಗ್ರಹಗಳ ಸಂಯೋಗ ಅಥವಾ ದೃಷ್ಟಿಯಿದ್ದರೆ ಆ ಜೀವನಾಂತ್ಯ ಪರಸ್ತ್ರೀರತ ಕಾರಕಾಂಶದಿಂದ ಎರಡರಲ್ಲಿ ಕೇತು ಇದ್ದರೆ (ಆಮರಣಾಂತ) ಫಲವಿಲ್ಲವೆನ್ನಬೇಕು. ಗುರುವಿದ್ದರೆ ಸ್ತ್ರೈಣನಾಗುತ್ತಾನೆ. ರಾಹು ಇದ್ದರೆ ಧನವಂತ, ಕಾರಕಾಂಶದ 3ನೇ ಸ್ಥಾನದಲ್ಲಿ ಪಾಪಗ್ರಹವಿದ್ದರೆ ಜಾತಕ ಶೂರನಾಗುತ್ತಾನೆ. ಶುಭ ಗ್ರಹವಿದ್ದರೆ ಅವನು ಋಣಿಯಾಗುತ್ತಾನೆ, ಅಪರಾಧಿ ಯಾಗುತ್ತಾನೆ. ಆತ್ಮಕಾರಕ ನವಾಂಶದ ಚತುರ್ಥದಲ್ಲಿ ಶುಕ್ರ, ಚಂದ್ರ ಸಂಯೋಗ ಅಥವಾ ದೃಷ್ಟಿಯಿದ್ದರೆ ಅಥವಾ ಉಚ್ಚಗ್ರಹವಿದ್ದರೆ – ಜಾತಕನ ಮನೆ ಪಕ್ಕಾ ಮನೆಯಾಗಿರುತ್ತದೆ. ಚತುರ್ಥದಲ್ಲಿ ಗುರುವಿದ್ದರೆ ಕಾಷ್ಠ ಭಯ, ಶನಿ, ರಾಹು ಇದ್ದರೆ ಪ್ರಸ್ಥರಮಯ, ಮಂಗಳ, ಕೇತು ಇದ್ದರೆ ಈರ್ಷ್ಯೆ, ಸೂರ್ಯನಿದ್ದರೆ – ಹುಲ್ಲಿನ ಮನೆ ಕಾರಕಾಂಶದಿಂದ ನಾಲ್ಕರಲ್ಲಿ ಚಂದ್ರಮನಿದ್ದರೆ ಅನಾಚ್ಛಾದಿತ ಸ್ಥಳ(ಆಕಾಶದ ಕೆಳಗೆ ಖಿಲ್ಲಾ ಜಾಗೆ)ದಲ್ಲಿ ಸ್ತ್ರೀ ಸಂಭೋಗ.

## ಕಾರಕಾಂಶದಿಂದ ಪಂಚಮಸ್ಥಾನ ಫಲ

ಸುತೆ ಸ್ವರ್ಭಾನುಭೌಮಾಭ್ಯಾಂ ಜಾತಕಸ್ತು ಕ್ಷಯಾಮಯಿ ।
ತತ್ರೈವ ಚಂದ್ರ ದೃಷ್ಟ್ಯಾತು ಭವೇತ್ ಫಲಮ್ ಸಂಶಯಮ್ ॥೩೬॥

ಭೌಮ ದೃಷ್ಟ್ಯಾ ತು ಜಾತಃ ಸ್ಯಾತ್ ಪಿಟಕಾದೊ ರುಜಾನ್ವಿತಃ ।
ಜಲೋದರೋ ವಾ ಗೃಹಣೀ ರೋಗಃ ಸ್ಯಾತ ಕೇತು ದೃಷ್ಟಿತಃ ॥೩೭॥

ತತ್ರೈವ ಸಾಗುಮಾಂದೌ ತು ಭೀತಿರ್ಗಾರಲ ಸಂಭವಾ ।
ತತ್ರೇಂದುಜೆ ವಿದೇಹಃ ಸ್ಯಾತ್ ಕಿಂವಾ ದಂಡಧರೋ ಯತಿಃ ॥೩೮॥

ಸೂರ್ಯೋತ್ಸಸಿಧರೊ ಬಾಲೋ ಭೌಮೆ ಪ್ರಾಸಯುತೋಭವೇತ್ ।
ಸೂರ್ಯ ಪುತ್ರೆ ತು ದಾನುಷ್ಕಃ ಲೌಹಯಂತ್ರಕರಸ್ಸ್ವಗೌ ॥೩೯॥

ಘಟಿಯಂತ್ರ ಕರಃ ಕೇತೌ ಕಾವ್ಯಕರ್ತಾ ಭೃಗೋಃ ಸುತೆ ।
ವಕ್ತಾ ಚ ಕಾವ್ಯ ತತ್ವಜ್ಞೋ ಜಾತಕಃ ಸ್ಯಾನ್ನ ಸಂಶಯಃ ॥೪೦॥

ಕಾರಕಾಂಶದಿಂದ ಪಂಚಮದಲ್ಲಿ ರಾಹು, ಮಂಗಳರಿದ್ದರೆ ರಾಜಯಕ್ಷ್ಮ (ಕ್ಷಯ) ರೋಗಪೀಡಿತ – ಅವರ ಮೇಲೆ ಚಂದ್ರ ದೃಷ್ಟಿಯಿದ್ದರೆ ನಿಃಸಂದಿಗ್ಧ ರೂಪದಲ್ಲಿ ಅವನು ಕ್ಷಯ ರೋಗಿಯೇ, ಕಾರಕಾಂಶದಿಂದ ಪಂಚಮದ ಮೇಲೆ ಮಂಗಳ ದೃಷ್ಟಿಯಿದ್ದರೆ ಗುಳ್ಳೆ ಆದಿ ರೋಗ, ಕೇತು ದೃಷ್ಟಿ ಇದ್ದರೆ ಜಲೋದರ ಅಥವಾ ಗ್ರಹಣಿ (ಸಂಗ್ರಹಣಿ)ರೋಗ. ರಾಹು ಸಹಿತ ಗುಳಿಕ ಪಂಚಮದಲ್ಲಿ ವಿಷಭಯ ಹೇಳುವುದು.

ಪಂಚಮದಲ್ಲಿ ಬುಧ ಜಾತಕವನ್ನು ವಿದೇಹಿ ಅಥವಾ ದಂಡಿ ಸನ್ಯಾಸಿಯನ್ನಾಗಿ ಮಾಡುವನು. ಸೂರ್ಯನಿದ್ದರೆ ಖಡ್ಗಧಾರಿ, ಮಂಗಳನಿದ್ದರೆ ಬರ್ಚಿಧಾರಣ ಮಾಡುವವನಾಗುತ್ತಾನೆ. ಶನಿಯಿದ್ದರೆ ಜಾತಕ ಧನುರ್ಧಾರಣ, ರಾಹುಯಿದ್ದರೆ ಲೋಹದ ಯಂತ್ರ ತಯಾರಕ, ಕೇತು ಗಡಿಯಾರ ತಯಾರಕ, ಶುಕ್ರ – ಕಾವ್ಯ ತತ್ವಜ್ಞ, ಕಾವ್ಯ ನಿರ್ಮಾತಾ, ವಾಗ್ಮಿಯಾಗುತ್ತಾನೆ.

## ವಿಶೇಷ

ಕಾರಕಾಂಶೆ ತತ್ಸುತೆ ವಾ ಜೀವೇಂದು ಯದಿ ಸಂಸ್ಥಿತೌ ।
ಗ್ರಂಥಕರ್ತಾ ಭವೇದ್ ಬಾಲಃ ಸರ್ವವಿದ್ಯಾ ವಿಶಾರದಃ ॥೪೦॥

ಸಿತೇ ನತು ಮನಾಗಲ್ಪಃ ಸೌಮ್ಯೆನಾತ್ಯಲ್ಪಕೋ ಮತಃ ।
ಜೀವ ಮಾತ್ರಯುತೆ ತತ್ರ ಸರ್ವಜ್ಞೋ ಗ್ರಂಥಕಾರಕಃ ॥೪೨॥

ವೇದ ವೇದಾಂತ ಶಬ್ದಾನಾಂ ತತ್ವಜ್ಞೋ ಜಾಯತೆ ನರಃ ।
ಭೌಮೇನ ನ್ಯಾಯ ಶಾಸ್ತ್ರಜ್ಞಃ ಮೀಮಾಂಸವಿದ್ ಬುಧೆನತು ॥೪೩॥

ಮಂದೇನ ತು ಸಭಾಮೂಕೋ ಭಾನುನಾ ಗೀತ ತತ್ವವಿತ್ ।
ಶಶಿನಾ ಸಾಂಖ್ಯ ಸಾಹಿತ್ಯ ಯೋಗ ಗಾನ ವಿಶಾರದಃ ॥೪೪॥

ಅಗುನಾ ಶಿಖಿನಾವಾಪಿ ಜಾತೋ ಗಣಿತ ತತ್ವವಿತ್ ।
ತತ್ರ ಚೇಜ್ಜೀವ ಸಂಬಂಧಃ ಸಾಂಪ್ರದಾಯಿಕ ಶಾಸ್ತ್ರವಿತ್ ॥೪೫॥

ಕಾರಕಾಂಶಾದ್ದನೇಪ್ಯೇವಂ ಕೇಷಾಂಚಿನ ಮತೇ ಫಲಮ್ ।

ಆತ್ಮಕಾರಕ ನವಾಂಶ ಅಥವಾ ಅದರ ಪಂಚಮದಲ್ಲಿ ಚಂದ್ರ, ಗುರುಗಳ ಸಂಯೋಗವಿದ್ದರೆ ಜಾತಕ ಗ್ರಂಥಕಾರ. ಗುರು ಮಾತ್ರ ಸಂಯೋಗದಿಂದ ಸರ್ವಜ್ಞ ನಾಗುತ್ತಾನೆ. ಭೌಮ ಅಲ್ಲಿದ್ದರೆ ನೈಯಾಯಿಕ ಶಾಸ್ತ್ರ, ಬುಧ – ಮೀಮಾಂಸ ಶಾಸ್ತ್ರಜ್ಞ, ಶನಿ – ಇದ್ದರೆ ಸಭಾಮೂಕ, ರವಿ – ಗಾಯಕ, ಚಂದ್ರ– ಸಾಂಖ್ಯಾಶಾಸ್ತ್ರ, ಸಾಹಿತ್ಯ ಹಾಗೂ ಗಾನ ವಿದ್ಯೆ ವಿಶಾರದ, ರಾಹು, ಕೇತು – ಗಣಿತಜ್ಞ (ಜ್ಯೋತಿಷ್ಯ), ಈ ಯೋಗದಲ್ಲಿ ಗುರು ಸಂಬಂಧ ಇದ್ದರೆ ಸಾಂಪ್ರದಾಯಿಕ ಶಾಸ್ತ್ರಜ್ಞ – ಆತ್ಮಕಾರಕ ದ್ವಿತೀಯದಿಂದಲೂ ಕತಿತಯ ಆಚಾರ್ಯರು ಇದೇ ಫಲ ಹೇಳಿದ್ದಾರೆ.

## ಕಾರಕಾಂಶದಿಂದ ಷಷ್ಠ ಸ್ಥಾನಫಲ

ಕಾರಕಾಂಶದ್ರಿಪೌ ಪಾಪಗ್ರಹೆ ಕೃಷಿಕರೋ ನರಃ ।
ಆಲಸ್ಯಯುರ್ ಸೌಮ್ಯಖೇಟೆ ಸಹಜೇಪಿ ದೃಶ್ಯಂ ಫಲಮ್ ॥೪೬॥

ಆತ್ಮಕಾರಕದ ನವಾಂಶದಿಂದ ಷಷ್ಠದಲ್ಲಿ ಪಾಪಗ್ರಹವಿದ್ದರೆ ಕೃಷಿಕನಾಗುವನು. ಶುಭ ಗ್ರಹಗಳಿದ್ದರೆ ಆಲಸಿಯಾಗುವನು. ತೃತೀಯದಿಂದಲೂ ಇದೇ ಫಲ ಗ್ರಹಿಸುವುದು.

## ಸಪ್ತಮ ಸ್ಥಾನಫಲ

ಮದೇಶಶೀಜ್ಯೌ ಕಾರಕಾಂಶತ್ತಜ್ಜಾಯಾ ಸುಭಗೋತ್ತಮಾ ।
ಕವೌ ಕಾಮಾತುರಾ ಪ್ರೋಕ್ತಾ ಕಲಾಪೂರ್ಣೇಂದುಜೆ ಸ್ಮೃತಾ ॥೪೭॥

ಸ್ವಾನ್ವಯೇ ರಕ್ಷಿತಾ ಸೂರ್ಯೇ ವಾಯೋಜ್ಯೇಷ್ಠಾ ಚ ಸೌರಿಣಾ ।
ತಾಪಸಿ ರೋಗ ಯುಕ್ತಾ ವಾ ವಿಧವಾ ಸ್ಯಾದಗೌ ಮುನೆ ॥೪೮॥

ಕಾರಕಾಂಶದ ಸಪ್ತಮದಲ್ಲಿ ಚಂದ್ರ, ಗುರು ಇದ್ದರೆ ಜಾತಕನ ಹೆಂಡತಿ ಸುಂದರಿ, ಶುಕ್ರ – ಕಾಮಾತುರ (ಸ್ತ್ರೀ), ಬುಧ–ಕಲಾಪೂರ್ಣ, ರವಿ–ಕುಲ. ರಕ್ಷಿತಾ, ಶನಿ–ವಯೋಜ್ಯೇಷ್ಠ, ತಾಪಸಿ, ರುಗ್ಣ, ರಾಹು ಇದ್ದರೆ ಸ್ತ್ರೀ ವಿಧವೆ ಆಗುವಳು.

## ಅಷ್ಟಮ ಸ್ಥಾನಫಲ

ಸಸೌಮ್ಯನಾಥೆ ನಿಧನೆ ದೀರ್ಘಾಯುಃ ಕಾರಕಾಂಶತಃ ।
ಕ್ರೂರ ದೃಷ್ಟ್ಯಾನ್ವಿತೆಲ್ಪಾಯುಃ ಮಧ್ಯಮಾಯುಸ್ತು ಮಿಶ್ರಕೈಃ ॥೪೯॥

ಅಷ್ಟಮದಲ್ಲಿ ಸೌಮ್ಯ ಗ್ರಹಗಳು ಸ್ವಾಧಿಪರಿಂದ ಕೂಡಿದ್ದರೆ ಜಾತಕ ದೀರ್ಘಾಯು, ಪಾಪಯುತ ದೃಷ್ಟಯೋಗ ಅಷ್ಟಮದಲ್ಲಿ ಆ ಜಾತಕ ಅಲ್ಪಾಯು, ಅದೇ ಮಿಶ್ರಗ್ರಹಗಳ ಸಂಯೋಗವಾದರೆ ಮಧ್ಯಮಾಯು ಎಂದು ಹೇಳುವುದು. ಆಯಸ್ಥಾನಾಧಿಪನನ್ನು ಅವಲೋಕಿಸುವುದು.

## ನವಮ ಸ್ಥಾನಫಲ

ಕಾರಕಾಂಶಾಚ್ಚ ನವಮೇ ಶುಭಖೇಟ ಯುತೇಕ್ಷಿತೆ ।
ಸತ್ಯವಾದಿ ಗುರೌ ಭಕ್ತಃ ಸ್ವಧರ್ಮಾ ನಿರತೋ ನರಃ ॥೫೦॥

ಕಾರಕಾಂಶಾಚ್ಚ ನವಮೆ ಪಾಪಗ್ರಹಯುತೆ ಕ್ಷಿತೆ ।
ಸ್ವಧರ್ಮಾ ನಿರತೋ ಬಾಲ್ಯೆ ಮಿಥ್ಯಾವಾದೀ ತಥಾಂತಿಮೆ ॥೫೦॥

ಕಾರಕಾಂಶಾತ್ ನವಮೆ ಶನಿ ರಾಹು ಯುತೇಕ್ಷಿತೆ ।
ಗುರು ದ್ರೋಹಿ ಭವೇದ್ ವಿಪ್ರ । ಶಾಸ್ತ್ರೇಷು ವಿಮುಖೋ ನರಃ ॥೫೨॥

ಕಾರಕಾಂಶಾತ್ತು ನವಮೆ ಗುರುಭಾನು ಯುತೆಕ್ಷಿತೆ ।
ತದಾಪಿ ಚ ಗುರುದ್ರೋಹಿ ಗುರು ವಾಕ್ಯಂ ನ ಮನ್ಯತೆ ॥೫೩॥

ಕಾರಕಾಂಶಾತ್ತಂ ನವಮೆ ಕುಜ ಕಾವ್ಯ ಯುತೆಕ್ಷಿತೆ ।
ಷಡ್‌ವರ್ಗಾದಿಪ ಯೋಗೆ ತು ಮರಣು ಪಾರದಾರಿಕಮ್ ॥೫೪॥

ಕಾರಕಾಂಶಾತ್ತಂ ನವಮೇ ಚಂದ್ರ ಚಂದ್ರಜ ದೃಗ್ಯುತೆ ।
ಪರಸ್ತ್ರೀ ಸಂಗಮಾದ್ ಬಾಲೋ ಬಂಧಕೋ ಭವತಿ ಧ್ರುವಮ್ ॥೫೫॥

ಜೀವ ಮಾತ್ರೇಣ ನವಮೆ ಸಂಯುತೆ ವಾ ನಿರೀಕ್ಷಿತೆ ।
ಸ್ತ್ರೀ ಲೋಲುಪೊ ಭವೇದ್ ಬಾಲೋ ವಿಷಯಿಚಾಪಿ ಜಾಯತೆ ॥೫೬॥

ಕಾರಕಾಂಶದಿಂದ ನವಮಸ್ಥಾನ ಶುಭಗ್ರಹ ಸಂಯುಕ್ತ ಅಥವಾ ದೃಷ್ಟವಾಗಿದ್ದರೆ ಜಾತಕ ಸತ್ಯವಾದಿ, ಗುರು ಭಕ್ತ ಹಾಗೂ ಸ್ವಧರ್ಮಾಸಕ್ತ. ಅದೇ ನವಮದಲ್ಲಿ ಪಾಪಗ್ರಹಯುತ – ದೃಷ್ಟವಾಗಿದ್ದರೆ – ಜಾತಕ ಚಿಕ್ಕ ವಯಸ್ಸಿನಲ್ಲಿ ಧರ್ಮ

ಪಾರಾಯಣ ಹಾಗೂ ಅಂತಿಮಾವಸ್ಥೆಯಲ್ಲಿ ಮಿಥ್ಯಾವಾದಿಯಾಗುತ್ತಾನೆ. ಕಾರಕಾಂಶದ ನವಮ ಶನಿ, ರಾಹುಯುತನಾಗಿರಲಿ, ದೃಷ್ಟನಾಗಿರಲಿ ಆಗಿದ್ದರೆ ಗುರು ದ್ರೋಹಿ ಹಾಗೂ ಶಾಸ್ತ್ರ ವಿಮುಖನಾಗಿರುತ್ತಾನೆ. ಅದೇ ನವಮ ಸೂರ್ಯ, ಗುರುಯುತ ಅಥವಾ ದೃಷ್ಟವಾಗಿದ್ದರೆ ಕೂಡ ಗುರುದ್ರೋಹಿ, ಗುರು ವಾಕ್ಯ ತಿರಸ್ಕರಿಸುವವನಾಗುತ್ತಾನೆ. ನವಮದಲ್ಲಿ ಭೌಮ ಶುಕ್ರಯುತ ಅಥವಾ ದೃಷ್ಟವಾಗಿದ್ದರೆ ಅವುಗಳ ಷಡ್ವರ್ಗಾದಿ ಯೋಗದಲ್ಲಿ ಮರಣ ತರುತ್ತವೆ (ಅದು ಪರಸ್ತ್ರೀ ಆಸಕ್ತಿಯಿಂದ ಮರಣ). ಚಂದ್ರ – ಬುಧಯುತರಾಗಿದ್ದರೆ ಅಥವಾ ದೃಷ್ಟ ನಾಗಿದ್ದರೆ ಪರಸ್ತ್ರೀ ಸಂಗಮಯುಕ್ತ - ಸ್ತ್ರೀ ಅಧೀನ ನವಮಸ್ಥಾನ ಗುರು ಮಾತ್ರವಿದ್ದರೆ ಜಾತಕ ಸ್ತ್ರೀಲೋಲುಪ ವಿಷಯಾಸಕ್ತನಾಗಿರುತ್ತಾನೆ.

ಇಲ್ಲಿ ವಿಮರ್ಶೆಯೂ ಅವಶ್ಯಕವೇ. ಎಲ್ಲ ಗ್ರಹಗಳಿಗೂ ಸ್ತ್ರೀ ಸಂಬಂಧ ಹೇಳಿರುವುದು ಆ ಗ್ರಹಗಳು ಸಪ್ತಮಾಧಿಪರಾದರೆ ಆ ಫಲ ವಿಶೇಷ – ಇಲ್ಲವೇ ವಿವೇಚಿಸಬೇಕಾದ ಅಂಶ. ಉಳಿದವರ ಅಭಿಪ್ರಾಯ ಕ್ರೋಢೀಕರಿಸಿ ಹೇಳುವುದು ಉತ್ತಮ.

## ದಶಮ ಸ್ಥಾನಫಲ

ದಶಮೇ ಕಾರಕಾಂಶತ್ತು ಶುಭಖೇಟಾನ್ವಿತೇ ಕ್ಷಿತೇ ।
ಸ್ಥಿರವಿತ್ತೋ ಭವೇದ್ ಬಾಲೋ ಗಂಭೀರೋ ಬಹುವೀರ್ಯವಾನ್ ॥೫೭॥

ಕಾರಕಾಂಶಾತ್ತು ದಶಮೇ ಕ್ರೂರಗ್ರಹಯುತೇ ಕ್ಷಿತೇ ।
ವ್ಯವಸಾಯೇಽರ್ಥ ಹಾನಿಃ ಸ್ಯಾತ್ಚ ತಾತ್ ಸುಖವಂಚಿತಃ ॥೫೮॥

ಕಾರಕಾಂಶಾತ್ತು ದಶಮೇ ಸೌಮ್ಯ ಭಾರ್ಗವ ದೃಗ್ಯುತೇ ।
ವ್ಯಾಪಾರೇ ಬಹುಲಾಭಃ ಸ್ಯಾನ್ಮಹತ್ಕರ್ಮ ಕೃದಪ್ಯಸೌ ॥೫೯॥

ದಶಮೇ ಕಾರಕಾಂಶಾತ್ತು ಸೂರ್ಯೇಂದುಯುತ ವೀಕ್ಷಿತೇ ।
ಸುರೇಜ್ಯಯುತ ದೃಷ್ಟೇಽಪಿ ಜಾತೋ ಭವತಿ ಭೂಪತಿಃ ॥೬೦॥

ಆತ್ಮಕಾರಕ ನವಾಂಶದಿಂದ ದಶಮಸ್ಥಾನ ಶುಭಗ್ರಹದಿಂದ ಯುತ ದೃಷ್ಟವಾಗಿ ದ್ದರೆ ಜಾತಕ ಸ್ಥಿರ ಸಂಪತ್ತಿನವನಾಗುತ್ತಾನೆ. ಗಂಭೀರನು ಹಾಗೂ ಬಲವಂತನು ಆಗುತ್ತಾನೆ. ಅದೇ ದಶಮಸ್ಥಾನ ಪಾಪಗ್ರಹದಿಂದ ಯುತವಾದರೆ ವ್ಯಾಪಾರದಲ್ಲಿ ಅರ್ಥಹಾನಿ ಹಾಗೂ ತಂದೆ ಸುಖ ವಂಚಿತನಾಗುತ್ತಾನೆ. ದಶಮದಲ್ಲಿ ಬುಧ, ಶುಕ್ರ ಸಂಯೋಗ ಅಥವಾ ದೃಷ್ಟಿಯಿದ್ದರೆ ವ್ಯಾಪಾರದಲ್ಲಿ ಬಹಳ ಲಾಭ ಹಾಗೂ ದೊಡ್ಡ

ದೊಡ್ಡ ಕಾರ್ಯ ಮಾಡುವವನಾಗುತ್ತಾನೆ. ಕಾರಕಾಂಶದಿಂದ ದಶಮ ಸ್ಥಾನದಲ್ಲಿ ಸೂರ್ಯ, ಚಂದ್ರ ಸಂಯೋಗ ಅಥವಾ ದೃಷ್ಟಿಯಿದ್ದರೆ ಅದರ ಜೊತೆಗೆ ಗುರುವಿನ ಯೋಗ ಅಥವಾ ದೃಷ್ಟಿಯಿದ್ದರೆ ಜಾತಕ ರಾಜನಾಗುತ್ತಾನೆ (ಸದ್ಯದ ಸ್ಥಿತಿಯಲ್ಲಿ ಮಂತ್ರಿ ಇತ್ಯಾದಿ).

## ಏಕಾದಶ ಸ್ಥಾನಫಲ

ಏಕಾದಶೆ ಕಾರಕಾಂಶಾತ್ ಸನ್ನಭೋಗಾನ್ವಿತೆಕ್ಷಿತೆ ।
ಸರ್ವತ್ರಲಾಭವಾನ್ ಜಾತಃ ಸದಾ ಸೋದರ ಸೌಖ್ಯಯುಕ್ ॥೬೧॥

ತತ್ರೈವ ಕ್ರೂರದೃಗ್ಯೋಗಾತ್ ಸದ್ ಬೃತ್ಯರ್ಥ ಲಾಭವಾನ್ ।
ಪರಾಕ್ರಮಯುತೋ ವಿಶ್ವಾವಿಖ್ಯಾತೋ ಜಾಯತೆ ನರಃ ॥೬೨॥

ಕಾರಕಾಂಶದ ದಶಮದಲ್ಲಿ, ಏಕಾದಶದಲ್ಲಿ ಶುಭಗ್ರಹಯುತ ಅಥವಾ ದೃಷ್ಟವಾಗಿದ್ದರೆ ಎಲ್ಲ ಕ್ಷೇತ್ರದಲ್ಲಿ ಲಾಭಾನ್ವಿತ ಹಾಗೂ ಅಣ್ಣ, ತಮ್ಮರ ಸುಖಪೂರ್ಣ. ಏಕಾದಶದಲ್ಲಿಯೇ ಪಾಪಗ್ರಹಗಳಿದ್ದು ಪಾಪ ದೃಷ್ಟಿತವಾದರೆ ಅಸದ್ ವೃತ್ತಿಯಿಂದ ಲಾಭವಂತ ಪರಾಕ್ರಮಿ ವಿಶ್ವವಿಖ್ಯಾತನಾಗುತ್ತಾನೆ.

## ದ್ವಾದಶದಲ್ಲಿ

ಕಾರಕಾಂಶಾತ್ತು ರಿಪ್ಪಸ್ಥೆ ಸೌಮ್ಯೆ ಸತ್ಕರ್ಮಣಿ ವ್ಯಯಃ ।
ಪಾಪೆಸತ್ಕರ್ಮಣಿ ಪ್ರೋಕ್ತಃ ಖೇಟಾಸತ್ವೆ ಶುಭಂ ಫಲಂ ॥೬೩॥

ಕಾರಕಾಂಶಾದ್ ವ್ಯಯಸ್ಥಾನೆ ಸ್ವಕ್ಷೆೇಚ್ಚಸ್ಥೆ ಶುಭಗ್ರಹೆ ।
ಸದ್‌ಗತಿರ್ಜಾಯತೆ ತಸ್ಯಾ ಶುಭಲೋಕಮ ವಾಪ್ನುಯಾತ್ ॥೬೪॥

ಕಾರಕಾಂಶಾದ್ ವ್ಯಯೋ ಕೇತೌ ಶುಭ ಖೇಟೈ ರ್ಯುತೆಕ್ಷಿತೆ ।
ತದಾತು ಜಾಯತೆ ಮುಕ್ತಿಃ ಸಾಯುಜ್ಯ ಪದಮಾಪ್ನುಯಾತ್ ॥೬೫॥

ಕಾರಕಾಂಶಾದ್ ವ್ಯಯಗತೆ ಮೇಷೆ ಧನುಷಿ ವಾ ಧ್ವಜೆ ।
ಶುಭ ಗ್ರಹೇಣ ಸಂದೃಷ್ಟೆ ಕೈವಲ್ಯ ಪದ ಮಾಪ್ನುಯಾತ್ ॥೬೬॥

ವ್ಯಯೇಚ ಕೇವಲೆ ಕೇತೌ ಪಾಪಗ್ರಹಯುತೆಕ್ಷಿತೆ ।
ನ ಮುಕ್ತಿರ್ಜಾಯತೆ ತರ್ಹಿ ಶುಭಲೋಕಂ ನ ಪಶ್ಯತಿ ॥೬೭॥

ರವಿಣಾ ಸಂಯುತೆ ಕೇತೌ ಕಾರಕಾಂಶಾದ್ ವ್ಯಯಸ್ಥಿತೆ ।
ರವಿ ಭಕ್ತೋ ಭವೆ ಜ್ಜಾಯತೊ ನಿರ್ವಿಶಂಕಂ ದ್ವಿಜೋತ್ತಮ ॥೬೮॥

ಚಂದ್ರೇಣ ಸಂಯುತೇ ಕೇತೌ ಕಾರಕಾಂಶಾದ್ ವ್ಯಯಸ್ಥಿತೇ ।
ಗೌರ್ಯಾ ಭಕ್ತಿರ್ಭವೇತ್‌ಸ್ಯ ಶಾಕ್ತಿಕೋ ಜಾಯತೇ ನರಃ ॥೭೯॥

ಶುಕ್ರೇಣ ಸಂಯುತೇ ಕೇತೌ ಕಾರಕಾಂಶಾದ್ ವ್ಯಯಸ್ಥಿತೇ ।
ಶ್ರೀಯಾಮತಿತರಾಂ ಭಕ್ತಿರ್ಜಾಯತೇಸೌ ಸಮೃದ್ಧಿವಾನ್ ॥೮೦॥

ಕುಜೇನ ಸಹಿತೇ ಕೇತೌ ಸ್ಕಂಧಭಕ್ತೋ ಭವೇನ್ನರಃ ।
ವೈಷ್ಣವೋ ಬುಧಸೌರಿಭ್ಯಾಂ ಗುರುಣಾ ಶಿವಭಕ್ತಿಮಾನ್ ॥೮೧॥

ರಾಹುಣಾ ತಾಮಸಿಂ ದುರ್ಗಾ ಕಿಂವಾ ಭೂತಾದಿಕಾನ್ ಭಜೇತ್ ।
ಹೇರಂಭ ಭಕ್ತಃ ಶಿಖಿನಾ ಸ್ಕಂದ ಭಕ್ತೋತವಾ ಭವೇತ್ ॥೮೨॥

ಕಾರಕಾಂಶಾದ್ ವ್ಯಯೋ ಸೌರಿಃ ಪಾಪರಾಶೌ ಯದಾಭವೇತ್ ।
ತದಾತು ಕ್ಷುದ್ರ ದೇವಸ್ಯ ಭಕ್ತಸ್ತಸ್ಯ ನ ಸಂಶಯಃ ॥೮೩॥

ಪಾಪರ್ಕ್ಷೇಪಿ ವ್ಯಯೋ ಶುಕ್ರೇ ತದಾಪಿ ಕ್ಷುದ್ರ ಸೇವಕಃ ।
ಏವಮೇವ ಫಲಂ ಜ್ಞೇಯಂ ಶತೌ ಚಾಮಾತ್ಯಕಾರಕಾತ್ ॥೮೪॥

ಆತ್ಮಕಾರಕದ ನವಾಂಶದ ದ್ವಾದಶ ಸ್ಥಾನದಲ್ಲಿ ಶುಭಗ್ರಹ ಇದ್ದರೆ ಶುಭ ಕಾರ್ಯದಲ್ಲಿ ವ್ಯಯ – ಗ್ರಹವಿಹೀನವಿದ್ದರೂ ಬಹಳ ಶುಭ – ಅದೇ ಸ್ಥಾನದಲ್ಲಿ ಸ್ವಗ್ರಹಿಸ್ವೋಚ್ಚಸ್ಥ ಶುಭಗ್ರಹವಿದ್ದರೆ ಅಂತ್ಯದಲ್ಲಿ ಸದ್ಗತಿ ಶುಭ ಲೋಕ ಪ್ರಾಪ್ತಿ – ಕೇತು ಶುಭಗ್ರಹಯುತ ದೃಷ್ಟನಾಗಿ ದ್ವಾದಶದಲ್ಲಿದ್ದರೆ – ಮನುಷ್ಯ ಮುಕ್ತನಾಗಿ ಸಾಯಜ್ಯ ಪದವಿ ಪಡೆಯುವನು – ಉಕ್ತ ದ್ವಾದಶದಲ್ಲಿ ಮೇಷ ಅಥವಾ ಧನು ರಾಶಿಯಲ್ಲಿ ಕೇತು ಶುಭ ಗ್ರಹಯುತನಾದರೆ ಅಥವಾ ನೋಡಲ್ಪಡುತ್ತಿದ್ದರೆ ಮೋಕ್ಷ ದೊರೆಯುತ್ತದೆ. ಕೇತು ಪಾಪಗ್ರಹ ದೃಷ್ಟ ಅಥವಾ ಯುತನಾದರೆ ಜಾತಕನಿಗೆ ಶುಭ ಲೋಕ ದೊರೆಯುತ್ತದೆ – ಮುಕ್ತಿ ದೊರೆಯಲಾರದು. ಕಾರಕಾಂಶದಿಂದ ದ್ವಾದಶ ದಲ್ಲಿ ಕೇತು, ಸೂರ್ಯಯುತನಾಗಿದ್ದರೆ ಸೂರ್ಯನಲ್ಲಿ ಭಕ್ತಿ, ಚಂದ್ರಯುಕ್ತ ನಾಗಿದ್ದರೆ ಪಾರ್ವತಿಯಲ್ಲಿ ಭಕ್ತಿ ಅಥವಾ ಶಾಕ್ತ ಪಂಥಾವಲಂಬಿಯೂ (ಶಕ್ತಿ ಉಪಾಸಕ) ಇರಬಹುದು. ದ್ವಾದಶ ಶುಭಯುಕ್ತವಾದರೆ ಸಮೃದ್ಧಶಾಲಿ, ಲಕ್ಷ್ಮಿ ಭಕ್ತನಾಗುವನು. ಕಾರಕಾಂಶ ವ್ಯಯದಲ್ಲಿ ಮಂಗಳ, ಕೇತು ಇದ್ದರೆ ಸ್ಕಂದನ ಭಕ್ತ (ಅಯ್ಯಪ್ಪ) ಬುಧ, ಶನಿ ಇದ್ದರೆ ವಿಷ್ಣುಭಕ್ತ, ಗುರುವಿದ್ದರೆ ಶಿವಭಕ್ತನಾಗುವನು – ರಾಹು ತಾಮಸಿ, ದುರ್ಗಾ, ಕಾಪಲಿಕಾ, ಚಂಡಿ ಇತ್ಯಾದಿ ಹಾಗೂ ಪ್ರೇತಾದಿ ಭಕ್ತ ಕೇತು ಗಣೇಶನ ಭಕ್ತನನ್ನು ತೋರಿಸುವನು. ಕಾರಕಾಂಶದಿಂದ ವ್ಯಯ ಪಾಪರಾಶಿಯಲ್ಲಿ ಶನಿ ಅಥವಾ ಶುಕ್ರರಿದ್ದರೆ ಕ್ಷುದ್ರ ದೇವತಾ ಉಪಾಸಕ – ಇದೇ ಫಲವನ್ನು ಅಮಾತ್ಯಕಾರಕ ಷಷ್ಠಕ್ಕೆ ಹೇಳಬೇಕು.

ವಿಮರ್ಶೆ: ಇಲ್ಲಿ ಪ್ರಾಮುಖ್ಯತೆ. ಕೇತುವಾಗಿದ್ದು ಅದಕ್ಕೆ ನಾಡಿ ಗ್ರಂಥಗಳಲ್ಲಿ ಕೇತುವಿಗೆ ಮೋಕ್ಷಕಾರಕವೆಂದು ಹೇಳಿರುವುದು – ನಾಡಿ ಗ್ರಂಥಗಳಿಗೆ ಆಧಾರ ಮೂಲ ವೇದಾಂಗ ಜ್ಯೋತಿಷ್ಯವೆ ಎನ್ನುವುದು ನಿರ್ವಿವಾದ.

### ವಿಶೇಷ

ಕಾರಕಾಂಶಾತ್ ತ್ರಿಕೋಣಸ್ಥೆ ಮುನೆ । ಕ್ರೂರಗ್ರಹೋದಯೇ ।
ಮಂತ್ರ ತಂತ್ರವಿದಾಂ ವರ್ಯೋ ಜಾಯತೆ ಜಾತಕೋ ಧ್ರುವಮ್ ॥೭೫॥

ಪಾಪ ಸಂವೀಕ್ಷಿತೆ ತತ್ರ ತಂತ್ರ ನಿ ಗ್ರಾಹಕೋ ಭವೇತ್ ।
ಶುಭೈರ್ನಿರೀಕ್ಷಿತೆ ತತ್ರ ಜಾತೋನುಗ್ರಾಹಕೋ ಭವೇತ್ ॥೭೬॥

ಕಾರಕಾಂಶದಿಂದ ನವಮ, ಪಂಚಮ ಎರಡರಲ್ಲಿಯೂ ಪಾಪಗ್ರಹಗಳಿದ್ದರೆ ಮಂತ್ರ ತಂತ್ರಗಳ ತಿಳುವಳಿಕೆಯುಳ್ಳವನಾಗುತ್ತಾನೆ. ಪಾಪಗ್ರಹ ದೃಷ್ಟಿಯಿದ್ದರೆ ನಿಗ್ರಹಿಸುವವನು, ಶುಭವಿದ್ದರೆ ಅನುಗ್ರಹಿಸುವನು ಆಗುತ್ತಾನೆ.

ರಸವಾದಿ ನರಶ್ರೇಂದ್ರೆ ಕಾರಕಾಂಶೆ ಸಿತೇಕ್ಷಿತೆ ।
ವಿದೀಕ್ಷಿತೆ ಭಿಷಗ್‌ವರ್ಯಃ ಸರ್ವರೋಗಹರೋ ಮುನೆ ॥೭೭॥

ಸಿತೇಕ್ಷಿತೆ ವಿಧೌತುರ್ಯೆ ಶ್ವೆತಕುಷ್ಟಿ ಭವೆದ್ಧನಃ ।
ಕುಜೆಕ್ಷಿತೆ ರಾಜ ರೋಗಿ ರಕ್ತ ಪಿತ್ತಾಮಾನ್ ನರಃ ॥೭೮॥

ಶಿಖಿನಾ ವೀಕ್ಷಿತೆ ತತ್ರ ನೀಲಕುಷ್ಟಯುತೋ ಭವೇತ್ ।
ಕುಜಾಗೂ ತುರ್ಯಗೌ ಕಿಂವಾಸುತಗೌ ಚೇದ್ ದ್ವಿಜೋತ್ತಮ ॥೭೯॥

ಕ್ಷಯರೋಗೋ ಭವೇತ್ತಸ್ಯ ಚಂದ್ರ ದೃಷ್ಟ್ಯಾದ್ಯಾ ವಿಶೇಷತಃ ।
ಕಾರಕಾಂಶಾತ್ ತುರ್ಯಸೂನ್ವೋ ಕೇವಲಃ ಸಂಸ್ಥಿತಃ ಕುಜಃ ॥೮೦॥

ಪಿಟಕಾದಿ ಭವೇತಸ್ಯ ನಿರ್ವಿಶಂಕಂ ದ್ವಿಜೋತ್ತಮ ।
ಜಲೋದರೋವಾ ಗ್ರಹಣೆ ಧ್ವಜೆ ತತ್ರೈವ ಸಂಸ್ಥಿತೆ ॥೮೧॥

ಸ್ವಭಾನುಗುಲಿಕೌ ತಸ್ಮಿನ್ ವಿಷವೈದ್ಯಃ ಪ್ರಜಾಯತೆ ।
ಕಾರಕಾಂಶಾತ್ ಸುತೆ ಭಾವೆ ಶನಿ ಮಾತ್ರ ಸ್ಥಿತೆ ಸತಿ ॥೮೨॥

ಧನುರ್ವಿಧಾಧರೋ ಬಾಲೋ ಜಾಯತೆ ನಾತ್ರ ಸಂಶಯಃ ।
ಶಿಖಿ ಮಾತ್ರೆ ತು ತತ್ರಸ್ಥೆ ಘಟಿಕಾಯಂತ್ರ ಕುಂರಘಿನಃ ॥೮೩॥

ಸೌಮ್ಯೆ ತು ದಂಡಿ ಸನ್ಯಾಸಿ ಸ್ಯಾದ್ ವಾ ಪರಮ ಹಂಸವತ್ ।
ಕುಜೆ ರಾಹೌ ರವೌ ತತ್ರ ಸಂಸ್ಥಿತೆ ಕ್ರಮಶೋ ದ್ವಿಜ ॥೮೪॥

ಕುಂತ ಲೋಹಾಸ್ತ್ರ ಖಡ್ಗಾನಾಂ ಧಾರಕೋ ಜಾಯತೆ ಜನಃ ।

ಆತ್ಮಕಾರಕ ನವಾಂಶದಲ್ಲಿ ಶುಕ್ರ ದೃಷ್ಟ ಚಂದ್ರನಿದ್ದರೆ ರಸ (ಸುವರ್ಣ ಭಸ್ಮಾದಿ) ವಿದ್ಯೆಯಲ್ಲಿ ಪರಿಣಿತ – ನಿರ್ಮಾತಾ ಆಗುತ್ತಾನೆ. ಬುಧನ ದೃಷ್ಟಿಯಿದ್ದರೆ ಸರ್ವರೋಗ ನಾಶಕವಾದರೆ ಹಾಗೂ ಉತ್ಕೃಷ್ಟ ವೈದ್ಯನಾದರೆ – ಚತುರ್ಥಸ್ಥ ಚಂದ್ರ, ಶುಕ್ರ ದೃಷ್ಟನಾದರೆ ಶ್ವೇತ ಕುಷ್ಠ (ತೊನ್ನು), ಮಂಗಳ ದೃಷ್ಟನಾಗಿದ್ದರೆ ರಕ್ತಪಿತ್ತ ಪೀಡಿತ, ಕ್ಷಯ, ಕೇತು ದೃಷ್ಟ ನೀಲ ಕುಷ್ಠರೋಗಿ – ಕಾರಕಾಂಶದ 4 ಅಥವಾ 5ರಲ್ಲಿ ಮಂಗಳ ಅಥವಾ ರಾಹು ಇದ್ದರೆ ಕ್ಷಯರೋಗಿ, ಚಂದ್ರ ದೃಷ್ಟಿಯಿದ್ದರೆ ವಿಶೇಷತಃ ಕ್ಷಯರೋಗಿ, ಚತುರ್ಥ, ಪಂಚಮದಲ್ಲಿ ಭೌಮ ಮಾತ್ರನಿದ್ದರೆ – ಕಜ್ಜಿ ಬೊಕ್ಕೆರೋಗ, ಕೇತು ಅಲ್ಲಿದ್ದರೆ ಜಲೋದರ ಸಂಗ್ರಹಣಿ ರೋಗಿ, ರಾಹು ಗುಳಿಕರಿರಲು – ಜಾತಕ ವಿಷವೈದ್ಯ – 5ರಲ್ಲಿ ಶನಿ ಮಾತ್ರ ಇದ್ದರೆ ಜಾತಕ ಧನುರ್ಧಾರಿ (ಅಸ್ತ್ರ ವಿದ್ಯ ಪ್ರವೀಣ) – ಕೇವಲ ಕೇತು ಇದ್ದರೆ ಗಡಿಯಾರಾದಿ ತಯಾರಕನಾಗುತ್ತಾರೆ – ಬುಧನಿದ್ದರೆ ದಂಡಿ ಸನ್ಯಾಸಿ ಅಥವಾ ಪರಮಹಂಸ ಸನ್ಯಾಸಿ, ಮಂಗಳನಿದ್ದರೆ ಕುಂತಧಾರಿ – ರಾಹು ಲೋಹಾದಿ ಯಂತ್ರ ತಯಾರಕ ಹಾಗೂ ಖಡ್ಗ(ಅಸ್ತ್ರ)ಧಾರಿ.

### ಪಂಚಮದಲ್ಲಿ ವಿಶೇಷ ಫಲ(ಪುನಃ)

ಸ್ವಾಂಶೆಥ ಪಂಚಮೆ ವಾಪಿ ಕವೌ ವಾಗ್ಮಿ ಕವಿರ್ಜನಃ ॥೮೫॥

ಗುರೌ ತತ್ರ ತು ಸರ್ವತ್ರ ಗ್ರಂಥಕೃತ್ ಶಬ್ದಶಾಸ್ತ್ರವಿತ್ ।
ವೇದವೇದಾಂತ ತತ್ವಜ್ಞಃ ಪ್ರಗಲ್ಭೊ ನ ಸಭಾಸುಚ ॥೮೬॥

ಉಕ್ತಸ್ಥಾನಗತೆ ಸೌರೌ ಸಭಾಮೂಕೋ ಭವೆಜ್ಜನಃ ।
ಕಾರಕಾಂಶೆ ತತ್ಸುತೆ ವಾ ಕುಜೆ ನೈಯಾಯಿಕೋ ಭವೇತ್ ॥೮೭॥

ಸಾಹಿತ್ಯ ಸಾಂಖ್ಯಯೋಗೇಷು ನಿಪುಣೋ ಗಾನಕೃದ್ ಬುಧೌ ।
ವೇದಾಂತ ತತ್ವವಿದ್ ಗಾನಮರ್ಮಜ್ಞೊ ಭಾಸ್ಕರೆ ಭವೇತ್ ॥೮೮॥

ಗಣಿತಜ್ಯೋತಿಷೆ ಶಾಸ್ತ್ರೆ ನಿಪುಣಃ ಶಿಖಿನಿ ಸ್ಮೃತಿಃ ।
ತತ್ರೈವ ಜೀವ ಸಂಬಂಧಾತ್ ಸಾಂಪ್ರದಾಯಿಕ ಶಾಸ್ತ್ರವಿತ್ ॥೮೯॥

ಏವಂ ವಿತ್ತೆ ವಿಕ್ರಮೆ ವಾ ಕಾರಕಾಂಶಾದ್ ವಿಚಿಂತಯೇತ್ ।
ಕಾರಕಾಂಶದ್ದನೆ ವಾಪಿ ತೃತೀಯೋ ಕೇತು ಸಂಯುತೆ ॥೯೦॥

ವಾಕ್‌ಸ್ತಬ್ಧತಾ ಕ್ರೂರ ದೃಷ್ಟೆ ವಿಶೇಷಾತ್ ತತ್ಫಲಂ ದಿಶೇತ್ ।

ಕಾರಕಾಂಶ ಅಥವಾ ಅದರ ಪಂಚಮದಲ್ಲಿ ಶುಕ್ರನಿದ್ದರೆ ಜಾತಕ ಕವಿಯಾಗುವನು ಹಾಗೂ ವಕ್ತಾ ಗುರು ಇದ್ದರೆ ಸರ್ವಜ್ಞನೇ ಆಗುವನು. ಗ್ರಂಥಕಾರ ಹಾಗೂ ಶಬ್ದ ಶಾಸ್ತ್ರವೇತ್ತ ವೇದ ವೇದಾಂತದ ತತ್ವಜ್ಞ ಹಾಗೂ ಸಭೆಯಲ್ಲಿ ಪ್ರಗಲ್ಭಿ. ಮೇಲಿನ ಸ್ಥಾನಗಳಲ್ಲಿಯೇ ಬುಧನಿದ್ದರೆ ಜಾತಕ ಸಭಾಮೂಕನಾಗುವನು – ಭೌಮನಿದ್ದರೆ ನೈಯಾಯಿಕ, ಚಂದ್ರನಿದ್ದರೆ ಸಾಹಿತ್ಯ ಹಾಗೂ ಸಾಂಖ್ಯಶಾಸ್ತ್ರಜ್ಞ – ಗಾಯಕನು ಆಗುವನು. ಸೂರ್ಯನಿದ್ದರೆ ಜಾತಕ ವೇದಾಂತ ತತ್ವಜ್ಞ ಹಾಗೂ ಸಂಗೀತ ಮರ್ಮಜ್ಞನಾಗುವನು . ಶನಿಯಿದ್ದರೆ ಜಾತಕ ಗಣಿತ, ಜ್ಯೋತಿಷ್ಯದಲ್ಲಿ ನಿಪುಣ, ಅಲ್ಲಿಯೇ ಗುರು ಸಂಬಂಧವಾದರೆ ಸಂಪ್ರದಾಯಶಾಸ್ತ್ರ ಬಲ್ಲವ. ಇದೇ ರೀತಿ ಕಾರಕಾಂಶದ 2 ಹಾಗೂ 3ರಲ್ಲಿ ಕೇತು ಇದ್ದರೆ ಜಾತಕ ವಾಕ್‌ಸ್ತಬ್ಧನಾಗುತ್ತಾನೆ. ಪಾಪಗ್ರಹ ದೃಷ್ಟಿಯಿದ್ದರೆ ವಿಶೇಷ ರೂಪದಲ್ಲಿ – ವಾಕ್‌ಸ್ತಬ್ಧತೆ ಹೇಳುವುದು.

ಕಾರಕಾಂಶಾತ್ತಥಾ ರೂಢಾತ್ ಲಗ್ನತೋ ವಾರ್ಥರಂಧ್ರಯೋಃ ॥೯೧॥

ಕೆಮದ್ರುಮಃ ಸಮೇ ಕ್ರೂರೆ ವಿಶೇಷಾಚ್ಚಂದ್ರ ದೃಷ್ಟಿತಃ ।
ಅಸ್ಮಿನ್ ಪ್ರಕರಣೆ ಪ್ರೋಕ್ತಾ ಯೇ ಯೋಗಾಸ್ತೆ ಮಯಾ ಮುನೆ ॥೯೨॥

ತತ್ತದ್ರಾಶಿ ಗ್ರಹದಶಾ ಮಧ್ಯೆತೆ ಫಲದಾಯಿನಃ ।
ಏವಂ ದಶಾಪ್ರದಾದ್ರಾಸೆ ದ್ವಿತಿಯಾಷ್ಟಮಯೊ ದ್ವಿಜ ॥೯೩॥

ಗ್ರಹಸಾಮ್ಯೆ ತು ವಿಜ್ಞೇಯ ಯೋಗಃ ಕೇಮದ್ರುಮಮೊಧಮಃ ।
ದಶಾರಂಭೆ ಗ್ರಹಾನ್ ಲಗ್ನ ಸಹಿತಾನ್ ಸಾದಯೇದ್ ಬುಧಃ ॥೯೪॥

ತತ್ರಾಪಿ ಪೂರ್ವವೆತ್ತ ಕೇಮದ್ರುಮಂ ಯೋಗಂ ವಿಚಿಂತಯೇತ್ ।
ಏವಂ ತನ್ವಾದಿ ಭಾವನಾಂ ರವ್ಯಾದಿ ದ್ಯುಷದಾಂ ಸದಾ ॥೯೫॥

ತತ್ತತ್‌ಸ್ಥಿತಿ ದಶಾದೇವ ಫಲಂ ವಾಚ್ಯಂ ತು ಧೀಮತಾ ।
ಕಾರಕಾಂಶ ಫಲಂ ಚೈತದುಕ್ತಂ ಸಂಕ್ಷೇಪತಸ್ತು ತೇ ॥೯೬॥

ಆತ್ಮಕಾರಕದ ನವಾಂಶ ಅಥವಾ ಪದ ಅಥವಾ ಲಗ್ನ ಎರಡು ಅಥವಾ ಅಷ್ಟಮ ಸ್ಥಾನ ತುಲ್ಯ ಸಂಖ್ಯಕ ಪಾಪಗ್ರಹವಿದ್ದರೆ ಕೇಮದ್ರುಮ ಯೋಗವಾಗುತ್ತದೆ. ಅದರ ಮೇಲೆ ಚಂದ್ರ ದೃಷ್ಟಿ ಇದ್ದರೆ ಪ್ರಬಲ ಕೇಮದ್ರುಮ (ಅತಿ ಅಶುಭಕಾರಕ) ಯೋಗವಾಗುತ್ತದೆ. ಈ ಪ್ರಕರಣದಲ್ಲಿ ಯಾವ ಯೋಗ ಹೇಳಿದೆಯೋ ಆ ಫಲ, ಆ ರಾಶಿ

ಹಾಗು ಗ್ರಹ ದಶಾದಲ್ಲಿ ಎಂದು ತಿಳಿಯುವರು. ಈ ತರಹ ದಶಾಪ್ರದ ರಾಶಿಯಿಂದ ಎರಡನೇ ಹಾಗೂ ಅಷ್ಟಮದಲ್ಲಿ ಗ್ರಹಸಾಮ್ಯ ಇದ್ದರೂ ಅಶುಭಕಾರಕ ಕೇಮದ್ರುಮ ಯೋಗವಾಗುತ್ತದೆ. ದಶಾರಂಭ ಸಮಯದಲ್ಲಿಯೂ ಸ್ವಷ್ಟಗ್ರಹ ಹಾಗೂ ಲಗ್ನದ ಸಾಧನೆ ಮಾಡಿ ಕೇಮದ್ರುಮ ಯೋಗ – ಮೇಲೆ ಹೇಳಿದ ವಿಚಾರ ಮಾಡುವುದು. ಈ ಪ್ರಕಾರ ಲಗ್ನಾದಿ ಭಾವ ಹಾಗೂ ಸೂರ್ಯಾದಿ ಗ್ರಹಗಳ ಸ್ಥಿತದ ಅನುಸಾರ ಫಲಾದೇಶ ಮಾಡುವುದು – ಇದು ಸಂಕ್ಷೇಪತ ಕಾರಕಾಂಶದ ಹೇಳಿದ ವಿಚಾರ.

ವಿಮರ್ಶೆ: ಈ ಎಲ್ಲ ಅಂಶ ಅತಿ ಸಾವಧಾನದಿಂದ ಅನುಸರಿಸಿ ಫಲ ಹೇಳುವುದು.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಕಾರಕಾಂಶ ಫಲಾಧ್ಯಾಯಃ ಸಮಾಪ್ತಃ

೩೫ನೇ ಅಧ್ಯಾಯ

# ಅಥ ಯೋಗಾಧ್ಯಾಯಃ

**ಪರಾಶರ ಉವಾಚ:**

ಇತ್ಥಂ ತೆ ಕಥಿತಂ ವಿಪ್ರ । ಕಾರಕಾಂಶಾತ್ ಫಲಂ ಮಯಾ ।
ಶೃಣು ಭಾವಾಧಿಪ ವಶಾತ್ಫಲಂ ಖೇಚರ ಯೋಗಜಮ್ ॥೧॥

ಕೇಂದ್ರಾಧಿಪತಯಃ ಸೌಮ್ಯಾ ದಿಶಾಂತಿ ನಹಿ ಸತ್ಫಲಮ್ ।
ಕ್ರೂರಾನ್ನೈವಾ ಶುಭಂ ಕುರ್ಯಾಸ್ತ್ರಿಕೋಣೇಶಃ ಶುಭಾಃ ಸ್ಮೃತಾಃ ॥೨॥

ಕೇಂದ್ರ ತ್ರಿಕೋಣ ತಾಹೇತೋರ್ಲಗ್ನಂ ತು ಶುಭದಂ ಪರಮ್ ।
ಪಂಚಮಂ ನವಮಂ ಚೈವ ವಿಶೇಷ ಧನಮುಚ್ಯತೆ ॥೩॥

ಕಲತ್ರಂ ದಶಮಂ ಚೈವ ವಿಶೇಷ ಸುಖಮುಚ್ಯತೆ ।
ಪತಯ ಸ್ತ್ರಿಷೋಡಾಯನಾಂ ಸದಾ ಪಾಪಫಲಪ್ರದಾಃ ॥೪॥

ವಿತ್ತರಂಧ್ರ ವ್ಯಯೋಶಾಸ್ತು ಫಲದಾಃ ಸಂಗತೇರ್ವಶಾತ್ ।
ಸ್ಥಾನಾಂತರಾನುಗುಣ್ಯಾತೆ ಬಲನಸ್ತು ಯಥೊತ್ತರಮ್ ॥೫॥

ಭಾಗ್ಯವ್ಯಯಾಧಿಪತ್ಯೇನ ರಂಧ್ರೇಶೋ ನ ಶುಭಪ್ರದಃ ।
ತ್ರಿಷಡಾಯಾಧಿತ್ವೆತು ವಿಶೇಷಾದ ಶುಭಃ ಸ್ಮೃತಃ ॥೬॥

ಲಗ್ನ ತ್ರಿಕೋಣಪವಶಾತ್ ಸ ಏವ ಶುಭದೋ ಮತಃ ।
ನ ರಂಧ್ರೇಶತ್ವಾದೋಷಸ್ತು ಸೂರ್ಯ ಚಂದ್ರಮನೋರ್ಭವೇತ್ ॥೭॥

ಪರಾಶರರು ಹೇಳಿದರು–

ಹೇ ಮೈತ್ರೇಯನೆ, ಕಾರಕಾಂಶದ ವಶ ಫಲಾದೇಶ ನಾನು ತಿಳಿಸಿದ್ದೇನೆ. ಈಗ ಭಾವದ ಆಧಿಪತ್ಯದಿಂದ ಗ್ರಹಯೋಗ ಫಲ ಹೇಳುತ್ತೇನೆ.

ಶುಭಗ್ರಹ ಕೇಂದ್ರಾಧಿಪರಾದರೆ – ಅಶುಭದಾಯಕರಾಗುವರು. ಅದರಂತೆ ಅಶುಭ ಗ್ರಹಗಳು ಕೇಂದ್ರಾಧಿಪರಾದರೆ ಶುಭ ಫಲದಾಯಕರಾದರೆ, ತ್ರಿಕೋಣಾಧಿಪರು ಯಾರೇ ಆದರೂ ಶುಭ ಗ್ರಹ ಅಶುಭಗ್ರಹ ಅವರು ಶುಭದಾಯಕರೇ ಆಗುವರು – ಅಂದರೆ ನೈಸರ್ಗಿಕ (ಸ್ವಾಭಾವಿಕ) ಶುಭಗ್ರಹಗಳು ಕೇಂದ್ರಾಧಿಪರಾದರೆ

ಅಶುಭರು. ಪಾಪಗ್ರಹಗಳಾದರೆ ಶುಭರಾಗುವರು. ತ್ರಿಕೋನದಲ್ಲಿ ಅಂದರೆ ತ್ರಿಕೋನಾಧಿಪರು – ಸೌಮ್ಯ ಪಾಪಗ್ರಹಗಳೆರಡು ಶುಭರೆ. ಲಗ್ನ ಪರಿಗಣನೆ ಕೇಂದ್ರ ತ್ರಿಕೋನಗಳಾಗುವುದರಿಂದ ಲಗ್ನೇಶ ಯಾವಾಗಲೂ ಶುಭಪ್ರದನೆ. ಪಂಚಮ ಹಾಗೂ ನವಮಭಾವ ವಿಶೇಷ ಧನ ಹಾಗೂ ಸಪ್ತಮ ದಶಮ ವಿಶೇಷ ಸುಖಪ್ರದ ತ್ರಿಷಡಾಯೇಶ (3, 6, 11)ರ ಅಧಿಪರು ಶುಭಗ್ರಹವ್ವೋ, ಅಶುಭಗ್ರಹಗಳೋ ಪಾಪ ಫಲದಾಯಕರೇ ಆಗುತ್ತಾರೆ. ಧನೇಶ, ಅಷ್ಟಮೇಶ ಹಾಗೂ ವ್ಯಯೇಶರು (2, 8, 12) ಸ್ಥಾನ ಹಾಗೂ ಯಾವ ಗ್ರಹದ ಜೊತೆಗಿರುವರೋ ಅವರಂತೆ ಶುಭಾಶುಭ ಫಲದಾಯಕರು. ಅವರು ಕೇಂದ್ರೇಶ, ತ್ರಿಕೋನೇಶರ ಜೊತೆಗೆ ಶುಭ ಫಲವಾದರೆ, ಕೇಂದ್ರ (1, 4, 7, 10), ತ್ರಿಕೋನ (5, 9), ತ್ರಿಷಡಾಯೇಶ(3, 6, 11)ರ ಅಧಿಪರು ಉತ್ತರೋತ್ತರ ಬಲಶಾಲಿಗಳು (2, 8, 12), ಬಂಧನಕಾರಕರು ಇಲ್ಲಿ ಲಗ್ನೇಶನಿಗಿಂತ ಚತುರ್ಥೇಶ – ಹೆಚ್ಚು ಬಲಶಾಲಿಗಳು ಇದರಂತೆ ತ್ರಿಕೋನಾಧಿಪರಲ್ಲಿ ಪಂಚಮೇಶ ನಿಗಿಂತ ದಶಮೇಶ ಹೆಚ್ಚು ಬಲಿಷ್ಠ ಇದರಂತೆ ತೃತೀಯೇಶನಿಗಿಂತ ಷಷ್ಠೇಶ, ಷಷ್ಠೇಶನಿಗಿಂತ ಏಕಾದಶೇಷ, ಧನೇಶನಿಗಿಂತ ಅಷ್ಟಮೇಶ, ಅಷ್ಟಮೇಶನಿಗಿಂತ ವ್ಯಯೇಶ ಬಲಿಷ್ಠರು. ಅಷ್ಟಮೇಶ, ಭ್ಯಾಗ್ಯೇಶ(ನವಮ)ನಿಂದ – ವ್ಯಯಾಧೀಶ ನಾಗುತ್ತಾನೆ – ಭಾಗ್ಯವ್ಯಯ(ಕ್ಷಯರ)ನಿಂದ ಕಾರಕ – ಆದಕ್ಕಾಗಿ ಶುಭಪ್ರದ ನಾಗಲಾರ. ಅಶುಭಪ್ರದ ಅವನು ತ್ರಿಷಡಾಧೀಶನು ಆಗಿದ್ದಾನೆ. ಆದರೂ ಅದೇ ಅಷ್ಟಮೇಶ, ಲಗ್ನೇಶ, ತ್ರಿಕೋಣೇಶ (ಲಗ್ನ ಪಂಚಮ, ನವಮ) ಅಧಿಪರಾಗಿದ್ದರೆ ಶುಭಪ್ರದ, ಮೇಷಕ್ಕೆ ಮಂಗಳ ಲಗ್ನಾಧಿಪ ಹಾಗೂ ಅಷ್ಟಮಾಧಿಪರಾಗಿ – ಶುಭನೆ – ಅದರಂತೆ ಸೂರ್ಯ, ಚಂದ್ರರಿಗೆ ಅಷ್ಟಮಾಧಿಪ ದೋಷವಿಲ್ಲ.

## ನೈಸರ್ಗಿಕ ಶುಭಾಶುಭ ಕಥನ

ಸುರಾಸುರೆ ಜ್ಯೌತು ಶುಭೌ ಶಶಾಂಕೋ ಮಧ್ಯಮಃ ಸ್ಮೃತಃ ।
ಉದಾಸೀನಸ್ತು ಶಶಿಜಃ ಸೂರ್ಯಾರಶನಯೋ ಶುಭಾಃ ॥೮॥

ಪೂರ್ಣೇಂದುವಿದ್ ಗುರುಸಿತಾ ಬಲಿನಸ್ತು ಯಥೋತ್ತರವ್ ।
ಕ್ಷೀಣ ಚಂದ್ರೇನ ಮಂದಾರಾ ಬಲಿನಸ್ತೂತ್ತರೋತ್ತರವ್ ॥೯॥

ಕೇಂದ್ರಾಧಿಪತ್ಯದೋಷಸ್ತು ಶುಭ ಖೇಟೇಪಿ ವಿಶ್ರುತಃ ।
ವಿಧುವಿಜ್ಜೀವ ಕಾವ್ಯಾನಾಂ ಬಲಿನಸ್ತೆ ಯಥೋತ್ತರವ್ ॥೧೦॥

ಗುರು, ಶುಕ್ರರು ಸ್ವಭಾವತಃ ಶುಭರು, ಚಂದ್ರ ಮಧ್ಯಮ, ಬುಧ ಉದಾಸೀನ ಅದರಂತೆ ಸೂರ್ಯ, ಕುಜ, ಶನಿ ಸ್ವಭಾವತಃ ಪಾಪಗ್ರಹಗಳು, ಪೂರ್ಣಚಂದ್ರ, ಬುಧ, ಗುರು, ಶುಕ್ರ ಈ(ಶುಭಗ್ರಹ)ಗ್ರಹಗಳು ಉತ್ತರೋತ್ತರ ಬಲಿಗಳು. ಇದೇ ತರಹ ಕ್ಷೀಣಚಂದ್ರ, ಸೂರ್ಯ, ಶನಿ, ಮಂಗಳ ಈ ಪಾಪಗ್ರಹಗಳು ಉತ್ತರೋತ್ತರ ಬಲಿಗಳು. ಕೇಂದ್ರಾಧಿಪತ್ಯ ದೋಷ ಶುಭಗ್ರಹಗಳಿಗೆ ಮಾತ್ರ ಹೇಳಿದೆ. ಈ ದೋಷ ಚಂದ್ರ, ಬುಧ, ಗುರು, ಶುಕ್ರರಲ್ಲಿ ಉತ್ತರೋತ್ತರ ಪ್ರಬಲವೆಂದು ತಿಳಿಯುವುದು.

ಆದರೆ ಲಘು ಪರಾಶರಿಯಲ್ಲಿ ಪರಾಶರರೆ 'ಕೇಂದ್ರಾಧಿಪತ್ಯ ದೋಷಸ್ತು ಬಲವಾನ್ ಬುಧ, ಶುಕ್ರಯೋಃ' ಎಂದು ಸ್ಪಷ್ಟ ಹೇಳಿರುವುದರಿಂದ ವಿಮರ್ಶೆಯ ಅಂಶ – 1) ಗುರು ಸ್ವತಃ ಎಂದು ಕೇಡು ತರುವವನಲ್ಲ. ಹೀಗಾಗಿ ಕೇಂದ್ರಾಧಿಪತ್ಯ ದೊರೆತರೂ ಕೆಡಕು ಮಾಡಲಾರ. ಚಂದ್ರ ಸಾಮಾನ್ಯತಃ – ಉಪಗ್ರಹವಾದ್ದರಿಂದ ಹಾಗೂ ಆಕಾಶದಲ್ಲಿ ಎರಡನೇ ಪ್ರಮುಖ ಗ್ರಹವಾದ್ದರಿಂದ ಕೆಡಕು ತರಲಾರ. ಹೀಗಾಗಿ ಶುಭ ಗ್ರಹಗಳಲ್ಲಿ ಕೇಂದ್ರಾಧಿಪತ್ಯ ಬಂದಾಗ ಬುಧ, ಶುಕ್ರರು ಮಾತ್ರ ತೀವ್ರ ಕೆಡಕು ತರುವರು.

## ರಾಜಯೋಗ

ಕೇಂದ್ರಕೋಣಾಧಿಪತ್ಯೈಶ್ಚೆದನ್ಯೋನ್ಯ ಭವನೆ ಸ್ಥಿತಃ ।
ಕಿಂವಾ ದ್ವಯೋರೆರರಾಶೌ ಸ್ಥಿತಿರ್ವೈಂಕೋನ್ಯ ಗೇಹೃಗಃ ॥೧॥

ದೃಷ್ಟಃ ಪರೇಣ ವಾ ಪೂರ್ಣದೃಗ್ ದೃಷ್ಟೌ ಯೋಗಕಾರಕೌ ।
ವಿಶ್ರುತೋ ನೃಪತಿರ್ವಾಪಿ ಜಾತೋ ಯೋಗೆತ್ರಜಾಯತೆ ॥೨॥

1) ಕೇಂದ್ರಧಿಪ, ತ್ರಿಕೋನಾಧಿಪ ಪರಸ್ಪರ ಭವನದಲ್ಲಿದ್ದರೆ, (2) ಅಥವಾ ಎರಡು ಗ್ರಹಗಳು ಒಂದೇ ರಾಶಿಯಲ್ಲಿದ್ದರೆ (ಯುತ ವಿಶೇಷ) (3) ಒಬ್ಬನು ಇನ್ನೊಬ್ಬನ ಮನೆಯಲ್ಲಿ ಹಾಗೂ ಪರಸ್ಪರ ಪೂರ್ಣದೃಷ್ಟಿ (4) ಇರ್ವರೂ ಪೂರ್ಣ ದೃಷ್ಟಿಯಿಂದ ನೋಡುತ್ತಿದ್ದರೆ ಈ ನಾಲ್ಕು ಸ್ಥಿತಿಗಳಲ್ಲಿ ಗ್ರಹಗಳು ರಾಜಯೋಗ ಕಾರಕಗಳಾಗುತ್ತವೆ. ಅರ್ಥಾತ್ ಕೇಂದ್ರೇಶ, ತ್ರಿಕೋನೇಶ ಮೇಲೆ ಹೇಳಿದ ನಾಲ್ಕು ಸ್ಥಿತಿಯಲ್ಲಿದ್ದರೆ ರಾಜಯೋಗಕಾರಕ – ಈ ಯೋಗದಲ್ಲಿ ಹುಟ್ಟಿದ ಜಾತಕ ರಾಜ ಅಥವಾ ವಿಖ್ಯಾತನಾಗುವನು.

## ವಿಶೇಷ

ಏಕಏವ ಗ್ರಹಃ ಕೇಂದ್ರಪತಿಃ ಕೋಣಪತಿಶ್ಚ ಸನ್ ।
ಕೇಂದ್ರಗಃ ಕೋಣಗೋ ವಾಪಿ ಯೋಗಕೃತ್ ಸ್ಯಾದ್ ವಿಶೇಷತಃ ॥೧೩॥

ಪಾಪಾನಂ ಕೇಂದ್ರನಾಥತ್ವ ಪ್ರಯುಕ್ತಾ ಶುಭಕಾರಿತಾ ।
ತ್ರಿಕೋಣ ಸ್ಯಾಪಿ ನಾಥತ್ವೆನ ಕೇಂದ್ರಸತ್ವಮಾತ್ರತಃ ॥೧೪॥

ಯದಾ ಕೇಂದ್ರತ್ರಿಕೋಣೆಶೌ ಕ್ರೂರಸ್ಥಾನಪತಿ ತದಾ ।
ತಯೋಃ ಸಂಬಂಧ ಮಾತ್ರೇಣ ನ ಯೋಗಂ ಲಭತೆ ನರಃ ॥೧೫॥

ಯದ್‌ಯದ್‌ಭಾವಗತೌ ವಾಪಿಯದ್‌ಯದ್‌ಭಾವೇಶ ಸಂಯುತೌ ।
ತತ್ತಫಲನಿ ಪ್ರಬಲೌ ಪ್ರದಿಶೋತಾಂ ತಮೋಗ್ರಹೌ ॥೧೬॥

ಯದಿ ಕೇಂದ್ರೆ ತ್ರಿಕೋಣೆ ವಾ ನಿವಸೇತಾಂ ತಮೋಗ್ರಹೌ ।
ನಾಥೆನಾನ್ಯತರೋಣಾಪಿ ಸಂಬಂಧಾದ್ಯೋಗಕಾರಕೌ ॥೧೭॥

ಒಂದೇ ಗ್ರಹವು ಕೇಂದ್ರಾಧಿಪ ತ್ರಿಕೋನಾಧಿಪನಾಗಿ ಕೇಂದ್ರ (1, 4, 7, 10) ಅಥವಾ ತ್ರಿಕೋನ(5, 9)ದಲ್ಲಿ ಸ್ಥಿತನಾದರೆ ವಿಶೇಷ ರೂಪದಿಂದ ಫಲದಾಯಕರು ಇಲ್ಲ ವಿಶೇಷ ಈ ಯೋಗ ವೃಷಭ ಲಗ್ನಕ್ಕೆ ಶನಿ (9, 10ರ ಅಧಿಪ) ವಿಶೇಷ ಯೋಗಕಾರಕ. ಅದರಂತೆ ತುಲಾ ಲಗ್ನಕ್ಕೆ ಶನಿ(4, 5)ರ ಅಧಿಪ ಸಾಮಾನ್ಯ ಯೋಗಕಾರಕ. ಕರ್ಕ ಲಗ್ನಕ್ಕೆ ಮಂಗಳ (5, 10ರ ಅಧಿಪ) ವಿಶೇಷ ಯೋಗಕಾರಕ. ಸಿಂಹಕ್ಕೆ (4, 9)ವಿಶೇಷವೆ. ಮಕರಕ್ಕೆ ಶುಕ್ರ (5, 9) ಹಾಗೂ ಕುಂಭಕ್ಕೆ (4, 9) ಯೋಗಕಾರಕ – ಕುಂಭ ಲಗ್ನವೆ – ಬಲಹೀನವಾದ್ದರಿಂದ ವಿಶೇಷವಿಲ್ಲ.

ಕೇಂದ್ರೇಶನಾಗುವುದರಿಂದ ಪಾಪಗ್ರಹ ಶುಭಕಾರಕನಾದರೂ ಅವನ ಶುಭತ್ವ ತ್ರಿಕೋನೇಶನಾಗುವುದರಲ್ಲಿ ಸಂಭವವಿದೆ – ಕೇಂದ್ರ ತ್ರಿಕೋನೇಶರು ಪಾಪಸ್ಥಾನ (3, 6, 11)ದಲ್ಲಿದ್ದರೆ ಕೇಂದ್ರೇಶ, ತ್ರಿಕೋನೇಶ ಮಾತ್ರದಿಂದ ಶುಭವಾಗಲಾರರು. ಪ್ರಬಲ ರಾಹು, ಕೇತು ಯಾವ ಭಾವದಲ್ಲಿರುವರೋ ಆ ಭಾವಾಧಿಪರು ಸಂಯುಕ್ತ ರಾದರೆ ಅದರಂತೆ ಫಲ ದೊರೆಯುವುದು. ಒಂದು ವೇಳೆ ರಾಹು, ಕೇತು ಕೇಂದ್ರ ಅಥವಾ ತ್ರಿಕೋನಸ್ಥರಾಗಿ ಅನ್ಯಂತರನಾಥರ ಸಂಬಂಧವಾದರೆ, ರಾಹು, ಕೇತು ತ್ರಿಕೋನಸ್ಥ, ಕೇಂದ್ರಸ್ಥ ಸಂಬಂಧವಾದರೆ ಆ ಗ್ರಹಗಳು ಶುಭಕಾರಕರು – ರಾಹು, ಕೇತುಗಳ ತ್ರಿಕೋನ ಕೇಂದ್ರದಿಂದಲೂ ಶುಭಾಶುಭತ್ವ ನೋಡುವುದು.

## ಮೈತ್ರೇಯ ಉವಾಚ:

ಲಗ್ನೆ ಕುತ್ರ ಪ್ರಜಾತಸ್ಯ ಖೇಟಾಃ ಸ್ಯುಯೋಗಕಾರಿಣಾಃ ।
ಕೇವಾಸಂಫಲದಸ್ತೆ ತು ಬೋಧನೀಯಾ ಮಹಾಮತೆ ॥೧೮॥

## ಮೈತ್ರೇಯ ಕೇಳಿದರು–

ಯಾವ ಲಗ್ನದಲ್ಲಿ ಉತ್ಪನ್ ಜಾತಕನಿಗೆ ಯಾವ ಗ್ರಹವು ಯೋಗಕಾರಕವಾಗು ತ್ತದೆ ಹಾಗೂ ಯಾವ ಗ್ರಹಗಳು ಅಶುಭ ಫಲದಾಯಕರಾಗುತ್ತಾರೆ ಕೃಪೆ ಮಾಡಿ ತಿಳಿಸಿರಿ.

## ಪರಾಶರ ಉವಾಚ:

ಕ್ರೂರಾಃ ಶನಿಜ್ಞದೈತ್ಯೇಜ್ಯಾಃ ಸೌಮ್ಯೌ ದೇವೇಜ್ಯ ಭಾಸ್ಕರೌ ।
ಕೇವಲೇನ ತು ಯೋಗೇನ ಮಂದೇಜ್ಯೌ ನ ಶುಭಾ ಮತೌ ॥೧೯॥

ಪಾಪಕೃತ್ತ್ವಮಾಪಿ ಪ್ರೋಕ್ತಂ ಪರತಂತ್ರತಯಾ ಗುರೋಃ ।
ಮಾರಕಾಧಿಪತಿಃ ಶುಕ್ರ ಪ್ರಬಲೋ ಮಾರಕೋ ಮತಃ ॥೨೦॥

ಪಾಪಾಃ ಶನ್ಯಾದಯಃ ಖೇಟಾಸ್ತತ ಮಂಧಾತ್ತು ಮಾರಕಾಃ ।
ಅಜಲಗ್ನಪ್ರಜಾತಸ್ಯ ವೇದ್ಯಮೇತತ್ಫಲಂ ಬುಧೈಃ ॥೨೧॥

## ಪರಾಶರರು ಹೇಳಿದರು–

ಮೇಷ ಲಗ್ನೋತ್ಪನ್ನ ಜಾತಕನಿಗೆ ಶನಿ, ಬುಧ, ಶುಕ್ರ ಪಾಪಫಲಪ್ರದರು ಸೂರ್ಯ, ಗುರು ಶುಭಪ್ರದರು – ಮಂಗಳ ಲಗ್ನಾಧಿಪನಾಗಿ ಶುಭನೆ.

2 12
3 1 11
4 10
5 7 9
6 8

ಶನಿ, ಗುರು ಕೇವಲ ಯೋಗ ಮಾತ್ರದಿಂದ ಶುಭರು. ಅದು ನವಮ ಅಥವಾ ಚತುರ್ಥದಲ್ಲಿ ವಿಶೇಷ. ಅಲ್ಲಿ ಶನಿಯ ಅಶುಭತ್ವ ಕಳೆಯುತ್ತದೆ. ಗುರು ಬೇರೆ ಪಾಪಗ್ರಹದೊಂದಿಗೆ ಇದ್ದರೆ ನಿಶ್ಚಯ ಪಾಪಕಾರಿಯೇ. ಶುಕ್ರ ಮಾರಕೇಶನಾದ್ದರಿಂದ ಪ್ರಬಲ ಮಾರಕನು – ಶನ್ಯಾದಿ ಗ್ರಹಗಳಿಗೆ ಶುಕ್ರ ಸಂಬಂಧವಾದರೆ ಮಾರಕವೆ. ಈ

ರೀತಿ ಮೇಷ ಲಗ್ನಕ್ಕೆ ತಾರಕ ಮಾರಕಗಳು – ಶನಿ ಕ್ಷೀಣನಾಗಿದ್ದರೆ ಲಗ್ನಾಧಿಪ ಮಿತ್ರನಾಗಿ ಶುಭನೆ.

ವಿಶೇಷ ವಿಮರ್ಶೆ: ಎಲ್ಲ ಗ್ರಹಗಳಿಗೂ ಇದೇ ರೀತಿ ಕೂಲಂಕಷ ವಿಚಾರಿಸಿ ಸಾಧಿಕ ಬಾಧಕ ತಿಳಿಯುವರು.

ಈ ಅಧ್ಯಾಯದಲ್ಲಿಯೇ ಮಹರ್ಷಿ ಪರಾಶರರು – ಕೆಳಗೆ ಹೇಳಿದ ಅಂಶ ಹೇಳಿಯೇ ಅಧ್ಯಾಯ ಆರಂಭಿಸಿದ್ದಾರೆ. 1) ತ್ರಿಕೋನೇಶ ಸದೈವ(ಹೇಗಿದ್ದರೂ) ಶುಭಪ್ರದ ತ್ರಿಷಡಾಯಾಧೀಶ ಅಶುಭದಾಯಕರು. 2) ಕೇಂದ್ರಾಧೀಶ ಶುಭ ಗ್ರಹವಾದರೆ ಅಶುಭಫಲ, ಅಶುಭಗ್ರಹವಾದರೆ ಶುಭಪ್ರದ. 3) ಪಂಚಮೇಶನಿಂದ ನವಮೇಶ, ತೃತೀಯೇಶನಿಂದ ಷಷ್ಠೇಶ, ಷಷ್ಠೇಶನಿಂದ ಏಕಾದಶೇಶ, ಲಗ್ನಕ್ಕಿಂತ ಚತುರ್ಥ, ಚತುರ್ಥದಿಂದ ಸಪ್ತಮ, ಸಪ್ತಮಕ್ಕಿಂತ ದಶಮ ಬಲಿಷ್ಠ. 4) ಲಗ್ನದ ದ್ವಿತೀಯೇಶ, ದ್ವಾದಶೇಶ ಶುಭ ಸಂಬಂಧಿತರಾದರೆ (ಸಾಹಚರ್ಯದಿಂದ ಶುಭಾಶುಭ) ಅಷ್ಟಮಾಧಿಪ ತ್ರಿಕೋನೇಶ (5, 9) ಕೇಂದ್ರ (1)ರ ಸ್ವಾಮಿಯಾಗಿದ್ದರೆ ಶುಭದರೆ. 5) ಕೇಂದ್ರಾಧಿಪತ್ಯ ದೋಷ ಚಂದ್ರ, ಬುಧ, ಗುರು, ಶುಕ್ರ ಕ್ರಮಶಃ ಪ್ರಬಲವಾಗುತ್ತದೆ – ಚಂದ್ರ ಕಡಿಮೆಯಾದರೆ ಶುಕ್ರ ಅತಿಹೆಚ್ಚು.

ಇಲ್ಲಿ ಪ್ರಸ್ತುತ ಮೇಶ ಲಗ್ನದಲ್ಲಿ ಸೂರ್ಯ, ಪಂಚಮಾಧಿಪನಾಗಿ ಪೂರ್ಣ ಬಲಿಯೋ – ಭೌಮ ಅಷ್ಟಮೇಶನಾದರೂ ಲಗ್ನಾಧಿಪನಾದ್ದರಿಂದ ಶುಭಪ್ರದನೆ. ಬುಧ ತೃತೀಯ ಷಷ್ಠದ ಸ್ವಾಮಿಯಾಗಿ ಪಾಪಫಲದ ಗುರು ವ್ಯಯೇಶನಾಗಿದ್ದರೂ ನವಮೇಶನಾಗುವುದರಿಂದ – ರವಿ, ಮಂಗಳರ ಜೊತೆಗೆ ಯೋಗಕಾರಕನೆ – ಶುಕ್ರ ದ್ವಿತೀಯ ಹಾಗೂ ಸಪ್ತಮಾಧಿಪನಾದ್ದರಿಂದ ಬುಧನಂತೆ ಪೂರ್ಣ ಮಾರಕನೆ. ಶನಿ ದಶಮ, ಏಕಾದಶ ಸ್ವಾಮಿಯಾಗಿ ಶುಭಾಶುಭಗಳೆಂದು ಆಗಿದ್ದರು. ಗುರುವಿನ ಜೊತೆಗೆ ಸಂಯೋಜನೆಯಿದ್ದರೆ ಶುಭ (ನವಮ+ದಶಮ) – ಈ ರೀತಿ ಪ್ರತಿ ಲಗ್ನದ ಫಲದ ಬಗ್ಗೆ ಶುಭಾಶುಭ ವಿಚಾರ ಮಾಡುವುದು.

ಉಳಿದ ಲಗ್ನಗಳ ಬಗ್ಗೆ ಸಂಕ್ಷಿಪ್ತ ವಿವರಿಸಿದೆ.

## ವೃಷಭ ಲಗ್ನದ ಶುಭಾಶುಭ ಗ್ರಹ

ಜೀವಶುಕ್ರೇಂದವಃ ಪಾಪಃ ಶುಭೌ ಶನಿ ದಿವಾಕರೌ ।
ರಾಜಯೋಗಕರೋ ಮಂದೋ ಜ್ಞೋಽಲ್ಪಸತ್ಫಲ ದೋ ಮತಃ ॥೨೨॥

ಜೀವಾದಯೋ ಮರಿಹೀಜಶ್ಚ ಸಂತಿ ಕಾರಕಲಕ್ಷಣಾಃ ।
ದ್ವಿಜೋತ್ತಮ । ಫಲಾನ್ಯೇವಂ ವೃಷಲಗ್ನ ಭವಾನಿ ವೈ ॥೨೩॥

ವೃಷಭ ಲಗ್ನೋತ್ಪನ್ನ ಜಾತಕನಿಗೆ ಗುರು, ಶುಕ್ರ, ಚಂದ್ರ – ಈ ಮೂರು ಗ್ರಹಗಳು ಪಾಪಪ್ರದರು. ಸೂರ್ಯ, ಶನಿ ಶುಭಪ್ರದರು. ಶನಿರಾಜ ಯೋಗಕಾರಕನು. ಬುಧ ಅಲ್ಪ ಶುಭಪ್ರದ. ಜೀವಾದಿ (ಗುರು, ಶುಕ್ರ, ಚಂದ್ರ)ಮಂಗಳ ಮಾರಕರು ವೃಷಭ ಲಗ್ನ.

ಈ ಲಗ್ನದಲ್ಲಿ ಶನಿಗೆ ಸರ್ವಶುಭತ್ವ ಕೊಡಲಾಗಿದೆ. ನವಮ ದಶಾಮಾಧಿಪತ್ಯ ದಿಂದ ಅದಕ್ಕೆ ದೈವಜ್ಞರು ನೂರು ಅಶುಭಗಳಿದ್ದರು. ವೃಷಭ ಲಗ್ನ ಉತ್ತಮ ಸಾವಿರ ಶುಭವಿದ್ದರು. ಕುಂಭ ಲಗ್ನ ಅಧಮವೆಂದಿರುವುದು ಇಲ್ಲಿ ರವಿ, ಚತುರ್ಥಾಧಿಪ ನಾದರೂ ಲಗ್ನೇಶ ಶತ್ರುವೆನ್ನುವುದನ್ನು ಮರೆಯಬಾರದು – ಶುಕ್ರ, ಬುಧ, ಶನಿ, ಬುಧ, ಶುಕ್ರ, ಶನಿ ಯೋಗವು ಶ್ರೇಷ್ಠವೆ. ಮಂಗಳ ಸಪ್ತಮಾಧಿಪನಾದರೂ ವ್ಯಯಾಧಿಪ ಹಾಗೂ ಶುಕ್ರನ ಶತ್ರುವಾಗಿ ಅಶುಭನೆ – ಬಂಜೆ ಗ್ರಹವಾದ ಬುಧನಿಗೆ ಸಹಚರ್ಯತ್ವದಿಂದ ಶುಭಾಶುಭ ಹೇಳುವುದು.

## ಮಿಥುನ ಲಗ್ನ – ಶುಭಾಶುಭ ಗ್ರಹಗಳು

ಭೌಮ ಜೀವರುಣಾಃ ಪಾಪಾ ಏಕ ಏವ ಕವಿಃ ಶುಭಃ ।
ಶನೈಶ್ವರೇಣ ಜೀವಸ್ಯ ಯೋಗೆ ಮೇಷಭವೋ ಯಥಾ ॥೨೪॥

ಪ್ರಧಾನ ಮಾರಕಶ್ಚಂದ್ರಃ ಫಲದಾಃ ಸಂಗತೇರ್ವಶಾತ್ ।
ಯುಗ್ಮ ಲಗ್ನಭವಸ್ಯೈತತ್ಫಲಂ ಸಿದ್ಧಿರುದೀರಿತಮ್ ॥೨೫॥



ಮಂಗಳ, ಗುರು, ಸೂರ್ಯ, ಮಿಥುನ ಲಗ್ನೋತ್ಪನ್ನನಿಗೆ ಪಾಪ ಫಲದರು ಏಕಮಾತ್ರ ಶುಕ್ರ ಶುಭಪ್ರದನು – ಶನಿ ನವಮ ಸ್ವಾಮಿಯಾದರೂ ದಶಾಮಾಧಿಪ ಗುರು ಸಂಯೋಗವಾದರೆ ಶುಭಪ್ರದನು. ಗುರು ಎರಡು ಕೇಂದ್ರಾಧಿಪತ್ಯವಿದ್ದರೆ ಸ್ವತಃ ಅಶುಭನಲ್ಲಿ ಚಂದ್ರ, ಬುಧನ ಶತ್ರುವಾಗಿ ಪೂರ್ಣ ಮಾರಕನಾಗುತ್ತಾನೆ.

## ಕರ್ಕಲಗ್ನಕ್ಕೆ ಶುಭಾಶುಭ ಗ್ರಹಗಳು

ಭಾರ್ಗವೆಂದು ಸುತೌ ಪಾಪೌ ಚಂದ್ರಾರಗುರವಃ ಶುಭಾಃ ।
ಭೂರಿಸೌಖ್ಯಕರೋ ಭೌಮಃ ಪೂರ್ಣಯೋಗ ವಿಧಾಯಕಃ ॥೨೬॥

ಹಂತಾ ಶನಿಸ್ತಥಾ ಸೂರ್ಯಃ ಫಲದಃ ಸಂಗತೀರ್ವಶಾತ್ ।
ಫಲಮೇತನ್ನಿಗದಿತಂ ಕರ್ಕಲಗ್ನೆ ತು ಜನ್ಮಿನಃ ॥೨೭॥

ಕರ್ಕ ಲಗ್ನ ಜಾತಕನಿಗೆ ಶುಕ್ರ, ಬುಧ ಪಾಪಫಲದರು. ಚಂದ್ರ, ಭೌಮ ಗುರು ಶುಭಫಲದರು – ಇವರಲ್ಲಿ ಭೌಮ ಪೂರ್ಣಫಲದಾಯಕನು – ಶನಿ – ಲಗ್ನಾಧಿಪನ ಶತ್ರುವಾದ್ದರಿಂದ ಸಾಮಾನ್ಯನು ರವಿ ಸಹಚರ್ಯದೊಂದಿಗೆ ಶುಭಾಶುಭದನು ಗುರು, ಮಂಗಳ ಯುತ ಕರ್ಕ, ಮಕರ, ಮೇಷದಲ್ಲಿ ಉತ್ತರೋತ್ತರ ರಾಜಯೋಗ ಫಲದಾಯಕವು – ಕರ್ಕದಲ್ಲಿ ಮಂಗಳ ನೀಚತ್ವಭಂಗ, ಮಕರದಲ್ಲಿ ಗುರು ನೀಚತ್ವ ಭಂಗ, ಮೇಷದಲ್ಲಿ ಸರ್ವಶುಭಪ್ರದ ರಾಜಯೋಗ ಕಾರಕವು ದಶಮ+ನವಮಾಧಿಪರ ಯೋಗ ಸರ್ವದಾ ರಾಜಯೋಗಕಾರಕವೆ.

## ಸಿಂಹ ಲಗ್ನ ಶುಭಾಶುಭ ಗ್ರಹಗಳು

ಕ್ರೂರಾಜ್ಞ್ಮಂದಭೃಗವಃ ಸೌಮ್ಯಾ ಭೌಮೇಜ್ಯ ಭಾನವಃ ।
ಪ್ರಭವೇದ್ಯೋಗ ಮಾತ್ರೇಣ ನ ಶುಭಃ ಗುರು ಶುಕ್ರಯೋಃ ॥೨೮॥

ನಿಹಂತಾ ಗೌರಿರಿಂದುಶ್ಚ ಫಲದಃ ಸಂಗತೆರ್ವಶಾತ್ ।
ಸಿಂಹೋದ್‌ಭವಸ್ಯ ಜಾತಸ್ಯ ಪ್ರೋಕ್ತಮೇ ತತ್ಫಲಂ ಬುಧೈಃ ॥೩೦॥

ಸಿಂಹ ಲಗ್ನೋತ್ಪನ್ನ ಜಾತಕನಿಗೆ ಬುಧ, ಶುಕ್ರ, ಶನಿ ಪಾಪಫಲದರು ಭೌಮ ಗುರು, ಸೂರ್ಯರು ಶುಭಪ್ರದರು. ಗುರು, ಶುಕ್ರ (ತ್ರಿಕೋಣೇಶ ಕೇಂದ್ರೇಶರಾದರೂ) ಯೋಗ ಮಾತ್ರದಿಂದ ಶುಭರಲ್ಲಿ ಎಲ್ಲ ಶುಭಸಹಿತರಾದರೆ ಮಾತ್ರ ಶುಭರು. ಆದರಲ್ಲಿ ವಿಶೇಷ ಗುರು ಶನಿ ಸಪ್ತಮೇಶನಾದ ಕಾರಣ ಶುಭನಾದರೂ ರವಿಗೆ (ಲಗ್ನೇಶನಿಗೆ ವೈರಿಯಾದ್ದರಿಂದ) ಶುಭನಲ್ಲ. ಚಂದ್ರ ವ್ಯಯೇಶನಾದರೂ ಲಗ್ನೇಶನ ಮಿತ್ರನಾದ್ದರಿಂದ ಸಹಚರ್ಯದಿಂದ ಶುಭನು.

## ಕನ್ಯಾಲಗ್ನ ಶುಭಾಶುಭ ಫಲ

ಕುಜಜೀವೆಂದವಃ ಪಾಪಾಃ ಶುಭದೌ ಸೌಮ್ಯ ಭಾರ್ಗವೌ ।
ಭಾರ್ಗವೆಂದು ಸುತಾವೇವ ಭವೇತಾಂ ಯೋಗಕಾರಕೌ ॥೩೦॥

ನಿಹಂತಾ ಕವಿರರ್ಕಸ್ತು ಫಲದಃ ಸಾಹಚರ್ಯತಃ ।
ಜನ್ಮಿನಃ ಕನ್ಯಾಕಾಲಗ್ನೆ ಪ್ರಾಜ್ಞೈರೆ ತತ್ಫಲಂ ಸ್ಮೃತಮ್ ॥೩೦॥

ಕನ್ಯಾ ಲಗ್ನದವರಿಗೆ ಕುಜ, ಗುರು, ಚಂದ್ರ ಪಾಪಫಲದರು. ಬುಧ, ಶುಕ್ರ ಶುಭರು ಹಾಗೂ ಬುಧ, ಶುಕ್ರ ಯೋಗ (ಯತಿ, ತ್ರಿದೇಕಾದಶ, ನವಪಂಚಕ ಆದಿಶುಭ) ಯೋಗಕಾರಕವು ಶುಕ್ರ, ಸೂರ್ಯ ಸಹಚರ್ಯ ಶುಭದರು ಆಗುತ್ತಾರೆ.

## ತುಲಾ ಲಗ್ನ ಶುಭಾಶುಭ ಗ್ರಹ

ಜೀವಾರ್ಕಭೂಮಿಜಾಃ ಪಾಪಾಃ ಶನೈಶ್ವರ ಬುಧೌ ಶುಭೌ ।
ಭವೇತಾಂ ರಾಜ ಯೋಗಸ್ಯ ಕಾರಕೌ ಚಂದ್ರತತ್ಸುತೌ ॥೩೨॥

ಕು ಜೋನಿಹಂತೊ ಜೀವಾದ್ಯಾಃ ಕ್ರೂರಾ ಮಾರಕಲಕ್ಷಣಾಃ ।
ಏಕ ಏವಸಮಃ ಕಾವ್ಯಶ್ಚೇತಿ ತೌಲಿಭವೆ ಫಲಮ್ ॥೩೩॥

ತುಲಾ ಲಗ್ನದಲ್ಲಿ ಜನಿಸಿದವನಿಗೆ ಗುರು, ಸೂರ್ಯ, ಮಂಗಳ ಪಾಪ ಫಲದವ ರಾದರೆ ಶನಿ, ಬುಧ ಶುಭಫಲದರು ಹಾಗೂ ಚಂದ್ರ, ಬುಧ ಯೋಗ ರಾಜಯೋಗ ಕಾರಕ. ಮಂಗಳ ಮಾರಕ ಜೀವಾದಿ (ಗುರು) ಗ್ರಹಗಳು ಮಾರಕಲಕ್ಷಣ ಶುಕ್ರ ಸಮ ಲಗ್ನಾಧಿಪನಾಗಿ ಶುಭನೆ.

## ವೃಶ್ಚಿಕ ಲಗ್ನ ಶುಭಾಶುಭ ಗ್ರಹ

ಶುಕ್ರವಿತ್ ಸೌರಯಃ ಪಾಪಾಃ ಶುಭೌ ಗುರು ನಶಾಕರೌ ।
ಸೂರ್ಯ ಚಂದ್ರಮಸಾವೇವ ಭವೇತಾಂ ಯೋಗಕಾರಕೌ ॥೩೪॥

ಸಮೇ ಭೌಮೋ ಸುರೇಜ್ಯದ್ಯಾ ಮಾರಕಾಃ ಸ್ಯುಃ ಶುಭೆತರಾಃ ।
ಫಲಮೇ ತದಲೌ ಜನ್ಮವತೋಹಿ ಸಮುದೀರಿತವಮ್ ॥೩೫॥

ವೃಶ್ಚಿಕಂ ಗ್ನೋತ್ಪನ್ನನಿಗೆ ಶುಕ್ರ, ಬುಧ, ಶನಿ ಪಾಪ ಫಲದರು ಸೂರ್ಯ, ಚಂದ್ರ ಯೋಗಕಾರರು ಮಂಗಳ ಸಮ ಶುಕ್ರ ಮಾರಕ ಪಾಪಿಯಾಗುವನು.

## ಧನು ಲಗ್ನ ಗ್ರಹ ಶುಭಾಶುಭ

ಏಕ ಏವ ಕವಿಃ ಪಾಪಃ ಶುಭೌ ಕುಜಾದಿವಾ ಕರೌ ।
ಭಾಸ್ಕರಜ್ಞ್ಯೌ ಯೋಗಕರೌ ನಿಹಂತಾ ತನಯೋ ರವಿಃ ॥೩೬॥

ಸಮೋ ಜೀವೋಥ ದೈತ್ಯೇಜ್ಯೋ ಮಾರಕತ್ವೇನ ಲಕ್ಷಿತಃ ।
ಚಾಪೋದಯೇತು ಜಾತಸ್ಯ ಪ್ರೋಕ್ತಮೇತತ್ ಫಲಂ ಬುಧೈಃ ॥೩೭॥

ಧನುರ್ ಲಗ್ನ ಜಾತಕನಿಗೆ ಶುಕ್ರನೊಬ್ಬನೆ ಪಾಪಕಾರಕ ಫಲದ ಗ್ರಹ ಕುಜ, ಸೂರ್ಯ ಶುಭಫಲದರು. ಸೂರ್ಯ, ಬುಧ ಯೋಗಕಾರಕ ಶನಿ, ಮಂಗಳರಲ್ಲಿ ಶನಿ ಮಾರಕ. ಗುರು ಸಮ – ಶುಕ್ರ ಮಾರಕ ಲಕ್ಷಣ.

## ಮಕರ ಲಗ್ನಕ್ಕೆ ಶುಭಾಶುಭ ಗ್ರಹ

ಕುಜಜೀವೇಂದವಃ ಪಾಪಾಃ ಶುಭೌ ಭಾರ್ಗವ ಚಂದ್ರಜೌ ।
ಸ್ವಯಂ ಹಂತಾ ನ ಮಂದಃ ಸ್ಯಾನ್ನಿಘ್ನನ್ಯಾರಾದಯೋಶುಭಃ ॥೩೮॥

ಸಮೋ ಭಾನುರ್ನಿಗದಿತಃ ಕವಿರೇಕಃ ಸುಯೋಗ ಕೃತ್ ।
ನಕ್ರೋದಯೇ ಪ್ರಜಾತಸ್ಯ ಜ್ಞೇಯಮೇತತ್ ಫಲಂ ಬುಧೈ ॥೩೯॥

ಮಕರ ಲಗ್ನಕ್ಕೆ ಮಂಗಳ, ಗುರು, ಚಂದ್ರ ಪಾಪ ಫಲದರು. ಬುಧ, ಶುಕ್ರ ಶುಭರು. ಮಂಗಳಾದಿ ಪಾಪಗ್ರಹ ಮಾರಕ. ಶನಿ ಲಗ್ನೇಶನಾದ್ದರಿಂದ ಶುಭನೆ. ಅವನಿಗೆ ಸೂರ್ಯಸಮ, ಶುಕ್ರ ಯೋಗಕಾರಕ.

## ಕುಂಭ ಲಗ್ನ

ಜೀವ ಚಂದ್ರಕುಜಾಃ ಪಾಪಃ ಶುಭೌ ಕಾವ್ಯಶನ್ಯೈಶ್ವರೌ ।
ರಾಜಯೋಗಕರೋ ವಿದ್ಧಿ ಭಾರ್ಗವಃ ಸಮುದೀರಿತಃ ॥೪೦॥

ನಿಘ್ನಂತೀನಾರ ಜೀವಾಸ್ತು ಸೌಮ್ಯೋ ಮಧ್ಯ ಫಲಪ್ರದಃ ।
ಘಟೋದಯೇ ಪ್ರಜಾತಸ್ಯ ಜ್ಞೇಯಮೇ ತತ್ಫಲಂ ಬುಧೈಃ ॥೪೧॥

ಕುಂಭಕ್ಕೆ ಗುರು, ಚಂದ್ರ ಭೌಮ ಪಾಪಫಲದರು. ಶುಕ್ರ, ಶನಿ ಶುಭದರು. ಯೋಗಕಾರಕರು ಶುಕ್ರ, ಬುಧ, ಮಧ್ಯಫಲದ ಗುರು, ಸೂರ್ಯ, ಮಂಗಳರು ಮಾರಕರು – ಹೀಗಾಗಿ ಈ ರಾಶಿಗಳ ಲಗ್ನದಲ್ಲಿ ಸಾವಿರ ಶುಭಗಳಿದ್ದರೂ ಕುಂಭ ಲಗ್ನವೇ ಬೇಡವೆಂದಿರುವುದು.

## ಮೀನ ಲಗ್ನಕ್ಕೆ

ಮಂದ ಶುಕ್ರಾಂಶು ಮತ್ಸೌಮ್ಯಾಃ ಪಾಪಾಃ ಭೌಮಾ ವಿಧೂ ಶುಭೌ ।
ಮಹಿಸುತ ಗುರು ಯೋಗಕರ್ತಾತ್ವೇನ ಸ್ಮೃತೌ ಬುಧೈಃ ॥೪೨॥

ಮಾರಕೌ ಬುಧ ಮಂದೌ ಸ್ತೋ ನ ಹಂತಾ ಮಾರಕಃ ಕುಜಾಃ ।
ಝಷೋದಯೇ ಪ್ರಜಾತಸ್ಯ ಜ್ಞೇಯಮೇತತ್ ಫಲಂ ಬುಧೈ ॥೪೩॥

ಮೀನ ಲಗ್ನದಲ್ಲಿ ಜನಿಸಿದ ಜಾತಕನಿಗೆ ಶನಿ, ಶುಕ್ರ, ಸೂರ್ಯ, ಬುಧ ಪಾಪ ಫಲದರು. ಭೌಮ ಚಂದ್ರ ಶುಭದರು. ಮಂಗಳ, ಗುರು ರಾಜಯೋಗಕಾರಕ (ಕರ್ಕ ಲಗ್ನದಲ್ಲಿ) ಭೌಮ ದ್ವಿತೀಯೇಶನಾದ್ದರಿಂದ ಮಾರಕನಲ್ಲ, ಬುಧ, ಶನಿ ಮಾರಕರು.

ಭಾವಾಧೀಶತ್ವತಶ್ಚೈತ್ಥಂ ಜನುರ್ಲಗ್ನಾನುಸಾರತಃ ।
ಶುಭಾಶುಭತ್ವ ಮುದಿತಂ ಖೇಚರಾಣಾಂ ದ್ವಿಜೋತ್ತಮ ॥೪೪॥

ಈ ಪ್ರಕಾರ ಭಾವಧಿಪತ್ಯ ಹಾಗೂ ಜನ್ಮ ಲಗ್ನಾನುಸಾರ ಗ್ರಹಗಳ ಶುಭಾಶುಭತ್ವ ತಿಳಿಯುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಯೋಗಾಧ್ಯಾಯಃ ಸಮಾಪ್ತಃ



ಇ೬ನೇ ಅಧ್ಯಾಯ

# ಅಥ ನಾಭಸ ಯೋಗಫಲಾಧ್ಯಾಯಃ

## ಪರಾಶರ ಉವಾಚ:

ಅಧುನಾ ನಾಭಸಾನ್ ಯೋಗಾನ್ ಮುಖ್ಯಾನ್ ದ್ವಾತ್ರಿಂಶದುನ್ಮಿತಾನ್।
ವಚ್ಮಿ ತೇಷಾಂ ಪ್ರಭೇದಾಃ ಸ್ಯುರಷ್ಟಾದಶ ಶತೋನ್ಮಿತಾಃ ॥೧॥

ಆಶ್ರಯಾಖ್ಯಾಸ್ತ್ರಯೋ ಯೋಗಾ ದಲಯೋಗದ್ವಯಂ ತತಃ ।
ಆಕೃತಿರ್ವಿಂಶತಿ ಮಿತಾಃ ಸಂಖ್ಯಾಃ ಸಪ್ತಮಿತಾ ಮತಾಃ ॥೨॥

## ಪರಾಶರರು ಹೇಳಿದರು–

ಈಗ ನಾನು 32 ಪ್ರಮಿತ ಮುಖ್ಯವಾದ ನಾಭಸ ಯೋಗಗಳನ್ನು ಹೇಳುತ್ತೇನೆ. ಅವುಗಳ ಪ್ರಭೇದ 1,800 ಇದೆ. ಅಶ್ರಯ ಯೋಗ 3, ದ್ದಲ ಯೋಗ 2, ಆಕೃತಿ ಯೋಗ 20, ಸಂಖ್ಯಾಕವಾಗಿವೆ.

### ನಾಭಸಗಳ ಹೆಸರು

ರಜ್ಜುನಾಮಾಥ ಮುಸಲೋ ನಲಶ್ಚೇತ್ಯಾಶ್ರಯ ತ್ರಯಮ್ ।
ಮಾಲಾಭುಜಂಗವೌ ಚೇತ್ತ ಯೋಗೌ ಜ್ಞೇಯೌ ದಲಾಭಿಧೌ ॥೩॥

ಗದಾಯೋಗಶ್ಚ ಶಕಟಃ ಶೃಂಗಾರ ಕವಿಹಂಗವೌ ।
ಹಲವಜ್ರಯವಾಶ್ಚೈವ ಕಮಲಂ ವಾಪಿಯೂಪಕೌ ॥೪॥

ಶರಶಕ್ತಿ ದಂಡನೌಕಾ ಕೂಟಚ್ಛತ್ರ ಧನೂಂಷಿ ಚ ।
ಅರ್ಧೇಂದು ಯೋಗಶ್ಚಕ್ರಾಖ್ಯಃ ಸಮುದ್ರಶ್ಚೇತಿ ವಿಂಶತಿಃ ॥೫॥

ಅಥ ವೀಣಾ ದಾಮ ಪಾಶಃ ಕೇದಾರಃ ಶೂಲಸಂಜ್ಞಕಃ ।
ಯುಗಗೋಲಾವಿತಿ ಸಮೇಯೋಗಾ ದಂತಮಿತಾಮತಾಃ ॥೬॥

ರಜ್ಜು, ಮುಸಲ, ನಲ – ಈ ಮೂರು ಆಶ್ರಯ ಯೋಗಗಳು ಮಾಲಾ ಸರ್ಪ – ದಲ ಸಂಜ್ಞಕ ಯೋಗಗಳು, ಗದಾ ಶಕಟ ಪದ್ಮ ಹಲ ವಜ್ರ ಯವ ಕಮಲ ವಾಪಿ ಯೂಪ ಶರ ಶಕ್ತಿ ದಂಡ ನೌಕಾಕೂಟ ಕ್ಷತ್ರ ಧನುಷ್, ಅರ್ಧಚಂದ್ರ, ಶುಕ್ರ ಹಾಗೂ ಸಮುದ್ರದಲ್ಲಿ 20 ಆಕೃತಿ ಸಂಜ್ಞಕಗಳು. ವೀಣಾ, ದಾಮ, ಪಾಶ, ಕೇದಾರ,

**ಯವಃ** – ಶುಭ ಗ್ರಹಗಳು ಚತುರ್ಥ, ದಶಮ ಪಾಪಗ್ರಹಗಳು ಲಗ್ನ ಸಪ್ತಮದಲ್ಲಿ

**ಕಮಲ** – ಎಲ್ಲ ಗ್ರಹಗಳು ನಾಲ್ಕು ಕೇಂದ್ರದಲ್ಲಿ ಸ್ಥಿತವಾದರೆ

**ಪಾಪಿ** – ಎಲ್ಲ ಗ್ರಹಗಳು ಕೇಂದ್ರ ಬಿಟ್ಟು ಪರಫಣ ಹಾಗೂ ಆಪೋಕ್ಲಿಮದಲ್ಲಿದ್ದರೆ

**ಯೂಪ** – ಲಗ್ನದಿಂದ ಚತುರ್ಥದವರೆಗೆ ಎಲ್ಲ ಗ್ರಹಗಳಿದ್ದರೆ

**ಶರಃ** – ಚತುರ್ಥದಿಂದ ಸಪ್ತಮದವರೆಗೆ (ಆ ಮನೆ) ಎಲ್ಲ ಗ್ರಹಗಳಿದ್ದರೆ

**ಶಕ್ತಿ** – ಸಪ್ತಮದಿಂದ ದಶಮದವರೆಗೆ ಎಲ್ಲ ಗ್ರಹಗಳಿದ್ದರೆ

**ದಂಡ** – ದಶಮದಿಂದ ಲಗ್ನದವರೆಗೆ (ಆ ಸ್ಥಾನ) ಎಲ್ಲ ಗ್ರಹಗಳಿದ್ದರೆ

**ನೌಕಾ** – ಲಗ್ನದಿಂದ ಸಪ್ತಮದವರೆಗೆ ಎಲ್ಲ ರಾಶಿಯಲ್ಲಿ ಎಲ್ಲ ಗ್ರಹಗಳಿದ್ದರೆ

**ಕೂಟ** – ನಾಲ್ಕನೇ ಸ್ಥಾನದಿಂದ 7 ರಾಶಿಗಳಲ್ಲಿ (ದಶಮ) ಎಲ್ಲ ಗ್ರಹಗಳಿದ್ದರೆ

**ಕ್ಷತ್ರ** – ಸಪ್ತಮದಿಂದ ಲಗ್ನದವರೆಗೆ 7 ರಾಶಿಗಳಲ್ಲಿ ಎಲ್ಲ ಗ್ರಹಗಳಿದ್ದರೆ

**ಚಾಪ** – ದಶಮದಿಂದ ಚತುರ್ಥದವರೆಗೆ 7 ರಾಶಿಗಳಲ್ಲಿ ಎಲ್ಲ ಗ್ರಹಗಳಿದ್ದರೆ

**ಅರ್ಧಚಂದ್ರ** – ಕೇಂದ್ರ ಬಿಟ್ಟು ಉಳಿದ 7 ಸ್ಥಾನಗಳಂತೆ ಎಲ್ಲ 8 ಪ್ರಕಾರ ಗ್ರಹಗಳಿದ್ದರೆ 8 ಪ್ರಕಾರದ ಅರ್ಧಚಂದ್ರಯೋಗವಾಗುತ್ತದೆ. 2ರಿಂದ 8ನೇ ಸ್ಥಾನದವರೆಗೆ ಒಂದೊಂದರಿಂದ 7 ಸ್ಥಾನಗಳಲ್ಲಿ – ಎಂಟು ವಿಧ ಅರ್ಧಚಂದ್ರ ಯೋಗ.

**ಚಕ್ರಯೋಗ** – (1, 3, 5, 7, 9, 11) ಎಲ್ಲ ಗ್ರಹಗಳಿದ್ದರೆ

**ಸಮುದ್ರ** – ದ್ವಿತೀಯದಿಂದ ಏಕಾಂತರದಂತೆ (2, 4, 6, 8, 10, 12) ಎಲ್ಲ ಸ್ಥಾನದಲ್ಲಿ ಗ್ರಹಗಳಿದ್ದರೆ ಈ ಯೋಗಗಳಿಗೆ ಆಕೃತಿಯೋಗವೆನ್ನುವರು.

## ಸಂಖ್ಯಾಯೋಗ ಲಕ್ಷಣ

**ಏಕರ್ಕ್ಷಗೈಃ ಖಗೈರ್ಗಲಾಲೋ ರಾಶಿದ್ವಯಗೈರ್ಯುಗಃ ।**
**ತ್ರಿಚತುರ್ಥಗತೈಃ ಶೂಲಃ ಕೇದಾರಶ್ಚ ಕ್ರಮಾತ್ ಸ್ಮೃತಃ ॥೧೭॥**

**ಏವಂ ಪಂಚರ್ಕ್ಷಗೈಃ ಪಾಶಿ ದಾಮಯೋಗಸ್ತು ಷಡ್ ಭಗೈಃ ।**
**ಸಪ್ತರಾಶಿ ಗತೈರ್ವೀಣಾಯೋಗಾಶ್ಚೆದುದಿತಾ ನಹಿ ॥೧೮॥**

ಗೋಲ – ಎಲ್ಲ ಗ್ರಹಗಳು ಒಂದೇ ರಾಶಿಯಲ್ಲಿದ್ದರೆ

ಯುಗಃ – ಎಲ್ಲ ಗ್ರಹಗಳು 2 ರಾಶಿಯಲ್ಲಿದ್ದರೆ

ಶೂಲಃ – ಎಲ್ಲ ಗ್ರಹಗಳು 3 ರಾಶಿಯಲ್ಲಿದ್ದರೆ

ಕೇದಾರ – ಎಲ್ಲ ಗ್ರಹಗಳು 4 ರಾಶಿಯಲ್ಲಿದ್ದರೆ

ಪಾಶ – ಎಲ್ಲ ಗ್ರಹಗಳು 5 ರಾಶಿಯಲ್ಲಿದ್ದರೆ

ದಾಮ – 6 ರಾಶಿಗಳಲ್ಲಿ ಎಲ್ಲ ಗ್ರಹಗಳಿದ್ದರೆ

ವೀಣಾ – 7 ರಾಶಿಯಲ್ಲಿ ಎಲ್ಲ ಗ್ರಹಗಳಿದ್ದರೆ

ಈ ಯೋಗಗು ಮೇಲೆ ಹೇಳಿದ 1ರಿಂದ 4ರವರೆಗೆ ಗ್ರಹದಲ್ಲಿ ಎಲ್ಲ ಗ್ರಹಗಳು ಇತ್ಯಾದಿ ಯೋಗವಾಗದಿದ್ದಾಗ ಈ ಯೋಗಗಳಾಗುತ್ತದೆ. ಆ ಯೋಗಗಳಾದರೆ ಈ ಯೋಗವನ್ನು ಬಿಡುವುದು.

## ರುಜ್ವಾದಿ ಯೋಗ ಫಲ

ಅಟನ ಪ್ರಿಯಾಃ ಸುರುಪಾಃ ಪರದೇಶಸ್ವಾಸ್ಥ್ಯ ಭಾಗಿನೋ ಮನುಜಃ ।
ಕ್ರೂರಃ ಬಲಸ್ವಭಾವಾ ರಜ್ಜು ಪ್ರಭಾವಾಃ ಸದಾಕಥಿತಾಃ ॥೧೯॥

ಮಾನಜ್ಞಾನ ದ್ರವೀಣೈರ್ಯುಕ್ತಾ ನೃಪತಿ ಪ್ರಿಯಾಃ ಖ್ಯಾತಾಃ ।
ಬಹುಪುತ್ರಾಃ ಸ್ಥಿರ ಚಿತ್ತಾ ಮುಸಲ ಸಮುತ್ಥಾ ಭವಂತಿ ನರಾಃ ॥೨೦॥

ನ್ಯೂನಾತಿರಿಕ್ತ ದೇಹಾ ಧನಸಂಚಯ ಮಾಗಿನೋತಿ ನಿಪುಣಾಶ್ಚ ।
ಬಂಧು ಹಿತಾಶ್ಚ ಸುರೂಪಾ ನೇಲಯೋಗೆ ಸಂಪ್ರಸೂಯಂತೆ ॥೨೧॥

ನಿತ್ಯ ಸುಖ ಪ್ರಧಾನಾ ವಾಹನ ವಸ್ತ್ರಾನ್ನ ಭೋಗ ಸಂಪನ್ನಾಃ ।
ಕಾಂತಾಃ ಸುಬಹುಸ್ತ್ರೀಕಾ ಮಾಲಾಯಾಂಸಂಪ್ರಸೂತಾಃ ಸ್ಯುಃ ॥೨೨॥

ವಿಷಮಾಃ ಕ್ರೂರಾ ನಿಃಸ್ವಾ ನಿತ್ಯಂ ದುಃಖಾರ್ದಿತಾಃ ಸುದಿನಾಶ್ಚ ।
ಪರಭಕ್ಷಪಾನ ನಿರತಾಃ ಸರ್ಪಭವಾ ಭವಂತಿ ನರಾಃ ॥೨೩॥

ಸತತೋದ್ಯುಕ್ತಾರ್ಥವಶಾ ಯಜ್ವಾನಃ ಶಾಸ್ತ್ರಗೆಯಕುಶಲಾಶ್ಚ ।
ಧನಕನಕರತ್ನ ಸಂಪತ್ಸಂಯುಕ್ತಾ ಮಾನವಾ ಗದಾಯಾಂ ತು ॥೨೪॥

ರೋಗಾರ್ತಾಃ ಕುನಖಾ ಮೂರ್ಖಾಃ ಶಕಟಾನು ಜೀವಿನೋ ನಿಃಸ್ವಾಃ ।
ಮಿತ್ರಸ್ವಜನ ವಿಹಿನಾಃ ಶಕಟೆ ಜಾತಾ ಭವಂತಿ ನರಾಃ ॥೨೫॥

ಭ್ರಮಣ ರುಚಯೋ ವಿಕೃಷ್ಟಾ ದೂತಾಃ ಸುರತಾನು ಜೀವಿನೋ ದೃಷ್ಟಾಃ।
ಕಲಹ ಪ್ರಿಯಾಶ್ಚ ನಿತ್ಯ ವಿಹಗೆ ಯೋಗೆ ಸದಾಜಾತಃ ॥೨೬॥

ರಜ್ಜುಯೋಗ – ಈ ಯೋಗದಲ್ಲಿ ಜನಿಸಿದವನು ಭ್ರಮಣ ಶೀಲ, ನೋಡಲು ಸುಂದರ, ಪರದೇಶದಲ್ಲಿ ಸುಖಿ, ಕ್ರೂರ ಹಾಗೂ ದುಷ್ಟಸ್ವಭಾವ.

ಮುಸಲ ಯೋಗ – ಮಾನಿ, ಜ್ಞಾನಿ, ಧನ ಸಂಪತ್ತುಯುಕ್ತ ರಾಜಪ್ರಿಯ ವಿಖ್ಯಾತ ಪುತ್ರಿವಂತ ಸ್ಥಿರಬುದ್ಧಿ.

ನೀಲೋ – ಹೀನಾಂಗ ಅಧಿಕಾಂಶ ಧನಸಂಚಯ ಕರ್ತಾ ಅತ್ಯಂತ ಕುಶಲ ಬಂಧು–ಬಾಂಧವ ಪ್ರೇಮಿ ಸುಂದರ.

ಮಾಲಾ – ಯಾವಾಗಲೂ ಸುಖಿ, ವಾಹನ, ವಸ್ತ್ರ, ಅನ್ನ ಆದಿ ಭೋಗ್ಯ ಸಾಮಗ್ರಿಯಯುಕ್ತ ಅನೇಕ ಸುಂದರ ಸ್ತ್ರೀಯುಕ್ತ.

ಸರ್ಪ – ಕುಟಿಲ, ದುಷ್ಟ, ನಿರ್ಧನ, ಸತತ ದುಃಖ ಪೀಡಿತ, ದಾನಿ ಆದರೆ ಎರಡನೆಯವರ ಅನ್ನ ವಸ್ತ್ರಾದಿಗಳ ಮೇಲೆ ಜೀವಿತ.

ಗದಾ – ಸತತ ಅರ್ಥೋದ್ಯೋಗರತ ಯಜ್ಞಸ್ತ್ರೀಯೋ ಶಾಸ್ತ್ರ ಹಾಗೂ ಸಂಗೀತ ಪ್ರವೀಣ, ಸವರ್ಣಾದಿ ರತ್ನ ಪರಿಪೂರ್ಣ.

ಶಕಟ – ರೋಗ ಪೀಡಿತ ಕುತ್ಸಿಕ, ಮೂರ್ಖ – ವಾಹನದಿಂದ ಉಪಜೀವನ, ನಿರ್ಧನ, ಮಿತ್ರ–ಬಂಧು–ಬಾಂಧವ ವಿಹೀನ.

ವಿಹಗಃ – ಭ್ರಮಣಶೀಲ ಪರಾಧೀನ ದೂತ – ಸದಾ ಸುರತ ನಿರಂತರ ಜಗಳಗಂಟ.

## ಶೃಂಗಾಟಕಾದಿ ಯೋಗಫಲ

ಪ್ರಿಯ ಕಲಹಃ ಸಮರಸಹಾಃ ಸುಖಿನೋ ನೃಪತೆ ಪ್ರಿಯಾಃ ಶುಭಕಲತ್ರಃ।
ಆಢ್ಯಾ ಯುವತಿದ್ವೇಷ್ಯಾಃ ಶೃಂಗಾಟಂಸಂಭಾವಾ ಮನುಜಾಃ ॥೨೭॥

ವಹ್ಯಾಶಿನೋ ದರಿದ್ರಾಃ ಕೃಷಿವಲಾ ದುಃಖಿತಾಃ ಸೋದ್‌ವೇಗಾಃ ।
ಬಂಧುಸುಹದ್ಭಿರ್ಯುಕ್ತಾಃ ಪ್ರೇಷ್ಯಾ ಹಲಸಂಜ್ಞಕೆ ಪುರುಷಾಃ ॥೨೮॥

ಆದ್ಯಾಂತವಯಃ ಸುಖಿನಃ ಶೂರೌಃ ಸುಭಗಾ ನಿರೀಹಾಶ್ಚ ।
ಭಾಗ್ಯ ವಿಹೀನಾ ವಜ್ರೆ ಜಾತಃ ಖಿಲಾ ವಿರುದ್ಧಾ ಶ್ಚ ॥೨೯॥

ವ್ರತ ನಿಯಮ ಮಂಗಲಪರಾ ವಯಸೋ ಮಧ್ಯೆ ಸುಖಾರ್ಥ
ಪುತ್ರಯುತಾಃ ।
ದಾತಾರಾಃ ಸ್ಥಿರಚಿತ್ತಾ ಯವಯೋಗಭವಾಃ ಸದಾ ಪುರುಷಾಃ ॥೩೦॥

ವಿಭವಗುಣಾಢ್ಯಾ ಪುರುಷಾಃ ಸ್ಥಿರಾಯುಷೊವಿಪುಲ ಕೀರ್ತೀಯಃ ಶುದ್ಧಾ ಃ।
ಶುಭಾಶಾತ್‌ಕಾಃ ಪೃಥ್ವಿಶಾಃ ಕಮಲಭವಾ ಮಾನವಾ ನಿತ್ಯಮ್ ॥೩೧॥

ಶೃಂಗಾಟಕ ಯೋಗ – ಈ ಯೋಗದಲ್ಲಿ ಜಾತಕ ಯುದ್ಧ ಪ್ರೇಮಿ, ಸುಖಿ, ರಾಜವಲ್ಲಭ, ಸುಂದರ ಸ್ತ್ರೀಯಿಂದ ಕೂಡಿದವ, ಧನಿ, ಸ್ತ್ರೀಯರನ್ನು ದ್ವೇಷಿಸುವವ.

ಹಲಯೋಗ – ಬಹಳ ತಿನ್ನುವವ, ದರಿದ್ರ, ದುಃಖಿ, ಉದ್ವಿಗ್ನ, ಬಂಧು ಮಿತ್ರಯುಕ್ತ ದಾಸವೃತ್ತಿ.

ವಜ್ರ ಯೋಗ – ಬಾಲ್ಯದಿಂದ ವೃದ್ಧಾಪ್ಯದವರೆಗೆ ಸುಖಿ, ಶೂರ, ಸುಂದರ, ಭಾಗ್ಯರಹಿತ ದುಷ್ಟ, ಜನವಿರೋಧಿ.

ಯವ ಯೋಗ – ವೃತ್ತಿನಿರತ ಮಾಂಗಲಿಕ ಕಾರ್ಯರತ ಮಧ್ಯಸುಖಿ, ಧನಪುತ್ರಯುಕ್ತ ದಾನ ಮಾಡುವವನು ಸ್ಥಿರ ಬುದ್ಧಿ.

ಕಮಲ ಯೋಗ – ಐಶ್ವರ್ಯವಂತ, ಗುಣಪೂರ್ಣ ದೀರ್ಘಾಯು, ಬಹಳ ಕೀರ್ತಿಯುಳ್ಳವ ಶುದ್ಧ ಅನೇಕ ಸತ್ಕರ್ಮ ನಿರತ.

## ವಾಪಿ ಪ್ರಭೃತಿ ಯೋಗಫಲ

ನಿಧಿಕರಣೆ ನಿಪುಣಧಿಯಃ ಸ್ಥಿರಾರ್ಥ ಸುಖ ಸಂಯುತಾಃ ಸುತಯುಕ್ತಃ ।
ನಯನ ಸುಖ ಸಂಪ್ರಹೃಷ್ಟಾ ವಾಪಿಯೋಗೇನ ರಾಜಾನಃ ॥೩೨॥

ಆತ್ಮ ವಿದಿಜ್ಯ ನಿರತಃ ಸ್ತ್ರೀಯಾ ಯುತಃ ಸತ್ವಸಂಪನ್ನಃ ।
ವ್ರತಯಮನಿಯಮ ನಿರತೋ ಯೂಪೆ ಜಾತೆ ವಿಶಿಷ್ಟಶ್ಚ ॥೩೩॥

ಶರಕಾರಾಃಕಾರೇಶಃ ಮೃಗಯಾಧನಸೇ ವಿತಾಶ್ಚವಾಂಸಾದಾಃ ।
ಹಿಂಸ್ರಾಃ ಕುಶಿಲ್ಪಕಾರಾಃಶರಯೋಗೆ ಮಾನವಃ ಪ್ರಸೂಯಂತೆ ॥೩೪॥

ಧನರಹಿತ ವಿಫಲ ದುಃಖಿತ ನೀಚಾಲಸಾಶ್ರಿರಾಯುಷಃ ಪುರಷಾಃ ।
ಸಂಗ್ರಾಮ ಬುದ್ಧಿ ನಿಪುಣಃ ಶಕ್ಯಾಂ ಜಾತಃ ಸ್ಥಿರಾಃ ಸುಭಗಾಃ ॥೩೫॥

ಹೃತಪುತ್ರದಾರನಿಃಸ್ವಾಃ ಸರ್ವತ್ರ ಚ ನಿರ್ಘೃಣಾಃ ಸ್ವಜನವಾಹ್ಯಾಃ ।
ದುಃಖಿತನಿಚಪ್ರೇಷ್ಯಾ ದಂಡ ಪ್ರಭಾವಾ ಭವಂತಿ ನರಾಃ ॥೩೬॥

ಸಲಿಲೋಪ ಜೀವಿ ವಿಭವಾ ಬಹ್ವಾಶಾಃ ಖ್ಯಾತತಿರ್ತ್ರಯೋ ದುಷ್ಟಾಃ।
ಕೃಪಣಾ ಮಲಿನಾ ಲುಬ್ಧಾನೌ ಸಜ್ಞಾತಾಃ ಖಲಾಃ ಪುರುಷಃ ॥೩೭॥

ವಾಪಿಯೋಗ – ಧನ ಸಂಗ್ರಹ ಪ್ರವೀಣ ಸ್ಥಿರ ಧನ, ಸ್ಥಿರ ಸುಖ ಪುತ್ರಯುಕ್ತ – ಪ್ರಸನ್ನ – ರಾಜ

ಯೂಪ – ಆತ್ಮಜ್ಞಾನಿ, ಯಜ್ಞಕರ್ತಾರ ಸ್ತ್ರೀಯುಕ್ತ ಪರಾಕ್ರಮಿ, ವ್ರತ ಯಮ ನಿಯಮದಲ್ಲಿ ತತ್ಪರ ಒಟ್ಟಿನಲ್ಲಿ ವಿಶಿಷ್ಟ ಪುರುಷ.

ಶರಯೋಗ – ಆಯುಧ ತಯಾರಕ – ಕಾರಗ್ರುಹದ ಅಧಿಪ (ಜೇಲರ) ಬೇಟೆಯಿಂದ ಧನ ಸಂಪನ್ನ ಮಾಂಸಾಕಾಂಕ್ಷಿ, ಹಿಂಸಕ, ಕುಟಿಲ ಕರ್ಮನಿತರ.

ಶಕ್ತಿಯೋಗ – ನಿರ್ಧನ–ಸೋಲುಗಳಿಂದ ದುಃಖಿತ, ನೀಚ, ಆಲಸಿ, ದೀರ್ಘಾಯು, ಯುದ್ಧಕುಶಲ ಸ್ಥಿರ ಹಾಗೂ ಸುರೂಪವಂತ.

ದಂಡಯೋಗ – ಸ್ತ್ರೀಪುತ್ರ ವಿಹೀನ, ನಿರ್ಧನ, ಆತ್ಮೀಯರಿಂದಲೇ ತಿರಸ್ಕೃತ ದುಃಖಿ ನೀಚ ದಾಸವೃತ್ತಿ.

ನೌಕಾಯೋಗ – ನೌಕಾಯೋಗದ ಜಾತಕ ಜಲಜೀವಿ ಪದಾರ್ಥ ಜೀವಿಗಳ ಮೇಲೆ ಉಪಜೀವಿಕ – ದೊಡ್ಡ ಕನಸುಗಾರ ವಿಖ್ಯಾತ ದುಷ್ಟ ಜಿಪುಣ – ಮಲಿನ ಹೃದಯ – ಆಸೆ ಬುರುಕ.

## ಕೂಟಾದಿಯೋಗಫಲ

ಅನೃತಕಥನ ಬಂಧನಪಾನಿಷ್ಕೆಂಚ್ಚನಾಃ ಶಠಾಃ ಕ್ರೂರಾಃ ।
ಕೂಟ ಸಮುತ್ಥಾ ನಿತ್ಯಂ ಭವಂತಿ ಗಿರಿದುರ್ಗವಾಸಿನೋ ಮನುಜಾಃ ॥೩೮॥

ಸ್ವಜನಾಶ್ರಯೋ ದಯಾವಾನ್ ನಾನಾ ನೃಪವಲ್ಲಭಃ ಪ್ರಕೃಷ್ಟೆಮತಿಃ।
ಪ್ರಥಂಯೇ ವಯನರಃ ಸುಖವಾನ್ ದೀರ್ಘಾ ಯುರಾ ತಪನೆತ್ರಿಸ್ಯಾತ್ ॥೩೯॥

ಆನೃತಿಕ ಗುಪ್ತ ಪಾಲಾ ಶ್ವೇರಾಃ ಕೀತವಾಶ್ಚ ಕಾನನೆ ನಿರತಃ ।
ಕಾರ್ಮುಕಯೋಗೆ ಜಾತಾ ಭಾಗ್ಯ ವಿಹೀನಾಃ ಶುಭಾ ವಯೋಮಧ್ಯೆ ॥೪೦॥

ಸೇನಾಪತಯಃ ಸರ್ವೆ ಕಾಂತಶರೀರ ನೃಪಪ್ರಿಯಾ ಬಲಿನಃ ।
ಮಣಿಕನಕಭೂಷಣ ಯುತಾ ಭವಂತಿ ಯೋಗೇರ್ಧಚಂದ್ರಾಖ್ಯೆ ॥೪೧॥

ಪ್ರಣತಾಶೇಷ ನರಾಧಿಪ ಕಿರೀಟ ರತ್ನ ಪ್ರಭಾಸ್ಫುರಿತ ಪದಃ ।
ಭವತಿ ನರೇಂದ್ರೋ ಮನುಜಶ್ಚರೆ ಯೋ ಜಾಯತೆ ಯೋಗೆ ॥೪೨॥

ಬಹುರತ್ನ ಧನ ಸಮೃದ್ಧಾ ಭೋಗ ಯುತಾ ಧನ ಜನಪ್ರಿಯಾಃ ಸಸುತಾಃ।
ಉದಧಿ ಸಮುತ್ಥಾಃ ಪುರುಷಾಃ ಸ್ಥಿರವಿಭಾವಾಃ ಸಾಧುಶೀಲಾಶ್ಚ ॥೪೩॥

ಕೂಟ ಯೋಗ – ಅಸತ್ಯಭಾಷಿ, ಕಾರಗ್ರಹ ಅಧಿಕಾರಿ, ಶಠಕ್ರೂರ – ಅಡವಿ ಅಥವಾ ಕಿಲ್ಲೆಯಲ್ಲಿರುವವ.

ಛತ್ರ – ತನ್ನ ಸಾಮರ್ಥ್ಯದಿಂದ ಉದರ ಪೋಷಣೆ, ದಯಾಳು, ರಾಜ ಗಣಪ್ರಿಯ, ಉತ್ಕೃಷ್ಟ ವೃದ್ಧಿ, ಆದಿ, ಅಂತಿಮ ಅವಸ್ಥೆ ಸುಖಿ ದೀರ್ಘಾಯು.

ಚಾಪ – ಅಸತ್ಯಭಾಷಿ – ಮುಖ್ಯಚೇಲರ, ಕಳ್ಳ, ಧೂರ್ತ, ಅಡವಿಯಲ್ಲಿ ತಿರುಗಾಡುವವ, ಭಾಗ್ಯಹೀನ, ಮಧ್ಯ ಅವಸ್ಥೆ ಸೌಖ್ಯ ಪೂರ್ಣ.

ಅರ್ಧಚಂದ್ರ – ಸೇನಾಪತಿ, ಸುಂದರ ಶರೀರ, ರಾಜವಲ್ಲಭ, ಖಲಿ ಮಣಿ ಸವರ್ಣಾದಿ ಆಭೂಷಣಯುಕ್ತ.

ಚಕ್ರ – ನತ ಮಸ್ತಕನು ರಾಜ ಗುಣದ ಮುಕುಟ ರತ್ನಾದಿಗಳಿಂದ ಉಜ್ವಲ – ಚರಣದವನು ಚಕ್ರವರ್ತಿ.

ಸಮುದ್ರ ಯೋಗ – ಅನೇಕ ರತ್ನಾದಿ ಪರಿಪೂರ್ಣ, ಧನ ಸಮೃದ್ಧ, ಜನಪ್ರಿಯ ಪುತ್ರವಂತ, ಸ್ಥಿರ ಸಾಧು ಸ್ವಭಾವ.

### ವೀಣಾದಿ ಯೋಗ ಫಲ

ಪ್ರಿಯಗೀತನೃತ್ಯಾವಾದ್ಯಾ ನಿಪುಣ ಸುಖಿನಶ್ಚ ಧನವಂತ ।
ನೇತಾರೋ ಬಹುಬೃತ್ಯಾ ವೀಣಾಯಾಂ ಕೀರ್ತಿತಾಃ ಪುರುಷಃ ॥೪೪॥

ದಾಮ್ನಿ ಸ್ಯಾದುಪಕಾರಿ ನಯಧನಯುಕ್ತೊ ಮಹೇಶ್ವರಃ ಖ್ಯಾತಃ ।
ಬಹುಸುತ ರತ್ನ ಸಮೃದ್ಧೋ ಧೀರೋ ಜಾಯತೆ ವಿದ್ವಾಂಶ್ಚ ॥೪೫॥

ಪಾಶೆ ಬಂಧನ ಭಾಜಃ ಕಾರ್ಯೇ ದಕ್ಷಾಃ ಪ್ರಪಂಚಕಾರಶ್ಚ ।
ಬಹುಭಾಷಿಣೋ ವಿಶೀಲಾ ಬಹುಭೃತ್ಯಾಃ ಸಂಪ್ರತಾನಾಶ್ಚ ॥೪೬॥

ಸು ಬಹೂನಾ ಮುಪಯೋಜ್ಯಾಃ ಕೃಷಿಪಾಲಾಃ ಸತ್ಯವಾದಿನಃ ಸುಖಿನಃ।
ಕೇದಾರೆ ಸಂಭೂತಾಶ್ಚ ಲ ಸ್ವಭಾವಾ ಧನೈರ್ಯುಕ್ತಾಃ ॥೪೭॥

ತೀಕ್ಷ್ಣಾಲಸಧನ ಹೀನಾ ಹಿಂಸ್ರಾಃ ಸುಬಹಿಷ್ಕೃತಾ ಮಹಾಶೂರಾಃ ।
ಸಂಗ್ರಾಮೇ ಕೀರ್ತಿಯುತಾಃ ಶೂಲೆ ಯೋಗೆ ಭವಂತಿ ನರಾಃ ॥೪೮॥

ಪಾಖಂಡವಾದಿನೋ ವಾ ಧನರಹಿತಾ ವಾ ಬಹಿಷ್ಕೃತಾ ಲೋಕೆ ।
ಸುತಮಾತೃಧರ್ಮ ರಹಿತಾ ಯುಗ ಯೋಗೆ ಯೋ ನರಾ ಜಾತಾಃ ॥೪೯॥

ಬಲಸಂಯುಕ್ತಾ ವಿಧನಾ ವಿದ್ಯಾವಿಜಾನವರ್ಜಿತಾ ಮಲಿನಾಃ ।
ನಿತ್ಯಂ ದುಃಖಿತದೀನಾ ಗೋಲೆ ಯೋಗೆ ಭವಂತಿ ನರಾಃ ॥೫೦॥

ಸರ್ವಾಸ್ವಪಿ ದಶಾಸ್ವೆತೆ ಭವೆಯುಃ ಫಲದಾಯಿನಃ ।
ಪ್ರಾಣಿನಾಮಿತಿ ವಿಜ್ಞೇಯಾಃ ಪ್ರವದಂತಿ ತವಾಗ್ರಜಾಃ ॥೫೧॥

ವೀಣಾಯೋಗ – ಗೀತ ನೃತ್ಯ ಹಾಗೂ ವಾದ್ಯ ಪ್ರೇಮಿ, ಕುಶಲ ಸುಖಿ ಧನಿನೇತಾ – ಅನೇಕ ಸೇವಕರಿಂದ ಸೇವ್ಯ.

ದಾಮ ಯೋಗ – ಜನೋಪಕಾರಿ, ನ್ಯಾಯೋಪವಾರ್ಜಿತ ಧನಿ, ಮಹಾನ್ ಐಶ್ವರ್ಯಶಾಲಿ, ವಿಖ್ಯಾತ, ಅನೇಕ ಪುತ್ರ ರತ್ನದಿಂದ ಸಮೃದ್ಧ, ಧೀರ, ವಿದ್ವಾನ್.

ಪಾಶ ಯೋಗ – ಕುಕೃತ್ಯದಿಂದ ಜೈಲುವಾಸ, ಕಾರ್ಯದಕ್ಷ, ಪ್ರಪಂಚ ಬಹಳ ಭಾಷಣಕಾರ, ಶೀಲ ರಹಿತ ಅನೇಕ ಪರಿಚಾರಕರು, ವಿಶಾಲ ಪರಿವಾರ.

ಕೇದಾರ ಯೋಗ – ಬಹಳ ಜನರಿಗೆ ಉಪಕಾರಿ – ಒಕ್ಕಲುತನ ಸತ್ಯವಾದಿ, ಸುಖಿ, ಚಂಚಲ ಸ್ವಭಾವ, ಧನವಂತ.

ಶೂಲ ಯೋಗ – ಪ್ರಖರ ಸ್ವಭಾವ, ಆಲಸಿ, ದರಿದ್ರ, ಹಿಂಸಕ, ಸಮಾಜದಿಂದ ಬಹಿಷ್ಕೃತ ಶೂರ ಯುದ್ಧ ವಿಖ್ಯಾತ.

ಯುಗ ಯೋಗ – ಪಾಖಂಡಿ ಧನಹೀನ, ಸಮಾಜದಿಂದ ಪೂರ್ಣ ಬಹಿಷ್ಕೃತ, ಮಾತಾ ಪುತ್ರ ಹಾಗೂ ಧರ್ಮ ರಹಿತ.

ಗೋಲ ಯೋಗ – ಬಲಶಾಲಿ, ನಿರ್ಧನ, ವಿದ್ಯಾ ವಿಜ್ಞಾನ ರಹಿತ, ಮಲಿನ ಹೃದಯ, ಸತತ ದುಃಖಿ.

ಈ ಎಲ್ಲ ಫಲಗಳು ದಶಾಕಾಲದಲ್ಲಿ ಹೆಚ್ಚು ಕಂಡುಬರುತ್ತವೆ ಎಂದರೆ ಎಲ್ಲ ಪ್ರಾಚೀನಾಚಾರ್ಯರು ಜನ್ಮದಿಂದ ಅಂತ್ಯದವರೆಗೆ ಎಂದಿದ್ದಾರೆ. ಈ ಎಲ್ಲ ಯೋಗಗಳು ಎಲ್ಲ ಗ್ರಹಗಳಿಂದ ಆಗುವುದರಿಂದ ಒಂದರ ದಶಾ ನೋಡುವುದು

ವಿಹಿತವಲ್ಲ. ಯೋಗ ಫಲ ಜನ್ಮಾಂತ್ಯದವರೆಗೆ ಎಂದು ಪರಿಗಣಿಸುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ನಾಭಸಯೋಗಾಧ್ಯಾಯಃ ಸಮಾಪ್ತಿಃ ॥36॥**

# ೩೭ನೇ ಅಧ್ಯಾಯ

## ಅಥ ಬಹುವಿಧಯೋಗಾಧ್ಯಾಯಃ

### ಶುಭಾಶುಭ ಯೋಗಲಕ್ಷಣ

**ಪರಾಶರ ಉವಾಚ:**

ಯೋಗೌ ಲಗ್ನಗತೆ ಸೌಮ್ಯೆ ಸೌಮ್ಯೆಸತಿ ಶುಭಾಶುಭೌ ।
ತದೇವಂ ಕ್ರಮಶೋ ಯೋಗೌ ಸೌಮ್ಯ ಸೌಮ್ಯೆವ್ಯಯಾರ್ಥಗ್ಯೈಃ ॥೧॥

**ಪರಾಶರರು ಹೇಳಿದರು–**

ಲಗ್ನಗತ ಶುಭಗ್ರಹವಿದ್ದರೆ ಶುಭಯೋಗ ಪಾಪಗ್ರಹವಿದ್ದರೆ ಅಶುಭಯೋಗ ಇದೇ ತರಹ ಲಗ್ನದಲ್ಲಿ ಗ್ರಹಾಭಾವವಿದ್ದರೆ 2ನೇ ಹಾಗೂ 12ನೇ ಸ್ಥಾನದಲ್ಲಿ ಶುಭಗ್ರಹವಿದ್ದರೆ ಶುಭ, ಪಾಪಗ್ರಹವಿದ್ದರೆ ಪಾಪಯೋಗವಾಗುತ್ತದೆ.

### ಶುಭಾಶುಭ ಯೋಗಫಲ

ಶುಭಯೋಗೋದ್ ಭವೋ ವಾಗ್ಮಿ ರೂಪಶೀಲ ಗುಣಾನ್ವಿತಃ ।
ಪಾಪಯೋಗೋದ್ ಭವಃ ಕಾಮಿ ಪಾಪಕರ್ಮಾ ಪರಾರ್ಥಯುಕ್ ॥೨॥

ಶುಭ ಯೋಗಾನ್ವಿತ ಜಾತಕ ವಾಗ್ಮಿ, ಸೌಂದರ್ಯ ಶೀಲ ಹಾಗೂ ಗುಣಯುಕ್ತನಾಗುವನು. ಪಾಪಯೋಗಾನ್ವಿತ ಕಾಮುಕ, ಪಾಪಕರ್ಮಿ ಹಾಗೂ ಪರಧನ ಅಪಹಾರಕನಾಗುತ್ತಾನೆ.

### ಗಜಕೇಸರಿ ಯೋಗ

ಲಗ್ನಾದ್ ವೇಂದೊ ರ್ಗುರೌ ಕೇಂದ್ರೆ ಸೌಮ್ಯೈರ್ಯುಕ್ತೆಥ ವೀಕ್ಷಿತೆ ।
ಗಜ ಕೇಸರಿ ಯೋಗೋಯಂ ನ ನೀಚಾಸ್ತು ರಿಪುಸ್ಥಿತೆ ॥೩॥

ಗಜಕೇಸರಿ ಸಂಜ್ಞಾತಸ್ತೇಜಸ್ವಿ ಧನವಾನ್ ಭವೇತ್ ।
ಮೇಧಾವಿ ಗುಣ ಸಂಪನ್ನೊ ರಾಜಪ್ರಿಯಕರೋ ನರಃ ॥೪॥

ಲಗ್ನ ಅಥವಾ ಕೇಂದ್ರ(1, 4, 7, 10)ದಲ್ಲಿ ಗುರು ಶುಭಗ್ರಹ ಯುಕ್ತ ಅಥವಾ ದೃಷ್ಟನಾಗಿದ್ದರೆ ಅಲ್ಲದೆ ನೀಚಸ್ಥನಾಗಿರದೆ, ಅಸ್ತಂಗತನಾಗಿರದಯಿದ್ದರೆ ಗಜಕೇಸರಿ ಯೋಗವಾಗುತ್ತದೆ. ಈ ಯೋಗದಲ್ಲಿ ಜನಿಸಿದ ಜಾತಕ ತೇಜಸ್ವಿ ಧನಿ, ಮೇದಾವಿ,

ಗುಣಿ, ರಾಜವಲ್ಲಭನಾಗುತ್ತಾನೆ.

## ಸಫಲ ಅಮಲ ಕೀರ್ತಿಯೋಗ

ಲಗ್ನಾದಥೆಂದು ಸ್ಥಾನಾದ್ ವಾ ದಶಮೇ ಶುಭಸಂಯುತೇ ।
ಯೋಗೋಯಮಮಲಾ ನಾಮ ಕೀರ್ತಿರಾಚಂದ್ರತಾರಕಃ ॥೫॥

ರಾಜಪೂಜ್ಯೋ ಮಹಾಭೋಗಿ ದಾತಾ ಬಂಧು ಜನಪ್ರಿಯಃ ।
ಪರೋಪಕಾರಿ ಗುಣವಾನ್ ಮಲಾ–ಯೋಗ ಸಂಭವಃ ॥೬॥

ಲಗ್ನ ಅಥವಾ ಚಂದ್ರನಿಂದ ದಶಮಸ್ಥಾನ ಶುಭಗ್ರಹ ಮಾತ್ರವಿದ್ದರೆ – ಅಮಲಕೀರ್ತಿ ಯೋಗವಾಗುತ್ತದೆ. ಈ ವ್ಯಕ್ತಿ ರಾಜಪೂಜ್ಯನು, ಭೋಗೇಂದ್ರನು ದಾತ ಬಂಧು ಜನಪ್ರಿಯ, ಪರೋಪಕಾರಿ ಹಾಗೂ ಗುಣವಂತನಾಗುತ್ತಾನೆ.

## ಸಫಲಪರ್ವತ ಯೋಗ

ಸೌಮ್ಯಯುಕ್ತೆ ರಿಪೌ ರಂಧ್ರೇ ಕಿಂವಾ ಗ್ರಹ ವಿವರ್ಜಿತೆ ।
ಸಸದ್ ಗ್ರಹೇಷು ಕೇಂದ್ರೇಷು ಪರ್ವತೋಯೋಗ ಈರಿತಃ ॥೭॥

ಯಶಸ್ವೋಜೋ ಭಾಗ್ಯಯುಕ್ತೊ ದಾನಿ ವಕ್ತಾ ವಿನೋದವಾನ್ ।
ಪುರನೇತಾ ಶಾಸ್ತ್ರವೇತ್ತಾ ಕಾಮಿ ಸ್ಯಾತ್ ಪರ್ವತೋದ್ ಭವಃ ॥೮॥

ಅಷ್ಟಮ ಗ್ರಹರಹಿತ ಅಥವಾ ಶುಭಗ್ರಹಯುಕ್ತವಿದ್ದು ಕೇಂದ್ರಸ್ಥಾನ ಶುಭಯುತವಾಗಿದ್ದರೆ ಪರ್ವತಯೋಗವಾಗುತ್ತದೆ – ಈ ಯೋಗ ಜಾತಕ ಯಶಸ್ವಿ, ತೇಜಸ್ವಿ, ಭಾಗ್ಯವಂತ, ವಕ್ತಾ ವಿನೋದಿ ಈ ಯೋಗದಲ್ಲಿ ಪುರನಾಯಕ ಶಾಸ್ತ್ರವೆತ್ತಾ ಹಾಗೂ ಕಾಮಿಯೂ ಆಗುವನು.

## ಸಫಲ ಕಾಹಲ ಯೋಗ

ಅನ್ಯೋನ್ಯಾಕೇಂದ್ರಗೌ ಜೀವಸುಖೇಶೌ ಸಬಲೇಲಂಗಪೆ ।
ಸ್ವರ್ಪೇಚ್ಚಗೆ ಸಕರ್ಮೇಶೆ ಸುಖೇಶೆ ವಾ ತು ಕಾಹಲಃ ॥೯॥

ಓಜಸ್ವಿ ಸಾಹಸಿ ಮೂರ್ಖಶ್ಚ ತುರಂಗ ಬಲಾನ್ವಿತಾಃ ।
ಯತ್‌ಕಿಂಚಿದ್ ಗ್ರಾಮನಾಥಶ್ಚ ಜಾತಃ ಸ್ಯಾತ್ ಕಾಹಲೋದ್ಭವಃ ॥೧೦॥

ಗುರು ಹಾಗೂ ಸುಖೇಶ (4ನೇ ಅಧಿಪ)ಪರಸ್ಪರ ಕೇಂದ್ರಗತರಾಗಿ ಲಗ್ನೇಶ ಪ್ರಬಲನಾಗಿದ್ದರೆ ಅಥವಾ ದಶಮೇಶಸಹಿತ ಸುಖೇಶ ಸ್ವಭವನ ಸ್ವೊಚ್ಚಸ್ಥನಾಗಿದ್ದರೆ

ಕಾಹಲ ಯೋಗವಾಗುತ್ತವೆ – ಈ ಜಾತಕ ತೇಜಸ್ವಿ, ಸಾಹಸಿ ಆದರೆ ಮೂರ್ಖ ಚತುರಂಗ ಸೈನ್ಯದ ಮುಖ್ಯಸ್ಥ ಅಥವಾ ಗ್ರಾಮನಾಯಕ(ಮೇಯರ್ ಮುನಿಸಿಪಲ್ ಪ್ರೆಸಿಡೆಂಟ್)ನಾಗಿರುತ್ತಾನೆ.

## ಸಫಲ ಚಾಮರ ಯೋಗ

ಉಚ್ಚಗೆ ಲಗ್ನಪೆ ಕೇಂದ್ರೆ ಚಾಮರೋ ಜೀವವೀಕ್ಷಿತೆ ।
ಸೌಮ್ಯದ್ವಿಯಾನ್ವಿತೆ ಲಗ್ನೆ ವ್ಯೋಮ್ನಿಭಾಗ್ಯೇಥವಾ ಮದೆ ॥೧೧॥

ದೀರ್ಘಾಯುರ್ವಿ ಬುಧೊ ಭೂಪೋ ಭೂಪವಂದ್ಯೋಥವಾ ನರಃ ।
ವಕ್ತಾನೇಕ ಕಲಾಭಿಜ್ಞೊ ಜಾತಶ್ಚಾಮರ ಯೋಗಜಃ ॥೧೨॥

ಉಚ್ಚನಾದ ಲಗ್ನೇಶ ಕೇಂದ್ರಗತನಾಗಿ ಗುರುವಿನಿಂದ ನೋಡಲ್ಪಡುತ್ತಿದ್ದರೆ ಅಥವಾ ಎರಡು ಶುಭಗ್ರಹಗಳು ಲಗ್ನ, ನವಮ, ದಶಮ ಅಥವಾ ಸಪ್ತಮದಲ್ಲಿ ಯಾವುದೇ ಭಾವದಲ್ಲಿರಲಿ ಚಾಮರ ಯೋಗವಾಗುತ್ತದೆ. ಈ ಬಾಲಕ ರಾಜ, ರಾಜವಂದ್ಯ ವಕ್ತಾ ಹಾಗೂ ಅನೇಕ ಕಲಾಭಿಜ್ಞನಾಗುತ್ತಾನೆ.

## ಸಫಲ ಶಂಖ ಯೋಗ

ಅನ್ಯೋನ್ಯ ಕೇಂದ್ರಗೌ ಸೂನುಶತ್ರುಪೌ ಸಬಲೇಂಗಪೆ ।
ಕಿಂವಾ ಚರೇಂಗ ಕರ್ಮೇಶೆ ಶಂಖಃ ಪ್ರಬಲ ಭಾಗ್ಯಪೆ ॥೧೩॥

ದಯಾವಾನ್ ಸುಕೃತಿ ವಿದ್ವಾನ್ ಸುತ ವಿತ್ತಕಲತ್ರವಾನ್ ।
ದೀರ್ಯಾಯುಶ್ಚ ಶುಭಾಚಾರಃ ಶಂಖೆ ಜಾತಃ ಪ್ರಜಾಯತೆ ॥೧೪॥

ಪಂಚಮೇಶ ಷಷ್ಠೇಶ ಪರಸ್ಪರ ಕೇಂದ್ರಗತವಾಗಿದ್ದರೆ ಹಾಗೂ ಸಬಲರಾಗಿದ್ದರೆ ಅಥವಾ ಲಗ್ನೇಶ, ದಶಮೇಶ ಚರರಾಶಿಸ್ಥರಾದರೆ ಅಥವಾ ಭಾಗ್ಯೇಶ ಪ್ರಬಲರಾದರೆ ಶಂಖಯೋಗವಾಗುತ್ತದೆ. ಈ ಜಾತಕ ದಯಾಳು, ಪುಣ್ಯವಂತ, ವಿದ್ವಾನ್ ಪುತ್ರ ಧನ ಸ್ತ್ರೀಯುಕ್ತ ದೀರ್ಘಾಯು ಹಾಗೂ ಶುಭಾಚರಣೆಯವ.

## ಸಫಲಭೇರಿ ಯೋಗ

ಧನಾಂತ್ಯಾಸಪ್ತಮಾಂಗೆಸ್ಥೈಃ ಖೇಟೈರ್ಬಲಿನಿ ಭಾಗ್ಯಪೆ ।
ಭೇರಿವಾಪ್ರಬಲೆ ಅಸ್ಮಿನ್ ಕೇಂದ್ರೇಂಗೆಶೆಜ್ಯಭಾರ್ಗವೈಃ ॥೧೫॥

ಸದ್ವೃತ್ತಃ ಸುಖಭೋಗಾಢ್ಯೊ ದಾರಾರ್ಥಸುತಕೀರ್ತಿಮಾನ್ ।
ನೃಪತಿಃ ಸದ್‌ಗುಣೋಪೇತೋ ಭೇರಿಯೋಗೋದ್ಭವೋ ಭವೇತ್ ॥೧೬॥

ಭಾಗ್ಯೇಶ ಪ್ರಬಲನಾಗಿ ಎಲ್ಲ ಗ್ರಹಗಳು ಲಗ್ನ ದ್ವಿತೀಯ, ಸಪ್ತಮ, ದ್ವಾದಶ ದಲ್ಲಿದ್ದರೆ ಅಥವಾ ಪ್ರಬಲ ಭಾಗ್ಯೇಶನಿರಲಿ ಕೇಂದ್ರದಲ್ಲಿ ಲಗ್ನೇ ಗುರು ಹಾಗೂ ಶುಕ್ರರಿದ್ದರೆ ಈ ಎರಡು ಸ್ಥಿತಿಯಲ್ಲಿ ಭೇರಿ ಯೋಗವಾಗುತ್ತದೆ – ಈ ಜಾತಕ ಸದ್ವ್ಯವಹಾರಯುಕ್ತ, ಸುಖ ಭೋಗ ಪೂರ್ಣ, ಸ್ತ್ರೀ ಪುತ್ರ ಧನ, ಯಶ ಹಾಗೂ ಸದ್ಗುಣ, ವಾಗ್‌ರಾಜನಾಗುತ್ತಾನೆ.

## ಸಫಲ ಮೃದಂಗ ಯೋಗ

ಸ್ವಕ್ಷೋಚ್ಚಸ್ಥ ಗ್ರಹಾಃ ಕೇಂದ್ರಕೋಣಗಃ ಸಬಲೇಂಗಪೆ ।
ಮೃದಂಗಸತ್ರ ಜಾತಸ್ತು ರಾಜಾ ವಾ ರಾಜಸನ್ನಿಭಃ ॥೧೭॥

ಮದೇಶೆ ವ್ಯೋಮಗೆ ತೂಚ್ಚೆ ಸಭಾಗ್ಯೇಶೇಪಿ ಕರ್ಮಪಿ ।
ಶ್ರೀನಾಥ ಯೋಗೇ ಜಾತೋತ್ರ ರಾಜಾ ಸ್ಯಾಹಿಂದ್ರ ಸನ್ನಿಭಃ ॥೧೮॥

ಪುತ್ರಸ್ಥೆ ವ್ಯೋಮಪೆ ಕೇಂದ್ರೆ ವಿದೀನೆ ಬಲಿನಿ ಸ್ವಭೆ ।
ಇಂದೋರ್ವಿದಿಜ್ಯೆ ವಾ ಕೋಣೆ ಭವೆ ಭೌಮೇತು ಶಾರದಃ ॥೧೯॥

ರಾಜಮಾನ್ಯೇ ಬುಧಃ ಸೌಖ್ಯತಪೋಧರ್ಮ ಸಮನ್ವಿತಃ ।
ದಾರಾ ತನಯ ವಿತ್ತಾಢ್ಯಾ ಭವೇತ್ ಶಾರದಾ ಸಂಭವಃ ॥೨೦॥

1) ಮೃದಂಗ – ಲಗ್ನೇಶ ಪ್ರಬಲನಾಗಿ ಎಲ್ಲ ಗ್ರಹಗಳು ತಮ್ಮ ಮನೆಯಲ್ಲಿ ಉಚ್ಚಸ್ಥರಾಗಿ ಕೇಂದ್ರ ಅಥವಾ ಕೋನದಲ್ಲಿದ್ದರೆ ಮೃದಂಗ ಯೋಗವಾಗಿ – ಜಾತಕ ರಾಜ ಅಥವಾ ರಾಜಸನ್ನಿಭ.

2) ಶ್ರೀನಾಥ ಯೋಗ – ಉಚ್ಚನಾದ ಜಾಯೇಶ (7) ಕರ್ಮಸ್ಥಾನದಲ್ಲಿ ಭಾಗ್ಯೇಶ, ಕರ್ಮೇಶ ಸಂಯೋಗವಾದರೆ ಶ್ರೀನಾಥ ಯೋಗವಾಗಿ, ಜಾತಕ ಇಂದ್ರ ಸದೃಶ್ಯನಾಗುತ್ತಾನೆ.

3) ಶಾರದಾ ಯೋಗ – ಕರ್ಮೇಶ ಪಂಚಮದಲ್ಲಿ ಬಲಿಷ್ಠ ಬುಧ, ಸೂರ್ಯ ಸ್ವಕ್ಷೇತ್ರದಲ್ಲಿ ಕೇಂದ್ರಸ್ಥರಾದರೆ ಅಥವಾ ಚಂದ್ರ, ನವಮ ಪಂಚಮದಲ್ಲಿ ಬುಧ ಅಥವಾ ಗುರು ಏಕಾದಶ ಭೌಮರಿದ್ದರೆ ಶಾರದಾಯೋಗವಾಗಿ ಜಾತಕ ಎಲ್ಲ ವಿಷಯದಲ್ಲಿ ರಾಜ್ಯಮಾನ್ಯ ವಿದ್ವಾಂಸ, ಸುಖ–ತಪ–ಧರ್ಮ ಯುಕ್ತ ಸ್ತ್ರೀ ಪುತ್ರ ಧನಪೂರ್ಣ.

## ಸಫಲ ಮತ್ಸ್ಯಯೋಗ

ಶುಭೆ ಲಗ್ನತಪಃ ಸಂಸ್ಥೆ ಶುಭಾಶುಭಯುತೆ ಸುತೆ ।
ಕ್ರೂರೆ ಚ ತರ್ಯರಂಧ್ರಸ್ಥೆ ಮತ್ಸ್ಯಯೋಗಃ ಪ್ರಕೀರ್ತಿತಃ ॥೨೧॥

ದಯಾಲುಃ ಕಾಲವಿದ್ ವಿದ್ವಾನ್ ಬುದ್ಧಿರೂಪ ಗುಣಾನ್ವಿತಃ ।
ಯಶೋಬಲ ತಪೋಯುಕ್ತಾ ಮತ್ಸ್ಯಯೋಗೋದ್ಭವೋ ಭವೇತೇ ॥೨೨॥

ಮತ್ಸ್ಯಯೋಗ – ಲಗ್ನ ಹಾಗೂ ನವಮದಲ್ಲಿ ಶುಭಗ್ರಹ ಪಂಚಮದಲ್ಲಿ ಶುಭ ಹಾಗೂ ಪಾಪ ಅಲ್ಲದೆ ಚತುರ್ಥ ಅಷ್ಟಮದಲ್ಲಿ ಪಾಪಗ್ರಹವಿದ್ದರೆ ಮತ್ಸ್ಯಯೋಗವಾಗುತ್ತದೆ. ಇವನು ದಯಾಳು, ಕಾಲಜ್ಞಾನ ತಿಳಿದವನು, ವಿದ್ವಾಂಸನು, ಸೌಂದರ್ಯ, ಬುದ್ಧಿ ಗುಣಯುಕ್ತ ಯಶ, ಬಲ, ತಪದಿಂದ ಪರಿಪೂರ್ಣನು.

## ಸಫಲ ಕೂರ್ಮಯೋಗ

ಶುಭಾಃ ಸುತಂಪುಸ್ತ್ರೀಗಾ ಮಿತ್ರೋಚ್ಚ ಸ್ವಗೃಹಾಂಶಗಾಃ ।
ಕ್ರೂರಾ ಸ್ತ್ಯಾಯಾಗಾಃ ಸ್ವರ್ಕ್ಷತುಂಗಂಗಾಃ ಕೂರ್ಮ ಸಂಜ್ಞಕಃ ॥೨೩॥

ಯೋಗೇತ್ರ ಜಾತೋ ಗುಣವಾನ್ ಸುಖಿತಃ ಕೀರ್ತಿಧರ್ಮಯುಕ್ ।
ಉಪಕಾರಪರೋ ಧೀರೋ ರಾಜಾವಾ ಜನನಾಯಕಃ ॥೨೪॥

ಮಿತ್ರಗ್ರಹ ಉಚ್ಚ ಸ್ವಕ್ಷೇತ್ರ ಸನವಾಂಶ ಪ್ರಾಪ್ತ ಶುಭಗ್ರಹ ಪಂಚಮ, ಷಷ್ಠ ಅಥವಾ ಸಪ್ತಮದಲ್ಲಿದ್ದರೆ ಪಾಪಗ್ರಹ (3, 11, 1)ರಲ್ಲಿ ಸ್ವರಾಶಿಸ್ಥರಾಗಿದ್ದರೆ ಅಥವಾ ಉಚ್ಚರಾಗಿದ್ದರೆ ಕೂರ್ಮ ಸಂಜ್ಞಕಯೋಗ – ಈ ಜಾತಕ ಗುಣಿ, ಸುಖಿ, ಯಶಸ್ವಿ, ಧರ್ಮನಿಷ್ಠರನ್ನು ನಿರ್ದೇಶಿಸುತ್ತದೆ. ಜನೋಪಕಾರಯು ಆಗಿರುತ್ತಾನೆ ಹಾಗೂ ಜನ ನಾಯಕ ರಾಜ ( ಈ ಮಂತ್ರಿ) ಆಗಿರುತ್ತಾನೆ.

## ಸಫಲ ಖಡ್ಗ ಯೋಗ

ಭಾಗ್ಯೇಶೆ ಧನ ಭಾವಸ್ಥೆ ಧನೇಶೆ ಭಾಗ್ಯಗೇಹಗೆ ।
ಲಗ್ನೇಶೆ ಕೇಂದ್ರಕೋಣಸ್ಥೆ ಖಡ್ಗಯೋಗ ಉದೀರಿತಿಃ ॥೨೫॥

ಖಡ್ಗಯೋಗೋದ್ಭವೋ ಜಾತೆ ಬುದ್ಧಿವೀರ್ಯ ಸುಖಾರ್ಥವಾನ್ ।
ಶಾಸ್ತ್ರವೇತ್ತಾ ಕೃತಜ್ಞಶ್ಚ ನಿಪುಣೋ ಜಾಯತೆ ಜನಃ ॥೨೬॥

ಭಾಗ್ಯೇಶ ಧನಸ್ಥ ಧನೇಶ ಭಾಗ್ಯದಲ್ಲಿ ಹಾಗೂ ಲಗ್ನೇಶ ಕೇಂದ್ರ (1, 4, 7, 10) ಅಥವಾ ತ್ರಿಕೋನ (5, 9) ಸ್ಥಿತರಾಗಿದ್ದರೆ ಖಡ್ಗಯೋಗವಾಗುತ್ತದೆ. ಈ ಯೋಗೋತ್ಪನ್ ಬುದ್ಧಿ – ಬಲ – ಸುಖಿ – ಧನಪೂರ್ಣನಾಗಿಯೂ ಶಾಸ್ತ್ರಜ್ಞ, ಕೃತಜ್ಞ, ಕಾರ್ಯಕುಶಲನಾಗಿರುವನು.

### ಸಫಲ ಲಕ್ಷ್ಮಿಯೋಗ

ಸಬಲೆ ಲಗ್ನಪೆ ಭಾಗ್ಯನಾಥೆ ಸ್ವರ್ಕ್ಷೋಚ್ಚಗೇಥವಾ ।
ಮೂಲ ತ್ರಿಕೋಣೆ ಕೇಂದ್ರೆ ಲಕ್ಷ್ಮಿಯೋಗಃ ಪ್ರಜಾಯತೆ ॥೨೭॥

ಲಕ್ಷ್ಮಿ ಯೋಗೋದ್ ಭವೋ ಜಾತೋ ರೂಪಧರ್ಮಾಧನ್ವೈರ್ಯುತ ।
ಗುಣ ಕೀರ್ತಿವೃತೋ ಭೂಪೋನೇಕಸೂನು ಸಮನ್ವಿತಾಃ ॥೨೮॥

ಲಗ್ನೇಶ ಪ್ರಬಲನಾಗಿ ನವಮದಲ್ಲಿ ಸ್ವಭವನ ಅಥವಾ ಸ್ವೋಚ್ಚ ಮೂಲ ತ್ರಿಕೋನದಲ್ಲಿರಲು ಅದು ಕೇಂದ್ರಗತನಾದರೆ ಲಕ್ಷ್ಮಿ ಯೋಗವಾಗುತ್ತದೆ – ಈ ಜಾತಕ ಸುಂದರ ಧರ್ಮಿಷ್ಟ, ಧನಿ, ಗುಣಿ, ಯಶಸ್ವಿ ರಾಜ ಅನೇಕ ಪುತ್ರಯುತ ನಾಗುವನು.

### ಸಫಲ ಕುಸುಮ ಯೋಗ

ಸ್ಥಿರ ಲಗ್ನೆ ಭೃಗೌ ಕೇಂದ್ರೆ ಸುಶುಬೆ ಕೋಣಗೆ ವಿಧೌ ।
ಕರ್ಮಗೆ ಭಾನು ತನಯೋ ಯೋಗಾಃ ಕುಸುಮ ನಾಮಕಃ ॥೨೯॥

ತತ್ರೋತ್ಪಗ್ನೊ ಭವೆದ್ರಾಜಾ ತತ್ಸಮೊ ವಾ ಸುಖಾನ್ವಿತಾಃ ।
ವದಾನ್ಯೋ ಗುಣಭೋಗಾಢ್ಯೋ ಬುಧಃ ಖ್ಯಾತೋನ್ವಯೋ ಭವೇತ್ ॥೩೦॥

ಜಾತಕನ ದುಸ್ಥಿರ ಲಗ್ನವಾಗಿದ್ದು ಶುಕ್ರ ಕೇಂದ್ರಗತನಾಗಿ ಶುಭಯುಕ್ತ ಚಂದ್ರ, ನವಮ ಅಥವಾ ಪಂಚಮದಲ್ಲಿದ್ದ ಶನಿ ದಶಮಸ್ಥನಿದ್ದರೆ ಕುಸುಮ ಯೋಗವಾಗಿ ಈತನು ಸರ್ವಸೌಭಾಗ್ಯ ಸಂಪನ್ನನಾಗುವನು. ರಾಜ ಅಥವಾ ತತ್ಸಮಾನ ವಿದ್ವಾನ್, ಗುಣಿ – ಭೋಗೇಂದ್ರ ಹಾಗೂ ವಿಖ್ಯಾತ ಪುರುಷನಾಗುವನು.

### ಸಫಲ ಕಲಾನಿಧಿ ಯೋಗ

ದ್ವಿತೀಯೆ ಪಂಚಮೆ ಜೀವೆ ಬುಧ ಶುಕ್ರಯುತೆಕ್ಷಿತೆ ।
ಕ್ಷೇತ್ರೆ ತಯೋರ್ವಾ ಸಂಪ್ರಾಪ್ತೆ ಯೋಗಃ ಸ ಕಲಾನಿಧಿಃ ॥೩೧॥

ವಿದ್ಯಾರ್ಥ ಗುಣ ಸಂಪನ್ನಃ ಸುಖಿನೋ ರಾಜಪೂಜಿತಃ ।
ನಿರುಜೋ ನಿರ್ಭಯಃ ಕಾಮ ಕಲಾನಿಧಿ ಸಮುದ್ಭವಃ ॥೩೨॥

ದ್ವಿತೀಯ ಅಥವಾ ಪಂಚಮ ಸ್ಥಿತ ಗುರು, ಬುಧ, ಶುಕ್ರಯುತನಾದರೆ ಅಥವಾ ದೃಷ್ಟ ಅಥವಾ ಗುರು, ಬುಧ ಇಲ್ಲವೇ ಶುಕ್ರ ಕ್ಷೇತ್ರದಲ್ಲಿ (ವೃಷಭ, ತುಲಾ, ಮಿಥುನ, ಕನ್ಯಾ)ದಲ್ಲಿದ್ದರೆ ಕಲಾನಿಧಿ ಯೋಗವಾಗುವುದು – ಈತನು ವಿದ್ಯಾಧನ ಗುಣ ಯುಕ್ತ ಸುಖಿ, ರಾಜಮಾನ್ಯ ನಿರ್ಭಯ ಹಾಗೂ ಕಾಮುಕನಾಗುವನು.

ಅಂಗೇಶತತ್ಸ್ಥ ರಾಶಿಶ – ತತ್ಸ್ಥಭೆ ಶತದಂಶಪಾಃ ।
ಸ್ವೋಚ್ಚ ಕೇಂದ್ರೆ ತ್ರಿಕೋಣೆ ವಾ ಪಾರಿಜಾತಃ ಪ್ರಕೀರ್ತಿತಃ ॥೩೨॥

ತತ್ರಜಾತೋ ಭವೇದ್ಧರ್ಮ ಸರ್ವೈಶ್ವರ್ಯ ಬಲಾನ್ವಿತಾ ।
ನೃಪತಿಃ ಸಮರಪ್ರೇಮಿ ದಯಾರ್ದ್ರ ಹೃದಯಃ ಸದಾ ॥೩೩॥

ಲಗ್ನೇಶನು ಯಾವ ರಾಶಿಯಲ್ಲಿರುವನೋ ಆ ಅಧಿಪ ಯಾವ ರಾಶಿಗತನೋ ಆ ಅಧಿಪ ಅಲ್ಲದೆ ಅವನ ನವಾಂಶ ಒಂದು ವೇಳೆ ಉಚ್ಚ ಕೇಂದ್ರ ತ್ರಿಕೋನದಲ್ಲಿದ್ದರೆ ಪಾರಿಜಾತ ಯೋಗ ಈ ಜಾತಕೋತ್ಪನ್ ಜಾತಕ ಸರ್ವವಿಧಿ ಐಶ್ವರ್ಯ ಯುಕ್ತ ಬಲಿ ದಯಾಳು, ಯುದ್ಧಪ್ರೇಮಿ, ಧರ್ಮಿಷ್ಟನಾಗುವನು.

ಉದಾಹರಣೆ – 1) ಮೇಷ ಲಗ್ನ – ಮಂಗಳ, ಕಟಕದಲ್ಲಿ – ಅಧಿಪ ಚಂದ್ರ ತನ್ನುಚ್ಚ ವೃಷಭದಲ್ಲಿ – ಅದರ ಅಧಿಪ ಶುಕ್ರ – ಕೇಂದ್ರದಲ್ಲಿ (2) ವೃಷಭ ರಾಶಿಯಲ್ಲಿ ಗುರು ನವಾಂಶ – ನವಾಂಶೇಶ ಗುರು ತ್ರಿಕೋನದಲ್ಲಿ ಈ ರೀತಿ ಉಚ್ಚ ಪಾರಿಜಾತಯೋಗ.

## ಫಲಸ ಬ್ರಹ್ಮ ಹರಿ–ಹರ ಯೋಗಗಳು

ಹರಿಯೋಗೋರ್ಥ ರಂಧ್ರಾನ್ತ್ಯ ಗತೈರರ್ಥೆ ಶತಃ ಶುಭೈಃ ।
ಹರಯೋಗಸ್ತು ಜಾಯೇಶಾತ್ ಸುಖ ಭಾಗ್ಯಾಷ್ಟಗೈಶ್ಚ ತೈಃ ॥೩೫॥
ಬ್ರಹ್ಮಾಭಿಧಸ್ತು ತನುಪಾತ ಸುಖಮ್ಯೋ ಮಂಭವ ಸ್ಥಿತೈಃ ।
ಏತೇಷು ಚ ಸಮುತ್ಪನ್ನಃ ಸುಖ ವಿದ್ಯಾ ಸುತಾರ್ಥವಾನ್ ॥೩೬॥

ಹರಿ – ಧನೇಶನಿಂದ 2 ಹಾಗೂ 8ರಲ್ಲಿ ಶುಭ ಗ್ರಹವಿದ್ದರೆ.

ಹರಿಯೋಗ – ಸಪ್ತಮೇಶನಿಂದ 4, 9, 8 ಸ್ಥಾನಗಳಲ್ಲಿ ಅವನಿದ್ದರೆ (ಶುಭ) ಹರಯೋಗ.

ಬ್ರಹ್ಮಯೋಗ – ಲಗ್ನೇಶನಿಂದ 4, 10, 11 ಸ್ಥಾನದಲ್ಲಿ ಶುಭಗ್ರಹವಿದ್ದರೆ ಬ್ರಹ್ಮಯೋಗ.

ಈ ಮೂರು ಯೋಗದಲ್ಲಿ ಯಾವುದೊಂದಾದರು ಆ ಜಾತಕ ಸುಖಿ, ವಿದ್ವಾನ್, ಧನಿ, ಪುತ್ರವಾನ್‌ನಾಗುತ್ತಾನೆ.

## ಲಗ್ನಾಧಿ ಯೋಗ

ಶುಭೈಸ್ತನೋಃ ಕಾಮರಂಧ್ರೈ ಗತೈ ರ್ದೃಗ್ಯುತ ವಾಂಚ್ಛಿತೈ ।
ಪಾಪಾನಾಂ ತರ್ಹಿ ಲಗ್ನಾಧಿ ಯೋಗಸ್ತಜ್ಜಃ ಸುಖಿ ಸುಧಿಃ ॥೩೭॥

ಲಗ್ನದಿಂದ 7, 8ರಲ್ಲಿ ಶುಭಗ್ರಹಗಳಿದ್ದು ಅದರ ಮೇಲೆ ಪಾಪದೃಷ್ಟಿಯಿರದಿದ್ದರೆ ಲಗ್ನಾಧಿ ಯೋಗವಾಗಿ – ಈ ಯೋಗದಲ್ಲಿ ಜಾತಕ ವಿದ್ವಾನ್ ಸುಖಿ ಆಗುವನು.

## ಪಾರಿಜಾತಾದಿ ಗತ ಲಗ್ನೇಶ

ಪಾರಿಜಾತಗತೆ ಲಗ್ನಪತೌ ಜಾತಃ ಸುಖಾನ್ವಿತಾ ।
ವರ್ಗೋತ್ತಮಸ್ಥೆ ನೀರೋಗೋ ಗೋಪುರಸ್ಥೆ ಧನೀ ಮತಃ ॥೩೮॥
ಸಿಂಹಾಸನ ಸ್ಥಿತೆ ರಾಜಾ ವಿದ್ವಾನ್ ಪಾರಾವತಾಶ್ರಿತೆ ।
ಐರಾವತೆ ರಾಜವಂದ್ಯೋ ದೇವಲೋಕೆ ಸೂರ್ಯನವಾನ್ ॥೩೯॥

ವಿಶೇಷ ಸೂಚನೆ – ಈ ಯೋಗಗಳು ಷಡ್‌ವರ್ಗ, ಸಪ್ತವರ್ಗ ದಶವರ್ಗಾದಿ ಯೋಗದಿಂದ ಪರಿಗ್ರಹಿಸುವುದು.

| | | |
|---|---|---|
| ಲಗ್ನೇಶ ಪಾರಿಜಾತ ವರ್ಗದಲ್ಲಿ | --- | ಸುಖಿ |
| ವರ್ಗೋತ್ತಮಸ್ಥನಾದರೆ | --- | ನಿರೋಗಿ |
| ಗೋಪುರದಲ್ಲಿ | --- | ಧನ ಧಾನ್ಯಪೂರ್ಣ |
| ಸಿಂಹಾಸನ | --- | ರಾಜ |
| ಪಾರಾವತ ಯೋಗ | --- | ವಿದ್ವಾನ್ |
| ಐರಾವತ ಯೋಗದಲ್ಲಿ ಲಗ್ನೇಶ | --- | ರಾಜವಂದ್ಯ, ದೇವಲೋಕಸ್ಥಿತನಾಗುವನು. |

ಈ ಎಲ್ಲ ಯೋಗಾದಿಗಳು ಸ್ವಯಂ ಪೂರ್ಣವಾಗಿದ್ದರೂ ಗ್ರಹ ಸ್ಥಾನ, ರಾಶಿ ಇತ್ಯಾದಿ ಬಲಾಬಲ – ಪರೀಕ್ಷಿಸಿ ನಂತರ ಫಲಾದಿಗಳನ್ನು ಹೇಳುವುದು ವಿಹಿತ – (ಗ್ರಹ ಯೋಗಗಳ ಲೇಖನ ಮಾಲಿಕೆ ನೋಡಿರಿ)

ಇತಿ ಬೃಹತ್‌ಪರಾಶರ ಹೋರಾಶಾಸ್ತ್ರೇ ಬಹುವಿಧ
ಯೋಗಾಧ್ಯಾಯಃ ಸಮಾಪ್ತಃ

ಇ೮ನೇ ಅಧ್ಯಾಯ

# ಅಥ ಚಂದ್ರಯೋಗಾಧ್ಯಾಯಃ

## (ಚಂದ್ರಯೋಗ ಫಲ)

**ಪರಾಶರ ಉವಾಚ:**

**ಸಹಸ್ರರಶ್ಮಿತಶ್ಚಂದ್ರೆ ಕಂಟಕಾದಿಗತೆ ಸತಿ ।**
**ನ್ಯೂನ ಮಧ್ಯವರಿಷ್ಠಾನಿ ಧನಧೀನೈಪುಣಾನಿ ॥೧॥**

**ಪರಾಶರರು ಹೇಳಿದರು–**

ಹೇ ಮೈತ್ರೇಯ, ಸೂರ್ಯನಿಂದ ಚಂದ್ರನು ಕೇಂದ್ರ ಪರಫಣ ಆಪೋಕ್ಲಿಮದಲ್ಲಿದ್ದರೆ ಜಾತಕನಿಗೆ ಸಂಪತ್ತು ಬುದ್ಧಿ ಹಾಗೂ ನೈಪುಣ್ಯ ಅಲ್ಪ, ಮಧ್ಯಮಾತ್ರ ಉತ್ಕೃಷ್ಟ ಮಾತ್ರದಲ್ಲಿ ದೊರೆಯುತ್ತದೆ. ಸೂರ್ಯನಿಂದ ಚಂದ್ರ 1, 4, 7, 10ರಲ್ಲಿ ಧನಾದಿ ಅಲ್ಪ ಮಾತ್ರೆಯಲ್ಲಿ 2, 5, 8, 11ರಲ್ಲಿ ಮಧ್ಯಮ ರೂಪದಲ್ಲಿ 3, 6, 9, 12ರಲ್ಲಿ ಉತ್ತಮ ರೂಪದಲ್ಲಿ.

### ಧನಾಧನ ಯೋಗ

**ಸ್ವಾಂಶೋಧಿಮಿತ್ರ ಸ್ವಾಂಶೆ ಸ್ಥಿತೆಥ ದಿವಸೆ ಶಶಿ ।**
**ಗುರುಣಾ ದೃಶ್ಯತೆ ತತ್ರಜಾತೋ ವಿತ್ತಸುಖಾನ್ವಿತಾಃ ॥೨॥**

**ಸ್ವಾಂಶೆಧೊ ಮಿತ್ರ ಸ್ವಾಂಶೆ ವಾ ಸ್ಥಿತೆ ರಾತೌ ನಿಶಾಕರಃ ।**
**ಭೃಗುಣಾ ವಿಕ್ಷೀತಸ್ತರ್ಹಿ ಸುಖಿತೊ ಧನಿಕೋ ನರಃ ॥೩॥**

**ವಿಪರೀತೆ ತ್ವತೋ ಜೀವಭೃಗುಭ್ಯಾಮ ವಲೋಕಿತೆ ।**
**ಜಾತೋತ್ರ ಯೋಗಜಃ ಸ್ವಲ್ಪ ವಿತ್ತೊವಾ ನಿಃಸ್ವವಹಿ ॥೪॥**

ಹಗಲಿನಲ್ಲಿ ಜನ್ಮವಾಗಿ ಚಂದ್ರ ತನ್ನ ಸ್ವೋಚ್ಚ ಅಥವಾ ಅಧಿಮಿತ್ರನ ನವಾಂಶ ಗತನಾಗಿ ಗುರುವಿನ ದೃಷ್ಟಿಯಿದ್ದರೆ ಧನ ಸೌಖ್ಯಪೂರ್ಣನಾಗಿರುತ್ತಾನೆ. ಅದೇ ರಾತ್ರಿಯಲ್ಲಿ ಜನ್ಮವಾಗಿ ಸ್ವ ಅಥವಾ ಅಧಿಮಿತ್ರನ ನವಾಂಶದಲ್ಲಿದ್ದು ಶುಕ್ರನ ದೃಷ್ಟಿಯಿದ್ದರೆ ಮೇಲಿನಂತೆ ಸುಖಿ, ಧನಪೂರ್ಣನಾಗುತ್ತಾನೆ – ಇದರ ವಿಪರೀತದಲ್ಲಿ ಹಗಲು ಶುಕ್ರದೃಷ್ಟ, ರಾತ್ರಿ ಗುರುದೃಷ್ಟಿಯಾದರೆ ಅಲ್ಪಧನ – ಇಲ್ಲವೇ ನಿರ್ಧನನು ಆಗಿರುತ್ತಾನೆ.

### ಅಧಿಯೋಗ

ಇಂದೋಃ ಷಷ್ಠಾಷ್ಟಮದ ಗೌರ ಧಿಯೋಗಃ ಶುಭಗ್ರಹೈಃ ।
ಬಲಾನು ಸಾರತಸ್ತತ್ರ ನೃಪೋಮಾತ್ಯೆ ಬಲಾಧಿಪಃ ॥೫॥

ಚಂದ್ರನಿಂದ 6, 7, 8 ಸ್ಥಾನಗಳಲ್ಲಿ ಶುಭಗ್ರಹಗಳಿದ್ದರೆ ಅಧಿಯೋಗವಾಗಿ ಈ ಜಾತಕ ಗ್ರಹಗಳ ಬಲಾನುಸಾರ ರಾಜ ಅಥವಾ ಮಂತ್ರಿ ಅಥವಾ ಸೇನಾಪತಿ ಯಾಗುವನು.

### ಧನ ಯೋಗ

ಚಂದ್ರಾದ್ ವೃದ್ಧಿಗತ್ಯೆಃ ಸೌಮ್ಯೈರ್ನಿಗಾಬಲೈಸ್ತು ಮಹಾಧನಿ ।
ದ್ವಾಭ್ಯಾಂ ಸಮೋಲ್ಪವಸು ಮಾನೇಕೇನ ಪರಿಕೀರ್ತಿತಃ ॥೬॥

ಚಂದ್ರನ ವೃದ್ಧಿ (ಉಪಚಯ 3, 6, 10, 1) ಸ್ಥಾನದಲ್ಲಿದ್ದು ಎಲ್ಲ ಶುಭಗ್ರಹ ಗಳಿದ್ದರೆ – ಜಾತಕ ಪೂರ್ಣಧನಿ – 2 ಶುಭ ಗ್ರಹಗಳಿದ್ದರೆ ಮಧ್ಯಮ ಧನಿ, 1 ಶುಭಗ್ರಹವಿದ್ದರೆ ಅಲ್ಪ ಧನವಂತನಾಗುವನು.

### ಸುನಫಾನಫಾ ದುರಧರ ಯೋಗ

ರವಿ ವಿನಾ ವಿಧೋರ್ವಿತ್ತರಿಷ್ಫೋ ಭಯಗತ್ಯೆರ್ಗ್ರಹೈಃ ।
ಸುನಫಾ ಚಾನಫಾಯೋಗಃ ಕ್ರಮಾದ್ ದುರಧರಾಭಿಧಃ ॥೭॥

ಚಂದ್ರನಿಂದ ದ್ವಿತೀಯದಲ್ಲಿ, ದ್ವಾದಶದಲ್ಲಿ ಸೂರ್ಯಾತಿರಿಕ್ತ ಗ್ರಹಗಳಿದ್ದರೆ ಸುನಫಾನಫಾ ದುರಂಧರ ಯೋಗವಾಗುತ್ತವೆ. ಅಂದರೆ ದ್ವಿತೀಯದಲ್ಲಿ ಗ್ರಹವಿದ್ದರೆ ಸುನಫಾ ದ್ವಾದಶದಲ್ಲಿ ಗ್ರಹವಿದ್ದರೆ ಅನಫಾ – ಎರಡೂ ಕಡೆಗಿದ್ದರೆ ದುರಧರ ಯೋಗವಾಗುತ್ತದೆ.

ಆದನ್ನೇ ವರಾಹ ಮಿಹಿರರು 'ರವಿವಿರ್ಜ್ಯ ದ್ವಾದಸಗೈರನಸಾ ಚಂದ್ರಾದ್ ದ್ವಿತೀಯೋ ಸುನಫಾ ಉಭಯ ಸ್ಥಿತೌ ದುರುಧರಾ' ಎಂದಿದ್ದಾರೆ.

### ಫಲ

ಭೂಪೊಭೂಪಸಮೋ ವಾಪಿ ಮತಿವಿತ್ತ ಪ್ರಸಿದ್ಧಿಮಾನ್ ।
ಸುನಫಾ ಯೋಗಜೆ ಜಾತಃ ಸ್ವಬಾಹುಬಲವಿತ್ತವಾನ್ ॥೮॥

ನೃಪೋ ನೀರುಕ್ ಸುಶೀಲಶ್ಚ ಯಶಸ್ವಿ ಲೋಕಶ್ರುತಃ ।
ಸುಭಗಸ್ಸು ನಫೋದ್ ಭೂತೋ ನಾನಾ ವಿಧ ಸುಖಾನ್ವಿತಾ ॥೯॥

ಸದ್ ವಿತ್ ವಾಹನಯುತೋ ದಾನಶೀಲಶ್ಚ ಸೌಖ್ಯಭಾಕ್ ।
ಸದಾನೋ ಹತಶತ್ರುಶ್ಚ ಸದಾ ದುರಧರೋದ್ ಭವಃ ॥೧೦॥

ಸುನಫಾ ಯೋಗತ್ಪನ್ನ ಜಾತಕ ರಾಜ, ರಾಜ ಸಮಾನ, ಮತಿವಂತ, ಧನಿ, ವಿಖ್ಯಾತ ಹಾಗೂ ಸ್ವಬಾಹು ಬಲದಿಂದ ಧನಾರ್ಜನೆ ಮಾಡುವವನಾಗುವನು.

ಅನಫಾ ಬಾಲಕ ರಾಜ ನಿರೋಗ, ಸುಶೀಲ, ಯಶಸ್ವಿ, ಲೋಕವಿಖ್ಯಾತ, ಸುಂದರ ವಿಧ ಸೌಖ್ಯವುಳ್ಳವನಾಗುತ್ತಾನೆ. ದುರಧರ ಯೋಗೋತ್ಪನ್ ಧನಿ, ವಾಹನಯುತ ಧನಿ, ಸುಖಿ, ನೌಕರಾದಿಯುಕ್ತ – ಶತ್ರುಗಳ ಮೇಲೆ ವಿಜಯ ಪಡೆಯುವವ ನಾಗುವನು.

## ಕೇಮದ್ರುಮ ಯೋಗ

ರವಿ ವಿನೇಂದುತಃ ಕಶ್ಚಿದ್ ಗ್ರಹೋ ನೈವಾರ್ಥರಿಪ್ಫಗಃ ।
ಕೇಮದ್ರುಮಾಭಿಧೊ ಯೋಗಃ ಕೇಂದ್ರೆ ಗ್ರಹಯುತೆ ನ ಸಃ ॥೧೧॥

ತತ್ರಜಾತೆ ಭವದೇವ ವಿದ್ಯಾಹೀನೋತಿ ನಿಂದಿತಃ ।
ನಿಃಸ್ವೋ ನಾನಾ ಪತ್ತಿಯುಕ್ತೊ ಮಾನವೋ ಮತಿ ವರ್ಜಿತಃ ॥೧೨॥

ಸೂರ್ಯಾತಿರಕ್ತ ಯಾವುದೇ ಗ್ರಹದಿಂದಲೂ ಕೇಂದ್ರದಲ್ಲಿ ಯಾವುದೇ ಇರಬಾರದು ಹಾಗೂ ಲಗ್ನದಿಂದಲೂ ಕೇಂದ್ರದಲ್ಲಿ ಯಾವುದೇ ಗ್ರಹವಿರದಿದ್ದರೆ ಕೇಮದ್ರುಮ ಯೋಗವಾಗುತ್ತದೆ. ಕೇಮದ್ರುಮ ಯೋಗತ್ಪನ್ ಜಾತಕ ವಿದ್ಯಾ ಬುದ್ಧಿ ವಿಹೀನನಾಗುತ್ತಾನೆ. ನಿರ್ಧನ ನಾನಾಪತ್ತಿಯುಕ್ತನಾಗುತ್ತಾನೆ ಹಾಗೂ ನಿಂದಿತನಾಗುತ್ತಾನೆ.

ಈ ಸುನಫಾ ಅನಸುಫಾ ಯೋಗವನ್ನು ಎಲ್ಲ ಜಾತಕಕಾರರು ವಿವರಿಸಿದ್ದಾರೆ. ಅದರಂತೆ ದುರಧರ, ಕೇಮದ್ರುಮ ಯೋಗವನ್ನು ವಿವರಿಸಿದ್ದನ್ನು ನೋಡಿದರೆ ಮೊದಲಿನ 3 ಯೋಗಗಳು ಕೇಮದ್ರುಮ ಯೋಗ ಭಂಗಕಾರಕವೆನ್ನುವುದು ಸ್ಪಷ್ಟ. ಅಂದರೆ ಚಂದ್ರನಿಂದ ದ್ವಿತೀಯ ಅಥವಾ ದ್ವಾದಶ ಸ್ಥಾನದಲ್ಲಿ ಸೂರ್ಯರಿಕ್ತ ಯಾವುದೇ ಗ್ರಹವಿದ್ದರೂ ಕೇಮದ್ರುಮ ಯೋಗ ಭಂಗವಾದಂತೆ – ಅಲ್ಲಿ ಗ್ರಹವಿಲ್ಲದಿದ್ದರೆ ಮಾತ್ರ ಕೇಮದ್ರುಮ ಯೋಗ ವಿಚಾರಿಸುವುದು. ಇಲ್ಲಿ ಸೂರ್ಯಾತಿರಿಕ್ತ ಎಂಬುದನ್ನು ಗಮನದಲ್ಲಿಡುವುದು. ಚಂದ್ರನಿಂದ ದ್ವಿತೀಯ ದ್ವಾದಶದಲ್ಲಿ ರವಿ ಶುಭಕಾರಕನಲ್ಲ.

ಈ ಪ್ರಕಾರ ಭೌಮಾದಿ 5 ಗ್ರಹಗಳಿಂದ ಸುನಫಾ ಅನಫಾಗಳ 31 ಭೇದಗಳಿದ್ದರೆ

ದುರಾಧರಾ 180 ಭೇದಗಳಿಂದ ಕೂಡಿದೆ. ಈ ಅಂಶವನ್ನು ವರಾಹ ಮಿಹಿರರು ಸ್ಪಷ್ಟಪಡಿಸಿದ್ದಾರೆ.

ಸುನಫಾ, ಅನಫಾ ದುರಾಧರಾ ಯೋಗಗಳ ಫಲ ಒಳ್ಳೆಯದಿದ್ದರೆ ಕೇಮದ್ರುಮ ಯೋಗಫಲ ಅನಿಷ್ಟದಾಯಕವಾಗಿದೆ. ಆದರೆ ಕೇಮದ್ರುಮ ಭಂಗಗಳು ಅನೇಕವಿದೆ. ಚಂದ್ರ ಶುಭಗ್ರಹಯುತನಾದರೂ ಕೇಮದ್ರುಮ ಯೋಗಭಂಗವಾಗುತ್ತದೆ.

ಚಂದ್ರನು ಅಧಿಮಿತ್ರ ಕ್ಷೇತ್ರ ಉಚ್ಚರಾಶಿ ಗ್ರಹ ನವಾಂಶ ಗುರು ದೃಷ್ಟನಾಗಿದ್ದರೂ ಕೇಮದ್ರುಮ ಯೋಗ ಭಂಗ-ಪೂರ್ಣ. ಚಂದ್ರ ಲಗ್ನಸ್ಥನಾಗಿ ಗುರು ದೃಷ್ಟಿತನಾಗಿದ್ದರೆ ಭಂಗವಾಗುತ್ತದೆ.

ಈ ಎಲ್ಲ ಅಂಶ ಗಮನದಲ್ಲಿಟ್ಟು ಫಲಾದೇಶ ಮಾಡುವುದು.

## ಚಂದ್ರ ಯೋಗ ಮಹತ್ವ

ಚಂದ್ರಯೋಗೋ ನಿರಸ್ಯಾ ನ್ಯಾಯೋ ಗಜಾತಂ ಫಲಂಸ್ವಕಮ್ ।
ಪ್ರಯಚ್ಛತಿ ವಿಶೇಷೇಣ ವೇದ್ಯದೇತದ್ ಬುಧೈಃ ಸದಾ ॥೧೩॥

ಚಂದ್ರ ಯೋಗವೇ ವಿಶೇಷತೆಯುಳ್ಳದ್ದಾಗಿದೆ. ಅನ್ಯಯೋಗಜ ಫಲವನ್ನು – ನಿಷ್ಕ್ರಿಯಗೊಳಿಸಿ ಚಂದ್ರಯೋಗ ತನ್ನ ಫಲ ಕೊಡುವುದರಲ್ಲಿ ವಿಶೇಷವಾದುದು.

ಇತಿ ಬೃಹತ್‌ಪರಾಶರ ಹೋರಾಶಾಸ್ತ್ರೇ ಚಂದ್ರಯೋಗಾಧ್ಯಾಯಃ ಸಮಾಪ್ತಃ



# ಅಥ ರವಿ ಯೋಗಾಧ್ಯಾಯಃ

## ವೇಶಿ–ವೋಶಿ ತಥೋಭಯಚರ ಯೋಗ ಫಲಂ

**ಪರಾಶರ ಉವಾಚ:**

ವಿನೇಂದು ರವಿತೋ ವಿತ್ತ ರಿಷ್ಫೋಭಯಗತ್ಯೈ ಗ್ರ್ಹೈಃ ।
ವೇಶಿ–ವೋಶಿ ಕ್ರಮಾದ್ಯೋ ಗೌ ತಥೋಭಯಚರೋಮತಿಃ ॥೧॥

**ಪರಾಶರರು ಹೇಳಿದರು–**

ಸೂರ್ಯನಿಂದ ದ್ವಿತೀಯದಲ್ಲಿ ಚಂದ್ರಾರಿಕ್ತ ಯಾವುದೇ ಗ್ರಹವಿದ್ದರೆ ವೇಶಿ ಯೋಗದ್ವಾದಲ್ಲಿ ಚಂದ್ರಾರಿಕ್ತ ಯಾವುದೇ ಗ್ರಹವಿದ್ದರೂ ವೋಶೀಯೋಗ ಎರಡು ಸ್ಥಾನದಲ್ಲಿ ಗ್ರಹವಿದೆ. ಉಭಯಚರಿಯೋಗವಾಗುತ್ತದೆ.

### ಯೋಗ ಫಲ

ವೇಶಿ ಯೋಗೋದ್ ಭವೋ ಜಾತಃ ಸತ್ಯವಾದಿ ಸದಾಲಸಃ ।
ಸಮದರ್ಶಿ ಸುಖಿ ಸ್ವಲ್ಪಧನೋ ದೀರ್ಘಾವಪುಃಪುಮಾನ್ ॥೨॥

ದಕ್ಷೋ ದಾನಿ ಬಲಿ ವಿದ್ವಾನ್ ಯಶಸ್ವಿ ವೋಶೀ ಸಂಭವಃ ।
ಸದೋ ಭಯಚರೋ ಸೌಖ್ಯಿಯುಗ ನೃಪತ್ಸ್ವಾ ದೃಶೋಥವಾ ॥೩॥

ಯೋಗೇಸತ್ವೇಟಜೆ ತ್ವೈವಂ ಫಲಂ ಜ್ಞೇಯಂ ವಿಪಶ್ಚಿತಾ ।
ಅಸತ್ವಗ ಸಮುದ್ ಭೂತೆ ವಿಪರೀತಂ ವಿನಿರ್ದಿಶೇತ್ ॥೪॥

ವೇಶಿ ಯೋಗದಲ್ಲಿ – ಸತ್ಯವಾದಿ, ಸತತ ಆಲಸಿ, ಸಮದರ್ಶಿ, ಸುಖಿ, ಸ್ವಲ್ಪ ಧನಿ – ಎತ್ತರ ದೇಹದವನಾಗುತ್ತಾನೆ.

ವೋಶೀ ಯೋಗದಲ್ಲಿ – ಕುಶಲ, ದಾನಶೀಲ ಬಲಿ ವಿದ್ವಾನ್, ಕೀರ್ತಿವಂತ ನಾದರೆ

ಉಭಯಚರಿಯೋಗದಲ್ಲಿ – ಸೌಖ್ಯಪೂರ್ಣ, ರಾಜಸಮಾನ ವ್ಯಕ್ತಿ ಮೇಲಿನ ಫಲ ಶುಭ ಗ್ರಹದಿಂದಾದ ಪಾಪಗ್ರಹದಿಂದ ವಿಪರೀತ ಫಲಾದಿಗಳನ್ನು ಹೇಳುವುದು.

**ಇತಿ ಬೃಹತ್‌ಪರಾಶರ ಹೋರಾ ಶಾಸ್ತ್ರೇ ರವಿ ಯೋಗಾಧ್ಯಾಯ ಸಮಾಪ್ತಃ**

# ಅಥ ರಾಜಯೋಗಾಧ್ಯಾಯಃ

## ರಾಜಯೋಗ

**ಪರಾಶರ ಉವಾಚ:**

ಅಥಾತಃ ಸಂಪ್ರವಕ್ಷ್ಯಾಮಿ ರಾಜಯೋಗಾನ್ ದ್ವಿಜೋತ್ತಮ ।
ಯೇಷಾಂ ವಿಜ್ಞಾನ ಮಾತ್ರೇಣ ನೃಪಪೂಜ್ಯೋ ಜ್ಞಾನೋ ಭವೇತ್ ॥೧॥

ಪುರಾ ಪುರಾರಿಣಾ ಯೋಗಾ ಉಕ್ತಾ ಯೋಶೈಲಜಾ ಗ್ರತಃ ।
ತೇಷಾಂ ಸಾರಮಹಂ ವಕ್ಷ್ಯೇ ತವಾಗ್ರೇ ದ್ವಿಜ ನಂದನ ॥೨॥

ಕಾರಕಾಂತೇಥವಾ ಜನ್ಮಲಗ್ನೆ ದ್ವಿಜ ವಿಚಿಂತಯೇತ್ ।
ದ್ವೌ ದ್ವೌ ಸ್ವಪ್ನಗ್ರಹೌ ಯತ್ನಾದ್ರಾಜ ಯೋಗ ವಿಧಾಯಕೌ ॥೩॥

ಆತ್ಮಕಾರಕ ಪುತ್ರಾಭ್ಯಾಂ ಯೋಗಮೇಕಂ ಪ್ರಕಲ್ಪಯೇತ್ ।
ತನು ಪಂಚಮನಾಥಾಭ್ಯಾಂ ತಥೈವ ದ್ವಿಜಸತ್ತಮ ॥೪॥

ತನುಸೂನುಪಯೋರಾತ್ಮಾ ಸೂನುಕಾರಕಯೋರ್ಮಿಥಃ ।
ಸಂಬಂಧತೋ ವೀರ್ಯತಶ್ಚ ಪೂರ್ಣೋಽರ್ಧೋಂಘ್ರಿಫಲಂ ಸದಾ ॥೫॥

**ಪರಾಶರರು ಹೇಳಿದರು—**

ಹೇ ಮೈತ್ರೇಯನೆ, ಈಗ ನಾನು ರಾಜಯೋಗಗಳ ಬಗ್ಗೆ ಹೇಳುತ್ತೇನೆ. ಇದರ ಜ್ಞಾನ ಮಾತ್ರದಿಂದ ನೀನು ರಾಜವಂದ್ಯನಾಗುತ್ತಿ ಈ ಮೊದಲು ಭಗವಾನ್ ಶಂಕರನು ಪಾರ್ವತಿ ದೇವಿಯರಿಗೆ ಹೇಳಿದುದರ ಸಾರ ಮಾತ್ರ ನಿನ್ನ ಮುಂದಿಡುತ್ತೇನೆ.

ಕಾರಕಾಂಶ ಅದರಂತೆ ಜನ್ಮಲಗ್ನ ಎರಡರಿಂದಲೂ ರಾಜಯೋಗಕಾರಕ. ಎರಡೆರಡು ಸ್ಫುಟ ಗ್ರಹಗಳಿಂದ ವಿಚಾರ ಮಾಡುವುದು 1) ಆತ್ಮಕಾರಕ ಹಾಗೂ ಪುತ್ರಕಾರಕದಿಂದ 2) ಲಗ್ನೇಶ ಹಾಗು ಪಂಚಮೇಶರಿಂದ ಅವರ ಪರಸ್ಪರ ಸಂಬಂಧ ಹಾಗೂ ಬಲದ ಅನುಸಾರವೇ ಸಂಪೂರ್ಣ ಅರ್ಧ ಅಥ ಚತುರ್ಥಾಂಶ ಯೋಗವೆಂದು ತಿಳಿ.

## ಮಹಾರಾಜಯೋಗ

ಪುತ್ರ ಭಾವಸ್ಥಿತೆ ಲಗ್ನಾಧೀಶೆ ಲಗ್ನೆ ಸುತಾಧಿಪೆ ।
ತನೌ ವಾ ಸುತಭಾವೆ ವಾ ಸ್ವರ್ಕ್ಷೆ ಸ್ವಾಂಶೆ ಸ್ವತುಂಗಭೆ ॥೬॥

ಆತ್ಮಜಾತ್ಮಾಭಿಧೌ ಸ್ಯಾತಂ ಕಾರಕೌ ಶುಭ ವೀಕ್ಷಿತೌ ।
ಮಹಾರಾಜಾಭಿದೋ ಯೋಗಸ್ತ ತ್ರಜೋ ವಿಶ್ರುತಃ ಸುಖಿ ॥೭॥

ಕಾರಕೋ ಭಾಗ್ಯವಾನಶ್ಚ ತನುಪುತ್ರ ಕಲತ್ರಭೆ ।
ಸೌಮ್ಯ ಗ್ರಹೇಕ್ಷಿತ ಯುತೌ ರಾಜಭೋಗಪದೌ ಮತೌ ॥೮॥

ಕಾರಕಾಲ್ಲಗ್ನ ಪಾದಾಪಿ ವಿತ್ತೆ ಪುತ್ರೋಥವಾ ಸುಖೆ ।
ಸೌಮ್ಯ ಗ್ರಹಾನ್ವಿತೆ ಬಾಲೋ ನೃಪತಿಃ ಸ್ಯಾನ್ನ ಸಂಶಯಃ ॥೯॥

ಕ್ರೂರ ಗ್ರಹೆ ಕ್ಷಿತಯುತೆ ವಕ್ರಮೆ ರಿಪುಭೇತತಃ।
ಜಾತಕೋ ನೃಪತಿರ್ಮಿಶ್ರೇ ಜಾಯತೆ ಧನಸಂ ಯುತಃ ॥೧೦॥

ಲಗ್ನೇಶ ಪಂಚಮ ಭಾವಸ್ಥ ಹಾಗೂ ಪಂಚಮೇಶ ಲಗ್ನಸ್ಥರಾಗಿದ್ದರೆ ಹಾಗೂ ಪುತ್ರಕಾರಕ ಗ್ರಹ ಲಗ್ನದಲ್ಲಿ ಪಂಚಮದಲ್ಲಿ ಸ್ವಕ್ಷೇತ್ರ ಸ್ವನವಾಂಶದಲ್ಲಿರಲಿ ಅಥವಾ ತನ್ನುಚ್ಚದಲ್ಲಿ ಶುಭಗ್ರಹ ದೃಷ್ಟಿತವಾಗಿದ್ದರೆ ಮಹಾರಾಜನಾಗುತ್ತಾನೆ ಹಾಗೂ ವಿಖ್ಯಾತನಾಗುತ್ತಾನೆ ಹಾಗೂ ಸುಖಿಯೂ ಆಗುತ್ತಾನೆ. ಭಾಗ್ಯೇಶ ಆತ್ಮಕಾರಕ ಗ್ರಹ ಲಗ್ನ ಪಂಚಮ ಸಪ್ತಮದಲ್ಲಿ ಸ್ಥಿತರಾಗಿ ಶುಭಗ್ರಹ ದೃಷ್ಟಿತರಾಗಿದ್ದರೆ ರಾಜಯೋಗ ಕಾರಕರಾಗುತ್ತಾರೆ. ಕಾರಕ ಅಥವಾ ಲಗ್ನೇಶರಿಂದ 2, 5, 4 ಶುಭಗ್ರಹ ಯುಕ್ತನಾಗಿದ್ದರೆ ಜಾತಕ ನಿಸ್ಸಂದೇಹ ರಾಜನಾಗುತ್ತಾನೆ. ಕಾರಕನಿಂದ 3, 6 ಸ್ಥಾನ ಕೇವಲ ಪಾಪಯುತ ದೃಷ್ಟರಾಗಿದ್ದರೆ ರಾಜನಾಗುವ ಸಂಭವ ಶುಭಾಶುಭಗ್ರಹ ಯುಕ್ತವಾದರೆ ಮಿಶ್ರಫಲದಾಯಕ.

ಸಿತೆ ಸ್ವಾಂಶೇಥವಾ ತಸ್ಮಾತ್ ಸುತೆ ಗುರ್ವಿಂದು ದೃಗ್ಯುತೆ ।
ತನೌ ತನುಪದೆ ವಾಪಿ ರಾಜವರ್ಗೆ ಭವೆನ್ನರಃ ॥೧೧॥

ಜನ್ಮಾಂಗೇಪಿ ಚ ಹೋರಾಂಗೆ ಕಲಾಂಗೆ ಯೇನಕೇನಚಿತ್ ।
ವೀಕ್ಷಿತೆ ತ್ವೆಕಖೇಟೆನ ಯೋಗೇಷು ತ್ರಿಷು ಭೂಪತಿಃ ॥೧೨॥

ಕಾರಕಾಂಶ ಅಥವಾ ಪಂಚಮ ಸ್ಥಿತ ಶುಕ್ರನ ಮೇಲೆ ಗುರು ದೃಷ್ಟಿ ಅಥವಾ ಯೋಗ ಲಗ್ನ ಲಗ್ನ ಪದಿಸ್ಥ ಶುಕ್ರನ ಮೇಲೆ ಗುರು, ಚಂದ್ರಯುತ ಅಥವಾ ದೃಷ್ಟಿ ಎರಡೂ ಸ್ಥಿತಿಯಲ್ಲಿ ರಾಜ ವರ್ಗೀಯವನಾಗುತ್ತಾನೆ. ಜಾತಕ ಜನ್ಮಲಗ್ನ ಹೋರಾ ಲಗ್ನ ಅಥವಾ ಘಟಿ ಲಗ್ನದ ಮೇಲೆ ಯಾವುದೇ ಒಂದು ಗ್ರಹದ ದೃಷ್ಟಿಯಿದ್ದರೆ ಜಾತಕ ರಾಜನಾಗುತ್ತಾನೆ.

ಏಕಗ್ರಹೆ ಕ್ಷೀಯುತೆ ಲಗ್ನಷಡ್‌ವರ್ಗಕೆ ನೃಣಾಮ್ ।
ನಿಯತಂ ರಾಜಯೋಗಃ ಸ್ಯಾತ್ ಫಲಂ ದೃಷ್ಟ್ಯಾನು ಸಾರಿತಃ ॥೧೩॥

ಪೂರ್ಣದೃಷ್ಟ್ಯಾ ಪೂರ್ಣಯೋಗೋರ್ಧದೃಷ್ಟ್ಯಾ ತು ತದರ್ಧಕಃ ।
ಪಾದ ದೃಷ್ಟ್ಯಾ ಪಾದಯೋಗೋ ವಿಜ್ಞೇಯ ಕ್ರಮತೋ ಬುಧೈಃ ॥೧೪॥

ಲಗ್ನದಿಂದ ಷಡ್‌ವರ್ಗ (ಲಗ್ನ, ಹೋರಾ, ದ್ರೇಷ್ಕಾಣ, ನವಾಂಶ, ದ್ವಾದಶಾಂಶ, ತ್ರಿಶಾಂಶ) ಒಂದೇ ಗ್ರಹಯುತವಾದರೆ (ಎಲ್ಲ ಪ್ರಥಮದಲ್ಲಿ ಒಂದು ಗ್ರಹವಿದ್ದರೆ) – ರಾಜಯೋಗವಾಗುತ್ತಿದೆ. ಈ ರಾಜಯೋಗ ದೃಷ್ಟ್ಯಾನುಸಾರ – ಪೂರ್ಣದೃಷ್ಟಿ ಪೂರ್ಣ ಯೋಗ, $^1/_2$ ದೃಷ್ಟಿ ಅರ್ಧಫಲ, ಪಾದ ದೃಷ್ಟಿ $^1/_4$ ಫಲ ಯೋಗವು – ಯಾವುದೇ ಯೋಗ (ಯತಿ ನವಪಂಚಕ ತ್ರಿರೇಕಾದಿಶಾದಿಗಳು) – ಪೂರ್ಣವಿದ್ದರೆ ಎರಡು ಗ್ರಹಗಳ ಅಂಶ – ಕಲಾತ್ಮಕ ಒಂದೇಯಾಗಿದ್ದರೆ – ಆ ರೀತಿ ಪೂರ್ಣ ಇಲ್ಲವೆ ಹಿಂದೆ ಮುಂದೆ ಸರಿದಿದ್ದರೆ ಆ ರೀತಿ ಫಲವು ದೊರೆಯುವುದು. (ಯುತಿಯಲ್ಲಿ 1-2 ಸರಿದಿದ್ದರೂ ಪೂರ್ಣವೆಂದು ಪರಿಗಣಿಸುವುದು. ಸ್ಥಾನದಲ್ಲಿದ್ದರೆ ಮಾತ್ರವಲ್ಲ ದೃಷ್ಟಿ ಗಣಿತದಿಂದ ತೆಗೆದಂತೆ ಹೆಚ್ಚು (ಶ್ರೇಯಸ್ಕರ).

ಸ್ವರ್ಷೋಚ್ಚಗೆ ಗ್ರಹೆ ಲಗ್ನತ್ರಿತಯೇ ನೃಪತಿರ್ಭವೇತ್ ।
ತನಾವಂಶೆ ದೃಕಾಣೆ ವಾ ತಥಾಭೂತೆ ಗ್ರಹೇಪಿ ಚ ॥೧೫॥

ಸೇಂದುಸದ್ ಗ್ರಹ ಸಂಯುಕ್ತೆ ಪದೆ ಜೀವೆ ತು ವಿತ್ತಗೆ ।
ಅಸಂಶಯಂ ರಾಜಯೋಗಃ ಸ್ವತುಂಗಸ್ಥ ಗ್ರಹೆಕ್ಷಿತೆ ॥೧೬॥

ಲಗ್ನ(ಜನ್ಮ, ಹೋರಾ, ಘಟಿ)ಗಳಲ್ಲಿ ಸ್ವರಾಶಿಸ್ಥ ಯಾ ಸೋಚ್ಚಸ್ಥ ಅಥವಾ ಸ್ವರಾಶಿಸ್ಥ ಗ್ರಹ ಅಥವಾ ಲಗ್ನ ದ್ರೇಷ್ಕಾಣ ಅಥವಾ ಲಗ್ನ ನವಾಂಶ ಈ ಮೂರರಲ್ಲಿ ಉಚ್ಚ ಗ್ರಹವಿದ್ದರೆ ರಾಜನಾಗುವನು ಅಥವಾ ರಾಜಸದೃಶ್ಯನಾಗುವನು. ಪದ ಸಚಂದ್ರ ಶುಭಗ್ರಹಯುಕ್ತವಾದರೆ ಧನಸ್ಥಾನವೂ ಗುರುಸಹಿತವಾದರೆ ಅದರ ಮೇಲೆ ಉಚ್ಚಸ್ಥಗ್ರಹ ದೃಷ್ಟಿಯಿದ್ದರೆ ನಿಸ್ಸಂದಿಗ್ಧ ಜಾತಕನು ರಾಜನಾಗುವನು.

ಶುಭೆಲಗ್ನೆ ಶುಭೆ ತ್ವರ್ಥೆ ತೃತೀಯೆ ಪಾಪಖೇಚರೆ ।
ಚತುರ್ಥೆ ತು ಶುಭೆ ಪ್ರಾಪ್ತೆ ರಾಜವಾ ತತಮೋಪಿವಾ ॥೧೭॥

ಸ್ವೋಚ್ಚನೋ ಹರಿಣಾಂಕೆ ವಾ ಜೀವೋ ವಾ ಶುಕ್ರ ಏವ ವಾ ।
ಸೌಮ್ಯೋ ಬಲಿ ಧನಗತಃ ಶ್ರೀಯಂ ದಿಶತಿ ದೇಹಿನಃ ॥೧೮॥

ಷಷ್ಠಾಷ್ಟಮೇ ತೃತಿಯೋ ವಾ ನೀಚಸ್ಥಾನ ಸ್ಥಿತಾ ಗ್ರಹಾಃ ।
ಸ್ವರ್ಕ್ಷೋಚ್ಚಗೋಂಗಪೊ ಲಗ್ನ ಮೀಕ್ಷತೆ ರಾಜಯೋಗಕೃತ್ ॥೧೯॥

ರಿಪುರಂಧ್ರಾನ್ತ್ಯಯಾ ಅಸ್ತಾ ನೀಚೆ ವಾ ಶತ್ರುಭೆ ಸ್ಥಿತಾಃ ।
ಸ್ವರ್ಕ್ಷಸ್ವತುಂಗಗೋಂಗೆಂಶೊ ರಾಜ್ಯಪದೊ ಲಗ್ನದರ್ಶಕಃ ॥೨೦॥

ಸ್ವರ್ಕ್ಷತುಂಗಸ್ಥ ಕರ್ಮೇಶಃ ರಾಜ್ಯದೋ ಲಗ್ನ ವೀಕ್ಷಕಃ ।
ಸದ್ಗ್ರಹಾಃ ಕೇಂದ್ರಗಾಶ್ಚಾಪಿ ನಿಯತಂ ರಾಜ್ಯದಾಯಕಾಃ ॥೨೧॥

ಲಗ್ನ ಧನ ಹಾಗೂ ಚತುರ್ಥ ಭಾವ ಶುಭಗ್ರಹ ಯುಕ್ತವಾಗಿ ತೃತೀಯ ಸ್ಥಾನ ಪಾಪಗ್ರಹ ಕ್ರಾಂತವಾದರೆ ಜಾತಕ ರಾಜ ಅಥವಾ ತತ್ ಸದೃಶ್ಯನಾಗುತ್ತಾನೆ. ಚಂದ್ರ, ಗುರು, ಶುಕ್ರ ಅಥವಾ ಪ್ರಬಲ ಬುಧರಲ್ಲಿ ಒಬ್ಬನಾದರೂ ಸ್ವೋಚ್ಚಸ್ಥನಾಗಿ ಧನ ಭಾವಗತನಾಗಿದ್ದರೆ ಜಾತಕನು ಲಕ್ಷ್ಮೀಪುತ್ರನಾಗುತ್ತಾನೆ. ನೀಚಗ್ರಹದ ಗ್ರಹದಲ್ಲಿ ಅಷ್ಟಮ ತೃತೀಯ ಸ್ಥಾನದಲ್ಲಿ ತನ್ನ ಕ್ಷೇತ್ರ ಅಥವಾ ತನ್ನುಚ್ಚದಲ್ಲಿ ಲಗ್ನೇಶ ಲಗ್ನ ನೋಡುತ್ತಿದ್ದರೆ ರಾಜಯೋಗ ಯುಕ್ತನಾಗುವನು. 6, 8, 12ರ ಸ್ವಾಮಿಗಳು ಅಸ್ತಂಗತ ನೀಚಪ್ರಾಪ್ತ ಅಥವಾ ಶುಭಗ್ರಹಗತನಾಗಿದ್ದರೆ ಹಾಗೂ ಸ್ವಭವನ ಸ್ವೋಚ್ಚ ಲಗ್ನೇಶ ಲಗ್ನ ನೋಡುತ್ತಿದ್ದರೂ ಕೂಡ ರಾಜಯೋಗವೆ. ಸ್ವಭವನ ಅಥವಾ ಉಚ್ಚದ ರಾಜ್ಯೇಶ (10ನೇ ಅಧಿಪ) ಲಗ್ನದಲ್ಲಿ ಅಥವಾ ಲಗ್ನ ನೋಡುತ್ತಿದ್ದರೆ ಎಲ್ಲ ಶುಭ ಗ್ರಹಗಳು ಕೇಂದ್ರಗತರಾಗಿದ್ದರೆ ಜಾತಕನು ನಿಶ್ಚಿತವಾಗಿ ರಾಜಯೋಗಕಾರಕ ನಾಗುತ್ತಾನೆ.

ಕಾರಕಃ ಸೌಮ್ಯರಾಶೌ ವಾ ಸೌಮ್ಯಾಂಶೆ ಧನಕಾರಕಃ ।
ಸೌಮ್ಯೆ ತದಂಶತಃ ಕೇಂದ್ರಗತೆ ಜಾಯತೆ ಭೂಪತಿಃ ॥೨೨॥

ಅನ್ಯೋನ್ಯಂ ಕೇಂದ್ರಗಂ ಲಗ್ನಪರಂ ಜಾಯಾಪದಂ ಯದಾ ।
ತ್ಯಾಯೋ ಕೋಣೇಥವಾ ತರ್ಹಿ ಭೂಪೋ ಭವತಿ ನಿಶ್ಚಿತಮ್ ॥೨೩॥

ಭಾವ ಹೋರಾ ಕಲಾ ಲಗ್ನೆ ದ್ವಿಯಂ ತ್ರತಯಮೇವ ವಾ ।
ಪಶ್ಯೇತ್ ಸ್ವತುಂಗಃ ಖೇಟೋ ರಾಜಯೋಗ ಪ್ರದಾಯಕಃ ॥೨೪॥

ರಾಶಿ ದ್ರೇಷ್ಕಾಣತೋಂಶಾಚ್ಚ ರಾಶೆ ರಂಶಾದಥಾಪಿ ವಾ ।
ಯದ್ವಾ ರಾಶಿ ದೃಕಾಣಾಭ್ಯಾಂ ಲಗ್ನಾದಶಿಂ ತು ಯೋಗದಃ ॥೨೫॥

ಆರೂಢೆ ಸೌಮ್ಯ ಖೇಟೆ ತು ಚಂದ್ರಕ್ರಾಂತೆ ವಿಶೇಷತಃ ।
ಕ್ರಾಂತೆ ಚ ಗುರು ಶುಕ್ರಾಭ್ಯಾಂ ಕೇನಪ್ಯುಚ್ಚಗ್ರಹೇಣಾ ವಾ ॥೨೬॥

ದುಷ್ಪಾರ್ಗಲಾಗ್ರಹಾ ಭಾವೆ ರಾಜಯೋಗ ನ ಸಂಶಯಃ ।
ಶುಭಾರೂಢೆ ತತ್ರ ಚಂದ್ರ ಧನೆ ದೇವಗುರೌ ತಥಾ ॥೨೭॥

ಆತ್ಮಕಾರಕ ಗ್ರಹ ಶುಭರಾಶಿ ಶುಭ ನವಾಂಶ ಗತವಾದರೆ ಜಾತಕ ಧನವಂತ. ಕಾರಕಾಂಶದಿಂದ ಕೇಂದ್ರಸ್ಥಾನ 1, 4, 7, 10ರಲ್ಲಿ ಶುಭಗ್ರಹವಿದ್ದರೆ ಜಾತಕ ರಾಜ ಸದೃಶ ಅಥವಾ ರಾಜನಾಗುತ್ತಾನೆ. ಲಗ್ನ ಪದ ಆಯಾಭಾವ ಪದ ಪರಸ್ಪರ ಕೇಂದ್ರಗತ ವಾದರೆ ಅಥವಾ ತೃತೀಯ, ಏಕಾದಶದಲ್ಲಿ ಅಥವಾ ನವಮ, ಪಂಚಮದಲ್ಲಿ ಇದ್ದರೆ ಜಾತಕ ನಿಶ್ಚಿತ ರಾಜನಾಗುತ್ತಾನೆ. ಭಾವಲಗ್ನ, ಹೋರಾಲಗ್ನ, ಘಟಿಲಗ್ನ ಇವುಗಳಲ್ಲಿ 2ಕ್ಕೆ ಅಥವಾ 3ಕ್ಕೆ ತನ್ನುಚ್ಚದ ಯಾವುದೇ ಗ್ರಹ ನೋಡಿದರೆ ಜಾತಕ ರಾಜ ಸದೃಶ್ಯ ನಾಗುವನು. ಮೇಲಿನ 3 ಲಗ್ನಗಳ ರಾಶಿ ದ್ರೇಷ್ಕಾಣ, ನವಾಂಶ ಅಥವಾ ರಾಶಿ ನವಾಂಶ ಅಥವಾ ರಾಶಿ ಹಾಗೂ ದ್ರೇಷ್ಕಾಣವನ್ನು ಲಗ್ನರಾಶಿ ನೋಡಿದರೆ ರಾಜಯೋಗವೆ. ಲಗ್ನಪದ ಯಾವುದೇ ಉಚ್ಚಸ್ಥ ಗ್ರಹ – ಚಂದ್ರ, ಗುರು, ಶುಕ್ರಯುಕ್ತ ಹಾಗೂ ಕೆಲ್ಕಗ್ರಹ ಪ್ರತಿಬಂಧ ಭಾವ (2, 12) ಗತರಾದರೆ ನಿಶ್ಚಯಪೂರ್ವಕ ರಾಜಯೋಗ ವಾಗುತ್ತದೆ. ಶುಭಗ್ರಹಯುಕ್ತ ಪದದಲ್ಲಿ ಚಂದ್ರ ಹಾಗೂ ಎರಡರಲ್ಲಿ ಗುರುವಿದ್ದರೂ ರಾಜ ಯೋಗವೆ.

ಷಷ್ಠಾಷ್ಟಮ ವ್ಯಯೋಶಾಸ್ತು ನೀಚಗಾ ಲಗ್ನದರ್ಶಿನಃ ।
ರಾಜಯೋಗಕರಾ ನೃಣಾಂ ಭವಂತಿ ನಹಿ ಸಂಶಯಃ ॥೨೮॥

ತುರ್ಯಕರ್ಮಸ್ವಲಾಭೆಶ್ಚೈ ವೀಕ್ಷಿತೆ ಸತಿ ಲಗ್ನಭೆ ।
ಪದೆ ಸದ್‌ಗ್ರಹ ಸಂಯುಕ್ತೆ ಪದಾದಾಯೋ ಸಿತೆಕ್ಷಿತೆ ॥೨೯॥

ನೃಪೋ ವಾ ನೃಪತುಲ್ಯೋ ವಾ ಭವೆಜ್ಜಾತೋ ನ ಸಂಶಯಃ ।
ರಿಪುರಂಧ್ರ ತೃತೀಯಾಯಸ್ಥಿತೊ ನೀಚಗತೋ ಗ್ರಹಃ ॥೩೦॥

ತನುಂ ಪಶ್ಯತಿ ವಾ ಲಗ್ನಾಂಶತಃ ಕೇಂದ್ರಗತೆ ಶುಭ ।
ಕ್ಷಮಾದಂಡಪ್ರದೋ ಭೂಪೋ ಜಾಯತೆ ನಾತ್ರ ಸಂಶಯಃ ॥೩೧॥

ತ್ರಿಕೇಶ(ಷಷ್ಠಾಷ್ಟಮವ್ಯಯೇಶ)ನಲ್ಲಿ ನೀಚಸ್ಥನಾಗಿ ಲಗ್ನವನ್ನು ವೀಕ್ಷಿಸುತ್ತಿದ್ದರೆ ರಾಜ ಯೋಗಕಾರಕವೆ. ಚತುರ್ಥೇಶ, ದಶಮೇಶ, ಧನೇಶ ಹಾಗೂ ಲಗ್ನೇಶರ ಲಗ್ನದ ಮೇಲೆ ದೃಷ್ಟಿ ಇದ್ದು ಪದ ಶುಭಗ್ರಹಯುಕ್ತವಾದರೆ ಹಾಗೂ ಪದದಿಂದ ಏಕಾದಶ ಸ್ಥಾನದಲ್ಲಿ ಶುಕ್ರನ ದೃಷ್ಟಿಯಿದ್ದರೆ ಜಾತಕ ರಾಜನಾಗುತ್ತಾನೆ ಅಥವಾ ರಾಜ ಸದೃಶ ಅಧಿಕಾರಭೋಕ್ತನಾಗುತ್ತಾನೆ. 6, 8, 3, 11 ಸ್ಥಾನ-ಸ್ಥಿತ ನೀಚಗತ ನಾದರೂ ಗ್ರಹವನ್ನು ನೋಡುತ್ತಿದ್ದರೆ ಅಥವಾ ಲಗ್ನದ ನವಾಂಶ ರಾಶಿ ಕೇಂದ್ರದಲ್ಲಿ

ಶುಭಗ್ರಹವಿದ್ದರೆ ಜಾತಕ ನಿಸ್ಸಂದೇಹ ನಿಗ್ರಹಾನುಗ್ರಹಕಾರಿ ರಾಜನಾಗುತ್ತಾನೆ.

ಅಥಾಹಂ ಸಂಪ್ರವಕ್ಷ್ಯಾಮಿ ರಾಜಯೋಗಾದಿಕಂ ಪರಮ್ ।
ಗ್ರಹಾಣಾಂ ಸ್ಥಾನಭೇದೇನ ಫಲಂ ದೃಷ್ಟ್ಯನುಸಾರತಃ ॥೩೨॥

ತಪಃ ಸ್ಥಾನಾಧಿಪೋ ಮಂತ್ರಿ ಮಂತ್ರಾಧೀಶೋ ವಿಶೇಷತಃ ।
ವಿಭಾವನ್ಯೋನ್ಯ ಸಂದೃಷ್ಟೌ ಜಾತಶ್ಚೇದಿಹ ರಾಜ್ಯಭಾಕ್ ॥೩೩॥

ಯತ್ರ ಕುತ್ರಾಪಿ ಸಂಯುಕ್ತೌ ತೌ ವಾಪಿ ಸಮಸಪ್ತಗೌ ।
ರಾಜ ವಂಶೋದ್ಭವೋ ಬಾಲೋ ರಾಜಾ ಭವತಿ ನಿಶ್ಚಿತಮ್ ॥೩೪॥

ವಾಹನೇಶಸ್ತಥಾ ಮಾನೆ ಮಾನೇಶೋ ವಾಹನೆ ಸ್ಥಿತಃ ।
ಬುದ್ಧಿಧರ್ಮಾಧಿಪಾಭ್ಯಾಂ ತು ದೃಷ್ಟಿಶ್ಚೇದಿಹ ರಾಜ್ಯಭಾಕ್ ॥೩೫॥

ಸೂನುವ್ಯೋಮ ಸುಖಾಂಗೇಶಾ ತದಾ ಧರ್ಮಪ ಸಂಯುತಾಃ ।
ದಿಗಂತ ವ್ಯಾಪ್ತಯಶಸಂ ನೃಪಂ ಕುರ್ವರಿತಿ ಜಾತಕಂ ॥೩೬॥

ಸುಖಕರ್ಮಾಧಿಪೌ ವಾ ತು ಮಂತ್ರಿನಾಥೇನ ಸಂಯುತೌ ।
ಧರ್ಮಪೇನಾಥವಾ ಯುಕ್ತೌ ಜಾತಶ್ಚೆದಿಹ ರಾಜ್ಯಭಾಕ್ ॥೩೭॥

ಧರ್ಮಪೇನಾಥ ವಾ ಲಗ್ನನಾಥೇನ ಸುತಪೇನ್ವಿತೆ ।
ಗತೆ ತನೌ ತುರಿಯೇ ವಾ ವ್ಯೊಮ್ನಿ ಸ್ಥಾನ್ನೃಪತಿರ್ನರಃ ॥೩೮॥

ಧರ್ಮಸ್ಥಾನೆ ಗುರೌ ಯಾತೆ ಸ್ವಗ್ರಹೆ ಭೃಗು ಸಂಯುತೆ ।
ಪಂಚಮೇಶ ಯುತೆ ಕಿಂವಾ ಜಾತಶ್ಚೆದಿಹ ರಾಜ್ಯಭಾಕ್ ॥೩೯॥

ದಿನಾರ್ಧಾಚ್ಚ ನಿಶಾರ್ಧಾಚ್ಚ ಪರಂ ಸಾರ್ಧಾದ್ವಿ ನಾಡಿಕಾ ।
ಶುಭಾ ತದುದ್‌ಭವೋ ರಾಜಕಿಂವಾ ತತ್ಸದೃಶೋ ಭವೇತ್ ॥೪೦॥

ಈಗ ಗ್ರಹಗಳ ಸ್ಥಾನ ಭೇದ ಹಾಗೂ ದೃಷ್ಟ್ಯಾನುಸಾರ ಆಗುವ ರಾಜಯೋಗದ ಬಗ್ಗೆ ವಿವರಿಸುತ್ತೇನೆ. ನವಮೇಶ ಮಂತ್ರಿಯಾಗಿರುತ್ತಾನೆ ಹಾಗೂ ಪಂಚಮೇಶ ವಿಶೇಷತಃ ಮಂತ್ರಿ ಅಂದರೆ ಮುಖ್ಯಮಂತ್ರಿಯಾಗಿರುತ್ತಾನೆ. ಇಬ್ಬರಲ್ಲಿ ಪರಸ್ಪರ ದೃಷ್ಟಿ ಸಂಬಂಧಯುತಯಿದ್ದರೆ ಜಾತಕ ರಾಜಾಧಿಕಾರಿಯಾಗುತ್ತಾನೆ. ಯಾವುದೇ ಸ್ಥಾನದಲ್ಲಿ ಎರಡೂ ಗ್ರಹಗಳು (ನವಮೇಶ, ಪಂಚಮೇಶರು) ಸಂಯುಕ್ತರಾಗಿದ್ದರೆ ಅಥವಾ ಸಮಸಪ್ತಕಯೋಗ ಮಾಡುತ್ತಿದ್ದರೆ ರಾಜ ವಂಶೋತ್ಪನ್ನ ಜಾತಕ ನಿಶ್ಚಿತ

ರಾಜನಾಗುತ್ತಾನೆ – ಸುಖೇಶ (4) ದಶಮದಲ್ಲಿದ್ದು ಹಾಗೂ ದಶಮೇಶ ಚತುರ್ಥದಲ್ಲಿ, ನವಮೇಶ ಪಂಚಮೇಶನ ಮೇಲೆ ದೃಷ್ಟಿ ಹಾಕಿದ್ದರೆ ಜಾತಕ ರಾಜ ಸದೃಶ್ಯನಾಗುತ್ತಾನೆ. ಪಂಚಮೇಶ, ದಶಮೇಶ, ಚತುರ್ಥೇಶ ಹಾಗೂ ಲಗ್ನೇಶ, ನವಮೇಶರು ಕೂಡಿದ್ದರೆ ಅಥವಾ ದೃಷ್ಟಿಯೋಗವಿದ್ದರೆ ವಿಖ್ಯಾತ ರಾಜನಾಗುತ್ತಾನೆ. ಸುಖೇಶ, ಕರ್ಮೇಶ, ಪಂಚಮೇಶ ವಾ ನವಮೇಶರ ಜೊತೆ ಯೋಗ ಮಾಡಿದ್ದರೆ ಜಾತಕ ರಾಜ ಸದೃಶ್ಯನಾಗುತ್ತಾನೆ – ಪಂಚಮೇಶ, ಧರ್ಮೇಶ ಅಥವಾ ಲಗ್ನೇಶರ ಜೊತೆಗೆ 1, 4, 10ರಲ್ಲಿದ್ದ ಮನುಷ್ಯ ರಾಜನಾಗುತ್ತಾನೆ. ಶುಕ್ರನೊಡನೆ ಯುತಿ ಮಾಡಿದ ಗುರು ತನ್ನ ಕಾರಕ ಭವನ ನವಮದಲ್ಲಿದ್ದರೆ ಪಂಚಮೇಶ ಯುಕ್ತನಾದರೆ ರಾಜನಾಗುವನು. ಮಧ್ಯಾಹ್ನ ಹಾಗೂ ಮಧ್ಯರಾತ್ರಿಯ ನಂತರ $1^1/_2$ ಗಂಟೆ ಸಮಯ ಶುಭ ಸಮಯವಾಗಿರುತ್ತದೆ. ಆ ಸಮಯ ಉತ್ಪನ್ ಜಾತಕ – ಶುಭಯುಕ್ತನಾದರೆ ರಾಜ ಸದೃಶ್ಯನಾಗುತ್ತಾನೆ ಅಥವಾ ರಾಜನಾಗುತ್ತಾನೆ.

ಚಂದ್ರಃ ಕವಿಂ ಕವಿಶ್ಚಂದ್ರಂ ತ್ಯಾಯಗೋನ್ಯೋನ್ಯ ವೀಕ್ಷಿತಃ ।
ಕ್ವಾಪಿ ಸ್ಥಿತೌ ಮಿಥೊ ದೃಷ್ಟೌ ರಾಜಯೋಗಕಾರಃ ಸ್ಮೃತಃ ॥೪೧॥

ವರ್ಗೋತ್ತಮ ನವಾಂಶಸ್ಥೆ ಶಶಾಂಕೆ ಬಲಶಾಲಿನಃ ।
ಚತುಃ ಪ್ರಭೃತಿಭಿಃ ಖೇಟೈರ್ವೀಕ್ಷಿತೆ ಸ್ಯಾನ್ನೃಪೊ ನರಃ ॥೪೨॥

ವರ್ಗೋಮಾಂಶಗೆ ಲಗ್ನೆ ತ್ರ್ಯಧಿಕೈರಿಂದು ವರ್ಜಿತ್ಯೈಃ ।
ಖಗ್ಯೈಃ ಸಂವೀಕ್ಷಿತೆ ನೂನಂ ಜಾಯತೆ ನೃಪತಿರ್ನರಃ ॥೪೩॥

ತೃತೀಯ, ಏಕಾದಶಸ್ಥ ಚಂದ್ರ, ಶುಕ್ರ ಪರಸ್ಪರ ದೃಷ್ಟಿ ಅಥವಾ ಯಾವುದೇ ಸ್ಥಾನ ಪರಸ್ಪರ ದೃಷ್ಟಿಯಿಂದ ಶುಕ್ರ, ಚಂದ್ರರಿದ್ದರೆ ರಾಜಯೋಗಕಾರಕ (ತೃತೀಯ, ಏಕಾದಶ ಪರಸ್ಪರ ರಾಶಿದೃಷ್ಟಿ) ಚಂದ್ರನು ವರ್ಗೋತ್ತಮ ನವಾಂಶಸ್ಥನಾಗಿ ಚತುಪಂಚಾದಿ (4 ಅಥವಾ 5) ಗ್ರಹಗಳಿಂದ ನೋಡಲ್ಪಡುತ್ತಿದ್ದರೆ ರಾಜಯೋಗ ಕಾರಕವೆ. ಲಗ್ನ ವರ್ಗೋತ್ತಮವಾಗಿ ಹಾಗೂ ಚಂದ್ರಾರಿಕ್ತ 3 ಗ್ರಹಗಳು ನೋಡುತ್ತಿದ್ದರೆ ಜಾತಕ ರಾಜಯೋಗ ಕಾರಕ ಫಲ ಅನುಭವಿಸುತ್ತಾನೆ.

ತ್ರಿಭ್ಯೊಪ್ಯೂನೈಸ್ತು ತುಂಗಸ್ಥೈರ್ಗ್ರ ಹೈರ್ನೃಪತಿ ವಂಶಜಃ ।
ನೃಪಸ್ತ ದನ್ಯ ವಂಶಸ್ತ ನೃಪತುಲ್ಯೋ ಧನಾದಿಭಿಃ ॥೪೪॥

ಖಗ್ಯೈಃ ಸ್ವತುಂಗಕೋಣ ಸ್ಥೈಶ್ಚತುಃ ಪಂಚಮಿತ್ಯೈ ನೃಪಃ ।
ದುಷ್ಕುಲೀನೋಪಿ ಜಾತಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥೪೫॥

ಗ್ರಹೈಃ ಸ್ವತುಂಗಗೈಃ ಷಡ್‌ಭಿಃ ಸಮ್ರಾಟ್ ಭವತಿ ಮನವಃ ।
ಇತ್ಥಂ ಮೈತ್ರೇಯ ವಿವಿಧಾ ರಾಜಯೋಗಾಃ ಸತಾಂ ಮತಾಃ ॥೪೬॥

ಏಕಾದಶ್ಚಂದ್ರ ಸುತೋ ಜೀವಃ ಕವಿರ್ವಾ ತುಂಗ ಸಂಸ್ಥಿತಃ ।
ಕೇಂದ್ರ ಚ ಸದ್‌ಗ್ರಹೋಪೇತ ರಾಜಾ ರಾಜಸಮೋಥವಾ ॥೪೭॥

ನಿಖಿಲೈಃ ಕೇಂದ್ರಗೈಃ ಸೌಮ್ಯೈರಸೌಮ್ಯೈಸ್ತ್ರೀರಸಾಯಗೈಃ ।

ಜನ್ಮ ಸಮಯದಲ್ಲಿ 3 ಅಥವಾ ಅಲ್ಲಿ ಕಡಿಮೆ ಗ್ರಹ ಉಚ್ಚಸ್ಥರಾಗಿದ್ದರೆ (2 ಉಚ್ಚ, 1 ಸ್ವರಾಶಿಗತ) ರಾಜ ವಂಶಜ ಜಾತಕ ರಾಜನಾಗುತ್ತಾನೆ ಹಾಗೂ ಸಾಧಾರಣ ವಂಶಜ ರಾಜ ಸದೃಶ್ಯ ಧನಾದಿ ಸುಖೋಪಭೋಗ ಪಡೆಯುತ್ತಾನೆ. 4 ಅಥವಾ 5 ಗ್ರಹಗಳು ಉಚ್ಚಸ್ಥರಾಗಿದ್ದರೆ ಅಥವಾ ನವಮ, ಪಂಚಮದಲ್ಲಿ ಸ್ಥಿತರಾಗಿದ್ದರೆ ದುಷ್ಕುಲನ (ರಾಜ ಕುಲದವನಲ್ಲದ ಕೀಳು ಕುಲದ) ಜಾತಕನೂ ನಿಸ್ಸಂದೇಹ ರಾಜನಾಗುತ್ತಾನೆ. 6 ಗ್ರಹಗಳು ಉಚ್ಚಸ್ಥರಾಗಿದ್ದರೆ ಮನುಷ್ಯ ಸಾಮ್ರಾಟನಾಗುತ್ತಾನೆ. ಒಂದು ಬುಧ, ಗುರು, ಶುಕ್ರರಲ್ಲಿ ಉಚ್ಚಸ್ಥರಾಗಿ ಶುಭಗ್ರಹ ಕೇಂದ್ರಸ್ಥರಾದರೆ ಜಾತಕ ರಾಜ ಸದೃಶ್ಯನಾಗುತ್ತಾನೆ. ಎಲ್ಲ ಶುಭಗ್ರಹಗಳು ಕೇಂದ್ರಸ್ಥರಾದರು ಪಾಪಗ್ರಹ 3, 6, 11ರಲ್ಲಿದ್ದರೆ ನಿಸ್ಸಂದೇಹವಾಗಿ ಕೀಳು ಕುಲದವನು ರಾಜನಾಗುತ್ತಾನೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ರಾಜಯೋಗಾಧ್ಯಾಯಃ ಸಮಾಪ್ತಃ

४೧ನೇ ಅಧ್ಯಾಯ

# ಅಥ ರಾಜಾಶ್ರಯ ಯೋಗಾಧ್ಯಾಯಃ

**ಪರಾಶರ ಉವಾಚಃ**

ರಾಜ್ಯೇಶೆ ತು ಜನುರ್ಲಗ್ನಾದಮಾತ್ಯೆ ಶಯುತೇಕ್ಷಿತೆ ।
ಆತ್ಮಕಾರ ರೇಣಾಪಿ ಪ್ರಧಾನತ್ವಂ ನೃಪಾಲಯೇ ॥೧॥

ಲಗ್ನಾದೀಶೆಕ್ಷಿತೆ ಲಾಭೆ ಪಾಪದ್ಯಗ್ಯುತಿ ವರ್ಜಿತೆ ।
ರಾಜಾರಾಯೋ ಪ್ರಧಾನತ್ವಂ ಜಾಯತೆ ಸ್ವಕುಲೇಪಿ ಚ ॥೨॥

ಅಮಾತ್ಯಕಾರಕೇಣಾಪಿ ಕಾರಕೇಂದ್ರೆ ಸಮನ್ವಿತೆ ।
ತೀವ್ರ ಬುದ್ಧಿಯುತೋ ಬಾಲೋ ನೃಪಾಮಾತ್ಯಾಃ ಪ್ರಜಾಯತೆ ॥೩॥

ಬಲಾಢ್ಯ ಸದ್‌ಗ್ರಹೋಫೇತೇಮಾತ್ಯಬ್ದೆ ಕಾರಕೆ ಸತಿ ।
ಸ್ವರ್ಕ್ಷೆ ಸ್ವತುಂಗಗೆ ವಾ ಸ್ಯಾನ್ನೃಪಾಮಾತ್ಯೆ ನ ಸಂಶಯಃ ॥೪॥

ತನುಸೂನುತಪಃ ಸಂಸ್ಥೆ ಮುನೇಮಾತ್ಯಾಖ್ಯಾಕಾರಕೆ ।
ವಿಶ್ರುತೋ ಜಾಯತೆ ಜಾತೋ ಧ್ರುವಂ ಮಂತ್ರಿ ಮಹಿಪತೇಃ ॥೫॥

ಅಮಾತ್ಯ ಕಾರಕಾತ್ಸ್ವಾತ್ಮಕಾರಕಾತ್ ಕೇಂದ್ರಕೋಣಗಃ ।
ಸುಖಿ ಜಾತೋನಿಶಂ ರಾಜ್ಞಃ ಕೃಪಾಪಾತ್ರಂ ತದಾಶ್ರಯಿ ॥೬॥

ಆತ್ಮಕಾರಕತೋ ಲಗ್ನಾತ್ ಪದಾದ್ವಾ ವಿಕ್ರಮೇ ರಿಪೌ ।
ಸ್ಥಿತೆಷ್ವಬಲಪಾಪೇಷು ಜಾತಃ ಸೇನಾಪತಿರ್ಭವೇತ್ ॥೭॥

ಸ್ವರ್ಕ್ಷೆ ತುಂಗಗತೆ ಕೇಂದ್ರೆ ಕೋಣೆ ವಾ ಕಾರಕೆ ಸ್ಥಿತೆ ।
ಧರ್ಮೇಶ ಯುತ ದೃಷ್ಟೆ ಚ ರಾಜಮಂತ್ರಿ ನರೋ ಭವೇತ್ ॥೮॥

ಕಾರಕ ಚಂದ್ರರಾಶೀಶೆ ಲಗ್ನಗೆ ಸೌಮ್ಯ ಸಂಯುತೆ ।
ಮಂತ್ರಿತ್ವೆ ಮುಖ್ಯ ಯೋಗೋಯಂ ವಾರ್ಧಕೆ ನಾತ್ರ ಸಂಶಯ ॥೯॥

ಜನ್ಮಲಗ್ನದಿಂದ ರಾಜ್ಯೇಶ (10) ಆತ್ಮಕಾರಕೇಶ ಅಥವಾ ಅಮಾತ್ಯೇಶಯುತ ಅಥವಾ ದೃಷ್ಟವಾದರೆ ಆ ಜಾತಕ ರಾಜಭವನದಲ್ಲಿ ಪ್ರಧಾನವಾಗುತ್ತಾನೆ. ಲಾಭಸ್ಥಾನ ಲಗ್ನಾಧೀಶನಿಂದ ದೃಷ್ಟ ಹಾಗೂ ಪಾಪಗ್ರಹ : ಸಂಯೋಗ

ದೃಷ್ಟಿಯಿರದಿದ್ದರೆ ರಾಜಭವನ ಹಾಗೂ ತನ್ನ ವಂಶದಲ್ಲಿ ಜಾತಕ ಪ್ರಧಾನವಾಗುತ್ತಾನೆ. ಆತ್ಮಕಾರಕಗ್ರಹ ಅಮಾತ್ಯಕಾರಕ ಸಂಯುಕ್ತವಾಗಿದ್ದರೆ ಜಾತಕ ತೀವ್ರ ಬುದ್ಧಿಯುಕ್ತ ರಾಜ ಮಂತ್ರಿಯಾಗುತ್ತಾನೆ. ಅಮಾತ್ಯಕಾರಕ ಗ್ರಹ ಶುಭಗ್ರಹ ಯುತ ಬಲಶಾಲಿ ತನ್ನ ಕ್ಷೇತ್ರದಲ್ಲಿ ಉಚ್ಚದಲ್ಲಿ ಇದ್ದರೆ ನಿಸ್ಸಂದೇಹ ಮಂತ್ರಿಯಾಗುವನು. ಅಮಾತ್ಯಕಾರಕ ಗ್ರಹ ಲಗ್ನ ಪಂಚಮ ನವಮದಲ್ಲಿದ್ದು ಶುಭ ದೃಷ್ಟಿತನಾದರೆ ಜಾತಕ ವಿಖ್ಯಾತ ಹಾಗೂ ರಾಜಮಂತ್ರಿಯಾಗುವನು. ಆತ್ಮಕಾರಕ ದಿಂದ ಕೇಂದ್ರ ನವಮ, ಪಂಚಮ ಅಮಾತ್ಯಕಾರಕನಿದ್ದರೆ ಜಾತಕ ಸುಖಿ ಸತತ ರಾಜಾಶ್ರಿತ ರಾಜನ ಕೃಪಾಭಕ್ತದಲ್ಲಿರುವನು. ಅಮಾತ್ಯಕಾರಕನು ಲಗ್ನ ಹಾಗೂ ಪದದಿಂದ ತೃತೀಯ ಷಷ್ಠದಲ್ಲಿ ಪಾಪಗ್ರಹಗಳಿದ್ದರೆ ಜಾತಕ ಸೇನಾಪತಿ ಯಾಗುವನು. ಅಮಾತ್ಯಕಾರಕ ಸ್ವಭವನ ಅಥವಾ ಸ್ವೋಚ್ಚನಾಗಿ ಕೇಂದ್ರ ಅಥವಾ ನವಮ, ಪಂಚಮದಲ್ಲಿದ್ದರೆ ಹಾಗೂ ನವಾಂಶೇಶನ ದೃಷ್ಟಿ ಅವನ ಮೇಲಿದ್ದರೆ ಜಾತಕ ನಿಸ್ಸಂದೇಹ ರಾಜಮಂತ್ರಿಯಾಗುವನು. ಅಮಾತ್ಯಕಾರಕ ಜನ್ಮರಾಶೀಶನಾಗಿ ಪಾಪಗ್ರಹದಿಂದ ಯುಕ್ತ ಲಗ್ನಗತನಾದರೆ ವಾರ್ಧಕ್ಯದಲ್ಲಿ ರಾಜ ಮಂತ್ರಿ ಯಾಗುವನು.

> ಕಾರಕೆ ಶುಭ ಸಂಯುಕ್ತೆ ಪಂಚಮೇ ಸಪ್ತಮೇಪಿ ವಾ ।
> ನವಮೇ ದಶಮೇ ಸ್ಯಾದ್ ರಾಜಸಂಬಂಧತೋ ಧನಮ್ ॥೧೦॥
>
> ಕಾರಕೆ ನವಮೇ ಯಾತೆ ಲಗ್ನೆ ಭಾಗ್ಯಪದೇಥವಾ ।
> ಜಾತಃ ಸ್ಯಾದ್ರಾಜ ಸಂಬಂಧೋ ಯೋಗೇನ್ನೈನ್ನಾತ್ರ ಸಂಶಯಃ ॥೧೧॥
>
> ಲಗ್ನೇಶೆ ಲಾಭ ಗೇಹಸ್ಥೆ ಪಾಪದೃಷ್ಟಿ ವಿವರ್ಜಿತೆ ।
> ಕಾರಕೆ ಶುಭ ಸಂಯುಕ್ತೆ ಲಾಭಸ್ಥಸ್ಯ ನೃಪಾಲಯಾತ್ ॥೧೨॥
>
> ಕರ್ಮಗೆ ಲಗ್ನಪೆ ಲಗ್ನಗತೆ ಕರ್ಮಪತಾವಪಿ ।
> ರಾಜ ಸಂಬಂಧ ಕೃದ್ಯೋಗೋ ವಿಶೇಷಾತ್ ಸುಮದೀರಿತಃ ॥೧೩॥

ಶುಭಗ್ರಹಯುಕ್ತ ಆತ್ಮಕಾರಕ ಗ್ರಹ ಪಂಚಮ, ಸಪ್ತಮ, ನವಮ ಅಥವಾ ದಶಮದಲ್ಲಿದ್ದರೆ ರಾಜಾಶ್ರಯ ಪಡೆಯುತ್ತಾನೆ. ಅದರಿಂದ ಧನಾಗಮ ಹೇಳುವುದು. ಆತ್ಮಕಾರಕ ನವಮ ಭಾವದ ಹಾಗೂ ನವಮ ಭಾವದ ಲಗ್ನದಲ್ಲಿಯೂ ಇದ್ದರೆ ರಾಜ ಸಂಬಂಧವಾಗುತ್ತದೆ. ಲಗ್ನೇಶ ಲಾಭಸ್ಥನಾಗಿ ಪಾಪಗ್ರಹ ದೃಷ್ಟಿಯಿಂದ ರಹಿತನಾದರೆ ಹಾಗೂ ಆತ್ಮಕಾರಕ ಗ್ರಹ ಶುಭಗ್ರಹ

ಯುಕ್ತವಾದರೆ ರಾಜಭವನನಿಂದ ಧನಲಾಭ ಹೇಳುವುದು. ಲಗ್ನೇಶ ದಶಮಸ್ಥ ಹಾಗೂ ದಶಮೇಶ ಲಗ್ನಸ್ಥನಾದರೆ ವಿಶೇಷ ರೂಪದಿಂದ ರಾಜ ಸಂಬಂಧ ಬರುವುದು.

**ಆತ್ಮಕಾರಕತೋ ಮಾತೃ ಭಾವಗಾವಿಂದು ಭಾರ್ಗವೌ ।**
**ನೃಪಲಕ್ಷ್ಮಿಯುತಂ ಜಾತಂ ಕುರುತೋ ನೃಪವನ್ಮನೆ ॥14॥**

**ಸುತೇಶ ಸಹಿತೆ ಲಗ್ನ ಪತೌ ಕಿಂವಾತ್ಮಕಾರಕೆ ।**
**ಕೇಂದ್ರಗೆ ಕೋಣಗೆ ವಾಪಿ ಜಾತಃ ಸ್ಯಾನ್ನೃಪತೇಃ ಸುಹೃತ್ ॥15॥**

ಆತ್ಮಕಾರಕನಿಂದ 4ರಲ್ಲಿ ಚಂದ್ರ, ಶುಕ್ರರಿದ್ದರೆ ಜಾತಕ ರಾಜ ಚಿಹ್ನೆಯುಕ್ತ ರಾಜ ಸದೃಶ್ಯ ಸೌಖ್ಯಪೂರ್ಣನಾಗುತ್ತಾನೆ. ಲಗ್ನೇಶ ಅಥವಾ ಆತ್ಮಕಾರಕ ಪಂಚಮೇಶನ ಸಹಿತ ಕೇಂದ್ರ ಅಥವಾ ನವಮ, ಪಂಚಮದಲ್ಲಿದ್ದರೆ ಜಾತಕ ರಾಜನ ಮಿತ್ರನಾಗುತ್ತಾನೆ.

**ಇತಿ ಪರಾಶರ ಬೃಹತ್ ಹೋರಾಶಾಸ್ತ್ರೇ ರಾಜಾಧ್ಯಾಯಃ ಸಮಾಪ್ತಿಃ**

## ೪೨ನೇ ಅಧ್ಯಾಯ

# ಅಥ ಧನ–ಯೋಗಾಧ್ಯಾಯಃ

ಪರಾಶರ ಉವಾಚ:

ಅಥಾತಃ ಸಂಪ್ರವಕ್ಷ್ಯಾಮಿ ಧನಯೋಗಂ ವಿಶೇಷತಃ ।
ಯತ್ರನಃ ಸಂಶಯಂ ಜಾತೋ ಧನಾಢ್ಯಾಃ ಸ್ಯಾದ್ ದ್ವಿಜೋತ್ತಮ ॥೧॥

ಪಂಚಮೇ ಭಾರ್ಗವ ಕ್ಷೇತ್ರೆ ತಸ್ಮಿನ್ ಶುಕ್ರೇಣ ಸಂಯುತೆ ।
ಲಾಭೆ ಭೂಮಿ ಸುತೋಪೇತೆ ಬಹುದ್ರವ್ಯಸ್ಯ ನಾಯಕಃ ॥೨॥

ಪಂಚಮೇ ಶಶಿಜ ಕ್ಷೇತ್ರೆ ತತ್ರೈವ ಶಶಿಜೆ ಸ್ಥಿತೆ ।
ಇಂದ್ವಾರೆಜ್ಯಯುತೆ ಲಾಭೆ ಬಹುದ್ರವ್ಯಸ್ಯ ನಾಯಕಃ ॥೩॥

ಪಂಚಮೇತು ರವಿಕ್ಷೇತ್ರೆ ತಸ್ಮಿನ್ನೆವ ರವೌಸ್ಥಿತೆ ।
ಲಾಭೆ ಮಂದೇಂದು ದೇವೆಜ್ಯೆ ಬಹುದ್ರವ್ಯಸ್ಯ ನಾಯಕಃ ॥೪॥

ಪಂಚಮೇತು ಶನಿಕ್ಷೇತ್ರೆ ತಸ್ಮಿನ್ನರ್ಕಜ ಸಂಯುತೆ ।
ಲಾಭೆಕೇಂದುಯುತೆ ಚಾಪಿ ಬಹುದ್ರವ್ಯಸ್ಯ ನಾಯಕಃ ॥೫॥

ಪಂಚಮೇತು ಗುರುಕ್ಷೇತ್ರೆ ತಸ್ಮಿನ್ ಗುರುಯುತೇಽಪಿ ಚ ।
ಲಾಭೆ ಬುಧಯುತೆ ಜಾತೋ ಬಹುದ್ರವ್ಯಸ್ಯ ನಾಯಕಃ ॥೬॥

ಪಂಚಮೆ ಭೂಸುತಕ್ಷೇತ್ರೆ ತಸ್ಮಿನ್ ಭೌಮ ಸಮನ್ವಿತೆ ।
ಲಾಭಗೆ ಭಾರ್ಗವೆ ಜಾತೋ ಬಹುದ್ರವ್ಯಸ್ಯ ನಾಯಕಃ ॥೭॥

ಪಂಚಮೇ ಶಶಿನಃ ಕ್ಷೇತ್ರೆ ತತ್ರ ಚಂದ್ರಮಸಿ ಸ್ಥಿತೆ ।
ಮಂದೆ ತ್ವಾಯಗತೆ ಜಾತೋ ಬಹುದ್ರವ್ಯಸ್ಯ ನಾಯಕಃ ॥೮॥

ಭಾನು ಕ್ಷೇತ್ರೆ ಗತೆ ಲಗ್ನೆ ತಸ್ಮಿನ್ ಭಾಸೌ ಸ್ಥಿತೋಸತಿ ।
ಭೌಮೇನ ಗುರುಣಾ ಯುಕ್ತೇ ದೃಷ್ಟೆ ವಾ ಸ್ಯಾದ್ಯುತೋ ಧನ್ಯೈಃ ॥೯॥

ಚಂದ್ರಕ್ಷೇತ್ರ ಗತೆ ಲಗ್ನೆ ತಸ್ಮಿನ್ ಚಂದ್ರ ಸಮನ್ವಿತೆ ।
ಜೀವೇನ ಚಂದ್ರಣಾ ಯುಕ್ತೆದೃಷ್ಟೆ ಜಾತೋ ಧನಿಭವೇತ್ ॥೧೦॥

ಪರಾಶರರು ಹೇಳಿದರು–

ಈಗ ನಾನು ಅನೇಕ ಧನ ಯೋಗಗಳ ಕುರಿತು ಹೇಳುತ್ತೇನೆ. ಈ ಯೋಗದಲ್ಲಿ ಉತ್ಪನ್ ಜಾತಕ ನಿಸ್ಸಂದೇಹ ಧನವಂತನಾಗುತ್ತಾನೆ.

(1) ಪಂಚಮ ಭಾವ ಶುಕ್ರಕ್ಷತ್ರವಾಗಿ (ವೃಷಭ, ತುಲ) ಅಲ್ಲಿ ಶುಕ್ರ

ವಿದ್ಯಾಮಾನನಾಗಿ ಲಾಭಸ್ಥಾನ ಭೌಮಯುಕ್ತವಾದರೆ ಜಾತಕ ಬಹುಧನದ ನಾಯಕನಾಗುತ್ತಾನೆ.

(2) ಬುಧಕ್ಷೇತ್ರ ಪಂಚಮದಲ್ಲಿ ಬಂದು – ಬುಧ ಪಂಚಮಸ್ಥಿತನಾಗಿ ಏಕಾದಶದಲ್ಲಿ ಚಂದ್ರಭೌಮ ಗುರುಗಳಿದ್ದರೆ ಜಾತಕ ಬಹುಧನವಂತನಾಗುತ್ತಾನೆ.

(3) ಪಂಚಮ ರವಿಕ್ಷೇತ್ರವಾಗಿ (ಸಿಂಹ) ರವಿ ಪಂಚಮದಲ್ಲಿ ಲಾಭದಲ್ಲಿ ಶನಿ, ಚಂದ್ರ, ಗುರುಯುಕ್ತರಾದರೆ ಧನಾಢ್ಯಯೋಗವಾಗುವುದು.

(4) ಶನಿಕ್ಷೇತ್ರ ಪಂಚಮನಾಗಿ (ಮಕರ, ಕುಂಭ) ಪಂಚಮದಲ್ಲಿ ಶನಿ, ಲಾಭದಲ್ಲಿ ಸೂರ್ಯ, ಚಂದ್ರಯುಕ್ತನಾದರೆ ಧನಾಢ್ಯಯೋಗ.

(5) ಗುರುಕ್ಷೇತ್ರ ಪಂಚಮದಲ್ಲಿ – ಅಲ್ಲಿ ಗುರು ಲಾಭದಲ್ಲಿ ಬುಧನಿದ್ದರೆ ಮಹಾಧನವಂತನಾಗುವನು.

(6) ಭೌಮಕ್ಷೇತ್ರ – ಪಂಚಮದಲ್ಲಿ ಮಂಗಳ; ಲಾಭದಲ್ಲಿ ಶುಕ್ರ ಪೂರ್ಣ ಧನವಂತ.

(7) ಪಂಚಮದಲ್ಲಿ ಚಂದ್ರಕ್ಷೇತ ಕರ್ಕನಾಗಿ ಅಲ್ಲಿ ಚಂದ್ರ, ಹನ್ನೊಂದು ಶನಿಯುಕ್ತವಾದರೆ – ಪ್ರಚುರ ಧನವಂತ.

(8) ಸಿಂಹ ಲಗ್ನವಾಗಿ ಲಗ್ನದಲ್ಲಿ ರವಿ, ಭೌಮ ಗುರುಗಳ ಯೋಗ (ಯುತಿ, ತ್ರಿರೇಕಾದಶ ಹಾಗೂ ನವಪಂಚಕಯೋಗವಾದರೆ ಜಾತಕ ಧನಿಷ್ಟನಾಗುವನು.

(9) ಅದರಂತೆ ಕರ್ಕ ಲಗ್ನವಾಗಿ ಅಲ್ಲಿ ಚಂದ್ರನಿದ್ದು ಬುಧ, ಗುರುಯೋಗವಾದರೆ ಅಥವಾ ದೃಷ್ಟಿತವಾದರೆ ಕೂಡ ಧನಿಯಾಗುವನು.

ಅದನ್ನೇ ಕುಂಡಲಿಯಲ್ಲಿ ಈ ರೀತಿ ತೋರಿಸಬಹುದು.

1. ಶುಕ್ರ ಕ್ಷೇತ್ರ












## 2. ಬುಧ ಕ್ಷೇತ್ರ













## 3.ಶನಿ ಕ್ಷೇತ್ರ












4. ಗುರು ಕ್ಷೇತ್ರ













5. ಕುಜ ಕ್ಷೇತ್ರ












6. ಚಂದ್ರ ಕ್ಷೇತ್ರ







7. ರವಿ ಕ್ಷೇತ್ರ







ಮುಂದಿನ ಕರ್ಕ ಲಗ್ನ ಸಿಂಹ ಲಗ್ನಕ್ಕೆ ಯೋಗಗಳನ್ನು ಹೇಳಿರುವುದರಿಂದ ಪ್ರತಿಗ್ರಹದ ಯುತಿ, ತ್ರಿರೇಕಾದಶ ಹಾಗೂ ನವಪಂಚಾಕಾದಿ ಯೋಗ ತೋರಿಸುವುದು ಕೈಬಿಟ್ಟು ತಮಗೆ ಬಿಡಲಾಗಿದೆ – ಇವು ಪ್ರತಿಗ್ರಹ ಧನಯೋಗಗಳು ಅಥವಾ 12 ಲಗ್ನದ ಧನಯೋಗಗಳು.

ಭೌಮಕ್ಷೇತ್ರಗತೆ ಲಗ್ನೆ ತಸ್ಮಿನ್ ಭೌಮಯುತೆ ಸತಿ ।
ಸೌಮ್ಯಶುಕ್ರರ್ಕಜೈ ದೃಷ್ಟೆ ಯುಕ್ತೆ ಶ್ರೀಮನ್ನರೋ ಭವೇತ್ ॥೧೧॥

ಬುಧಕ್ಷೇತ್ರಸ್ಥಿತೆ ತ್ವಂಗೆ ತಸ್ಮಿನ್ ಸೌಮ್ಯಯುತೆ ಯದಿ ।
ಸುರೇಜ್ಯಾರ್ಕಿಯುತೆ ದೃಷ್ಟೆ ಧನಿ ಜಾಯತೆ ಜಾತಕಃ ॥೧೨॥

ಗುರುಕ್ಷೇತ್ರಗತೆ ಲಗ್ನೆ ತಸ್ಮಿನ್ ಗುರುಯುತೇಪಿ ಚ ।
ಬುಧ ಭೌಮಯುತೆ ದೃಷ್ಟೆ ಜಾತಕೋ ಧನಿಕೋ ಭವೇತ್ ॥೧೩॥

ಭೃಗು ಕ್ಷೇತ್ರಗತೆ ಲಗ್ನೆ ತಸ್ಮಿನ್ ಭೃಗಯುತೇಪಿ ಚ ।
ಬುಧ ಮಂದಯುತೆ ದೃಷ್ಟೆ ಜಾತಕೋ ಜಾಯತೆ ಧನಿ ॥೧೪॥

ಲಗ್ನೇತು ರವಿಜಕ್ಷೇತ್ರೆ ತತ್ರೈವ ರವಿಜೆ ಸ್ಥಿತೆ ।
ಕುಜೋಭ್ಯಾಯಾಂ ಯುತೆ ದೃಷ್ಟೆ ಜಾತಕೋ ಧನಿಕೇಭವೇತ್ ॥೧೫॥

(1) ಮೇಷ, ವೃಶ್ಚಿಕಗಳಲ್ಲಿ ಯಾವುದೋ ಲಗ್ನವಾಗಿ ಅಲ್ಲಿ ಕುಜನಿದ್ದು – ಅವನ ಮೇಲೆ ಬುಧ, ಶುಕ್ರ ದೃಷ್ಟಿ ಹಾಗೂ ಶನಿಯ ದೃಷ್ಟಿಯಿದ್ದರೆ ಧನಿಕನಾಗುವನು. ಇಲ್ಲಿ ಮೇಷ ಲಗ್ನಕ್ಕೆ ಶನಿಯ ಸಪ್ತಮ ಸ್ಥಾನ ದೃಷ್ಟಿ ವಿಶೇಷ ಶುಭ (ಸಪ್ತಮ, ಶನಿ ಉಚ್ಚ ತುಲಾ) ವೃಶ್ಚಿಕಕ್ಕೆ ಯಾವುದೇ ಸರಿ.

(2) ಮಿಥುನ, ಕನ್ಯಾ ಲಗ್ನಗಳಲ್ಲಿ ಒಂದು ಲಗ್ನವಾಗಿ ಅಲ್ಲಿ ಬುಧನಿದ್ದು – ಈ ಲಗ್ನದಲ್ಲಿ ಗುರು, ಶನಿಯೋಗ ಅಥವಾ ದೃಷ್ಟಿಯಿದ್ದರೆ ಜಾತಕ ಧನಿಕ – ಇಲ್ಲಿ ಯುತಿ, ದ್ವಿತೀಯ ಕರ್ಕದಲ್ಲಾಗಲಿ, ಇಲ್ಲವೇ ತುಲಾದ ಪಂಚದಲ್ಲಾಗಲಿ ಶುಭಕ – ದೃಷ್ಟಿಯನ್ನು ಅವಲೋಕಿಸುವುದಾದರೆ – ಆ ಗ್ರಹಗಳ ಕಾರಕದಿಂದ ಮಿತ್ರನ–ಉಚ್ಚ ಇತ್ಯಾದಿ ಇದ್ದರೆ ಶುಭಕಾರಕ. ಎಲ್ಲ ಗ್ರಹಗಳಿಗೆ ಈ ರೀತಿಯೇ ನೋಡುವುದು.

(3) ಧನು, ಮೀನ ಲಗ್ನಗಳಲ್ಲಿ ಒಂದು ಲಗ್ನವಾಗಿ ಅಲ್ಲಿ ಗುರುವಿದ್ದರೆ ಹಾಗೂ ಮಂಗಳ, ಬುಧ ಯೋಗವಾಗಿ (ಯುತ, ತ್ರಿರೇಕಾದಶ, ನವ ಪಂಚಕ) ಉಚ್ಚ ದೃಷ್ಟಿಯಿದ್ದರೂ ಸರಿ ಜಾತಕ ಧನಿಷ್ಟನಾಗುತ್ತಾನೆ.

(4) ವೃಷಭ, ತುಲಾ ರಾಶಿಗಳಲ್ಲಿ ಒಂದು ಲಗ್ನವಾಗಿ ಶುಕ್ರ ಲಗ್ನದಲ್ಲಿದ್ದು – ಬುಧ, ಶನಿ ಯೋಗ ಅಥವಾ ದೃಷ್ಟಿಯಿದ್ದರೆ ಜಾತಕ ಧನವಂತ.

(5) ಮಕರ, ಕುಂಭಗಳಲ್ಲಿ ಒಂಧು ಲಗ್ನವಾಗಿ ಶನಿ ಅಲ್ಲಿದ್ದು – ಮಂಗಳ, ಶನಿಯರ ಸಂಯೋಗ ಲಗ್ನಕ್ಕಾದರೆ ದೃಷ್ಟಿಯಿದ್ದರೆ ಧನಿಕ.

ಈ ಎಲ್ಲ ಕಡೆಗೆ ಉಚ್ಚ ದೃಷ್ಟಿಯುತ ಎಂದಾಗ ಯುತ, ತ್ರಿರೇಕಾದಶ ಹಾಗೂ ನವಪಂಚಕದಲ್ಲಿ ಯಾವುದೇ ಆದರೂ ಶುಭ ಸ್ಥಾನದಿಂದಾದರೆ ವಿಶೇಷ ಶುಭ.

ವಿಶೇಷಾದ್ ಧನದೌ ಜ್ಞೇಯೌ ಸೂನುಭಾಗ್ಯಾಧಿಪೌ ತಥಾ ।
ನಭೋಗಾ ಅಪಿ ತದ್ಯುಕ್ತಾಃ ಸ್ವದಶಾಸು ಧನಪ್ರದಾಃ ॥೧೬॥

ಶುಭಾಶುಭಫಲಂ ತತ್ರ ಸದಸದ್ ಗ್ರಹ ಯೋಗಜಮ್ ।
ಬಲಾಬಲಂ ವಿಚಾರ್ಯೈವ ವಕ್ತವ್ಯಂ ದೈವಕೋ ವಿದ್ಯೈಃ ॥೧೭॥

ಪಂಚಮೇಶ, ನವಮೇಶ ವಿಶೇಷತಃ ಧನಪ್ರದರಾಗಿದ್ದಾರೆ. ಈ ಇಬ್ಬರ ಜೊತೆಗಿದ್ದ ಗ್ರಹವೂ ತಮ್ಮ ತಮ್ಮ ದಶಾ ಕಾಲದಲ್ಲಿ ಧನಪ್ರದವಾಗುತ್ತವೆ. ಶುಭ ಅಶುಭ ಗ್ರಹಗಳ ಸಂಯೋಗ ಅಥವಾ ಗ್ರಹಗಳ ಬಲಾಬಲ ವಿಚಾರ ಮಾಡಿ ಫಲಾದೇಶ ಮಾಡುವುದು. ಇಲ್ಲಿ 'ದೈವಕೋವಿದೈಃ' ಪೂರ್ಣಲಕ್ಷ್ಯದಲ್ಲಿಟ್ಟು ಸರ್ವಶಾಸ್ತ್ರಸಂಪನ್ನರು ಎಂಬುದನ್ನು ಜ್ಯೋತಿಷಿಗಳು ಗ್ರಹಿಸುವುದು.

ಕೇಂದ್ರಪಃ ಪಾರಿಜಾತಸ್ಥಸ್ತದಾ ದಾತಾ ಭವೇನ್ನರಃ ।
ಉತ್ತಮೇ ಹ್ಯತ್ತಮೋ ದಾತಾ ಗೋಪುರೆ ಪುರುಷತ್ವಯುಕ್ ॥೧೮॥

ಸಿಂಹಾಸನೆ ಭವೇನ್ಮಾನ್ಯಃ ಶೂರಃ ಪಾರಾವತಾಂಶಕೆ ।
ಸಮಾವರ್ತಿರ್ದೇವಲೋಕೆ ದ್ವಿತೀಯೋ ತು ಮುನಿರ್ಮತಃ ।
ಐರವತೇ ತು ಸಂತುಷ್ಟೋ ಜಾಯತೆ ಜಾತಕಃ ಸದಾ ॥೧೯॥

ಕೇಂದ್ರೇಶ ಪಾರಿಜಾತಾಂಶ ಗತನಾದರೆ ದಾನಿ, ಉತ್ತಮಾಂಶದಲ್ಲಿದ್ದರೆ ವಿಶೇಷ ದಾನಿ, ಗೋಪುರಾಂಶ ಗತನಾದರೆ ಪೌರುಷಯುಕ್ತ, ಸಿಂಹಾಸನಸ್ಥನಾದರೆ ಲೋಕ ಮಾನ್ಯ ಪೌರಾವತಾಂಶನಾಗಿದ್ದರೆ ಶೂರ, ದೇವಲೋಕಗತನಾದರೆ ಸಭಾಪತಿ ಬ್ರಹ್ಮಲೋಕ (ದ್ವಿತೀಯ) ಗತನಾದರೆ ಶ್ರೇಷ್ಠಮುನಿ, ಐರವತಾಂಶನಾಗಿದ್ದರೆ ಸರ್ವದಾ ಸಂತುಷ್ಟನಾಗುತ್ತಾನೆ.

### ಪಂಚಮೇಶ – ಪಾರಿಜಾತಾದಿಗಳಿಂದ ಫಲ

ಪಾರಿಜಾತೆ ಸುತಾಧೀಶೆ ವಿದ್ಯಾ ಚೈವ ಕಲೋಚಿತಾ ।
ಉತ್ತಮೇ ಚೋತ್ತಮ ಜ್ಞೇಯಾ ಗೋಪುರೆ ಭುವನಾಂಕಿತಾ ॥೨೦॥

ಸಿಂಹಾಸನೆ ತಥಾ ವಾಚ್ಯಾಸಾಚಿವ್ಯೇನ ಹಿ ಸಂಯುತಾ ।
ಪಾರಾವತೆ ತು ಮೈತ್ರೇಯ । ಬ್ರಹ್ಮವಿದ್ಯಾ ಪ್ರಕೀರ್ತಿತಾ ॥೨೧॥

ಸುತೇಶೆ ದೇವಲೋಕಸ್ಥೆ ಕರ್ಮಯೋಗಯುತೋ ಭವೇತ್ ।
ಉಪಾಸನಾ ದ್ವಿತೀಯೇ ಸ್ಯಾದ್ ಭಕ್ತಸ್ತ್ವೈರಾವತೆ ಸ್ಮೃತಾ ॥೨೨॥

ಪಂಚಮೇಶ ಪಾರಿಜಾತ ಯೋಗ ಮಾಡಿದ್ದರೆ ಕುಲೋಚಿತ ವಿದ್ಯೆ ಉತ್ತಮಾಂಶ ದಲ್ಲಿ ಉತ್ಕೃಷ್ಟ ವಿದ್ಯೆ ಗೋಪುರಾಂಶದಲ್ಲಿ ವಿಶ್ವವಿಖ್ಯಾತ ಸಿಂಹಾಸನ ಮಂತ್ರಿತ್ವ ದೇವಲೋಕಾಂಶದ ಕರ್ಮಯೋಗಿ ದ್ವಿತೀಯ ಬ್ರಹ್ಮಲೋಕವಾಗಿದ್ದರೆ ದೇವೋ ಪಾಸನೆ ಐರಾವತದಲ್ಲಿ ಈಶ್ವರ ಭಕ್ತ.

## ಪಾರಿಜಾತದ ಧರ್ಮೇಶನ ಫಲ (9ರ ಅಧಿಪ)

ಧರ್ಮೇಶೆ ಪಾರಿಜಾತಸ್ಥೆ ತೀರ್ಥಕೃತ್ತ್ವತ್ರ ಜನ್ಮನಿ ।
ಪ್ರಾಕ್‌ತೇನ ಜನನೆ ಬೋಧ್ಯಂ ತದೆವೋತ್ತಮವರ್ಗಕೆ ॥೨೩॥

ಗೋಪುರೆ ಮಖಕರ್ತಾ ಚ ಪರೆ ಚೈವಾತ್ರ ಜನ್ಮನಿ ।
ಸಿಂಹಾಸನೆ ಭವೇದ್ ವೀರಃ ಸತ್ಯವಾದಿ ಜಿತೇಂದ್ರಿಯಃ ॥೨೪॥

ಸರ್ವಧರ್ಮಪರಿತ್ಯಾಗಿ ಪರಾತ್ಮೈಕ ಪದಾಶ್ರೀತಃ ।
ಪಾರಾವತೆ ಪರೋ ಹಂಸೋ ಭವದೇವಾತ್ರ ಜನ್ಮನಿ ॥೨೫॥

ತ್ರಿದಂಡಿ ಲಗುಡಿ ವಾಲ್ಯಾದೇವಲೋಕೆ ನ ಸಂಶಯಃ ।
ಬ್ರಹ್ಮಲೋಕೆ ಪ್ರಯಾತೀಂದ್ರ ಪದಂ ಕೃತ್ವಾಶ್ವಮೇಧಕವ್ ॥೨೬॥

ಐರಾವತೆ ತು ಧರ್ಮಾತ್ಮಾ ಸ್ವಯಂ ಧರ್ಮೋ ಭವಿಷ್ಯತಿ ।
ರಾಮಾದಿ ಕುಂತಿ ಪುತ್ರಾದಿ – ತುಲ್ಯೋ ಜಾತೋಹಿ ಜಾಯತ ॥೨೭॥

ಧರ್ಮೇಶನು ಪಾರಿಜಾತಾಂಶದಲ್ಲಿದ್ದರೆ ಜಾತಕ ವರ್ತಮಾನ ಜನ್ಮದಲ್ಲಿ ತೀರ್ಥಕಾರಿ, ಉತ್ತಮಾಂಶದಲ್ಲಿ ಅಪೇಕ್ಷೆಯುಳ್ಳವ ಅಂದರೆ ತೀರ್ಥಯಾತ್ರೆ ಮಾಡುವವ, ಗೋಪುರಾಂಶದಲ್ಲಿ ಯಜ್ಞಕರ್ತಾ, ಸಿಂಹಾಸನ – ವೀರ, ಸತ್ಯವಾದಿ ಜಿತೇಂದ್ರಿಯ ಸರ್ವಧರ್ಮ ಪರಿತ್ಯಾಗಿ – ಏಕಮಾತ್ರ ಪರಬ್ರಹ್ಮವಾದಿ ಪಾರಾವ ತಾಂಶ ಪರಮಹಂಸಯೋಗಿ ದೇವಲೋಕ ತ್ರಿದಂಡಿ (ಸ್ವಾಮಿ) ಸಂನ್ಯಾಸಿ ಬ್ರಹ್ಮ ಲೋಕದಲ್ಲಿ ಅಶ್ವಮೇಧ ಯಜ್ಞ ಮಾಡಿ ಇಂದ್ರ ಪದ ಪ್ರಾಪ್ತ ಮಾಡಿಕೊಳ್ಳುವವ, ಐರಾವತದಲ್ಲಿ ಸ್ವಯಂಧರ್ಮಾವತಾರ ಅಂದರೆ ರಾಮ, ಯುಧಿಷ್ಠರರಂತೆ ಧರ್ಮಾತ್ಮ.

## ಯೋಗಕಾರಕ ಗ್ರಹ ಫಲ

ವಿಷ್ಣು ಸ್ಥಾನಂ ಸ್ಮೃತಂ ಕೇಂದ್ರಂ ಲಕ್ಷ್ಮಿ ಸ್ಥಾನಂ ತ್ರಿಕೋಣಕವ್ ।
ತಯೋರಧೀಶ ಸಂಬಂಧೋ ರಾಜಯೋಗಕರೋ ತೃಣಾವ್ ॥೨೮॥

ಪಾರಿಜಾತೆ ಸ್ಥಿತೌ ತೌ ಚೆನ್ನೃಪೋ ಲೋಕಾನುರಂಜ್ಞಕಃ ।
ಉತ್ತಮೇ ಚೋತ್ತಮೋ ಭೂಪೋ ಗಜವಾಜಿರಥಾದಿಮಾನ್ ॥೨೯॥

ಗೋಪುರೆ ನೃಪಶಾರ್ದೂಲಃ ಪೂಜಿತಾಂಘ್ರಿರ್ನೃಪೈರ್ಭವೇತ್ ।
ಸಿಂಹಾಸನೆ ಚಕ್ರವರ್ತಿ ಸರ್ವಕ್ಷೋಣಿ ಪ್ರಪಾಲಕಃ ॥೩೦॥

ಅಸ್ಮಿನ್ ಯೋಗೆ ಹರಿಶ್ಚಂದ್ರೋ ಮಾನವಶ್ಚೊತ್ತಮಸ್ತಥಾ ।
ಬಲಿವೈಶ್ವಾನರೋಪ್ಯೈವ ಮನ್ಯೆ ಭೂಮಂಡಲಾಧಿ ಪಾಃ ॥೩೦॥

ವರ್ತಮಾನಯುಗೆ ರಾಜಾ ಕುಂತಿ ಪುತ್ರೋ ಯುಧಿಷ್ಠಿರಃ ।
ಭವತಿ ಶಾಲಿವಾಹದಿರ್ವಿಜಯ ಶ್ರೀಯುತೋ ಮುನೆ ॥೩೨॥

ಪಾರಾವತಾಂಶಕೆ ಚೈವ ಜಾತಾ ಮನ್ವಾದಯಸ್ತಥಾ ।
ದೇವಲೋಕೆ ಸಮೇ ಜಾತಾ ಅವತಾರಾ ಹರೆರಿಹ ॥೩೩॥

ಬ್ರಹ್ಮಾಪ್ರಭೃತಯೋ ಬ್ರಹ್ಮಲೋಕೆ ಜಾತಸ್ತು ಲೋಕಪಾಃ ।
ಸ್ವಯಂಭುವೋ ಮನುಸ್ಸೈರಾವತಾಂಶೆ ತೂದಿತಃ ಪುರಾ ॥೩೪॥

ಕೇಂದ್ರ (1, 4, 7, 10) ವಿಷ್ಣುಸ್ಥಾನಗಳು ತ್ರಿಕೋನ (1, 5, 9) ಲಕ್ಷ್ಮಿಸ್ಥಾನ ಎಂದಿದ್ದಾರೆ. 1ನೇ ಸ್ಥಾನ ಲಕ್ಷ್ಮಿ, ವಿಷ್ಣು ಸಮೇತವೆಂದೇ ಪರಿಗ್ರಹಿಸುವುದು – ಕೇಂದ್ರೇಶ ತ್ರಿಕೋನೇಶ ಸಂಬಂಧ ಮನುಷ್ಯನಿಗೆ ರಾಜಯೋಗಕಾರಕವಾಗುತ್ತದೆ.

ಈ ಎರಡು ಗ್ರಹಗಳು ಪಾರಿಜಾತಾಂಶದಲ್ಲಿದ್ದರೆ – ಈ ರಾಜನು ಲೋಕಾನು ರಂಜಿತನಾಗುವನು. ಉತ್ತಮಾಂಶದಲ್ಲಿ ಆನೆ, ಕುದುರೆ, ಆದಿ ಪಶು ವಾಹನಯುಕ್ತನಾಗುವನು, ಉತ್ತಮ ರಾಜನಾಗುವನು, ಗೋಪುರಾಂಶದಲ್ಲಿ ರಾಜವಂದಿತ ರಾಜ ಶ್ರೇಷ್ಠನಾಗುವನು, ಸಿಂಹಾಸನಾಂಶದಲ್ಲಿ ಪೃಥ್ವಿಪಾಲಕ ಚಕ್ರವರ್ತಿಯಾಗುವನು. ಈ ಯೋಗದಲ್ಲಿ ರಾಜಾ ಹರಿಶ್ಚಂದ್ರ, ಉತ್ತಮ ಮನು ಬಲಿ ವೈಶ್ವಾನರ ಹಾಗೂ ಅನ್ಯ ಭೂಮಂಡಲಾಧೀಶರು ಆಗಿಹೋದರು. ವರ್ತಮಾನ ಯುಗದಲ್ಲಿ ಕುಂತೀಪುತ್ರ ಯುಧಿಷ್ಠಿರ ಹಾಗೂ ಭವಿಷ್ಯತ್‌ನಲ್ಲಿ ಶಾಲಿವಾಹನ ಶಕವಾಗುವಿದಿದೆ. ಇದೇ ತರಹ ಮನು ಆದಿ ಪಾರಾವರತಾಂಶದಲ್ಲಿ ವಿಷ್ಣುವಿನ ಎಲ್ಲ ಅವತಾರಗಳು ಬ್ರಹ್ಮಾದಿ ಕಾಂಶದಲ್ಲಿ ಸ್ವಯಂ ಭೂ ಮನು ಐರಾವತಾಂಶದಲ್ಲಿ – ಕೇಂದ್ರೇಶ, ತ್ರಿಕೋನೇಶ ಯೋಗಕಾರಕರಿದ್ದಾಗ ಜನಿಸಿದರು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಧನಯೋಗಾಧ್ಯಾಯಃ ಸಮಾಪ್ತಿಃ



# ಅಥ ದಾರಿದ್ರಯೋಗಾಧ್ಯಾಯಃ

## ಮೈತ್ರೇಯ ಉವಾಚ:

ವಿವಿಧಾ ವಿತ್ತದಾ ಯೋಗಾ ಉದಿತಾ ಭವತಾಧುನಾ ।
ಕಥ್ಯತಾಂ ಭಗವಾನ್ । ಯೋಗಾಯೇ ಸ್ಯುರ್ದಾರಿದ್ರ್ಯ ಕಾರಿಣ ॥೧॥

## ಪರಾಶರ ಉವಾಚ–

ಲಗ್ನೇಶೆ ರಿಪ್ಫಗೆ ರಿಪ್ಫಾಧಿಪೆ ಲಗ್ನಗತೆ ಸತಿ ।
ಮಾರಕೇಶ ಯುತೆ ದೃಷ್ಟೆ ನಿರ್ಧನೋ ಮನುಜೋ ಭವೇತ್ ॥೨॥

ಲಗ್ನಪೆ ರಿಪುಗೆ ಲಗ್ನಗತೆ ರಿಪುಪತಾವಪಿ ।
ಮಾರಕೇಶಯುತೆ ದೃಷ್ಟೆ ಜಾತಃ ಸ್ಯಾನ್ನಿರ್ಧನೋ ನರಃ ॥೩॥

ಲಗ್ನೇಂದು ಕೇತುನಾ ಯುಕ್ತೌ ಲಗ್ನೇಶೆ ನಿಧನಂ ಗತೆ ।
ಮಾರಕೇಶ ಯುತೆ ದೃಷ್ಟೆ ಜಾತೋ ವೈನಿರ್ಧನೋ ಭವೇತ್ ॥೪॥

ಷಷ್ಠಾಷ್ಟಮ ವ್ಯಯಗತೆ ಲಗ್ನೇಶೆ ಪಾಪ ಸಂಯುತೆ ।
ವಿತ್ತಪೇರಿಭಗೆ ನೀಚೆ ರಾಜವಂಶ್ಯೋಪಿ ನಿರ್ಧನಃ ॥೫॥

ಲಗ್ನೇಶೆ ತ್ರಿಕ್‌ನಾಥೇನ ಯುಕ್ತೆ ಪಾಪೇಕ್ಷಿತೆಥವಾ ।
ಮಂದಾನ್ವಿತೆ ತತ್ರಸದ್ಭಿರ ದೃಷ್ಟೆ ನಿರ್ಧನೋ ಜನಃ ॥೬॥

ಮಂತ್ರೇಶೋ ಧರ್ಮನಾಥಶ್ಚ ರಿಪರಿಪ್ಫ ಸ್ಥಿತೌ ಕ್ರಮಾತ್ ।
ದೃಷ್ಟೌ ಚೆನ್ಮಾರಕೇಶೇನ ಜಾತಃ ಸ್ಯಾನ್ನಿರ್ಧನೋ ನರಃ ॥೭॥

## ಮೈತ್ರೇಯರು ಹೇಳಿದುದು–

ಹೇ ಭಗವಾನ್, ತಾವು ಅನೇಕ ಧನಯೋಗ ಹೇಳಿದ್ದಿರಿ. ಈಗ ದಾರಿದ್ರ್ಯ ಯೋಗದ ಬಗ್ಗೆ ಕೃಪೆ ಮಾಡಿ ಹೇಳಿರಿ.

## ಪರಾಶರರು ಹೇಳಿದುದು–

ಲಗ್ನೇಶ ವ್ಯಯದಲ್ಲಿ ವ್ಯಯೇಶ ಲಗ್ನಸ್ಥ ಹಾಗೂ ಮಾರಕೇಶ (2, 7ರ

ಅಧಿಪರು) ಯುತ ಅಥವಾ ದೃಷ್ಟರಾದರೆ ನಿರ್ಧನರಾಗುತ್ತಾರೆ. ಲಗ್ನೆ ಷಷ್ಠಸ್ಥ ಹಾಗೂ ಷಷ್ಠೇಶ ಲಗ್ನದಲ್ಲಿ ಮಾರಕೇಶ ಯುತ ದೃಷ್ಟರಾದರೆ ಜಾತಕ ಪೂರ್ಣ ನಿರ್ಧನನಾಗುತ್ತಾನೆ. ಲಗ್ನ ಚಂದ್ರ ಕೇತುಯುಕ್ತರಾಗಿ ಲಗ್ನೇಶ ಅಷ್ಟಮಗತರಾದರೆ ಹಾಗೂ ಅವರು ಮಾರಕೇಶ ಯುತ ದೃಷ್ಟರಾದರೆ ಜಾತಕ ದರಿದ್ರನಾಗುತ್ತಾನೆ. ಪಾಪಯುಕ್ತ ಲಗ್ನೇಶ, ವಿತ್ತೇಶ (2ರ ಅಧಿಪ) ಷಷ್ಠಸ್ಥ ಅಥವಾ ನೀಚಸ್ಥರಾಗಿದ್ದರೆ ರಾಜವಂಶೋತ್ಪನ್ನನು ಕೂಡ ದರಿದ್ರನಾಗುತ್ತಾನೆ. ತ್ರಿಕೇಶಯುಕ್ತ ಲಗ್ನೇಶ, ಪಾಪಯುಕ್ತನೂ ಆಗಿದ್ದರೆ ಅದರಂತೆ ಶನಿಯುತನಾಗಿ – ಶುಭಗ್ರಹ ದೃಷ್ಟಿತ ನಾಗಿರದಿದ್ದರೆ ನಿಸ್ಸಂದೇಹ ನಿರ್ಧನ, ಷಷ್ಠೇಶ ಷಷ್ಠದಲ್ಲಿ ಧರ್ಮೇಶ, ದ್ವಾದಶದಲ್ಲಿ ಹಾಗೂ ಮಾರಕೇಶಯುತ ಅಥವಾ ದೃಷ್ಟರಾಗಿದ್ದರೆ ಜಾತಕ ದರಿದ್ರನಾಗುತ್ತಾನೆ.

ಇಲ್ಲಿ ಯುತಿವನ್ನು ಷಡಾಷ್ಟಕ ಹಾಗೂ ಕೇಂದ್ರಯೋಗವನ್ನು ಪರಿಗಣಿಸುವುದು ಹಾಗೂ ದೃಷ್ಟಿ $^1/_4$, $^1/_2$, $^3/_4$ ಪೂರ್ಣ ನೋಡಿ ಆ ರೀತಿಯೇ ಫಲ ಹೇಳುವುದು.

ಪಾಪಗ್ರಹೇ ಲಗ್ನಗತೇ ರಾಜ್ಯಧರ್ಮಾಧಿಪೌ ವಿನಾ ।
ಮಾರಕೇಶ ಯುತೇ ದೃಷ್ಟೇ ಜಾತಃ ಸ್ಯಾನ್ನಿರ್ಧನೋ ನರಃ ॥೮॥

ತ್ರಿಕಾಧಿಪಾ ಯತ್ರ ಭಾವೇ ತದೀಶಾಶ್ಚ ತ್ರಿಕೇ ಸ್ಥಿತಾಃ ।
ಕ್ರೂರೇ ಕ್ಷಿತೇ ಯುತಾಶ್ಚಾಪಿ ಜಾತೋ ದುಃಖಿ ಚ ನಿರ್ಧನಃ ॥೯॥

ಚಂದ್ರಕ್ರಾಂತ ನವಾಂಶೇಶೋ ಮಾರಕೇಶಯುತೋ ಯದಿ ।
ಮಾರಕಸ್ಥಾನಗೋ ವಾಪಿ ನಿರ್ಧನೋ ಜಾತಕೋ ಭವೇತ್ ॥೧೦॥

ಲಗ್ನೇಶ ತನ್ನವಾಂಶೇಶೌ ವರಿ ರಂಧ್ರವ್ಯಯ ಸ್ಥಿತೌ ।
ಮಾರಕೇಶ ಯುತೌ ದೃಷ್ಟೌ ಜಾತೋಽಸೌ ನಿರ್ಧನೊ ನರಃ ॥೧೧॥

ಶುಭಸ್ಥಾನಗತಾಃ ಪಾಪಾಃ ಪಾಪಸ್ಥಾನಗತಾಃ ಶುಭಾಃ ।
ಧನಾರ್ತೋ ಜಾಯತೇ ಬಾಲೋ ಭೋಜನೇನ ಪ್ರಪೀಡಿತಃ ॥೧೨॥

ತ್ರಿಕಾಧಿಶಯುತಾಃ ಖೇಟಾಃ ಕೋಣನಾಥೆ ಕ್ಷಣೋಜ್ಝಿತಾಃ ।
ದಶಾಪಾಕೆ ತು ತೆ ಜ್ಞೇಯಾ ವಿತ್ತನಾಶ ವಿಧಾಯಕಾಃ ॥೧೩॥

ಲಗ್ನಾದ್ ವಾ ಕಾರಕಾದ್ ವಾಪಿ ರಂಧ್ರೆ ರಿಷ್ಫೆ ದ್ವಿಜೋತ್ತಮ ।
ಕಾರಕಾಂಗಪಯೋ ರ್ದೃಷ್ಟ್ಯಾ ನಿಃಸ್ವೋಜಾತೋ ಭವೇದ್ ಧ್ರುವಮ್ ॥೧೪॥

ನವಮೇಶ, ದಶಮೇಶ ರತಿರಿಕ್ತ ಪಾಪಗ್ರಹ ಲಗ್ನಸ್ಥವಾಗಿದ್ದರೆ ಅವನ ಮೇಲೆ ಮಾರಕೇಶರ (2, 7) ದೃಷ್ಟಿಯಿದ್ದರೆ ಜಾತಕ ನಿರ್ಧನನಾಗುತ್ತಾನೆ. ತ್ರಿಕೇಶರು ಯಾವ ಭಾವದಲ್ಲಿರುವರೋ ತದ್‌ಭಾವಾದಿಪ ತ್ರಿಕಸ್ಥನಾಗಿದ್ದರೆ ಹಾಗೂ ಆ ಭಾವೇಶನ ಮೇಲೆ ಪಾಪಗ್ರಹದ ಯುತಿಯ ದೃಷ್ಟಿಯಿದ್ದರೆ ಜಾತಕ ದುಃಖ ಹಾಗೂ ನಿರ್ಧನ ನಾಗುತ್ತಾನೆ. ಚಂದ್ರಾಶ್ರಿತ ನವಾಂಶೇಶ, ಮಾರಕೇಶ ಯುಕ್ತನಾಗಿದ್ದರೆ ಅಥವಾ ಮಾರಕ ಸ್ಥಾನಗತರಾಗಿದ್ದರೆ ಲಗ್ನೇಶ ಅಂತೆ ಲಗ್ನ ನವಾಂಶ ತ್ರಿಕಸ್ಥವಾಗಿದ್ದರೆ ಅವನ ಮೇಲೆ ಮಾರಕೇಶರ ದೃಷ್ಟಿಯಿದ್ದರೆ ಅಥವಾ ಯುತಿ ಮಾಡಿದ್ದರೆ ಜಾತಕ ನಿರ್ಧನ ನಾಗುತ್ತಾನೆ. ಪಾಪಗ್ರಹ ಶುಭ ಸ್ಥಾನಗತವಾಗಿ ಹಾಗೂ ಶುಭಗ್ರಹ ಪಾಪಸ್ಥಾನಗತ ವಾಗಿದ್ದರೂ ಜಾತಕ ಧನಾರ್ಥನಾಗಿರುತ್ತಾನೆ. ಉಣ್ಣುವುದಕ್ಕೂ ಧನ ಕೊರತೆಯನ್ನು ತೋರಿಸುತ್ತದೆ. ಯಾವ ಗ್ರಹದ ಮೇಲೆ 5, 9ರ ಸ್ವಾಮಿಗಳ ದೃಷ್ಟಿಯಿರುವುದಿಲ್ಲವೋ ಹಾಗೂ ಅವರು ತ್ರಿಕೇಶ ಯುಕ್ತರಾಗಿದ್ದರೆ ಅವರ ದಶಾ ಅಂತರದಶಾದಲ್ಲಿ ಧನಕ್ಷಯವಾಗುತ್ತದೆ. ಲಗ್ನ ಅಥವಾ ಆತ್ಮಕಾರಕ ಗ್ರಹದಿಂದ ಅಷ್ಟಮ ಅಥವಾ ದ್ವಾದಶದಲ್ಲಿ ಲಗ್ನೇಶ ಹಾಗೂ ಆತ್ಮಕಾರಕ ಗ್ರಹದ ದೃಷ್ಟಿಯಿದ್ದರೆ ಜಾತಕ ನಿರ್ಧನ ನಾಗುತ್ತಾನೆ.

ಕಾರಕಾತ್ ಕಾರಕೇಶಸ್ತು ಲಗ್ನತೋ ಲಗ್ನಪೋಂತಿಮಮ್ ।
ಪಶ್ಯೇತಾಂ ಚೆನ್ನರಸ್ತರ್ಹಿ ವ್ಯಯಶಿಲೋ ನ ಸಂಶಯಃ ॥೧೫॥

ಕಾರಕೇಶನಿಂದ ಆತ್ಮಕಾರಕ ಲಗ್ನದಿಂದ ಲಗ್ನೇಶ 12ನೇ ಮನೆಯಲ್ಲಿದ್ದು ಅಥವಾ ನೋಡುತ್ತಿದ್ದರೆ ಜಾತಕ ಅತಿ ಖರ್ಚಿನವನಾಗುತ್ತಾನೆ.

ಸಬಾಧಕಾನ್ ನಿಃ ಸ್ವಯೋಗಾನ್ ವಚ್ಮಿಸಂಪ್ರುತಿ ತೆ ಮುನೆ ।
ವಿತ್ತಸ್ಥೌ ಕುಜಸೌರಿ ತು ಕಥಿತೌ ಧನನಾಶಕೌ ॥೧೬॥

ಬುಧೇಕ್ಷಿತೌ ಮಹಾವಿತ್ತಂ ಕುರುತೋ ನಿಯತಂ ದ್ವಿಜ ।
ನಿಃಸ್ವತಾಂ ಕುರುತೆ ತತ್ರ ರವಿರ್ನಿತ್ಯಂ ಯಮೇಕ್ಷಿತಃ ॥೧೭॥

ಮಹಾಧನ ಯುತಂ ಖ್ಯಾತಂ ಶನ್ಯದೃಷ್ಟ್ಯಾಃ ಕರೋತ್ಯಸೌ ।
ಏವಮೇವ ಫಲಂ ಸೌರೌ ವಿತ್ತಸ್ಥೇರ್ಕೇಕ್ಷಿತೆ ವದೇತ ॥೧೮॥

ಹೇ ಮೈತ್ರೇಯನೆ, ಸಭಾದಕ ದಾರಿದ್ರ್ಯ ಯೋಗ ಹೇಳುತ್ತೇನೆ. ಧವಭಾವಸ್ಥಿತ ಶನಿ, ಮಂಗಳ ಧನನಾಶಕರಾಗಿದ್ದಾರೆ. ಆದರೆ ಅವರ ಮೇಲೆ ಬುಧನ ದೃಷ್ಟಿಯಿದ್ದರೆ

ಮಹಾಧನಾಢ್ಯ ಯೋಗವೂ ಹೌದು – ಧನಸ್ಥ ಸೂರ್ಯನ ಮೇಲೆ ಶನಿಯ ದೃಷ್ಟಿಯಿದ್ದರೆ ಜಾತಕ ದಟ್ಟದರಿದ್ರನಾಗುತ್ತಾನೆ. ಶನಿಯ ದೃಷ್ಟಿರಹಿತ ರವಿ ಧನದಲ್ಲಿ ವಿಖ್ಯಾತ ಹಾಗೂ ಮಹಾಧನವಂತನಾಗುತ್ತಾನೆ. ಇದೇ ಪ್ರಕಾರ ವಿತ್ತಸ್ಥ ಶನಿಯ ಮೇಲೆ ಸೂರ್ಯನ ದೃಷ್ಟಿಯಿದ್ದರೆ ಫಲ ತಿಳಿಯುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ದಾರಿದ್ರ್ಯ ಯೋಗಾಧ್ಯಾಯಃ ಸಮಾಪ್ತಿ**



ಳಳನೇ ಅಧ್ಯಾಯ

## ಅಥ ಆಯುರ್ದಾಯಾಧ್ಯಾಯಃ

### ಮೈತ್ರೇಯ ಉವಾಚ:

ಏತ್ತವಿತ್ತಕರೌ ಯೋಗೌ ಭಗವಾನ್ ಭವತೋದಿತೌ ।
ಬ್ರೂಹಿ ಮೇ ಸಂಪ್ರತಿ ನೃಣಾ ಮಾಯುಜ್ಞಾನಂ ವಿಶೇಷತಃ ॥೧॥

### ಮೈತ್ರೇಯರು ಕೇಳಿದರು–

ಹೇ ಭಗವಾನ್ ಸ್ವರೂಪನೆ, ತಾವು ಧನಯೋಗ ಹಾಗೂ ದಾರಿದ್ರ್ಯ ಯೋಗದ ಬಗ್ಗೆ ಹೇಳಿದ್ದಿರಿ. ಈಗ ನನಗೆ ಮನುಷ್ಯನ ಆಯುಷ್ಯ ವಿಚಾರ ವಿಶೇಷ ರೂಪದಲ್ಲಿ ಹೇಳಿರಿ.

### ಪರಾಶರ ಉವಾಚ:

ಶೃಣು ಮೈತ್ರೇಯ ತೆ ವಾಚ್ಮಿ ಲೋಕಕಲ್ಯಾಣ ಕಾರಕಮ್ ।
ತದಾಯುಜ್ಞಾನ ಮಧುನಾ ಸುರಾಣಾಮಪಿ ದುರ್ಲಭಮ್ ॥೨॥

ತದಿತಾನೇಕದಾನೇಕೈರ್ಭೆ ದಾಂಸ್ತಸ್ಯ ಮುನಿಶ್ವರೈಃ ।
ತತ್ಸಾರ ಮಧುನೋದೃತ್ಯ ಯಥಾವತ್ ಕಥಯಾಮ್ಯಹಮ್ ॥೩॥

ಖೇಟಾಃ ಸ್ವತುಂಗಾನಿ ಚಾದಿರಾಶಿಸ್ಥಿತಿ ವಶಾತ್ ತಥಾ ।
ಋಕ್ಷಾಣಿ ರಾಶಯಶ್ಚಾಯುರ್ದಿಶಂತೀಹ ಯಥಾ ಬಲಮ್ ॥೪॥

ಪಿಂಡಾಯರಾದೌ ತತ್ರಾಹಂ ಖೇಟಸ್ಥಿತ್ಯನುಸಾರತಃ ।
ಬ್ರವಿಮ್ಯಾಕರ್ಣಾಯ ಮುನೆ । ಸಾವಧಾನ ತಯಾಧುನಾ ॥೫॥

ಕ್ರಮಶಃ ಸ್ವಸ್ವತುಂಗಸ್ಥ ಭಾಸ್ಕರಾದಿ ಗ್ರಹೇಷು ಹಿ ।
ಅಂಕೇಂದು ತತ್ತ್ವತಿಥ್ಯರ್ಕ ಬಾಣೋಂದಿಂದು ಕರಾ ನಖಾಃ ॥೬॥

ಆಯುಃ ಪಿಂಡಾ ನಿಗದಿತಾ ನೀಚಸ್ಥಿಷು ತದರ್ಧಕಮ್ ।
ಮಧ್ಯೆ ವಿವಕತೋ ಜ್ಞೇಯಂ ಸ್ಫುಟಮಾಯುಃ ಪ್ರಮಾಣಕಮ್ ॥೭॥

ತುಂಗಶುದ್ಧಃ ಖಗಂ ಷಡ್ಭಾದೂನಂ ಚಕ್ರಾದ್ ವಿಶೇಧ್ಯಯುತ್ ।
ಪಿಂಡ್ಯೈಃ ಸಗುಣೆತಂ ಶೇಷಂ ಹಾಯನಾ ಭಾದಿ ಮಾನಿತಃ ॥೮॥

## ಪರಾಶರರು ಹೇಳಿದರು–

ಹೇ ಮೈತ್ರೇಯ, ಲೋಕೋಪಕಾರ ಆಯುಜ್ಞಾನವನ್ನು ಈಗ ನಾನು ಹೇಳುತ್ತೇನೆ. ಹಿಂದಿನ ಮಹರ್ಷಿಗಳು ಅನೇಕ ಭೇದಗಳನ್ನು ಹೇಳಿದ್ದಾರೆ. ನಾನು ಅವರು ಹೇಳಿದ್ದರ ಸಾರವನ್ನು ಪರಿಶೋಧಿಸಿ ಹೇಳುತ್ತೇನೆ. ಉಚ್ಚಾದಿ ಗ್ರಹ ತನ್ನ ಉಚ್ಚ ನೀಚಾದಿ ರಾಶಿವಶ ಆಯುಃಪ್ರದವಾಗುತ್ತದೆ. ಅಶ್ವಿನ್ಯಾದಿ ನಕ್ಷತ್ರಾದಿಗಳು ಹಾಗೂ ಮೇಷಾದಿ ರಾಶಿಗಳು ತಮ್ಮ ಬಲಾನುಸಾರ ಆಯುವೃದ್ಧಿ ಅಥವಾ ಆಯುಹ್ರಾಸಕಾರಕವಾಗುತ್ತದೆ. ಗ್ರಹ ಸ್ಥಿತಿ ಅನುಸಾರ ಪ್ರಥಮಥಃ ಪಿಂಡಾಯು ಹೇಳುತ್ತೇನೆ. ಸಾವಧಾನದಿಂದ ಕೇಳು ಸೂರ್ಯಾದಿ ಗ್ರಹಗಳು ತಮ್ಮುಚ್ಚದಲ್ಲಿ ಕ್ರಮಶಃ ರವಿ – 19, ಚಂದ್ರ – 25, ಮಂಗಳ – 15, ಬುಧ – 12, ಗುರು – 15, ಶುಕ್ರ – 21, ಶನಿ – 20 ವರ್ಷ ಆಯುಷ್ಯ ಪಿಂಡಗಳಾಗಿದ್ದು ಅವು ನೀಚಸ್ಥರಿರಲು ರವಿ – $9^1/_2$ ವರ್ಷ, ಚಂದ್ರ $12\ ^1/_2$ ವರ್ಷ, ಮಂಗಳ – $7\ ^1/_2$ ವರ್ಷ, ಬುಧ – 6 ವರ್ಷ, ಗುರು – $7^1/_2$ ವರ್ಷ, ಶುಕ್ರ – $10^1/_2$ ವರ್ಷ, ಶನಿ – 10 ವರ್ಷ ಆಯುರ್ದಾನ ಮಾಡುತ್ತಾರೆ.

ಯಾವ ಗ್ರಹದ ಆಯು ಸ್ಪಷ್ಟ – ಮಾಡುವುದಿದೆಯೋ ಅದರ ರಾಶ್ಯಾದಿಗಳಲ್ಲಿ – ಉಚ್ಚರಾಶ್ಯಾದಿಯ ಕಳೆದು ಶೇಷ ರಾಶ್ಯಾದಿಗಳನ್ನು ಸ್ವಪಠಿತ ಪಿಂಡಾಯುದಿಂದ ಗುಣಿಸಿ ವಿಫಲಾದಿಂದ ರಾಶಿ ಪರ್ಯಂತ – ಯಾವ ಭಗಣಾದಿಗಳಿದೆಯೋ ಅದೇ ವರ್ಷಾದಿ ಆಯುರ್ದಾಯವಾಗುತ್ತದೆ. ಉಚ್ಚರಾಶ್ಯಾದಿ ಕಳೆಯುವುದರಿಂದ ಆರು ರಾಶಿಗಿಂತ ಕಡಿಮೆ 12 ರಾಶಿಯಲ್ಲಿ ಕಳೆಯುವುದು.

ಉದಾಹರಣೆಯಲ್ಲಿ ಸ್ಪಷ್ಟ ಸೂರ್ಯ 6 – 17' – 35 ಕಲಾ ಇದ್ದ ರವಿಯ ಉಚ್ಚರಾಶಿ 0 – 10 – 00 ಇದೆ. ಹೀಗಾಗಿ ನಿಯಮದಂತೆ (6 – 17' – 35) – (0 – 10 – 00) = 6 – 7 – 35. ಆರು ರಾಶಿಗಳಿಗಿಂತ ಹೆಚ್ಚಾದ್ದರಿಂದ ಸೂರ್ಯನ ಪಿಂಡದಿಂದ ಗುಣಿಸಿ 6 – 7 – 35 × 19 = 114 – 133 – 665 ಇದನ್ನು ಸವರ್ಣ ಅಂದರೆ ಕಲೆಯಿಂದ ಅಸಂಸ, ಅಂಶದಿಂದ ರಾಶಿ ಮಾಡಿದರೆ 118 – 24 – 05 ರಾಶಿಸ್ಥಾನಕ್ಕೆ 12ರಿಂದ ಭಾಗಿಸಲು 9 – 27 – 0 ಇದರಂತೆ ಇತರ ಗ್ರಹಗಳ ಆಯು ತೆಗೆಯುವುದು – ರವಿ ನೀಚದಲ್ಲಿರುವುದರಿಂದ 3ರಿಂದ ($^1/_3$ ಮಾಡಲು) ಭಾಗಿಸಲು 3 – 9 – 0 ರವಿ ಸ್ಪಷ್ಟ ಆಯದಾಯ.

### ಸಂಸ್ಕಾರ ವಿಶೇಷ

ಅಸ್ತಂಗತೋ ಗ್ರಹಃ ಸ್ವಾರ್ಧಮಪಹಾಯ ಸಿತಾರ್ಕಜೌ ।
ಶತ್ರುಕ್ಷೇತ್ರ ಗತ ಸ್ತ್ಯಂಶಂ ಹರೇದ್ ವಕ್ರಗತಿ ವಿನಾ ॥೯॥

ಯಾವುದೇ ಗ್ರಹ ಅಸ್ತಂಗತನಾಗಿದ್ರೆ ಬಂದ ಆಯುವಿನಲ್ಲಿ ಅರ್ಧ ಹ್ರಾಸ ವಾಗುತ್ತದೆ. ಆದರೆ ಶುಕ್ರ, ಶನಿ ಅಸ್ತರಿದ್ದರೂ ಈ ನಿಯಮ ಅನುಸರಿಸಬೇಕಾಗಿಲ್ಲ. ಆದರಂತೆ ವಕ್ರಗತಿ ಗ್ರಹದ ಅತಿರಿಕ್ತ ಶತ್ರು ಕ್ಷೇತ್ರದಲ್ಲಿಯ ಗ್ರಹ ತಮ್ಮ ಆಯುವಿನ $^1/_3$ ಆಯುವುಳ್ಳದ್ದಾಗಿರುತ್ತದೆ. ವಕ್ರ ಗ್ರಹಕ್ಕೆ ಈ ನಿಯಮವಿಲ್ಲ. ಅದು ತನಗೆ ದೊರೆತ ಪೂರ್ಣ ಆಯುಸ್ಸನ್ನು ತೋರಿಸುತ್ತದೆ.

## ಚಕ್ರಪಾತ ಹ್ರಾಸ

ಖಗಃ ಕ್ರಮಾತ್ ಸಮಸ್ತಾರ್ಧ ತ್ರಿಪಾದೇಷು ರಸಾಂಶಕವ್ ।
ಕ್ರೂರೋ ರಿಷ್ಫಾದುತ್ಯಮಸ್ಥ ಸ್ತದರ್ಧ ತು ಹೃಸೇಚ್ಛುಭಃ ॥೧೦॥

ಏಕತ್ರೈಕಸ್ಯನೇಕೇಷು ಸ್ವಭಾಗಂ ಬಲವಾನ್ ಹರೇತ್ ।
ಕ್ಷೀಣೇಂದರತ್ರ ವಿಜ್ಞಯೋ ಪಾಪೋ ನೈವ ಕದಾಚನ್ ॥೧೧॥

ವ್ಯಯದಿಂದ ಅಪಸವ್ಯ ರೂಪದಲ್ಲಿ ಸ್ಥಿತ ಪಾಪಗ್ರಹ ಕ್ರಮಶಃ ತಮ್ಮ ಆಯುರ್ದಾಯದ ಸಂಪೂರ್ಣ ಅರ್ಧ, ತ್ರಿತೀಯಾಂಶ, ತುರ್ಯಶ ಪಂಚಮಾಂಶ ಹಾಗೂ ಷಷ್ಠಾಂಶ (ಫಲ) ಆಯುರ್ದಾಯಕವಾಗಿದೆ. ಅಂದರೆ ಅಷ್ಟು ಭಾಗ ಅಪಹರಣ ಮಾಡುತ್ತದೆ. ಅಂದರೆ ದ್ವಾದಶ ಭಾವದಿಂದ 12, 11, 10, 9, 8, 7ರಲ್ಲಿ ಸ್ಥಿತ ಪಾಪಗ್ರಹ ಪೂರ್ವೋಕ್ತಿ ಆಯುವನ್ನು ಅಪಹರಿಸುತ್ತವೆ. ಅದೇ ಸ್ಥಾನದಲ್ಲಿದ್ದ ಶುಭಗ್ರಹ ಕ್ರಮಶಃ $^1/_2$, $^1/_4$, $^1/_6$, $^1/_8$, $^1/_{10}$, $^1/_{12}$ ಅಪಹರಣ ಮಾಡುತ್ತವೆ. ಅರ್ಥಾತ್ ವ್ಯಯಸ್ಥಾನದಿಂದ ದ್ವಾದಶದಲ್ಲಿದ್ದ ಶುಭಗ್ರಹ ಆಯುವಿನ ಅರ್ಧ ಅಂಶ ಹ್ರಾಸ (ಭಾಗ) ಮಾಡುತ್ತದೆ. 6 ಇದ್ದರೆ 3 ಈ ರೀತಿ ಅದೇ ಏಕಾದಶದಲ್ಲಿ (ದ್ವಾದಶದ ವ್ಯಯ) ಪಾಪಗ್ರಹವಿದ್ದರೆ ಪೂರ್ಣ ಆಯುಷ್ಯವನ್ನು ಹ್ರಾಸ ಮಾಡುತ್ತದೆ. ಒಂದೇ ಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ ಬಲಿ ಗ್ರಹದ ಭಾಗ ಮಾತ್ರ ಹ್ರಾಸವಾಗುತ್ತದೆ. ಆಯುರ್ದಾನ ಸಾಧನದಲ್ಲಿ ಕ್ಷೀಣಚಂದ್ರ ಪಾಪವೆಂದು ಪರಿಗಣಿಸುವುದಿಲ್ಲ, ಶುಭವೆಂದೇ ಪರಿಗ್ರಹಿಸುವುದು. ಇತರ ವಿಷಯದಲ್ಲಿ ಪಾಪಗ್ರಹವಾಗುತ್ತದೆ.

ವರಾಹಮಿಹಿರರೂ ಇದೇ ಮಾತನ್ನೇ ಪರಾಶರರ ಅಭಿಪ್ರಾಯವನ್ನೇ ಎತ್ತಿ ಹಿಡಿಯುತ್ತಾರೆ.

'ಸರ್ವಾರ್ಧ ತ್ರಿಚರಣ ಪಂಚ ಷಷ್ಠಭಾಗಃ ಕ್ಷೀಯಂತೆ ವ್ಯಯ ಭವನಾ ದಸುಸ್ಸು ವಾಮಮ್ । ಸಸ್ತ್ವಾರ್ಧ ಹಾಸಿತ ತಥೈಕ ರಾಶಿಗಾನಾಮೇಕತಾಂಶಂ ಹರತ ಬಲಿ ತಥಾಹ ಸತ್ಯತಿ' ಎಂದ

ಈ ಮಾತೇ ಸತ್ಯವೆಂದು ಸ್ಪಷ್ಟಪಡಿಸುತ್ತಾರೆ. ಸಾವಧಾನದಿಂದ ಹ್ರಾಸಾದಿ ತೆಗೆಯುವುದು.

## ಸಪಾಪ ಲಗ್ನ ವಿಶೇಷ

ತನುಗೇರ್ಕೆ ಕಲುಜೆ ಮಂದೆ ವಿಲಗ್ನಾಂಶ ಕಲಾ ದ್ವಿಜ ।
ಗ್ರಹಯುಷಾ ತು ಸಂಗುಣ್ಯ ಚಕ್ರರಿಪ್ತಾಭಿರಾಹರೇತ್ ॥೧೨॥

ಶೋಧಯೇದಾಪ್ತ ವರ್ಷಾದಿ ಸ್ವಾಯುಷೇಥ ಸದಿಕ್ಷಿತೆ ।
ತದ್ದಲಂ ಜ್ಞೇಯ ಮಿಥೆತ್ಯೇಷ ವಿಶೇಷಃ ಪರಿಕೀರ್ತಿತಃ ॥೧೩॥

ಲಗ್ನದಲ್ಲಿ ಸೂರ್ಯ ಭೌಮ ಶನಿ ಹಾಗೂ ಯಾವುದೇ ಪಾಪಗ್ರಹವಿದ್ದರೂ ಲಗ್ನಾಂಶದ ಕಲಾಕ್ಕೆ ಪ್ರತ್ಯೇಕ ಗ್ರಹದ ಆಯುದಿಂದ ಗುಣಕ್ಕೆ ಚಕ್ರರಿಪ್ತಾ(21,600) ರಿಂದ ಭಾಗಿಸುವುದು. ಲಗ್ನಾರ್ಧಕ್ಕೆ ಪೂರ್ವಗತ ಆಯರ್ದಾಯದಿಂದ ಕಳೆದು ಸ್ವಷ್ಟ ಆಯುಷ್ಯವೆಂದು ತಿಳಿಯುವುದು. ಲಗ್ನದ ಮೇಲೆ ಶುಭಗ್ರಹ ದೃಷ್ಟಿಯಿದ್ದರೆ ಲಬ್ಧಿಯ ವರ್ಷಾದಿ ಅರ್ಧ ಕಳೆಯುವುದು.

## ಲಗ್ನಾಯುರ್ದಾಯ

ಲಗ್ನಾಂಕ ತುಲ್ಯವರ್ಷಾಣಿ ವಿವೇಕಾದಂಶಕಾದಿಭಿಃ ।
ಮಾಸಾದ್ಯಾಶ್ಚೇತಿ ಲಗ್ನಾಯುಃ ಕೈಶ್ಚಿದುಕ್ತಂ ಮನಿಷಿಭಿಃ ॥೧೪॥

ಸಬಲೆ ಲಗ್ನಭೇಶೆ ಭಸಮಮಂಪ ಸಮೋಶಪೆ ।
ಮಧ್ಯೇನುಪಾತಾಲ್ಲಗ್ನಾಯುರ್ವಿಶೇಷೋ ಯಮುದೀರಿತಃ ॥೧೫॥

ಯಾರೋ ಆಚಾರ್ಯರು ಹೇಳಿದ್ದಾರೆ. ಲಗ್ನದಲ್ಲಿ ಎಷ್ಟು ರಾಶಿಗಳಿವೆಯೋ ಅಷ್ಟು ವರ್ಷ ಅಂಶಾದಿ ಅನುಪಾತದಿಂದ ತಿಂಗಳುಗಳ ಜ್ಞಾನ ಮಾಡಿಕೊಳ್ಳುವುದು. ಇದು ಲಗ್ನಾಯುವಾಗುವುದು. ವಸ್ತುತಃ ಲಗ್ನ ರಾಶೀಶ ಬಲಿಯಾಗಿದ್ದರೆ ರಾಶಿ ತುಲ್ಯ ಲಗ್ನ ನವಾಂಶ ಪ್ರಬಲವಾದರೆ ಆಯುರ್ದಾಯದ ಯೋಗ ಸ್ಪಷ್ಟ ಲಗ್ನಾಯುವೆಂದು ಹೇಳುವುದು.

## ನಿಸರ್ಗಾಯುರ್ದಾಯ

ಮುನೇಧುನಾ ನಿಸರ್ಗಾಯುರ್ಗ್ರಹಾಣಾಂ ತೇ ವಯೋಚ್ಯತೆ ।
ಕ್ರಮಾದಿಂದ್ವಾರವಿಚ್ಛುಕ್ರಜೀವೇನ ಶನಿ ವತ್ಸರಾಃ ॥೧೬॥

ಭೂಕರಾಂಕಾಃ ಕೃತಿಧೃತಿತೋ ನಖಾಃ ಪೂರ್ಣೇಷವಃ ಸ್ಮೃತಾಃ ।
ಜನುಃ ಸಮಯತಶ್ಚೈತಾ ನಿಸರ್ಗಪ್ರಭವಾ ದಶಾ ॥೧೭॥

ಹೇ ಮುನಿಯೇ, ನಿಸರ್ಗಯುತ ಆಯು ಹೇಳುತ್ತೇನೆ. ಜನ್ಮದಿಂದ ಹಿಡಿದು ಕ್ರಮಶಃ ಚಂದ್ರನ – 1 ವರ್ಷ, ಮಂಗಳನ – 2 ವರ್ಷ, ಬುಧಗೆ – 9 ವರ್ಷ, ಶುಕ್ರನಿಗೆ 20 ವರ್ಷ, ಗುರುಗೆ 18 ವರ್ಷ, ಸೂರ್ಯನಿಗೆ 20 ವರ್ಷ, ಶನಿಗೆ 50 ವರ್ಷ. ಇದು ನೈಸರ್ಗಿಕ ದಶಾ ವರ್ಷಗಳಾಗಿದ್ದು ಇದನ್ನೇ ಗ್ರಹಾಯುವೆಂದು ಪರಿಗಣಿಸುವುದು.

## ಅಂಶಾಯುರ್ದಾಯ

ಅಂಶಾಯುರಧುನಾ ವಚ್ಮಿ ಸಲಗ್ನದ್ಯುಪಿದಾಂ ಮುನೇ ।
ಗ್ರಹೋ ಶಭಸಮಾನ್ಯೇವ ಹಾಯನಾನಿ ದದಾತಿ ವೈ ॥೧೮॥

ಭಾದಿಕಂ ಖೇಚರಂ ಹನ್ಯಾನ್ನಗಾಭ್ರ ಶಶಿಭಿಸ್ತು ಯತ್ ।
ಭಗಣಾದಿಂ ತಪ್ಪಮ ಕೈಸ್ತದಾಬ್ದದಿಸ್ಪುಟಂ ಮತವಮ್ ॥೧೯॥

ಪಿಂಡಾಯುಪಿ ಯಥಾ ಹ್ರ ಸಸ್ತಥಾತ್ರಾಪಿ ಬುಧೈಃ ಸ್ಮೃತಃ ।
ಕೇಚಿದ್ ವದಂತಿ ವಿಬುಧಾ ವಿಶೇಷ ಮಪರಂ ತ್ವಿಹ ॥೨೦॥

ಗ್ರಹೆ ಸ್ವಭೋಚ್ಚೆ ತ್ರಿಗುಣಾ ಸ್ವನವಾಂಶೆ ತಥೊತ್ತಮೆ ।
ದ್ವಿಗುಣಾ ಸ್ವದೃಕಾಣೆಪಿ ಸಾಧಿತಾಯುಃ ಸ್ಫುಟಂ ತದಾ ॥೨೧॥

ದ್ವಯೋರ್ಯತ್ರ ಗತಃ ಖೇಟಸ್ತತ್ರಾಪಿ ತ್ರಿಗುಣಾ ಮತವಮ್ ।
ಹ್ರಾಸದ್ಧಯೇಧಿಕೋ ಗ್ರಾಹ್ರಾಸ್ತದಾಯುಃ ಸ್ಪಷ್ಟ ಮೀರಿತವಮ್ ॥೨೨॥

ಇತ್ಥಂ ಚೇತರ ಜಂತೂನಾಂ ಹತ್ವಾ ತತ್ಪರ ಮಾಯುಷಾ ।
ಭಜೇತ್ ಪರಾಯುಷೊ ನೃಣಾಂ ತದಾಯುಃ ಸ್ಪಷ್ಟಮೀರಿತವಮ್ ॥೨೩॥

ಹೇ ಮುನಿಯೇ, ಈಗ ನಾನು ಲಗ್ನ ಹಾಗೂ ಗ್ರಹಗಳ ಅಂಶಾಯುರ್ದಾಯು ಹೇಳುತ್ತೇನೆ. ಗ್ರಹ ರಾಶಿ ನವಾಂಶ ತುಲ್ಯ ವರ್ಷವಾಗುತ್ತದೆ. ಅರ್ಥಾತ್ ಗ್ರಹ ಎಷ್ಟನೇ ರಾಶಿಯ ನವಾಂಶದಲ್ಲಿದೆಯೋ ಅಷ್ಟು ವರ್ಷ ಅದರ ಆಯುರ್ದಾಯುವಿರುತ್ತದೆ. ರಾಶ್ಯಾದಿ ಗ್ರಹಕ್ಕೆ 100ರಿಂದ ಗುಣಿಸಿ ಸುವರ್ಣದ್ವಾರ (ರಾಶಿ, ಅಂಶ, ಕಲಾ ಮಾಡಿ) ಭಗಣ ಮಾಡಿ 120ಕ್ಕಿಂತ ಹೆಚ್ಚಾದರೆ 120ರಿಂದ ಭಾಗಿಸಿ ಶೇಷ ಭಗಣಾ ತುಲ್ಯ ವರ್ಷ. ಆ ಗ್ರಹದ ಸ್ಪಷ್ಟ ಆಯುರ್ದಯಾದಿಗಳಾಗುತ್ತವೆ. ಪಿಂಡಾಯು ಸಾಧನದಲ್ಲಿ ಹೇಳಿದಂತೆ ಹ್ರಾಸಾದಿ ಕ್ರಿಯೆ ಹೇಳಿದೆ – ಅಲ್ಲಿಯಂತೆ ಇಲ್ಲಿಯೂ

ಮಾಡುವುದು – ಹಿಂಡಾಯುದಲ್ಲಿ ಅಸ್ತಂಗತದಲ್ಲಿ ಅರ್ಧ ಶತ್ರು ಗ್ರಹದಲ್ಲಿ $^1/_3$ ಆದಿ ಹೇಳಿದೆಯೋ ಅದರಂತೆ ಅಂಶಾಯುರ್ದಾಯ – ವಿಶೇಷ ಸಂಸ್ಕಾರ ಹೇಳಿದ್ದಾರೆ. ಹೇಗೆಂದರೆ ಗ್ರಹ ಸ್ವೋಚ್ಚ ಸ್ವಭವನಸ್ಥವಾಗಿದ್ದರೆ ಆ ಗತ ಆಯುವನ್ನು ತ್ರಿಗುಣಿತ ಸ್ವನವಾಂಶ ಅಥವಾ ಸ್ವದ್ರೇಷ್ಕಾಣದಲ್ಲಿದ್ದರೆ ಆಯು ದ್ವಿಗುಣಿತ ಮಾಡುವುದು. ಅದು ವಾಸ್ತವಿಕ ಆಯುವಾಗುತ್ತದೆ. ಒಂದು ವೇಳೆ ಎರಡು ಸ್ಥಿತ ಪ್ರಾಪ್ತನಾದರೆ (ಸ್ವೋಚ್ಚ ಸ್ವಭವನ ಉದಾ ಕನ್ಯಾದ ಗುರು) ತ್ರಿಗುಣಿತ ಮಾಡುವುದು. ಇದೇ ರೀತಿ ಆಯಸಾಧನ ಮಾಡುವುದು. ಇದೇ ರೀತಿ ಅರ್ಧ, ತ್ರಿತಿಯಾಂಶ ಹಾಗೂ ಎರಡು ಪ್ರಾಪ್ತವಾದರೆ ಅಧಿಕ ಹ್ರಾಸ ಅರ್ಥಾತ್ $^1/_2$ ಹ್ರಾಸ ಗ್ರಹಿಸುವುದು. ಇದನ್ನೇ ಅನ್ಯ ಜಂತುಗಳಿಗೂ ಇದೇ ರೀತಿ ಆಯುಸಾಧನ ಮಾಡುವುದು, ತಮ್ಮ ತಮ್ಮ ಪರಮಾಯು ಪ್ರಮಾಣದಿಂದ ಗುಣಿಸುವುದು ಹಾಗೂ ಮನುಷ್ಯನ ಪರಮಾಯು ಭಾಗಿಸುವುದರಿಂದ ವರ್ಷಾದಿ ಲಬ್ಧಿಗಳು ದೊರಕುತ್ತದೆ. ಅದೇ ಜಂತುಗಳ ಆಯುರ್ದಾಯ ಹೇಳುವುದು.

## ಜಂತುಗಳ ಪರಮಾಯು ಪ್ರಮಾಣ

ಅತಃ ಪರಂ ಮುನೆ । ನಾನಾ ವಿಧಜಾತೀಯಜನ್ಮಾನಾಮ್ ।
ಪರಮಾಯುರಹಂ ವಚ್ಮಿ ಶೃಣುವೈಕಾಗ್ರ ಮಾನಸಃ ॥೨೪॥

ದೇವತಾನಾಮೃಷಿಣಾಂ ಚ ತಾತ್ರಾಯುರ ಮಿತಂ ಸ್ಮೃತಮ್ ।
ಸಹಸ್ರಂ ಕೀರಬಲಿಭುಗ್ ಗೃಧ್ರಕೌಶಿಕ ಚಕ್ರಾಣಾಮ್ ॥೨೫॥

ಶತತ್ರಯಂ ಭೇಕಭಲ್ಲ ಶಾದನವನೌ ಕಸಾವ್ ।
ಸಾರ್ಧೈಕ ಶತಮಬ್ದಾನಾಂ ಕ್ರವ್ಯಾದಾನಾ ಮುದೀರಿತಮ್ ॥೨೬॥

ಮೂನವಾನಾಂ ಚ ಕರೀಣಾಂ ವಿಂಶಾಧಿಕ ಶತಂ ಮತಮ್ ।
ಉಷ್ಟ್ರರಾಸಭಯೋಸ್ತತ್ರ್ವಮಿತಂ ತುರಗಜಂ ರದಾಃ ॥೨೭॥

ವೃಷಭಾಣಾಂ ಕಾಸರಾಣಾಂ ವೇದನೇತ್ರಯಿತಂ ಸ್ಮೃತಮ್ ।
ನಖಾ ಅಹಿಭುಜೌ ಮೇವಮಜಾದೀನಾಂ ತು ಷಡ್‌ದಶಾ ॥೨೮॥

ಚತುರ್ದಶ ಮರಾಲಾನಾಂ ಕೋಕಿಲಾನಾಂ ಶುನಂ ತಥಾ ।
ಕಪೋತಾನಾಂ ದ್ವಾದಶಾಬ್ದಾ ಅಷ್ಟೌ ಸ್ಯುಸ್ತಾಮ್ರಚೂಡಜಾಃ ।

ಬುಧಬುದಾದಿ ಖಗಾನಾಂ ತು ಪರಮಾಯುಃ ಸ್ಮೃತಂ ನಗಾಃ ॥೨೯॥

ಈಗ ಅಭಿವಿಜ್ಞಾನೀಯ ವಿಭಿನ್ನ ಜಾತೀಯ ಪ್ರಾಣಿಗಳ ಪರಮಾಯು ಪ್ರಮಾಣ – ತಿಳಿಯುವಾ – ಏಕಾಗ್ರಚಿತ್ತನಾಗಿ ಆಲಿಸು ದೇವತಾ ಹಾಗೂ ಋಷಿಗಳಿಗೆ ಪರಮಾಯು ಅತ್ಯಧಿಕವಾಗಿರುತ್ತದೆ. ಮುಖ್ಯವಾಗಿ ಗಿಳಿ, ಕಾಗೆ, ರಣಹದ್ದು ಹಾಗೂ ಗೂಬೆ, ಹಾವುಗಳಿಗೆ ಸಾವಿರ ವರ್ಷ ಆಯುಸ್ಸು, ಕಪ್ಪೆ ಪ್ರಮಿತ – ಕರಡಿ, ಮುಂಗಾದಿಗಳಿಗೆ 300 ವರ್ಷ, ರಾಕ್ಷಸರಿಗೆ 150 ವರ್ಷ, ಮನುಷ್ಯ, ಆನೆಗಳ ಆಯುಷ್ಯ 120 ವರ್ಷ, ಕತ್ತೆಯ ಆಯುಸ್ಸು 25 ವರ್ಷ, ಕುದುರೆ 32 ವರ್ಷ, ಎತ್ತು, ಎಮ್ಮೆಗಳಿಗೆ 24 ವರ್ಷ, ನವಿಲು 20 ವರ್ಷ ಬದುಕಿದರೆ ಆಡು, ಎಮ್ಮೆಗಳಿಗೆ 16 ವರ್ಷ, ಹಂಸಗಳಿಗೆ 14 ವರ್ಷ, ಕೋಗಿಲೆ, ನಾಯಿಗಳಿಗೆ 12 ವರ್ಷ, ಕೋಳಿ ಜ್ಯಾತಿಗಳಿಗೆ 8 ವರ್ಷ, ಬುಲ್‌ಬುಲ್ ಪಕ್ಷಿ ಆದಿಗಳಿಗೆ 7 ವರ್ಷ ಪರಮಾಯುವಾಗಿರುತ್ತದೆ.

ಮುನೆ। ಯತ್ಸಂ ಪ್ರತಿ ಮಯಾ ತ್ರಿವಿಧಂ ತ್ವಾಯುರೀರಿತಮ್।
ತತ್ರಾದೇಯಂ ಕದಾಕಿಂಚ ವಿದ್ಧಿ ರೇತದ್ ಬ್ರವೀಮ್ಯಹಮ್ ॥೩೦॥

ಲಗ್ನೇಶ ಭಾಸ್ಕರೆ ಚೆಂದೌ ಸಬಲೆ ಸೌಮ್ಯವೀಕ್ಷಿತೆ।
ಅಂಶಾಯುಶ್ಚಾಪಿ ಪಿಂಡಾಯುರ್ನಿಸರ್ಗಾಯುಃ ಕ್ರಮಾತ್ ಸ್ಮೃತಮ್ ॥೩೦॥

ಉಭಯೋರ್ಬಲ ತ್ಯುಲ್ಯೆತ್ವೇ ಯೋಗಾರ್ಧ ಸಾಧಿತಾಯುಷೋಃ।
ತ್ರಯಾಣಾಂ ತದ್ಯತೆ ಸ್ತ್ಯಂಶತುಲ್ಯಮಾಯುರುಹೀರಿತಮ್ ॥೩೨॥

ಹೇ ಮುನಿಯೋ ಈಗಾಗಲೇ ನಾನು ಮೂರು ಪ್ರಕಾರ ಆಯುಏನ ಹೇಳಿದ್ದೆನಲ್ಲ – ಅದರಲ್ಲಿ ಸೂರ್ಯ, ಚಂದ್ರ, ಲಗ್ನರಲ್ಲಿ ಲಗ್ನೇಶ ಪ್ರಬಲನಾಗಿದ್ದರೆ ಅಂಶಾಯು, ಮೂರರಲ್ಲಿ ಸೂರ್ಯ ಬಲಿಷ್ಠನಾಗಿದ್ದರೆ ಪಿಂಡಾಯುಕ ಚಂದ್ರ ಪ್ರಬಲನಾಗಿದ್ದರೆ ನಿಸರ್ಗಾಯುವನ್ನು ಪರಿಗಣಿಸುವುದು ಸ್ಪಷ್ಟಾರ್ಥ.

| | | |
|---|---|---|
| ಲಗ್ನೇಶ ಬಲಿ | --- | ಅಂಶಾಯು |
| ಸೂರ್ಯ ಬಲಿ | --- | ಪಿಂಡಾಯು |
| ಚಂದ್ರ ಬಲಿ | --- | ನಿಸರ್ಗಾಯು |

ಪರಿಗಣಿಸುವುದು ಒಂದು ವೇಳೆ ಎರಡು ಲಗ್ನ – ಸೂರ್ಯ, ಲಗ್ನ – ಚಂದ್ರ, ಸೂರ್ಯ – ಚಂದ್ರ ಈ ರೀತಿ ಬಲಿಯಾಗಿದ್ದರೆ ಎರಡು ಆಯುಗಳ ಯೋಗಾರ್ಧ, ಮೂರು ಬಲಿಷ್ಠವಾಗಿದ್ದರೆ – ಮೂರರ ಆಯುಗಳ ಯೋಗದ ತ್ರಯೊಂಶ – ಆಯುವೆಂದು ಪರಿಗಣಿಸುವುದು.

## ಅನ್ಯ ರೀತಿ ಆಯಸಾಧನ

ಬ್ರವೀಮ್ಯಥಾಪರಂ ಚಾಪಿ ಸಮಾಕರ್ಣಯ ತದ್‌ದ್ವಿಜ ।
ಲಗ್ನೇಶ ರಂಧ್ರಪ ಸ್ತದವತ್ ಶಶಾಂಕ ಶನಿತಸ್ತಥಾ ॥೩೩॥

ಸ್ವಪ್ಪಮಾಯುಃ ಕೈಶ್ಚುದುಕ್ತಂ ಹೋರಾಲಗ್ನ ವಿಲಗ್ನತಃ ।
ತತ್ರ ತು ಪ್ರಥಮೋ ಯೋಗೋ ಲಗ್ನ ರಂಧ್ರಪತಃ ಸ್ಮೃತಃ ॥೩೪॥

ದ್ವಿತೀಯಶ್ಚಂದ್ರ ಶನಿತೋ ಲಗ್ನಹೋರಾ ವಿಲಗ್ನತಃ ।
ತೃತೀಯ ಆಯುಷೆ ಯೊಗೋ ವಿಜ್ಞೇಯೋ ವಿಬುಧೈಃ ಸದಾ ॥೩೫॥

ಚರಭೆ ಸಂಸ್ಥಿತೌ ದ್ವೌ ಚೇದ್ ದೀರ್ಘಮಾಯುಸ್ತದಾ ಸ್ಮೃತಮ್ ।
ಸ್ಥಿರೆ ದ್ವಿಭೆ ತಥೈಕತ್ರೈಸ್ತತ್ರಾ ಪ್ಯಾಯು ಸ್ತದೇವ ಹಿ ॥೩೬॥

ಚರೆ ಸ್ಥಿರೆ ತಥೈಕೈಕೋ ಮಧ್ಯಮಾಯುಸ್ತದಾ ಭವೇತ್ ।
ವಿಭೌದ್ವಿಭೆ ಪ್ರಯಾತೌ ಚೇತ್ ತದಾಪ್ಯಾಯುಸ್ತು ಮಧ್ಯಮಮ್ ॥೩೭॥

ಚರೆ ತ್ವೆಕೊ ದ್ವಿಭೆಚಾನ್ಯಃ ಸ್ಥಿರಗೌ ಚೇದು ಭಾವಾಪಿ ।
ತದಾ ಸ್ವಲ್ಪಾಯುರೇವ ಸ್ಯಾಜನ್ಮಿನೋ ನಾತ್ರ ಸಂಶಯಃ ॥೩೮॥

ಯೋಗಾಭ್ಯಾಂ ವಾ ತ್ರಿಭಿರ್ಯೋಗೈರ್ನಿಷ್ಪನ್ನಂ ನೆಯಮೇವತತ್ ।
ತ್ರಯಾನಾಂ ತು ವಿಸಂವಾದೆ ಹೋರಾಲಗ್ನ ವಿಲಗ್ನತಃ ॥೩೯॥

ವಿಧೌ ತನೌ ಮದೆ ವಾಪಿ ಚಂದ್ರಾರ್ಕಿ ಜನಿತಂ ತದಾ ।
ಕಷ್ಯೌಯಾ ಹ್ರಾಸವೃದ್ಧೀ ಚ ಚಿಂತನೀಯೇ ಪ್ರಯತ್ನಿತಃ ॥೪೦॥

ಹೇ ಪ್ರಿಯ ವಿಪ್ರನೆ, ಈಗ ನಾನು ಅನ್ಯ ರೀತಿಯ ಆಯುರ್ದಾಯ ಸಾಧನ ಹೇಳುತ್ತೇನೆ ಕೇಳು – ಲಗ್ನೇಶ, ಅಷ್ಟಮೇಶ ಶನಿ, ಚಂದ್ರ ಹಾಗೂ ಲಗ್ನ ಅಂತೆ ಹೋರಾ ಲಗ್ನದ ಮುಖಾಂತರ ಆಯುಷ್ಯದ ಸಾಧನೆ ಒಬ್ಬ ಮಹರ್ಷಿ ಹೇಳಿದ್ದಾನೆ ಕೇಳು.

(1) ಲಗ್ನೇಶ, ಅಷ್ಟಮೇಶರಿಂದ ಪ್ರಥಮ ಯೋಗ.

(2) ಶನಿ, ಚಂದ್ರರಿಂದ ಎರಡನೇ ಯೋಗ.

(3) ಲಗ್ನ ಹೋರಾ ಲಗ್ನದಿಂದ ಮೂರನೇ ಯೋಗ ಋಷಿಗಳೇ ಹೇಳಿದ್ದಾರೆ. ಲಗ್ನೇಶ – ಅಷ್ಟಮೇಶ, ಶನಿ – ಚಂದ್ರ, ಲಗ್ನ – ಹೋರಾಲಗ್ನ ಈ ಮೂರರಲ್ಲಿ

ಯಾವುದೇ ಒಂದು ಗುಂಪು (ಎರಡೂ) ಚರರಾಶಿಸ್ಥವಾದರೆ ದೀರ್ಘಾಯು, ಒಂದು ಸ್ಥಿರ ಒಂದು ದ್ವಿಸ್ವಭಾವದಲ್ಲಿದ್ದರೆ )ಒಂದೇ ಗುಂಪಿನಲ್ಲಿಯ ಉದಾಹರಣೆ ಶನಿ, ಚಂದ್ರ) ಕೂಡ ದೀರ್ಘಾಯುವೆ. ಒಂದು ಚರ, ಒಂದು ಸ್ಥಿರದಲ್ಲಿದ್ದರೆ ಮಧ್ಯಮಾಯು, ಎರಡು ದ್ವಿಸ್ವಭಾವಗತವಾದರೆ ಕೂಡ ಮಧ್ಯಮಾಯು, ಒಂದು ಚರ, ಒಂದು ದ್ವಿಸ್ವಭಾವ ದಲ್ಲಿದ್ದರೆ ಎರಡೂ ಸ್ಥಿರರಾಶಿಗತವಾದರೆ ನಿಸ್ಸಂದೇಹ ಜಾತಕ ಅಲ್ಪಾಯುವಾಗು ತ್ತಾನೆ. ಎರಡು ಅಥವಾ 3 ಯೋಗಗಳಲ್ಲಿ (ಸಮಯೋಗ) ಅಥವಾ 3 ಭಾಗಗಳಲ್ಲಿ ವಿಷಮತೆಯಾಗಿ 3 ಪ್ರಕಾರದ ಆಯು ಅಂದರೆ ದೀರ್ಘ, ಮಧ್ಯಮ, ಅಲ್ಪ ಹೀಗಾದರೆ – ಅಲ್ಲಿ ಮಾತ್ರ ಲಗ್ನ – ಹೋರಾಲಗ್ನವನ್ನೇ ಗ್ರಾಹ್ಯವೆಂದು ಪರಿಗಣಿಸುವುದು. ಈ ಸ್ಥಿತಿಯಲ್ಲಿ ಲಗ್ನ ಅಥವಾ ಸಪ್ತಮದಲ್ಲಿ ಚಂದ್ರನಿದ್ದರೆ – ದ್ವಿತೀಯ ಯೋಗ (ಶನಿ, ಚಂದ್ರ)ವನ್ನೇ ಪರಿಗಣಿಸುವುದು ಹಾಗೂ ಈ ಎಲ್ಲ ಸಮಯದಲ್ಲಿ ಕಕ್ಷೆಯ ವೃದ್ಧಿ ಹ್ರಾಸಗಳನ್ನು ಪರಿಗಣನೆಗೆ ತೆಗೆದುಕೊಂಡು ನಂತರ ಆಯು ಹೇಳುವುದು.

## ದೀರ್ಘ ಮಧ್ಯ ಅಲ್ಪ ಆಯುವಿನ 3 ಭೇದ

ದೀರ್ಘಾಯುಷಿ ತ್ರಿಭಿಯೋಗೈ ರ್ವಿಶೋತ್ತರ ಶತಾಬ್ದ ಕಾಃ ।
ಯೋಗಾಭ್ಯಾಂ ನಾಗಕಕುಭೋ ರಸಾಂಕಾ ಏಕಯೋಗತಃ ॥೪೧॥

ಮಧ್ಯಮೆ ತು ತ್ರಿಭಿರ್ಯೋಗೈರ ಶೀತಿ ಸಮವತ್ಸರಾಃ ।
ದ್ವಿ ಸ್ಸತಿಸ್ತು ಯೋಗಾಭ್ಯಾಮ ಚತುಹ ಷಷ್ಠಿ ಸ್ತಥೈಕತಃ ॥೪೨॥

ಯೋಗೈಸ್ತ್ರಿಭಿಸ್ತಥಾಲ್ಪೆ ತು ದ್ವಿತ್ರಿಂಶತ್ಸಮವತ್ಸರಾಃ ।
ರಸಾಗ್ನಯಸ್ತು ಯೋಗಾಭ್ಯಾಂ ಶೂನ್ಯ ವೇದಾಸ್ತಥೈಕತಃ ॥೪೩॥

ಚತ್ವಾರಿಂಶಚ್ಚ ಷಟ್ ತ್ರಿಂಶದ್ ದ್ವಾತ್ರಿಂಶಚ್ಚ ಬುಧೈಃ ಕ್ರಮಾದ್ ।
ದೀರ್ಘ ಮಧ್ಯಾಲ್ಪಿಕಾ ಜ್ಞೇಯಾಃ ಖಂಡಾ ಆಯುಃ ಪ್ರಸಾಧದೇನೆ ॥೪೪॥

ಇಲ್ಲಿ ಮೂರು ರೀತಿಯಿಂದ ದೀರ್ಘಾಯು ಪ್ರಾಪ್ತವಾಗಲು 120 ವರ್ಷ ಎರಡು ಪ್ರಕಾರದಿಂದ ದೀರ್ಘಾಯುವಿನಲ್ಲಿ 108 ವರ್ಷ ಹಾಗೂ ಒಂದು ಪ್ರಕಾರದ ದೀರ್ಘಾಯು ದೊರೆಯಲು 96 ವರ್ಷವೆಂದು ತಿಳಿಯುವುದು. ಇದೇ ಪ್ರಕಾರ ಮೂರು ಪ್ರಕಾರದ ಮಧ್ಯಮಾಯು – 80 ವರ್ಷ ಎರಡು ಪ್ರಕಾರದಿಂದ 72 ವರ್ಷ. ಮಧ್ಯಯಾಯು ಒಂದು ಪ್ರಕಾರದಿಂದ ಮಧ್ಯಮಾಯು 64 ವರ್ಷ. (ಸೂಚನೆ ಈಗ ಪರಮಾಯುಷ್ಯವೇ ಕಲಿಯಲ್ಲಿ) 100. ಈಗ 80 ಇರುವುದರಿಂದ ಆ ಅಂಶಗಳೆಂದರೆ ಪೂರ್ಣಾಯು, ಮಧ್ಯಮಾಯು, ಅಲ್ಪಾಯು ಪರಿಗಣಿಸುವುದು.

ಒಬ್ಬರೋ, ಇಬ್ಬರೋ 120 ವರ್ಷ ಇದ್ದರೆ ಅದು ವಿಶೇಷವೆ) ಅಲ್ಪಾಯು 3 ಪ್ರಕಾರದ್ದಿದೆ. 32 ವರ್ಷ ಎರಡು ಪ್ರಕಾರದಲ್ಲಿ 36 ಏಕಪ್ರಕಾರದಲ್ಲಿ 40 ಈ ಪ್ರಕಾರ ಸ್ಪಷ್ಟ ಆಯು ತೆಗೆಯುವುದು.

## ಸ್ವಷ್ಟ ಚಕ್ರ

| ದೀರ್ಘಾಯು | 1ಯೋಗ 96 | ಯೋಗದ್ವಯ 108 | ಯೋಗತ್ರಯ 120 |
|---|---|---|---|
| ಮಧ್ಯಮಾಯು | 1ಯೋಗ 64 | ಯೋಗದ್ವಯ 72 | ಯೋಗತ್ರಯ 80 |
| ಅಲ್ಪಾಯು | ಯೋಗತ್ರಯ 32 | ಯೋಗದ್ವಯ 36 | ಏಕಯೋಗ 40 |
| ಖಂಡಾಯ | 32 | 36 | 40 |

## ಆಯು ಸ್ಪಟೀಕರಣ ರೀತಿ

ರಾಶ್ಯಾದೌ ಪೂರ್ಣಮಾಯುಃ ಸ್ಯಾದಂತೆ ಖಂಡ ಸಮಾಕ್ಷತಿಃ ।
ಮಧ್ಯೇನುಪಾತ ಜನಿತಾ ಕ್ಷತಿರ್ಭೋಧ್ಯಾನ್ಯದಾ ಪುನಃ ॥೪೫॥

ಯೋಗಕೃದ್ ಗ್ರಹ ಭಾಗಾನಾಂ ಯೋಗೆ ತತ್ಸಂಖ್ಯಯೇದ್ ಧೃತೆ ।
ಆಪ್ತಭಾಗಾ ಯಥಾ ಲಬ್ಧ ಖಂಡೇನ ಗುಣಿತಾ ಹುತಾ ॥೪೬॥

ತ್ರಿಂಶತಾ ಪ್ರಾಪ್ತ ವರ್ಷಾ ದ್ಯೈರೂನಂ ಸ್ವಷ್ಟಾಯುರೀರಿತಮ್ ।

ಯೋಗಕಾರಕಗ್ರಹ ರಾಶ್ಯಾದಿಗತವಾದರೆ – ಪೂರ್ಣ ಆಯು. ಅದೇ ಗ್ರಹ ರಾಶ್ಯಾಂತದಲ್ಲಿದ್ದರೆ ಖಂಡಾಯು ತುಲ್ಯ ಹಾನಿ, ರಾಶಿ ಮಧ್ಯದಲ್ಲಿ ಅಂಶದ ಯೋಗ ಮಾಡಿ ಅದಕ್ಕೆ ಯೋಗಕಾರಕ ಗ್ರಹದ ಸಂಖ್ಯೆಯಿಂದ ಭಾಗಿಸಿದರೆ ಲಬ್ಧ ಅಂಶಾದಿ ಪ್ರಾಪ್ತ ಖಂಡದಿಂದ ಗುಣಿಸಿ 30ರಿಂದ ಭಾಗ ಮಾಡಿ ಲಬ್ಧ ವರ್ಷಾದಿ ದೀರ್ಘಾದಿ ಸಂಖ್ಯೆಯಲ್ಲಿ ಕಳೆಯಲು ಆಯು ಪ್ರಮಾಣವಾಗುತ್ತದೆ.

ವಿಮರ್ಶೆ: ಮಾನವ ಜೀವನದಲ್ಲಿ ಆಯುಷ್ಯ ಬಹಳ, ಮಹತ್ವಪೂರ್ಣ ವಿಷಯ. (ಭಾವನಾತ್ಮಕ – ಏಕರೂಪವಾಗಿರುವುದರಿಂದ) ಹಾಗೂ ಸಂಪೂರ್ಣ ಸಂಸಾರವೆ. ಮಾನವ ಜೀವಿತದ ಮೇಲೆ ನಿರ್ಧಾರವಾಗಿದೆ ಎಲ್ಲರ ನಿಕಟ ಭಾವನಾತ್ಮಕ ರೂಪವಾಗಿ ನಿಶ್ಚಿತತೆಯನ್ನು ನಿರ್ಧರಿಸುತ್ತದೆ.

ಹಿಂದಿನ ಎಲ್ಲ ಆಚಾರ್ಯರು, ಋಷಿ ಮುನಿಗಳು ತಮ್ಮದೇ ಸ್ವಂತ ದೃಷ್ಟಿಕೋನ ವಿಚಾರ ಉಳ್ಳವರಾಗಿ ಆಯುರ್ಮಾನ ನಿರ್ಧರಿಸಿದ್ದಾರೆ. ಆದರೂ ಒಂದು ಏಕತಾತನೆ ಯಿರುವುದರಿಂದ ರೂಪಾಂತರದಂತೆ ಕಂಡರೂ ರೂಪಾಂತರದಲ್ಲಿ ದಿವ್ಯಜ್ಞಾನ

ದೃಷ್ಟಿಯಿಂದ ಕಂಡುಕೊಂಡುದಾಗಿದೆ ಎಂಬುದು ವಿವರಿಸಿದೆ. ಜೈಮಿನಿ ಸೂತ್ರಕಾರರ ಪರಾಶರರ – ಆಯು ಪದ್ಧತಿ ರೂಪಾಂತರದಂತೆ ಕಂಡು ಬರುತ್ತದೆ. ಜೈಮಿನಿ ಋಷಿಗಳು 'ಆಯುಃ ಪಿತೃದಿನ ಶಾಭ್ಯಾಮ್ । ಎಂದು ಆರಂಬಿಸಿ ದ್ವಿತೀಯಾಧ್ಯಾಯ ಪೂರ್ಣ – ನಿರ್ಣಾಯ ಪಿಂಡಾಯ ನಿಸರ್ಗಾಯು ಅತಿರಿಕ್ತ ಆಯು ಸಾಧನೆ ಒಂದೇ ರೀತಿಯಾಗಿದೆ – ಆದರೆ ಪರಾಶರರ ಶೈಲಿ ಪೌರಾಣಿಕ ರೂಪದ್ದಾದರೆ – ಮೈಮಿನಿಯವರ ಶೈಲಿ ಸೂತ್ರರೂಪದ್ದಾಗಿದೆ. ಇದೇ ಅಧ್ಯಾಯದ 33ನೇ ಶ್ಲೋಕದಿಂದ 44ನೇ ಶ್ಲೋಕದ ಸಮಸ್ತ – ವಿಷಯವನ್ನೇ ಜೈಮಿನಿಯವರ 4 ಕೆಳಗಿನ ಸೂತ್ರಗಳಲ್ಲಿ – ಏಕರೂಪದಿಂದ ಕಾಣುತ್ತೇವೆ. ಜೈಮಿನಿ ಸೂತ್ರ (1) ಆಯುಃ ಪಿತೃವಿನೆಶಾಭ್ಯಾಮ್ । (2) ಪ್ರಥಮಯೋರುತ್ತಯೋರ್ವಾ ದೀರ್ಘಮ್ (3) ಪ್ರಥಮ, ದ್ವಿತೀಯ ಯೋಗನ್ಯ ಯೋರ್ವಾ (4) ಮಧ್ಯಯೋ ರಾದ್ಯಾಂತ ಯೋರ್ವಾಹೀನಮ್ (5) ಏವಂ ಚಂದ್ರಮಂದಾನ್ಯಾಯ (6) ಪಿತೃಕಾಲತಶ್ಚ (7) ಸಂವಾದಾತ್ಮಮಾನಮ್ (8) ವಾಸಂವಾದೆ ಪಿತೃಕಾಲಃ (9) ಪಿತೃಲಾಬಗೆ ಚಂದ್ರಚಂದ್ರ ಮಂದಾಭ್ಯಾಮ್ (10) ಶನ ಯೋಗ ಹೇತೌ (11) ಪಿತೃ ಲಾಭಗೆ ಗುರೌ – ಈ ರೀತಿ ಇದ್ದರೂ 12 ಪ್ರಕಾರಗಳೆಂದು ಆಯು ವಿಚಾರ ವಿಮರ್ಶೆ ಗಳಾಗಿದೆ. ಪೂರ್ಣ ಉದ್ಧರಣೆ ಅಸಂಭವವಾದುದು ಹೀಗಾಗಿ – ವಿಷಯ ಸ್ಪಷ್ಟೀಕ ರಣಕ್ಕೆ ನಿರೂಪಿಸಿದೆ ಏಕತೆ ಸ್ವಷ್ಟ.

ಉದಾಹರಣೆ – ನೋಡುವುದಾದರೆ – ಈ ಹಿಂದೆ ಕೊಟ್ಟ ಜಾತಕದ ಲಗ್ನೇಶ – ಚಂದ್ರ, ಅಷ್ಟಮೇಶ – ಶನಿ, ಚಂದ್ರ ತುಲಾರಾಶಿಯಲಣೆ ಅಂದರೆ ಚರರಾಶಿಯಲ್ಲಿ ಅಷ್ಟಮೇಶ, ಶನಿ, ಮೀನ ದ್ವಿಸ್ವಭಾವ ರಾಶಿಯಲ್ಲಿ – ಇಲ್ಲಿ ಪರಾಸರೋಕ್ತ 'ಚರತ್ವೆಕೊಚಾನ್ಯ' ಅಥವಾ ಜೈಮಿನಿಯವರಂತೆ 'ಮಧ್ಯಯೋರಾಧ್ಯಂತ ಯೋರ್ವಿ ಹೀನಮ್' ಅನುಸಾರ ಅಲ್ಪಾಯು.

ಆದರಂತೆ ಲಗ್ನ ಕರ್ಕ, ಚರರಾಶಿ – ಹೋರಾ ಲಗ್ನ ಮೀನ ದ್ವಿಸ್ವಭಾವಗತ – ಇಲ್ಲಿಯೂ ಅಲ್ಪಾಯು.

ಚಂದ್ರ, ತುಲಾ, ಚರರಾಶಿ, ಶನಿ, ಮೀನರಾಶಿ ದ್ವಿಸ್ವಭಾವದಲ್ಲಿ ಇಲ್ಲಿಯು ಅಲ್ಪಾಯುವೆ.

ಆದರೂ –! –?

ಸ್ವಷ್ಟಾಯು ವರ್ಷಾದಿ ಸಾಧನ

ಲಗ್ನ $2^{0} - 31' - 47''$

ಹೋರಾ 5 – 41 – 22

ಶನಿ $2^{0} - 47' - 00$

ಚಂದ್ರ 24 – 00 – 00

--------------------

ಅಂತೂ 35 – 00 – 9

ಅಂತೂ 35 ಡಿಗ್ರಿ – 00 – 9 ಈ ಲಗ್ನಕ್ಕೆ ಯೋಗಕಾರಕ ಗ್ರಹ ಮಂಗಳ (ಉಚ್ಚನೂ ಹೌದು ಅವನಿಂದ ಭಾಗ ಸಂಖ್ಯೆ ಮೂರು ಆದರು ಗುರು ರಾಶ್ಯಾಂತರ ಮಾರಕೇಶ, ಅಷ್ಟಮೇಶ ಶನಿಯಾಗಿರುವುದು ಗ್ರಹಿಸುವುದು 11ಡಿಗ್ರಿ – 40 – 3 ಇದಕ್ಕೆ ಅಲ್ಪಾಯು ಖಂಡದಿಂದ ಗುಣಿಸಲಾಗಿ (40 ಅಲ್ಪಾಯು ತ್ರಿಯೋಗ) 11-40-3 × 40 = 440 1600-120 ಸುವರ್ಣ = 466 = 7 = 00 = 466+ $^{7}/_{60}$ = 466+8 $^{4}/_{7}$ 466+8 $^{4}/_{7}$ ÷ 30 = 15. ಅಲ್ಪಾಂತರದಿಂದ ಇರುವುದರಿವ 16 ಪರಿಗಣಿಸಿ.

$$= \text{ವರ್ಷ ಪ್ರವೇಶ } \frac{11+{}^{7}/_{60}}{3} = \frac{12(11+{}^{7}/_{60})}{30} = \frac{2(11+{}^{7}/_{60})}{5}$$

$$= 22+\frac{{}^{14}/_{60}}{5} = 22+\frac{7}{30}$$ = ಪ್ರಥಮ ಕಂಡ ಭಾಗಾವಶೇಷ = 4

ದಿನಾತ್ಮ – 30

$$= 2-{}^{7}/_{30} \times 30 = 30(2-{}^{7}/_{30}) = 6(2+{}^{7}/_{3})$$

$$= (12+{}^{42}/_{3}) = 12+14 = 26$$

ಈ ರೀತಿ ಸ್ಪಷ್ಟಾಯು ತೆಗೆದು ವೃದ್ಧಿಹ್ರಾಸಾದಿ ಮಾಡಿ ಸ್ಪಷ್ಟ – ವರ್ಷ ಮಾಸಾಧಿಗಳಿಗೆ ಬರುವುದು.

## ಇದಕ್ಕೆ ವಿಶೇಷ

**ಮಂದೆ ಯೋಗಕರೆ ಕಕ್ಷ್ಯಾಹ್ರಾಸೋ ವೃದ್ಧಿರ್ಮತಾ ಪುರೈಃ ।**
**ನಹಿ ಸ್ವಭೋಚ್ಚಗೆ ನೋವಾಕ್ರೂರ ಮಾತ್ರಾನ್ವಿತೆ ಕ್ಷಿತೆ ॥೪೭॥**

ಗುರೌ ವಿಲಗ್ನೆ ಮದಗೆ ಕೇವಲಂ ಸದ್ಯುತೇಕ್ಷಿತೆ ।
ಕಕ್ಷ್ಯೋ ಪಚಿತಿರುಕ್ತಸ್ಯಾಯುಷೊ ಜಾಯತೆ ಸತ್ತಮ ॥೪೮॥

ಶನಿ ಯೋಗಕಾರಕನಾಗಿದ್ದರೆ ಕಕ್ಷೆಯ ಹ್ರಾಸವಾಗುತ್ತದೆ. ಪರಂತು ಕತಿಪಯ ಆಚಾರ್ಯರು – ಯೋಗಕಾರಕ ಶನಿಯ ಕಕ್ಷಾವೃದ್ಧಿ ಹೇಳಿರುವುದರಿಂದ ಈ ಹ್ರಾಸ ವೃದ್ಧಿ ಸ್ವಗ್ರಹಿ ಸ್ವೋಚ್ಚದಲ್ಲಿ ಅಥವಾ ಪಾಪಗ್ರಹ ಮಾತ್ರದಿಂದ ದೃಷ್ಟಿತನಾಗಿದ್ದರೆ ಆಗಲಾರದು. ಅರ್ಥಾತ್ ಕಕ್ಷೆ ಯಥಾವತ್ ಆಗಿರುತ್ತದೆ. ಲಗ್ನ ಅಥವಾ ಸಪ್ತಮ ದಲ್ಲಿ ಗುರುವಿದ್ದರೆ ಶುಭಗ್ರಹ ದೃಷ್ಟಿಯಿದ್ದರೆ ಕಪಾ ವೃದ್ಧಿಯಾಗುತ್ತದೆ.

ಈ ಎಲ್ಲ ಅಂಶ ಪರಿಗಣಿಸಿ – ಪೂರ್ಣಾಯು ಸಮಾನವೆಂದು ಅಂದರೆ 72ರ ಮೇಲೆ ಎಂದು ಹೇಳಬೇಕಾಗುವುದು.

## ಕಕ್ಷಾಹ್ರಾಸ ವೃದ್ಧಿ ಲಕ್ಷಣ

ನಿರಾಯುಷ್ಯಲ್ಪಮಾಯುಃ ಸ್ಯಾದಲ್ಪಾಯು ಷೀತು ಮಧ್ಯಮಮ್ ।
ಮಧ್ಯಮಾಯುಷಿ ದೀರ್ಘ ಚ ದೀರ್ಘಾಯುಷ್ಯಮಿತಂ ಮತಮ್ ॥೪೯॥

ಕಕ್ಷ್ಯಾವೃದ್ಧಿರ್ಗುರೌ ತ್ವೆವಾ ಜಾಯತೆ ಯೋಗಕಾರಕೆ ।
ಅತೋ ವಿಪರ್ಯಯೋಕ್ಷೈವ ಕಕ್ಷ್ಯಾಹ್ರಾಸೋರ್ಕಜೆ ಮತಃ ॥೫೦॥

ಕಕ್ಷಾ ವೃದ್ಧಿ ಸ್ಥಿತಿಯಲ್ಲಿ – ಅನಾಯುವಿನಲ್ಲಿ (ಹುಟ್ಟಿದೊಡನೆ ಮರಣ) ಅಲ್ಪಾಯು, ಅಲ್ಪಾಯುವಿನಲ್ಲಿ ಮಧ್ಯಮಾಯ, ಮಧ್ಯಮಾಯುವಿನಲ್ಲಿ ದೀರ್ಘಾಯು ಹಾಗೂ ದೀರ್ಘಾಯುವಿನಲ್ಲಿ ಅಮಿತಾಯುವಾಗುತ್ತದೆ. ಇದು ಗುರು ಯೋಗಕಾರಕನಿದ್ದರೆ ಶನಿಯ ಯೋಗಕಾರಕತ್ವದಲ್ಲಿ ಹ್ರಾಸವಾಗುತ್ತದೆ. ಅತಿ ಆಯುವಿನಿಂದ ದೀರ್ಘ, ದೀರ್ಘದಿಂದ ಮಧ್ಯಮಾಯು, ಮಧ್ಯಮಾಯುನಿನಿಂದ ಹೀನ – ಹೀನದಿಂದ ಅನಾಯು ಈ ರೀತಿ ಪರಿಗಣಿಸುವುದು.

### ಮೈತ್ರೇಯ ಉವಾಚ:

ಭಗವನ್ನಾಯುಷೊ ನಾನಾ ಭೇದಸ್ತು ಭವಲೋದಿತಾಃ ।
ಕಿಯಂತಸ್ತೆ ಕದಾನಾಯುರಧಿಕಾಯಸ್ಚ ಜಾತಕಃ ॥೫೦॥

### ಮೈತ್ರೇಯರು ಕೇಳಿದರು–

ಹೇ ಭಗವಾನ್, ತಾವು ಆಯುವಿನ ಅನೇಕ ಪ್ರಕಾರಾದಿಗಳನ್ನು ವಿವರಿಸಿದ್ದೀರಿ.

ಪರಂತು ಅನಾಯು ಹಾಗೂ ಅಧಿಕಾಯು ಯೋಗಗಳನ್ನು ಹೇಗಾಗುತ್ತವೆ ಕೃಪೆ ಮಾಡಿ ತಿಳಿಸಿರಿ.

ಪರಾಶರ ಉವಾಚ–

ಸಪ್ತಧಾಯುರ್ಮತಂ ಬಾಲಾರಿಷ್ಟಂ ಯೋಗಜರಿಷ್ಟಕಮ್ ।
ಅಲ್ಪಮಧ್ಯಮದೀರ್ಘ ಚ ದಿವ್ಯಂ ಚಾಮಿತಮೇವಚ ॥೫೨॥

ಬಾಲಾರಿಷ್ಟೇಷ್ಟವರ್ಷಾಣಿ ನಖಾಬ್ದಾ ಯೋಗರಿಷ್ಟಕೇ ।
ದೀರ್ಘೇವಿಂಶೋತ್ತಶತಂ ದಿವ್ಯೆ ದಶಶತಾಬ್ದಕಮ್ ॥೫೩॥

ಅಮಿತಾಯುಸ್ತತೋಗ್ರೇ ಸ್ಯಾತ್ ಪುಣ್ಯವದ್ಭಿಪ್ಯರವತೆ ।

ಬಾಲಾರಿಷ್ಟ, ಯೋಗಜರಿಷ್ಟ, ಅಲ್ಪ, ಮಧ್ಯಮ, ದೀರ್ಘ, ದಿವ್ಯ ಹಾಗೂ ಅಮಿತ– ಈ ಏಳು ಪ್ರಕಾರ ಆಯುರ್ದಾಯಗಳಿವೆ. ಬಾಲಾರಿಷ್ಟದಲ್ಲಿ 8 ವರ್ಷ, ಯೋಗಾರಿಷ್ಟದಲ್ಲಿ 20 ವರ್ಷ, ದೀರ್ಘಾಯುವಿನಲ್ಲಿ 120 ವರ್ಷ, ದಿವ್ಯಾಯುವಿನಲ್ಲಿ 1000 ವರ್ಷ, ಅಮಿತಾಯು ಸಹಸ್ರಾಧಿಕ ವರ್ಷ – ಈ ಕೊನೆಯ ಎರಡು ಪುಣ್ಯವಂತರಿಗೆ ಮಾತ್ರ ಲಭ್ಯ.

## ಅಮಿತ ದಿವ್ಯ ಯುಗಾಂತರ ಆಯು

ಕರ್ಕೋದಯೇ ಶಶಿ ಗುರು ಕೇಂದ್ರಗೌ ಬುಧ ಭಾರ್ಗವೌ ।
ಶೇಷಾ ಸ್ತ್ರೀಲಾಭರಿಪುಗಾ ಅಮಿತಾಯುಃ ಪ್ರದಾ ಗ್ರಹಾಃ ॥೫೪॥

ಕ್ರೂರೌ ಸ್ತ್ರೀಲಾಭರಿಪುಗಾಃ ಕೇಂದ್ರಕೋಣಗತಾಃ ಶುಭಾಃ ।
ನಿಧನೆ ಶುಭರಾಶಿಸ್ತೆ ದಿವ್ಯಾಯುಃ ಸ್ಯಾನ್ನರಸ್ತದಾ ॥೫೫॥

ಜೀವೆ ಕೇಂದ್ರೆ ಗೋಪುರಾಂಶೆ ಸಿತೆ ಪಾರಾವತಾಂಶಕೆ ।
ತ್ರಿಕೋಣೆ ಕರ್ಕಟತನೌ ಜಾತೋ ಜೀವೇದ್ ಯುಗಾವಧಿ ॥೫೬॥

ಪಾರಾವತಾಂಶಕೆ ಭೌಮೆ ದೇವಲೋಕಕಾಂಶಕೆ ಶನೌ ।
ಜೀವೆ ಸಿಂಹಾಸನೆ ಲಗ್ನೆ ಜಾತಕೋ ಮುನಿಸನ್ನಿಭಃ ॥೫೭॥

ಕರ್ಕಲಗ್ನದಲ್ಲಿ ಗುರು, ಚಂದ್ರರು, ಬುಧ, ಶುಕ್ರ ಕೇಂದ್ರಗತರಾಗಿದ್ದು ಶೇಷ ಗ್ರಹಗಳು ತ್ರಿಷಡಾದಿಗಳಲ್ಲಿದ್ದರೆ ಜಾತಕ ಅಮಿತಾಯು ಯುತನಾಗುತ್ತಾನೆ. ಪಾಪಗ್ರಹ ತ್ರಿಷಡಾದಿಗಳಲ್ಲಿ ಶುಭಗ್ರಹ ಕೇಂದ್ರ ಅಥವಾ ತ್ರಿಕೋನದಲ್ಲಿರಲು

ಅಷ್ಟಮ ಸ್ಥಾನ ಶುಭಗ್ರಹ ರಾಶಿಯದಾಗಿದ್ದರೆ ಜಾತಕ ದಿವ್ಯಾಯುವಂತನಾಗುತ್ತಾನೆ. ಕೇಂದ್ರಸ್ಥ ಗುರು ಗೋಪುರಾಂಶದಲ್ಲಿ ಹಾಗೂ ತ್ರಿಕೋನಸ್ಥ ಶುಕ್ರ ಪಾರಾವತಾಂಶದಲ್ಲಿ ಶನಿ ದೇವಲೋಕಾಂಶದಲ್ಲಿದ್ದರೆ ಸಿಂಹಾಸನಸ್ಥ ಗುರು ಲಗ್ನದಲ್ಲಿದ್ದರೆ ಜಾತಕ ಮುನಿಸದೃಶ್ಯ ಆಯುಷ್ಯವಂತನಾಗುತ್ತಾನೆ.

## ಪೂರ್ಣಾಯು ಯೋಗ

ಸುಯೋಗಾದ್‌ಯುಷೋ ವೃದ್ಧಿಃ ಕುಯೋಗಾದ್ಹಾನಿ ರಿಷ್ಯತೆ ।
ತಸ್ಮಾದ್ಯೋಗಾ ಉದಿರ್ಯಂತೆ ಪೂರ್ಣ ಮಧ್ಯಾಲ್ಪ ಕಾರಕಾಃ ॥೫೮॥

ಸೌಮ್ಯ ಖೇಟಾನ್ವಿತೆ ಕೇಂದ್ರೆ ಸಶುಭೆ ಲಗ್ನಪೆ ಸತಿ ।
ಕಿಂವಾ ಜೀವೆಕ್ಷಿತೆ ತತ್ರ ಪೂರ್ಣಾಯುಃ ಸ್ಯಾನ್ನೃಣಾಂ ತದಾ ॥೫೯॥

ಲಗ್ನಪೆ ಕೇಂದ್ರಗೆ ಜೀವಭಾರ್ಗವಾಭ್ಯಾಂ ಸಮನ್ವಿತೆ ।
ವೀಕ್ಷಿತೆ ವಾ ವದೆದಾಯುಃ ಪೂರ್ಣಮೇವ ನ ಸಂಶಯಃ ॥೬೦॥

ಗ್ರಹೈಸ್ತ್ರೀಭಿಸ್ತು ತುಂಗಸ್ಥೈಸ್ತನುರಂಧ್ರಾಧಿಪಾನ್ವಿತೈಃ ।
ಪಾಪೈ ರ್ವಿವರ್ಜಿತೆ ಮೃತ್ಯೌ ಪೂರ್ಣಾಯು ನಿಯಂತಿ ತದಾ ॥೬೧॥

ತ್ರಿಭಿರ್ಗ್ರಹೈಸ್ತು ರಂಧ್ರಸ್ಥೈಃ ಸ್ವರ್ಕ್ಷತುಂಗ ಸುಹೃದ್ಗೃಗೈಃ ।
ಬಾಲಾಢ್ಯೆ ಲಗ್ನಪೆ ಚಾಪಿ ದೀರ್ಘ ಮಾಯುಃ ಸ್ಮೃತಾ ತದಾ ॥೬೨॥

ಸ್ವರ್ಕ್ಷತುಂಗ ಗತೆ ನಾಪಿ ಕೇನಚಿದ್ ದ್ಯುಚರೇಣ ಚೇತ್ ।
ಯುತೋ ರಂಧ್ರ ಪತಿರ್ವಾಪಿ ಮಂದೋ ದೀರ್ಘಾಯು ರಾದಿಶೇತ್ ॥೬೩॥

ವ್ಯರಿಲಾಭಗತೈಃ ಕ್ರೂರೈಃ ಸದ್‌ಗ್ರಹೈಃ ಕೇಂದ್ರಕೋಣಗೈಃ ।
ಬಲಾಢ್ಯೆ ಲಗ್ನಪೆ ದೀರ್ಘ ದಿಶೆದಾಯುರ ಸಂಶಯಮ್ ॥೬೪॥

ಮದಾರಿ ಮೃತ್ಯು ಭಾವಸ್ಥೈ ಗ್ರಹೈಃ ಸೌಮ್ಯೈ ದ್ವಿಜೋತ್ತಮ ।
ದುಶ್ಚಿಕ್ಯಾಯ ಗತೈಃ ಕ್ರೂರೈಃ ಪೂರ್ಣಮಾಯು ರ್ನೃಣಾಂ ಭವೇತ್ ॥೬೫॥

ಕ್ರೂರೈರ ರಿವ್ಯಯಗತೈಃ ಕೇಂದ್ರಗೆ ಲಗ್ನಪೆ ಸತಿ ।
ಮೃತಿಪೆ ಸೂರ್ಯ ಸುಹೃದಿ ಪೂರ್ಣಾಯುಃ ಸ್ಯಾನ್ನಃ ಸಂಶಯಃ ॥೬೬॥

ಕ್ರೂರಾ ರಂಧ್ರಸ್ಥಿತಾಃ ಕರ್ಮಭಾವೇಶಶ್ಚೆತಾ ಸ್ವತುಂಗಗಃ ।
ದೀರ್ಘಮಾಯುಸ್ತದಾಪಿ ಸ್ಯಾಜ್ಜಾತಕಸ್ಯ ನ ಸಂಶಯಃ ॥೬೭॥

ದ್ವಿಸ್ವಭಾವ ಸ್ಥಿತೆ ಲಗ್ನೆ ಲಗ್ನಪೆ ಕೇಂದ್ರಗೆ ಸತಿ ।
ಸ್ವರ್ಕ್ಷೆ ತುಂಗೆ ತ್ರಿಕೋಣೆ ವಾ ದೀರ್ಘಾಯುರ್ಜಾಯತೆ ಜನಃ ॥೬೮॥

ತನೌ ತು ದ್ವಿಸ್ವಭಾವಸ್ಥೆ ಬಲಿನೋ ಲಗ್ನಪಾದ್ಯಾದಿ ।
ಕ್ರೂರೌ ಕೇಂದ್ರಗತೌ ಸ್ಯಾತಾಂ ತರ್ಹಿ ದೀರ್ಘಾಯುರಾದಿಶೇತ್ ॥೬೯॥

ಸುಯೋಗದಿಂದ ಆಯುವೃದ್ಧಿ ಹಾಗೂ ಕ್ರೂರ ಯೋಗ ಆಯುವಿನ ಹ್ರಾಸ ವಾಗುತ್ತದೆ. ಅದಕ್ಕಾಗಿ ದೀರ್ಘಾಯು, ಮಧ್ಯಾಯು, ಅಲ್ಪಾಯುಕಾರಕ ಯೋಗ ಗಳನ್ನು ಹೇಳುತ್ತೇನೆ. ಕೇಂದ್ರದಲ್ಲಿ ಸದ್‌ಗ್ರಹ ಯುಕ್ತ ಹಾಗೂ ಲಗ್ನೇಶನು ಶುಭಾನ್ವಿತನಾದರೆ ಗುರುವಿನಿಂದ ನೋಡಲ್ಪಟ್ಟರೆ ಜಾತಕ ಪೂರ್ಣಾಯುವಾಗು ತ್ತಾನೆ. ಲಗ್ನೇಶ, ಅಷ್ಟಮೇಶನಿಂದ ಯುಕ್ತ ಮೂರು ಗ್ರಹಗಳು ತಮ್ಮ ತಮ್ಮ ಉಚ್ಚದಲ್ಲಿದ್ದರೆ ಹಾಗೂ ಅಷ್ಟಮ ಪಾಪವರ್ಜಿತವಾಗಿದ್ದರೆ ನಿಶ್ಚಯಪೂರ್ವಕ ಜಾತಕ ಪೂರ್ಣಾಯುವಾಗುತ್ತದೆ. ಅಷ್ಟಮಸ್ಥ ಮೂರು ಗ್ರಹ ಸ್ವಭವನ ಸ್ವೋಚ್ಚ ಸ್ವಮಿತ್ರ ಕ್ಷೇತ್ರಸ್ಥರಾಗಿದ್ದು ಲಗ್ನೇಶನು ಪ್ರಬಲನಾಗಿದ್ದರೆ ಜಾತಕ ದೀರ್ಘಾಯು. ಅಷ್ಟಮೇಶ ಅಥವಾ ಶನಿ ಯಾವುದೇ ಸ್ವಗ್ರಹ ಅಥವಾ ತನ್ನುಚ್ಚದಲ್ಲಿ ಸ್ಥಿತ ಗ್ರಹದ ಜೊತೆಗಿದ್ದರೆ ಜಾತಕ ದೀರ್ಘಾಯು, ಪಾಪಗ್ರಹ 3, 6, 11ರಲ್ಲಿ ಶುಭಗ್ರಹ ಕೇಂದ್ರಗತ ಅಥವಾ ತ್ರಿಕೋನಸ್ಥ ಲಗ್ನೇಶನು ಪ್ರಬಲನಾಗಿದ್ದರೆ, ನಿಸ್ಸಂದೇಹ ಜಾತಕ ದೀರ್ಘಾಯು, ಶುಭಗ್ರಹ 6, 7, 8ನೇ ಭಾವಗಳಲ್ಲಿ ಪಾಪಗ್ರಹ 3, 11ರಲ್ಲಿದ್ದರೆ ಜಾತಕ ದೀರ್ಘಾಯು, ಪಾಪಗ್ರಹ 6, 12 ಲಗ್ನೇಶ ಕೇಂದ್ರದಲ್ಲಿ ಹಾಗೂ ಅಷ್ಟಮೇಶ ಸೂರ್ಯನ ಮಿತ್ರನಾಗಿದ್ದರೆ ಜಾತಕ ದೀರ್ಘಾಯು, ಪಾಪಗ್ರಹ ಅಷ್ಟಮದಲ್ಲಿ ಹಾಗೂ ಕರ್ಮೇಶ (10) ತನ್ನ ಉಚ್ಚಗತನಾಗಿದ್ದೆ ಜಾತಕ ದೀರ್ಘಾಯು, ಲಗ್ನ ದ್ವಿಸ್ವಭಾವ ರಾಶಿಯದಾಗಿ ಲಗ್ನೇಶ ಕೇಂದ್ರದಲ್ಲಿ ಸ್ವಭವನ ಅಥವಾ ಸ್ವತ್ರಿಕೋನ ಸ್ವೋಚ್ಚ ಅಥವಾ ತ್ರಿಕೋನದಲ್ಲಿದ್ದರೆ ಜಾತಕ ದೀರ್ಘಾಯು. ಲಗ್ನ ದ್ವಿಸ್ವಭಾವ ರಾಶಿಯಾಗಿ ಹಾಗೂ ಬಲಿಷ್ಠ ಲಗ್ನೇಶನ ಜೊತೆಗೆ ಎರಡು ಪಾಪ ಗ್ರಹಗಳು ಕೇಂದ್ರ ದಲ್ಲಿದ್ದರೆ ಜಾತಕ ದೀರ್ಘಾಯುವಾಗುತ್ತಾನೆ.

## ದೀರ್ಘಮಧ್ಯಮಾಯು ಯೋಗ

ಲಗ್ನರಂಧ್ರಪಯೋರ್ಮಧ್ಯೆ ಗ್ರಹೋಯಃ ಸ್ಯಾದ್ ಬಲಾಧಿಕಃ ।
ತಸ್ಮಿಂಶ್ಚ ಕೇಂದ್ರಗೆ ದೀರ್ಘಮಾಯು ರ್ಜಾತಸ್ಯ ನಿಶ್ಚಿತಮ್ ॥೭೦॥

ಮಧ್ಯಮಂ ಸ್ಯಾತ್ ಪಣಫರೆಸ್ಥಿತ ಆಪೋಕ್ಲಿಮೋಲ್ಪಕವ್ ।
ಲಗ್ನಪೆ ಸೂರ್ಯಸುಹ್ರಾದಿ ಸ್ಯಾಧಿಘಂ ತು ಸಮೇ ಸುಮವ್ ॥೭೦॥

ಸ್ವಲ್ಪಮಾಯೂ ರಿಪೌ ತದ್ವದ್ವೈದ್ಯಂ ರಂಧ್ರಾಧಿಪಾದಪಿ ।
ಸುಹೃತ್ಸಮಾ ರಾಶಿಸ್ಥೆ ನತ್ರೈವಂ ಫಲಾಮಾದಿಶೇತ್ ॥೭೧॥

ಲಗ್ನೇಶ ಅಷ್ಟಮೇಶರ ನಡುವೆ ಅಧಿಕ ಬಲಶಾಲಿ ಗ್ರಹ ಕೇಂದ್ರಗತವಾಗಿದ್ದರೆ ದೀರ್ಘಾಯು, ಪಣಫರಸ್ಥವಾಗಿದ್ದರೆ ಮಧ್ಯಮಾಯು ಹಾಗೂ ಆಪೋಕ್ಲಿಮದಲ್ಲಿ ಅಲ್ಪಾಯುಷ್ಯವಂತನೆನ್ನುವರು. ಲಗ್ನೇಶ ಸೂರ್ಯನ ಮಿತ್ರನಾಗಿದ್ದರೆ ದೀರ್ಘಾಯು, ಸಮನಾಗಿದ್ದರೆ ಮಧ್ಯಮಾಯು, ಶತ್ರುವಾಗಿದ್ದರೆ ಅಲ್ಪಾಯುವೆಂದು ಹೇಳುವುದು. ಇದೇ ತರಹ ಅಷ್ಟಮೇಶನಿಂದಲೂ ಫಲ ಹೇಳುವುದು. ಲಗ್ನೇಶ, ಅಷ್ಟಮೇಶ ಸ್ವಕ್ಷೇತ್ರದಲ್ಲಿದ್ದರೆ ದೀರ್ಘಾಯು, ಸಮರಾಶಿ ಗತನಾದರೆ ಮಧ್ಯಮಾಯು ಹಾಗೂ ಶತ್ರುರಾಶಿ ಗತನಾದರೆ ಅಲ್ಪಾಯು – ಈ ರೀತಿ ಸಮಯೋಚಿತ ಫಲಾದೇಶ ಹೇಳುವುದು.

## ಅಲ್ಪಾಯು ಯೋಗ

ವಿಕ್ರಮೇಶಕುಜಾದ್ವೌ ವಾ ಮೃತ್ಯುನಾಥಾರ್ಕನಂದನೌ ।
ಕ್ರೂರೆ ಕ್ಷಿತಯುತವಸ್ತೌ ವಾ ತದಾಲ್ಪಾಯು ರಾದಿಶೇತ್ ॥೭೩॥

ರಿಪೌ ರಂಧ್ರೆಥವಾ ರಿಪ್ಫೆ ಸಕ್ರೂರೆ ಲಗ್ನಪೆ ಸತಿ ।
ಸದ್‌ದೃಷ್ಟಿಯುತ ಹೀನೋ ತು ಸ್ವಲ್ಪಾಯುರ್ವಾ ಪ್ಯಸಂತತಿಃ ॥೭೪॥

ಯದಿ ಕೇಂದ್ರಗತಾಃ ಕ್ರೂರಾಃ ಸೌಮ್ಯಖೇಟೈರ ವೀಕ್ಷಿತಾಃ ।
ನಿರ್ಬಲೋ ಲಗ್ನಪಶ್ಚ ಸ್ಯಾತ್ ಜಾತೋತ್ರಾಲ್ಪಾಯುರೀರಿತಃ ॥೭೫॥

ಧನೆ ಸಪಾಪೆ ರಿಪ್ಫೆ ಚ ಸದ್‌ಗ್ರಹೆ ಕ್ಷಣ ವರ್ಜಿತೆ ।
ಸತ್ಸೈಟಯುತ ಹೀನೆ ಚ ಸಲ್ಪಮಾಯುರ್ವಿನಿರ್ದಿಶೇತ್ ॥೭೬॥

ನಿರ್ಬಲೌ ಲಗ್ನಮೃತಿ ಪಾವಸ್ಥನೀಚಾದಿಗೌ ಯದಿ ।
ತದಾಲ್ಪಾಯುಃ ಸದಸತೋರ್ಯೋಗಾನ್ಮಧ್ಯಾಯುರೀರಿತಮ್ ॥೭೭॥

ತೃತೀಯಾಧಿಪ (ವಿಕ್ರಮೇಶ) ಹಾಗೂ ಮಂಗಳ ಇಬ್ಬರು ಅಷ್ಟಮೇಶ ಹಾಗೂ ಶನಿ ಪಾಪಗ್ರಹಯುಕ್ತ ಅಥವಾ ದೃಷ್ಟವಾದರೆ ಅಸ್ತಂಗತರಾಗಿದ್ದರೆ ಜಾತಕ ಅಲ್ಪಾಯುವಾಗುತ್ತಾನೆ. 6, 8 ಹಾಗೂ 12ರಲ್ಲಿ ಸಪಾಪ ಲಗ್ನೇಶನಿದ್ದು ಅವನ

ಮೇಲೆ ಶುಭ ಗ್ರಹಗಳ ದೃಷ್ಟಿ ಅಥವಾ ಸಂಯೋಗವಿರದಿದ್ದರೆ ಜಾತಕನು ಅಲ್ಪಾಯು ವಾಗುತ್ತಾನೆ ಹಾಗೂ ನಿಃಸಂತಾನಯುತನಾಗುತ್ತಾನೆ. ಕೇಂದ್ರಸ್ಥ ಪಾಪಗ್ರಹಗಳ ಮೇಲೆ ಶುಭಗ್ರಹದ ದೃಷ್ಟಿಯಿರದಿದ್ದರೆ ಹಾಗೂ ಲಗ್ನೇಶ ದುರ್ಬಲನಾಗಿದ್ದರೆ ಜಾತಕ ಅಲ್ಪಾಯು, ದ್ವಿತೀಯ ಹಾಗೂ ದ್ವಾದಶದಲ್ಲಿ ಪಾಪಗ್ರಹ ಯುಕ್ತವಾಗಿ ಶುಭಗ್ರಹದ ದೃಷ್ಟಿಯಿರದಿದ್ದರೆ (ಸಂಯೋಗ) ಜಾತಕ ನಿಸ್ಸಂದೇಹ ಅಲ್ಪಾಯು. ಲಗ್ನೇಶ, ಅಷ್ಟಮೇಶ ಎರಡೂ ಗ್ರಹಗಳು ಅಸ್ತಂಗತರಾಗಿದ್ದರೆ ಅಲ್ಪಾಯು. ಆದರೆ ಶುಭಗ್ರಹ ಯೋಗವಾದರೆ ಮಧ್ಯಮಾಯುವೆಂದು ಹೇಳುವುದು.

**ಇತಿ ಬೃಹತ್ ಪರಾಶರ ಹೋರಾ ಶಾಸ್ತ್ರೇ ಆಯುರ್ದಾಯಾಧ್ಯಾಯಃ ಸಮಾಪ್ತಿಃ**



## ೪೫ನೇ ಅಧ್ಯಾಯ

# ಅಥ ಮಾರಕ ಭೇದಾಧ್ಯಾಯಃ

### ಮೈತ್ರೇಯ ಉವಾಚ:

ಭಗವಾನ್ । ವಿವಿಧಾ ಯೋಗಾ ಶ್ರಾವಿತಾ ಭವತಾ ಪುರಾ ।
ಅಧುನಾ ಬ್ರೂಹಿ ಕೃಪಾಯ ಭೇದಾನ್ ಮಾರಕ ಸಂಭವಾನ್ ॥೧॥

### ಮೈತ್ರೇಯ ಕೇಳಿದರು–

ಹೇ ಭಗವಾನ್, ತಾವು ಬಹಳಷ್ಟು ಆಯುರ್ಯೋಗ ಹೇಳಿದ್ದಿರಿ. ಈಗ ಕೃಪೆ ಮಾಡಿ ಮಾರಕಭೇದ ಹೇಳಿರಿ.

### ಪರಾಶರ ಉವಾಚ–

ಅತಃಪರಂ ಚ ತೆ ವಚ್ಮಿ ಶೃಣು ಮಾರಕಲಕ್ಷಣಮ್ ।
ಯಜ್ಞಾನತೋ ನೃಣಾಮಾಯು ನಿರ್ಣಯೋ ಸ್ಯುರ್ಬುಧಾಃ ಕ್ಷಮಾಃ ॥೨॥

ತ್ರಿವಿಧಾಸ್ತ್ವಾಯುಷೆ ಯೋಗಾಃ ಸ್ವಲ್ಪಾಯುರ್ಮಧ್ಯಮೋತ್ತಮಾಃ ।
ದ್ವಾತ್ರಿಂಶತ್ ಪೂರ್ವಮಲ್ಪಾಯುರ್ಮಧ್ಯಮಾಯುಸ್ತತೋ ಭವೇತ್ ॥೩॥

ಚತುಷಷ್ಠ್ಯಯಾಃ ಪುರಸ್ತಾತ್ತು ತತೋ ದೀರ್ಘಮುದಾಹೃತಮ್ ।
ಉತ್ತಮಾಯುಃ ಸತಾದೂರ್ಧ್ವ ಜ್ಞಾತವ್ಯಂ ಮುನಿಸತ್ತಮ ॥೪॥

ಚತುರ್ವಿದಂಶತಿ ವರ್ಷಾಂತಮಾಯುರ್ಜ್ಞಾತುಂ ನ ಶಕ್ಯತೆ ।
ಜಪಹೋಮಚಿಕಿ ತ್ಸಾದ್ಯೈರ್ಬಾಲರಕ್ಷಾಂ ಚ ಕಾರಯೇತ್ ॥೫॥

ಪಿತೃದೋಷೈರ್ಮಾತೃದೋಷೈ ರ್ಬ್ರಿಯಂತೆ ಕೆಚದನ್ಯಥಾ ।
ಸ್ವಕೀಯಾರಿಷ್ಟಯೋಗಾಚ್ಚ ತ್ರಿವಿಧಾ ಬಾಲ ಮೃತ್ಯವಃ ॥೬॥

### ಪರಾಶರರು ಹೇಳಿದರು–

ಈಗ ನಾನು ಕಾರಕ ಲಕ್ಷಣ ಹೇಳುತ್ತೇನೆ ಕೇಳು ಇದರಿಂದ ಆಯಸ್ಸನ್ನು ನಿರ್ಣಯಿಸಲು ಬರುವುದು ಹಾಗೂ ಇದರಲ್ಲಿ ಪಂಡಿತನಾಗುವ ಸ್ವಲ್ಪಾಯು, ಮಧ್ಯಮಾಯು, ಉತ್ತಮಾಯು ಈ ತ್ರಿವಿಧ ಆಯುಯೋಗ ಹೇಳಲ್ಪಟ್ಟಿದೆ. 32 ವರ್ಷಗಳವರೆಗೆ ಅಲ್ಪಾಯು, 32 – 64 ಮಧ್ಯಮಾಯು ಹಾಗೂ 64ರಿಂದ

ದೀರ್ಘಾಯು, 100ಕ್ಕಿಂತ ಅಧಿಕ ಆಯು ಉತ್ತಮಾಯುವೆಂದು ಹೇಳಲ್ಪಟ್ಟಿದೆ. 24 ವರ್ಷದವರೆಗೆ ತಪ್ಪಿಯೂ ಆಯುಜ್ಞಾನ ಮಾಡಕೂಡದು. ಅಲ್ಲಿಯವರೆಗೆ ಜಪ, ಹೋಮ, ಚಿಕಿತ್ಸಾದಿಗಳ ಮೂಲಕ ಮಗುವಿನ ರಕ್ಷಣೆ ಮಾಡುವುದು. ಜಾತಕನ ಮಗು ಪಿತೃ ದೋಷದಿಂದ ಅಥವಾ ಮಾತೃ ದೋಷದಿಂದ ಮರಣವನ್ನಪ್ಪಬಹುದು. ಕೆಲವು ಮಕ್ಕಳು ಬಾಲಾರಿಷ್ಟದಿಂದ ಮರಣ ಹೊಂದುವವು. ಈ ರೀತಿ ಮಕ್ಕಳ ಮರಣ ದಲ್ಲಿ ಮೂರು ಕಾರಣಗಳಿವೆ.

## ಮಾರಕ ಸ್ಥಾನ

ತನೋ ರಂಧ್ರಂ ತೃತೀಯಶ್ಚ ಸ್ಥಾನದ್ವಿತಯಮಾಯುಷಃ ।
ತದ್ವ್ಯಯಸ್ಥಂ ದ್ವಿತೀಯಂ ತು ಸಪ್ತಮಂ ಚಾಪಿ ಮಾರಕಮ್ ॥೭॥

ಸಪ್ತಮಾಪೇಕ್ಷಯಾ ತತ್ರ ದ್ವಿತೀಯಂ ಪ್ರಬಲಂ ಮತಮ್ ।
ಏತಯೋದಧಿಪೌ ವೈತತ್ ಸ್ಥಾನಗಾ ಅಶುಭಾಸ್ತಥಾ ॥೮॥

ಏತದೀಶಯುತಾಶ್ಚಾಪಿ ಮಾರಕಾಖ್ಯಃ ಸಮೇ ಸ್ಮೃತಾಃ ।
ದಶಾಂತರ ದಶಾಸ್ವಿಷಾಂ ನೃಣಾಂ ಮರಣಸಂಭವಃ ॥೯॥

ಅಲಾಭೆ ಪುನರೇತೆಷಾಂ ಸಂಬಂಧೇನ ವ್ಯಯೇಶಿತುಃ ।
ಕಚ್ಚಿಚ್ಛುಮಾನಾಂ ಚ ದಶಾಸ್ವಷ್ಟಮೇಶದಶಾಸು ಚ ॥೧೦॥

ಕೇವಲಾನಾಂ ಚ ಪಾಪಾನಾಂ ದಶಾಸುಂ ನಿಧನಂ ಕ್ವಚಿತ್ ।
ಕಲ್ಪನೀಯಂ ಬುಧೈರ್ನಣಾಂ ಮಾರಕಾಣಾಮದರ್ಶನೆ ॥೧೧॥

ಸತ್ಯಾಪಿ ಸ್ವೇನ ಸಂಬಂಧೇನ ಹಂತಿ ಶುಭಭುಕ್ತಿಷು ।
ಹಂತಿ ಸತ್ಯಪ್ಯ ಸಂಬಂಧೆ ಮಾರಕಃ ಪಾಪಭುಕ್ತಿಷು ॥೧೨॥

ಮಾರಕೈ ಸಹ ಸಂಬಂಧಾನ್ನಿಹಂತಾ ಪಾಪಕೃಚ್ಛನಿಃ ।
ಅತಿಕ್ರಮ್ಯೆತರಾನ್ ಸರ್ವಾನ್ ಭವತ್ಯೇವ ನ ಸಂಶಯಃ ॥೧೩॥

ಲಗ್ನದಿಂದ ಅಷ್ಟಮ ಹಾಗೂ ತೃತೀಯ ಆಯುಸ್ಥಾನಗಳಾಗಿವೆ. ಆಯುಸ್ಥಾನ ದಿಂದ ಹನ್ನೆರಡು (3ರಿಂದ 12) ಲಗ್ನದಿಂದ ದ್ವಿತೀಯ ಹಾಗೂ ಏಳನೇ ಮನೆ ಮಾರಕಸ್ಥಾನಗಳೆಂದು ಕರೆಯಲ್ಪಡುತ್ತವೆ. ಈ ಎರಡರಲ್ಲಿ ಯಾವುದು ಪ್ರಬಲವೋ ಅಂದರೆ ಸಪ್ತಮ ಸ್ಥಾನಕ್ಕಿಂತ ಮಾರಕನಾಗಿ ದ್ವಿತೀಯೇಶ ಪ್ರಬಲ ಮಾರಕಸ್ಥಾನ ಅಧಿಪ ಅಥವಾ ಅಲ್ಲಿದ್ದ ಪಾಪಗ್ರಹ ಹಾಗೂ ಮಾರಕೇಶನ ಜೊತೆಗಿರುವ ಗ್ರಹ

ಎಲ್ಲವುಗಳು ಮಾರಕಗಳೆಂದು ಕರೆಯಲ್ಪಡುತ್ತವೆ. ಈ ಮಾರಕ ಗ್ರಹಗಳ ದಶಾ ಅಂತರದಶಾದಲ್ಲಿ ಮರಣ ಸಂಭವಿಸುತ್ತದೆ. ಆಯುರ್ದಾನ ಯೋಗಾನುಸಾರ ಮಾರಕದ ಸಮಯ ಬರದಿದ್ದಲ್ಲಿ ಕೆಲವು ವೇಳೆ ದ್ವಾದಶೇಶ ಸಂಬಂಧ ಶುಭಗ್ರಹ ದಶಾದಲ್ಲಿಯೂ ಮರಣ ಸಂಭವ. ಕೆಲವು ವೇಳೆ ಕೇವಲ ಪಾಪಗ್ರಹ ದಶಾ ಅಂತರ ದಶಾದಲ್ಲಿಯೂ ಮರಣ ಸಂಭವ. ಈ ಪ್ರಕಾರ ಮಾರಕೇಶನ ಅಭಾವದಲ್ಲಿಯೂ ವಿದ್ವದ್‌ಗಣ ಮರಣದ ಯಥಾವತ್ ಕಲ್ಪನೆ ಮಾಡಿ ಮಾರಕದ ನಿಶ್ಚಯ ಮಾಡುವುದು. ಮಾರಕಗ್ರಹ ತನ್ನ ಜೊತೆ ಸಂಬಂಧವಿರುವ ತ್ರಿಕೋಣ (ಶುಭಗ್ರಹ)ದ ಅಂತರ ದಶಾದಲ್ಲಿ ಮರಣ ತರಲಾರದು. ಪ್ರತ್ಯೇಕ ಸಂಬಂಧವಿಲ್ಲದೆ ಪಾಪಗ್ರಹದ ಅಂತರ ದಶಾದಲ್ಲಿ ಮಾರಕವಾಗುತ್ತದೆ. ಮಾರಕೇಶನ ಜೊತೆಗೆ ಸಂಬಂಧವಿದ್ದರೆ ಪಾಪಕಾರಿ ಶನಿ – ಉಳಿದೆಲ್ಲ ಮಾರಕಗಳನ್ನು ಓಡಿಸಿ ಸ್ವತಃ ಮರಣ ಕಾರಕ ವಾಗುತ್ತದೆ. ಇದರಲ್ಲಿ ಸಂದೇಹವೇ ಇಲ್ಲ.

## ಅನ್ಯಮಾರಕ ಲಕ್ಷಣ

ಅಥಾಪರಂ ಚ ತೇ ವಚ್ಮಿ ಶೃಣು ಮಾರಕ ಲಕ್ಷಣಾ ।
ಅಲ್ಪಾಯು ಯೋಗಜಾತಸ್ಯ ವಿಪತ್ತಾರಾ ಮೃತಿಪ್ರದಾ ॥೧೪॥

ಪ್ರತ್ಯರೌ ಮೃತಿ ಮಾಪ್ನೋತಿ ಮಧ್ಯಾಯು ರ್ಯೋಗ ಜಾತಕಃ ।
ದೀರ್ಘಾಯು ರ್ಯೋಗ ಜಾತಾನಾಂ ವಧಭೆ ತು ಮೃತಿರ್ಭವೇತ್ ॥೧೫॥

ಷಷ್ಠದ್ರೇಷ್ಕಾಣ ಪಶ್ಚೈವ ತಥಾ ವೈನಾಶಿಕಾಧಿಪಃ ।
ವಿಪತ್ತಾರಾ ಪ್ರತ್ಯರೀಶಾ ವಿಧಭೇಶಾಸ್ತ್ರಥೈವ ಚ ॥೧೬॥

ಆದ್ಯಾಂತಪೌ ಚ ವಿಜ್ಞೇಯೌ ಚಂದ್ರಾಕ್ರಾಂತ ಗ್ರಹತ್ತಥಾ ।
ಪಾಪಗ್ರಹೈ ಮಾರಕೌ ಚೇಚ್ಛುಭೌ ತಾವಾಮಯಪ್ರದೌ ॥೧೭॥

ಷಷ್ಠಾಧಿಪದಶಾಯಾಂ ಚ ನಿಧನಂ ಪ್ರಾಯಶೋ ನೃಣಾಮ್ ।
ಷಷ್ಠಾಷ್ಟರಿಪ್ಫನಾಥಾನಾಮಪಹಾರೆ ಮೃತ ದ್ವಿಜಂ ॥೧೮॥

ಮಾರಕಾ ಬಹವಃ ಖೇಟಾ ಯದಿ ವೀರ್ಯಸಮನ್ವಿತಾಃ ।
ತತ್ತದ್ದಶಾಂತರೆ ವಿಪ್ರ । ರೋಗಕಷ್ಟಾದಿ ಸಂಭವಃ ॥೧೯॥

ಮಾರಕಾಯೋ ನಿನಾದಿತಾಸ್ತೆಷಾಂ ಯಃ ಪ್ರಬಲೋ ಭವೇತ್ ।
ಸ ಏವತು ಯಥಾವಸ್ಥಂ ಮೃತ್ಯುದೋ ವಾಮಯ ಪ್ರದಃ ॥೨೦॥

ಈಗ ನಾನು ಎರಡನೇ ಮಾರಕ ಲಕ್ಷಣ ಹೇಳುತ್ತೇನೆ ಕೇಳು. ಅಲ್ಪಾಯು ಯೋಗದಲ್ಲಿ ಉತ್ಪನ್ನ ಬಾಲಕನಿಗೆ ವಿಪತ್ತು. 3ನೇ ನಕ್ಷತ್ರ – ಒಂದು ಮಗು ರೋಹಿಣಿಯಲ್ಲಿ ಹುಟ್ಟಿದೆ ಎಂದಾದರೆ ಆರ್ದ್ರಾ ವಿಪತ್ತಾರೆಯಾಗಿ ಮೃತ್ಯುಪ್ರದ ವಾಗುತ್ತದೆ. ಮಧ್ಯಮಾಯೋತ್ಪನ್ನ ಜಾತಕನಿಗೆ ಪ್ರತ್ಯೇಕ ತಾರೆ ಅಂದರೆ 5ನೇ ತಾರೆ ಉದಾಹರಣೆಯಂತೆ ಪುಷ್ಯಾದಲ್ಲಿ ಮೃತ್ಯು ಅದರಂತೆ ದೀರ್ಘಾಯುವಿನಲ್ಲಿ 7ನೇ ತಾರೆ ನೈದನ ತಾರೆ (ಉದಾ – ಮಗ ಮೃತ್ಯು ಪ್ರದವಾಗುತ್ತದೆ. ಷಷ್ಠದ್ರೇಷ್ಕಾಣೇಶ ಹಾಗೂ ವಿನಾಶಕ ವಿಪುತ್ತು ನಿಧನ (ವದ) ನಕ್ಷತ್ರದಲ್ಲಿ – ಚಂದ್ರಾದಿಷ್ಟ ರಾಶಿಯ 2ರಲ್ಲಿ ಹಾಗೂ ದ್ವಾದಶದ ಸ್ವಾಮಿ – ಇಬ್ಬರು ಪಾಪಿಗಳಾಗಿದ್ದರೆ ಈ ಎಲ್ಲವುಗಳು ಮಾರಕವಾಗುತ್ತವೆ. ಎರಡು ಶುಭಗ್ರಹಗಳಾಗಿದ್ದರೆ ಕಷ್ಟಪ್ರದವಾಗುತ್ತದೆ. ಪ್ರಾಯಶಃ ಮನುಷ್ಯನ ಮೃತ್ಯು ಷಷ್ಠನ ದಶಾದಲ್ಲಿ ಸಂಭವವಿದೆ. ಷಷ್ಠೇಶ, ಅಷ್ಟಮೇಶ, ದ್ವಾದಶೇಶರ ಅಂತರ ದಶಾದಲ್ಲಿ – ಮೃತ್ಯು ಸಂಭವ – ಅದು ಮಾರಕೇಶನ ದಶಾ(ದ್ವಿತೀಯ ಅಥವಾ ಅಷ್ಟಮ)ದಲ್ಲಿ ಈ ಎಲ್ಲ ಮಾರಕ ಗ್ರಹಗಳಲ್ಲಿ ಹೆಚ್ಚು ಬಲಿಷ್ಠ ಗ್ರಹ ತನ್ನ ಅವಸ್ಥಾನುಸಾರ ಮರಣ ತರುತ್ತದೆ. (ಇಲ್ಲಿ ಗ್ರಹ ಅವಸ್ಥೆ ನೋಡುವುದು ಅವಶ್ಯ) ಕೆಲವು ಸಲ ಕಷ್ಟದಾಯಕವೂ ಆಗುತ್ತದೆ.

## ತಮೋಗ್ರಹದ ಮಾರಕತೆ

ತನಾವಸ್ತ್ರೆಷ್ಟಮೆ ರಿಷ್ಫೆ ಭವೇತಾಂ ಚೇತ್ತಮೋಗ್ರಹೌ ।
ಅಥವಾಸ್ತೆ ಮಾರಕೇಶಾದ್ ಮಾರಕಾಧಿಪಸಂಗತೌ ॥೨೦॥

ಮಾರಕೌ ತೌ ತು ವಿಜ್ಞೇಯೌ ದಶಾಂತರದಶಾಸ್ವಪಿ ।
ಅಲೌನಕ್ರೆಯಸ್ಯ ಜನ್ಮ ತಸ್ಯ ರಾಹುಸ್ತು ಮಾರಕಃ ॥೨೨॥

ರಾಹುರ್ನಿಜದ ಶಾಮಧ್ಯೆ ರಿಪು ರಂಧ್ರ ವ್ಯಯಸ್ಥಿತಃ ।
ನ ಸದ್‌ಗ್ರಹೆಕ್ಷಿತ ಯುತಸ್ತದಾ ಕಷ್ಟಕರಃ ಸ್ಮೃತಃ ॥೨೩॥

ತಮೋಗ್ರಹ (ರಾಹು, ಕೇತು) ಲಗ್ನ ಸಪ್ತಮ, ಅಷ್ಟಮ, ದ್ವಾದಶದಲ್ಲಿ ಅಥವಾ ಮಾರಕೇಶನಿಂದ ಸಪ್ತಮದಲ್ಲಿ ಅಥವಾ ಅವನ ಜೊತೆಗೆ ಇದ್ದರೆ ಮಾರಕರಾಗುತ್ತಾರೆ. ವೃಶ್ಚಿಕ, ಮಕರದಲ್ಲಿ ಜನ್ಮವಾದರೆ ಅವರಿಗೆ ರಾಹು ಮಾರಕನಾಗುತ್ತಾರೆ. 6,8,12ರಲ್ಲಿ ಸ್ಥಿತ ರಾಹು – ಶುಭಗ್ರಹ ದೃಷ್ಟ ಸಂಯೋಗ ರಹಿತನಾಗಿದ್ದರೆ ಕಷ್ಟಕಾರಕನಾಗುತ್ತಾನೆ.

## ಮೂರನೇ ಸ್ಥಾನದಿಂದ ಮರಣಜ್ಞಾನ

ತೃತಿಯೋ ಲಗ್ನತೋರ್ಕೇಣ ಸಬಲೇನ ಸಮಾನ್ವಿತೆ ।
ಭವೆನ್ಮೃತ್ರೇಯ । ಜಾತಸ್ಯ ಮರಣಾ ನೃಪಹೇತುಕಂ ॥೨೪॥

ತೃತೀಯೇ ಚಂದ್ರಯುಗ್ ದೃಷ್ಟೆ ಮರಣಾ ರಾಜಯಕ್ಷ್ಮಣಾ ।
ವೃಣೇನ ವಾಗ್ನಿಶಸ್ತ್ರಾದ್ಯೈಭೌಮೇನ ತು ಮೃತಿರ್ಭವೇತ್ ॥೨೫॥

ಮಂದಾಗುಯುತಿ ದೃಷ್ಟೆ ವಾ ತೃತೀಯೇ ತು ಮುನೆ ವಿಷಾತ್ ।
ಜಲಾದನಲದಾಹಾದ್ ವಾ ಗರ್ತ್ತೆ ನಿಪತನಾದಪಿ ॥೨೬॥

ಬಂಧನಾದುಚ್ಚ ಪಾತಾದ್ವಾ ಮೃತಿರ್ಜಾತಸ್ಯ ಸಂಭವೇತ್ ।
ಸೆಂದುನಾ ಗುಲಿಕೆನ್ಯೆವಂ ತತ್ರ ಯುಕ್ತೇಥವೇಕ್ಷಿತೆ ॥೨೭॥

ನಿಧನಂ ಕೃಮಿಕುಷ್ಠಾದಿ ಸಂಭವವಮ್ । ನಿಶ್ಚಿತಂ ಭವೇತ್ ।
ತೃತೀಯೋ ಜ್ಞೇಕ್ಷಿತಯುತೆ ಭವತಿ ಜ್ವರತೋ ಮೃತಿಃ ॥೨೮॥

ತತ್ರ ಜೀವೆಕ್ಷಿತ ಯುತೆ ಶೋಫಪರಬ್ಬಿತಿತೋ ಮೃತಿಃ ।
ಕವಿಯುತ್ತೇಕ್ಷಿತೆ ತತ್ರ ಪ್ರಮೇಹಾದ್ ಮೃತಿರ್ಭವೇತ್ ॥೨೯॥

ತತ್ರಾನೇಕ ಗ್ರಹಯುತೆ ಮೃತಿರ್ವಿವಿದ ಹೇತುಭಿಃ ॥೩೦॥

ಲಗ್ನದಿಂದ 3ರಲ್ಲಿ ಪ್ರಬಲ ಸೂರ್ಯನಿದ್ದರೆ ಜಾತಕನ ಮರಣ ರಾಜನ ಕಾರಣದಿಂದಾಗುತ್ತದೆ. ತೃತೀಯ ಸ್ಥಾನದಲ್ಲಿ ಚಂದ್ರನ ಯೋಗ ದೃಷ್ಟಿಯಿದ್ದರೆ ಕ್ಷಯದಿಂದ ಮೃತ್ಯು. ಅದೇ ತೃತೀಯ ಭಾವ ಭೌಮಯುತ ದೃಷ್ಟವಾದರೆ ವ್ರಣಶಸ್ತ್ರ ಅಥವಾ ಅಗ್ನಿಯಿಂದ ಮೃತ್ಯು. ಶನಿ, ರಾಹುಯುತ ದೃಷ್ಟವಾದರೆ ವಿಷದಿಂದ, ಜಲದಿಂದ ಅಗ್ನಿದಾಹದಿಂದ – ಮೇಲಿನಿಂದ ಬೀಳುವುದರಿಂದ ಬಂಧನದಿಂದ ಜಾತಕನ ಮೃತ್ಯುವಾಗುತ್ತದೆ – ತೃತೀಯ ಚಂದ್ರಯುತ ಮಾಂದಿಯಿಂದ ಸಹಿತ ದೃಷ್ಟವಾದರೆ ಕೃಮಿ ಕುಷ್ಠದಿಂದ ಮೃತ್ಯು ನಿಶ್ಚಯ. ಬುಧಯುತ ದೃಷ್ಟರಾದರೆ ಜ್ವರದಿಂದ – ಗುರುವಿನಿಂದ ಯುತ ದೃಷ್ಟವಾದರೆ ಇತರ ರೋಗದಿಂದ ಶುಕ್ರ ದೃಷ್ಟಯುತನಾದರೆ ಪ್ರಮೋಹದಿಂದ ಅನೇಕ ಗ್ರಹ ದೃಷ್ಟಿಯಿದ್ದರೆ ಅನೇಕ ಕಾರಣದಿಂದ ಮೃತ್ಯುವೆನ್ನಬೇಕಾಗುವುದು – ಸಬಲ, ನಿರ್ಬಲವಿದ್ದರೂ ಅನೇಕ ಕಾರಣಗಳು ಪ್ರತ್ಯಕ್ಷ, ಪರೋಕ್ಷ ಕಾರಣೀಭೂತವಾಗುತ್ತದೆ.

## ಮರಣ ದೇಶ

ತೃತೀಯೇ ಶುಭಯೋಗೇನ ಶುಭದೇಶೆ ಮೃತಿರ್ಭವೇತ್ ।
ಪಾಪೇನ ಕೀಟಕೆ ದೇಶೇ ಮಿಶ್ರೈರ್ಮಿಶ್ರಸ್ಥಲೆ ಮೃತಃ ॥೩೧॥

ತೃತೀಯ ಭಾವದಲ್ಲಿ ಶುಭ ಸಂಬಂಧ ಶುಭ ಗ್ರಹವಿದ್ದರೆ ತೀರ್ಥಯಾತ್ರಾದಿ ಶುಭ ಸ್ಥಾನದಲ್ಲಿ ಮೃತ್ಯು. ಪಾಪಯೋಗದಲ್ಲಿ ತೃತೀಯ ಸ್ಥಾನ ಹಾಗೂ ದುಃಖ ಸ್ಥಾನ ಪಾಪಯುತ ಶಾಸ್ತ್ರಗರ್ಹಿತವಾಗಿ ಶುಭ, ಪಾಪ ಎರಡು ಇದ್ದರೆ ಮಿಶ್ರಸ್ಥಾನದಲ್ಲಿ ಮೃತ್ಯು.

## ಜ್ಞಾನಪುರಸ್ಮರಣ

ತೃತೀಯೇ ಗುರು ಶುಕ್ರಾಭ್ಯಾಂ ಯುತೆ ಜ್ಞಾನೇನ ವೈ ಮೃತಿಃ ।
ಇತರೈರ್ದ್ಯುಚರೈರ್ಯುಕ್ತೆ ತ್ವ ಜ್ಞಾನೇನ ಸ್ಮೃತಾ ಹಿ ಸಾ ॥೩೨॥

ಗುರು, ಶುಕ್ರ ತೃತೀಯದಲ್ಲಿದ್ದರೆ ಜ್ಞಾನಪೂರ್ವಕ ಮೃತ್ಯು. ಅನ್ಯಗ್ರಹಗಳಿದ್ದರೆ ಅಜ್ಞಾನದಿಂದ ಮೃತ್ಯುವಾಗುತ್ತದೆ.

ತೃತೀಯಗೆ ತು ಚರಭೆ ಮೃತಿಃ ಸ್ಯಾದನ್ಯದೇಶಜಾ ।
ಸ್ಥಿರಭೆ ಸ್ವಗೃಹೆ ಜ್ಞೇಯ ದ್ವಿಭೆ ಜಾಯೆತ ವರ್ತ್ಮನಿ ॥೩೩॥

ತೃತೀಯದಲ್ಲಿ ಚರರಾಶಿಯಿದ್ದರೆ ಜಾತಕನ ಮೃತ್ಯು ಪರದೇಶದಲ್ಲಿ, ಸ್ಥಿರರಾಶಿಯಿದ್ದರೆ ಸ್ವಗ್ರಹದಲ್ಲಿ ಮತ್ಯುವಾದರೆ ಸಾಮಾನ್ಯತಃ, ದ್ವಿಸ್ವಭಾವ ರಾಶಿಯಿದ್ದರೆ ಮಾರ್ಗದಲ್ಲಿ ಮೃತ್ಯು.

## ಅನ್ಯಥಾ ಮರಣ ನಿಮಿತ್ತ

ಲಗ್ನತೋ ರಂಧ್ರತೋ ಮೃತ್ಯೋರ್ನಿಮಿತ್ತಂ ಸದ್ಭಿರೀರಿತಮ್ ।
ರವೌ ರಂಧ್ರಗತೆ ವಹ್ನೇರ್ಮೃತಿರಿಂದೌ ತು ವಾರಿಣಾ ॥೩೪॥

ಭೂಮಿಜೆ ಶಸ್ತ್ರತಃ ಸೌಮ್ಯೇ ಜ್ವರಾಜ್ಜೀವೆ ತು ರೋಗತಃ ।
ಕವೌ ತು ಕ್ಷುಧಾಯಾ ಮಂದೆ ಮೃತಃ ಸ್ಯಾತ್ತು ಪಿಪಾಸಾಯಾ ॥೩೫॥

ಲಗ್ನ ಹಾಗೂ ಅಷ್ಟಮ ಸ್ಥಾನದಿಂದ ಮರಣದ ನಿಮಿತ್ತವೆಂದು ಪರಿಗಣಿಸಲಾಗಿದೆ. ರವಿ ಅಷ್ಟಮದಲ್ಲಿದ್ದರೆ ವಹ್ನಿಯಿಂದ, ಚಂದ್ರನಿದ್ದರೆ ಜಲದಿಂದ, ಮಂಗಳನಿದ್ದರೆ ಶಸ್ತ್ರದಿಂದ, ಬುಧನಿದ್ದರೆ ಜ್ವರನಿಮಿತ್ತ, ಗುರುಯಿದ್ದರೆ ರೋಗದಿಂದ, ಶುಕ್ರನಿದ್ದರೆ ಕ್ಷುದ್ಬಾಧೆಯಿಂದ, ಶನಿಯಿದ್ದರೆ ನೀರಡಿಕೆಯಿಂದ ಮೃತ್ಯು ಸಂಭವಿಸು

ತ್ತದೆ. ಇವು ನಿಮಿತ್ತ ಕಾರಣಗಳು.

## ಮರಣ ನಂತರ ಶವಸ್ಥಿತಿ

ಅಸತ್‌ಸನ್ ಮಿಶ್ರಖೇಟಾನಾಂ ದ್ರೇಷ್ಕಾಣೌ ರಂಧ್ರಭಸ್ಥತೈಃ ।
ಶವಸ್ಯಾಂತೆ ಪರಿಣತಿರ್ಭಸಿತ ಕ್ಲೇಶೋಪಣ್ಯೈಃ ॥೩೬॥

ಅಹಿವರ್ಗದೃಕಾಣ್ಯೈಸ್ತು ಶ್ವಾನಗೋಮಾಯುಭಿರ್ಭವೇತ್ ।
ಶವಸ್ಯ ಭಕ್ಷಣಾ ಕಿಂವಾ ಗೃಧ್ರಾದಿಪ ವಿಹಗಂಗಮೈಃ ॥೩೭॥

ಅಷ್ಟಮ ಭಾವದಲ್ಲಿ ಕ್ರೂರ ದ್ರೇಷ್ಕಾಣವಾದರೆ ಶವದ ಪರಿಣಾಮ ಅಗ್ನಿಯಿಂದ ದಹಿಸಲಾಗುವುದು. ಶುಭಗ್ರಹ ದ್ರೇಷ್ಕಾಣವಿದ್ದರೆ ಜಲದಲ್ಲಿ ಪ್ರಕ್ಷೇಪನ ದಿಂದ ಹಾಗೂ ಮಿಶ್ರಗ್ರಹದಿಂದ ಅಂದರೆ ಮಿಶ್ರಗ್ರಹ ದೇಷ್ಕಾಣವಿದ್ದರೆ – ಶವ ಕೊಳೆತು ಹೋಗಬಹುದು. ಭೂಮಿಯಲ್ಲಿ – ಸಂಸ್ಕಾರ ಸರ್ಪ ದ್ರೇಷ್ಕಾಣವಿದ್ದರೆ ನಾಯಿ, ಹದ್ದು, ನರಿ ಆದಿ ಪಶು, ಪಕ್ಷಿಗಳ ಆಹಾರವಾಗಿ ಹೋಗುವುದು.

## ಸರ್ಪ ದ್ರೇಷ್ಕಾಣ

ಮದ್ಯೋಂತಿಮಃ ಕುಲಿಕೆ ಸ್ಯಾದಲೌ ಚಾದಿಮಧ್ಯಮೌ ।
ಜ್ಞೇಪೆ ತಥಾಂತಿಮಸ್ತ್ರಯಂ ಶೈರ ಹಿವರ್ಗಾ ಉದೀರಿತಃ ॥೩೮॥

ಕರ್ಕದಲ್ಲಿ 2ನೇ ಹಾಗೂ 3ನೇ ವೃಶ್ಚಿಕದಲ್ಲಿ ಪ್ರಥಮ ಹಾಗೂ 2ನೇ ಭಾಗ ಮೀನದ 3ನೇ ದ್ರೇಷ್ಕಾಣ ಸರ್ಪ ದ್ರೇಷ್ಕಾಣವೆಂದು ಕರೆಯಲ್ಪಡುತ್ತದೆ.

## ಪೂರ್ವಜನ್ಮಸ್ಥಾನ

ಸೂರ್ಯ ಚಂದ್ರಸೋರ್ಮದ್ಯೆಯೋ ಬಲಾಢ್ಯೋ ಭವೇದ್ ದ್ವಿಜ ।
ಸ ಚೇಜ್ಜೀವ ದೃಕಾಣಸ್ಥೋ ಜಾತ ಸ್ವರ್ಗಾತ್ ಸಮಾಗತಃ ॥೩೯॥

ಚಂದ್ರಕವ್ಯೋರಿಂದುಲೋಕಾದ್ ಮೃತ್ರ್ಯ ಲೋಕಾದಿನಾರಯೋಃ ।
ಶನಿಜ್ಞಾಯೇಸ್ತು ನಿಲಯಾದಿತಿ ಜನ್ಮಾಂಗತೋ ವದೇತ್ ॥೪೦॥

ಸೂರ್ಯ, ಚಂದ್ರರಲ್ಲಿ ಬಲಿಗ್ರಹ ಗುರು ದ್ರೇಷ್ಕಾಣಸ್ಥರಾಗಿದ್ದರೆ ಜಾತಕ ಸ್ವರ್ಗ ಲೋಕದಿಂದ ಬಂದಿರುವನೆಂದು, ಚಂದ್ರ, ಶುಕ್ರ ದ್ರೇಷ್ಕಾಣಸ್ಥನಾಗಿದ್ದರೆ ಚಂದ್ರ ಲೋಕದಿಂದ, ಶನಿ ಭೌಮ ದ್ರೇಷ್ಕಾಣದಿಂದ ಮೃತ್ಯು ಲೋಕದಿಂದಲೇ ಹಾಗೂ ಶನಿ, ಬುಧ ದ್ರೇಷ್ಕಾಣದಲ್ಲಿ ನರಕಲೋಕದಿಂದ ಬಂದಿರುವನೆಂದು ಗ್ರಹಿಸುವುದು.

## ಮರಣಾನಂತರ ಸ್ಥಿತಿ

ಕ್ರಮಾಜ್ಜೀವಃ ಕವೀಂದು ಚ ಕುಜಾರ್ಕೌ ಬುಧ ಸೂರ್ಯಜೌ ।
ಸುರೇಂದ ಭೂಮಿ ನರಕಾನ್ ನೇತಾರೋರಿಮದಾಷ್ಟಗಾಃ ॥೪೦॥
ರಿಪುರಂದು ದೃಕಾಣೇಶಮಧ್ಯೆ ಯಃ ಪ್ರಬಲೋ ಗ್ರಹಃ ।
ಸ ಸ್ವಂ ಲೋಕಂ ನಯೇದಂತೆ ಚೆನ್ನ ತತ್ರ ಗ್ರಹಸ್ಥಿತಿಃ ॥೪೨॥

ಗುರು, ಶುಕ್ರ, ಚಂದ್ರ, ಕುಜ, ರವಿ, ಬುಧ, ಶನಿ ಈ ಕ್ರಮದಲ್ಲಿ ಈ ಗ್ರಹಗಳು 6,7,8ರಲ್ಲಿದ್ದರೆ –

| | | |
|---|---|---|
| ಗುರು | --- | ದೇವಲೋಕ |
| ಶುಕ್ರ | --- | ಚಂದ್ರಲೋಕ |
| ಚಂದ್ರ | --- | ಮೃತ್ಯುಲೋಕ |
| ಕುಜ | --- | ನರಕಲೋಕ |
| ರವಿ | --- | ದೇವಲೋಕ |
| ಬುಧ | --- | ಚಂದ್ರಲೋಕ |
| ಶನಿ | --- | ಮೃತ್ಯುಲೋಕ |

ಕೆಳಮರಣಾನಂತರ ಹೋಗುತ್ತಾರೆ. ಅರ್ಥಾತ್ ಲಗ್ನದಿಂದ 6, 7, 8 ಸ್ಥಾನಗಳಲ್ಲಿ ಯಾವುದೇ ಸ್ಥಾನದಲ್ಲಿ ಗುರುವಿದ್ದರೆ ಮರಣಾನಂತರ ದೇವಲೋಕಕ್ಕೆ ಹೋಗುತ್ತಾನೆ – ಆ ಸ್ಥಾನಗಳಲ್ಲಿ ಅಧಿಕ ಗ್ರಹಗಳಿದ್ದರೆ ಬಲಿಗ್ರಹದಿಂದ ವಿಚಾರ ಮಾಡುವುದು. ಒಂದು ವೇಳೆ 6, 7, 8ರಲ್ಲಿ ಗ್ರಹಭಾವವಾದರೆ ಅಷ್ಟಮ ಭಾವದ ದ್ರೇಷ್ಕಾಣೇಶರಲ್ಲಿ ಬಲವಾನ್ ಗ್ರಹದ ಲೋಕಕ್ಕೆ ಹೋಗುತ್ತಾರೆ.

ಸ್ವತುಂಗಾದಿಸ್ಥಿತೆ ಸ್ವಸ್ಯೋತ್ತಮ ಮಧ್ಯಾವರಾಃ ಕ್ರಮಾತ್ ।
ತತ್ರಲ್ಲೋಕಾಂತರೆ ನೃಣಾಂ ಸ್ಥಿತಯೋ ಗದಿತಾ ಬುಧೈಃ ॥೪೩॥

ಉಕ್ತಗ್ರಹ ಉಚ್ಚಾದಿಸ್ಥಾನದಲ್ಲಿರಲು ಪರಲೋಕದಲ್ಲಿಯೂ ಉತ್ತಮ ಸ್ಥಾನ. ಸಮನಮನೆ ಮಧ್ಯಮ ನೀಚಾದಿ ಸ್ಥಾನದಲ್ಲಿದ್ದರೆ ಅಧಮ – ಪ್ರಾಪ್ತಿಯಾಗುವುದು – ಈ ರೀತಿ ತಿಳಿಯುವುದು.

ಉದಾಹರಿತ ಕುಂಡಲಿಯಲ್ಲಿ ಸಪ್ತಮದಲ್ಲಿ ಮಕರದ ಮಂಗಳನಿದ್ದು –

ನರಕವೆಂದರೂ ಉಚ್ಚಸ್ಥನಾಗಿರುವುದರಿಂದ ಹಾಗೂ ಗುರುವಿನ(ಭಾಗ್ಯಾಧಿಪನ) ಜೊತೆಗಿರುವುದರಿಂದ ಭೂಲೋಕದಲ್ಲಿಯೇ ಮತ್ತೆ ಉತ್ತಮ ಕುಲದಲ್ಲಿ ಜನ್ಮವೆತ್ತಿ ಪ್ರಸಿದ್ಧ ಪುರುಷನಾಗುವನು. ಗುರುವಿಗೆ ನೀಚತ್ವ ಭಂಗವಾಗುವುದರಿಂದ ಪ್ರಸಿದ್ಧ ಪುರುಷನಾಗುವನು.

**ಮಾರಕಸ್ಯೇತರೆ ಭೇದಾಯೇತು ರಾಶಿಗ್ರಹೋತ್ಥಿತಾಃ ।**
**ವಕ್ಷ್ಯಾಮಿ ತಾನ್ ದಶಾಧ್ಯಾಯವಸರೆ ತೇ ದ್ವಿಜೋತ್ತಮ ॥೪೪॥**

ರಾಶಿ ಗ್ರಹಜನ್ಯ ಮಾರಕ ಭೇದವನ್ನು ದಶಾಧ್ಯಾಯ ಅವಸರದಲ್ಲಿ ಪೂರ್ಣ ವಿವರಿಸುವೆ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಮಾರಕಭೇದಾಧ್ಯಾಯಃ ಸಮಾಪ್ತಿ**

## ೪೬ನೇ ಅಧ್ಯಾಯ

# ಅಥ ಗ್ರಹಾವಸ್ಥಾ ಫಲಾಧ್ಯಾಯಃ

### ಮೈತ್ರೇಯ ಉವಾಚ:

ಯದವಸ್ಥಾನುಸಾರೇಣ ಫಲಮುಕ್ತಂ ಖಚಾರಿಣಾಮ್ ।
ಸಭೇದಾಂ ತಾಮವಸ್ಥಾಂ ತು ಕೃಪಾಯ ಕಥಯಪ್ರಭೋ ॥೧॥

### ಮೈತ್ರೇಯರು ಕೇಳಿದುದು–

ಹೇ ಪ್ರಭೋ, ಅವಸ್ಥಾನುಸಾರ ಗ್ರಹಗಳ ಫಲಾದೇಶ ಮಾಡಲ್ಪಟ್ಟಿದೆಯೋ – ಆವಸ್ಥೆಗಳ ಭೇದಗಳೆಷ್ಟು ಲಕ್ಷಣ ಹೇಳಿರಿ.

### ಪರಾಶರ ಉವಾಚ–

ನಾನಾವಸ್ಥಾಸು ಖೇಟಾನಾಂ ಮುನಿಭಿಃ ಪರಿಕೀರ್ತಿತಾಃ ।
ಬಾಲಪ್ರಬೃತಯೋ ಮುಖ್ಯಾಸ್ತಾ ಬ್ರವಿಮೀ ಶೃಣು ದ್ವಿಜ ॥೨॥

### ಪರಾಶರರು ಹೇಳಿದುದು–

ಹೇ ದ್ವಿಜನೆ, ಕೇಳು, ಗ್ರಹಗಳ ಅನೇಕ ವಿಧ ಅವಸ್ಥೆಗಳಲ್ಲಿ ಬಾಲಾದಿಕ ಅವಸ್ಥೆಗಳು ಮುಖ್ಯವಾಗಿವೆ – ಆ ಅವಸ್ಥೆಗಳ ಬಗ್ಗೆ ಚಿತ್ತವಿಟ್ಟು ಕೇಳು.

### ಸಫಲ ಬಾಲಾದ್ಯಾವಸ್ಥಾ

ಷಡ್‌ಭಿರಂಶೈಃ ಕ್ರಮಾದೋಜೋ ಸಮೇಸ್ಯಾದ್ ವ್ಯಕ್ರಮಾನ್ಮನೆ ।
ಗ್ರಹೋ ಬಾಲಃ ಕುಮಾರಶ್ಚ ಯುವಾ ವೃದ್ಧೋ ಮೃತಸ್ತಥಾ ॥೩॥

ಬಾಲೆ ಫಲಂ ಚತುರ್ಥಾಶಮರ್ಧಕೌಮರಕೆ ಸ್ಮೃತಮ್ ।
ಪೂರ್ಣಾತು ಮರಣೆ ಕಿಂಚ್ಚಿದ್ ವೃದ್ಧೆ ಶೂನ್ಯಂ ಮೃತೆ ಗ್ರಹೋ ॥೪॥

ವಿಷಯ ರಾಶಿಯಲ್ಲಿ 6 – 6ದಲ್ಲಿ ಗ್ರಹಗಳ ಬಾಲ, ಕುಮಾರ, ಯುವಾ, ವೃದ್ಧ, ಮೃತಾವಸ್ಥೆಗಳಾದರೆ, ಸಮರಾಶಿಯಲ್ಲಿ ಇದರ ವಿಪರೀತ ಕ್ರಮದಲ್ಲಿ ಮೃತ, ವೃದ್ಧ, ಯುವಾ, ಕುಮಾರ, ಬಾಲ ಅವಸ್ಥೆಗಳು – ಫಲದಲ್ಲಿ ಬಾಲ್ಯಾವಸ್ಥೆಯ ಫಲ $^1/_4$ ಫಲವಾದರೆ, ಕುಮಾರ ಅವಸ್ಥೆ ಗ್ರಹ $^1/_2$ ಫಲದಾಯಕ, ಯುವಾವಸ್ಥೆ ಗ್ರಹ ಪೂರ್ಣಫಲ, ವೃದ್ಧಾವಸ್ಥೆಯಲ್ಲಿ ಅಲ್ಪ, ಮೃತಾವಸ್ಥೆ ಶೂನ್ಯ ಫಲದಾಯಕವಾಗಿದೆ.

ಈ ಫಲಗಳನ್ನು ಹಾಗೂ ಸಮ, ವಿಷಯ ರಾಶಿಗಳಲ್ಲಿದ್ದ ಗ್ರಹಗಳ ಅವಸ್ಥೆ ತೋರಿಸುವ – ಕೆಳಗಿನ ನಕ್ಷೆ – ಸಮ, ವಿಷಯ ರಾಶಿಗಳ – ಪ್ರತ್ಯೇಕ ತೋರಿಸಿದ ಮೇಲುನೋಟಕ್ಕೆ ಬಲವತ್ತರ ಗ್ರಹ ಉಚ್ಚಾಂಶದಲ್ಲಿದ್ದರೂ ಅಂತರಂಗದಲ್ಲಿ ಫಲಶೂನ್ಯತೆಯೂ ಸಾಧ್ಯವಿದೆ. ಈ ಅಂಶವರಿ ಗುಣಿಸಿ ನಿರ್ಣಯಿಸುವುದು.

## ವಿಷಮ ರಾಶಿ

| ರಾಶಿ | | ಮೇಷ ಮಿಥುನ ಸಿಂಹ ತುಲಾ ಧನು ಕುಂಭ | ಫಲ |
|---|---|---|---|
| ಅಂಶ | | | |
| $0^0$ರಿಂದ $6^0$ | ➔ | ಬಾಲಾವಸ್ಥೆ – – – – – – – – – | $^1/_4$ ಫಲ |
| $6^0$ರಿಂದ $12^0$ | ➔ | ಕುಮಾರಾವಸ್ಥೆ – – – – – – – – | $^1/_2$ ಫಲ |
| $12^0$ರಿಂದ $18^0$ | ➔ | ಯೌವನಾವಸ್ಥೆ – – – – – – – – | ಪೂರ್ಣ |
| $18^0$ರಿಂದ $24^0$ | ➔ | ವೃದ್ಧಾವಸ್ಥೆ – – – – – – – – – | ಅಲ್ಪ |
| $24^0$ರಿಂದ $30^0$ | ➔ | ಮೃತಾವಸ್ಥೆ – – – – – – – – – | ಶೂನ್ಯ |

## ಸಮರಾಶಿ

| ರಾಶಿ | | ವೃಷಭ ಕಟಕ ಕನ್ಯಾ ವೃಶ್ಚಿಕ ಮಕರ | ಮೀನ |
|---|---|---|---|
| $0^0$ರಿಂದ $6^0$ | ➔ | ಮೃತಾವಸ್ಥೆ – – – – – – – – – | ಶೂನ್ಯ |
| $6^0$ರಿಂದ $12^0$ | ➔ | ವೃದ್ಧಾವಸ್ಥೆ – – – – – – – – | ಅಲ್ಪ |
| $12^0$ರಿಂದ $18^0$ | ➔ | ಯೌವನಾವಸ್ಥೆ – – – – – – – – | ಪೂರ್ಣ ಫಲ |
| $18^0$ರಿಂದ $24^0$ | ➔ | ಕುಮಾರಾವಸ್ಥೆ – – – – – – – – | $^1/_2$ ಫಲ |
| $24^0$ರಿಂದ $30^0$ | ➔ | ಬಾಲಾವಸ್ಥೆ – – – – – – – – – | $^1/_4$ ಫಲ |

ಈ ಎರಡು ರಾಶಿಗಳಲ್ಲಿ (ಸಮ, ವಿಷಮ) $12^0 - 18^0$ದಲ್ಲಿದ್ದ ಗ್ರಹಗಳು ಶುಭವೋ, ಅಶುಭವೋ ಪೂರ್ಣಫಲದಾಯಕವಾಗಿವೆ.

## ಉದಾಹರಿತ ಕುಂಡಲಿಯಲ್ಲಿ

| | | | | | |
|---|---|---|---|---|---|
| ರವಿ | ➔ | 6 ರಾಶಿ | $17^0 - 35^0$ | ಯೌವನಾವಸ್ಥೆ | ಪೂರ್ಣಫಲ |
| ಚಂದ್ರ | ➔ | 6 ರಾಶಿ | $24^0 - 0^0$ | ವೃದ್ಧಾವಸ್ಥೆ | ಅಲ್ಪಫಲ |

| | | | | | |
|---|---|---|---|---|---|
| ಮಂಗಳ | ➔ | 9 ರಾಶಿ | $4^0 - 44^0$ | ಮೃತಾವಸ್ಥೆ | ಶೂನ್ಯ |
| ಬುಧ | ➔ | 6 ರಾಶಿ | $19^0 - 1^0$ | ವೃದ್ಧಾವಸ್ಥೆ | ಅಲ್ಪಫಲ |
| ಗುರು | ➔ | 9 ರಾಶಿ | $1^0 - 44^0$ | ಮೃತಾವಸ್ಥೆ | ಶೂನ್ಯ |
| ಶುಕ್ರ | ➔ | 5 ರಾಶಿ | $26^0 - 31^0$ | ಬಾಲಾವಸ್ಥೆ | $^1/_4$ ಫಲ |
| ಶನಿ | ➔ | 11 ರಾಶಿ | $2^0 - 47^0$ | ಮೃತಾವಸ್ಥೆ | ಶೂನ್ಯಫಲ |
| ರಾಹು | ➔ | 7 ರಾಶಿ | $14^0 - 18^0$ | ಯೌವನಾವಸ್ಥೆ | ಪೂರ್ಣಫಲ |
| ಕೇತು | ➔ | 1 ರಾಶಿ | $14^0 - 18^0$ | ಯೌವನಾವಸ್ಥೆ | ಪೂರ್ಣಫಲ |
| ಹರ್ಷಲ | ➔ | 0 | $18^0 - 8^0$ | ವೃದ್ಧಾವಸ್ಥೆ | ಅಲ್ಪಫಲ |
| ನೆಪ್ಚ್ಯೂನ್ | ➔ | 4 ರಾಶಿ | $26^0 - 5^0$ | ಮೃತಾವಸ್ಥೆ | ಶೂನ್ಯ |

ಮೇಲಿನ ಕುಂಡಲಿಯಲ್ಲಿ ಪೂರ್ಣ ಫಲದಾಯಕರು ರವಿ, ರಾಹು, ಕೇತುಗಳು. $^1/_4$ ಫಲದಾಯಕ ಕೇವಲ ಶುಕ್ರ. ಅಲ್ಪಫಲದಾಯಕ ಚಂದ್ರ, ಬುಧ, ಹರ್ಷಲ – ಗುರು, ಮಂಗಳ ಮೇಲ್ನೋಟಕ್ಕೆ ರಾಜ ಯೋಗಕಾರಕರಿದ್ದರೂ ಫಲ ಶೂನ್ಯರಾಗಿ ಇರುವುದರಿಂದ ರಾಜಯೋಗ ಪ್ರಸಂಗವೇ ಬರಲಾರದು. ಆದರೂ ಇದ್ದ ಸ್ಥಳದಲ್ಲಿಯೇ ಯೋಗ್ಯತೆ ತೋರುವರು. ಅದು ಗ್ರಹಗಳು ಸ್ಥಾನದ ಉದಿತಾಂಶದ ಸಮೀಪವಿರುವುದರಿಂದ ಅಲ್ಪ ಸ್ವಲ್ಪ ಲಾಭ – ಮಂಗಳ ಜಾಗ್ರತಾವಸ್ಥೆಯಲ್ಲಿ ಇರುವುದರಿಂದ ಶುಭನು – ಹೀಗಾಗಿ ಇನ್ನೂ ಅನೇಕ ಅಂಶ ವಿಚಾರಿಸಿಯೇ ಬಲಾಬಲ ತಿಳಿಯುವುದು.

## ಸಫಲ ಜಾಗ್ರತಾ ವ್ಯವಸ್ಥಾ

ನಿರ್ಜಕ್ಷ್ಯತುಂಗಪೋ ಜಾಗ್ರತ ಸ್ವಪ್ನೋ ಮಿತ್ರಸಮರ್ಕ್ಷಯೋಃ ।
ಸುಷುಪ್ತಿರ್ವೈಂರಿ ನೀಚೆ ಗ್ರಹಾವಸ್ಥಾ ತ್ರಿದಾಮತಾ ॥೫॥

ಪೂರ್ಣ ಮಧ್ಯಂ ತಥಾ ಶೂನ್ಯಂ ಜಾಗ್ರಸ್ವಪ್ನಸುಷುಪ್ತಿಷು ।
ಕ್ರಮಾದೇವಂ ಫಲಂ ವಿಜ್ಞೈಃ ಪ್ರಥಿತಂ ಮುನಿಭಿಃ ಪುರಾ ॥೬॥

ಈ ಹಿಂದೆ ಮುನಿಗಳಿಂದ ಹೇಳಲ್ಪಟ್ಟ ಫಲ ಹಾಗೂ ಅವಸ್ಥೆಗಳು ಈ ರೀತಿ ಯಾಗಿವೆ. ತನ್ನ ಕ್ಷೇತ್ರಸ್ವೋಚ್ಚದಲ್ಲಿ ಇದ್ದರೆ ಗ್ರಹ ಜಾಗ್ರತಾವಸ್ಥೆಯಲ್ಲಿ ಮಿತ್ರ ಉದಾಸೀನ ಮನೆಯಲ್ಲಿ ಇರುವ ಗ್ರಹ ಸ್ವಪ್ನಾವಸ್ಥೆ – ಶತ್ರುಕ್ಷೇತ್ರ ಹಾಗೂ ಸ್ವನೀಚ ದಲ್ಲಿ ಗ್ರಹ ಸುಷುಪ್ತ್ಯಾವಸ್ಥೆಯಲ್ಲಿರುತ್ತವೆ. ಜಾಗ್ರತಾದಿ ಫಲ ಈ ರೀತಿ ಇದೆ.

## ಉದಾಹರಿತ ಕುಂಡಲಿ

| | | | |
|---|---|---|---|
| ಜಾಗ್ರತಾವಸ್ಥೆ | --- | ಪೂರ್ಣಫಲ | ಮಂಗಳ |
| ಸ್ವಪ್ನಾವಸ್ಥೆ | --- | ಮಧ್ಯಮ | |
| ಸುಷುಪ್ತಾವಸ್ಥೆ | --- | ಶೂನ್ಯ | ರವಿ |

ಇಲ್ಲಿ ಅವಸ್ಥೆ ಅದಲು ಬದಲಾಗಿರುವುದರಿಂದ ಫಲದಲ್ಲಿ ವ್ಯತ್ಯಾಸ ಕಂಡು ಬರಲೇಬೇಕು.

## ಇತರ ಅವಸ್ಥೆಗಳು

ದೀಪ್ತಃ ಸ್ವಸ್ಥಃ ಮುದಿತಃ ಶಾಂತೋ ದೀನಶ್ಚ ದುಃಖಿತಃ ।
ವಿಕಲಶ್ಚ ಬಲಃ ಕೋಪಿ ಗ್ರಹವಸ್ಥಾ ನವೋದಿತಾಃ ॥೭॥

## ಗ್ರಹಗಳ ಅವಸ್ಥೆಗಳು

(1) ದೀಪ್ತ (2) ಸ್ವಸ್ಥ (3) ಮುದಿತ (4) ಶಾಂತ (5) ದೀನ (6)ದುಃಖಿ (7) ವಿಕಲ (8) ಖಿಲ (9) ಕ್ರುದ್ಧವೆಂಬುದಾಗಿದೆ.

## ಲಕ್ಷಣಗಳು

ಸ್ವೋಚ್ಚಸ್ಥಃ ಖೇಚರೋ ದೀಪ್ತಃ ಸ್ವಕ್ಷೆ ಸ್ವಸ್ಥೋಧಿಮಿತ್ರಭೆ ।
ಮುದಿತೋ ಮಿತ್ರಭೆ ಶಾಂತಃ ಸಮಭೆ ದಿನ ಉಚ್ಯತೆ ॥೮॥

ಶತ್ರುಭೆ ದುಃಖಿತಶ್ಚಾಥ ವಿಕಲಃ ಪಾಪಸಂಯುತಃ ।
ಖಿಲಃ ಬಲಗ್ರಹೆ ಜ್ಞೇಯಃ ಕೋಪಿಸ್ಯಾದರ್ಕ ಸಂಯುತಃ ॥೯॥

ಜನ್ಮಕಾಲೆನ್ಯಥಾ ವಾಪಿ ಭಾವೆ ಯಾದೃಗ್ ಗ್ರಹೇ ಭವೇತ್ ।
ತದ್ ಭಾವಜಂ ಫಲಂ ತಾದೃಗ್ ಜ್ಞೇಯಂ ವಿಜ್ಞೆವಿಶೇಷತಃ ॥೧೦॥

| | | |
|---|---|---|
| ದೀಪ್ತಿ | – | ತನ್ನುಚ್ಚದಲ್ಲಿ |
| ಸ್ವಕ್ಷೇತ್ರ | – | ಸ್ವಸ್ಥ |
| ಅಧಿಮಿತ್ರಗ್ರಹ | – | ಮುದಿತ |
| ಮಿತ್ರಭವನ | – | ಶಾಂತ |
| ಉದಾಸೀನ | – | ದೀನ |

| | | |
|---|---|---|
| ಶತ್ರುಗ್ರಹ | – | ದುಃಖಿ |
| ಪಾಪಗ್ರಹಯುಕ್ತ | – | ವಿಕಲ |
| ಪಾಪರಾಶಿ | – | ಖಲ |
| ಸೂರ್ಯಯುತ | – | ಕ್ರುದ್ಧ |

ಜನ್ಮ ಅಥವಾ ಪ್ರಶ್ನ ಲಗ್ನ ಸಮಯದಲ್ಲಿಯೂ ಗ್ರಹ ಉಪಯುಕ್ತ ಫಲವನ್ನೇ ಕೊಡುತ್ತವೆ.

ಉದಾಹರಿತದಲ್ಲಿ –

| | | |
|---|---|---|
| ಮಂಗಳ | – | ದೀಪ್ತಾವಸ್ಥೆ |
| ಗುರು, ಶನಿ (ರಾಶ್ಯಾಂತರ) | – | ಸ್ವಸ್ಥರು (ಗುರುವಿನ ನೀಚತ್ವ ಭಂಗ) |
| ಬುಧ, ಶುಕ್ರ (ರಾಶ್ಯಾಂತರ) | – | ಸ್ವಸ್ಥ (ಶುಕ್ರನ ನೀಚತ್ವವೂ ರಾಶ್ಯಾಂತರದಿಂದ ಭಂಗ) |
| ರವಿ | – | ದುಃಖಾವಸ್ಥೆ |
| ಚಂದ್ರ | – | ಕ್ರುದ್ಧ |

ಈ ರೀತಿ ಗ್ರಹಗಳದ್ದು ಫಲ ಅದೇ ರೀತಿಯಾಗಿ ಹೇಳುವುದು.

## ಈ ಅವಸ್ಥೆಗಳಲ್ಲಿ ದಶಾ ಫಲ

ಪಾಕೆ ಪ್ರದೀಪ್ತಸ್ಯ ಧರಾಧಿಪತ್ಯಮುತ್ಸಾಹಕಾರ್ಯ ಧನವಾಹನೆ ಚ ।
ಸ್ತ್ರೀ ಪುತ್ರಲಾಭಂ ಶುಭ ಬಂಧೂ ಪೂಜಾಂ ಕ್ಷಿತೀಶ್ವರಾನ್ಮಾನ್ಯಮೈತಿ ವಿದ್ಯಾಮ್ ॥೧೧॥

ಸ್ವಸ್ಥಸ್ಯ ಖೇಟಸ್ಯ ದಶಾವಿಪಾಕೆ ಸ್ವಾಸ್ಥ್ಯಂ ನೃಪಾಲ್ಲಬ್ಧ ಧನಾದಿ ಸೌಖ್ಯಮ್।
ವಿದ್ಯಾಂ ಯಶಃ ಪ್ರೀತಿಮಹತ್ವಮಾರಾದ್ಯಾರಾರ್ಥ ಭೂಮ್ಯಾದಿಜ ಧರ್ಮಮೇತ್ ॥೧೨॥

ಮುದಾನ್ವಿತಸ್ಯಾಪಿ ದಶಾವಿಪಾಕೆ ವಸ್ತ್ರಾದಿಕ ಗಂಧಸುತಾರ್ಥಧೈರ್ಯಮ್।
ಪುರಾಣ ಧರ್ಮಶ್ರವಣಾದಿ ಲಾಭ ದ್ವಿಪಲಾದಿಯಾನನಾಂಬರ
ಭೂಷಣಪ್ತಿಮ್ ॥೧೩॥

ದಶಾವಿಪಾಕೆ ಸುಖ ಧರ್ಮಮೇತಿ ಶಾಂತಸ್ಯ ಭೂಪುತ್ರ ಕಲತ್ರಯಾನಮ್।
ವಿದ್ಯಾವಿನೋದಾನ್ವಿತ ಧರ್ಮಶಾಸ್ತ್ರಂ ಬಹ್ವರ್ಥದೇಶಾಧಿಪ
ಪೂಜ್ಯತಾಮ ಚ ॥೧೪॥

ಸ್ಥಾನಾಚ್ಯುತಿರ್ಬಂಧು ವಿರೋಧಿತಾ ಚ ದೀನಸ್ಯ ಖೇಟಸ್ಯ ದಶಾವಿಪಾಕೆ।
ಜೀವತ್ಯಸೌ ಕುತ್ಸಿಕ ಹೀನವೃತ್ಯ ತ್ಯಕ್ತ್ವೊಜನ್ಯೆ ರೋಗನಿಪಿಡೀತಃ ಸ್ಯಾತ್
॥೧೫॥

ದುಃಖಾರ್ದಿತಸ್ಯಾಪಿ ದಶಾ ವಿಪಾಕೆ ನಾನಾ ವಿಧಂ ದುಃಖಮುಪೈತಿ
ನಿತ್ಯಮ್ ।
ವಿದೇಶಗೊ ಬಂಧು ಜನ್ಯೆ ವಿಹೀನಶೌ ರಾಗ್ನಿ ಭೂಪೈರ್ಭಯ
ಮಾತನೋತಿ ॥೧೬॥

ವೈಕಲ್ಯಯುಕ್ ಖೇಟ ದಶಾವಿಪಾಕೆ ವೈಕಲ್ಯಮಾಯಾತಿ ಮನೋವಿಕಾರಮ್।
ಮಿತ್ರಾದಿಕಾನಾಂ ಮರಣಾ ವಿಶೇಷಾತ್ ಸ್ತ್ರೀಪುತ್ರಯಾನಾಂಬರ
ಚೌರಪೀಡಾಮ್ ॥೧೭॥

ದಶಾವಿಪಾಕೆ ಕಲಹಂ ವಿಯೊಗಂ ಖಲಸ್ಯ ಖೇಟಸ್ಯ ಪಿತುರ್ವಿಯೋಗಮ್।
ಶತ್ರೋರ್ಜನಾನಾಂ ಧನಭೂಮಿನಾಶಮುಪೈತಿ ನಿತ್ಯ ಸ್ವಜನ್ಯೆಶ್ಚ
ನಿಂದಾಮ್ ॥೧೮॥

ಕೋಪಾನ್ವಿತಸ್ಯಾ ಪಿ ದಶಾವಿಪಾಕೆ ಪಾಪಾಃ ಸಮಾಯಾಂತಿ ಬಹುಪ್ರಕಾರೈಃ।
ವಿದ್ಯಾಧನ ಸ್ತ್ರೀಸುತ ಬಂಧು ನಾಶಃ ಪುತ್ರಾದಿಕೃಚ್ಛ್ರಂ ತ್ವಥ ನೇತ್ರರೋಗಃ
॥೧೯॥

ಪ್ರದಿಪ್ತಾವಸ್ಥೆಯ ಗ್ರಹದ ದೆಶೆಯಲ್ಲಿ ಜಾತಕ ರಾಜ್ಯಪ್ರಾಪ್ತಿ ಮಾಡಿಕೊಳ್ಳು ವನು (ನೌಕರಿ ಇತ್ಯಾದಿ). ಉತ್ಸಾಹ, ಧೈರ್ಯ, ಧನ, ಪ್ರಯಾಣ, ಸ್ತ್ರೀ, ಪುತ್ರಲಾಭ ಬಂಧುಗಳು ಹಾಗೂ ರಾಜರಿಂದ ಸನ್ಮಾನ ಸ್ವಗ್ರಹದ ದೆಶೆಯೋ, ಸ್ವಾಸ್ಥ್ಯ ರಾಜರಿಂದ ದೊರೆತ ಧನದಿಂದ ಸುಖಾದಿ, ವಿದ್ಯೆ, ಯಶ, ಪ್ರೇಮ, ಸ್ತ್ರೀ ಧನ ಭೂಮಿ ಆದಿ ಹಾಗೂ ಧರ್ಮ ಲಾಭವು ಸಂಭವ – ಮುದಿತ ಗ್ರಹ ದಶಾದಲ್ಲಿ ವಸ್ತ್ರ ಸುಗಂಧಿತ ದ್ರವ್ಯ ಪುತ್ರಾದಿ ಲಾಭ ಸುಖ – ಧನಪ್ರಾಪ್ತಿ, ಪುರಾಣಾದಿ ಶ್ರವಣ ಪ್ರಾಪ್ತಿ, ಆನೆ, ಕುದುರೆ ಅಥವಾ ವಾಹನ ಸೌಖ್ಯ – ಶಾಂತಾವಸ್ಥೆಯಲ್ಲಿ ಸುಖ, ಧರ್ಮ, ಭೂಮಿ, ಪುತ್ರ ಸ್ತ್ರೀಮಾನ ವಿದ್ಯಾವಿನೋದಾದಿ ಸುಖಪ್ರಾಪ್ತಿ, ಧರ್ಮಶಾಸ್ತ್ರ ಚಿಂತನ, ರಾಜ ಸನ್ಮಾನ

ಪ್ರಾಪ್ತಿ, ದೀನಾವಸ್ಥೆ ಗ್ರಹ ದಶಾದಲ್ಲಿ ಸ್ಥಾನಭ್ರಷ್ಟ ಬಂಧುಗಳೇ ವೈರಿಗಳಾಗುವರು (ಅವರ ವಿರುದ್ಧ) ಹೀನ ವೃತ್ತಿಯಿಂದ ಜೀವನ ಜನರಿಂದ ಅನಾದರ ರೋಗ ಪೀಡಿತ, ದುಃಖಿತ ಗ್ರಹ ದಶಾದಲ್ಲಿ ದುಃಖಿ, ಪರಾದೇಶವಾಸಿ, ಬಂಧು ವಿಹೀನ, ಚೋರ, ಅಗ್ನಿ ರಾಜ ಭಯ – ಯಾವಾಗಲೂ ಭೀತಸ್ಥಿತಿ ವಿಕಲಾವಸ್ಥೆ ಗ್ರಹ ದಶಾದಲ್ಲಿ ಕಲಹ ಪಿತೃ ವಿಯೋಗ ಶತ್ರು ಕೃತ ಧನ ಹಾಗೂ ಭೂಮಿ ವಿನಾಶ ಸ್ವಜನರಿಂದ ನಿಂದೆ. ಕ್ರುದ ಗ್ರಹ ದಶಾದಲ್ಲಿ ಅನೇಕ ವಿಧ ಪಾಪಕರ್ಮದಲ್ಲಿ ಪ್ರವೃತ್ತಿ ವಿದ್ಯಾಧನ ಸ್ತ್ರೀ ಹಾನಿ ಪುತ್ರ ಬಂಧು ವಿನಾಶ.

## ಗ್ರಹಗಳ ಲಜ್ಜಿತ ಅವಸ್ಥಾ

ಲಜ್ಜಿತೋ ಗರ್ವಿತ ಶ್ಚೈವ ಕ್ಷುಧಿತ ಸ್ತೃಷಿತಸ್ತಥಾ ।
ಮುದಿತಃ ಕ್ಷೋಭಿತಶ್ಚೈವ ಗ್ರಹಭಾವಾಃ ಪ್ರಕೀರ್ತಿತಾಃ ॥೨೦॥

ಪುತ್ರಗೇಹಗತಃ ಖೇಟೋ ರಾಹುಕೇತೋಪಿ ವಾ ।
ರವಿಮಂದಕುಜೈರ್ಯುಕ್ತೋ ಲಜ್ಜಿತೋ ಗ್ರಹ ಈ ರೀತಃ ॥೨೧॥

ತುಂಗಸ್ಥಾನಗತೋ ವಾಪಿ ತ್ರಿಕೋಣೇಪಿ ಭವೇತ್ ಪುನಃ ।
ಗರ್ವಿತಃ ಸೋಪಿ ಗದಿತೋ ನಿರ್ವಿಶಂಕ ದ್ವಿಜೋತ್ತಮ ॥೨೨॥

ಶತ್ರುಗೇಹಿ ಶತ್ರುಯುಕ್ತೋ ರಿಪುದೃಷ್ಟೋ ಭವೇದ್ಯದಿ ।
ಕ್ಷುಧಿತಃ ಸ ಚ ವಿಜ್ಞೇಯಃ ಶನಿಯುಕ್ತೋ ಯಥಾ ತಥಾ ॥೨೩॥

ಜಲರಾಶೌ ಸ್ಥಿತಃ ಖೇಟಃ ಶತ್ರುಣಾ ಚಾವಲೋಕಿತಃ ।
ಶುಭಗ್ರಹಾ ನ ಪಶ್ಯಂತಿ ತೃಷಿತಃ ಸ ಉದಾಹೃತಃ ॥೨೪॥

ಮಿತ್ರಗೇಹಿ ಮಿತ್ರಯುಕ್ತೋ ಮಿತ್ರೇಣ ಚ ವಿಲೋಕಿತಃ ।
ಗುರುಣಾ ಸಹಿತೋ ಯಶ್ಚ ಮುದಿತಃ ಸ ಪ್ರಕೀರ್ತಿತಃ ॥೨೫॥

ರವಿಣಾ ಸಹಿತೋ ಯಶ್ಚ ಪಾಪಾಃ ಪಶ್ಯಂತಿ ಸರ್ವಥಾ ।
ಕ್ಷೋಭಿತಂ ವಿಜಾನಿಯಾತ್ ಶತ್ರುಣಾ ಯದಿ ವೀಕ್ಷಿತಃ ॥೨೬॥

ಯೇಷು ಯೇಷು ಚ ಭಾವೇಷು ಗ್ರಹಸ್ತಿಷ್ಠಂತಿ ಸರ್ವಥಾ ।
ಕ್ಷುಧಿತಃ ಕ್ಷೋಭಿತೋ ವಾಪಿ ಭಾವಾನಾಂ ಫಲ ಘಾತಕಃ ॥೨೭॥

ಗ್ರಹಗಳಿಗೆ (1) ಲಜ್ಜಿತ (2) ಗರ್ವಿತ (3) ತೃಷಿತ (4) ಮುದಿತ (5) ಕ್ಷೋಭಿತ (6) ಕ್ಷುದಿತ ಈ ಆರು ಅವಸ್ಥೆಗಳಿದ್ದು ಈ ಅವಸ್ಥೆಗಳ ಲಕ್ಷಣಗಳು ಈ ರೀತಿ ಇವೆ.

(1) ಲಜ್ಜಿತ – ಪಂಚಭಾವದಲ್ಲಿಯ ಗ್ರಹ ರಾಹೂ ಅಥವಾ ಕೇತು ಯುಕ್ತವಾಗಿದ್ದರೆ ಅಥವಾ ಸೂರ್ಯ, ಶನಿ, ಮಂಗಳರಲ್ಲಿ ಯಾರೋಬ್ಬರೊಡನೆ ಯುಕ್ತವಾಗಿದ್ದರೆ ಲಜ್ಜಿತ.

(2) ಗರ್ವಿತ – ಉಚ್ಚಸ್ಥ ಅಥವಾ ತ್ರಿಕೋನಸ್ಥ ಗ್ರಹ ಗರ್ವಿತ.

(3) ಕ್ಷುದಿತ – ಶತ್ರುಕ್ಷೇತ್ರ ಗತ ಗ್ರಹ ಶತ್ರು ಯುಕ್ತ ಅಥವಾ ಶತ್ರು ದೃಷ್ಟಗ್ರಹ ಕ್ಷುದಿತ– ಶನಿಯುಕ್ತವಾದರೂ ಕ್ಷುದಿತವೆನ್ನುವರು.

(4) ತೃಷಿತ – ಜಲರಾಶಿಸ್ಥ ಚರರಾಶೊ ಗ್ರಹ, ಶತ್ರು ದೃಷ್ಟಿ ಹಾಗೂ ಶುಭಗ್ರಹ ದೃಷ್ಟಿರಹಿತವಾಗಿದ್ದರೆ ತೃಷಿತ.

(5) ಮುದಿತ – ಮಿತ್ರಕ್ಷೇತ್ರ, ಮಿತ್ರಯುಕ್ತ ಅಥವಾ ಮಿತ್ರದೃಷ್ಟಿ ಹಾಗೂ ಗುರುಯುತ ಗ್ರಹ ಮುದಿತ.

(6) ಕ್ಷೋಭಿತ – ರವಿಯುಕ್ತ ಗ್ರಹ ಪಾಪಗ್ರಹ ಅಥವಾ ಶತ್ರು ದೃಷ್ಟ ಕ್ಷೋಭಿತ.

ಇಲ್ಲಿ ಕ್ಷುದಿತ ಕ್ಷೋಭಿತ ಗ್ರಹ ಯಾವ ಭಾವದಲ್ಲಿರುವವೋ ಆ ಭಾವ ಫಲ ನಷ್ಟವಾಗುತ್ತದೆ.

ಉದಾಹರಿತ ಕುಂಡಲಿಯಲ್ಲಿ ಶನಿ, ಮಂಗಳರು ಗರ್ವಿತರು.

ಬುಧ, ಚಂದ್ರ – ರವಿ ಯುಕ್ತರಾದರೂ ಶತ್ರು ದೃಷ್ಟಿಯಲ್ಲಿರುವುದರಿಂದ ಕ್ಷೋಭಿತರಲ್ಲಿ ರಾಶ್ಯಾಂತರವನ್ನು ಪರಿಗಣಿಸುವುದು.

ಗುರು, ಮಂಗಳರು ಯುತಯಿದ್ದರೂ ಗುರು ಲಜ್ಜಿತನಲ್ಲಿ ರಾಶ್ಯಾಂತರವಿದೆ.

ಏವಂಕ್ರಮೇಣ ಬೋದ್ಧವ್ಯಂ ಸರ್ವಭಾವೇಶು ಪಂಡಿತೈಃ ।
ಬಲಾಬಲ ವಿಚಾರೇಣ ಏಕತ್ವ್ಯಃ ಫಲನಿರ್ಣಯಃ ॥೨೮॥

ಅನ್ಯೋನ್ಯಂ ಚ ಮುದಾ ಯುಕ್ತಂ ಫಲಂ ಮಿಶ್ರಂ ವದೇತ್ಪುತಃ।
ಬಲಹೀನೋ ತದಾ ಹಾನಿಃ ಸಬಲೆ ಚ ಮಹತ್ ಫಲಮ್ ॥೨೯॥

ಕರ್ಮಸ್ಥಾನೆ ಸ್ಥಿತೋ ಯಸ್ಯ ಲಜ್ಜಿತಸ್ತೃಷಿತಸ್ತಥಾ ।
ಕ್ಷುದಿತಃ ಕ್ಷೋಭಿತೋ ವಾಪಿ ಸ ನರೋ ದುಃಖ ಬಾಜನಮ್ ॥೩೦॥

ಸುತಸ್ಥಾನೆ ಭವೇದ್ಯಸ್ಯ ಲಜ್ಜಿತೋ ಗ್ರಹ ಏವಚ ।
ಸುತನಾಶೋ ಭವೇತ್ತಸ್ಯ ಚೈಕಸ್ತಿಷ್ಟತಿ ಸರ್ವದಾ ॥೩೧॥

ಕ್ಷೋಭಿತಸ್ತೃಷಿಶ್ಚೈವ ಸಪ್ತಮೇ ಯಸ್ಯ ವಾ ಭವೇತ್ ।
ಮ್ರಿಯತೆ ತಸ್ಯ ನಾರಿ ಚ ಸತ್ಯಮಾಹುರ್ದ್ವಿಜೋತ್ತಮ ॥೩೨॥

ಈ ಪ್ರಕಾರ ಬಲಾಬಲ ವಿವೇಕ ಎಲ್ಲ ಭಾವಗಳ ಫಲಾದೇಶ ಮಾಡುವುದು. ಪರಸ್ಪರ ಮೇದಯುಕ್ತ ಗ್ರಹ ಸಬಲ, ನಿರ್ಬಲ ಎರಡು ತರಹದಿದ್ದುದಾದರೆ ಮಿಶ್ರಫಲ. ಎರಡು ಬಲಹೀನವಾದರೆ ಅಲ್ಪ ಫಲ – ಸಬಲವಾದರೆ ಫಲಾಧಿಕ್ಯ. ದಶಮದಲ್ಲಿ ಲಜ್ಜಿತ, ತೃಷಿತ, ಕ್ಷುದಿತ ಅಥವಾ ಕ್ಷೋಭಿತ ಗ್ರಹಗಳಿದ್ದರೆ ಜಾತಕ ಅಭಾಗ್ಯವಂತನು, ದುಃಖಿಯೂ ಆಗುವನು. ಪಂಚಮದಲ್ಲಿ ಲಜ್ಜಿತ ಗ್ರಹವಿದ್ದರೆ ಪುತ್ರನಾಶ ಆದರೂ ಒಬ್ಬ ಮಗನಿರುತ್ತಾನೆ. ಏಳನೇ ಮನೆಯಲ್ಲಿ ಕ್ಷೋಭಿತ ಅಥವಾ ತೃಷಿತ ಗ್ರಹವಿದ್ದರೆ ಹೆಂಡತಿ ಮರಣ ಹೇಳುವುದು.

## ಗರ್ವಿತ ಗ್ರಹ ಫಲ

ನಬಾಲಯಾರಾಮಸುಖಂ ನೃಪತ್ವಂ ಕಲಾಪಟುತ್ವಂ ವಿದಧಾತಿ ಪುಂಸಾಮ್ ।
ಸದಾರ್ಥ ಲಾಭಂ ವ್ಯವಹಾರ ವೃದ್ಧಿಂ ಫಲಂ ವಿಶೇಷಾದಿಹ ಗರ್ವಿತಸ್ಯ ॥೩೩॥

ಭವತಿ ಮುದಿತಯೋಗೆ ವಾಸಾಶಾಲಾ ವಿಶಾಲಾ
ವಿಮಲವಸನ ಭೂಪಾಭೂಮಿಯೋಷಾಸು ಸೌಖ್ಯಂ ।
ಸ್ವಜನ ಜನವಿಲಾಸೋ ಭೂಮಿ ಪಾಗಾರವಾಸೋ
ರಿಪುನಿವಹವಿನಾಶೋ ಬುದ್ಧಿ ವಿದ್ಯಾ ವಿಕಾಶಃ ॥೩೪॥

ದಿಶತಿ ಲಜ್ಜಿತ ಭಾವವಶಾದ್ರತಿಂ ವಿಶತರಾಮಮತಂ ವಿಮತಿ ಕ್ಷಯಮ್।
ಸುತಗದಾಗಮನಂ ಗಮನಂ ವೃಥಾ ಕಲಿಕಥಾಭೀರುಚಿಂ ನರುಚಿಂ ಶುಭೆ ॥೩೫॥

ಸಂಕ್ಷೋಭಿತಸ್ಯಾಪಿ ಫಲಂ ವಿಶೇಷಾದ್ ದಾರಿದ್ರ ಜಾತಂ ಕುಮತಿ ಚ ಕಷ್ಟಮ್ ।
ಕರೋತಿ ವಿತ್ತಕ್ಷಯಮಂಘ್ರಿವಾಧಾಂ
ಧನಾಪ್ತಿವಾಧಾಮವನೀಶಕೋಪಾತ್ ॥೩೬॥

ಕ್ಷುಧಿತ ಖಗವಶಾದ್ ವೈ ಶೋಕಮೋಹಾದಿಪಾತಃ ।
ಪರಿಜನಪರಿತಾಪಾವಾಧಿಭೀತ್ಯಾ ಕೃಶತ್ವಮ್ ।

ಕಲಿರಪಿ ರಿಪುಲೋಕೈರರ್ಥಬಾಧಾ ನರಾಣಾ
ಮಖಿಲ ಬಲನಿರೋಧೋ ಬುದ್ಧಿ ರೋಧೋ ವಿಷಾದಾತ್ ॥೩೭॥
ತೃಷಿತಖಗಭವೆ ಸ್ವೆನಾಗಂನಾಸಂ ಕಮದ್ಯೋ
ಭವತಿ ಗದವಿಕಾರೋ ದುಷ್ಪಕಾರ್ಯಾಧಿಕಾರಃ ।

ನಿಜ ಜನ ಪರಿವಾದಾರ್ಥಹಾನಿಃ ಕೃಶ್ವತ್ವಂ
ಬಲಕೃತಪಾರಿತಾಪೋ ಮಾನಹಾನಿಃ ಸದೈವ ॥೩೮॥

ಗರ್ವಿತ ಗ್ರಹ ದಶಾದಲ್ಲಿ ನೂತನ ಗ್ರಹ ಐಶಾರಾಮ (ಪುಷ್ಪವಾಟಿಕಾ) ಸುಖ ರಾಜತ್ವ, ಕಲಾ ಪಟುತ್ವ, ಸತತ ಅರ್ಥಲಾಭ, ವ್ಯಾಪಾರ ವೃದ್ಧಿ, ಭೂಮಿ ಹಾಗೂ ಸ್ತ್ರೀಸೌಖ್ಯ, ಆತ್ಮೀಯ ಜನರ ಸಂಗಡ ಸರಸ ಸಲ್ಲಾಪ, ರಾಜಭವನ ನಿವಾಸ ಶತ್ರು ಸಮುದಾಯ ವಿನಾಶ, ಬುದ್ಧಿ, ವಿದ್ಯೆಗಳ ವಿಕಾಸ.

ಲಜ್ಜಿತ ಗ್ರಹ – ದಶಾದಲ್ಲಿ ರಾಮನಲ್ಲಿ ಅನಿಷ್ಠ, ಮತಿಯ ವಿನಾಶ, ಮಕ್ಕಳಿಗೆ ರೋಗ, ವ್ಯರ್ಥ ಯಾತ್ರಾ ಜಗಳದಲ್ಲಿ ಅಭಿರುಚಿ ಹಾಗೂ ಶುಭಕಾರ್ಯದಲ್ಲಿ ನಿರಾಸಕ್ತಿ.

ಕ್ಷೋಭಿತ – ಗ್ರಹದಶಾದಲ್ಲಿ ದಾರಿದ್ರ್ಯ, ಕುಬುದ್ಧಿ, ಕಷ್ಟ, ಧನ ಕ್ಷಯ ಕಾಲಲ್ಲಿ ತೊಂದರೆ, ರಾಜಕೋಪ, ಧಾನನಾಶ.

ಕ್ಷುದಿತ – ಗ್ರಹಾದಶಾ ಶೋಕ, ಮೋಹ, ಆತ್ಮೀಯ ಜನರಿಗೆ ಸಂತಾಪದ ಕಾರಣ ಮಾನಸಿಕ ಪೀಡಾದಿಂದ ದುರ್ಬಲ, ಶತ್ರುಗಳೊಡನೆ ವಾದಪವಾದ ಶಕ್ತಿ ಹ್ರಾಸ ವಿವಾದದಿಂದ ಬುದ್ಧಿ ಕುಂಠಿತ.

ತೃಷಿತ – ಗ್ರಹ ದಶಾದಲ್ಲಿ – ಸ್ತ್ರೀ ಸಂಪರ್ಕದಿಂದ ರೋಗ, ದುಷ್ಕರ್ಮ ಪ್ರವೃತ್ತಿ, ಸ್ವಜನರೊಡನೆ ವಿವಾದ – ಅರ್ಥ ಕ್ಷಯ ದುರ್ಬಲತಾ ದುರ್ಜನಕೃತ – ಮಾನಹಾನಿ.

## ಶಯನಾದ್ಯವಸ್ಥಾ

ಶಯನಂ ಚೋಪವೇಶಂ ಚ ನೇತ್ರಪಾಣಿ ಪ್ರಕಾಶನಮ್ ।
ಗಮನಾಗಮನಂ ಚಾಥ ಸಭಾಯಾಂ ವಸತಿಂ ತಥಾ ॥೩೯॥

ಆಗಮಂ ಭೋಜನಂ ಚೈವ ನೃತ್ಯಂ ಲಿಪ್ಸಾಂ ಚ ಕೌತುಕವ್ ।
ನಿದ್ರಾಂ ಗ್ರಹಾಣಾಂ ಚೇಷ್ಟಾಂ ಚ ಕಥಯಾಮಿ ತಾವಾಗ್ರತಃ ॥೪೦॥

ಯಸ್ಮಿನ್ನೃಕ್ಷೆ ಭವೇತ್ ಖೇಟಸ್ತೇನ ತಂ ಪರಿಪೂರಯೇತ್ ।
ಪುನರಂಶೇನ ಸಂಪೂರ್ಯ ಸ್ವನಕ್ಷತ್ರಂ ನಿಯೋಜಯೇತ್ ॥೪೧॥
ಯಾತದಂಡಂ ತಥಾಲಗ್ನಮೇಕ ಕೃತ್ಯ ಸದಾ ಸುದಃ ।
ರವಿಭಸ್ತು ಭಜೆ ಮೃತ್ತು ಶೇಷಂ ಕಾರ್ಯೇ ನಿಯೋಜಯೇತ್ ॥೪೨॥

ಪುನರ್ನಾಕ್ಷತ್ರಿಕದ ಶಾರೀತತಃ ಪೂರ್ತ್ರಿ ಮಾಚರೇತ್ ।
ನಾಮಾದಿಮಸ್ವರಾಂಕಾಡ್ಯಾಂ ಹರ್ತವ್ಯಂ ರವಿಭಿಸ್ತತಃ ॥೪೩॥

ರವೌ ಪಂಚತಥಾ ದೇಯಾ ಇಂದೌ ದದ್ಯಾದ್ ದ್ವಯಂ ತಥಾ ।
ಕುಜೆ ದ್ವಿಯಂ ಚ ಸಂಯುಕ್ತ ಬುಧೆ ತ್ರಿಣಿ ನಿಯೋಜಯೇತ್ ॥೪೪॥

ಗುರೌ ಬಾಣು ಪ್ರದೇ ಯಾಶ್ಚತ್ರಯಂ ದದ್ಯಾಚ್ಚ ಭಾರ್ಗವೆ ।
ಶನೌ ತ್ರಯಮಥೊ ದೇಯಂ ರಾಹೌ ದದ್ಯಾಚ್ಚತುಷ್ಟಯಮ್ ॥೪೫॥

ಹೃತಂ ರಾಮೇಣ ಶೇಷಾಂತ್ಯೆ ಸ್ತ್ರೀಧಾವಸ್ಥಾ ಪುನರ್ಮತಾ ।
ದೃಷ್ಟಿಶ್ಚೇಷ್ಟಾ ವಿಚೇಷ್ಟಾ ಚ ಫಲಂ ತಸ್ಯ ಬ್ರುವೀಮ್ಯತಃ ॥೪೬॥

ಈಗ ನಾನು ಗ್ರಹಗಳ ಶಯನಾದಿ 12 ಅವಸ್ಥೆ ಹಾಗೂ ಅವುಗಳ ಚೇಷ್ಟೆಯನ್ನು ಹೇಳುತ್ತೇನೆ. ಗ್ರಹಗಳಿಗೆ–

(1) ಶಯನ (2) ಉಪವೇಶ (3) ನೇತ್ರಪಾಣಿ (4) ಪ್ರಕಾಶನ (5) ಗಮನ (6) ಆಗಮನ (7) ಸಭಾನಿವಾಸ (8) ಆಗಮ (9) ಭೋಜನ (10) ನೃತ್ಯಲಿಪ್ಸಾ (11) ಕೌತುಕ (12) ನಿದ್ರಾ ಈ ರೀತಿ ಹನ್ನೆರಡು ಅವಸ್ಥೆಗಳು.

## ಅವಸ್ಥೆ ಲಕ್ಷಣಗಳು

ಯಾವ ಗ್ರಹದ ಅವಸ್ಥೆ ತೆಗೆಯಬೇಕಾಗಿರುವುದೋ ಆ ಗ್ರಹ ಸ್ಥಿತ ನಕ್ಷತ್ರ ಸಂಖ್ಯೆಗೆ ಗ್ರಹ ಸಂಖ್ಯೆಯಿಂದ ಗುಣಿಸಿ ಹಾಗೂ ನಂತರ ಗ್ರಹವಿದ್ದ ನವಾಂಶ ಸಂಖ್ಯೆಯಿಂದ ಗುಣಿಸಿ ಅದರಲ್ಲಿ ಚಂದ್ರ ನಕ್ಷತ್ರ (ಜನ್ಮ) ಸಂಖ್ಯೆ (ಇಷ್ಟದಂಡ) ಹಾಗೂ ಲಗ್ನರಾಶಿ ಸಂಖ್ಯೆ ಕೂಡಿಸಿ ನಂತರ ಪುನಃ 12ರಿಂದ ಭಾಗಿಸಲು ಶೇಷಾಂಕ ಶಯನಾದಿ ಅವಸ್ಥೆಗಳಾಗುವುವು.

ಚೇಷ್ಟಾ ತಿಳಿದುಕೊಳ್ಳಲು – ಭಾಗಿಸಿ ಉಳಿದ ಶೇಷಾಂಕಕ್ಕೆ ಅಷ್ಟೇ

ಸಂಖ್ಯೆಯಿಂದ ಗುಣಿಸಿ ಅದಕ್ಕೆ ಸೂರ್ಯ ಶೇಷಾಂಕ ಸೇರಿಸಿ 3ರಿಂದ ಭಾಗಿಸಲು ಚೇಷ್ಟಾಭಾಗ ಬರುವುದು.

ಉದಾಹರಣೆ – ರವಿ. ರವಿ 6 – 17 – 35' ಅಂದರೆ ಸ್ವಾತಿ ನಕ್ಷತ್ರದಲ್ಲಿದ್ದು ನಕ್ಷತ್ರ ಸಂಖ್ಯೆ 15. ರವಿ ಸಂಖ್ಯೆ 15 × 1 = 15 ಸೂರ್ಯದಿಷ್ಟ ನವಾಂಶ 12, 15 × 12 = 180 ಜನ್ಮ ನಕ್ಷತ್ರ ಸಂಖ್ಯೆ 16 (ವಿಶಾಖಾ ಚಂದ್ರ 6 – 24 – 0') ಜನ್ಮಲಗ್ನ ಸಂಖ್ಯೆ 4 ಅಂದರೆ 180+16+4 = 200 ಇದಕ್ಕೆ 12ರಿಂದ ಭಾಗಿಸಲು 200 ÷ 12 = ಶೇಷ 0 ಅಂದರೆ ನಿದ್ರಾವಸ್ಥೆಯಲ್ಲಿ ರವಿಯಿರುವನು.

ಶೇಷ 0 × 0 = 0 ಕರೆಯುವ ಹೆಸರು ರಾಮ. 0+4 = 4 ಹನ್ನೆರಡರಿಂದ ಭಾಗ ಹೋಗುವುದಿಲ್ಲ. ಶೇಷ 4, ಶೇಷಾಂಕ+0 = 4 ÷ 3 = 1 ಚೇಷ್ಟಾ ಭಾಗವಾಯಿತು.

## ಸ್ವರಾಂಶ

| 1 | 2 | 3 | 4 | 5 | |
|---|---|---|---|---|---|
| ಅ | ಇ | ಉ | ಎ | ಓ | |
| ಕ | ಖ | ಗ | ಘ | ಚ | |
| ಛ | ಜ | ಝ | ಟ | ಠ | ಸ್ವರ(ಅಕ್ಷರ) |
| ಡ | ಢ | ತ | ಥ | ದ | ↓ |
| ಧ | ನ | ಪ | ಫ | ಬ | |
| ಭ | ಮ | ಯ | ರ | ಲ | |
| ವ | ಶ | ಷ | ಸ | ಹ | |

ಗ್ರಹಗಳ ಅವಸ್ಥೆ ಚೇಷ್ಟಾಸಂಖ್ಯೆ (ಉದಾಹರಿತ ಕುಂಡಲಿ)

| | | | | |
|---|---|---|---|---|
| ರವಿ | --- | ನಿದ್ರಾವಸ್ಥೆ | --- | 1 ಚೇಷ್ಟಾಸಂಖ್ಯೆ |
| ಚಂದ್ರ | --- | ನಿದ್ರಾವಸ್ಥೆ | --- | 1 ಚೇಷ್ಟಾಸಂಖ್ಯೆ |
| ಮಂಗಳ | --- | ಗಮನ | --- | 1 ಚೇಷ್ಟಾಸಂಖ್ಯೆ |
| ಬುಧ | --- | ಆಗಮ | --- | 1 ಚೇಷ್ಟಾಸಂಖ್ಯೆ |
| ಗುರು | --- | ನೃತಲಿಪ್ಸ | --- | 1 ಚೇಷ್ಟಾಸಂಖ್ಯೆ |

| | | | | |
|---|---|---|---|---|
| ಶುಕ್ರ | --- | ನಿದ್ರಾವಸ್ಥೆ | --- | 1 ಚೇಷ್ಟಾಸಂಖ್ಯೆ |
| ಶನಿ | --- | ನಿದ್ರಾವಸ್ಥೆ | --- | 1 ಚೇಷ್ಟಾಸಂಖ್ಯೆ |
| ರಾಹು | --- | ಪ್ರಕಾಶನ | --- | 1 ಚೇಷ್ಟಾಸಂಖ್ಯೆ |
| ಕೇತು | --- | ಆಗಮ | --- | 1 ಚೇಷ್ಟಾಸಂಖ್ಯೆ |

ಈ ರೀತಿ ಗ್ರಹಗಳ ಅವಸ್ಥೆ ಚೇಷ್ಟಾಸಂಖ್ಯೆಗಳಿವೆ.

ದೃಷ್ಟೌ ಸಾಧಾರಣ ಫಲಂ ಚೇಷ್ಟಾಯಾಂ ವಿಪುಲಂ ಫಲಂ
ವಿಚೇಷ್ಟಯಾಂ ಫಲಂ ಚಾಲ್ಪಿಮೇವಂ ದೃಷ್ಟಿಫಲಂ ವಿದುಃ ॥೪೭॥

ಶುಭಾಶುಭಂ ಗ್ರಹಾಣಾಂ ಚ ಸಮೀಕ್ಷ್ಯಾಥ ಬಲಾಬಲಂ।
ತುಂಗಸ್ಥಾನೆ ವಿಶೇಷಣ ಬಲಂ ಜ್ಞೇಯ ವಿಪಶ್ಚಿತಾ ॥೪೮॥

ದೃಷ್ಟಿಯಲ್ಲಿ ಅವಸ್ಥಾ ಫಲ ಸಾಧಾರಣ ಹಾಗೂ ಚೆಷ್ಟಾ ಫಲ ಪ್ರಚರವಾಗಿರುತ್ತದೆ. ವಿಚೇಷ್ಟಾದಲ್ಲಿ ಅಲ್ಪ ಫಲವಾಗಿರುತ್ತದೆ. ಗ್ರಹಗಳ ಭೂ ಬಲನೋಡಿ ಫಲ ಹೇಳುವುದು.

### ಅವಸ್ಥಾನುಸಾರ ಸೂರ್ಯನ ಫಲ

ಮಂದಾಗ್ನಿರೋಗೋ ಬಹುದಾ ನರಾಣಾಂ
ಸ್ಥೂಲತ್ವಮಂಘ್ರೇರಪಿಪಿತ್ತ ಕೋಪಃ।
ವ್ರಣಾ ಗುದೆ ಶೂಲ ಮುರಃ ಪ್ರದೇಶೆ
ಸತ್ಯಸ್ಯಾ ಭಾನೌ ಶಯನಂ ಪ್ರಯಾತೆ ॥೪೯॥

ದರಿದ್ರತಾಭಾರ ವಿಹಾರಶಾಲಿ ವಿದಾದ ವಿದ್ಯಾಭಿರತೋ ನರಃಸ್ಯಾತ್।
ಕಠೋರಚಿತ್ತಃ ಖಲು ನಷ್ಟವಿತ್ತಃ ಸೂರ್ಯೋಯದಾ ಚೇದುಪವೇನಸ್ಥಃ
॥೫೦॥

ನರಃ ಸದಾನಂದಧರೋ ವಿವೇಕಿ ಪರೋಪಕಾರಿ ಬಲವಿತ್ತಯುಕ್ತಾಃ।
ಮಹಾಸುಖಿ ರಾಜಕೃಪಾಭಿಮಾನಿ ದಿವಾಧಿನಾಥೋ ಯದಿ ನೇತ್ರಪಾಣೌ
॥೫೦॥

ಉದಾರ ಚಿತ್ತಃ ಪರಿಪೂರ್ಣ ವಿತ್ತಃ ಸಭಾಸು ವಕ್ತಾ ಬಹುಪುಣ್ಯಕರ್ತಾ।
ಮಹಾಬಲೀ ಸುಂದರ ರೂಪಶಾಲೀ ಪ್ರಕಾಶನೆ ಜನ್ಮನಿ ಪದ್ಮಿನೀಶೆ ॥೫೨॥

ಪ್ರಭಾವಶಾಲಿ ಕಿಲ ದುಃಖಮಾಲಿ ಸದಾಲಸೋ ಧೀಧನವರ್ಜಿತಶ್ಚ ।
ಭಯಾತುರಃ ಕೋಪಪರೋ ವಿಶೇಷಾದ್ ದಿವಾಧಿನಾಥೆ ಗಮನೆ
ಮನುಷ್ಯಃ ॥೫೩॥

ಪರದಾರರತೋ ಜನತಾರಹಿತೋ ಬಹುದಾ ಗಮನಾಗಮನಾಭಿರುಚಿಃ।
ಕೃಪಣಃ ಬಲತಾಕುಶಲೋ ಮಲಿನೋ ದಿತಸಾದಿಪತೌ ಮನುಜಃ
ಕುಮತಿಃ ॥೫೪॥

ಸಭಾಗತೆ ಹಿತೆ ನರಃ ಪರೋಕಾರ ತತ್ಪರಃ
ಸದಾರ್ಥರತ್ನ ಪೂರಿತೊ ದಿವಾಕರೆ ಗುಣಾಕರಾಃ ।
ವಸುಂಧರಾ ನವಾಂಬರಾಲಯಾನ್ವಿತೋ ಮಹಾಬಲಿ
ವಿಚಿತ್ರ ಮಿತ್ರವತ್ಸಲಃ ಕೃಪಾಲಾಧರಃ ಪರಃ ॥೫೫॥

ಕ್ಷೋಭಿತೋ ರಿಪುಗಣೈಃ ಸದಾ ನರಶ್ಚಂಚಲಃ ಖಲಮತಿಃ ಕೃಶಸ್ತಥಾ।
ಧರ್ಮಕರ್ಮರಹಿತೋ ಮದೋದ್ಧತಶ್ಚಾಗಮೇ ದಿನಪತೌಯದಾ ತದಾ
॥೫೬॥

ಸದಾಂಗಸಂಧಿವೇದನಾ ಪರಾಂಗನಾ ಧನಕ್ಷಯೋ
ಬಲಕ್ಷಯಃ ಪದೆ ಪದೆ ಯದಾ ತಾದಾಹಿ ಭೋಜನೆ
ಅಸತ್ಯತಾ ಶಿರೋವ್ಯಥಾ ತಥಾ ವೃಥಾನ್ನಭೋಜನಂ ।
ರವಾವಸತ್ಯಥಾರತಿಃ ಕುಮಾರ್ಗ ಗಮಿನಿ ಮತಿಃ ॥೫೭॥

ವಿಜ್ಞಲೋಕೈಃ ಸದಾಮಂಡಿತಃ ಪಂಡಿತಃ
ಕಾವ್ಯವಿದ್ಯಾನ ವದ್ಯ ಪುಲಾಪಾನ್ವಿತಾ ।
ರಾಜಪೂಜ್ಯೋ ಧರಾಮಂಡಲೆ ಸರ್ವದಾ
ನೃತ್ಯಲಿಪ್ಸಾಗತೆ ಪದ್ಮಿನಿ ನಾಯಕೆ ॥೫೮॥

ಸರ್ವದಾ ನಂದಧಾರ್ತಾ ಜನೋ ಜ್ಞಾನವಾನ್
ಯಜ್ಞಕರ್ತಾಧರಾಧೀಶಸದ್ಮ ಸ್ಥಿತಃ ।
ಪದ್ಮಬಂಧವರಾತೆರ್ಭಯಂ ಸ್ವಾನನಃ
ಕಾವ್ಯ ವಿದ್ಯಾ ಪ್ರಲಾಪಿಮುದಾ ಕೌತುಕೆ ॥೫೯॥

ನಿದ್ರಾಭರಾರಕ್ತ ನಿಭೆ ಭವೇತಾಂ ನಿದ್ರಾಗತೆ ಲೋಚನಪದ್ಮಯುಗ್ಮೆ ।
ರವೌ ವಿದೇಶೆ ವಸತಿರ್ಜನಸ್ಯ ಕಲತ್ರಹಾನಿಃ ಕತಿಧಾರ್ಥನಾಶಃ ॥೬೦॥

ಸೂರ್ಯ ಶಯನಾವಸ್ಥೆಯಲ್ಲಿದ್ದರೆ ಅಗ್ನಿಭಯ, ಅಗ್ನಿಮಾಂದ್ಯ ಕಾಲುಬಾವು ಪಿತ್ತಪ್ರಕೋಪ ಗುದದ್ವಾರ ವ್ರಣ – ಹೃದಯ ತೊಂದರೆ.

ಉಪವೇಶ – ದರಿದ್ರ ಸಹಿಸುವವ, ವಿದ್ಯಾವಿವಾದಿ, ಕಠೋರ ಹೃದಯದವ, ಧನನಾಶಕ.

ನೇತ್ರಪಾಣಿ – ಸದಾಸಾನಂದದಲ್ಲಿ ವಿಚಾರಶೀಲ, ಪರೋಪಕಾರಿ, ಧನಿ, ಬಲಿ, ಮಹಾಸುಖಿ, ರಾಜಕೃಪಾಪೂರ್ಣ.

ಪ್ರಕಾಶನಾವಸ್ಥೆ – ಉದಾರ, ಧನಪೂರ್ಣ – ಸಭಾದಲ್ಲಿ ವಕ್ತಾ ಪುಣ್ಯವಂತ, ಮಹಾಬಲಿ ರೂಪವಾನ್.

ಗಮನಾವಸ್ಥೆ – ಪ್ರವಾಸಿ ದುಃಖಿಯುಕ್ತ ಸತತ ಆಲಸಿ, ಬುದ್ಧಿ ಧನರಹಿತ ವಿಭೀತ ಕ್ರೋಧಿ.

ಆಗಮನ – ಪರಸ್ತ್ರೀಗಾಮಿ, ಸಮಾಜದಿಂದ ದೂರ ಗಮನಶೀಲ ಕೃಪಣ ದುಷ್ಟ, ದುರ್ಬುದ್ಧಿ.

ಸಭಾವಸ್ಥಾ – ಪರೋಪಕಾರಿ, ಸತತ ಧನರತ್ನ, ಪರಿಪೂರ್ಣ ಗುಣ, ನಿಧಿ, ಭೂಮಿ, ಹೊಸಮನೆ, ಹೊಸವಸ್ತ್ರದಿಂದ ಪರಿಪೂರ್ಣ ಪ್ರಬಲ ಮಿತ್ರ, ಪ್ರೇಮಿ, ಕೃಪಾಳು, ಕಲಾವಿತ್ತ.

ಆಗಮ – ವೈರಿಗಳಿಂದ ಸದಾಕಾಲ ಪ್ರಕ್ಷುಬ್ಧಿ, ಚಂಚಲ ದುರ್ಮತಿ ದುರ್ಬಲ ಧರ್ಮಕಾರ್ಯದಿಂದ ದೂರ ಮದಾಂಧ.

ಭೋಜನವಸ್ಥಾ – ಸಂಧಿವಾತದಿಂದ ಜರ್ಝರಿತ ಪರಸ್ತ್ರೀ ಪ್ರಯುಕ್ತ ಧನನಾಶ, ಕ್ಷಣಕ್ಷಣಕ್ಕೂ ಶಕ್ತಿ ಹ್ರಾಸ, ಅಸತ್ಯವಾದಿ, ಶಿರೋವೇದನ, ಎರಡನೆಯವರ ಮನೆ ಊಟ ಅಸತ್ಕಥಾ ಪ್ರೇಮಿ.

ನೃತ್ಯಲಿಪ್ಸಾ – ಸತತ ವಿದ್ವಾನ್ ಪಂಡಿತರ ಜೊತೆ ಸ್ವಯಂ ಪಂಡಿತ ಕಾವ್ಯಶಾಸ್ತ್ರದ ಅಭಿಜ್ಞರಾಜವಂದ್ಯ.

ಕೌತುಕ – ಸತತ ಆನಂದ, ಜ್ಞಾನಿ, ಯಜ್ಞ ಕರ್ತಾ ರಾಜ, ಭವನಾಶ್ರೀತ, ಶತ್ರುಭೀತ, ಸುಂದರ ಮುಖ, ಕಾವ್ಯ ವಿದ್ಯಾದಲ್ಲಿ ಕಾಲಕ್ಷೇಪ.

ನಿದ್ರಾವಸ್ಥೆ – ಎರಡು ಕಣ್ಣಲ್ಲಿ ನಿದ್ರೆಯಿಂದ ಕೆಂಪಾಗಿರುತ್ತವೆ. ವಿದೇಶ ನಿವಾಸ, ಸ್ತ್ರೀಧನ ವಿನಾಶವಾಗುತ್ತವೆ.

### ಚಂದ್ರ

ಜನುಃಕಾಲೇಕ್ಷಪಾನಾಥೆ ಶಯನ ಚೇದುಪಾಗತೆ ।
ಮಾನಿ ಶೀತಪ್ರಧಾನಶ್ಚ ಕಾಮಿ ವಿತ್ತವಿನಾಶಕಃ ॥೬೧॥

ರೋಗಾರ್ದಿತಾ ಮಂದಮತಿರ್ವಿಶೇಷಾದ್ ವಿತ್ತೇನ ಹೀನೋಮನುಜಃ ಕಠೋರ।
ಅಕಾರ್ಯಕಾರಿ ಪರವಿತ್ತಹಾರಿಕ್ಷಪಾಕರೆ ಚೇದುಪವೇಶನಸ್ಥೆ ॥೬೨॥

ನೇತ್ರಪಾಣೌ ಕ್ಷಪಾನಾಥೆ ಮಹಾರೋಗಿ ನರೋ ಭವೇತ್ ।
ಅನಲ್ಪಜಲ್ಪಕೋ ಧೂರ್ತಃ ಕುಕರ್ಮನಿರತಃ ಸದಾ ॥೬೩॥

ಯದಾ ರಾಕಾನಾಥೆ ಗತವತಿ ವಿಕಾಶಂ ಚ ಜನನೆ
ವಿಕಾರಾಃ ಸಂಸಾರೆ ವಿಕಲಗುಣರಾಶೇ ರವಿನಿಪಾತ್ ।
ನವಾಶಮಾಲಾ ಸ್ಯಾತ್ ಕರಿತುರಗಲಕ್ಷ್ಮ್ಯಾಪರಿವೃತಾ
ವಿಭೂಪಾ ಯೋಷಾಭಿಃ ಸುಖಮನುದಿನಂ ತೀರ್ಥಗಮನವಮ್ ॥೬೪॥

ಸಿತೆತರೆ ಪಾಪರತೋ ನಿಶಾಕರೆ ವಿಶೇಷತಃ ಕ್ರೂರತರೋ ನರೋ ಭವೇತ್।
ಸದಾಕ್ಷೀರೋಗೈಃ ಪರಿಪೀಡ್ಯಮನೋ ಬಲಕ್ಷಪಕ್ಷೆ ಗಮನೆ ಭಯಾತುರಃ ॥೬೫॥

ವಿಧಾವಾಗಮನೆ ಮಾನಿ ಪಾದರೋಗಿ ನರೋ ಭವೇತ್ ।
ಗುಪ್ತ ಪಾಪರತೋ ದೀನೋ ಮತಿತೋಷ ವಿವರ್ಜಿತಃ ॥೬೬॥

ಸಕಲಜನ ವದಾನ್ಯೋ ರಾಜ ರಾಜೇಂದ್ರ ಮಾನ್ಯೋ
ರತಿಪತಿಸಮಕಾಂತಿಃ ಶಾಂತಿಕೃತಾಮಿನೀನಾಮ್ ।
ಸಪಾದಿಸದಸಿ ಯಾತೆ ಚಾರು ಬಿಂಬೆ ಶಶಾಂಕೆ
ಭವತಿ ಪರಮರೀತಿ ಪ್ರೀತಿವಿಜ್ಞೋ ಗುಣಜ್ಞಃ ॥೬೭॥

ವಿಧಾವಾಗಮಕೆ ಮರ್ತ್ಯೋ ವಾಚಾಲೋ ಧರ್ಮಪೂರಿತಃ ।
ಕೃಷ್ಣಪಕ್ಷೆದ್ವಿಭಾರ್ಯಾ ಸ್ಯಾದ್ರೋಗೊ ದುಷ್ಟನರೋ ಹರಿ ॥೬೮॥

ಭೋಜನೆ ಜನುಷಿ ಪೂರ್ಣ ಚಂದ್ರಮಾ ಮಾನಯಾನ ಜನತಾ ಸುಖಂ
ನೃಣಾಮ್ ।
ಆತನೋತಿ ವನಿತಾ ಸುತಾಸುಖಂ ಸರ್ವಮೇವನ ಸಿತೆ ತರೆ ಶುಭಮ್
॥೬೯॥

ನೃತ್ಯಲಿಪ್ಸಾಗತೆ ಚಂದ್ರೆ ಸಬಲೆ ಬಲಾನ್ನರಃ ।
ಗೀತಿಜ್ಞೋಹಿ ರಸಜ್ಞಶ್ಚ ಕೃಷ್ಣೋ ಪಾಪಕರೋ ಭವೇತ್ ॥೭೦॥

ಕೌತುಕ ಭವನಂ ಗತವತಿ ಚಂದ್ರೆ ಭವತಿ ನೃಪತ್ವಂ ವಾ ಧನಪತ್ವಮ್ ।
ಕಾಮಕಲಾಸು ಸದಾ ಕುಶಲತ್ವಂ ವಾರವಧೂರತಿರಮಣ
ಪಟುತ್ವಮ್॥೭೧॥

ನಿದ್ರಾಗತೆ ಜನ್ಮನಿ ಮಾನವಾನಾಂ ಕಲಾಧರೆ ಜೀವಯುತೆ ಮಹತ್ವಮ್ ।
ಹೀನೇಂಗನಾಸಂಚ್ಚಿತ ವಿತ್ತನಾಶಃ ಶಿವಾಲಯೇ ರೌತಿ

ವಿಚಿತ್ರಮುಚ್ಚೈಃ॥೭೨॥

## ಜನ್ಮಸಮಯದಲ್ಲಿ

ಶಯನಾವಸ್ಥೆ – ಗತಚಂದ್ರ – ಮಾನಿ ಶೀತಲ ಸ್ವಭಾವ, ಕಾಮಿ, ಧನನಾಶ ಮಾಡುವವನು.

ಉಪವೇಶ – ಚಂದ್ರ – ರೋಗಪೀಡಿತ, ಮಂದ ಬುದ್ಧಿ, ಧನಹೀನ, ಕಠೋರ ಹೃದಯ, ಅಕರ್ತವ್ಯ ಮಾಡುವವ, ಪರಧನ ಅಪಹಾರಕ.

ನೇತ್ರವಾಣಿ – ಮಹಾರೋಗಿ, ಬಹಳ ಹರವಾದಿ, ಧೂರ್ತ ಸತತ ಕುಕರ್ಮನಿರತ.

ಪ್ರಕಾಶಾವಸ್ಥೆ – ಗುಣ ವಿಕಾಸ, ರಾಜಾಶ್ರಯ ಪಶು ಸುಖ (ಆನೆ, ಕುದುರೆ ಇತ್ಯಾದಿ) ವಾಹನಸೌಖ್ಯ, ಆ ಭೂಷಣಾದಿ ಸೌಖ್ಯ, ಸೌಖ್ಯದಿಂದ ಕೂಡಿದವ – ಪ್ರತಿನಿತ್ಯ ತೀರ್ಥಯಾತ್ರಾಗಾಮಿ.

ಗಮನಾವಸ್ಥೆ – ಕೃಷ್ಣ ಪಕ್ಷದ ಚಂದ್ರ ಗಮನಾವಸ್ಥೆಯಲ್ಲಿದ್ದರೆ – ಕ್ರೂರತರ ಸ್ವಭಾವದವನು, ನೇತ್ರರೋಗ ಪೀಡಿತನೂ ಆಗುವನು. ಶುಕ್ಲ ಪಕ್ಷದಲ್ಲಿ ಜನನ ಭಯಭೀತಿನಾಗಿರುತ್ತಾನೆ.

ಆಗಮನಾವಸ್ಥೆ – ಮಾನಿ ಕಾಲಿನಲ್ಲಿ ರೋಗ, ಗುಪ್ತ ರೂಪದಲ್ಲಿ ಪಾಪ ಪರಾಯಣಾಧೀನ ಬುದ್ಧಿ ಸಂತೋಷರಹಿತ(ನಿರ್ಬುದ್ಧಿ).

ಸಭಾವಸ್ಥಾ – ಸಮಸ್ತ ಜನರಲ್ಲಿ ವರಿಷ್ಠ, ರಾಜವಂದ್ಯ, ಮದನ ಸದೃಶ್ಯ ಕಾಂತಿಯುತ ಸ್ತ್ರೀಯರಿಗೆ ಶಾಂತಿ ನೀಡುವವನು, ಪ್ರೀತಿ ರೀತಿಗಳ ಅಭಿಜ್ಞ, ಗುಣಜ್ಞ.

ಆಗಮನಾವಸ್ಥೆ – ವಾಚಾಳ ಧರ್ಮಾತ್ಮಾ ಕೃಪಣ ಕೃಷ್ಣ ಪಕ್ಷದಲ್ಲಿ ಜನನವಾಗಿದ್ದರೆ ಇಬ್ಬರು ಹೆಂಡತಿಯರು ರೋಗಿ, ದುಷ್ಟತರ ಸ್ವಭಾವ, ಹಠಮಾರಿ.

ಭೋಜನವಾವಸ್ಥೆ – ಜಾತಕನಿಗೆ ಮಗ ಸನ್ಮಾನ, ವಾಹನ ಸಮಾಜ ಸ್ತ್ರೀ ಪುತ್ರಾದಿ ಸುಖ, ಕೃಷ್ಣ ಪಕ್ಷ ಜನನವಾದರೆ – ಫಲಶೂನ್ಯ.

ನೃತ್ಯಲಿಪ್ಸಾ – ಸಬಲ ಚಂದ್ರನಿದ್ದರೆ ಬಲಿಷ್ಠ ಗಾನ ನಿಪುಣ ಹಾಗೂ ರಸವೇತ್ತಾ – ಕೃಷ್ಣ ಪಕ್ಷ ಜನನವಾದರೆ ಪಾಪಕಾರಿ.

ಕೌತುಕಾವಸ್ಥೆ – ರಾಜ ಅಥವಾ ರಾಜ ಸದೃಶ್ಯನಾಗುವನು. ಪೂರ್ಣಧನಿ, ಕಾಮ ಕಲಾಪ್ರವೀಣ, ವಾರಾಗಾಂನಾ ರಮಣ.

ನಿದ್ರಾವಸ್ಥೆ – ಚಂದ್ರ, ಗುರುಸಹಿತ ಅಥವಾ ದೃಷ್ಟಿತನಾದರೆ ಆ ವ್ಯಕ್ತಿ ಸಮಾಜದಲ್ಲಿ ಮಹತ್ವಪೂರ್ಣ. ಇಲ್ಲವಾದಲ್ಲಿ ಅವನ ಮನೆಯಲ್ಲಿ ನರಿಗಳಿಗೆ ಇತ್ಯಾದಿ ಪ್ರಾಣಿಗಳ ವಿಚಿತ್ರ ಶಬ್ದ.

## ಮಂಗಳನ ಫಲ

ಶಯಗೆ ವಸುಧಾ ಪುತ್ರೇ ವ್ರಣೋಪೇತೆ ಜನೋಭವೇತ್ ।
ಬಹುನಾ ಕಂಡುನಾ ಯುಕ್ತೋ ದದ್ರುಣಾ ವಾ ವಿಶೇಷತಃ ॥೭೩॥

ಬಲಿಸದಾ ಪಾಪರತೋ ನರಃ ಸ್ಯಾದ್‌ಸತ್ಯವಾದಿ ನಿತರಾಂ ಪ್ರಗಬ್ಧಃ ।
ಧನೇಶ ಪೂರ್ಣೋ ನಿಜಧರ್ಮಹೀನೋ ಧರಾಸುತಶ್ಚೆದುಪವೇಶಸ್ಥಃ ॥೭೪॥

ಯದಾ ಭೂಮಿ ಸುತೋ ಲಗ್ನೆ ನೇತ್ರಪಾಣಿಮುಪಾಗತಃ ।
ದರಿದ್ರತಾ ತದಾ ಪುಂಸಾ ಮನ್ಯೆಭೆ ನಗರೇಶತಾ ॥೭೫॥

ಪ್ರಕಾಶೋ ಗುಣಸ್ಯಾಪಿ ವಾಸಃ ಪ್ರಕಾಶೆ ಧರಾಧೀಶ ಭರ್ತುಃ ಸದಾ ಮಾನವೃದ್ಧಿಃ ।
ಸುತೆ ಭೂಸುತೆ ಪುತ್ರಕಾಂತಿ ವಿಯೋಗೋ ಭವೆದ್ರಾಹ್ಯಣಾ ದಾರುಣೋ ವಾ ನಿಪಾತಃ ॥೭೬॥

ಗಮನೆ ಗಮನಂ ಕುರುತೆನುದಿನಂ ವ್ರಣಜಾಲಭಯಂ ವನಿತಾ ಕಲಹಃ ।
ಬಹುದದ್ರುಕ ಕಂಡು ಭಯಂ ಬಹುದಾ ವಸುಧಾ ತನಯೋ ವಸು
ಹಾನಿಕರಃ ॥೭೭॥

ಆಗಮನೆ ಗುಣಶಾಲಿ ಮಣಿಮಾಲಿ ವೈ ಕರಾಲಕರ ವಾಲಿ ।
ಗಜಹಂತಾ ರಿಪುಹಂತಾ ಪರಿಜನ ಸಂತಾಪಹಾರಕೋ ಭೌಮೆ ॥೭೮॥

ತುಂಗೆ ಯುದ್ಧ ಕಲಾ ಕಲಾಪ ಕುಶಲೋ ಧರ್ಮಧ್ವಜೋ ವಿತ್ತಪಃ ।
ಕೋಣೆ ಭೂಮಿಸುತೆ ಸಭಾಮುಪಗತೆ ವಿದ್ಯಾವಿಹೀನಃ ಪುಮಾನ್ ।

ಅಂತೆಪತ್ಯಕಲತ್ರಮಿತ್ರ ರಹಿತಃ ಪ್ರೋಕ್ತೆತರಸ್ಥಾನಗೆ ।
ವಶ್ಯಂ ರಾಜಸಭಾಬುಧೊ ಬಹುಧನಿ ಮಾನಿಚದಾನಿ ಜನಃ ॥೭೯॥

ಆಗಮನೆ ಭವತಿ ಭೂಮಿಜೆ ಜನೋ ಧರ್ಮಕರ್ಮರಹಿತೋ ಗದಾತುರಃ।
ಕರ್ಣಮೂಲ ಗುರು ಶೂಲರೋಗ ವಾನೇವ ಕಾತರಮತಿಃ ಕುಸಂಗಮಿ
॥೮೦॥

ಭೊಜನೆ ಮಿಷ್ಟಭೋಜೆ ಚ ಜನನೆ ಸಬಲೆ ಕುಜೆ ।
ನೀಚಕರ್ಮಕರೋ ನಿತ್ಯಂ ಮನುಜೋ ಮನವರ್ಜಿತಃ ॥೮೧॥
ನೃತ್ಯಲಿಪ್ಸಾಗತೆ ಭೂಸುತೆ ಜನ್ಮನಾಮಿಂದಿರಾ ರಾಶಿರಾಯಾತಿ
ಭೂಮಿಪತೆಃ।
ಸ್ವರ್ಣ ರತ್ನ ಪ್ರಬಾಲೈಃ ಸದಾ ಮಂಡಿತಾ ವಾಸಶಾಲಾ ನರಾಣಾಂ ಭವೇತ
ಸರ್ವದಾ ॥೮೨॥

ಕೌತುಕ ಭವತಿ ಕೌತುಕೆ ಕುಜೆ ಮಿತ್ರ ಪುತ್ರ ಪರಿಪೂರಿತೋ ಜನಃ ।
ಉಚ್ಚಗೆ ನೃಪತಿ ಗೇಹಮಂಡಿತಃ ಪೂಜಿತೋ ಗುಣವೈರೈ ಗುಣಾಕರೈಃ
॥೮೩॥

ನಿದ್ರಾವಸ್ಥಾಂಗತೆ ಭೌಮೇ ಕ್ರೋಧಿ ದೀಧನವರ್ಜಿತಃ ।
ಧೂರ್ತೋ ಧರ್ಮಪರಿಭ್ರಷ್ಟೋ ಮನುಷ್ಯೋ ಗದಪೀಡಿತಃ ॥೮೪॥

ಮಂಗಳ ಫಲ

ಶಯನ – ಮಂಗಳ ವ್ರಣರೋಗಿಯನ್ನಾಗಿಸುವನು – ತದ್ದುಚರ್ಮ ರೋಗಾದಿಗಳು ಹಾಗೂ ರೋಗಕಲೆಯುಕ್ತ.

ಉಪವೇಶ – ಬಲಿಷ್ಠ, ಸತತ ಪಾಪರತ, ಅಸತ್ಯವಾದಿ, ಪೂರ್ಣ ಪ್ರಗಲ್ಭ, ಧನ ಸ್ವಧರ್ಮಾವಿಮುಖ.

ನೇತ್ರಪಾಣಿ – ಈ ಅವಸ್ಥೆಯಲ್ಲಿ ಮಂಗಳ ಲಗ್ನ ಗತನಾದರೆ ದರಿದ್ರ, ಬೇರೆ ಸ್ಥಾನಗಳಲ್ಲಿದ್ದರೆ ನಗರಾಧೀಶ.

ಪ್ರಕಾಶವಸ್ಥಾ – ಗುಣ ವಿಕಾಸಶೀಲ, ಸರ್ವದಾ ರಾಜ್ಯದಿಂದ ಸನ್ಮಾನ. ಇದೇ ಗ್ರಹ ಪಂಚಮಮಭಾವಸ್ಥವಾದರೆ ಸ್ತ್ರೀಪುತ್ರ ವಿಯೋಗ, ರಾಹು ಯುಕ್ತನಾದರೆ – ಮಹಾನ್ ಅಪಘಾತ.

ಗಮನ – ಸದಾಭ್ರಮಣಶೀಲ, ವ್ರಣ ಸಮೂಹ ಭಾದೆಯಿಂದ ವಿಭೀತ ಸ್ತ್ರೀಯೊಡನೆ ಸದಾ ಕಲಹ – ಇಸಬು ತದ್ದು ಗಜ ಕರ್ಣಾದಿ ಚರ್ಮ ರೋಗಗಳು – ಧನಕ್ಷಯವು ಸಾಧ್ಯ.

ಆಗಮನಾವಸ್ಥೆ – ಗುಣವಂತ, ಮುತ್ತು ಮಣಿಗಳ ಹಾರ ಧಾರಣ ಹರಿತ ಖಡ್ಗ ಧಾರಣ, ಆನೆಯ ಹಂತಕ, ಶತ್ರು ಹಂತಕ, ಆತ್ಮೀಯ ಜನಕ್ಕೂ ನಷ್ಟಕಾರಕ.

ಸಭಾವಸ್ಥೆ – ಉಚ್ಚಸ್ಥ ಭೌಮ ಸಭಾವಸ್ಥೆಯಲ್ಲಿ ಯುದ್ಧಕಲಾ ಕುಶಲ ಧರ್ಮಿಷ್ಠ, ಧನಿ, ಅದೇ ಭೌಮ ನವಮದಲ್ಲಿ ನಿರ್ವಿದ್ಯಾದಿಪನಾಗುವನು. ದ್ವಾದಶ ದಲ್ಲಿ ಸ್ತ್ರೀ ಪುತ್ರವಿಹೀನ, ಅನ್ಯತ್ರ ರಾಜಪಂಡಿತ, ಮಹಾಧನಿ, ಮಾನಿ ದಾನಿಯಾಗು ವನು.

ಆಗಮನಾವಸ್ಥೆ – ಧರ್ಮ ಕರ್ಮರಹಿತ ರೋಗಿ ಕರ್ಣಮೂಲ ಅಥವಾ ಪ್ರಖರ ಶೂಲ ರೋಗದಿಂದ ಪೀಡಿತ – ಅಂಜು ಬುರುಕ ಕುಸಂಗ.

ಭೋಜನಾವಸ್ಥೆ – ಬಲಿಷ್ಠ ಮಂಗಳನಿದ್ದರೆ – ಮಿಷ್ಟಾನ್ ಭೋಜನ ಸತತ ನೀಚ ಕರ್ಮರತ ಮಾನರಹಿತ.

ನೃತ್ಯಾಲಿಪ್ಸ – ರಾಜನಿಂದ ಧನ ಪ್ರಾಪ್ತಿ – ಮನೆ ಸ್ವರ್ಣರತ್ನ ಪ್ರವಾಳ ಆದಿಯಿಂದ ಯುಕ್ತ ಹಾಗೂ ಸತತ ಅಲಂಕೃತ.

ಕೌತುಕಾವಸ್ಥ – ಮನುಷ್ಯ ವಿನೋದಿ ಮಿತ್ರ ಪುತ್ರರಿಂದ ಪೂರ್ಣ ಉಚ್ಚಭೌಮ – ರಾಜರಿಂದ ಹಾಗೂ ಪಂಡಿತರಿಂದ ಪೂಜಿತರನ್ನಾಗಿ ಮಾಡುತ್ತಾನೆ.

ನಿದ್ರಾವಸ್ಥೆ – ಕ್ರೋಧಿ, ಬುದ್ಧಿಹೀನ, ನಿರ್ಧನ, ಧೂರ್ತ, ಧರ್ಮಭ್ರಷ್ಟ, ರೋಗ ಪೀಡಿತನೂ ಆಗುವನು.

## ಬುಧನ ಅವಸ್ಥಾನುಸಾರ ಫಲ

ಕ್ಷುಧಾತುರೊ ಭವೇದಂಗೆ ಖಂಜ್ಯೋಗುಂಜಾನಿರೇಕ್ಷಣಃ ।
ಅನ್ಯಭೆ ಲಂಪಟೋ ಧೂರ್ತೋ ಮನುಜಃ ಶಯನೆ ಬುಧೆ ॥೮೫॥

ಶಶಾಂಕಪುತ್ರೆ ಜನುರಂಗಗೆಹೆ ಯದೋಪವೇಶೆ ಗುಣರಾಶಿಪೂರ್ಣಃ ।
ಪಾಪೇಕ್ಷಿತೆ ಪಾಪಯುತೆ ದರಿದ್ರೋ ಹಿತೆ ಶುಭೆ ವಿತ್ತಸುಖಿ ಮನುಷ್ಯಃ॥೮೬॥

ವಿದ್ಯಾವಿವೇಕ ರಹಿತೋ ಹಿತತೋಷಹೀನೋ
ಮಾನಿ ಜನೋ ಭವತಿ ಚಂದ್ರ ಸುತೇಕ್ಷಿಪಾಣೌ ।
ಪುತ್ರಾಲಯೇ ಸುತಕಲತ್ರ ಸುಖೇನ ಹೀನಃ
ಕನ್ಯಾಪ್ರಜಾ ನೃಪತಿಗೇಹ ಬುಧೋ ವರಾರ್ಥಃ ॥೮೭॥

ದಾತಾ ದಯಾಲುಃ ಬಲು ಪುಣ್ಯಕರ್ತಾ ವಿಕಾಶನೆ ಚಂದ್ರಸುತೆ ಮನುಷ್ಯಃ।
ಅನೇಕ ವಿದ್ಯಾರ್ಣವಪಾರಂಗತಾ ವಿವೇಕಪೂರ್ಣಃ ಬಲವರ್ಗಹಂತಾ
॥೮೮॥

ಗಮನೆ ಗಮನೆ ಭವತೋ ಗಮನೆ ಬಹುದಾ ವಸುದಾಧಿಪತೆರ್ಭವನೆ ।
ಭವನಂ ಚ ವಿಚಿತ್ರಮಲಂ ರಮಾಯಾ ವಿದಿ ಸುಜ್ಞ ಜನುಃ ಸಮಯೇ
ನಿತರಾಮ್ ॥೮೯॥

ಸಪದಿ ವಿದಿ ಜನಾನಾಮುಚ್ಚಗೆ ಜನ್ಮಕಾಲೆ
ಸದಸಿ ಧನಸಮೃದ್ಧಿಃ ಸರ್ವದಾ ಪುಣ್ಯವೃದ್ಧಿಃ ।
ಧನಪತಿ ಸಮತಾ ವಾ ಭೂಪತಾ ಮಂತ್ರಿ ತಾ ವಾ
ಹರಿಹರಪದ ಭಕ್ತಿಃ ಸಾತ್ವಿಕ ಭುಕ್ತಿಲಬ್ಧಿಃ ॥೯೦॥

ಆಗಮೇಜನುಷಿ ಜನ್ಮನಾಂ ಸದಾ ಚಂದ್ರಜೆ ಭವತಿ ಹೀನಸೇವಾಯ ।
ಅರ್ಥಸಿದ್ಧಿರಪಿ ಪುತ್ರಯುಗ್ಮತಾ ಬಾಲಿಕಾ ಭವತಿ ಮಾನದಾಯಿಕಾ
॥೯೧॥

ಭೋಜನೆ ಚಂದ್ರಜೆ ಜನ್ಮಕಾಲೆ ಯದಾ ಜನ್ಮನಾಯರ್ಥಹಾನಿಃ ಸದಾ
ವಾದತಃ ।
ರಾಜಭೀತ್ಯಾ ಕೃಶತ್ವಂ ಚಲತ್ವಂ ಮತೆ ರಂಗಸಂಗೋನ ಜಾಯಾ ನ
ಜಾಯಾಸುಖಮ್ ॥೯೨॥

ನೃತ್ಯಲಿಪ್ಸಾಗತೆ ಚಂದ್ರಜೆ ಮಾನವೋ ಮಾನಯಾನ ಪ್ರಬಲವ್ರಜೈಃ
ಸಂಯುತಾ ।
ಮಿತ್ರಪುತ್ರ ಪ್ರತಾಪ್ಯೈಃ ಸಭಾ ಪಂಡಿತಃ ಪಾಪಭೆ ವಾರವಾಮಾರತೊ
ಲಂಪಟಃ ॥೯೩॥

ಕೌತುಕೆ ಚಂದ್ರಜೆ ಜನ್ಮಕಾಲೆ ನೃಣಾ ಮಂಗಭೆ ಗೀತವಿದ್ಯಾನವದ್ಯಾ ಭವತ್।
ಸಪ್ತಮೇ ನೈ ಧನೆ ವಾರವಧ್ವಾ ರತಿಃ ಪುಣ್ಯಯುಕ್ತಾ ಮತಿಃ ಸದ್
ಗತಿಃ॥೯೪॥

ನಿದಾಶ್ರಿತೆ ಚಂದ್ರಸುತೆ ನ ನಿದ್ರಾಸುಖಂ ಸದಾ ವ್ಯಾಧಿ ಸಮಾಧಿ ಯೋಗಃ।
ಸಹೋತ್ಥ ವೈಕಲ್ಯಮನಲ್ಪತಾಪೋ ನಿಜನೆ ವಾದೋ ಧನಮಾನ ನಾಶಃ
॥೯೫॥

ಶಯನಾವಸ್ಥೆ – ಬುಧ ಶಯನಾವಸ್ಥೆಯಲ್ಲಿ ಲಗ್ನದಲ್ಲಿದ್ದರೆ ಕುಂಟನಾಗುತ್ತಾನೆ. ರಕ್ತನೇತ್ರದವನು ಅನ್ಯಭಾವದಲ್ಲಿ ಧೂರ್ತ ಲಂಪಟ ನಾಗುತ್ತಾನೆ.

ಉಪವೇಶ – ಲಗ್ನಸ್ಥನಾದರೆ ಗುಣಸಮೂಹದಿಂದ ಪೂರ್ಣ. ಪಾಪಗ್ರಹ ಯೋಗ ದೃಷ್ಟಿಯಿದ್ದರೆ ದರಿದ್ರ, ಶುಭಗ್ರ ದೃಷ್ಟಿ – ಧನಧಾನ್ಯದಿಂದ ಸುಖಿ.

ನೇತ್ರಪಾಣಿ – ವಿದ್ಯಾವಿವೇಕ ರಹಿತ, ಮಿತ್ರವಿಹೀನ, ಅಭಿಮಾನಿ. ಅದೇ ಪಂಚಮದಲ್ಲಿದ್ದರೆ ಪುತ್ರಸೌಖ್ಯವಿಹೀನ, ಕೇವಲ ಕನ್ಯೆಯರೇ ರಾಜ ಪಂಡಿತ ಸಂಪತ್ತಿನಿಂದ ಕೂಡಿದವ.

ಪ್ರಕಾಶಾವಸ್ಥೆ – ಹಾನಿ, ದಯಾಳು, ಪುಣ್ಯವಂತ, ಅನೇಕ ವಿಧಿ ವಿದ್ಯೆಯಲ್ಲಿ ಪಾರಂಗತ, ವಿವೇಕಿ, ದುಷ್ಪವಧಾತ್ಮಕ.

ಗಮನಾವಸ್ಥೆ – ರಾಜ ಭವನದಲ್ಲಿ ಹೋಗಿ ಬರುವ ಶ್ರೀಸಂಪನ್ನ ವಿಚಿತ್ರ ಮನೆಯುಳ್ಳವನು.

ಆಗಮನ – ಮೇಲಿನಂತೆ ಫಲ.

ಸಭಾಭವನ – ಉಚ್ಚ ಬುಧನಿದ್ದರೆ ಧನ ಸಮೃದ್ಧಿ, ಶೀಲ, ಪುಣ್ಯವಂತ, ಕುವರ ಸದೃಶ್ಯ, ಮಂತ್ರಿ ವಿಷ್ಣು ಹಾಗೂ ಈಶ ಭಕ್ತ ಸಾತ್ವಿಕ ಪ್ರವೃತ್ತಿ ಹಾಗೂ ಮೋಕ್ಷಫಲಪ್ರಾಪ್ತಿ.

ಆಗಮಾವಸ್ಥೆ – ನೀಚ ವ್ಯಕ್ತಿಯ ಸೇವೆಯಿಂದ ಧನಪ್ರಾಪ್ತಿ. ಇಬ್ಬರು ಗಂಡು

ಮಕ್ಕಳು ಸನ್ಮಾನ ದೊರಕಿಸಿಕೊಡುವ ಒಬ್ಬಳು ಕನ್ಯೆ.

ಭೋಜನಾವಸ್ಥೆ – ವಿವಾದದಿಂದ ಧನಕ್ಷಯ ರಾಜ ಭಯದಿಂದ ದುರ್ಬಲತಾ ಚಂಚಲ ಬುದ್ಧಿ ಶರೀರ ಸ್ತ್ರೀ ಹಾಗೂ ಸಾಂಸಾರಿಕ ಸುಖ ರಹಿತ.

ನೃತ್ಯಲಿಪ್ಸ – ಮಗ ಸನ್ಮಾನ ಸವರ್ಣ ರತ್ನಾದಿ ಪೂರ್ಣ ಮಿತ್ರ ಪುತ್ರ ಪ್ರತಾಪಯುಕ್ತ ಸಭಾ ಪಂಡಿತ ಪಾಪರಾಶಿಗತನಾದರೆ ವೇಶ್ಯಾಗಾಮಿ ಲಂಪಟ ನಾಗುತ್ತಾನೆ.

ಕೌತುಕಾವಸ್ಥೆ – ಬುಧನು ಲಗ್ನದಲ್ಲಿದ್ದರೆ ವಿಲಕ್ಷಣ ಗಾನವಿದ್ಯಾಪಟುತ್ವ. ಸಪ್ತಮ, ಅಷ್ಟಮ ಭಾವಗತನಾದರೆ ವೇಶ್ಯಾಗಾಮಿ, ನವಮದಲ್ಲಿ ಪುಣ್ಯವಂತ ಹಾಗೂ ಸದ್ಗತಿ ಪಡೆಯುವನು.

## ಗುರುಫಲ

ವಚಸಾಮಧಿಪೆ ತು ಜನುಃ ಸಮಯೇ ಶಯನೆ ಬಲವಾನಪಿ ಹೀನರವಃ ।
ಅತೀಗೌರತನುಃ ಬಲು ದೀರ್ಘಹನುಃ ಸುತರಾಮರಿಭೀತಿಯುತೋ
ಮನುಜಃ ॥೯೬॥

ಉಪವೇಶಂ ಗತವತಿ ಯದಿ ಜೀವೆ ವಾಚಲೊ ಬಹುಗರ್ವ ಪರೀತಃ ।
ಕ್ಷೋಣೀಪತಿರಿಪುಜನಪರಿತಪ್ತಃ ಪದಜಂಘಾಸ್ಯ ಕರ ವ್ರಣಯುಕ್ತಃ ॥೯೭॥

ನೇತ್ರಪಾಣಿಂಗತೆ ದೇವರಾಜಾರ್ಚಿತೋ ರೋಗಯುಕ್ತೊ ವಿಯುಕ್ತೊ
ವರಾರ್ಥ ಶ್ರೀಯೌ ।
ಗೀತನೃತ್ಯಪ್ರಿಯಃ ಕಾಮುಕಃ ಸರ್ವದಾ ಗೌರವರ್ಣೋ ವಿವರ್ಣೋ
ದೂಭವಪ್ರೀತಿಯುಕ್ ॥೯೮॥

ಗುಣಾನಾಮಾನಂದಂ ವಿಮಲಸುಖಕಂದಂ ವಿತನುತೆ ।
ಸದಾ ತೇಜಃ ಪುಂಜಂ ವ್ರಜಪತಿನಿ ಕುಂಜಂ ಪ್ರತಿಗಮಮ್ ।
ಪ್ರಕಾಶಂ ಚೇದುಚ್ಚೆ ದ್ರುಂತಮುಪಗತೋ ವಾಸವ ಗುರು –
ರ್ಗುರುತ್ವಂ ಲೋಕಾನಾಂ ಧನಪತಿಸಮತ್ವಂ ತನುಭೃತಾಮ್ ॥೯೯॥

ಸಾಹಸಿ ಭವತಿ ಮಾನವಃ ಸದಾ ಮಿತ್ರವರ್ಗಸುಖಪೂರಿತೋ ಮುದಾ ।
ಪಂಡಿತೋ ವಿವಿಧವಿತ್ತಮಂಡಿತೋ ವೇದವಿದ್ಯಾದಿ ಗುರೌ ಗಮಂಗತೆ
॥೧೦೦॥

ಆಗಮನೇ ಜನತಾ ವರಜಾಯಾ ಯಸ್ಯ ಜನುಃ ಸಮಯೋ ಹರಿಮಾಯಾ।
ಮುಚ್ಚಿತ ನಾಲಮಿಹಾಲಯಮದ್ಧಾ ದೇವಗುರೌ ಪರಿತಃ
ಪರವಿದ್ಧಾ ॥೧೦೧॥

ಸುರಗುರುಸಮವಕ್ತ್ರಾ ಶುಭಭುಕ್ತಾ ಫಲಾಢ್ಯಃ ।
ಸದಸಿ ಸಪಾದಿ ಪೂರ್ಣೋ ವಿತ್ತಮಾಣಿಕ್ಯ ಮಾನ್ಯೈಃ
ಗಜತುರನಗ ರಥಾಢ್ಯೋ ದೇವತಾಧೀಶ ಪೂಜ್ಯೇ ।
ಜನುಷಿ ವಿವಿಧ ವಿದ್ಯಾಗರ್ವಿತೋ ಮಾನವಃ ಸ್ಯಾತ್ ॥೧೦೨॥

ನಾನಾವಾಹನಮಾನಯಾನ ಪಟಲೀ ಸೌಖ್ಯಂ ಗುರುವಾಗಮೇ ।
ಭೃತ್ಯಾಪತ್ಯಕಲತ್ರ ಮಿತ್ರಜಸುಖಂ ವಿದ್ಯಾನಾವದ್ಯಾ ಭವೇತ್
ಕ್ಷೋಣಿಪಾಲ ಸಮಾನತಾನವರತಂ ಚಾತೀವಹೃದ್ಯಾ ಮತಿಃ ।
ಕಾವ್ಯನಂದರತಿಃ ಸದಾ ಹಿತಗತಿಃ ಸರ್ವತ್ರ ಮನೋನ್ನತಿಃ ॥೧೦೩॥

ಭೋಜನೇ ಭವತಿ ದೇವತಾಗುರೌ ಯಸ್ಯತಸ್ಯ ಸತತಂ ಸುಖಭೋಜನಮ್।
ನೈವಮುಚ್ಚತಿ ರಮಾಲಯಂ ತದಾ ವಾಜಿವಾರಣರಥೈಶ್ಚ ಮಂಡಿತಮ್
॥೧೦೪॥

ನೃತ್ಯಲಿಪ್ಸಾಗತೆ ರಾಜಮಾನ ಧನಿ ದೇವತಾಧೀಶ ವಂದ್ಯಃ ಸದಾ ಧರ್ಮವಿತ್।
ತಂತ್ರವಿಜ್ಞೋ ಬುಧೈರ್ಮಂಡಿತಃ ಪಂಡಿತಃ ಶಬ್ದ ವಿದ್ಯಾನವದ್ಯೋ ಹಿ
ಸದ್ಯೋ ಜನಃ ॥೧೦೫॥

ಕುತೂಹಲ ಕೌತುಕೆ ಮಹಾಧನಿ ಜನಃ ಸದಾ ।
ನಿಜಾನ್ವಯೋ ಚ ಭಾಸ್ಕರಃ ಕೃಪಾಕಲಾಧರಃ ಸುಖೀ ।
ನಲಿಂಪರಾಜಪೂಜಿತೆ ಸುತೇನ ಭೂನಯೇನ ವಾ ।
ಯುತೆ ಮಹಾಬಲಿ ಧರಾಧಿಪೇಂದ್ರ ಸದ್ಮ ಪಂಡಿತಃ ॥೧೦೬॥

ಗುರೌ ನಿದ್ರಾಗತೆ ಯಸ್ಯ ಮೂರ್ಖತಾಸರ್ವ ಕರ್ಮಣಿ ।
ದರಿದ್ರತಾಪರಿ ಕ್ರಾಂತ ಭವನಂ ಪುಣ್ಯವರ್ಜಿತಮ್ ॥೧೦೭॥

ಶಯನಾವಸ್ಥೆ – ಬಲವಂತ ಗರ್ವಯುತ ಧ್ವನಿ ಅಧಿಕ ಕೆಂಪು ವರ್ಣ (ಬಿಳಿ) ಉದ್ದದಾಡಿ ಹಾಗೂ ಶತ್ರುಭಯಯುಕ್ತ.

ಉಪವೇಶ – ವಾಚಾಳ ಸೊಕ್ಕಿನವನು ರಾಜ ಹಾಗೂ ವೈರಿಗಳಿಂದ ಸಂತಾಪ ಕಾಮಿ ಟೊಂಕ ಮುಖ, ಕೈಗಳ ಮೇಲೆ ವ್ರಣ.

ನೇತ್ರಪಾಣಿ – ರೋಗಿ, ಸಂಪತ್ತು ವಿಹೀನ, ಹಾಡು, ನೃತ್ಯಾರಾಧಕ, ಸತತ ಕಾಮಿ – ಬಿಳಿ ವರ್ಣ ಇತರ ವರ್ಣದವರೊಡನೆ ಪ್ರೀತಿಯಿಂದ ನಡೆದುಕೊಳ್ಳುವವ.

ಪ್ರಕಾಶ – ತನ್ನ ಸುಗುಣದಿಂದ ಆನಂದರಿತ ಅನೇಕ ವಿದ್ಯಾ ಸೌಖ್ಯ ತೇಜದಿಂದ ಗಮನ ಗುರು ಉಚ್ಚನಾಗಿದ್ದರೆ ಜನರಲ್ಲಿ ಗೌರವಪೂರ್ಣ, ಕುಬೇರನ ಸಮಾನ ಧನಿ.

ಗಮನಾವಸ್ಥೆ – ಜಾತಕನನ್ನು ಸಾಹಸಿ ಮಿತ್ರವರ್ಗದಿಂದ ಸೌಖ್ಯ, ಪೂರ್ಣ ಪಂಡಿತ, ವಿವಿಧ ಸಂಪತ್ತುಪೂರ್ಣ (ಧನಧಾನ್ಯ ಇತ್ಯಾದಿ) ವೇದವೇತ್ತಾ.

ಆಗಮನ – ಮನೆಯ ತುಂಬ ಬಂಧುಬಳಗ, ಸುಂದರ ಸ್ತ್ರೀ ಲಕ್ಷ್ಮಿ ಎಂದೂ ಇವನನ್ನು ಬಿಟ್ಟು ಹೋಗಲಾರಳು. ಅರ್ಥಾತ್ ಜನಪ್ರಿಯ ಪೂರ್ಣ ಧನವಂತ.

ಸಭಾವಾಸ – ಗುರುವಿನಂತೆ ಪಾಂಡಿತ್ಯ ಪೂರ್ಣಮಾತು ಸ್ವಚ್ಛ ಮುಕ್ತಮಾತು ಧನ ಮಾಣಿಕ್ಯಾದಿ ಸಂಪನ್ನ ಪಶು, ಸಂಪತ್ತು, ವಾಹನ ಸೌಖ್ಯ. ಅನೇಕ ವಿಧ ವಿದ್ಯಾಪೂರ್ಣ ಜ್ಞಾನದಿಂದ ಗರ್ವಿತ.

ಆಗಮ – ಅನೇಕ ವಿಧ ವಾಹನಗಳ ಸೌಖ್ಯ (ಸೈಕಲ್ ಕಾರು) ಭೃತ್ಯ ಪುತ್ರಾದಿ ಸುಖಿ, ಮಿತ್ರ ವರ್ಗಾದಿ ಕೂಡಿದವ, ವಿಲಕ್ಷಣ ವಿದ್ಯ ಕರಗತ – ರಾಜ್ಯದೊಂದಿಗೆ ಸತತ ಸಮತೆ ವಿಮಲ ಬುದ್ಧಿ ಕಾವ್ಯಾನಂದ ಸರ್ವತ್ರ ಸನ್ಮಾನಿತ.

ಭೋಜನ – ಸುಖಭೋಜನ ಸದಾಕಾಲ ಲಕ್ಷ್ಮಿ ಮನೆಯಲ್ಲಿ ವಾಸ – ವಾಹನಸೌಖ್ಯ.

ನೃತ್ಯಲಿಪ್ಸ – ರಾಜಮಾನ್ಯ, ಧನಿ, ಧರ್ಮವೇತ್ತಾ ಗುರು ಸದೃಶ್ಯ ಪೂಜ್ಯ ತಂತ್ರಜ್ಞ ವಿದ್ವದ್ಗುಣಪಂಡಿತ ಶಬ್ದಶಾಸ್ತ್ರ ಪ್ರವೀಣ.

ಕೌತುಕಾವಸ್ಥೆ – ಕುತೂಹಲಿ, ಮಹಾಧನಿ, ರಾಜಮಾನ್ಯ ತನ್ನ ವಂಶದಲ್ಲಿ ಸೂರ್ಯ, ಕೃಪಾಳು ಸುಖಿ ಪುತ್ರಭೂಮಿ ನೀತಿಯುಕ್ತ ಮಹಾಬಲಶಾಲಿ – ದರ್ಬಾರದಲ್ಲಿ ಪಂಡಿತ.

ನಿದ್ರಾವಸ್ಥೆ – ಎಲ್ಲ ಕಾರ್ಯದಲ್ಲಿ ಶತಮೂರ್ಖ, ದಾರಿದ್ರ್ಯಯುಕ್ತ ಅವನ ಮನೆ ಪುಣ್ಯವರ್ಜಿತವಾಗಿರುತ್ತದೆ.

## ಶುಕ್ರಫಲ

ಜನೋಬಲಿಯಾನಪಿ ದಂತರೋಗಿ ಭೃಗೌ ಮಹಾರೋಷ ಸಮನ್ವಿತಪ ಸ್ಯಾತ್ ।
ಧನೇನಹೀನಃ ಶಯನಂ ಪ್ರಪಾತೆ ವಾರಾಂಗನಾಸಂಗಮಲಂ ಪಟತ್ವ ॥೧೦೪॥

ಯದಿ ಭವೇದುಶನಾ ಉಪವೇಶೇನ ನವ ಮಣೀವ್ರಜಕಾಞ್ಚನ ಭೂಷಣಃ।
ಸುಖಮಜಸ್ರ ಪರಿಕ್ಷ್ಯ ಆದರಾದವನಿಪಾದಪಿ ಮನಸ್ಮನ್ನತಿಃ ॥೧೦೯॥

ನೇತ್ರಪಾಣಂ ಗತೆ ಲಗ್ನಗೇಹೆ ಕವೌ ಸಪ್ತಮೇ ಮಾನಭೆ ಯಸ್ಯ ತಸ್ಯಧ್ರುವಮ್।
ನೇತ್ರಪಾತೆ ನಿಪಾತೋ ಧನಾನಾಮಲಂ ಚೌನ್ಯಭೆ ವಾಸಶಾಲಾ ವಿಶಾಲಾ
ಭವೇತ್ ॥೧೧೦॥

ಸ್ವಾಲಯೇ ತುಂಗಭೆ ಮಿತ್ರಭೆ ಭಾರ್ಗವೆ ತುಂಗಮಾತಂಗಲೀಲಾ ಕಲಾಪಿ
ಜನಃ ।
ಭೂಪತೆ ಸ್ತುಲ್ಯ ಏವಪ್ರಕಾಶಂ ಗತೆ ಕಾವ್ಯ ವಿದ್ಯಾಕಲಾಕೌತುಕಿ ಗೀತವಿತ್
॥೧೧೧॥

ಗಮನೆ ಜನನೆ ಶುಕ್ರೆ ತಸ್ಯ ಮಾತಾ ನ ಜೀವತಿ ।
ಆಧಿಯೋಗೋ ವಿಯೋಗಸ್ತ್ತ ಜನಾನಾಮರಿಭೀತಿತಃ ॥೧೧೨॥

ಆಗಮನಂ ಭೃಗು ಪುತ್ರೆ ಗನವತಿ ವಿತ್ತೇಶ್ವರೋ ಮನಜಃ ।
ಸತ್ತೀರ್ಥಶಮಶೀಲೋ ನಿತ್ಯತ್ಸಾಹಿ ಕರಾಂಗಿಫ್ರರೋಗಿ ಚ ॥೧೧೩॥

ಅನಾಯಾಸೇನಾಲಂ ಸಪಾದಿ ಮಹಸಾ ಯಾತಿ ಸಹಸಾ ।
ಪ್ರಗಲ್ಭತ್ವಂ ರಾಜ್ಞಃ ಸದಾಪಿ ಗುಣವಿಜ್ಞಃ ಕಿಲಕವೌ ।
ಸಭಾಯಾಮಾವಾತೆ ರಿಪುನಿವಹಹಂತಾ ಧನಪತೆಃ
ಸಮತ್ವಂ ವಾ ದಾತಾ ಬಲತುರಗಗಂತಾ ನರವಿರಃ ॥೧೧೪॥

ಆಗಮೆ ಭಾರ್ಗವೆ ನಾಗಮೋ ಜಮ್ಮಿನಾಮರ್ಥಶಾಶೆ ರರಾತೆರತಿವಕ್ಷ್ಮತಿಃ।
ಪುತ್ರಪಾತೋ ನಿಪಾತೋ ಜನಾನಾಮಪಿ ವ್ಯಾದಿಮೀತಃ ಪ್ರಿಯಾ
ಭೋಗಹಾನಿರ್ಭವೇತ್ ॥೧೧೫॥

ಕ್ಷುದಾತುರೋ ವ್ಯಾಧಿನಿ ಪೀಡಿತಹ ಸ್ಯಾದನೇಕಧಾರಾತಿ ಭಯಾರ್ಧಿತಶ್ಚ।
ಕವೌ ಯದಾ ಭೋಜನಗೆ ಯುವತ್ಯಾ ಮಹಾಧನಿ ಪಂಡಿತ ಮಂಡಿತಶ್ಚ ॥೧೧೬॥

ಕಾವ್ಯವಿದ್ಯಾ ನವಿದ್ಯಾಚ ಹೃದ್ಯಾಮತಿಃ ಸರ್ವದಾ ನೃತ್ಯಲಿಪ್ಸಾಗತೆ
ಭಾರ್ಗವೆ ।
ಶಂಖವೀಣಾ ಮೃದಂಗಾದಿಗಾನಧ್ವನಿ ವೃತಾನ್ಯೈಪುಣ್ಯ ವೇತಸ್ಯ
ವಿದ್ಯೋನ್ನತಿಃ ॥೧೧೭॥

ಕೌತುಕ ಭವನಂ ಗತವತಿ ಶುಕ್ರೇ ಶುಕ್ರಶತ್ವಂ ಸದಾಸಿ ಮಹತ್ತ್ವಮ್ ।
ಹೃದ್ಯಾ ವಿದ್ಯಾ ಭವತಿ ಚ ಪುಂಸಾಃ ಪದ್ಮಾನಿವಸತಿಸದ್ಮಾದರತಃ
॥೧೧೮॥

ಪರಸೇವಾರತೋ ನಿತ್ಯಂ ನಿದ್ರಾಮುಪಗತೆ ಕವೌ ।
ಪರನಿಂದಾಪರೋ ವೀರೋ ವಾಚೋಲೋ ಭ್ರಮತೆ ಮಹೀವೌ ॥೧೧೯॥

ಶಯನಾವಸ್ಥೆ – ಶುಕ್ರ – ಶಯನಾವಸ್ಥೆಯಲ್ಲಿ ಜಾತಕ ಬಲವಂತನಾಗಿದ್ದರೂ ದಂತರೋಗಿ, ಮಹಾರೋಷಶೀಲ, ನಿರ್ಧನ ಹಾಗೂ ವೇಶ್ಯಾಗಾಮಿಯಾಗುತ್ತಾನೆ.

ಉಪವೇಶ – ಮಣಿಗಣ ಸುವರ್ಣಾಭೂಷಣದ ಸುಖ ಪ್ರಾಪ್ತವಾಗುತ್ತದೆ – ಶತ್ರುಕ್ಷಯ – ಆದರ ರಾಜಸನ್ಮಾನ.

ನೇತ್ರಪಾಣಿ – ಲಗ್ನ ಸಪ್ತಮ ಅಥವಾ ದಶಮದಲ್ಲಿದ್ದರೆ ನೇತ್ರಹೀನತೆಯಿಂದ ಧನವ್ಯಯ. ಅದೇ ಶುಕ್ರ ಬೇರೆ ಸ್ಥಾನದಲ್ಲಿದ್ದರೆ ವಿಶಾಲ ಮನೆಯುಳ್ಳವನಾಗುತ್ತಾನೆ.

ಪ್ರಕಾಶ – ಸ್ವಂತ ಮನೆ ಸ್ವೋಚ್ಚ ಮಿತ್ರಸ್ಥನಾಗಿದ್ದರೆ ಮದೋನ್ಮತ್ತ – ಆನೆಯಂತೆ ಲೀಲಾಶೀಲ ಹಾಗೂ ರಾಜತುಲ್ಯ ಸುಖಿಯಾಗುತ್ತಾನೆ. ಕಾವ್ಯ ವಿದ್ಯೆಯಲ್ಲಿ ಹಾಗೂ ಕಲೆಗಳಲ್ಲಿ ಉತ್ಕಂಟಶೀಲ.

ಗಮನಾವಸ್ಥೆ – ತಾಯಿ ಜೀವಿತಳಾಗಿರುವುದಿಲ್ಲ. ಮಾನಸಿಕ ಕಷ್ಟ ಅನುಭವಿಸ ಬೇಕಾಗುವುದು, ಬಂಧು ವಿಯೋಗ, ಶತ್ರು ಭಯದಿಂದ ಜರ್ಜರಿತ.

ಆಗಮವಸ್ಥಾ – ಧನವಂತ, ತೀರ್ಥಭ್ರಮಣಶೀಲ, ಉತ್ಸಾಹ ಸಂಪನ್ನ ಕೈಕಾಲು ರೋಗಿ.

ಸಭಾವಸ್ಥಾ – ರಾಜ ಭವನದಲ್ಲಿ ಅನಾಯಾಸವಾಗಿ ತನ್ನ ತೇಜಸ್ಸಿನಿಂದ ಪ್ರಗಲ್ಭ, ಗುಣಜ್ಞ, ಶತ್ರುಹಂತಾ ಕುಬೇರ ಸದೃಶ್ಯ ಧನಿ ವಾಹನಸೌಖ್ಯ ನರಶ್ರೇಷ್ಠ.

ಆಗಮಾವಸ್ಥೆ – ಧನಾಗಮದಲ್ಲಿ ಅಧಿಕ ಶತ್ರುಗಳು ಪುತ್ರಹೀನ ಪರಿಜನ (ಬಂಧು ಬಳಗ) ವಿಯೋಗ, ವೃದ್ಧಿ ಭಯ, ಸ್ತ್ರೀಸೌಖ್ಯ ಕಡಿಮೆ.

ಭೋಜನಾವಸ್ಥೆ – ಕ್ಷುಧಾರ್ತ ವ್ಯಾಧಿಗ್ರಸ್ತ ಅನೇಕ ಪ್ರಕಾರ ಶತ್ರುದ್ವಾರಾ ಭಯಪೀಡಿತ ಶುಕ್ರ ಕನ್ಯಾದಲ್ಲಿದ್ದರೆ ಮಹಾದಶವಂತನಾಗುತ್ತಾನೆ. ಪಂಡಿತ ಮಂಡಿತನಾಗುತ್ತಾನೆ.

ನೃತ್ಯಲಿಪ್ಸಾಗತ – ಕಾವ್ಯವಿದ್ಯಾ ನಿಪುಣ, ಸಹೃದಯ ಶಂಖ ಸಿತಾರ ಮೃದಂಗ ಆದಿ ಗಾನ ಸಾಧನೆಗಳ ಪ್ರವೀಣ, ಧನನ್ನೋತಿಶೀಲ.

ಕೌತುಕಾವಸ್ಥೆ – ಇಂದ್ರ ತುಲ್ಯ ಐಶ್ವರ್ಯ ಶಾಲಿ ಸಭಾಚತುರ ಉತ್ಕೃಷ್ಟ ವಿದ್ಯಾ ಚತುರ ಲಕ್ಷ್ಮಿ ಇವನ ಮನೆಯಲ್ಲಿ ಸ್ಥಿರರೂಪಳು.

ನಿದ್ರಾವಸ್ಥೆ – ಜಾತಕ ಪರರ ಸೇವಕ, ಪರನಿಂದಕ, ವೀರವಾಚಿ, ಪ್ರತಿದಿನ ಹೊರಗೆ ತಿರುಗಬೇಕೆನ್ನುವವನು.

## ಶನಿ ಫಲ

ಕ್ಷುತ್‌ಪಿಪಾಸಾ ಪರಿಕ್ರಾಂತೋ ವಿಶ್ರಾಂತೋ ಶಯನೆ ಶನೌ ।
ವಯಸಿ ಪ್ರಥಮೇ ರೋಗಿ ತತೋ ಭಾಗ್ಯವಂತಾಂ ವರಃ ॥೧೨೦॥

ಭಾನೋಃ ಸುತೆ ಚೇದ್ರುಪವೇಶನಸ್ಥೆ ಕರಾಲಕರಾತಿ ಜನಾನುತ್ತಿಪ್ತಃ ।
ಅಪಾಯಶಾಲೀ ಬಲು ದದ್ರುಮಾಲಿ ನರೋಭಿಮಾನಿ ನೃಪದಂಡಯುಕ್ತಃ
॥೧೨೧॥

ನಯನ ಪಾಣಿಗತೆ ರವಿನಿಂದನೆ ಪರಮಯಾ ರಮಯಾ ರಮಯಾಯುತಃ।
ನೃಪತಿತೋ ಹಿತತೋ ಮತಿ ತೇಷಕೃದ್‌ಬಹುಕಲಾಕಲಿತೋ
ವಿಮಲೋತ್ತ್ರಕೃತ್ ॥೧೨೨॥

ನಾನಾಗುಣ ಗ್ರಾಮಧನಾಧಿಶಾಲಿ ಸದಾ ನರೋ ಬುದ್ಧಿ ವಿನೋದಮಾಲಿ।
ಪ್ರಕಾಶನೆ ಭಾನುಸುತೆ ಸುಭಾನುಃ ಕೃಪಾನುರಕ್ತೋ ಹರಪಾದಭಕ್ತಃ ॥೧೨೩॥

ಮಹಾಧನಿ ನಂದನ ನಂದಿತಃ ಸ್ಯಾದಪಾಯಕಾರಿ ರಿಪುಭೂಮಿಹಾರಿ ।
ಗಮೇಶನೌ ಪಂಡಿತರಾಜ ಭಾವಂ ಧರಾಪತೆ ರಾಯತನೆ ಪ್ರಯಾತಿ ॥೧೨೪॥

ಆಗಮನೆ ಗರ್ಧಮಪದಯುಕ್ತಃ ಪುತ್ರಕಲತ್ರ ಸುಖೇನ ವಿಮುಕ್ತಃ ।
ಭಾನುಸುತೆ ಭ್ರಮತೆ ಭುವಿ ನಿತ್ಯಂ ದೀನಮಾನಾ ವಿಜನಾಶ್ರಯ ಭಾವಮ್
॥೧೨೫॥

ರತ್ನಾವಲಿ ಕಾಂಚನ ಮೌಕ್ತಿಕಾನಾಂ ದ್ರಾತೀನ ನಿತ್ಯಂ ವ್ರಜತಿ ಪ್ರಮೋದಮ್।
ಸಮಾಗತೆ ಭಾನು ಸುತೆ ನಿತಾಂತಂ ನಯೇನ ಪೂರ್ಣ ಮನುಜೋ ಮಹೌಜಃ ॥೧೨೬॥

ಆಗಮೆ ಗದಸಮಾಗಮೋ ನೃಣಾಮಬ್ಜ ಬಂಧು ತನಯೇ ಯದಾ ತದಾ।
ಮಂದಮೇವ ಗಮನಂ ಧರಾಪತೆರ್ಯಾಚನಾವಿರಹಿತಾ ಮತಿಃ ಸದಾ ॥೧೨೭॥

ಸಂಗತೆ ಜನುಷಿ ಭಾನು ನಂದನೆ ಭೋಜನಂ ಭವತಿ ಭೋಜನಂ ರಸೈಃ ।
ಸಂಯುತಂ ನಯನ ಮಂದತಾ ತತಾ ಮೋಹತಾಪಪರಿತಾ ಪಿತಾಮತಿಃ ॥೧೨೮॥

ನೃತ್ಯಲಿಪ್ಸಾಗತೆ ಮಂದೆ ಧರ್ಮಾತ್ಮಾ ವಿತ್ತಪೂರಿತಃ ।
ರಾಜ್ಯಪೂಜ್ಯೋ ನರೋ ಧಿರೋ ಮಹಾವೀರೋ ರಣಾಂಗಣೆ ॥೧೨೯॥

ಭವತಿ ಕೌತುಕಭಾವ ಮುಪಗತೆ ರವಿಸುತೆ ವಸುಧಾವಸು ಪೂರಿತಃ ।
ಅತೀಸುಖಿ ಸುಮುಖಿ ಸುಖಿಪೂರಿತಃ ಕವಿತಯಾಮಲಯಾ ಕಲಯಾನರಃ ॥೧೩೦॥

ನಿದ್ರಾಗತೆ ವಾಸರನಾಥ ಪುತ್ರೆ ಧನಿ ಸದಾ ಚರುಗುಣ್ಯೈ ರೂಪಿತಃ ।
ಪರಾಕ್ರಮಿ ಚಂಡವಿಪಕ್ಷಹಂತಾ ಸುವಾರಕಾಂತಾರತಿ ರೀತಿ ವಿಜ್ಞಾಃ
॥೧೩೦॥

ಜನ್ಮಸಮಯದಲ್ಲಿ ಶಯನಾವಸ್ಥೆಯಲ್ಲಿಂದ ಇತರ ಅವಸ್ಥೆಗನುಗುಣವಾಗಿ ಶನಿಯು ವಿಚಾರ.

ಶಯನಾವಸ್ಥೆ – ಚಿಕ್ಕವಯಸ್ಸಿನಲ್ಲಿ ಹಸಿವೆ, ನೀರಡಿಕೆಯಿಂದ ಬಳಲಿಕೆ, ರೋಗಿ ಆದರೆ ಕುಮಾರವಸ್ಥೆಯಲ್ಲಿ ಭಾಗ್ಯವಂತನಾಗುತ್ತಾನೆ.

ಉಪವೇಶನ – ಪ್ರಬಲ ರಾಜ್ಯಾಧಿಕಾರಿಯಿಂದ ಪೀಡಿತ, ಖರ್ಚಿಕ ಚರ್ಮರೋಗಿ (ಕಲೆ) ಅಭಿಮಾನಿ, ರಾಜದಂಡಯುಕ್ತ.

ನೇತ್ರಪಾಣಿ – ಪರಮ ಸುಂದರ ಸ್ತ್ರೀ ಪತ್ನಿಯಾಗುವಳು ಹಾಗೂ ರಾಜ, ಮಿತ್ರರಿಂದ ಉಪಕೃತ ವಿವಿಧ ಕಲಾಭಿಜ್ಞ ಪ್ರಿಯವಕ್ತಾ.

ಪ್ರಕಾಶನ ಅವಸ್ಥೆ – ಗುಣಧನ ಬುದ್ಧಿಯುಕ್ತಿ ತೇಜಸ್ವಿ, ದಯಾವಾನ್, ಶಿವಭಕ್ತ.

ಗಮನ ಅವಸ್ಥೆ –ಮಹಾಧನಿಕ, ಪುತ್ರ ಸುಖಿ ಪರಿಪೂರ್ಣ, ಖರ್ಚಿಕ ಶತ್ರುವಿನ ಆಸ್ತಿ ಕಬಳಿಸುವವ, ರಾಜದ್ವಾರದಲ್ಲಿ ಪಂಡಿತ ರಾಜನೆನಿಸಿಕೊಳ್ಳುವನು.

ಆಗಮನಾವಸ್ಥೆ – ಕರ್ತೃಯೆನ್ನಿಸಿಕೊಳ್ಳುವವ (ಮೂರ್ಖ)ಪುತ್ರ ಸ್ತ್ರೀ ಸುಖಿ ವಂಚಿತ, ನಿತ್ಯಹಾನಿ ನಿರಾಶ್ರಿತ, ಪೃಥ್ವಿಯ ಮೇಲೆ ಭ್ರಮಣಶೀಲ.

ಸಭಾವಸ್ಥಾ – ಮಣಿ, ರತ್ನ, ಮುತ್ತುಗಳಿಂದ ಹಾಗೂ ಸುವರ್ಣಯುಕ್ತ ನೀತಿವಂತೆ ಮಹಾತೇಜಸ್ವಿ.

ಆಗಮನಾವಸ್ಥೆ – ರೋಗಯುಕ್ತ ಯಾಚನಾ ವೃತ್ತಿಯಲ್ಲಿ ಕುಶಲನಲ್ಲ.

ಭೋಜನಾವಸ್ಥೆ – ಸರಸ ಭೋಜನ ಪ್ರಾಪ್ತಿ. ಕಣ್ಣು ಮಂದ ಮೋಹದಿಂದ ಸಂತಪ್ತ.

ನೃತ್ಯಲಿಪ್ಸಾ – ಧರ್ಮಿಷ್ಟ, ಧನಿ, ರಾಜಪೂಜ್ಯ, ಧೀರ, ರಣಕ್ಷೇತ್ರದಲ್ಲಿ ಮಹಾವೀರ.

ಕೌತುಕಾವಸ್ಥೆ – ಭೂಮಿ, ಮನೆ, ಸಂಪತ್ತಿನಿಂದಯುಕ್ತ, ಅತಿ ಸುಖಿ, ಸುಂದರ, ಸ್ತ್ರೀ ಸೌಖ್ಯ, ವಿಮಲ ಕಾವ್ಯಕಲಾಯುಕ್ತ.

ನಿದ್ರಾವಸ್ಥೆ – ಸದೈವ ಧನವಂತ ಸದ್ಗುಣೋಪೇತ ಪರಾಕ್ರಮಿ, ಪ್ರಬಲ ಶತ್ರುನಾಶ, ವೇಶ್ಯಾಪ್ರೇಮಿ – ಪ್ರೇಮ(ಕಾಮ) ಕಲಾನಿಪುಣ.

## ರಾಹುವಿನ ಅವಸ್ಥಾ ಗತ ಫಲ

ಯದಾಗಮೋ ಜನ್ಮನಿ ಯಸ್ಯ ರಾಹೌ ಕ್ಲೇಶಾಧಿಕತ್ವಂ ಶಯನಂ ಪ್ರಯಾತೇ।
ವೃಷೇಥ ಯುಗ್ಮೇಪಿ ಚ ಕನ್ಯಾಕಾಯಾಮಜೇ ಸಮಾಜೋ ಧನದಾನ್ಯರಾಶೇಃ
॥೧೩೨॥

ಉಪವೇಶನಮಿಹ ಗತವತಿ ರಾಹೌ ದದ್ರುಗದೇನ ಜನಃ ಪರಿತಪ್ತಃ ।
ರಾಜಸಮಾಜಯುತೋ ಬಹುಮಾನಿ ವಿತಸುಖೇನ ಸದಾ ರಹಿತಃ ಸ್ಯಾತ್
॥೧೩೩॥

ನೇತ್ರಪಾಣಾವಗೌ ನೇತ್ರೇ ಭವತೋ ರೋಗ ಪೀಡಿತೇ ।
ದುಷ್ಟವ್ಯಾಲಾರಿಚೌರಾಣಾಂ ಭಯಂ ತಸ್ಯ ಧನಕ್ಷಯಃ ॥೧೩೪॥

ಪ್ರಕಾಶನೇ ಶುಭಾಸನೇ ಸ್ಥಿತಃ ಕೃತಿಃ ಶುಭಾ ನೃಣಾಮ್ ।
ಧನೋನ್ನತಿ ಗುಣೋನ್ನತಿಃ ಸದಾ ವಿದಾಮಗಾವಿಹ ।
ನವೀನನೀರದಾಕೃತಿರ್ವಿದೇಶತೋ ಮಹೋನ್ನತಿಃ ॥೧೩೫॥

ಗಮನೇ ಚ ಗರ್ತೇ ರಾಹೌ ಬಹುಸಂತಾ ನವಾನ್ನರಃ ।
ಪಂಡಿತೋ ಧನವಾನ್‌ದಾತಾ ರಾಜಪೂಜ್ಯೋ ನರೋ ಭವೇತ್ ॥೧೩೬॥

ರಾಹಾವಾಗಮನೇ ಕ್ರೋಧಿ ಸದಾ ಧನವಿವರ್ಜಿತಃ ।
ಕುಟಿಲಃ ಕೃಪಣಃ ಕಾಮಿ ನರೋಭವತಿ ಸರ್ವಥಾ ॥೧೩೭॥

ಸಭಾಗತೋ ಯದಾ ರಾಹುಃ ಪಂಡಿತಃ ಕೃಪಣೋನರಃ ।
ನಾನಾಗುಣಪರಿಕ್ರಾಂತೋ ವಿತ್ತಸೌಖ್ಯ ಸಮಾನ್ವಿತಃ ॥೧೩೮॥

ಚೇದಗಾವಾಗಮಂ ಯಸ್ಯ ಯಾತೆ ತದಾ ವ್ಯಾಕುಲತ್ವಮ ಸದಾರಾತಿಭಿತ್ಯಾ ಭಯಮ್ ।
ಮಹದ್ ಬಂಧುವಾದೋ ಜನಾನಾಂ ನಿಪಾತೋ ಭವೇದ್ವಿತ್ತಹಾನಿಃ ಶಠತ್ವಂ ಕೃಶತ್ವಂ ॥೧೩೯॥

ಭೋಜನೆ ಭೋಜನೇನಾಲಂ ವಿಕಲೋ ಮನುಜೋ ಭವೇತ್ ।
ಮಂದ ಬುದ್ಧಿ ಕ್ರಿಯಾಭೀರುಃ ಸ್ತ್ರೀಪುತ್ರ ಸುಖವರ್ಜಿತಃ ॥೧೪೦॥

ನೃತ್ಯಲಿಪ್ಸಾಸಿತೆ ರಾಹೌ ಮಹಾವ್ಯಾಧಿ ವಿವರ್ಧಿನವಮ್ ।
ನೇತ್ರರೋಗಿ ರಿಪೋರ್ಭೀತೋರ್ಧನಧರ್ಮಕ್ಷಯೋ ನೃಣಾಮ ॥೧೪೧॥

ಕೌತುಕೆ ಚ ಯದಾ ರಾಹೌ ಸ್ಥಾನಹೀನೋ ನರೋಭವೇತ್ ।
ಪರದಾರರತೋ ನಿತ್ಯ ಪರವಿತ್ತಪಹಾರಕಃ ॥೧೪೨॥

ನಿದ್ರಾವಸ್ಥಾಂ ಗತೆ ರಾಹೌ ಗುಣಾಗ್ರಮಯತೇ ನರಃ ।
ಕಾಂತಾಸರತಾನವಾನ್ ಧೀರೋ ಗರ್ವಿತೋ ಬಹುವಿತ್ತವಾನ್ ॥೧೪೩॥

ಶಯನಾವಸ್ಥೆ – ಕ್ಲೇಶಪೂರ್ಣ ಆದೇ ರಾಹು ವೃಷಭ, ಮಿಥುನ, ಕನ್ಯಾ ಅಥವಾ ಮೇಷದಲ್ಲಿ ಶಯನಾವಸ್ಥೆ ಗತನಾಗಿದ್ದರೆ – ಧನಧಾನ್ಯ ಪರಿಪೂರ್ಣನಾಗುತ್ತಾರೆ.

ಉಪವೇಶ – ದದ್ರುರೋಗಿ – ಆದರೆ ರಾಜ ಪರಿವಾರದಲ್ಲಿ ಮಾನ್ಯನಾಗಿದ್ದು ಧನಸುಖ ಹೀನನಾಗುತ್ತಾನೆ.

ನೇತ್ರಪಾಣಿ – ನೇತ್ರರೋಗಗ್ರಸ್ಥ, ದುರ್ಜನ, ಸರ್ಪಶತ್ರುಭಯ, ಕಳ್ಳರ ಭಯವು ಉಂಟು. ಧನಕ್ಷಯವಾಗುತ್ತದೆ.

ಪ್ರಕಾಶನವಸ್ಥೆ – ಒಳ್ಳೆಯ ಸ್ಥಾನಮಾನ, ಒಳ್ಳೆ ಕೃತಿ ಧನ ಹಾಗೂ ಗುಣಪೂರ್ಣ, ಅಭ್ಯುದಯ, ರಾಜ್ಯದಿಂದ ಅಧಿಕಾರ, ಯಶಪ್ರಸಾರ ಹೊಸ ಮೋಡದಂತೆ ಆಕೃತಿ ಹಾಗೂ ವಿದೇಶದಲ್ಲಿ ಉನ್ನತಿ.

ಗಮನ – ಅನೇಕ ಪುತ್ರರು ಪಂಡಿತ, ಧನಿ, ದಾನಿ, ರಾಜಪೂಜ್ಯ.

ಆಗಮನ – ಕ್ರೋಧಿ, ಬುದ್ಧಿ, ಧನರಹಿತ, ದುಷ್ಟ, ಜಿಪುಣ, ಕಾಮಿ.

ಸಭಾವಸ್ಥೆ – ಪಂಡಿತ, ಜಿಪುಣ, ಅನೇಕ ಗುಣ ಸಂಪನ್ನ, ವಿತ್ತಸೌಖ್ಯ.

ಆಗಮ – ಸದಾ ವ್ಯಾಕುಲ, ಸತತ ಶತ್ರು ಭೀತಿ, ಬಂಧುಬಾಂಧವರೊಡನೆ ಸದಾ ವಿವಾದ, ಪರಿಜನರ ನಾಶ, ಧನಕ್ಷಯ, ಶಠಿತ್ವ, ದುರ್ಬಲತೆ.

ಭೋಜನಾವಸ್ಥೆ – ಭೋಜ ಕಾರಣ ವಿಕಲ ಮಂದ ಬುದ್ಧಿ ಯಾವುದೇ ಕಾರ್ಯದಲ್ಲಿ ಅಂಜಿಕೆ, ಸ್ತ್ರೀ ಪುತ್ರಾದಿ ಸುಖ ವಂಚಿತ.

ನೃತ್ಯಲಿಪ್ಸ – ಮಹಾರೋಗಿ ಹಾಗೂ ಅದರ ವೃದ್ಧಿ ಶತ್ರುಭಯ, ಧನ, ಧರ್ಮ ವಿನಾಶ.

ಕೌತುಕಾವಸ್ಥೆ – ಸ್ಥಾನಹೀನ ಪರಸ್ತ್ರೀರತ ಎರಡನೆಯವರ ಧನ ಅಪಹರಣ ಕಾರ ಛಾಡಿ ಹೇಳುವವ.

ನಿದ್ರಾವಸ್ಥೆ – ಸದ್ಗುಣಗಳ ಆಗರ, ಸ್ತ್ರೀ ಸಂತತಿ ಸುಖಪೂರ್ಣ, ಧೀರ, ಅಭಿಮಾನಿ, ಮಹಾಧನಿ.

## ಅವಸ್ಥಾನುಗತ ಕೇತು ಫಲ

ಮೇಷೆ ವೃಷೆಥವಾ ಯುಗ್ಮೆ ಕನ್ಯಾಯಾಂ ಶಯನೆಗತೆ ।
ಕೇತೌ ಧನಸಮೃದ್ಧಿ ಸ್ಯಾದನ್ಯಥೆ ರೋಗವೃದ್ಧಿನಾಮ್ ॥೧೪೪॥

ಉಪವೇಶಂ ಗತೆ ಕೇತೌ ದದ್ರುರೋಗ ವಿವಿರ್ಧನಮ್ ।
ಅರಿವಾತನೃಪ ವ್ಯಲಚೌರ ಶಂಕೌ ಸಮ ತತಃ ॥೧೪೫॥

ನೇತ್ರಪಾಣಿಂ ಗತೆ ಕೇತೌ ನೇತ್ರರೋಗಃ ಪ್ರಜಾಯತೆ ।
ದುಷ್ಪ ಸರ್ಪಾದಿ ಭೀತಶ್ಚ ರಿಪುರಾಜಕುಲಾದಪಿ ॥೧೪೬॥

ಕೇತೌ ಪ್ರಕಾಶನೆ ಸಂಜ್ಞೆ ಧನವಾನ್ ಧಾರ್ಮಿಕಃ ಸದಾ ।
ನಿತ್ಯಂ ಪ್ರವಾಸಿ ಚೇತ್ಸಾಹೋ ಸಾತ್ವಿಕೋ ರಾಜಸೇವಕಃ ॥೧೪೭॥

ಗಮೆಚ್ಛಾಯಾಂ ಭವೇತ್ ಕೇತುರ್ಬಹು ಪುತ್ರೋ ಮಹಾಧನಃ ।
ಪಂಡಿತೋ ಗುಣವಾನ್ ದಾತಾ ಜಾಯತೆ ಚ ನರೋತ್ತಮಃ ॥೧೪೮॥

ಆಗಮೇ ಚ ಯದಾ ಕೇತುನಾನಾರೋಗೋ ಧನಕ್ಷಯಃ ।
ದಂತಘಾತೀ ಮಹಾರೋಗಿ ಪಿಶುನಃ ಪರನಿಂದಕಃ ॥೧೪೯॥

ಸಭಾವಸ್ಥಾ ಗತೆ ಕೇತೌ ವಾಚಾಲೋ ಬಹುಗರ್ವಿತಃ ।
ಕೃಪಣೋ ಲಂಪಟಶ್ಚೈವ ದೂರ್ತ ವಿದ್ಯಾವಿಶಾರದಃ ॥೧೫೦॥

ಯದಾಗಮೆ ಭವೇತ್ ಕೇತುಃ ಕೇತುಃ ಸ್ಯಾತ್ ಪಾಪಕರ್ಮಣಾವ್ ।
ಬಂದು ವಾದರತೋ ದುಷ್ಟೊ ರಿಪುರೋಗ ನಿಪೀಡಿತಃ ॥೧೫೦॥

ಭೋಜನೆ ತು ಜನೋ ನಿತ್ಯಂ ಕ್ಷುದಾಯ ಪರಿಪೀಡಿತಃ ।
ದರಿದ್ರೋ ರೋಗ ಸಂತಪ್ತಃ ಕೇತೌ ಭ್ರಮತಿ ತೀದಿನೀಮ ॥೧೫೨॥

ನೃತ್ಯಲಿಪ್ಸಾಗತೆ ಕೇತೌ ವ್ಯಾಧಿನಾ ವಿಕಲೋ ಭವೇತ್ ।
ಬುದ್‌ಬುದಾಕ್ಷೋ ದುರಾಧರ್ಷೋ ಧೂರ್ತೋರ್ಽರ್ಥಕರೋ ನರಃ ॥೧೫೩॥

ಕೌತುಕಿ ಕೌತುಕೆ ಕೇತೌ ನಟವಾಮಾರತಿ ಪ್ರಿಯಃ ।
ಸ್ಥಾನಭ್ರಷ್ಟೋ ದುರಾಚಾರಿ ದರಿದ್ರೋ ಭವೇತ್ ಮಹಿವ್ ॥೧೫೪॥

ನಿದ್ರಾವಸ್ಥಾಗತೆ ಕೇತೌ ಧನಧಾನ್ಯ ಸುಖಂ ಮಹತ್ ।
ನಾನಾಗುಣ ವಿನೋದೇನ ಕಾಲೋ ಗಚ್ಛತೊ ಜನ್ಮಿನಾವಮ್ ॥೧೫೫॥

ಶಯನಾವಸ್ಥೆ – ಮೇಷ, ವೃಷಭ, ಮಿಥುನ, ಕನ್ಯಾಗತ, ಕೇತು ಶಯನಾವಸ್ಥೆ ಯಲ್ಲಿದ್ದರೆ – ಜಾತಕನಿಗೆ ಧನ ಸಮೃದ್ಧಿಯಾಗುತ್ತದೆ. ಅನ್ಯರಾಶಿಯಲ್ಲಿ ರೋಗಗ್ರಸ್ಥ.

ಉಪವೇಶ – ಕಲೆಯ ರೋಗ(ಚರ್ಮ) ವಾತರೋಗ ಶತ್ರು ರಾಜಾ ಸರ್ಪ ಕಳ್ಳರ ಭಯ.

ನೇತ್ರಪಾಣಿ – ನೇತ್ರರೋಗ, ದುಷ್ಟ, ಸರ್ಪ ಆದಿಗಳಿಂದ ರಾಜ ಕುಲದಿಂದ ಭಯ.

ಪ್ರಕಾಶನಾವಸ್ಥೆ – ಧನಿ, ಧಾರ್ಮಿಕ, ಸತತ ಪರದೇಶ ನಿವಾಸಿ, ಉತ್ಸಾಹಿ, ಸತ್ವಗುಣ ಪ್ರಧಾನ, ರಾಜ ಸೇವಕ.

ಗಮನಾವಸ್ಥೆ – ಅನೇಕ ಪುತ್ರ ಸಹಿತ ಮಹಾಧನವಂತ, ಪಂಡಿತ, ಗುಣವಂತ, ದಾನಿ, ಜನರಲ್ಲಿ ಶ್ರೇಷ್ಠ.

ಆಗಮನಾವಸ್ಥೆ – ಅನೇಕ ರೋಗಗಳ ತವರು ಮನೆಯಿದ್ದಂತೆ, ಧನಕ್ಷಯ ಹಲ್ಲಿನಿಂದ ಪ್ರಹಾರ, ಮಹಾರೋಗಿ, ಚಾಡಿಖೋರ, ಪರನಿಂದಕ.

ಸಭಾವಸ್ಥಾ – ವಾಚಾಳ (ವಕ್ರವಾದಿ) ಮಹಾಭಿಮಾನಿ ಕೃಪಣ, ಲಂಪಟ, ಧೂರ್ತತನದಲ್ಲಿ ನಿಪುಣ.

ಆಗಮನಾವಸ್ಥೆ – ಪಾಪಕರ್ಮದಲ್ಲಿ ವಿಖ್ಯಾತಿ, ಬಂಧು ಬಾಂಧವರೊಡನೆ ಸದಾಕಲಹ, ದುಷ್ಟ ಶತ್ರುಗಳಿಂದ ಹಾಗೂ ರೋಗದಿಂದ ಪೀಡಿತ.

ಭೋಜನಾವಸ್ಥೆ – ಸತತ ಕ್ಷುದ್ರ ಪೀಡಿತ, ದರಿದ್ರ, ರೋಗಗ್ರಸ್ತ, ಭೂಮಿಯ ಮೇಲೆ ನಿರರ್ಥಕ ತಿರುಗಾಟ.

ನೃತ್ಯಲಿಪ್ಸಾ – ವ್ಯಾಧಿ ಪೀಡಿತ, ಬುದ್‌ಬುದ ಕಣ್ಣಿನವನು, ಯಾರದೆ ಅಧಿಕಾರದಲ್ಲಿ ಬರುವವವನು, ಧೂರ್ತ ಅನರ್ಥಕಾರಿಯು.

ಕೌತುಕಾವಸ್ಥೆ – ವಿನೋದಿ, ನಟಿಯನ್ನು ಪ್ರೀತಿಸುವವ ಸ್ಥಾನ, ಭ್ರಷ್ಟ, ದುರಾಚಾರಿ, ದರಿದ್ರುವಶ, ದೇಶಾಂತರ ತಿರುಗುವವ.

ನಿದ್ರಾವಸ್ಥೆ – ಧನಧಾನ್ಯದ ದೊಡ್ಡ ಸುಖ ಈ ವ್ಯಕ್ತಿಯ ಸಮಯ ಅನೇಕ ವಿಧ ಗುಣಗಳಿಂದ ವಿನೋದದಲ್ಲಿ ಸಮಯ ಕಳೆಯುವವನು.

## ಗ್ರಹಾವಸ್ಥೆ ಅನುಸಾರ ಭಾವಗಳ ಫಲ

ಶಯನೆ ವಿಪ್ರ । ಭಾವೇಶು ಯತ್ರ ತಿಷ್ಠಂತಿ ಸದ್‌ಗ್ರಹಾಃ ।
ನಿತ್ಯಂ ತಸ್ಯ ಶುಭಜ್ಞಾನಂ ನಿರ್ವಿಶಂಕ ದ್ವಿಜೋತ್ತಮ ॥೧೫೬॥

ಭೋಜನೆ ಯದಿ ಭಾವೇಷು ಪಾಪಸ್ತಿಷ್ಠಂತಿ ಸರ್ವಥಾ ।
ತದಾ ಸರ್ವ ವಿನಾಶೇಪಿ ನಾತ್ರ ಕಾರ್ಯ ವಿಚಾರಣಾ ॥೧೫೭॥

ನಿದ್ರಾಯಾಂ ಚ ಯದಾ ಪಾಪೋ ಜಾಯಸ್ಥಾನೆ ಶುಭಂ ವದೇತ್।
ಯದಿ ಪಾಪಗ್ರಹೈರ್ದೃಷ್ಟೋ ನ ಶುಭಂ ತು ಕದಚನ್ ॥೧೫೮॥

ಸುತಸ್ಥಾನೆ ಸ್ಥಿತಃ ಪಾಪೋ ನಿದ್ರಾಯಾಂ ಶಯನೇಪಿ ವಾ ।
ತದಾಶುಭಂ ಭವೇತ್ತಸ್ಯ ನಾತ್ರ ಕಾರ್ಯ ವಿಚಾರಣಾ ॥೧೫೯॥

ಮೃತ್ಯುಸ್ಥಾನ ಸ್ಥಿತಃ ಪಾಪೋ ನಿದ್ರಾಯಾಂ ಶಯನೇಪಿ ವಾ ।
ತದಾ ತಸ್ಯಾಪ ಮೃತ್ಯುಃ ಸ್ಯಾದ್ರಾಜತಃ ಪರತಸ್ತಥಾ ॥೧೬೦॥

ಶುಭಗ್ರಹೈರ್ಯದಾ ಯುಕ್ತಃ ಶುಭೈರ್ವಾ ಯದಿ ವೀಕ್ಷಿತಃ ।
ತದಾತು ಮರಣಾ ತಸ್ಯ ಗಂಗಾದೌ ಸ್ಯಾದ್ ವಿಶೇಷತಃ ॥೧೬೦॥

ಕರ್ಮಸ್ಥಾನೆ ಯದಾ ಪಾಪಃ ಶಯನೆ ಭೋಜನೇಪಿ ವಾ ।
ತದಾ ಕರ್ಮವಿಪಾಕಃ ಸ್ಯಾನ್ನಾನಾದುಃಖ ಪ್ರದಾಯಕಃ ॥೧೬೨॥

ದಶಮಸ್ಥೋ ನಿಶಾನಾಥಃ ಕೌತುಕೆ ಚ ಪ್ರಕಾಶನೆ ।
ತದ್ವೈವ ರಾಜಯೋಗಃ ಸ್ಯಾನ್ನಿರ್ವಿಶಂಕಂ ದ್ವಿಜೋತ್ತಮ ॥೧೬೩॥

**ಬಲಾಬಲ ವಿಚಾರೇಣ ಜ್ಞಾತವ್ಯಂ ಚ ಶುಭಾಶುಭಮ್ ।**
**ಏವಂ ಕ್ರಮೇಣ ಬೋದ್ಧವ್ಯಂ ಸರ್ವಭಾವೇಷು ಧೀಮತಾ ॥೧೬೪॥**

ಜನ್ಮಕಾಲದಲ್ಲಿ ಶಯನಾವಸ್ಥೆ ಗತ ಶುಭಗ್ರಹವು ಯಾವ ಭಾವದಲ್ಲಿರುವುದೋ ನಿಸ್ಸಂಶಯ ಆ ಭಾವದ ಫಲ ಶುಭಪ್ರದವಿದ್ದರೂ ಸರ್ವಥಾ ಸರ್ವನಾಶವನ್ನು ಹೇಳುವುದು. ನಿದ್ರಾವಸ್ಥೆ ಗತ ಪಾಪಗ್ರಹ ಸಪ್ತಮ ಸ್ಥಾನದಲ್ಲಿದ್ದರೆ ಶುಭ ಆದರೆ ಪಾಪ ದೃಷ್ಟಿತವಾದರೆ ಶುಭ ಫಲ ದೊರೆಯಲಾರದು. ನಿದ್ರಾಗತ ಅಥವಾ ಶಯನಾಗತ ಪಾಪಗ್ರಹ ಪಂಚಮದಲ್ಲಿ ನಿಸ್ಸಂದೇಹ ಶುಭಫಲ ನಿದ್ರಾ ಅಥವಾ ಶಯನಾವಸ್ಥೆ ಗತ ಪಾಪಗ್ರಹ ಅಷ್ಟಮದಲ್ಲಿದ್ದರೆ ಸರಕಾರ ತದನ್ಯರಿಂದ ಲಿಪಮೃತ್ಯು ಸಂಭವ. ಅದೇ ಗ್ರಹಗಳು ಶುಭಗ್ರಹ ಸಹಿತ ಅಥವಾ ದೃಷ್ಟಿತವಾದರೆ ಗಂಗಾದಿ ತೀರ್ಥ ಸ್ಥಳದಲ್ಲಿ ಮೃತ್ಯು. ಶಯನ ಅಥವಾ ಭೋಜನಾವಸ್ಥೆ ಗ್ರಹ ಪಾಪಗ್ರಹ ಸರ್ಪದಲ್ಲಿದ್ದರೆ ಅನೇಕ ದುಃಖದಾಯಕ ಕರ್ಮವಿಪಾಕ ಕೌತುಕ ಪ್ರಕಾಶನಗತ ಚಂದ್ರ ದಶಮದಲ್ಲಿ ನಿಸ್ಸಂದೇಹ ರಾಜಯೋಗ. ಈ ಪ್ರಕಾರ ಗ್ರಹಗಳ ಫಲಾಫಲ ತಿಳಿಯುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಗ್ರಹವಸ್ಥಾಧ್ಯಾಯಃ ಸಮಾಪ್ತಃ**

   

೪೭ನೇ ಅಧ್ಯಾಯ

# ಅಥ ದಶಾಭೇದಾಧ್ಯಾಯಃ

## ಮೈತ್ರೇಯ ಉವಾಚ:

ಮಹರ್ಷೇ । ತ್ವಂ ಸಮರ್ಥೋಽಸಿ ಕೃಪಾಯ ಕರುಣಾನಿಧೇ ।
ದಶಾಃಕತಿವಿಧಾಃ ಸಂತಿ ಹ್ರೊತನ್ಮೆ ಭ್ರೂಹಿ ತತ್ವತಃ ॥೧॥

ಮೈತ್ರೇಯರು ಕೇಳಿದರು. ಹೇ ಮಹರ್ಷಿಯೇ ಕೃಪಾನಿಧಿಯೇ – ತಾವು ಸರ್ವ ಸಮರ್ಥರಿದ್ದು ನನ್ನ ಮೇಲೆ ಕೃಪೆಯಿಂದ ಎಷ್ಟು ಪ್ರಕಾರದ ದಶಾಗಳಿವೆ ವಿಮರ್ಶಿಸಿರಿ.

## ಪರಾಶರ ಉವಾಚ:

ಪ್ರಶ್ನೋಽಯಂ ತೆ ಮುನೆ । ಸಾಧುರ್ಲೋಕ ಕಲ್ಯಾಣಕಾರಕಃ ।
ಅಥಾತಃ ಸಂಪ್ರವಕ್ಷ್ಯಾಮಿ ದಶಾಭೇದಾನನೇಕಶಃ ॥೨॥

ವಿವಿಧಾಸ್ತುದಶಾಃ ಪ್ರೋಕ್ತಾಃ ಕಿಂತು ತತ್ರಸತಾಂ ಮತಾಃ ।
ವಿಂಶೋತ್ತರಿ ತಥಾ ಚಾಷ್ಟೋತ್ತರಿ ವೈ ಷೋಡಶೋತ್ತರೀ ॥೩॥

ದ್ವಾದಿಶೋತ್ತರಿ ಪಂಚೋತ್ತರಿ ಶತಸಮಾ ತಥಾ ।
ದಶಾ ಚತುರಶೀತ್ಯಬ್ದಾ ದ್ವಿಸಪ್ತತಿ ಸಮಾ ತಥಾ ॥೪॥

ಷಷ್ಟ್ಯಬ್ದಾಪಿ ಚ ಷಟ್‌ತ್ರಿಂಶದ್ ವತ್ಸರಾಪಿ ದ್ವಿಜೋತ್ತಮ ।
ಇಮಾ ಖುಕ್ನಾಶ್ರೀತಾಃ ಖ್ಯಾತಾಹ ಪ್ರಾಚೀನೈರ್ವಿ ಬುಧೈಃ ಪುರಾ ॥೫॥

ಹೇ ಮುನಿಯೇ, ಲೋಕಕಲ್ಯಾಣಕಾರಿಯಾದ ನಿನ್ನ ಪ್ರಶ್ನೆ – ಯೋಗ್ಯವಾದುದರಿಂದ ನಾನು ದಶಾ ಭೇದಗಳನ್ನು ವಿವರಿಸುತ್ತೇನೆ.

ಅನೇಕ ವಿಧ ದಶಾಗಳಿದ್ದಾಗಲೂ, ಬಹು ಸಮ್ಮತ ಮುಖ್ಯ ದಶಾಗಳು (1) ವಿಂಶೋತ್ತರಿ (2) ಅಷ್ಟೋತ್ತರ (3) ಷೋಡಶೋತ್ತರಿ (4) ದ್ವಾದಶೋತ್ತರಿ (5) ಪಂಚೋತ್ತರಿ (6) ಶತಸಮಾ (ಶತಾಬ್ದಿಕ) (7) ಚತುರಶೀತ್ಯಾಬ್ದಾ (8) ದ್ವಿಸಪ್ತತಿ ಸಮಾ (9) ಷಷ್ಟ್ಯಯ್ದು (10) ಷಟ್‌ತ್ರಿಂಶದ್‌ವತ್ಸಿತಾ – ಈ ರೀತಿ ಪತ್ತು ವಿಧ ದಶಾಗಳನ್ನು ದೇವರ್ಷಿ ಹೇಳಿದ್ದಾರೆ. ಇವು ಪ್ರಖ್ಯಾತವಾದ ದಶಾಗಳು.

ಕಾಲಾಭಿಧಾ ದಶಾ ಚಕ್ರಾಭಿಧಾ ಚ ಪರಿಕೀರ್ತಿತಾ ।
ಮಾನ್ಯಾನ್ಯಾ ಕಾಲಚಕ್ರಾಖ್ಯಾ ದಶಾಸು ದ್ವಿಜಸತ್ತಮ ॥೬॥
ಚರಾ ಪರಾ ಸ್ಥಿರಾಖ್ಯಾ ಚ ದಶಾ ಕೇಂದ್ರಭಿಧಾ ತಥಾ ।
ಕಾರಕಾದಿ ಗ್ರಹೋದ್ ಭೂತಾ ಬ್ರಹ್ಮ ಗ್ರಹದಶಾಪಿ ಚ ॥೭॥

ಮಾಂಡೂಕೀ ಚ ದಶಾ ಪ್ರೋಕ್ತಾ ತಥಾಶೂಲಾಭಿಧಾ ಬುಧೈಃ ।
ಅಪಿ ಯೋಗಾರ್ಧಜಾ ಬ್ರಹ್ಮನ್ । ದೃಗ್‌ದಶಾ ತದನಂತರಮ್ ॥೮॥
ತ್ರಿಕೋಣ ಸಂಜ್ಞಕಾ ರಾಶಿದಶಾ ಪಂಚಸ್ವರಾಭಿಧಾ ।
ಯೋಗಿನಿ ಸಂಜ್ಞಿಕಾ ಪಿಂಡದಶಾ ಚಾಂಶಿ ಪರಾಸ್ಮೃತಾ ॥೯॥

ನೈಸರ್ಗಿಕ ದಶಾ ಚಾಷ್ಟೋವರ್ಗಸಂಧ್ಯೆ ದಶೆ ತಥಾ ।
ಪಾಚಕಾಖ್ಯಾಪರಾ ತಾರಾದಶಾ ಸರ್ವಾ ನ ಸಮ್ಮತಾ ॥೧೦॥

ಹೇ ದ್ವಿಜನೆ, ಮೇಲಿನ ಹತ್ತು ಉಪಯುಕ್ತ ದಶಾ ಹೊರತುಪಡಿಸಿ ಕತಿಪಯ ಋಷಿಯೂ ಕಾಲದಶಾ, (2) ಚಕ್ರದಶಾ ಹಾಗೂ ದಶಾದಲ್ಲಿ ಮಾನ್ಯ, (3) ಕಾಲಚಕ್ರದಶಾ ಹೇಳಿದ್ದಾರೆ. ಈ ಮೂರು ದಶಾರಿಕ್ತ.

(1) ಚರ ದಶಾ (2) ಸ್ಥಿರ ದಶಾ (3) ಕೇಂದ್ರ ದಶಾ (4) ಕಾರಕ ಗ್ರಹೋ (5)ಬ್ರಹ್ಮ ಗ್ರಹ ದಶಾ (6) ಮಂಡೂಕ ದಶಾ (7) ಶೂಲ ದಶಾ (8) ಯೋಗಾರ್ಧ ದಶಾ (9) ದೃಗ್ ದಶಾ (10) ತ್ರಿಕೋಣ ದಶಾ (11) ರಾಶಿ ದಶಾ (12) ಪಂಚಸ್ವರ ದಶಾ (13) ಯೋಗಿನಿ ದಶಾ (14) ಪಿಂಡ ದಶಾ (15) ಅಂಶಜ ದಶಾ (16) ನೈಸರ್ಗಿಕ ದಶಾ (17)ಅಷ್ಟವರ್ಗ ದಶಾ (18) ಸಂಧ್ಯಾ ದಶಾ (19) ಪಾಚಕ ದಶಾ (20) ತಾರಾ ದಶಾ ಎಂದು ದಶಾಭೇದಗಳಿದ್ದರೂ ಎಲ್ಲ ದಶಗಳೂ ಸರ್ವಮಾನ್ಯ ವಾಗಿಲ್ಲ.

## ವಿಂಶೋತ್ತರಿ ದಶಾನಯನ ಪ್ರಕಾರ

ಕೃತ್ತಿಕಾದೇಸ್ತ್ರಿರಾವೃತ್ಯಾ ರವೀಂದು ಕುಜರಾಹವಃ ।
ಜೀವಾರ್ಕಿ ಉಚ್ಛಿ ಖಿಸಿತಾ ದಶೇಶಃ ಪರಿಕೀರ್ತಿತಾಃ ॥೧೧॥

ಜನುರ್ಭಮಗ್ನಿಭಾಧ್ಯಾವದ್ ವಿಗಣಯ್ಯಾಂಕತೋ ಭಜೇತ್ ।
ಶೇಷಾಂಕತೋ ದಶಾನಾಥಸ್ತತೋ ಭಂಕ್ತ್ವಾದಿಮಾನಯೇತ್ ॥೧೨॥

ದಶಾಬ್ದಾಸ್ತತ್ರ ರಸಾದಿಕ್ ಸಪ್ತಾಷ್ಟೇಂದು ನೃಪಾಸ್ತಥಾ ।
ಅಂಕೇಂದುವೋ ಶ್ವಚಂದ್ರಾಶ್ಚ ಗಿರಗೋ ವಿಂಶತಿಃ ಕ್ರಮಾತ್ ॥೧೩॥

ವಿಂಶೋತ್ತ್ಯರ್ಯಾ ಪೂರ್ಣಮಾಯು ರ್ವಿಂಶೋತ್ತರ ಶತಂ ಸ್ಮೃತಮ್।

ಕೃತ್ತಿಕಾ ನಕ್ಷತ್ರದಿಂದ ಆರಂಭವಾಗಿ ಮೂರು ಆವೃತ್ತಿಯಲ್ಲಿ ಸೂರ್ಯ, ಚಂದ್ರ ಭೌಮ ರಾಹು, ಗುರು, ಶನಿ, ಬುಧ, ಕೇತು ಹಾಗೂ ಶುಕ್ರ ಈ ರೀತಿಯ ನವಗ್ರಹದಶಾ ಇರುತ್ತದೆ. ದಶಾ ತಿಳಿಯಲು ಕೃತ್ತಿಕಾದಿಂದ ಜನ್ಮ ನಕ್ಷತ್ರದವರೆಗೆ ಪರಿಗಣಿಸಿ ಒಂಭತ್ತರಿಂದ ಭಾಗಿಸಿ ಶೇಷಾಂಕದಿಂದ – ದಶಾ ತಿಳಿಯುವುದು ಹಾಗೂ ದಶಾ ವರ್ಷ ಕ್ರಮಶಃ ಸೂರ್ಯ–6, ಚಂದ್ರ–10, ಮಂಗಳ–7, ರಾಹು–18, ಗುರು–16, ಶನಿ–19, ಬುಧ–17, ಕೇತು–7 ಹಾಗೂ ಶುಕ್ರ–20, ವರ್ಷ ಪೂರ್ಣ ದಶಾಯು 120 ವರ್ಷ.

ದಶಾ ಅರಿಯುವುದಾದರೆ – ಪೂರ್ವದಲ್ಲಿ ಕೊಟ್ಟ ವ್ಯಕ್ತಿಯ ಜನ್ಮನಕ್ಷತ್ರ ವಿಶಾಖಾ (6–24–0 ಚಂದ್ರ) ಕೃತ್ತಿಕಾದಿಂದ ಎಣಿಸಲಾಗಿ, 14ನೇ ನಕ್ಷತ್ರ 14÷9= ಶೇಷ 5, ದಶಾಗಳಲ್ಲಿ ಐದನೇ ಗ್ರಹ ಗುರು. ಜನ್ಮತಃ ಗುರುದಶಾವೆಂದು ಪರಿಗಣಿಸುವುದು.

## ಸ್ಪಷ್ಟಾರ್ಥ ಚಕ್ರ

| ಗ್ರಹ | ರವಿ | ಚಂ | ಮಂ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ವರ್ಷ | 6 | 10 | 7 | 18 | 16 | 19 | 17 | 7 | 20 |
| ನ | ಕೃ | ರೋ | ಮೃಗ | ಆರಿದ್ರಾ | ಪುನ | ಪುಷ್ಯ | ಆಶ್ಲೇಷ | ಮಘಾ | ಪುಬ್ಬಾ |
| ಕ್ಷ | ಉ | ಹಸ್ತ | ಚಿತ್ತಾ | ಸ್ವಾತಿ | ವಿ | ಅನು | ಜ್ಯೇಷ್ಠಾ | ಮೂಲ | ಪೂ.ಆ. |
| ಉ | ಉ.ಆ | ಶ್ರವಣ | ಧನಿಷ್ಠ | ಶತ | ಪೂ | ಉ | ರೇ | ಅಶ್ವಿನಿ | ಭರಣಿ |

## ಯುಕ್ತ ಭೋಗ್ಯವರ್ಷಾನಯನ

ಭಯಾತ ಗುಣಿತಂ ಖೇಟ ದಶಾಮಾನಂ ಭಭೋಗಹೃತ್ ।
ಭುಕ್ತವರ್ಷಾದಿಕಂ ತಸ್ಯ ಭೋಗ್ಯಮ ಮಾನೆ ವಿಶೋಧನಾತ್ ॥೧೪॥

ಗ್ರಹದಶಾ ವರ್ಷಕ್ಕೆ – ಭಯಾತ್ ಗುಣಿಸಿ ಭೋಗದಿಂದ ಭಾಗ ಮಾಡಿದರೆ ಲಬ್ಧಿ ಭುಕ್ತವರ್ಷಾದಿಯಾಗುತ್ತದೆ. ಭುಕ್ತ ವರ್ಷಾದಿಗಳನ್ನು ದಶಾ ವರ್ಷದಲ್ಲಿ ಕಳೆಯಲು ಭೋಗ್ಯ ವರ್ಷಾದಿಗಳು ಬರುತ್ತವೆ.

ಅದನ್ನೇ ಈ ರೀತಿಯಾಗಿಯೂ ತೆಗೆಯಬಹುದು – ಜನನ ಕಾಲದಲ್ಲಿ ಚಂದ್ರನು ಯಾವ ರಾಶಿ, ಅಂಶ ಮತ್ತು ಕಲಾದಲ್ಲಿರುವನೋ ಅವನ್ನೆಲ್ಲ ಕಲೆಯನ್ನು

ಮಾಡಬೇಕು. ಆ ಕಲೆಗಳಿಗೆ 800ರಿಂದ ಭಾಗಿಸಬೇಕು. ಬಂದು ಭಾಗಾಕಾರ ಗತ ನಕ್ಷತ್ರವೆಂದು ತಿಳಿದುಕೊಂಡು ಉಳಿದ ಕಲೆಗಳಿಗೆ ಗತನಕ್ಷತ್ರ ಮುಂದಿನ ಇಷ್ಟ ಮತ್ತು ವ್ಯಕ್ತಿಯ ಜನ್ಮ ನಕ್ಷತ್ರದ ಭುಕ್ತ ಕಲೆಗಳಾಗುವುವು. ಅವುಗಳನ್ನು 800ರಲ್ಲಿ ಕಳೆದು – ಆ ನಕ್ಷತ್ರಕ್ಕೆ ಯಾವ ಗ್ರಹ ದಶಾ ಇರುವುದೋ ಆ ವರುಷ ಸಂಖ್ಯೆಯಿಂದ ಉಳಿದ ಕಲೆಗಳಿಗೆ ಗುಣಿಸಿ ಗುಣಾಕಾರಕ್ಕೆ 800ರಿಂದ ಭಾಗಿಸಲು ವರುಷ – ಉಳಿದುದಕ್ಕೆ 12ರಿಂದ ಗುಣಿಸಿ 800ರಿಂದ ಭಾಗಿಸಲು ದಿವಸ – ಅದರಲ್ಲಿ ಉಳಿದುದಕ್ಕೆ 60ರಿಂದ ಗುಣಿಸಿ 800 ಭಾಗಿಸಲು ಘಟಿಗಳಾಗುವುದು. ಇದೇ ರೀತಿ ಕ್ರಮ ಕೈಗೊಳ್ಳುವುದು.

ಉದಾಹರಣೆ – ಸ್ಪಷ್ಟಚಂದ್ರ 6 – ರಾಶಿ 24 – ಅಂಶ 00ಕಲಾ. ಇದರ ಕಲೆಗಳು $6 \times 30 + 24 \times 60 =$ $12240 \div 800 = 15$. ಭಾಗಾಕಾರ = ಗತನಕ್ಷತ್ರ ಸ್ವಾತಿ, ಇಷ್ಟನಕ್ಷತ್ರ ವಿಶಾಖಾ ಶೇಷ 240. $800 - 240 = 560 \times 16$ (ವಿಶಾಖಾ ನಕ್ಷತ್ರ ಗುರು ದಶಾವರ್ಷ) $8960 \div 800$

```
800) 8960(11 – 2 – 12
     800
     ------
     960
     800
     ------
     160
     120
     ------
     1920
     1600
     -------
     0320
       30
     -------
     9600
      800
     --------
      1600
      1600
     -------
     0000  ಘಟಿ ಆದಿ ಇಲ್ಲ
```

ಗುರುದಶಾ ಉಳಿದುದು 11 ವರ್ಷ, 2 ಮಾಸ, 12 ದಿವಸ.

## ವೈಯಕ್ತಿಕ ವಿಂಶೋತ್ತರಿ ದಶಾಚಕ್ರ

| ಗುರು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಬುವ4 | ಭೇವ11 | ಶ19 | 17 | 7 | 20 | 6 | 10 | 7 | 18 |
| 9 ತಿ – | 2 ತಿ | 0 | 0 | 0 | 0 | – | – | – | – |
| 18 ದಿ – | 12 ದಿ | 0 | 0 | 0 | 0 | – | – | – | – |
| 0 ಕ್ಷ – | – | 0 | 0 | 0 | 0 | – | – | – | – |
| ಜನ್ಮ ದಿನಾಂಕ | ದಶಾ | | | | | | | | |
| 3.11.193 | 715.1.49 | 15.1.68 | 15.1.75 | 15.1.92 | 15.1.2012 | – | – – | – | |

ದಶಾ ಅಂಕಿ ತೋರಿಸುವಾಗ ಆಯುಷ್ಯದ ಪರಮಾವಧಿ ಪರಿಗಣಿಸಿ ದಶಾ ಜನ್ಮದಿನದಲ್ಲಿ ಕೂಡಿಸುವುದನ್ನು ನಿಲ್ಲಿಸುವುದು ಕೇವಲ ಮಾದರಿಗಾಗಿ–

## ಅಷ್ಟೋತ್ತರಿ ದಶಾ

ವಿದಾಯ ಲಗ್ನಂ ಲಗ್ನೇಶಾತ್ ಕೇಂದ್ರಕೋಣಗತೇ ತ್ವಗೌ ।
ಆರ್ದ್ರಾ ಪ್ರಭೃತಿ ಭಾದಷ್ಟೋತ್ತರೀ ನಾಮ್ನಿ ದಶೋದಿತಾ ॥೧೫॥

ಚತುಷ್ಕಂ ತ್ರಿತಯಂ ತಸ್ಮಾಚ್ಚತುಷ್ಕಂ ತ್ರಿತಯಂ ಪುನಃ ।
ಇತ್ಥಂ ನಿಜಜನುರ್ಭಾಂತಂ ಗಣಯೇಚ್ಚ ಯಥಾಕ್ರಮಮ್ ॥೧೬॥

ಸೂರ್ಯಶ್ಚಂದ್ರಃ ಕುಜಃ ಸೌಮ್ಯಃ ಶನಿರ್ಜೀವಸ್ತಮೋ ಭೃಗುಃ ।
ಏತೇ ದಶಾಧಿಪಾಃ ಪ್ರೋಕ್ತಾ ವಿನಾ ಕೇತುಂ ಗ್ರಹಾದ್ವಿಜ ॥೧೭॥

ರಸಾಃ ಪಂಚೇಂದವೋ ನಾಗಾಃ ಶೈಲಚಂದ್ರಾಸ್ತಥಾ ದಿಶಾಃ ।
ಗೋಬ್ಜಾಃ ಸೂರ್ಯಾಃ ಕುನೇತ್ರಾಶ್ಚತದ್ರುಶಾಬ್ದಾ ಹ ಕ್ರಮಾತ್ಸ್ಮೃತಿಃ ॥೧೮॥

ಲಗ್ನೇಶನಿಂದ ಲಗ್ನಾತಿರಿಕ್ತ ಅಥವಾ ತ್ರಿಕೋಣದಲ್ಲಿ ರಾಹು ಇದ್ದರೆ ಅಷ್ಟೋತ್ತರಿ ದಶಾ ಗ್ರಾಹ್ಯವೆಂದ ಕತಿಪಯ ಆಚಾರ್ಯರು ಹೇಳಿದ್ದಾರೆ. ಅಷ್ಟೋತ್ತರಿಯಲ್ಲಿ ಆರ್ದ್ರಾದಿಂದ 4, 4 ನಕ್ಷತ್ರ ಸೂರ್ಯ ನಂತರದ 3 ನಕ್ಷತ್ರ – ಚಂದ್ರ, ನಂತರ 4 ನಕ್ಷತ್ರ ಮಂಗಳ, ಪುನಃ 3 ನಕ್ಷತ್ರ ಬುಧ, ನಂತರ 4 ನಕ್ಷತ್ರ ಶನಿ,

ಪುನಃ 3 ನಕ್ಷತ್ರ ಗುರು, ಪುನಃ 4 ನಕ್ಷತ್ರ ರಾಹು ಕೊನೆ 3 ನಕ್ಷತ್ರ ಶುಕ್ರ ಅಧಿಪ ನಾಗುತ್ತಾನೆ. ದಶಾಜ್ಞಾನಕ್ಕಾಗಿ ಆರ್ದ್ರಾದಿಂದ ಜನ್ಮನಕ್ಷತ್ರದವರೆಗೆ ಗುಣಿಸಿದಾಗ ಯಾವ ಗ್ರಹ ನಕ್ಷತ್ರ ಬರುವುದೋ ಅದೇ ದಶಾರಂಭವಾಗುತ್ತದೆ. ರವಿ – 6, ಚಂದ್ರ – 15, ಮಂಗಳ – 8, ಬುಧ – 17, ಶನಿ – 10, ಗುರು – 19, ರಾಹು – 12, ಶುಕ್ರ – 12 ಈ ರೀತಿ ದಶಾವರ್ಷಗಳಿರುತ್ತವೆ – ಕೇತುವಿಗೆ ದಶಾಧಿಪ ಸ್ಥಾನವಿಲ್ಲ.

## ಸ್ವಷ್ಟಾರ್ಥ ಚಕ್ರ

| ದಶಾಗ್ರಹ | ರವಿ | ಚಂದ್ರ | ಮಂ | ಬುಧ | ಶನಿ | ಗುರು | ರಾಹು | ಶುಕ್ರ |
|---|---|---|---|---|---|---|---|---|
| ನ | ಆರಿದ್ರಾ | ಮಖಾ | ಹಸ್ತಾ | ಅ | ಪೂ | ಧನಿಷ್ಠಾ | ಉ.ಭಾ | ಕೃತ್ತಿಕಾ |
| | ಪುನರ್ವಸು | ಪುಬ್ಬಾ | ಚಿತ್ತಾ | ಜ್ಯೇಷ್ಠ | ಉ. | ಶತಭಿಷ | ರೇವತಿ | ರೋಹಿಣಿ |
| | ಪುಷ್ಯಾ | ಉತ್ತರ | ಸ್ವಾತಿ | ಮೂಲ | ಅಭಿಜಿತ್ | ಪೂ.ಬಾ. | ಅಶ್ವಿನಿ | ಮೃಗಶಿರಾ |
| | ಆಶ್ಲೇಷ | – | ವಿಶಾಖ | × | ಶ್ರವಣ | × | ಭರಣಿ | × |
| ದಶಾ | 6 | 15 | 8 | 17 | 10 | 19 | 12 | 21 |
| ಮಾಸಗಳು | 72ತಿಂಗಳು | 180 | 96 | 204 | 120 | 226 | 144 | 252 |

## ಅಷ್ಟೋತ್ತರಿ ದಶಾ ಸಾಧನ

ದಶಾವತ್ಸರತುರ್ಯಾಂಶೋಸತಾಂ ಚಾಥ ಸತಾಂ ಪುನಃ ।
ತೃತೀಯಾಂಶೊ ಹಿ ಪ್ರತಿಭಂ ದಶಾಮಾನ ಮುದೀರಿತಮ್ ॥೧೯॥

ತತೋ ಭುಕ್ತ ಚ ಭೋಗ್ಯಂ ಚ ತದ್ಭಯಾತಭ ಭೋಗತಃ ।
ವಿಂಶೋತ್ತರಿ ದಶಾವದ್ವೈ ಪ್ರಸಾಧ್ಯ ಫಲಾಮದಿಶೇತ್ ॥೨೦॥

ಪಾಪಗ್ರಹಗಳ (ಸೂ, ಮಂ, ಶ, ರಾ) ದಶಾವರ್ಷದಲ್ಲಿ ಚತುರ್ಥಾಂಶ ಹಾಗೂ ಶುಭಗ್ರಹಗಳ (ಚ, ಬು, ಗು, ಶು) ದಶಾವರ್ಷದ ತೃತೀಯಾಂಶ ಒಂದು ನಕ್ಷತ್ರ ವಾಗುತ್ತದೆ. ಬಯಾತ್ ಭಭೋಗದ ಮುಖಾಂತರ ವಿಂಶೋತ್ತರಿಯಂತೆ ಇದರಲ್ಲಿಯೂ ಬುಕ್ತ ಭೋಗ್ಯ ವರ್ಷಾದಿಗಳನ್ನು ಆನಯನ ಮಾಡುವುದು. ಅರ್ಥಾತ್ ದಶಾಮಾನವನ್ನು ಭಯಾತ್‌ದಿಂದ ಗುಣಿಸಿ ಭಭೋಗದಿಂದ ಭಾಗಿಸಿ ಭುಕ್ತಿವರ್ಷವಾಗುತ್ತದೆ. ಭುಕ್ತಿ ಭೋಗ್ಯ ಪ್ರಸಾದನ ನಂತರ – ದಶಾ ಜ್ಞಾನಾನಂತರ ಫಲಾದೇಶ ಮಾಡುವುದು.

ಕೃಷ್ಣೆದಲೆ ದಿನೆ ಜನ್ಮಸಿತೆ ನಕ್ತಂ ಭವೇದ್ಯದಿ ।
ಅಷ್ಟೋತ್ತರಿ ದಶಾ ತತ್ರ ಫಲಾದೇಶಾರ್ಥ ಮೀರಿತಾ ॥೨೧॥

ಕೃಷ್ಣಪಕ್ಷದಲ್ಲಿ ಹಗಲು ಜನ್ಮವಾದರೆ, ಶುಕ್ಲಪಕ್ಷ ರಾತ್ರಿ ಜನನವಾದರೆ – ಎರಡೂ ಸ್ಥಿತಿಯಲ್ಲಿ ಅಷ್ಟೋತ್ತರಿ ದಶಾ ಅನ್ವಯಿಸುವುದು.

ವಿಮರ್ಶೆ : ಈ ದಶಾಗಳಲ್ಲಿ ಕೇವಲ ಅಷ್ಟೋತ್ತರ, ಷಷ್ಟ್ಯಾಯಿನಿ, ದಶಾಗಳಲ್ಲಿ ಮಾತ್ರ ಅಭಿಜಿತ್‌ನಲ್ಲಿ ಪರಿಗಣಿಸಿ ಉಳಿದ ದಶಾಗಳಲ್ಲಿ 27 ನಕ್ಷತ್ರಗಳನ್ನು ಪರಿಗಣಿಸಲಾಗಿದೆ. ವೇದಕಾಲದಲ್ಲಿ ಅಭಿಜಿತ್ ನಕ್ಷತ್ರವಿದ್ದುದರಿಂದ ಅದನ್ನು ಪರಿಗಣಿಸಲಾಗುತ್ತಿತ್ತು. ಪುರಾಣಕಾಲದಲ್ಲಿ ಅಭಿಜಿತ್ ಲುಪ್ತವಾದುದರಿಂದ 27 ನಕ್ಷತ್ರಗಳನ್ನು ಪರಿಗಣಿಸಲಾಗುತ್ತದೆ. ಈ ಎರಡು ದಶಾ ನೋಡುವಾಗ ಜನ್ಮ ಉತ್ತರಾಷಾಡ 4ನೇ ಚರಣ ಹಾಗೂ ಶ್ರವಣಾದಿ 5/10ನ್ನು ಸೇರಿಸಿ ಅಭಿಜಿತ್ ಎಂದು ಗ್ರಹಿಸಲಾಗುತ್ತದೆ. (ಅಭಿಜಿತ್ ಮಹೂರ್ತ ಹಾಗೂ ಅಭಿಜಿತ್ ನಕ್ಷತ್ರ ಬೇರೆ ಬೇರೆಯೇ) ಆದನ್ನು ಹಿಡಿದೇ ದಶಾ ಸಾಧನ ಮಾಡುವುದು. ಶ್ರವಣಾದ 5/10 ದಶಾರಾಶಿ ಕಳೆದ ನಂತರವೇ ಶ್ರವಣ ಪ್ರಾರಂಭವಾಗುತ್ತದೆ. ದಶಕ್ಕೂ ಹಾಗೇ ಪರಿಗ್ರಹಿಸುವುದು.

## ಉದಾಹರಣೆ:

ಉತ್ತರಾಷಾಢಾದ ಭಭೋಗ (ಒಟ್ಟು ಭೋಗ್ಯಕಾಲ) 60/20 ಇದೆ (ಘಟಿ. ಪಳಾ) ಭೋಗಿಸಿದ್ದು 20 ಘಟಿ, 10 ಫಲಾ ಆದರೆ ಉತ್ತರಾಷಾಡದ ದ್ವಿತೀಯ ಚರಣದಲ್ಲಿ ಜನ್ಮವೆಂಬುದು ಸಿದ್ಧ ಏಕೆಂದರೆ 1 ಚರಣ ಮಾನ 15 ಘಟಿ, 5 ಫಲಾ – ಭೋಗಿಸಿದ್ದು 15.5ಕ್ಕಿಂತ ಹೆಚ್ಚಿಗೆ 30.10ಕ್ಕಿಂತ ಕಡಿಮೆಯಿರುವುದರಿಂದ ಉತ್ತರಾಷಾಡ 2ನೇ ಚರಣ ಸಿದ್ಧವಾಯಿತು. ಈಗ ಉತ್ತರಾಷಾಡದ ಭೋಗ ಘಟಿಯಲ್ಲಿ ಅದರ ಚತುರ್ಥಕ ಕಳೆದರೆ ಅಂದರೆ (ಕೊನೆಭಾಗ ಅಭಿಜಿತ್ ಇರುವುದ ರಿಂದ (60 – 20") – 15.5) = 45 ಘಟಿ, 15ಫಲಾ – ಉತ್ತರಾಷಾಡದ ಭೋಗ (ಒಟ್ಟು ಅನುಭವಿಸಿದ ಕಾಲ)ವಾಗುತ್ತದೆ – ಭಯಾತ್ 20 – 10 ಇದ್ದು ಉತ್ತರಾಷಾಡ ಶನಿ ನಕ್ಷತ್ರವಿದ್ದು – 10 ವರ್ಷ ಅಥವಾ 120 ಮಾಸಗಳಿದ್ದು ಶನಿಯ ನಕ್ಷತ್ರಗಳು ಪೂರ್ವಾಷಾಡ, ಉತ್ತರಾಷಾಡ, ಅಭಿಜಿತ್, ಶ್ರವಣ ಇದ್ದು ಒಂದು ನಕ್ಷತ್ರ ದಶಾಮಾಸ 30 ಆಗುತ್ತದೆ. ವಿಂಶೋತ್ತರಿ ದಶಾಮಾನವಿತ್.

| ಭಯಾತ್ × 30 | 1210 × 30 | = | ಮಾಸ | ದಿ | ಘಟಿ | ಪ |
|---|---|---|---|---|---|---|
| ಭಭೋಗ | 2715 | | 13 | 11 | 6 | 18 |

ಇದು ಉತ್ತರಾಷಾಢದ ಭೋಗ ಮಾಸಾದಿಗಳಾಗುವುವು. ಇದನ್ನು 30 ಮಾಸಗಳಲ್ಲಿ ಕಳೆಯಲಾಗಿ (30 ತಿಂಗಳು) – (13 ಮಾ, 11 ದಿನ, 6 ಘಟಿ, 18 ಫಲ) = 16.18.53.42 ಭಭೋಗಮಾಸಾದಿ ಇದರಲ್ಲಿ ಅಭಿಜಿತ್ ಶ್ರವಣಾಗಳ

30+30 ಮಾಸ=60 ಮಾಸ ಸೇರಿಸಲಾಗಿ = 76 ಮಾಸ, 18 ದಿವಸ, 53 ಘಟಿ, 42 ಫಲಾಗಳು ಬಂದು 12ರಿಂದ ಭಾಗಿಸಲಿ 6–4–18–53–42 ಇದು ಪ್ರಾ ಅಷ್ಟೋತ್ತರ ದಶಾದ ಭೋಗ್ಯವರ್ಷಾದಿಗಳಾಗುವುದು. ಇದನ್ನು ಜನ್ಮ ದಿನಾಂಕದಲ್ಲಿ ಸೇರಿಸುತ್ತಾ ಹೋಗಲು ವರ್ಷಾದಿ ಲಭ್ಯ.

## ಷೋಡಶೋತ್ತರಿ ದಶಾಸಾಧನ

ಶಶಿಹೋರಾಸ್ಥಿತೆ ಲಗ್ನೆ ದಲೆ ಕೃಷ್ಣೇ ತಥಾಸಿತೆ ।
ರವಿಹೋರಾಸ್ಥಿತೆ ಜ್ಞೇಯ ಫಲಾರ್ಥ ಷೋಡಶೋತ್ತರಿ ॥೨೨॥

ಪುಷ್ಯಭಾಂಜ್ಜನ್ಮಭಂ ಯಾವದ್ ವಿಗಣಯ್ಯಾಷ್ಟತಷ್ಟಿತಮ್ ।
ರವಿಭೌಮೊ ಗುರುರ್ಮಾಂದಃ ಕೇತುಶ್ಚಂದ್ರೊ ಬುಧೊ ಭೃಗುಃ ॥೨೩॥

ಅಷ್ಟಾದಶಾಧಿಪಾಃ ಪ್ರೋಕ್ತಾ ರಾಹು ಹೀನಾ ಗ್ರಹಾಃ ಸಮೇ ।
ಈಶಾತ್ ಕ್ರಮಾದ್ ಧೃತಿಂ ಯಾವದಬ್ಧಾ ಏಕೈಕತೋಧಿಕಾಃ ॥೨೪॥

ಕೃಷ್ಣಪಕ್ಷದಲ್ಲಿ ಲಗ್ನ ಚಂದ್ರ ಹೋರಾಗತವಾದರೆ ಶುಕ್ಲಪಕ್ಷದಲ್ಲಿ ಲಗ್ನ ಸೂರ್ಯಹೋರಾಗತವಾಗಿದ್ದರೆ – ಷೋಡಶೋತ್ತರಿ ದಶಾ ಪದ್ಧತಿಯನ್ನೇ ಅನುಸರಿಸುವುದು. ಪುಷ್ಯ ನಕ್ಷತ್ರದಿಂದ ಜನ್ಮನಕ್ಷತ್ರದವರೆಗೆ ಗಣನೆ ಮಾಡಿ ಎಂಟರಿಂದ ಭಾಗ ಮಾಡಿ ಶೇಷಾಂಕ ಕ್ರಮಶಃ ಸೂರ್ಯ, ಮಂಗಳ, ಶನಿ, ಕೇತು, ಚಂದ್ರ, ಬುಧ, ಶುಕ್ರ ಈ ಎಂಟು ಗ್ರಹಗಳ ದಶಾಗಳಾಗುತ್ತವೆ. ದಶಾವರ್ಷ ಸೂರ್ಯ–11ರಿಂದ18ರವರೆಗೆ ಏಕೋತ್ತರ ವೃದ್ಧಿಯಿಂದ ಅರ್ಥಾತ್ ಸೂರ್ಯ–11, ಮಂಗಳ–12, ಗುರು–13, ಶನಿ–14, ಕೇತು–15, ಚಂದ್ರ–16, ಬುಧ–17 ಹಾಗೂ ಶುಕ್ರ–18 ಆಗಿರುತ್ತದೆ. ರಾಹುವಿಗೆ ಯಾವುದೇ ಸ್ಥಾನವಿಲ್ಲ.

### ಸ್ವಷ್ಟಾರ್ಥ ಚಕ್ರ

| ದಶೇಶ | ರವಿ | ಮಂಗಳ | ಗುರು | ಶನಿ | ಕೇತು | ಚಂದ್ರ | ಬುಧ | ಶುಕ್ರ |
|---|---|---|---|---|---|---|---|---|
| ನಕ್ಷತ್ರ | ಪುಷ್ಯಾ | ಆಶ್ಲೇಷಾ | ಮಘಾ | ಪುಬ್ಬ | ಉತ್ತರ | ಹಸ್ತ | ಚಿತ್ತ | ಸ್ವಾತಿ |
| ಕ್ಷತ್ರ | ವಿಶಾಖಾ | ಅನು | ಜ್ಯೇಷ್ಠ | ಮೂಲ | ಪೂ | ಉ | ಶ್ರವಣ | ಧನಿಷ್ಠ |
| ಗ | ಶತತಾರಾ | ಪೂ.ಬಾ. | ಉ.ಬಾ. | ರೇವತಿ | ಅಶ್ವಿನಿ | ಭರಣಿ | ಕೃತ್ತಿಕ | ರೋಹಿಣಿ |
| ಳು | ಮೃಗಶಿರಾ | ಆರಿದ್ರಾ | ಪುನರ್ವ | × | × | × | × | × |
| ವರ್ಷ | 11 | 12 | 13 | 14 | 15 | 16 | 17 | 18 |

ದಶಾವರ್ಷಗಳನ್ನು ಈ ಮೊದಲೆ ತಿಳಿಸಿದಂತೆ ತೆಗೆಯುವುದು

## ದ್ವಾದಶೋತ್ತರಿ ದಶಾ

ಜನ್ಮಭಾತ್‌ಪೌಷ್ಣಪರ್ಯಂತಂ ವಿಗಣಯ್ಯಾಷ್ಟಭಿರ್ಭಜೇತ್ ।
ಶೇಷೈಃ ಸಿತಾಂಶ ಜಾತಾನಾಂ ದಶೇಷ್ಟಾ ದ್ವಾದಶೋತ್ತರಿ ॥೨೫॥

ಸೂರ್ಯೋ ಗುರುಃ ಶಿಖೀ ಜ್ಞೋಗುಃ ಕುಜೋ ಮಂದೋ ನಿಶಾಕರಃ ।
ಶುಕ್ರಹೀನಾ ದಶಾನಾಥಾ ದ್ವಿಚಯಾತ್ ಸಪ್ತತಃ ಸಮಾಃ ॥೨೬॥

ಶುಕ್ರ ನವಾಂಶದಲ್ಲಿ ಹುಟ್ಟಿದ ಜಾತಕನಿಗೆ (ಜನ್ಮಲಗ್ನ) ಶುಕ್ರ ನವಾಂಶದಲ್ಲಿರಲು ದ್ವಾದಶೋತ್ತರಿ ದಶಾ ಫಲಪ್ರದವಾಗುತ್ತದೆ. ಜನ್ಮ ನಕ್ಷತ್ರದಿಂದ ರೇವತಿ ನಕ್ಷತ್ರದವರೆಗೆ ಎಣಿಸಿ 8ರಿಂದ ಭಾಗಿಸಿ ಶೇಷ (1) ಸೂರ್ಯ – ಎಂಬ ಗ್ರಹ ಮಹಾದಶಾ ಎಂದು ಪರಿಗ್ರಹಿಸುವುದು – ಶುಕ್ರನಿಗೆ ಮಾತ್ರ ದಶಾನಾಥನಲ್ಲಿ ಸ್ಥಾನವಿಲ್ಲ. (1) ಸೂರ್ಯ (2) ಗುರು (3) ಕೇತು (4) ಬುಧ (5) ರಾಹು (6) ಮಂಗಳ (7) ಶನಿ ಹಾಗೂ (8) ಚಂದ್ರ ಅಧಿಪರಾಗುತ್ತಾರೆ. ಇದರ ದಶಾವರ್ಷ ಕ್ರಮ 7ರಿಂದ ಎರಡು ಸೇರಿಸುತ್ತಾ ಹೋಗುವುದು. ಅರ್ಥಾತ್ ಸೂರ್ಯ – 7, ಗುರು – 9, ಕೇತು – 11, ಬುಧ – 13, ರಾಹು – 15, ಮಂಗಳ – 17, ಶನಿ – 19, ಚಂದ್ರ – 21 ವರ್ಷವೆಂದು ಪರಿಗಣಿಸುವುದು.

### ಸ್ವಷ್ಟಾರ್ಥ ಚಕ್ರ

### ದ್ವಾದಶೋತ್ತರಿ ಚಕ್ರ

| ದಶೇಶ | ಸೂರ್ಯ | ಗುರು | ಕೇತು | ಬುಧ | ಶುಕ್ರ | ಮಂಗಳ | ಶನಿ | ಚಂದ್ರ |
|---|---|---|---|---|---|---|---|---|
| ನ | ರೇವತಿ | ಉ.ಭಾ. | ಪೂ.ಭಾ. | ಶತತಾರಾ | ಧನಿಷ್ಠ | ಶ್ರವಣ | ಉ.ಆ. | ಪೂ.ಆ. |
| ಕ್ಷ | ಮೂಲ | ಜ್ಯೇಷ್ಠ | ಅನುರಾಧ | ವಿಶಾಖ | ಸ್ವಾತಿ | ಚಿತ್ತ | ಹಸ್ತ | ಉತ್ತರ |
| ತ್ರ | ಪುಬ್ಬ | ಮಖಾ | ಆಶ್ಲೇಷ | ಪುಷ್ಯ | ಪು | ಆ | ಮೃ | ರೋ |
| ಗಳು | ಕೃತ್ತಿಕ | ಭರಣಿ | ಅಶ್ವಿನಿ | × | × | × | × | × |
| ವರ್ಷ | 7 | 9 | 11 | 13 | 15 | 17 | 19 | 21 |

## "ಪಂಚೋತ್ತರಿ ದಶಾ ಸಾಧನ"

ಪಂಚೋತ್ತರಿ ದಶಾ ಕರ್ಕತನೌ ಸ್ವದ್ವಾದಶಾಂಶಗೆ ।
ಮಿತ್ರ ಭಾತ್ತು ಜನಾರ್ಭಾಂತಂ ವಿಗಣಯ್ಯಾ ದ್ರಿಭಿರ್ಭಜೇತ್ ॥೨೭॥

ಶೇಷತಃ ಕ್ರಮತೋ ವೇದ್ಯಾ ದಶೇಶಾಃ ಸಪ್ತ ವಿದ್ಧರೈಃ ।
ರವಿಜ್ಞೋರ್ಕಸುತೋ ಭೌಮೋ ಭಾರ್ಗವಃ ಶಶಭೃದ್ ಗುರುಃ ॥೨೮॥

ಸೂರ್ಯಾತ್ ಕ್ರಮಾದ್ ಧೃತಿಂ ಯಾವ ಜ್ಞೇಯಾ ಏಕೈಕತೋಧಿಕಾಃ।
ತಮೋಗ್ರಹೌ ವಿನಾ ಸಪ್ತನ ಭೋಗಾನಾಂ ತು ವತ್ಸರಾಃ ॥೨೯॥

ಕರ್ಕ ಲಗ್ನ ಅದೇ ದ್ವಾದಶಾಂಶದಲ್ಲಿ ಜನ್ಮತಾಳಿದ್ದರೆ ಪಂಚೋತ್ತರಿದಶಾವೇ ಫಲಪ್ರದವಾಗುತ್ತದೆ. (ಅಂದರೆ ಲಗ್ನ 2 ಡಿಗ್ರಿ – 30'ದಲ್ಲಿಯೇ ಉದಿತವಾಗಿರ ಬೇಕು) – ಇಂತಹ ಸ್ಥಿತಿಯಲ್ಲಿ ಅನುರಾಧಾದಿಂದ ಜನ್ಮನಕ್ಷತ್ರದವರೆಗೆ ಎಣಿಸಿ 7ರಿಂದ ಭಾಗಿಸಿ – ಶೇಷಾಂಕ 1ರಿಂದ ಸೂರ್ಯ, ಬುಧ, ಶನಿ, ಮಂಗಳ, ಶುಕ್ರ, ಚಂದ್ರ, ಗುರು ಈ ಏಳು ಗ್ರಹ ದಶಾ ಪರಿಗಣಿಸುವುದು. ಅದರ ದಶಾ ವರ್ಷ ಸೂರ್ಯ – 12, ಬುಧ – 13, ಶನಿ – 14, ಮಂಗಳ – 15, ಶುಕ್ರ – 16, ಚಂದ್ರ – 17, ಗುರು – 18 ಈ ರೀತಿ 12ಕ್ಕೆ ಒಂದು ಸೇರಿಸುತ್ತಾ ದಶಾವರ್ಷ ಪರಿಗಣಿಸುವುದು. ಈ ದಶಾದಲ್ಲಿ ತಮೋ ಪ್ರಧಾನ ಗ್ರಹಗಳಾದ ರಾಹು–ಕೇತುಗಳಿಗೆ ಸ್ಥಾನವಿಲ್ಲ.

## ಸ್ವಷ್ಟಾರ್ಥ – ಪಂಚೋತ್ತರಿ ಚಕ್ರ

| ದಶೇಶ | ಸೂರ್ಯ | ಬುಧ | ಶನಿ | ಮಂಗಳ | ಶುಕ್ರ | ಚಂದ್ರ | ಗುರು |
|---|---|---|---|---|---|---|---|
| ನ | ಅನುರಾಧಾ | ಜ್ಯೇಷ್ಠ | ಮೂಲ | ಪೂ.ಆ. | ಉ.ಆ | ಶ್ರವಣ | ಧನಿಷ್ಠ |
| ಕ್ಷ | ಶತರಾತಾ | ಪೂ.ಭಾ. | ಉ.ಭಾ. | ರೇವತಿ | ಅಶ್ವಿನಿ | ಭರಣಿ | ಕೃತ್ತಿಕ |
| ತ್ರ | ರೋಹಿಣಿ | ಮೃಗಶಿರ | ಆರಿದ್ರಾ | ಪುನರ್ವಸು | ಪುಷ್ಯ | ಆಶ್ಲೇಷ | ಮಖಾ |
| ಗಳು | ಪುಬ್ಬ | ಉತ್ತರ | ಹಸ್ತ | ಚಿತ್ತ | ಸ್ವಾತಿ | ವಿಶಾಖ | × |
| ವರ್ಷ | 12 | 13 | 14 | 15 | 16 | 17 | 18 |

ವಿಶಾಖ ಜನ್ಮನಕ್ಷತ್ರವಾದರೆ ಚಂದ್ರದಶಾ ಉಳಿದೆಲ್ಲವು ವಿಂಶೋತ್ತರಿಯಂತೆ

## ಶತಾಬ್ದಿಕ ದಶಾ

ವರ್ಗೋತ್ತಮಗತೆ ಲಗ್ನೆ ದಶಾಚಿಂತ್ಯಾ ಶತಾಬ್ದಿಕಾ ।
ಪೌಷ್ಣಾಜ್ಜನ್ಮರ್ಕ್ಷಪರ್ಯಂತಂ ಗಣಯೇತ್ ಸಪ್ತಭಿರ್ಹರೇತ್ ॥೩೦॥

ಶೇಷಾಂಕೆ ರವಿತೋ ಜ್ಞೇಯಾ ದಶಾ ಶತಸಮಾಭಿಧಾ ।
ರವಿಶ್ಚಂದ್ರೋ ಭೃಗುಶ್ಚಾಂದ್ರರ್ಜೀವ ಆರಃ ಶನೈಶ್ಚರ ॥೩೧॥

ಕ್ರಮಾದೇತೆ ದಶಾನಾಥ ಬಾಣಾ ಬಾಣಾ ದಿಶೊ ದಿಶ ।
ನಖಾ ನಖಾಃ ಖರಾಮಾಶ್ಚ ಬೊದ್ಯಾ ಅಬ್ದಾ ಬುಧೈಃ ಸದಾ ॥೩೨॥

ಜನ್ಮಲಗ್ನ ವರ್ಗೋತ್ತಮ ನವಾಂಶಗತವಾದರೆ ಶತಾಬ್ದಿಕ ದಶಾಮಾನ್ಯವಾಗುತ್ತದೆ. ರೇವತಿಯಿಂದ ಜನ್ಮನಕ್ಷತ್ರದವರೆಗೆ ಎಣಿಸಿ 7ರಿಂದ ಭಾಗಿಸಲು ಏಕಾದಿಶೇಶ ಸೂರ್ಯ, ಚಂದ್ರ, ಶುಕ್ರ, ಬುಧ, ಗುರು, ಮಂಗಳ, ಶನೈಶ್ಚರ ಏಳು ಗ್ರಹಗಳಿ ದಶಾಧಿಪರಾಗುವರು. ರಾಹು, ಕೇತುಗಳಿಗೆ ಈ ದಶಾದಲ್ಲಿ ಸ್ಥಾನವಿಲ್ಲ. ಈ ಗ್ರಹಗಳ ದಶಾವರ್ಷಗಳು ಸೂರ್ಯ – 5, ಚಂದ್ರ – 5, ಶುಕ್ರ – 10, ಬುಧ – 10, ಗುರು – 20, ಮಂಗಳ – 20, ಶನಿ – 30 ವರ್ಷವೆಂದು ಪರಿಗಣಿಸುವುದು.

### ಸ್ಪಷ್ಟಾರ್ಥ ಚಕ್ರ

| ದಶೇಶ | ಸೂರ್ಯ | ಚಂದ್ರ | ಶುಕ್ರ | ಬುಧ | ಗುರು | ಮಂಗಳ | ಶನಿ |
|---|---|---|---|---|---|---|---|
| ನಕ್ಷತ್ರ | ರೇವತಿ | ಅಶ್ವಿನಿ | ಭರಣಿ | ಕೃತ್ತಿಕ | ರೋಹಿಣಿ | ಮೃಗಶಿರ | ಆರಿದ್ರಾ |
| ಕ್ಷ | ಪುನರ್ವಸು | ಪುಷ್ಯ | ಆಶ್ಲೇಷ | ಮಖಾ | ಪುಬ್ಬ | ಉತ್ತರ | ಹಸ್ತ |
| ತ್ರ | ಚಿತ್ತ | ಸ್ವಾತಿ | ವಿಶಾಖ | ಅನುರಾಧ | ಜ್ಯೇಷ್ಠ | ಮೂಲ | ಪೂ.ಆ |
| ಗಳು | ಉ.ಆ. | ಶ್ರವಣ | ಧನಿಷ್ಠ | ಶತತಾರಾ | ಪೂ.ಬಾ | ಉ.ಬಾ. | × |
| ವರ್ಷ | 5 | 5 | 10 | 10 | 20 | 20 | 30 |

ಉದಾಹರಣೆ ಮೇಲೆ ಉದಾಹರಿತ ಕುಂಡಲಿ ವರ್ಗೋತ್ತಮವಿದ್ದು ವಿಂಶೋತ್ತರಿಗಿಂತ ಈ ದಶಾ ಹೆಚ್ಚು – ನಿಖರಪ್ರದ – ರೇವತಿಯಿಂದ ವಿಶಾಖ 17ನೇ ನಕ್ಷತ್ರ $17 \div 7 =$ 3 ಶೇಷ. ಶುಕ್ರದಶಾ ಉಳಿದ ಕ್ರಮ ವಿಂಶೋತ್ತರಿಯಂತೆ.

ಸ್ಪಷ್ಟರಾಶಿ – ಅಂಶಕಲೆ (ಚಂದ್ರನ) ಒಟ್ಟು ಕಲೆಗಳು $12240 \div 800$ ಶೇಷ 240ನ್ನು $800 - 240 = 560 \times 10$ (ದಶಾವರ್ಷ)

5600 ÷ 800 = 7 ವರ್ಷ ಜನ್ಮತಃ ಶುಕ್ರದಶಾ

ಈಗ 3 – 11 – 1937

7 ಶುಕ್ರದಶಾ

--------------

3 – 11 – 1944

10 ಬುಧ

--------------

3 – 11 – 1954

20 ಗುರುದಶಾ

--------------

3 – 11 – 1974

20 ಮಂಗಳ

--------------

3 – 11 – 1944

30 ಶನಿದಶಾ

--------------

3 – 11 – 2024

## ಚತುರಶೀತಿಸಮಾ ದಶಾ

**ಕರ್ಮಸ್ಥೆ ಕರ್ಮಪೆ ಭೋಧ್ಯಾ ದಶಾ ಚತುರಶೀತಿರಾ ।**
**ಪವನಾಜ್ಜನ್ಮಭಂ ಯಾವದ್ ವಿಗಣಯ್ಯಾದ್ರಿಭಿರ್ಭಜೇತ್ ॥೩೩॥**

**ಶೇಷತೋರ್ಕ ವಿಧುಕ್ಮಾಜವಿಜ್ಜೀವ ಸಿತಸೌರಯಃ ।**
**ದಶೇಶಾಃ ಕ್ರಮತಿಸ್ತೆಷಾಂ ದ್ವಾದಶಾಬ್ದಾಃ ಪ್ರಕೀರ್ತಿತಃ ॥೩೪॥**

ಜನ್ಮಸಮಯದಲ್ಲಿ ದಶಮೇಶ ದಶಮದಲ್ಲಿದ್ದರೆ ಚತುರಶೀತ ಸಮಾ ದಶಾ ಫಲಪ್ರದವಾಗುತ್ತದೆ. ದಶಾನಾಥನನ್ನು ಕಂಡುಹಿಡಿಯಲು ಸ್ವಾತಿಯಿಂದ ಜನ್ಮ ನಕ್ಷತ್ರದವರೆಗೆ ಎಣಿಸಿ 7ರಿಂದ ಭಾಗಿಸಲು – ಶೇಷ ಆರಂಭಿಕ ದಶಾಧೀಶನಾಗುತ್ತಾನೆ. ಗಣನೆಯನ್ನು ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ ಹಾಗೂ ಶನಿ ಈ ರೀತಿ ಕ್ರಮಶಃ ತೆಗೆದುಕೊಳ್ಳುವುದು. ಪ್ರತಿಗ್ರಹದ ದಶಾ ವರ್ಷ 12 ವರ್ಷ.

## ಸ್ವಷ್ಪಾರ್ಥ ಚಕ್ರ

| ದಶಾಧೀಶ | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ನಕ್ಷತ್ರ | ಸ್ವಾತಿ | ವಿಶಾಖ | ಅನುರಾಧ | ಜ್ಯೇಷ್ಠ | ಮೂಲ | ಪೂ.ಆ. | ಉ.ಆ. |
| ಕ್ಷ | ಶ್ರವಣ | ಧನಿಷ್ಠ | ಶತತಾರಾ | ಪೂ.ಬಾ. | ಉ.ಬಾ. | ರೇವತಿ | ಅಶ್ವಿನಿ |
| ತ್ರ | ಭರಣಿ | ಕೃತ್ತಿಕ | ರೋಹಿಣಿ | ಮೃಗಶಿರ | ಆರಿದ್ರಾ | ಪುನರ್ವಸು | ಪುಷ್ಯ |
| ಗಳು | ಆಶ್ಲೇಷ | ಮಘಾ | ಪುಬ್ಬ | ಉತ್ತರ | ಹಸ್ತ | ಚಿತ್ತ | × |
| ವರ್ಷ | 12 | 12 | 12 | 12 | 12 | 12 | 12 |

ವಿಶಾಖಾ ನಕ್ಷತ್ರೋತ್ಪನ್ನನಿಗೆ ಚಂದ್ರ ದಶಾ ಆಗುವುದು. ಎಲ್ಲವೂ ವಿಂಶೋತ್ತರಿಯಂತೆ.

## ದ್ವಿಸಪ್ತತಿ ಸಮಾ ದಶಾ

ಮೂಲಾಜ್ಜನ್ಮರ್ಕ್ಷಪರ್ಯಂತಂ ಗಣಯೇದಷ್ಟಭಿರ್ಹರೇತ್ ।
ಶೇಷತಸ್ತು ದಶಾಧೀಶಾಃ ಕ್ರಮಾದಷ್ಟಾ ವಿನಾದಯಃ ॥೩೫॥

ನವ ವರ್ಷಾಣಿ ಸರ್ವೇಷಾಂ ವಿಕೇತುನಾಂ ಖಚಾರಿಣಾವಮ್ ।
ಲಗ್ನೇಶೆ ಸಪ್ತಮೇ ಯತ್ರ ಲಗ್ನೆ ವಾ ಸಪ್ತಮಾಧಿಪೆ ॥೩೬॥

ಚಿಂತನೀಯಾ ದಶಾತತ್ರ ದ್ವಿದ್ವ್ಯಧಿಕಾ ಸಪ್ತತಿಃ ಸಮಾಃ ।
ಇಹಾಪಿ ಭುಕ್ತ ಭೋಗ್ಯಾದಿವರ್ಷ ವಿಂಶೋತ್ತರಿಸಮಮ್ ॥೩೭॥

ದ್ವಿಸಪ್ತತಿ ಸಮಾ ದಶಾದಲ್ಲಿ ಮೂಲನಕ್ಷತ್ರದಿಂದ ಜನ್ಮನಕ್ಷತ್ರದವರೆಗೆ ಎಣಿಸಿ ೮ರಿಂದ ಭಾಗಿಸಿ ಏಕಾದಿಶೇಷದಿಂದ ಕೇತುರಿಕ್ತ ಗ್ರಹಗಳನ್ನು – ಸೂರ್ಯಾದಿ ರಾಹುಪರ್ಯಂತ ಕ್ರಮಶಃ ಎಣಿಸುವುದು (ರ, ಚ, ಮ, ಬು, ಗು, ಶು, ಶ, ರಾ) ಪ್ರತ್ಯೇಕ ಗ್ರಹದ ದಶಾ ಒಂಭತ್ತು ವರ್ಷನೆಂದು ಪರಿಗಣಿಸುವುದು – ಲಗ್ನೇಶ ಸಪ್ತಮದಲ್ಲಿ ಅಥವಾ ಸಪ್ತಮೇಶ ಲಗ್ನದಲ್ಲಿದ್ದರೆ ಮಾತ್ರ ಈ ದಶಾ ಫಲಪ್ರದ ವಾಗಿರುತ್ತದೆ. ಭುಕ್ತ ಭೋಗ್ಯ ವರ್ಷಾದಿ ಅನುನಯನ ವಿಂಶೋತ್ತರಿಯಂತೆ ಪರಿಗಣಿಸುವುದು.

| ದಶೇಶ | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು |
|---|---|---|---|---|---|---|---|---|
| ನಕ್ಷತ್ರ | ಮೂಲ | ಪೂ.ಆ. | ಉ.ಆ. | ಶ್ರವಣ | ಧನಿಷ್ಠ | ಶತತಾರಾ | ಪೂ.ಬಾ. | ಉ.ಬಾ. |
| ಕ್ಷ | ರೇವತಿ | ಅಶ್ವಿನಿ | ಭರಣಿ | ಕೃತ್ತಿಕ | ರೋಹಿಣಿ | ಮೃಗಶಿರ | ಆರಿದ್ರಾ | ಪುನರ್ವಸು |
| ತ್ರ | ಪುಷ್ಯ | ಆಶ್ಲೇಷ | ಮಖಾ | ಪುಬ್ಬ | ಉತ್ತರ | ಹಸ್ತ | ಚಿತ್ತ | ಸ್ವಾತಿ |
| ಗಳು | ವಿಶಾಖ | ಅನುರಾಧ | ಜ್ಯೇಷ್ಠ | × | × | × | × | × |

ಉದಾಹರಣೆ – ಪೂರ್ವದಂತೆ

## ಷಷ್ಟ್ಯಾಯಿನಿ ದಶಾ

**ಲಗ್ನಭಾವಸ್ಥೋ ಯದಾರ್ಕಸ್ತು ಚಿನ್ತ್ಯಾ ಷಷ್ಟಿಸಮಾ ದಶಾ ।**
**ದಾಸ್ರತ್ರಯಂ ಚತುಷ್ಕಂ ಚ ರೇವತ್ಯಂತಂ ಪುನಃ ಪುನಹ ॥೩೮॥**

**ಗುರ್ವರ್ಕ ಭೂಸುತಾನಾಂ ಚ ದಶಾವರ್ಷಾಣಿ ವೈದಶಾ ।**
**ತತಃ ಶಶಿಜ್ಞ ಶುಕ್ರಾರ್ಕ ಪುತ್ರಾಗೂನಾಂ ಸಮಾಸ್ತು ಷಟ್ ॥೩೯॥**

ಸೂರ್ಯ ಲಗ್ನ ಭಾವದಲ್ಲಿರಲು ಷಷ್ಟಸಮಾ ದಶಾ ಫಲಪ್ರದವು ಅಶ್ವಿನಿಯಿಂದ 3, ಪುನಃ 4, ಪುನಃ 3, ಪುನಃ 4 ಈ ಪ್ರಕಾರ ರೇವತಿ ಪರ್ಯಂತ ನಕ್ಷತ್ರಗಳನ್ನು ಗುರು, ಸೂರ್ಯ, ಮಂಗಳ, ಚಂದ್ರ, ಬುಧ, ಶುಕ್ರ, ಶನಿ ರಾಹುಗಳಲ್ಲಿ ಹಂಚುವುದು. ಇಲ್ಲಿ ಗುರು, ಸೂರ್ಯ ಹಾಗೂ ಮಂಗಳದ ದಶಾವರ್ಷ 10 ವರುಷಗಳದ್ದಾಗಿದ್ದು ಉಳಿದ ಗ್ರಹಗಳಾದ ಚಂದ್ರ, ಬುಧ, ಶುಕ್ರ, ಶನಿ ದಶಾದಲ್ಲಿ ದಶಾ ವರ್ಷಗಳು 6, 6 ವರ್ಷವೆಂದು ಪರಿಗಣಿಸುವುದು – ಇಲ್ಲಿ ಗುರು, ರವಿ, ಮಂಗಳ, ಚಂದ್ರ, ಬುಧ, ಶುಕ್ರ, ಶನಿ, ರಾಹು ಈ ರೀತಿ ಎಂಟು ಗ್ರಹಗಳ ದಶಾಗಳದ್ದು ಕೇತುವಿಗೆ ದಶಾ ಸ್ವಾಮಿತ್ವವಿಲ್ಲ.

ಚಕ್ರ

| ದಶಾಧೀಶ | ಗುರು | ರವಿ | ಮಂಗಳ | ಚಂದ್ರ | ಬುಧ | ಶುಕ್ರ | ಶನಿ | ರಾಹು |
|---|---|---|---|---|---|---|---|---|
| ನಕ್ಷತ್ರ | ಅಶ್ವಿನಿ | ರೋಹಿಣಿ | ಪುಷ್ಯ | ಪುಬ್ಬ | ಸ್ವಾತಿ | ಜ್ಯೇಷ್ಠ | ಅಭಿಜಿತ್ | ಶತತಾರ |
| ಕ್ಷ | ಭರಣಿ | ಮೃಗಶಿರ | ಆಶ್ಲೇಷ | ಉತ್ತರ | ವಿಶಾಖ | ಮೂಲ | ಶ್ರವಣ | ಪೂ.ಆ. |
| ತ್ರ | ಕೃತ್ತಿಕ | ಆರಿದ್ರಾ | ಮಖಾ | ಹಸ್ತ | ಅನುರಾದ | ಪೂ.ಆ. | ಧನಿಷ್ಠ | ಉ.ಬಾ. |
| ಗಳು | × | ಪುನರ್ವಸು | × | ಚಿತ್ತ | × | ಉ.ಆ | × | ರೇವತಿ |
| ವರ್ಷ | 10 | 10 | 10 | 6 | 6 | 6 | 6 | 6 |

ಈ ಷಷ್ಠ್ಯಾಯಿನಿ ದಶಾದಲ್ಲಿ ಅಭಿಜಿತ್ ಗಣನೆ ಅಷ್ಟೋತ್ತರಿಯಂತೆ ತೆಗೆದುಕೊಳ್ಳುವುದು – ಉಳಿದ ರೀತಿ ಅಷ್ಟೋತ್ತರಿಯಂತೆ ಉತ್ತರಾಷಾಡ ಕೊನೆ ಚರಣ ಶ್ರವಣಾದ 5/10 ಭಾಗ ಅಭಿಜಿತ್.

## ಷಟ್‌ತ್ರಿಂಶತ್ಸಮಾ ದಶಾ

ಶ್ರವಣಾಜ್ಜನ್ಮಭಂ ಯಾವದ್ ವಿಗಣಯ್ಯಾಷ್ಟಭಿರ್ಭಜೇತ್ ।
ಶೇಷದಿಂದುರ್ಕ ದೇವೇಜ್ಯಾರಜ್ಞಾರ್ಕಿಸಿತ ರಾಹವಃ ॥೪೦॥

ದಶಾಧೀಶಾಃ ಕ್ರಮಾದೇಷಾಂ ಜ್ಞೇಯ ಏಕಾದಯಃ ಸಮಾಃ ।
ಲಗ್ನೇ ದಿವಾ ಭಾಸ್ಕರಸ್ಯ ಹೋರಾಯಾಂ ಶಶಿನೋ ನಿಶಾ ॥೪೦॥

ಇಲ್ಲಿ ಶ್ರವಣ ನಕ್ಷತ್ರದಿಂದ ಜನ್ಮನಕ್ಷತ್ರದವರೆಗೆ ಎಣಿಸಿ 8ರಿಂದ ಭಾಗಿಸಿ ಏಕಾದಶೇಶದಲ್ಲಿ ಚಂದ್ರ, ಸೂರ್ಯ, ಗುರು ಭೌಮ ಬುಧ, ಶನಿ, ಶುಕ್ರ, ರಾಹು ಈ ಪ್ರಕಾರ ಕ್ರಮಶಃ ದಶಾದಿಪರಾಗುತ್ತಾರೆ. ಇವರ ದಶಾ ವರ್ಷಮಾನ ಚಂದ್ರ – 1, ರವಿ – 2, ಗುರು – 3, ಭೌಮ – 4, ಬುಧ – 5, ಶನಿ – 6, ಶುಕ್ರ – 7, ರಾಹು – 8 ವರ್ಷ ಈ ರೀತಿಯಾಗಿರುತ್ತದೆ. ಇಲ್ಲಿ ಹಗಲಿನಲ್ಲಿ ಹುಟ್ಟಿ ಲಗ್ನ ಸೂರ್ಯ ಹೋರಾ ಆದರೆ ರಾತ್ರಿ – ಹುಟ್ಟಿ ಲಗ್ನ ಚಂದ್ರಹೋರಾ ಆದರೆ ಮಾತ್ರ ಈ ದಶಾಗ್ರಾಹ್ಯ.

### ಸ್ವಷ್ಟಾರ್ಥ ಚಕ್ರ

| ದಶಾಧೀಪ | ಚಂದ್ರ | ಸೂರ್ಯ | ಗುರು | ಮಂಗಳ | ಬುಧ | ಶನಿ | ಶುಕ್ರ | ರಾಹು |
|---|---|---|---|---|---|---|---|---|
| ನಕ್ಷತ್ರ | ಶ್ರವಣ | ಧನಿಷ್ಠ | ಶತತಾರ | ಆರಿದ್ರಾ | ಪುನರ್ವಸು | ಪುಷ್ಯ | ಆಶ್ಲೇಷ | ಮಘಾ |
| ಕ್ಷ | ಕೃತ್ತಿಕಾ | ರೋಹಿಣಿ | ಮೃಗಶಿರ | ಆರ್ದ್ರಾ | ಪುನರ್ವಸು | ಪುಷ್ಯಾ | ಆಶ್ಲೇಷಾ | ಮಘಾ |
| ತ್ರ | ಪುಬ್ಬ | ಉತ್ತರ | ಹಸ್ತ | ಚಿತ್ತ | ಸ್ವಾತಿ | ವಿಶಾಖ | ಅನುರಾಧ | ಜ್ಯೇಷ್ಠ |
| ಗಳು | ಮೂಲ | ಪೂ.ಆ. | ಉ.ಆ | × | × | × | × | × |
| ವರ್ಷ | 1 | 2 | 3 | 4 | 5 | 6 | 7 | 8 |

ಪೂರ್ವದಂತೆ ಗ್ರಹಿಸುವುದು.

ವಿಮರ್ಶೆ: ಕಾಲದಶಾ ಪೂರ್ವದಲ್ಲಿ ವಿಮರ್ಶೆಯ ಅಂಶ ಈಗ ಸಾಮಾನ್ಯವಾಗಿ ಕೆಲವರನ್ನು ಬಿಟ್ಟು ವಿಂಶೋತ್ತರಿ ದಶಾ ಒಂದನ್ನೇ ಉಲ್ಲೇಖಿಸುತ್ತಿದ್ದು ಏಕೋ ತಿಳಿಯದು. ಮಹಾರಾಷ್ಟ್ರದಲ್ಲಿ ಮಾತ್ರ ಒಂದಿಬ್ಬರು ಅಷ್ಟೋತ್ತರಿ ದಶಾ ಹೇಳಿದರೂ ಸಾರ್ವತ್ರಿಕ ವಿಂಶೋತ್ತರಿ ಮಾತ್ರ ಬಳಕೆಯಲ್ಲಿರುವುದು – ಒಂದು

ರೀತಿ ಅವೈಜ್ಞಾನಿಕವೆ. ಅವರವರ ಕುಂಡಲಿಯಂತೆ ದಶಾ ಹೇಳುವುದು ವಿಹಿತ. 3, 4 ದಶಾಗಳು ಏಕಕಾಲಕ್ಕೆ ಒಂದೇ ಕುಂಡಲಿಗೆ ಸರಿ ಹೊಂದಿದರೆ 3, 4ನ್ನು ನೋಡದೆ ಅತಿ ಬಲಿಷ್ಠ ಅಂಶ ಗಣಿಸಿ ಅದೇ ದಶಾ ಪದ್ಧತಿಯಂತೆ ಪರಿಗಣಿಸುವುದು ವಿಹಿತ ಹಾಗೂ ಇಲ್ಲಿ ವರ್ಷಮಾನ ಪದ್ಧತಿಯಲ್ಲಿ 365 ದಿವಸವನ್ನೇ ಪರಿಗಣಿಸಿ ಅಂದರೆ ಸೂರ್ಯ ಸಿದ್ಧಾಂತದಂತೆ (365 ದಿವಸ, ಘಟಿ, ಫಲ, ವರ್ಷ) ಗಣಿಸಿದರೆ ಹೆಚ್ಚು ವ್ಯತ್ಯಾಸ ಬಾರದು. ಹಾಗೆ ಹೇಳದಿದ್ದಾಗಲೂ ವ್ಯತ್ಯಾಸ ಬಹಳವಾಗಲಾರದು. ಏಕೆಂದರೆ ಕೆಲವು ಗ್ರಹ ದಶಾಪೂರ್ವದಲ್ಲಿ, ಕೆಲವು ಮಧ್ಯದಲ್ಲಿ, ಮತ್ತೆ ಕೆಲವು ಗ್ರಹಗಳು ದಶಾಂತರದಲ್ಲಿ ಫಲದಾಯಕವಾಗಿರುವುದರಿಂದ ಹೆಚ್ಚು ವ್ಯತ್ಯಾಸವಾಗ ಲಾರದು. ಈ ಎಲ್ಲ ಅಂಶ ಗಮನಿಸಿ ದಶಾ ಅನ್ವಯಿಸುವಾಗ ಅನ್ವಯಿಸುವುದು. ಈ ನಕ್ಷತ್ರಮಾನದಿಂದ ಅಂದರೆ ರಾಶಿಯಿದ ಫಲಾದೇಶ 50% ಆದ್ದರಿಂದ ಅದಕ್ಕೂ ನಿಖರವಾಗಿ ಲಗ್ನ ಬಿಂದುವನ್ನೇ ಪರಿಗಣಿಸಿ ಹೇಳುವುದು ಹೆಚ್ಚು ಶ್ರೇಯಸ್ಕರ. ಲಗ್ನ ಬಿಂದು ವಿಶಿಷ್ಟ – ಸಮಯ ಬಿಂದುವಾಗಿ – ವ್ಯಕ್ತಿಯ ಜೀವನ ನಿರೂಪಿಸುವುದ ರಿಂದ ಲಗ್ನ ಬಿಂದುವಿನಿಂದ ತೆಗೆದ ಭಾವ ಹೆಚು ನಿರ್ದಿಷ್ಟವಾಗುವುದು.

ನಿಖರ : ಫಲಕ್ಕೆ ಲಗ್ನ ಬಿಂದುವಿನಿಂದ ತೆಗೆಯುವುದು ಹೆಚ್ಚು ಶ್ರೇಯಸ್ಕರ. ಲಗ್ನ ಯಾವ ಅಂಶ ಕಲಾದಲ್ಲಿ ಉದಿತವಾಗಿದೆಯೋ ಆ ಅಂಶ ಕಲಾಗಳನ್ನು – ಕಲೆ ಮಾಡಿ ವಿಂಶೋತ್ತರಿ ದಶಾದಲ್ಲಿ ಹೇಳಿದಂತೆ ಸ್ಪಷ್ಟ ದಶಾ – ತೆಗೆಯುವುದು.

ಮೇಲಿನ ಉದಾಹರಣೆಯಲ್ಲಿ ಶತಾಬ್ದಿಕ ದಶಾ ಫಲದಾಯಕವಾದ್ದರಿಂದ ಆ ದೆಸೆಯನ್ನು ಲಗ್ನವತ್ ತೆಗೆಯುವುದು. ಸ್ಪಷ್ಟಲಗ್ನ 3 – 2 – 31 ಕಲಾ ಇದ್ದು ಇದರ ಕಲೆಗಳು – 5520+31ಕಲೆ = ಅಂತೂ ಕಲೆಗಳ 5531 ÷ 800 ಶೇಷ 49 × 5 (ಸೂರ್ಯದ ದಶಾವರ್ಷ) = 245 ÷ 800 = 0 ವರ್ಷ – 3ತಿಂಗಳು – 20 ದಿವಸ – 15ಘಟಿ. ಸೂರ್ಯದಶಾ ಜನ್ಮತಃ ಇದರಿಂದ ನಿಖರ ಫಲಾದೇಶ ಸಾಧ್ಯ. ಪರಿಶಿಷ್ಟ ದಲ್ಲಿ – ಸುಲಭ – ದಶಾ ತೆಗೆಯುವ (ವಿಂಶೋತ್ತರಿ) ಚಾರ್ಟ್ ಕೊಡಲಾಗಿದೆ.

## ಕಾಲದಶಾ ಸಾಧನ

ಬಿಂಬಾರ್ಧಾಸ್ತದ್ರವೇಃ ಪೂರ್ವ ಪರಸ್ತಾದು ದಯಾದಪಿ ।
ಪಂಚಘಟ್ಯಾಸ್ತೂ ಭಯತ್ರ ಸಂಧ್ಯೈವಂ ದಶನಾಡಿಕಾ ॥೪೨॥

ಸಂಧ್ಯಾದ್ವಯಂ ಚ ವಿಂಶತ್ಯಾ ಘಟಿನಾಭಿಃ ಪ್ರಕೀರ್ತಿತಮ್ ।
ದಿನಸ್ಯ ವಿಂಶತಿರ್ಘಟ್ಯಃ ಪೂರ್ಣಸಂಜ್ಞಾ ಉದಾಹೃತಾಃ ॥೪೩॥

ನಿಶಾಯಾ ಮುಗ್ಧ ಸಂಜ್ಞಾಶ್ಚ ಘಟಿಕಾ ವಿಂಶತಿಶ್ಚ ಯಾಃ ।
ಸೂರ್ಯೋದಯೇ ತು ಯಾ ಸಂಧ್ಯಾ ಖಂಡಖ್ಯಾ ದಶನಾಡಿಕಾ ॥೪೪॥

ಅಸ್ತಕಾಲೆ ತು ಯಾ ಸಂಧ್ಯಾ ಸುಧಾಖ್ಯಾ ದಶನಾಡಿಕಾ ।
ಪೂರ್ಣ ಮುಗ್ಧಾಭಿಧಾ ಘಟ್ಯಾದ್ವಿಘ್ನಾಸ್ತಪ್ತಾಃ ಶರೆಂದುಭಿಃ ॥೪೫॥

ತದ್‌ತ್ಖಂಡ ಸುಧಾನಾಡ್ಯಾಶ್ಚ ತುಘ್ನಾಸ್ತಿಥಿಭಿರ್ಹುತಾಃ ।
ಆಪ್ತಮಬ್ದಾದಿಕಂ ಮಾನಂ ರವ್ಯಾದೀನಾಂ ನಭಸ್ಸದಾಮ್ ॥೪೬॥

ಕ್ರಮಾದೇಶೌದಿ ಗುಣಿತಂ ಪೃಥಗ್ ಮಾನಮ ದಶೋದ್ ಭವವಮ್ ।
ಕಾಲಸಂಜ್ಞಾಮಿನಾದೀನಾಂ ನವಾನಾಂ ಪರಿಕೀರ್ತಿತಮ್ ॥೪೭॥

ಸೂರ್ಯೋದಯದ ಪೂರ್ವ ಹಾಗೂ ನಂತರ 4, 4 ಘಟಿ ಅದರಂತೆ ಸೂರ್ಯ ಬಿಂಬಾರ್ಧಸ್ತದಿಂದ ಪೂರ್ವ ಹಾಗೂ ನಂತರ 5, 5 ಘಟಿ ಈ ರೀತಿ 10, 10 ಘಟಿ ಪ್ರಾತಃಕಾಲ ಹಾಗೂ ಸಾಯಂಕಾಲ ಸಂಧ್ಯಾಕಾಲವಾಗುತ್ತದೆ. ಎರಡು ಸಂಧ್ಯಾದ 20 ಘಟಿಗಳನ್ನು ಪ್ರಮಿತ್ರವೆಂದು ಕರೆಯಲ್ಪಟ್ಟಿದೆ. ದಿನದಲ್ಲಿ ಉಳಿದ – 20 ಘಟಿ (ಸಾಯಂ ಸಂಧ್ಯಾ ಪೂರ್ವ) ಸಾಯಂ, ಪ್ರಾತಃ, ಸಂಧ್ಯಾ, ಮಧ್ಯ – 20 ಪೂರ್ಣವೆಂದು ಅದರಂತೆ ಸೂರ್ಯಾಸ್ತ, ಸಂಧ್ಯಾನಿರತ ಸೂರ್ಯೋದಯ ಪೂರ್ವ ರಾತ್ರಿ 20 ಘಟಿಯನ್ನು ಮುಗ್ಧವೆಂದು ಕರೆಯಲ್ಪಟ್ಟಿದೆ. ಇಲ್ಲಿ ಪೂರ್ಣ ಅಥವಾ ಮುಗ್ಧ ಘಟಿಗಳಿಗೆ (ದಿನ, ರಾತ್ರಿ ಜನ್ಮಾನುಸಾರ) ಎರಡರಿಂದ ಗುಣಿಸಿ 15ರಿಂದ ಭಾಗಿಸಿ – ಇದೇ ತರಹ – ಇಲ್ಲಿ ಪ್ರಾತಃಕಾಲಿಕ ಸಂಧ್ಯಾ ಖಂಡಸಂಜ್ಞಕವಾಗಿ ಹಾಗೂ ರಾತ್ರಿ ಸಂಧ್ಯಾ ಸುಧಾ ಸಂಜ್ಞಕವಾಗಿ ಕರೆಯಲ್ಪಟ್ಟಿದೆ. 4 ಎರಡು ಘಟಿಗಳು 10, 10 ಪ್ರಮಾಣದಲ್ಲಿವೆ. ಸುಧಾ ಖಂಡ ಘಟಿಯಲ್ಲಿ ಜನ್ಮವಾದರೆ ಗತಗಟಿಗೆ 4ರಿಂದ ಗುಣಿಸಿ 15ರಿಂದ ಭಾಗಿಸಲು ಲಬ್ದ ವರ್ಷಾದಿ ಗ್ರಹಸಂಖ್ಯೆಗೆ ಸೂರ್ಯ – 1, ಚಂದ್ರ – 2, ಮಂಗಳ – 3, ಬುದ – 4, ಗುರು – 5, ಶುಕ್ರ – 6, ಶನಿ – 7, ರಾಹು – 8, ಕೇತು – 9ಗಳಿಗೆ ಗುಣಿಸಿದಾಗ ಕಾಲದಶಾ ಬರುವುದು.

ಉದಾಹರಣೆಯಲ್ಲಿ – ಎಲ್.ಎಸ್.ಆರ್. 6.29, ಎಲ್.ಎಸ್.ಎಸ್. 5.54, ದಿನಮಾನ ಘಟಿ 28.33 ಹುಟ್ಟಿದುದು 41 – 17 ಫಲಾ ಹೀಗಾಗಿ ರಾತ್ರಿ ಇಷ್ಟ ಘಟಿ 12.44 – 5.00 ಗಟಿ (ಕಳೆಯಲಾಗಿ ಸಂಧ್ಯಾ) 7.44 ಪಳಾ. ರಾತ್ರಿ $7.44 \times 2 \div 15 = 15 - 28 \div 15$ ಲಬ್ದ ವರ್ಷ 1 – 10 – 12, 1 ವರ್ಷ, 10 ತಿಂಗಳು, 12 ದಿವಸಕ್ಕೆ ಗ್ರಹಸಂಖ್ಯೆಯಿಂದ ಗುಣಿಸಿ ಕಾಲದಶಾ ತೆಗೆಯುವುದು.

## ವೈಯಕ್ತಿಕ ಕಾಲದಶಾ ಚಕ್ರ

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ವರ್ಷ | 1 | 3 | 5 | 7 | 9 | 11 | 13 | 14 | 16 |
| ಮಾಸ | 10 | 6 | 7 | 5 | 4 | 2 | 0 | 11 | 9 |
| ತಿಂಗಳು | 12 | 24 | 6 | 18 | 0 | 12 | 24 | 6 | 18 |

ಇದು ಕಾಲದಶಾ

ಹುಟ್ಟಿದ ವರ್ಷದಿಂದ ಈ ರೀತಿ ತೋರಿಸಬಹುದು

ಹುಟ್ಟಿದ ದಿನ 3 – 11 – 1937

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ವರ್ಷ | 1939 | 1943 | 1948 | 1956 | 1965 | 1976 | 1989 | 2004 | 2021 |
| ಮಾಸ | 9 | 4 | 11 | 5 | 9 | 11 | 12 | 10 | 8 |
| ತಿಂಗಳು | 15 | 2 | 15 | 3 | 3 | 15 | 9 | 15 | 3 |

ಇದು ಕಾಲ ದಶಾದ ಪಕ್ಷಿನೋಟ

## ಚಕ್ರದಶಾ

ನಕ್ತಮಂಗಶ್ರೀತಾದಹ್ರಿ ರಾಶೇರಂಗಧಿಪಾನ್ವಿತಾತ್ ।
ಅಧಿಸಂಧ್ಯಾಂ ಧನಸ್ಥಾನ ಗತಾಚ್ಚಾಕ್ರದಶಾ ಸ್ಮೃತಾ ॥೪೮॥

ಪ್ರತ್ಯೇಕಸ್ಯ ದಶಮಾನಂ ದಶಾಬ್ದಾ ಮುನಿಭಿಃ ಕ್ರಮಾತ್ ।
ರಾಶೀನಾಂ ತು ನಭಶ್ಚಕ್ರಸ್ಥಿತಾನಾಂ ಸಮುದೀರಿತಮೇ ॥೪೯॥

ಇಲ್ಲಿ ರಾತ್ರಿ ಜನ್ಮವಾದರೆ ಲಗ್ನಾದಿ ರಾಶಿ ಕ್ರಮದಲ್ಲಿ ಹಗಲು ಜನನವಾದರೆ ಲಗ್ನೇಶನಿದ್ದ ರಾಶಿಯಿಂದ ಸಂಧ್ಯಾಗತ ಜನ್ಮವಾದರೆ ಧನಭಾವಸ್ಥ ರಾಶಿಯಿಂದ ಆರಂಭಿಸಿ 12 ರಾಶಿ ಚಕ್ರ – 10ವರ್ಷದ ರಾಶಿ ದಶಾ ಆಗುವುದು. ಪ್ರತ್ಯೇಕ ರಾಶಿ ದಶಮಾನ 10 ವರ್ಷ ಪ್ರಮಾಣದ್ದಾಗಿರುತ್ತದೆ. ಆಕಾಶ ಚಕ್ರದಲ್ಲಿ ರಾಶಿಗಳ ಸತ್ತಾಯಿರುವುದರಿಂದ (ಅಧಿಕಾರ) ಈ ದಶಾದ ಹೆಸರು ಚಕ್ರದಶಾ ಎಂದಾಗಿದೆ.

ಮೊದಲಿನ ಉದಾಹರಣೆಯಲ್ಲಿ 41 – 17 ಫಲಾಕ್ಕೆ ಜನನವಾದ್ದರಿಂದ ರಾತ್ರಿ

ಜನನ ಹೀಗಾಗಿ – ಲಗ್ನದಿಂದ ದಶಾ ಆರಂಭ ಲಗ್ನ ಕರ್ಕವಿದ್ದು ಕರ್ಕ ಲಗ್ನದಿಂದ ದಶಾ ಪ್ರಾರಂಭ. ವಿಶೇಷ ಸೂಚನೆ 30ರಲ್ಲಿ ಬುಕ್ತಿ ಅಂಶದ ಮೇಲೆ ದಿನಾದ ತೆಗೆಯಬಹುದು.

## ಕಾಲಚಕ್ರ ದಶಾ ಸಾಧನ

**ಪರಾಶರ ಉವಾಚ:**

ಕಾಲಚಕ್ರ ದಶಾಂ ವಚ್ಮಿ ಗರಾನಾಮಥ ಯಾ ಪುರಾ ।
ಪಾರ್ವತ್ಯೈ ಕಥಿತಾ ವಿಪ್ರ । ಸ್ವಯಮೇವ ಪಿನಾಕಿನಾ ॥೫೦॥

ಸಾರಮುದೂವೃತ್ಯ ತಸ್ಯಾಸ್ತು ವದಾಮಿ ಶ್ರುಣು ಯದ್ ಬಲಾತ್।
ಶುಭಾಶುಭಂ ಮನುಷ್ಯಾಣಾಂ ಜ್ಞಾತುಂ ಶಕ್ನೋತಿ ಮಾನವಃ ॥೫೧॥

**ಪರಾಶರರು ಹೇಳಿದರು–**

ಹೇ ವಿಪ್ರನೆ, ಕಾಲಚಕ್ರ ದಶಾವನ್ನು ವಿವರಿಸುತ್ತೇನೆ ಆಲಿಸು. ಈ ಹಿಂದೆ ಇದನ್ನು ಸ್ವಯಂ ಶಂಕರನು ಪಾರ್ವತಿಗೆ ಮೊದಲು ಹೇಳಿದ್ದನು. ಆದರ ಸಾರಾಂಶವನ್ನು ಮಾತ್ರ ನಾನು ಹೇಳುತ್ತೇನೆ. ಇದರ ಮುಖಾಂತರ ಮಾನವನು ಶುಭಾಶುಭ ತಿಳಿಯಲು ಶಕ್ತನಾಗುತ್ತಾನೆ.

## ಚಕ್ರಲೇಖನ ಪ್ರಕಾರ

ದ್ವಾದಶಾರಂ ಲಿಖೇಚಕ್ರಂ ತರ್ಯಗೂರ್ಧ್ವಸಮಾನ ಕವಮ್ ।
ದ್ವಾದಶೈವಂ ಗೃಹಾಣಿ ಸ್ಯುರ್ದ್ವಿಧಾ ಸವ್ಯಾಪಸವ್ಯತಃ ॥೫೨॥

ದ್ವಿತೀಯಾದಿಷು ಕೋಷ್ಠೇಷು ರಾಶಿನ ಮೇಷಾಧಿಕಾನ್ ನ್ಯಾಸೇತ್ ।
ಏವಂ ದ್ವಾದಶ ರಾಶ್ಯಾಖ್ಯಂ ಕಾಲಚಕ್ರ ಮುದೀರಿತಮ್ ॥೫೩॥

ಉದ್ದ, ಅಡ್ಡ ರೇಖೆಗಳ ಮುಖಾಂತರ 12, 12 ಮನೆಗಳನ್ನು (ಕೋಷ್ಟ) ಸವ್ಯ ಅಪಸವ್ಯ ಎರಡು ಚಕ್ರ ಬರೆದು ಆದರ ಎರಡನೇ ಕೋಷ್ಠಕದಲ್ಲಿ ಮೇಷಾದಿ ರಾಶಿಗಳ ನ್ಯಾಸ ಮಾಡುವುದು. ಈ ಪ್ರಕಾರ ಸಿದ್ಧ ಚಕ್ರ ದ್ವಾದಶ ರಾಶ್ಯಾತ್ಮಕ ಕಾಲಚಕ್ರ ಎನ್ನಿಸಿಕೊಳ್ಳುವುದು.

## ನಕ್ಷತ್ರ ನ್ಯಾಸ ವಿಧಿ

ಅಶ್ವಿನ್ಯಾದಿತ್ರಯಂ ಚಕ್ರಸವ್ಯಮಾರ್ಗೇ ವ್ಯವಸ್ಥಿತಮ್ ।
ರೋಹಿಣ್ಯಾದಿ ತ್ರಯಂ ಚೈವಪಸವ್ಯೇ ವ್ಯವಸ್ಥಿತಮ್ ॥೫೪॥

ಏವಂ ವಿಧಾಯ ಭಾನುಂ ತು ವಿಭಾಗಂ ಚಕ್ರಮುಲ್ಲಖೇತ್ ।
ಅಶ್ವಿನ್ಯಾದಿತ ಹಸ್ತರ್ಕ್ಷ ಮೂಲ ಪ್ರೋಷ್ಠಪದಾಭಿಧಾಃ ॥೫೫॥

ವಿಶ್ವಾಗ್ನಿ ಪವನ ವ್ಯಾಲರೇವತ್ಯಃ ಸವ್ಯಾಭಾನಿ ವೈ ।
ಏತದೃಷೋಡುಪಾದಾನಾಮಶ್ವಿನ್ಯಾದೌ ಚ ವೀಕ್ಷಯೇತ್ ॥೫೬॥

ಅಶ್ವಿನ್ಯಾದಿ 3 ನಕ್ಷತ್ರಗಳನ್ನು (ಅಶ್ವಿನಿ, ಭರಣಿ, ಕೃತ್ತಿಕ) ಸವ್ಯ ಚಕ್ರದಲ್ಲಿ ರೋಹಿಣ್ಯಾದಿ 3 ನಕ್ಷತ್ರಗಳನ್ನು ಅಪಸವ್ಯ (ರೋಹಿಣಿ, ಮೃಗಶಿರ, ಆರಿದ್ರಾ) ಚಕ್ರದಲ್ಲಿ ಇದೇ ರೀತಿ ಮುಂದಿನ ಮೂರು ಸವ್ಯ ನಂತರ 3 ಅಪಸವ್ಯ ಈ ಪ್ರಕಾರ ಸವ್ಯದಲ್ಲಿ 15 ನಕ್ಷತ್ರ, ಅಪಸವ್ಯದಲ್ಲಿ 12ನಕ್ಷತ್ರಗಳಾಗುತ್ತವೆ.

| ಸವ್ಯ ನಕ್ಷತ್ರಗಳು | ಅಪಸವ್ಯ ನಕ್ಷತ್ರಗಳು |
|---|---|
| (1) ಅಶ್ವಿನಿ | (1) ರೋಹಿಣಿ |
| (2) ಭರಣಿ | (2) ಮೃಗಶಿರ |
| (3) ಕೃತ್ತಿಕ | (3) ಆರಿದ್ರಾ |
| (4) ಪುನರ್ವಸು | (4) ಮಖಾ |
| (5) ಪುಷ್ಯ | (5) ಪುಬ್ಬ |
| (6) ಆಶ್ಲೇಷ | (6) ಉತ್ತರ |
| (7) ಹಸ್ತ | (7) ವಿಶಾಖ |
| (8) ಚಿತ್ತ | (8) ಅನುರಾಧ |
| (9) ಸ್ವಾತಿ | (9) ಜ್ಯೇಷ್ಠ |
| (10) ಮೂಲ | (10) ಶ್ರವಣ |
| (11) ಪೂವಾಷಾಡ | (11) ಧನಿಷ್ಠ |
| (12) ಉತ್ತರಾಷಾಢ | (12) ಶತತಾರಾ |
| (13) ಪೂರ್ವಾಭಾದ್ರ | |
| (14) ಉತ್ತರಾಭಾದ್ರ | |
| (15) ರೇವತಿ | |

ಈ ರೀತಿ ಸವ್ಯ, ಅಪಸವ್ಯ ನಕ್ಷತ್ರಗಳ ಜ್ಞಾನ ಅವಶ್ಯ. ಅದರಲ್ಲಿ ಸವ್ಯಾರಂಭಗಳು ಅಶ್ವಿನಿ, ಪುನರ್ವಸು, ಹಸ್ತ, ಮೂಲ, ಪೂರ್ವಾಭಾದ್ರಪದ, ಕೃತ್ತಿಕ,

ಆಶ್ಲೇಷ, ಸ್ವಾತಿ, ಉತ್ತರಾಷಾಢ, ರೇವತಿ ಇವು ಸವ್ಯಚಕ್ರದ ನಕ್ಷತ್ರಗಳು. ಈ ನಕ್ಷತ್ರಗಳ ಚರಣಗಳನ್ನು ಅಶ್ವಿನಿ ನಕ್ಷತ್ರ ಚರಣದಂತೆ ಪರಿಗ್ರಹಿಸುವುದು.

## ದೇಹ–ಜೀವ ನಿರೀಕ್ಷಣ ವಿಧಿ

**ಋಕ್ಷಾಣಾಮಂಗಂಘ್ರಿಷು ಕಥಂ ದೇಹೋ ದೀವಶ್ಚ ಸುವ್ರತಾ ।**
**ಸವಿಸ್ತರಂ ತಯೋರ್ವಕ್ಷ್ಮಿ ಪ್ರಕಾರ ಮಧುನಾ ಶೃಣು ॥೫೭॥**

**ದೇಹ ಜೀವೌ ಮೇಷ ಚಾಪೌ ದಾಸ್ರಾದ್ಯ ಚರಣಸ್ಯ ಚ ।**
**ಮೇಷಾದ್ಯಾಶ್ಚಾ ಪಪರ್ಯಂತಂ ರಾಶಿಪಾಶ್ಚ ದಶಾಧಿಪಾಃ ॥೫೮॥**

ನಕ್ಷತ್ರ ಚರಣಗಳಿಂದ ಯಾವ ಪ್ರಕಾರ ಜೀವ ದೇಹ ಕಂಡುಹಿಡಿಯುವುದನ್ನು ವಿವರಿಸುತ್ತೇನೆ ಕೇಳು. ಮೈತ್ರೇಯನೆ ಅಶ್ವಿನಿ ನಕ್ಷತ್ರದ 1ನೇ ಚರಣದ ಜೀವ ಶರೀರದ ಬಗ್ಗೆ ತಿಳಿ. 1ನೇ ಚರಣದ ದೇಹ ಮೇಷ ಜೀವ ಧನು ಮೇಷದಿಂದ ಧನು ಪರ್ಯಂತ ಬರುವ ರಾಶ್ಯಾದಿಪರು ದಶಾಧಿಪರು – ತಿಳಿ ಅದು ಕ್ರಮಶಃ ಪರಿಗಣಿಸುವುದು.

**ದೇಹ ಜೀವೌ ನಕ್ರಯುಗ್ಮೆ ದ್ವಿತೀಯೇಂಗಘ್ರಾವುದೀರಿತೌ ।**
**ನಕ್ಷತ್ರೋ ಮಿಥುನಾಂತಂ ತು ರಾಶಿಪಾಶ್ಚ ದಶಾಧಿಪಾಃ ॥೫೯॥**

**ಗಾಸ್ರಾದಿದಶತಾರಾಣಾಂ ತೃತೀಯಚರಣೆ ಮುನೆ ।**
**ಗೌರ್ದೀಹೋ ಮಿಥುನಂ ಜೀವೋ ದ್ವಿದ್ಯೆಕಾರ್ಕೆಶದ ಶಾಂಕಪಾಃ ॥೬೦॥**

**ಇಂದುಕ್ಷಿರಾಮ ಭೇಶಾಶ್ಚ ದಶಾಧಿಪತಯಃ ಕ್ರಮಾತ್ ।**
**ಅಶ್ವಿನ್ಯಾದಿದಶೋಡೂನಾಂ ಚತುರ್ಥ ಚರಣೇಪಿ ತ ॥೬೧॥**

**ಕರ್ಕ ಮೀನೌ ದೇಹ ಜೀವೌ ಕರ್ಕಾದಿನವಭಾಧಿಪಃ ।**
**ದಶಾಧಿಪಾ ನವ ಜ್ಞೇಯಾ ಇತಿ ಮೈತ್ರೆಯ ನಿಶ್ಚಿತವಮ್ ॥೬೨॥**

ಅಶ್ವಿನಿಯ ದ್ವಿತೀಯ ಚರಣಕ್ಕೆ ಮಕರ ದೇಹ, ಮಿಥುನ ಜೀವ ಹಾಗೂ ಮಕರದಿಂದ ಮಿಥುನಪರ್ಯಂತ ರಾಶಿ ಸ್ವಾಮಿ ದಶಾಧಿಪರಾಗುವರು. ಅಶ್ವಿನಿ ದಶಾ ನಕ್ಷತ್ರದ ತೃತೀಯ ಚರಣದಲ್ಲಿ ವೃಷಭ, ಮಿಥುನ ದೇಹ ಜೀವ ಹಾಗೂ 2, 1, 12, 11, 10, 9, 1, 2, 3 ಈ ರಾಶಿ ಸ್ವಾಮಿ ದಶೇಶರಾಗುತ್ತಾರೆ.

ಅಶ್ವಿನಿ ಚತುರ್ಥ ಚರಣದಲ್ಲಿ ಕರ್ಕ, ಮೀನ ಕ್ರಮಶಃ ದೇಹ, ಜೀವ ಹಾಗೂ ಕರ್ಕದಿಂದ ಮೀನ ಪರ್ಯಂತ ರಾಶಿ ಸ್ವಾಮಿ ದಶಾಧಿಪರಾಗುವರು. ಪುನರ್ವಸು, ಹಸ್ತ, ಮೂಲ, ಪೂರ್ವಾಭಾದ್ರಾ ಪದಗಳನ್ನು ಅಶ್ವಿನಿಯಂತೆ ಪರಿಗಣಿಸುವುದು.

### ಭರಣಿ ಪುಷ್ಯಾದಿ ನಕ್ಷತ್ರಗಳ ದೇಹ ಜೀವ

ಯಮೇಜ್ಯ ಚಿತ್ರಾತೋಯರ್ಕ್ಷ ಉತ್ತರಭಾದ್ರಾ ತಾರಕಾಃ ।
ಏತತ್ಪಂ ಚಡುಪಾದೀನಾಂ ಭರಣ್ಯಾದೌ ವಿಚಾರಯೇತ್ ॥೬೩॥

ಯಾಮ್ಯಾ ಪ್ರಥಮ ಪಾದಸ್ಯ ದೇಹಜೀವಾವಲಿಜ್ಞೇಷಃ ।
ನಾಗಗತ್ರ್ಯಪಯೋಧೀಷು ರಾಮಾಕ್ಷೀಂದುರ್ಕಭೇಶ್ವರಾಃ ॥೬೪॥

ಯಾಮ್ಯಾದ್ದಿ ತಿಯ ಪಾದಸ್ಯ ದೇಹ ಜೀವೌ ಘಟಾಂಗನೆ ।
ರುದ್ರದಿಂಗ್ – ನಂದ – ಚಂದ್ರಾಕ್ಷಿ–ರಾಮಾಬ್ಧಿ ಷ್ವಂಗಭಾಧಿಪಾಃ ॥೬೫॥

ಯಾಮ್ಯಾ ತೃತೀಯಪಾದಸ್ಯ ದೇಹ ಜೀವೌ ತುಲಾಂಗನೆ ।
ಸಪ್ತಾಷ್ಟಾಂಕದಿಗೀಶಾರ್ಕ – ಗಜಾದ್ರಿರಸಭಾಧಿಪಾಃ ॥೬೬॥

ದೇಹಜೀವೌ ಕರ್ಕ ಚಾಪೌ ಚತುರ್ಥ ಚರಣೆ ಸ್ಮೃತೌ ।
ವೇದಬಾಣಾಗ್ನಿಗೇತ್ರೇಂದು ಸೂರ್ಯೋದಶ ನಂದಪಾಃ ।
ದಶಾಧಿಪಾಃ ಸವ್ಯಮೇವ ಮಪಸವ್ಯಮತಃ ಪರಮ್ ॥೬೭॥

ಭರಣಿ, ಪುಷ್ಯ, ಚಿತ್ತಾ, ಪೂರ್ವಾಷಾಡ ಹಾಗೂ ಉತ್ತರಾಭಾದ್ರಪದ ಈ ಐದು ನಕ್ಷತ್ರಗಳು ಭರಣಿಯಂತೆ ಜೀವ ದೇಹ ದಶಾಧಿಪರಾಗಿರುತ್ತಾರೆ ಎಂದು ಪರಿಗಣಿಸುವುದು. ಭರಣಿ ಚರಣದ ದೇಹ ಜೀವಗಳಂತೆ – ಇತರ ನಕ್ಷತ್ರಗಳಿಗೂ ಪರಿಗಣನೆ ಭರಣಿ ಪ್ರಥಮ ಚರಣಕ್ಕೆ ವೃಶ್ಚಿಕ ದೇಹ, ಮಿನ ಜೀವ ಹಾಗೂ ವೃಶ್ಚಿಕ, ತುಲ, ಕನ್ಯ, ಕಟಕ, ಸಿಂಹ, ಮಿಥುನ, ವೃಷಭ, ಮೇಷ, ಮೀನ ರಾಶಿಯ ಅಧಿಪರು ದಶಾಧಿಪರಾಗುವರು. ಭರಣಿ ದ್ವಿತೀಯ ಚರಣಕ್ಕೆ ಕುಂಭ ದೇಹ ಕನ್ಯಾ ಜೀವ ದಶಾಧಿಪರು 11, 10, 9, 1, 2, 3, 4, 5, 6 ಈ ರಾಶಿಗೆ ಅಧಿಪರು ದಶಾಧೀಪರಾಗುವರು. ಭರಣಿ ತೃತೀಯ ಚರಣಕ್ಕೆ ತುಲಾ ದೇಹ ಕನ್ಯಾ ಜೀವವಾದರೆ 7, 8, 9, 10, 11, 12, 8, 7, 6 ಈ ರಾಶ್ಯಾಧಿಪರು ದಶಾಧಿಪರಾಗುವರು. ಭರಣಿ ಚತುರ್ಥ ಚರಣಕ್ಕೆ ದೇಹ ಕರ್ಕ ಹಾಗೂ ಧನು ಜೀವಗಳಾದರೆ 4, 5, 3, 2, 1, 12, 11, 10, 9 ರಾಶ್ಯಾಧಿಪರು ದಶಾಧಿಪರಾಗುವರು. ಇವು ಸವ್ಯ ನಕ್ಷತ್ರಗಳಿಗಾದರೆ ಅಪಸವ್ಯ ನಕ್ಷತ್ರಗಳಿಗೆ ಮುಂದೆ ಹೇಳಲಾಗುವುದು.

ದ್ವಾದಶಾರಂ ಲಿಖೇಚ್ಚಕ್ರಂ ಯಥಾಪೂರ್ವ ದ್ವಿಜೋತ್ತಮ ।
ದ್ವಿತೀಯಾದಿಷು ಕೋಷ್ಟೇಷು ವೃಶ್ಚಿಕಾದ್ ವ್ಯಯಸ್ತಮಾಲಿಖೇತ್ ॥೬೮॥

ಪ್ರಾಜಾಪತ್ಯ ಮಘಾದ್ದಿಶ ಶ್ರವಣಾ ಚ ಚತುಷ್ಟಯವಮ್ ।
ಅಸವ್ಯ ನಕ್ಷತ್ರಮದಃ ಪ್ರಾಚೀನೈಃ ಸಮುದೀರಿತವಮ್ ॥೬೯॥

ಧಾತ್ರವದ್ ವೀಕ್ಷಯೇದ್ ದೇಹ ಜೀವಾವುಕ್ತೇಷು ಭೇಷುಚ ।
ಧಾತ್ರಾದ್ಯಾಚರಣೆ ದೇಹ ಜೀವೌ ಕರ್ಕಿ ಧನುರ್ಧರೌ ॥೭೦॥

ನವದಿಗ್‌ರುದ್ರ ಸೂರ್ಯೇಂದುನೇತ್ರಾಗ್ನಿಷ್ವಬ್ಧಿ ರಾಶಿಪಾಃ ।
ಧಾತ್ರದ್ವಿತೀಯ ಚರಣೆ ದೇಹ ಜೀವೌ ತುಲಾಂಗನೆ ॥೭೧॥

ರಸಾದ್ರತ್ಯಷ್ಟರವೀಶಾಶಾ ನವಾಷ್ಟಗಿರಿ ರಾಶಿಪಾಃ ।
ಧಾತುಸ್ತುತೀಯ ಚರಣೆ ದೇಹ ಜೀವೌ ಘಟಸ್ತ್ರೀಯೌ ॥೭೨॥

ಷಡ್‌ಬಾಣಾಬ್ಧಿ ಗುಣಕ್ಷ್ಮೇಂದು – ನಂದದಿಗ್ ರುದ್ರ ರಾಶಿಪಾಃ ।
ರೋಹಿಣ್ಯಂತಪದೆ ದೇಹಜೀವಾವಲಿಜೂಷೌ ಸ್ಮೃತೌ ।
ಸೂರ್ಯೇಂದು ದ್ವಿಗುಣೇಷ್ವಬ್ಧಿ ತರ್ಕಶೈಲಾಷ್ಟ ರಾಶಿಪಾಃ ॥೭೩॥

ಪೂರ್ವದಂತೆ 12 ಕೋಷ್ಟದ ಚಕ್ರ ರಚಿಸಿ ದ್ವಿತೀಯ ಕೋಷ್ಟದಲ್ಲಿ ವೃಶ್ಚಿಕದಿಂದ ವಿಪರೀತ ಕ್ರಮದಲ್ಲಿ (ವೃಶ್ಚಿಕ, ತುಲಾ) ರಾಶಿ ನ್ಯಾಸ ಮಾಡಿ ಅದರಲ್ಲಿ ರೋಹಿಣಿ, ಮಖಾ, ವಿಶಾಖ, ಶ್ರವಣ ಈ ನಾಲ್ಕು ನಕ್ಷತ್ರಗಳಲ್ಲಿ ದೇಹ ಜೀವಾದಿ ರೋಹಿಣಿ ಯಂತೆ ಪರಿಗ್ರಹಿಸುವುದು. ಪ್ರಾಚೀನರು ಇವುಗಳನ್ನು ಅಪಸವ್ಯ (ಅಸವ್ಯ) ನಕ್ಷತ್ರ ಗಳೆಂದು ಕರೆದಿರುವರು. ರೋಹಿಣಿಯ ಪ್ರಥಮ ಚರಣದ ದೇಹ ಜೀವ ಕಟಕ ಹಾಗೂ ಧನು ಆಗುತ್ತವೆ. 9, 10, 11, 12, 1, 2, 3, 4, 5 ರಾಶಿಯ ಸ್ವಾಮಿಗಳು ದಶಾಧಿಪ ರಾಗುತ್ತಾರೆ. ರೋಹಿಣಿಯ ಎರಡನೇ ಚರಣದ ದೇಹ ಜೀವ ತುಲ, ಕನ್ಯಾ ಆದರೆ 6, 7, 8, 12, 11, 12, 9, 8, 7 ರಾಶಿಗಳ ಅಧಿಪರು ದಶಾಧೀಶರಾಗುತ್ತಾರೆ. ರೋಹಿಣಿಯ ತೃತೀಯ ಚರಣ ದೇಹ – ಕುಂಭ ಜೀವ – ಕನ್ಯಾ ಆಗುತ್ತದೆ. ದಶಾಧಿಪರು 6, 5, 4, 3, 2, 1, 9, 10, 11 ರಾಶಿಗಳ ಸ್ವಾಮಿಗಳಾಗುವರು. ರೋಹಿಣಿ ಅಂತಿಮ ಚರಣದ ದೇಹ ವೃಶ್ಚಿಕ ಜೀವ ಮೀನವಾದರೆ 12, 1, 2, 3, 4, 4, 5, 6, 7, 8 ರಾಶಿಗಳ ಸ್ವಾಮಿಗಳು ದಶಾಧಿಪರಾಗುತ್ತಾರೆ.

## ಮೃಗಶಿರಾದಿ 8 ನಕ್ಷತ್ರಗಳು ದೇಹ ಜೀವ

ಚಾಂದ್ರರೌದ್ರ ಭಗಾರ್ಯಾಂಣಾ ಮಿತ್ರೇಂದು ವಸುವಾರುಣವಮ್ ।
ಏತತ್ತಾರಾಷ್ಟಕಂ ವಿಜ್ಞೈರ್ವಿಜ್ಞೇಯಂ ಚಾಂದ್ರವತ್ ಕ್ರಮಾತ್ ॥೭೪॥

ಕರ್ಕಮೀನೌ ದೇಹ ಜೀವೌ ಮೃಗಾದ್ಯಾಚರಣೆ ಮುನೆ ।
ವ್ಯಸ್ತಂ ಮೀನಾದಿ ಕರ್ಕಾಂತ – ರಾಶಿಪಾಶ್ವ ದಶಾಧಿಪಾಃ ॥೭೫॥

ಗೌರ್ದೇಹೊ ಮಿಥುನಂ ಜೀವೋ ಮೃಗಪಾದೆ ದ್ವಿತೀಯಕೆ ।
ತ್ರಿದ್ವ ಡ್ಯೈ ಕಾಂತದಿಗೀಶಾರ್ಕ ಚಂದ್ರಾಕ್ಷಿಭವನಾಧಿಪಾಃ ॥೭೬॥

ದೇಹ ಜೀವೌ ನಕ್ರಯುಗ್ಮೆ ಮೃಗಪಾದೆ ತೃತೀಯಕೆ ।
ತ್ರಿಬಾಣಬ್ಧಿ ರಸಾಗಾಷ್ಟ – ಸೂರ್ಯೇಶದ ಶರಾಶೀಪಾಃ ॥೭೭॥

ಮೇಷ ಚಾಪೌ ದೇಹ ಜೀವೌ ಮೃಗಪಾದೆ ಚತುರ್ಥಕೆ ।
ವ್ಯಸ್ತಂ ಚಾಪಾದಿಮೇಷಾಂತ ರಾಶಿ ಪಾಶ್ವ ದಶಾಧಿಪಾಃ ॥೭೮॥

ಮೃಗಶಿರಾ, ಆರಿದ್ರಾ, ಪುಬ್ಬ, ಉತ್ತರ, ಅನುರಾಧ, ಜ್ಯೇಷ್ಠ, ಧನಿಷ್ಠ, ಶತತಾರಾ ಈ ಅಸವ್ಯ 8 ನಕ್ಷತ್ರದ ಚರಣದಲ್ಲಿ ದೇಹಜೀವ ಆದಿ ನ್ಯಾಸ ಮೃಗಶಿರಾದಂತೆ ತಿಳಿಯುವುದು. ಮೃಗಶಿರಾದ ಆದ್ಯ ಚರಣದಲ್ಲಿ ಕರ್ಕ – ದೇಹ, ಮೀನ – ಜೀವ ಹಾಗೂ ಮೀನದಿಂದ ವ್ಯಸ್ತಕ್ರಮದಲ್ಲಿ ಕರ್ಕ ಪರ್ಯಂತ ರಾಶಿಯ ಸ್ವಾಮಿಗಳು ದಶಾಧಿಪರಾಗಿರುತ್ತಾರೆ. ಮೃಗಶಿರಾದ ದ್ವಿತೀಯ ಚರಣದಲ್ಲಿ ವೃಷಭ – ದೇಹ, ಮಿಥುನ – ಜೀವವಾಗುತ್ತದೆ ಹಾಗೂ ದಶಾಧಿಪರು 3, 2, 1, 9, 10, 11, 12, 1, 2 ರಾಶಿ ಸ್ವಾಮಿಗಳಾಗಿರುತ್ತಾರೆ. ಮೃಗಶಿರಾದ ತೃತೀಯ ಚರಣದಲ್ಲಿ ದೇಹ – ಮಕರ, ಜೀವ – ಮಿಥುನವಾಗಿರುತ್ತದೆ. 3, 5, 4, 6, 7, 8, 12, 11, 10 ರಾಶೀಶ್ವರರು ದಶಾಧಿಪರಾಗುವರು. ಮೃಗಶಿರಾದ ನಾಲ್ಕನೇ ಚರಣದಲ್ಲಿ ಮೇಷ – ದೇಹ, ಧನು – ಜೀವರಾಗಿ ಧನುರಿಂದ ವ್ಯಸ್ತ ಕ್ರಮದಲ್ಲಿ ಮೇಷದವರೆಗೆ (9, 8, 7, 6, 5, 4, 3, 2, 1) ರಾಶಿ ಸ್ವಾಮಿಗಳು ದಶೇಶರಾಗಿರುತ್ತಾರೆ.

## ಪರಾಶರ ಉವಾಚ:

ಇತ್ಥಂ ಯದ್‌ಗಿರಿಜಾದೇವ್ಯೈ ಮಹೇಶೇನ ಪುರೋದಿತಮ್ ।
ಮಯೋದಾನಿಂ ನಿಗದಿತಂ ದೇಹ ಜೀವ ದಶಾದಿಕಮ್ ॥೭೯॥

## ಪರಾಶರರು ಹೇಳಿದರು–

ಈ ಪ್ರಕಾರವಾಗಿ ನಕ್ಷತ್ರ ಚರಣಕ್ಕೆ ದೇಹ – ಜೀವ ದಶಾನ್ಯಾಸ ಪಾರ್ವತಿ ದೇವಿಗೆ ಶ್ರೀ ಶಂಕರರು ಹೇಳಿದ್ದನ್ನು ನಾನು ನಿಮಗೆ ಹೇಳಿದ್ದೇನೆ.

## ಮೈತ್ರೇಯ ಉವಾಚ:

ದಶಾಧಿಪಾನಾಂ ವರ್ಷಾಣಿ ದಶಾರಂಭವಿಧಿಂ ತಥಾ ।
ಭುಕ್ತ ಭೋಗ್ಯಜ ವರ್ಷಾದಿ ಕೃಪಾಯ ವದಮೇಪ್ರಭೋ ॥೮೦॥

## ಮೈತ್ರೇಯರು ಹೇಳಿದರು—

ಹೇ ಪ್ರಭೋ, ದಶೇಶರ ದಶಾವರ್ಷ ಪ್ರಮಾಣ ಎಷ್ಟು ಹಾಗೂ ದಶಾದ ಬುಕ್ತ ಭೋಗ್ಯವರ್ಷಾದಿ ತಿಳಿಯುವ ಬಗೆಯೇನು ಅಥವಾ ವಿಧಿ ನಿಯಮಗಳೇನು ಕೃಪಾ ಪೂರ್ವಕ ತಿಳಿಸಿರಿ

## ಪರಾಶರ ಉವಾಚ:

ಭೂತ್ಯೈಕ – ವಿಂಶಗಿರಯೋ ನವದಿಕ್ ಷೋಡಶಾಬ್ಧಯಃ ।
ದಶಾಬ್ದಾಃ ಸ್ಯುರಿನಾದೀನಾಂ ರಾಶಿನಾಂ ಸ್ವಾಮಿನೋ ವಶಾತ್ ॥೮೧॥

## ಪರಾಶರರು ಹೇಳಿದರು—

ಸೂರ್ಯಾದಿ ಗ್ರಹಗಳ ದಶಾ ವರ್ಷ ಕ್ರಮಶಃ ಸೂರ್ಯ – 5, ಚಂದ್ರ – 21, ಮಂಗಳ – 7, ಬುಧ – 9, ಗುರು – 10, ಶುಕ್ರ – 16, ಶನಿ – 4 ಈ ರೀತಿಯಾಗಿದೆ. ಯಾವ ರಾಶಿ ಹೇಳಿದೆಯೋ ಆದರ ಅಧಿಪನ ಮೇಲೆ ದಶವರ್ಷ ತಿಳಿಯುವುದು.

### ಸ್ವಷ್ಟಾರ್ಥ ಚಕ್ರ

| ರಾಶಿ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ | ತುಲ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ರಾ | ಮಂ | ಶುಕ್ರ | ಬುಧ | ಚಂದ್ರ | ರವಿ | ಬುಧ | ಶುಕ್ರ | ಮಂ | ಗುರು | ಶ | ಶ | ಗುರು |
| ದಶಾ ವರ್ಷ | 7 | 16 | 9 | 21 | 5 | 9 | 16 | 7 | 10 | 4 | 4 | 10 |

### ದಶಾರಂಭ ವಿಧಿ

ನರಸ್ಯ ಜನ್ಮಕಾಲೇ ವಾ ಪ್ರಶ್ನಕಾಲೇ ಯದಂಶಕಃ ।
ತದಾನಿನವಭಾನಾಂ ತು ವರ್ಷಾಣ್ಯಾಯುರುದೀರ್ಯತೇ ॥೮೨॥

ಅಂಶಸ್ಯಾದೌ ಪೂರ್ಣಮಾಯುರ್ಭವೇನ್ಮಧ್ಯೇ ತತೋರ್ಧಕಮ್ ।
ಅಂಶಾಂತೇ ಮೃತ್ಯುವತ್ ಕಷ್ಟಮಿತ್ಯನ್ಯೇಷಾಂ ಸತಾಂ ಮತಮ್ ॥೮೩॥

ಮನುಷ್ಯನ ಜನ್ಮಸಮಯ ಅಥವಾ ಪ್ರಶ್ನಸಮಯ ನಕ್ಷತ್ರದ ಚರಣ ಬರುವುದೋ ಅಲ್ಲಿಂದಲೇ ಆರಂಭ ಮಾಡಿ 9 ರಾಶಿಯನ್ನು ಅದರ ವರ್ಷ ಕೂಡಿಸಿ ಅಷ್ಟಾವರ್ಷ ಆ ಮನುಷ್ಯನ ಆಯುಷ್ಯವೆಂದು ಹೇಳುವುದು ಬಹಳ ಆಚಾರ್ಯರರ ಅಭಿಮತದಂತೆ ಚರಣದ ಆದಿ ಅಸಂಶದಲ್ಲಿ ಜನನವಾದರೆ ಪೂರ್ಣ, ಮಧ್ಯ ದಲ್ಲಾದರೆ ಮಧ್ಯಮಾಯು ಹಾಗೂ ಚರಣಾಂತ್ಯದಲ್ಲಿ ಜನನವಾದರೆ ಮೃತ್ಯು ವೆಂದು ಪರಿಗಣಿಸಲು ತಿಳಿಸಿದ್ದಾರೆ ಅಥವಾ ಮೃತ್ಯು ಸಮಾನ ಕಷ್ಟವು ಆಗುವುದು.

## ನಕ್ಷತ್ರ ಚರಣಾಂಶ ಜ್ಞಾನ

ಜ್ಞಾತ್ವೈವಂ ಸ್ಫುಟಃವೇದ್ಧಾಂತಂ ಕಾಶ್ಯಂಶಂ ಗಣಯೇದ್ ಬುಧಃ ।
ಅನುಪಾತೇನ ವಕ್ಷ್ಯಾಮಿ ತದುಪಾಯಮತಃ ಪರಮ್ ॥೮೪॥

ಗತತಾರಾಸ್ತ್ರಿಭಿರ್ಭಕ್ತಾಃ ಶೇಷಂ ಚಾಪಿ ಚತುರ್ಗುಣವಮ್ ।
ವರ್ತಮಾನ ಪದೇನಾಢ್ಯಂ ರಾಶಿನಾಮಾಂಶಕೋ ಭವೇತ್ ॥೮೫॥

ಈ ಸಿದ್ಧಾಂತವನ್ನು ಅರಿತು ವಿದ್ವಾಂಸರು ರಾಶ್ಯಾಂಶ ತಿಳಿಯಲಿ. ಅನುಪಾತ ದ್ವಾರಾ ಅದರ ಅನುನಯನ ನಾನು ವಿಸ್ತರಿಸುತ್ತೇನೆ.

ಅಶ್ವಿನ್ಯಾದಿ ಗತ ನಕ್ಷತ್ರಗಳಿಗೆ (ಎಣಿಸಿ) 3ರಿಂದ ಭಾಗಿಸಿ ಶೇಷ ನಕ್ಷತ್ರವನ್ನು 4ರಿಂದ ಗುಣಿಸಿ – ನಕ್ಷತ್ರ ಚರಣ ಸೇರಿಸಿದರೆ ಈ ರೀತಿ ಬಂದ ಸಂಖ್ಯೆ ಮೇಷಾದಿ ರಾಶಿಗಳ ನವಮಾಂಶವಾಗುತ್ತದೆ. ಉದಾಹರಿತ ಕುಂಡಲಿಯಲ್ಲಿ ರೋಹಿಣಿ 1ನೇ ಚರರಾಶಿ, ವೃಶ್ಚಿಕಾಂಶವಾಗುವುದರಿಂದ ಅದರ ವಿಪರೀತ ಕ್ರಮದಲ್ಲಿ ತುಲ ಹಿಡಿಯುವುದು. ಅದೇ ರೀತಿ ವಿಶಾಖ 2ನೇ ಚರಣ – ತುಲಾ ನವಾಂಶ.

## ಕಾಲಚಕ್ರ ಸ್ಥಿತ ರಾಶಿಯ ವರ್ಷಯೋಗ ಕಥನ

ಕ್ರಿಯೋ ವೃಷೆ ಯುಗೆ ಕರ್ಕೆ ಶತಂ ಬಾಣಗಜಃ ಸಮಾಃ ।
ತ್ರಿನಾನಾಃ ಷಡ್‌ಗಜಾಸ್ತದ್ವದಪ್ಯುಕ್ತಾಸ್ತತ್ ತ್ರಿಕೋಣೆಕೆ ॥೮೬॥

ಕಾಲಚಕ್ರ ಸ್ಥಾಪಿತ ರಾಶಿಗಳ ವರ್ಷ ಅದು ಮೇಷಾಂಶ, ವೃಶಾಂಶ, ಮಿಥುನಾಂಶ, ಕರ್ಕಾಂಶದ ಕ್ರಮಶಃ 100, 85, 83, 86 ವರ್ಷ ಯೋಗ (ಪೂರ್ಣಾಯು) ಆಗುತ್ತದೆ. ಇವುಗಳಿಂದ ನವಮ, ಪಂಚಮದಲ್ಲಿಯೂ ಅಷ್ಟೇ ವರ್ಷಗಳಾಗುತ್ತದೆ. ಸಿಂಹಾಂಶ, ಧನುವಾಂಶ, ಮೇಷದಂತೆ 100 ವರ್ಷ, ವೃಷಭಾಂಶದಂತೆ ಕನ್ಯಾ, ಮಕರಾಂಶಗಳ 85, ಮಿಥುನಾಗಳಂತೆ ತುಲ, ಕುಂಭ 83 ವರ್ಷ, ಕರ್ಕದಂತೆ ವೃಶ್ಚಿಕ ಮೀನಕ್ಕೆ 86 ವರ್ಷವೆಂದು ತಿಳಿಯುವುದು.

| ಚರಣ | ದೇಹಾ | ಜೀವ | ರಾಶಿ | | | ರಾಶಿ ವರ್ಗ | | | | | | ವೇದ | ದೇಹಾ | ಅಂಶ |
|---|---|---|---|---|---|---|---|---|---|---|---|---|---|---|
| 1 | ಗುರು | ಧನು 10 | ಮಕರ 4 | ಕುಂಭ 4 | ಮೀನ 10 | ಮೇಷ 7 | ವೃಷ 16 | ಮಿಥುನ 9 | ಸಿಂಹ 5 | ಕರ್ಕ 21 | ಚ | ಚಂ | ವೃಶ್ಚಿಕ 86 |
| 2 | ಬುಧ | ಕನ್ಯಾ 9 | ತು 16 | ವೃಷಭ 7 | ಮೀನ 10 | ಕುಂಭ 4 | ಮಕರ 5 | ಧನು 10 | ವೃಷ 7 | ತು 16 | ಶು | ಶು | ತುಲಾ 83 |
| 3 | ಬುಧ | ಕನ್ಯಾ 9 | ಸಿಂಹ 5 | ಕರ್ಕ 21 | ಮಿಥುನ 9 | ವೃಷ 16 | ಮೇಷ 7 | ಧನು 10 | ಮಕರ 4 | ಕುಂ 4 | ಶ | ಶ | ಕನ್ಯಾ 85 |
| 4 | ಗು | ಮೀನ 10 | ಮೇಷ 7 | ವೃಷಭ 16 | ಮಿಥುನ 9 | ಸಿಂಹ 5 | ಕರ್ಕ 21 | ಕನ್ಯಾ 9 | ತುಲಾ 16 | ವೃಶ್ಚಿಕ 7 | ಮ | ಮ | ಸಿಂಹ 100 |
| 1 | ಗು | ಮೇಷ 10 | ಕುಂಭ 4 | ಮ 4 | ಧ 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಸಿಂಹ 5 | ಕರ್ಕ 21 | ಚ | ಚ | ಕರ್ಕ 86 |
| 2 | ಬು | ಮಿಥುನ 9 | ವೃಷಭ 16 | ಮೇಷ 7 | ಧನು 10 | ಮ 4 | ಕುಂಭ 4 | ಮೀನ 10 | ಮೇಷ 7 | ವೃಷಭ 16 | ಶು | ಶು | ಮಿಥುನ 83 |
| 3 | ಬು | ಬುಧ 9 | ಸಿಂಹ 5 | ಕರ್ಕ 21 | ಕನ್ಯಾ 9 | ಸಿಂಹ 16 | ಕರ್ಕ 7 | ಮಿಥುನ 10 | ವೃಷಭ 4 | ಮೇಷ 4 | ಶ | ಶ | ಮೇಷ 85 |
| 4 | ಗು | ಧನಸ್ಸು 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಸಿಂಹ 5 | ಕರ್ಕ 21 | ಮಿಥುನ 9 | ವೃಷಭ 16 | ಮೇಷ 7 | ಮ | ಮ | ಮೇಷ 100 |
| 1 | ಗು | ಮೀನ 10 | ಕುಂಭ 4 | ಮಕರ 4 | ಧನುಸ್ಸು 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಸಿಂಹ 5 | ಕರ್ಕ 21 | ಚ | ಚ | ಮೀನ 86 |
| 2 | ಬು | ಮಿಥುನ 9 | ವೃಷಭ 16 | ಮೇಷ 7 | ಧನಸ್ಸು 10 | ಮ 4 | ಕುಂಭ 4 | ಮೀನ 10 | ಮೇಷ 7 | ವೃಷಭ 16 | ಶು | ಶು | ಕುಂಭ 83 |
| 3 | ಬು | ಮಿಥುನ 9 | ಸಿಂಹ 5 | ಕರ್ಕ 21 | ಕನ್ಯಾ 9 | ತುಲಾ 16 | ವೃಶ್ಚಿಕ 7 | ಮೀನ 10 | ಕುಂಭ 4 | ಮ 4 | ಶ | ಶ | ಮಕರ 85 |
| 4 | ಗು | ಧನಸ್ಸು 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಸಿಂಹ 5 | ಕರ್ಕ 21 | ಮಿ 9 | ವೃಷಭ 16 | ಮೇಷ 7 | ಮ | ಮ | ಧನುಸ್ಸು 100 |

ಅಪಸವ್ಯ ನಕ್ಷತ್ರ

1. ರೋಹಿಣಿ ಮೃಗಶಿರಾ ಆರ್ದ್ರಾ
2. ಮಘಾ ಪುಬ್ಬಾ ಉತ್ತರ
3. ವಿಶಾಖ ಅನುರಾಧಾ ಜೇಷ್ಠ
4. ಶ್ರವಣಾ ಧನಿಷ್ಠ ಶತತಾರಾ

| ಅಪಸವ್ಯ ನಕ್ಷತ್ರ | ಸವ್ಯ ನಕ್ಷತ್ರಗಳ ಸಂಖ್ಯೆ : - 1, 2, 3, 7, 8, 9, 13, 26, 27, 14, 15, 19, 20, 21, 25 | | | | | | | | | | | | | |
|---|---|---|---|---|---|---|---|---|---|---|---|---|---|---|
| | ಚರಣ | ದೇಹಾ | ಜೀವ | | ರಾಶಿ | | ರಾಶಿ ವರ್ಷ | | | | | ವೇದ | ದೇಹಾ | ಅಂಶ |
| ಅಶ್ವಿನಿ ಪುನರ್ವಸು ಹಸ್ತ | 1 | ಮ | ಮೇಷ 7 | ವೃಷಭ 16 | ಮೀನ 9 | ಕರ್ಕ 21 | ಸಿಂಹ 5 | ಕನ್ಯಾ 9 | ತುಲಾ 16 | ವೃಶ್ಚಿಕ 7 | ಧನಸ್ಸು 10 | ಗುರು | ಮೇಷ | 100 |
| | 2 | ಶ | ಮಕ 4 | ಕುಂಭ 4 | ಮೀನ 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಕರ್ಕ 21 | ಸಿಂಹ 5 | ಮಿಥುನ 9 | ಬುಧ | ವೃಷಭ | 85 |
| ಮೂಲಾ ಪೂ. ಬಾದ್ರಪದ | 3 | ಶು | ವೃಷಭ 16 | ಮೇಷ 7 | ಮೀನ 10 | ಕುಂಭ 4 | ಮಕರ 4 | ಧನಸ್ಸು 10 | ಮೇಷ 7 | ವೃಷಭ 16 | ಮಿಥುನ 9 | ಬುಧ | ಮಿಥುನ | 85 |
| | 4 | ಚ | ಕರ್ಕ 21 | ಸಿಂಹ 5 | ಕನ್ಯಾ 9 | ತುಲಾ 16 | ವೃಶ್ಚಿಕ 7 | ಧನಸ್ಸು 10 | ಮಕರ 4 | ಮಕರ 4 | ಮೇಷ 10 | ಮೀನ | ಕರ್ಕ | 86 |
| ಭರಣಿ ಪುಷ್ಯಾ ಚಿತ್ರಾ | 1 | ಮಂ | ವೃಶ್ಚಿಕ 7 | ತುಲಾ 16 | ಕನ್ಯಾ 9 | ಕರ್ಕ 21 | ಸಿಂಹ 5 | ಮಿಥುನ 9 | ವೃಷಭ 16 | ಮೇಷ 7 | ಮೀನ 10 | ಗುರು | ಸಿಂಹ | 100 |
| | 2 | ಶ | ಕುಂಭ 4 | ಮ 4 | ಧ 10 | ಮೇಷ 7 | ವೃಷಭ 16 | ಮಿಥುನ 9 | ಕರ್ಕ 21 | ಸಿಂಹ 5 | ಕನ್ಯಾ 9 | ಬುಧ | ಕನ್ಯಾ | 85 |
| ಪೂ.ಆಷಾಡ ಉತ್ತರ ಭಾದ್ರಪದ | 3 | ಶು | ತುಲಾ 16 | ವೃಷಭ 7 | ಧನ 10 | ಮ 4 | ಕುಂಭ 4 | ಮೀನ 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಬುಧ | ತುಲಾ | 83 |
| | 4 | ಚಂ | ಕರ್ಕ 21 | ಸಿಂಹ 5 | ಮಿಥುನ 9 | ವೃಷಭ 16 | ಮೇಷ 7 | ಮೀನ 10 | ಕುಂಭ 4 | ಮ 4 | ಧನಸ್ಸು 10 | ಗುರು | ವೃಶ್ಚಿಕ | 86 |
| | 1 | ಮಂ | ಮೇಷ 7 | ವೃಷಭ 16 | ಮಿಥುನ 9 | ಕರ್ಕ 21 | ಸಿಂಹ 5 | ಕನ್ಯಾ 9 | ತುಲಾ 16 | ವೃಶ್ಚಿಕ 7 | ಧನಸ್ಸು 10 | ಗುರು | ಧನಸ್ಸು | 100 |
| ಕೃತ್ತಿಕ ಆಶ್ಲೇಷ ಸ್ವಾತಿ | 2 | ಶ | ಮ 4 | ಕುಂಭ 4 | ಮೀನ 10 | ವೃಶ್ಚಿಕ 7 | ತುಲಾ 16 | ಕನ್ಯಾ 9 | ಕರ್ಕ 21 | ಸಿಂಹ 5 | ಮಿಥುನ 9 | ಬುಧ | ಮಕರ | 85 |
| | 3 | ಶು | ವೃಷಭ 16 | ಮೇಷ 7 | ಮೀನ 10 | ಕುಂಭ 4 | ಮಕರ 4 | ಧನ 10 | ಮೇಷ 7 | ವೃಷಭ 16 | ಮಿಥುನ 9 | ಬುಧ | ಕುಂಭ | 83 |
| ಉತ್ತರಾಷಾಢಾ ರೇವತಿ | 4 | ಚಂ | ಕರ್ಕ 21 | ಸಿಂಹ 5 | ಕನ್ಯಾ 9 | ತುಲಾ 16 | ವೃಶ್ಚಿಕ 7 | ಧನಸ್ಸು 10 | ಕುಂಭ 4 | ರವಿ 4 | ಮೀನ 10 | ಗುರು | ಮೀನ | 86 |

## ಸ್ವಪ್ಪಾರ್ಥ ಚಕ್ರ

| ರಾಶಿ ಅಂಶ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯ | ತುಲ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ವರ್ಷ ದಶಾ | 100 | 85 | 83 | 86 | 100 | 85 | 83 | 86 | 100 | 85 | 83 | 86 |

## ದಶಾರಂಭ ಜ್ಞಾನ

ಯತ್ರಪಾದೆ ಭವೇಜ್ಜನ್ಮ ತದವ್ಯತೀತ ಘಟಿಪಲೈ ।
ತದ್ಯಶಾಬ್ದಾ ವಿನಹತಾಃ ಪಂಚಭೂಮಿ ವಿಭಾಜಿತಃ ॥೮೭॥

ಲಬ್ಧಂತು ಭುಕ್ತವರ್ಷಾದಿ ಭೋಗ್ಯಂ ತಸ್ಮಾತ್ ಪ್ರಸಾಧಯೇತ್ ।
ವಿಂಶೋತ್ತರೀವ ರಾಶೀನಾಂ ನವಾನಾಂ ಸ್ಯಾನ್ಮಹಾದಶಾ ॥೮೮॥

ನಕ್ಷತ್ರದ ಯಾವ ಚರಣದಲ್ಲಿ ಜನ್ಮವಾಗಿದೆಯೋ ಆ ನಕ್ಷತ್ರ ಚರಣದ ಗತ ಘಟಿಫಲದಿಂದ ದಶಾಪರ್ವಕ್ಕೆ ಗುಣಿಸಿ 15ರಿಂದ ಭಾಗಿಸಿ ಲಬ್ಧ ಭುಕ್ತವರ್ಷಾದಿ ಗಳಾದರೆ ಪುನಃ ನಿಯಮಾನುಸಾರ ಭೋಗ್ಯ ವರ್ಷಾದಿ ತೆಗೆದು ವಿಂಶೋತ್ತರಿಯಂತೆ ಮುಂದಿನ ಮಹಾದಶಾ ಕೂಡಿಸುತ್ತ ಹೋಗುವುದು.

ಇಲ್ಲಿ ವಿಮರ್ಶಿಸಬೇಕಾದ ಮುಖ್ಯ ವಿಷಯ ರಾಶಿಚಕ್ರ ದಶಾ ಆದರೂ ರಾಶಿಗೆ ಮಹತ್ವವಿದ್ದರೂ ನಕ್ಷತ್ರ ಚರಣಗಳಿಗೆ ವಿಶೇಷ ಮಹತ್ವವಿದೆ – ಹೀಗಾಗಿ ಇಲ್ಲಿ ಒಂದು ನಕ್ಷತ್ರ 320ರ ಬಗ್ಗೆ ಮಾತ್ರ ವಿವೇಚಿಸಬೇಕೇ ಇಲ್ಲವೇ ಪೂರ್ಣ ನಕ್ಷತ್ರದ ಬಗ್ಗೆ ವಿವೇಚಿಸಬೇಕೆ ಎಂಬುದಲ್ಲಿದೆ. ಕೃತ್ತಿಕ 2ನೇ ಚರಣ, ವೃಷಭದಲ್ಲಿ ಬರುವುದ ರಿಂದ ವೃಷಭವೇ ಈ ರೀತಿ ಸ್ವಲ್ಪ ಗೊಂದಲಮಯವಾಗಿದೆ. ಇದು ಲೆಕ್ಕ ತೆಗೆಯು ವಾಗಲೂ ಅಷ್ಟೇ ಮಹತ್ವದ್ದೆ. ಉದಾಹರಣೆ ವಿಶಾಖ 1ನೇ ಚರಣ 86 ವರ್ಷವಾದರೆ, 2ನೇ ಚರಣ 83 ವರ್ಷ, 3ನೇ ಚರಣ 85 ವರ್ಷ, ನಾಲ್ಕನೇ ಪಾದ 100 ವರ್ಷ. ಈ ರೀತಿಯಾಗಿರುವುದರಿಂದ – ನಕ್ಷತ್ರ ಚರಣದ – ಉಳಿದ ಭಾಗಕ್ಕೆ ದಶಾ ತೆಗೆದು ನಂತರ ರಾಶಿ ಕೂಡಿಸುತ್ತ ಹೋಗುವುದು ಸರಿಯಾದ ಕ್ರಮವಾಗುತ್ತದೆ. ಉಳಿದ ಪದ್ಧತಿಯಲ್ಲಿ – ಇಡೀ ರಾಶಿಗೆ ಸಂಬಂಧಿಸಲಾರದು. ಅದೇ ರೀತಿ ಮಾಡುವುದು ಹೆಚ್ಚಿನ ಶ್ರೇಯಸ್ಕರವೆಂದು ನನ್ನ ಅಭಿಮತ. ಆ ರೀತಿ ತೆಗೆದಾಗ ನಿರ್ದಿಷ್ಟ ಅಂಶ ಹೇಳಿದಂತಾಗುವುದು.

ಇಲ್ಲಿ ತೆಗೆಯಬೇಕಾದಾಗ ಎರಡನೇ ವಿಧಾನದ ಪರಾಶರರ ಅಭಿಪ್ರಾಯ ತಿಳಿದು ವಿವೇಚಿಸುವುದು ಉದಾಹರಣೆ ಕೊಡುವುದು ಹೆಚ್ಚಿನ ಶ್ರೇಯಸ್ಕರ.

## ಪ್ರಕಾರಂತ ಭೇದ

ಇಂದೋರ್ನವಾಂಶ ಭುಕ್ತಾ ಯಾ ಲಿಪ್ತಾಃ ಸ್ವಾಬ್ದಾಹತೋದ್ಧತಾಃ ।
ಶತದ್ವಯೇನ ಭುಕ್ತತದ್ ಭೋಗ್ಯಂ ಜ್ಞೇಯಮತಃ ಪರಮ್ ॥೮೯॥

ಸ್ಫುಟ ಚಂದ್ರನ ಭುಕ್ತ ಕಲೆಗಳನ್ನು ಸ್ವಾವರ್ಷದಿಂದ ಗುಣಿಸಿ 200ರಿಂದ ಭಾಗಿಸಲು ಲಬ್ಧ ವರ್ಷಾದಿಗಳಾಗುವುವು. ಇವು ಭುಕ್ತವಾದ್ದರಿಂದ ಒಟ್ಟು ವರ್ಷಾದಿಗಳಲ್ಲಿ ಕಳೆಯಲು ಭೋಗ್ಯ ವರ್ಷಗಳು ಬರುತ್ತವೆ. ಇಲ್ಲಿ ಚಂದ್ರ 6 ರಾಶಿ, 24 ಕಲೆ ಭೋಗಿಸಿದು ಒಟ್ಟು ಕಲೆಗಳು $6 \times 30+24=204 \times 60-12240 \div 800=$ ಲಬ್ಧಿ 15 ಉಳಿದ ಕಲೆಗಳ 240 ಎಂಟುನೂರರಲ್ಲಿ ಈ ಕಳೆ ಕಳೆದರೆ $800-240=$ 560 ಉಳಿಯುವುವು. ಇಲ್ಲಿ ಮುಂದಿನ 2 ಚರಣದ ಕಲೆಗಳನ್ನು ಕಳೆದು $160 \times 83=$ $200=66-4-9$ ದಿವಸ ಕನ್ಯಾದಿಂದ ಧನುವಿನವರೆಗೆ 60ವರ್ಷ ಕಳೆಯಲು $6-4-9$ದಿವಸ – ಕನ್ಯಾದಲ್ಲಿ ಉಳಿಯುವ ವರ್ಷಗಳು.

ಇನ್ನು ಘಟಿ ಫಲದಲ್ಲಿ ತುಲಾ ರಾಶಿಯಲ್ಲಿ 6 ಅಂಶ ಉಳಿದದ್ದು ಅವನ್ನು ಗತಿಸಲು ತೆಗೆದುಕೊಳ್ಳುವ ಸಮಯ 13 ಘಟಿ 3 ಫಲ $13-3 \times 83=$ 1079/ 249 = ಸಮಾನ $1073-9 \div 16.21=$ $66.4-9$ದಿವಸ ಸರಾಸರಿ ಬರುತ್ತದೆ. ಇದರಲ್ಲಿ ಕನ್ಯಾದಿಂದ ಧನುದವರೆಗೆ 60 ಕಳೆದು 6, 4, 9 ದಿವಸ ಕನ್ಯಾದಶಾ ಉಳಿಯುತ್ತದೆ.

ನಂತರ ಕನ್ಯಾ ಜನ್ಮ ದಿನಾಂಕದಿಂದ 6, 4, 9 ದಿವಸ ತುಲಾ 16 ವರ್ಷ ಈ ರೀತಿ ಸೇರಿಸುತ್ತ ಹೋಗುವುದು.

## ಗಣನ ಕ್ರಮ

ಇಲ್ಲಿ ಈ ದಶಾಕ್ಕೆ ಈ ಕೆಳಗಿನ ಚಾರ್ಟ್ ನೋಡಬಹುದು.

ಈ ಕೆಳಗಿನ ಸಾರಣಿಗಳು ಭೋಗ್ಯಕಾಲ ದಶಾ ತೆಗೆಯಲು ಪೂರ್ಣ ಅನುಕೂಲಕರ – ಹೆಚ್ಚಿ ಅಂಶವಾಗಿದ್ದರೆ ಹಿಂದಿನ ವರ್ಷದಲ್ಲಿ ಅಷ್ಟು ಕಲಾತ್ಮಕ ಸಾರಣಿ ನೋಡಿ ಕೂಡಿಸುವುದು ಉದಾಹರಣೆ ನಂತರ ನೋಡಲಾಗಿದೆ.

# ಚಂದ್ರ ಸ್ಪಷ್ಟದಿಂದ – 100 ವರ್ಷದ ದಶಾ ಸಾರಣಿ

| 1<br>ನಕ್ಷತ್ರ ಚರಣ | 2 | 3<br>ಸ್ಪಷ್ಟ ಚಂದ್ರ | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ |
| ಅಶ್ವಿನಿ ಪ್ರಥ1 | 0.0.0 | 0.0.25 | 0.0.50 | 0.0.15 | 0.1.40 | 0.2.5 | 0.2.30 | 0.2.55 | 0.3.20 |
| ಭರಣಿ ಪ್ರಥ1 | 0.13.20 | 0.13.45 | 0.14.10 | 0.14.35 | 0.15.00 | 0.15.25 | 0.15.50 | 0.16.25 | 0.16.40 |
| ಕೃತ್ತಿಕ ಪ್ರಥಮ1 | 0.26.40 | 0.27.5 | 0.27.30 | 0.27.55 | 0.28.20 | 0.28.45 | 0.29.10 | 0.29.35 | 1.0.0 |
| ರೋಹಿಣಿ ಚತು4 | 1.20.0 | 1.20.25 | 1.20.50 | 1.21.15 | 1.21.40 | 1.22.5 | 1.22.30 | 1.22.50 | 1.23.20 |
| ಮೃಗಶಿರ ಚತು4 | 2.3.20 | 2.3.45 | 2.4.10 | 2.4.35 | 2.5.0 | 2.5.25 | 2.5.50 | 2.6.15 | 2.6.40 |
| ಆರಿದ್ರಾ ಚತು 4 | 2.16.40 | 2.17.5 | 2.17.30 | 2.17.55 | 2.18.20 | 2.18.45 | 2.19.10 | 2.19.35 | 2.20.0 |
| ಪುನರ್ವಸು ಪ್ರಥ1 | 2.20.0 | 2.20.25 | 2.20.50 | 2.20.15 | 2.21.40 | 2.22.5 | 2.22.30 | 2.22.55 | 2.23.20 |
| ಪುಷ್ಯಾ ಪ್ರಥ1 | 3.3.20 | 3.3.45 | 3.4.10 | 3.4.25 | 3.4.50 | 3.5.15 | 3.5.40 | 3.6.5 | 3.6.40 |
| ಆಶ್ಲೇಷ ಪ್ರಮ1 | 3.16.40 | 3.17.5 | 3.17.30 | 3.17.55 | 3.18.20 | 3.18.45 | 3.19.10 | 3.19.35 | 3.20.0 |
| ಮಖಾ ಚತು4 | 4.10.0 | 4.10.25 | 4.10.50 | 4.11.15 | 4.11.40 | 4.12.5 | 4.12.30 | 4.12.55 | 4.13.20 |
| ಪುಬ್ಬ ಚತು4 | 4.23.20 | 4.23.45 | 4.24.10 | 4.24.35 | 4.25.0 | 4.25.25 | 4.25.50 | 4.26.15 | 4.26.40 |
| ಉತ್ತರ ಚತು4 | 5.6.40 | 5.7.5 | 5.7.30 | 5.7.55 | 5.8.20 | 5.8.45 | 5.9.10 | 5.9.35 | 5.10.0 |
| ಹಸ್ತ ಪ್ರಥ 1 | 5.10.0 | 5.10.25 | 5.10.50 | 5.11.15 | 5.11.40 | 5.12.5 | 5.12.30 | 5.12.55 | 5.13.20 |
| ಚಿತ್ತಾ ಪ್ರಥ 1 | 5.13.20 | 5.23.45 | 5.24.10 | 5.24.35 | 5.25.0 | 5.25.25 | 5.25.50 | 5.26.15 | 5.26.10 |
| ಸ್ವಾತಿ ಪ್ರಥ 1 | 6.6.40 | 6.7.5 | 6.7.30 | 6.7.55 | 6.8.20 | 6.8.45 | 6.9.10 | 6.9.35 | 6.10.0 |
| ವಿಶಾಖ ಚತು 4 | 7.0.0 | 7.0.25 | 7.0.50 | 7.1.15 | 7.1.40 | 7.2.5 | 7.2.30 | 7.2.55 | 7.3.20 |
| ಅನುರಾಧ ಚತು4 | 7.13.20 | 7.13.45 | 7.14.10 | 7.14.35 | 7.15.0 | 7.15.25 | 7.15.56 | 7.16.15 | 7.16.40 |
| ಜ್ಯೇಷ್ಠ ಚತುರ್ಥ 4 | 7.26.40 | 7.27.5 | 7.27.30 | 7.27.55 | 7.28.20 | 7.28.45 | 7.29.10 | 7.29.35 | 8.00.0 |
| ಮೂಲ ಪ್ರಥಮ 1 | 8.00.0 | 8.0.25 | 8.0.50 | 8.1.15 | 8.1.40 | 8.2.5 | 8.2.30 | 8.2.55 | 8.3.20 |
| ಪೂ.ಆ. ಪ್ರ1 | 8.13.20 | 8.13.45 | 8.14.10 | 8.14.35 | 8.15.0 | 8.15.25 | 8.15.50 | 8.16.25 | 8.16.40 |
| ಉತ್ತರಾಷಾಢ ಪ್ರ1 | 8.26.60 | 8.27.5 | 8.25.30 | 8.27.55 | 8.28.20 | 8.28.45 | 8.29.10 | 8.29.35 | 9.0.0 |
| ಶ್ರವಣ ಚತುರ್ಥ4 | 9.20.0 | 9.20.25 | 9.20.50 | 9.21.15 | 9.21.40 | 9.22.5 | 9.22.30 | 9.22.55 | 9.23.20 |
| ಧನಿಷ್ಠಾ ಚತುರ್ಥ4 | 10.3.20 | 10.3.45 | 10.4.10 | 10.4.35 | 10.5.0 | 10.5.25 | 10.5.50 | 10.6.15 | 10.6.40 |
| ಶತತಾರಿ ಚತುರ್ಥ4 | 10.16.40 | 10.17.5 | 10.17.30 | 10.17.55 | 10.18.20 | 10.18.45 | 10.19.10 | 10.19.35 | 10.20.0 |
| ಪೂ.ಭಾದ್ರಾ ಪ್ರ1 | 10.20.0 | 10.20.25 | 10.20.50 | 10.11.15 | 10.21.40 | 10.22.5 | 10.22.30 | 10.22.55 | 10.23.20 |
| ಉ.ಭಾದ್ರಾ ಪ್ರ1 | 11.3.20 | 11.3.45 | 11.4.10 | 11.4.25 | 11.5.0 | 11.5.25 | 11.5.50 | 11.6.15 | 11.6.40 |
| ರೇವತಿ ಪ್ರಥಮ 1 | 11.16.40 | 11.17.5 | 11.17.30 | 11.17.55 | 11.18.20 | 11.18.45 | 11.19.10 | 11.19.5 | 11.20.0 |
| ವರ್ಷ, ತಿಂಗಳು | 100.0 | 87.6 | 75.0 | 62.6 | 50.0 | 76.0 | 25.0 | 12.0 | ಇಲ್ಲ |

## 85 ದಶಾ ವರ್ಷಗಳಲ್ಲಿ

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ನಕ್ಷತ್ರಚರಣ | | ಸ್ಪಷ್ಟ ಚಂದ್ರ ವಿವರ | | | | | | | |
| | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ |
| ಅಶ್ವಿನಿ 2 | 0.3.20 | 0.3.45 | 0.4.10 | 0.4.35 | 0.5.0 | 0.5.25 | 0.5.50 | 0.6.15 | 0.6.40 |
| ಭರಣಿ 2 | 0.16.40 | 0.17.05 | 0.17.30 | 0.17.55 | 0.18.20 | 0.18.45 | 0.19.10 | 0.19.35 | 0.20.0 |
| ಕೃತ್ತಿಕ 2 | 1.0.0 | 1.0.25 | 1.0.50 | 1.1.15 | 1.1.40 | 1.2.5 | 1.2.30 | 1.2.55 | 1.3.20 |
| ರೋಹಿಣಿ 3 | 1.16.40 | 1.17.05. | 1.17.30 | 1.17.55 | 1.18.20 | 1.18.45 | 1.19.10 | 1.19.35 | 1.20.0 |
| ಮೃಗಶಿರ 3 | 2.0.0 | 2.0.25 | 2.0.50 | 2.1.15 | 2.1.40 | 2.2.5 | 2.2.30 | 2.2.55 | 2.3.20 |
| ಆರಿದ್ರಾ 3 | 2.13.20 | 2.13.45 | 2.14.10 | 2.14.35 | 2.15.0 | 2.15.25 | 2.15.50 | 2.16.15 | 2.16.40 |
| ಪುನರ್ವಸು2 | 2.23.20 | 2.23.45 | 2.24.10 | 2.24.35 | 2.25.0 | 2.25.25 | 2.25.50 | 2.6.15 | 2.26.40 |
| ಪುಷ್ಯ 2 | 3.6.40 | 3.7.5 | 3.7.30 | 3.7.55 | 3.8.20 | 3.8.45 | 3.9.10 | 3.9.35 | 3.10.0 |
| ಆಶ್ಲೇಷ 2 | 3.20.0 | 3.20.25 | 3.20.50 | 3.21.15 | 3.21.40 | 3.22.05 | 3.22.30 | 3.22.55 | 3.23.20 |
| ಮಖಾ 3 | 4.6.40 | 4.7.5 | 4.7.30 | 4.7.55 | 4.8.20 | 4.8.45 | 4.9.50 | 4.9.35 | 4.10.0 |
| ಪುಬ್ಬಾ 3 | 4.20.0 | 4.20.25 | 4.20.50 | 4.21.15 | 4.21.40 | 4.22.05 | 4.23.30 | 4.22.55 | 4.23.20 |
| ಉತ್ತರ 3 | 4.5.20 | 5.4.45 | 5.4.10 | 5.4.35 | 5.5.0 | 5.5.25 | 5.5.50 | 5.6.15 | 5.6.40 |
| ಹಸ್ತ 2 | 5.13.20 | 5.13.45 | 5.14.10 | 5.14.35 | 5.15.0 | 5.12.25 | 5.15.50 | 5.16.15 | 5.16.40 |
| ಚಿತ್ತ 2 | 5.26.40 | 5.27.5 | 5.27.30 | 5.27.55 | 5.28.20 | 5.28.45 | 5.29.10 | 5.29.35 | 6.0.0 |
| ಸ್ವಾತಿ 2 | 6.10.0 | 6.10.25 | 6.10.50 | 6.11.15 | 6.11.40 | 6.12.5 | 6.12.30 | 6.12.55 | 6.13.20 |
| ವಿಶಾಖ 3 | 6.26.40 | 6.27.05 | 6.27.30 | 6.27.55 | 6.28.20 | 6.28.45 | 6.29.10 | 6.29.35 | 7.0.0 |
| ಅನುರಾಧ 3 | 7.10.0 | 7.10.25 | 7.10.50 | 7.11.15 | 7.11.40 | 7.12.05 | 7.12.30 | 7.12.55 | 7.13.30 |
| ಜ್ಯೇಷ್ಠ 3 | 7.13.20 | 7.23.45 | 7.24.10 | 7.24.35 | 7.25.0 | 7.25.25 | 7.25.30 | 7.26.15 | 7.26.40 |
| ಮುಲ 2 | 8.3.20 | 8.3.45 | 8.4.10 | 8.4.35 | 8.5.0 | 8.5.25 | 8.5.10 | 8.6.15 | 8.6.40 |
| ಪೂ.ಆ.2 | 8.16.40 | 8.17.5 | 8.17.30 | 8.17.55 | 8.18.20 | 8.18.45 | 8.19.10 | 8.19.35 | 8.20.0 |
| ಉ.ಆ.2 | 9.0.0 | 9.0.25 | 9.0.50 | 9.1.15 | 9.1.40 | 9.2.5 | 9.2.30 | 9.2.55 | 9.3.20 |
| ಶ್ರವಣ 3 | 9.16.40 | 9.17.05 | 9.17.30 | 9.17.55 | 9.18.20 | 9.18.45 | 9.19.10 | 9.19.35 | 9.20.0 |
| ಧನಿಷ್ಠ 3 | 10.0.0 | 10.0.25 | 10.0.50 | 10.1.15 | 10.1.40 | 10.2.5 | 10.2.30 | 10.2.55 | 10.3.20 |
| ಶತತಾರ 3 | 10.13.20 | 10.13.45 | 10.14.10 | 10.14.35 | 10.15.0 | 10.15.25 | 10.15.50 | 10.16.15 | 0.16.40 |
| ಪೂ.ಭಾ.2 | 10.23.20 | 10.23.45 | 10.24.10 | 10.24.35 | 10.25.0 | 10.25.25 | 10.25.50 | 0.26.15 | 10.26.40 |
| ಉ.ಭಾ.2 | 11.6.40 | 11.7.5 | 11.7.30 | 11.7.55 | 11.8.20 | 11.8.45 | 11.9.10 | 11.9.35 | 11.10.0 |
| ರೇವತಿ 2 | 11.20.0 | 11.20.25 | 11.20.50 | 11.21.15 | 11.21.40 | 11.22.5 | 11.22.30 | 11.22.55 | 11.23.20 |
| ವರ್ಷ ಮಾಸ.ದಿನ | 85 | 74.4.15 | 63.9 | 53.1.15 | 42.6 | 31.10.15 | 21.3 | 10.7.15 | ಇಲ್ಲ |

## 83 ದಶಾವರ್ಷ ವಿವರ

| ನಕ್ಷತ್ರಗಳು ಚರಣ | ಸ್ಪಷ್ಟ ಚಂದ್ರ ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ |
|---|---|---|---|---|---|---|---|---|---|
| ಅಶ್ವಿನಿ 4 | 0.6.40 | 0.7.05 | 0.7.30 | 0.7.55 | 0.8.20 | 0.8.45 | 0.9.10 | 0.9.35 | 0.10.0 |
| ಭರಣಿ 4 | 0.20.0 | 0.20.25 | 0.20.50 | 0.21.15 | 0.21.40 | 0.22.5 | 0.22.30 | 0.22.55 | 0.23.20 |
| ಕೃತ್ತಿಕ 4 | 1.3.20 | 1.3.45 | 1.4.10 | 1.4.35 | 1.5.0 | 1.5.25 | 1.5.50 | 1.6.15 | 1.6.40 |
| ರೋಹಿಣಿ 2 | 1.13.20 | 1.13.45 | 1.14.10 | 1.14.35 | 1.15.0 | 1.15.25 | 1.15.50 | 1.16.15 | 1.16.40 |
| ಮೃಗಶಿರ 2 | 1.26.40 | 1.27.5 | 1.27.30 | 1.27.55 | 1.28.20 | 1.28.45 | 1.29.10 | 1.29.35 | 2.0.0 |
| ಆರಿದ್ರಾ 2 | 2.10.0 | 2.10.25 | 2.10.50 | 2.11.25 | 2.11.40 | 2.12.5 | 2.12.30 | 2.12.55 | 2.13.20 |
| ಪುನರ್ವಸು 4 | 2.23.20 | 3.23.45 | 3.24.10 | 3.24.35 | 3.25.0 | 3.25.25 | 3.25.50 | 3.26.15 | 3.26.40 |
| ಪುಷ್ಯ 4 | 3.10.0 | 3.10.25 | 3.10.50 | 3.11.15 | 3.11.40 | 3.12.5 | 3.12.30 | 3.12.55 | 3.13.20 |
| ಆಶ್ಲೇಷ 4 | 3.23.20 | 3.23.45 | 3.24.10 | 3.24.35 | 3.25.0 | 3.25.25 | 3.25.50 | 3.26.15 | 3.26.40 |
| ಮಘಾ 2 | 4.3.20 | 4.3.45 | 4.4.10 | 4.4.35 | 4.5.0 | 4.5.25 | 4.5.50 | 4.6.15 | 4.6.40 |
| ಪುಬ್ಬಾ 2 | 4.16.40 | 4.17.05 | 4.17.30 | 4.17.55 | 4.18.20 | 4.18.45 | 4.19.10 | 4.19.35 | 4.20.0 |
| ಉತ್ತರ 2 | 5.0.0 | 5.0.25 | 5.0.50 | 5.1.15 | 5.1.40 | 5.2.5 | 5.2.30 | 5.2.55 | 5.3.20 |
| ಹಸ್ತ 4 | 5.16.40 | 5.17.5 | 5.17.30 | 5.17.55 | 5.18.20 | 5.18.45 | 5.19.10 | 5.19.35 | 5.20.0 |
| ಚಿತ್ತ 4 | 6.0.0 | 6.0.25 | 6.0.50 | 6.1.15 | 6.1.40 | 6.2.5 | 6.2.30 | 6.2.55 | 6.3.20 |
| ಸ್ವಾತಿ 4 | 6.13.20 | 6.13.45 | 6.14.10 | 6.14.35 | 6.15.0 | 6.15.25 | 6.15.50 | 6.16.15 | 6.16.40 |
| ವಿಶಾಖ 2 | 6.23.20 | 6.23.45 | 6.24.10 | 6.24.35 | 6.25.0 | 6.25.25 | 6.25.50 | 6.26.5 | 6.26.40 |
| ಅನುರಾಧ 2 | 7.6.40 | 7.7.5 | 7.7.30 | 7.7.55 | 7.8.20 | 7.8.45 | 7.9.10 | 7.9.35 | 7.10.0 |
| ಜ್ಯೇಷ್ಠ 2 | 7.20.0 | 7.20.25 | 7.20.50 | 7.21.15 | 7.21.40 | 7.22.5 | 7.22.30 | 7.22.55 | 7.23.20 |
| ಮೂಲ 4 | 8.6.40 | 8.7.5 | 8.7.30 | 8.7.55 | 8.8.20 | 8.8.45 | 8.9.10 | 8.9.35 | 8.10.0 |
| ಪೂ.ಆ. 4 | 8.20.0 | 8.20.25 | 8.20.50 | 8.21.15 | 8.21.40 | 8.22.5 | 8.22.30 | 8.22.55 | 8.23.20 |
| ಉ.ಆ. 4 | 9.3.20 | 9.3.45 | 9.4.10 | 9.4.35 | 9.5.0 | 9.5.25 | 9.5.50 | 9.6.15 | 9.6.40 |
| ಶ್ರವಣ 2 | 9.13.20 | 9.13.45 | 9.14.10 | 9.14.35 | 9.15.0 | 9.15.25 | 9.15.50 | 9.16.15 | 9.16.40 |
| ಧನಿಷ್ಠ 2 | 9.26.40 | 9.27.5 | 9.27.30 | 9.27.55 | 9.28.20 | 9.28.45 | 9.29.10 | 9.29.35 | 9.0.0 |
| ಶತತಾರ 2 | 10.10.0 | 10.10.25 | 10.10.50 | 10.11.15 | 10.11.40 | 10.12.5 | 10.12.30 | 10.12.55 | 10.13.20 |
| ಪೂ.ಭಾ 4 | 10.26.40 | 10.27.5 | 10.27.30 | 10.27.55 | 10.28.20 | 10.28.45 | 10.29.10 | 10.29.35 | 11.0.0 |
| ಉ.ಭಾ 4 | 11.10.0 | 11.10.25 | 11.10.50 | 11.11.15 | 11.11.40 | 11.12.5 | 11.12.30 | 11.12.55 | |
| ರೇವತಿ 4 | 11.23.20 | 11.23.45 | 11.24.10 | 11.24.35 | 11.25.0 | 11.25.25 | 11.25.50 | 11.26.15 | 11.26.40 |
| ವ.ತಿಂ.ದಿ | 83.00 | 72.7.15 | 62.3.0 | 51.10.15 | 41.6.0 | 31.1.15 | 20.9.0 | 10.4.15 | ಇಲ್ಲ |

# 86 ವರ್ಷದ ವಿವರ

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ನಕ್ಷತ್ರಚರಣ | ಸ್ಪಷ್ಟಚಂದ್ರ ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ | ರಾ.ಅ.ಕ |
| ಅಶ್ವಿನಿ 4 | 0.10.0 | 0.10.25 | 0.10.50 | 0.11.15 | 0.11.40 | 0.12.5 | 0.12.30 | 0.12.55 | 0.13.20 |
| ಭರಣಿ 4 | 0.23.20 | 0.23.45 | 0.24.10 | 0.24.35 | 0.25.0 | 0.25.25 | 0.25.50 | 0.26.15 | 0.26.40 |
| ಕೃತ್ತಿಕ 4 | 1.6.40 | 1.7.05 | 1.7.30 | 1.7.55 | 1.8.20 | 1.8.45 | 1.9.10 | 1.9.35 | 1.10.0 |
| ರೋಹಿಣಿ4 | 1.10.0 | 1.10.25 | 1.10.50 | 1.11.15 | 1.11.40 | 1.12.5 | 1.12.30 | 1.12.55 | 1.13.20 |
| ಮೃಗಶಿರ1 | 1.23.20 | 1.23.45 | 1.24.10 | 1.24.35 | 1.25.0 | 1.25.25 | 1.25.30 | 1.26.15 | 1.26.40 |
| ಆರಿದ್ರಾ1 | 2.6.40 | 2.7.05 | 2.7.30 | 2.7.55 | 2.8.20 | 2.8.45 | 2.9.10 | 2.9.35 | 2.10.0 |
| ಪುನರ್ವಸು4 | 3.0.0 | 3.0.25 | 3.0.50 | 3.1.15 | 3.1.40 | 3.2.5 | 3.2.30 | 3.2.55 | 3.3.20 |
| ಪುಷ್ಯಾ 4 | 3.13.20 | 3.13.45 | 3.14.10 | 3.14.35 | 3.15.0 | 3.15.25 | 3.15.50 | 3.16.15 | 3.16.40 |
| ಆಶ್ಲೇಷ 4 | 3.26.40 | 3.27.5 | 3.27.30 | 3.27.55 | 3.28.20 | 3.28.45 | 3.29.10 | 3.29.35 | 4.0.0 |
| ಮಖಾ 1 | 4.0.0 | 4.0.25 | 4.0.50 | 4.1.15 | 4.1.40 | 4.2.5 | 4.2.30 | 4.2.55 | 4.3.20 |
| ಪುಬ್ಬಾ 1 | 4.13.20 | 4.13.45 | 4.14.10 | 4.14.35 | 4.15.0 | 4.15.25 | 4.15.50 | 4.16.15 | 4.16.10 |
| ಉತ್ತರ 1 | 4.26.40 | 4.27.5 | 4.27.30 | 4.27.55 | 4.28.20 | 4.28.45 | 4.29.10 | 4.29.35 | 5.0.0 |
| ಹಸ್ತ 4 | 5.20.0 | 5.20.25 | 5.20.50 | 5.21.15 | 4.21.10 | 5.22.5 | 5.22.30 | 5.22.55 | 5.23.20 |
| ಚಿತ್ರಾ 4 | 6.3.20 | 6.3.45 | 6.4.10 | 6.4.35 | 6.5.0 | 6.5.25 | 5.5.50 | 6.6.15 | 6.6.40 |
| ಸ್ವಾತಿ 4 | 6.16.40 | 6.17.05 | 6.17.30 | 6.17.55 | 6.18.20 | 6.18.45 | 6.19.10 | 6.19.35 | 6.20.0 |
| ವಿಶಾಖ 1 | 6.20.0 | 6.20.25 | 6.20.50 | 6.21.15 | 6.21.40 | 6.22.05 | 6.22.30 | 6.22.55 | 6.23.20 |
| ಅನುರಾಧ1 | 7.3.20 | 7.3.45 | 7.4.10 | 7.4.35 | 7.5.0 | 7.5.25 | 7.5.50 | 7.6.15 | 7.6.40 |
| ಜ್ಯೇಷ್ಠ 1 | 7.16.40 | 7.17.5 | 7.17.30 | 7.17.55 | 7.18.20 | 7.18.45 | 7.19.10 | 7.19.35 | 7.20.0 |
| ಮೂಲ 4 | 8.10.0 | 6.1.25 | 8.10.50 | 8.11.15 | 8.11.40 | 8.12.5 | 8.12.30 | 8.12.55 | 8.13.20 |
| ಪೂ.ಆ. 4 | 8.3.20 | 8.23.45 | 8.24.10 | 8.24.35 | 8.25.0 | 8.25.25 | 8.25.50 | 8.26.15 | 8.26.40 |
| ಉ.ಷ. 4 | 9.6.40 | 9.7.5 | 9.7.30 | 9.7.55 | 9.8.20 | 9.8.45 | 9.9.10 | 9.9.35 | 9.10 |
| ಶ್ರವಣ 1 | 9.10.0 | 9.10.25 | 9.10.50 | 9.11.15 | 9.11.40 | 9.12.05 | 9.12.30 | 9.12.55 | 9.13.20 |
| ಧನಿಷ್ಠ 1 | 9.23.20 | 9.23.45 | 9.23.10 | 9.24.35 | 9.25.0 | 9.25.25 | 9.25.50 | 9.26.15 | 9.26.40 |
| ಶತತಾರ 1 | 10.6.40 | 10.7.5 | 10.7.30 | 10.7.55 | 10.8.20 | 10.8.15 | 10.9.10 | 10.9.35 | 10.10.0 |
| ಪೂ.ಭಾ. 4 | 11.0.0 | 11.0.25 | 11.0.50 | 11.1.15 | 11.1.40 | 11.2.5 | 11.2.30 | 11.2.55 | 11.3.20 |
| ಉ.ಭಾ. 4 | 11.13.20 | 11.13.45 | 11.14.10 | 11.14.35 | 11.15.0 | 11.15.25 | 11.15.50 | 11.16.15 | 11.16.40 |
| ರೇವತಿ 4 | 11.26.40 | 11.27.5 | 11.27.30 | 11.27.55 | 11.28.20 | 11.28.45 | 11.29.10 | 11.29.35 | 12.00 |
| | | ಮ | ಪ.ಮಾ | | | ವ.ತಿ | ವ.ತಿ | ವ.ತಿ | |
| | 86 | 75.3 | 64.6 | 53.9 | 43ವರ್ಷ | 32.3 | 21.6 | 10.9 | ಇಲ್ಲ |

ವಿಶೇಷ ಸೂಚನೆ: ಸ್ಪಷ್ಟ ಚಂದ್ರ 25"ಗಳ (ಕಲೆ) ಆಧಾರದ ಮೇಲಿದೆ.

## ಚಂದ್ರನಕಲಾ ಸಾರಣಿ

| ಚಂದ್ರಕಲಾ | 100 ವರ್ಷ ವ-ಮಾ-ದಿ | 85 ವರ್ಷ ವ-ಮಾ-ದಿ | 83 ವರ್ಷ ವ-ಮಾ-ದಿ | 86 ವರ್ಷ ವ-ಮಾ-ದಿ |
|---|---|---|---|---|
| 1 | 0-6-0 | 0-5-3 | 0-4-29 | 0-5-5 |
| 2 | 1-0-0 | 0-10-6 | 0-9-29 | 0-10-10 |
| 3 | 1-6-0 | 1-3-9 | 1-2-28 | 1-3-14 |
| 4 | 2-0-0 | 1-8-12 | 1-7-28 | 1-8-19 |
| 5 | 2-6-0 | 2-1-15 | 2-0-27 | 2-1-24 |
| 6 | 3-0-0 | 2-6-18 | 2-5-26 | 2-6-29 |
| 7 | 3-6-0 | 2-11-21 | 2-10-26 | 3-0-4 |
| 8 | 4-0-0 | 3-4-24 | 3-3-24 | 3-5-8 |
| 9 | 4-6-0 | 3-9-27 | 3-8-25 | 3-10-13 |
| 10 | 5-0-0 | 4-3-0 | 4-1-24 | 4-3-18 |
| 11 | 5-6-0 | 4-8-3 | 4-6-23 | 4-8-23 |
| 12 | 6-0-0 | 5-1-6 | 4-11-23 | 5-1-28 |
| 13 | 6-6-0 | 5-6-9 | 5-4-22 | 5-7-2 |
| 14 | 7-0-0 | 5-11-12 | 5-9-22 | 6-0-7 |
| 15 | 7-6-0 | 6-4-15 | 6-2-21 | 6-5-12 |
| 16 | 8-0-0 | 6-9-18 | 6-7-20 | 6-10-17 |
| 17 | 8-6-0 | 7-2-21 | 7-0-20 | 7-3-22 |
| 18 | 9-0-0 | 7-7-24 | 7-5-19 | 7-8-26 |
| 19 | 9-6-0 | 8-0-27 | 7-10-19 | 8-2-1 |
| 20 | 10-0-0 | 8-6-0 | 6-3-18 | 8-7-6 |
| 21 | 10-6-0 | 8-11-3 | 8-8-17 | 9-0-11 |
| 22 | 11-0-0 | 9-4-6 | 9-1-17 | 9-5-16 |
| 23 | 11-6-0 | 9-9-9 | 9-6-16 | 9-10-20 |
| 24 | 12-0-0 | 10-2-12 | 9-11-16 | 10-3-25 |
| 25 | 12-6-0 | 10-7-15 | 10-4-15 | 10-9-0 |

ಈ ಸಾರಣಿಗಳ ಮೇಲೆ ಸುಲಭವಾಗಿ ದಶಾದಿ ಕಂಡು ಹಿಡಿಯಬಹುದು. ಈ ಅಂಶ ಲಗ್ನ, ನಕ್ಷತ್ರದಿಂದಲೂ ಕಂಡುಹಿಡಿಯಲು –ಲಗ್ನ ವಶಾ ತೆಗೆಯಬರುವುದು. ಅದು ಹೆಚ್ಚು ಶ್ರೇಯಸ್ಕರವು ಹೌದು.

## ಗಣನ ಕ್ರಮ ಕಥನ

ಆದ್ಯಾಂಶೋ ಯಸ್ತುಸವ್ಯಾಖ್ಯೆ ದೇಹಃ ಸದ್ಭಿರುದೀರಿತಃ ।
ಜೀವಸ್ತುಥಾಂತಿಮಾಂಶಃ ಸ್ಯಾದಪಸವ್ಯೆ ವಿಪರ್ಯಾತ್ ॥೯೦॥

ಸವ್ಯೆ ದೇಹಾದಿಕಂ ಚಾಪಸವ್ಯೆ ಜೀವಾಧಿಕಂ ಮುನೆ ।
ವಿಗಣಯ್ಯ ಬುಧ್ಯೈರ್ವಾಚ್ಯಂ ಫಲಂ ತದನುಸಾರತಃ ॥೯೧॥

ಇಲ್ಲಿ ಸವ್ಯ ಚಕ್ರದಲ್ಲಿ ಆದಿ ಅಂಶ ದೇಹ ಹಾಗೂ ಅಂತಿಮ ಅಂಶಜೀವ ಎನ್ನಿಸಿಕೊಳ್ಳುತ್ತವೆ. ಅಪಸವ್ಯ ಚಕ್ರದಲ್ಲಿ ಇದರ ವಿಪರೀತ ಕ್ರಮದಲ್ಲಿ ಆದಿ ಜೀವ, ಅಂತಿಮ ದೇಹವೆಂದು ಪರಿಗಣಿಸುವುದು ಆದ್ದರಿಂದ ಸವ್ಯದಲ್ಲಿ ದೇಹಾಧಿಕ ಗಣನಾ ಹಾಗೂ ಅಪಸವ್ಯದಲ್ಲಿ ಜೀವಾಧಿಕವೆಂದು ಗಣಿಸಿ ಫಲಾದೇಶ ಹೇಳುವುದು.

## ತ್ರಿವಿಧ ಚಕ್ರಗತ

ತ್ರಿವಿಧಾ ಕಾಲಚಕ್ರೆ ತು ರಾಶಿನಾಂ ಗತಿರೀರಿತಾ ।
ಮಂಡೂಕಿ – ಮರ್ಕಟಿ ಸಿಂಹಾವಲೋಕನಸಮಾಹುಯಾ ॥೯೨॥

ರಾಶಿಮುಲ್ಲಂಘಸ್ಯ ಗಮನಂ ಮಂಡೂಕಿ ಗತಿರುಚ್ಯತೆ ।
ತತಸ್ತು ಪೃಷ್ಠಗಸನಂ ಮರ್ಕಟೀ ಸಂಜ್ಞಿಕಾ ಮತೌ ।
ಬಾಣಾಚ್ಚ ನವಪರ್ಯಂತಂ ಗತಿಃ ಸಿಂಹಾವಲೋಕನಮ್ ॥೯೩॥

ಕಾಲಚಕ್ರದಲ್ಲಿ ರಾಶಿಗಳಲ್ಲಿ 3 ವಿಧ ಗತಿ ಹೇಳಲಾಗಿದೆ. ಅವು ಮಂಡೂಕಿ – ಮರ್ಕಟ – ಸಿಂಹಾವಲೋಕನ ಹೆಸರಿನಿಂದ ಕರೆಯಲ್ಪಡುತ್ತವೆ.

ಮಂಡೂಕಿ: ಒಂದು ರಾಶಿ ಉಲ್ಲಂಘಿಸಿ (ಬಿಟ್ಟು – ಹಾರಿ) ಮುಂದೆ ಹೋಗುವುದು ಮಂಡೂಕಿ. ಮರ್ಕಟ: ರಾಶಿಯಿಂದ ಹಿಂದಿನ ರಾಶಿಗೆ ಸರಿಯುವುದು ಮರ್ಕಟ ಗತಿ.

ಸಿಂಹಾವಲೋಕನ: ಐದರಿಂದ ಒಂಭತ್ತರವರೆಗೆ ಸರಿಯಾಗಿ ಸಾಗುವುದು ಸಿಂಹಾವಲೋಕನ.

ಮಂಡೂಕಿ ತ್ವಂಗನಾಕರ್ಕಟಯೋರ್ಹರೊ ನೃಯುಗ್ಮಯೋಃ ।
ಕುಲೀರಸಿಂಹಯೋರೇವಂ ಮರ್ಕಟೀಗತಿರುಚ್ಯತೆ ॥೯೪॥

ಸೈಂಹಿಗತಿರ್ಜ್ಞಾಪಾಲ್ಯೋಸ್ತು ಧ್ವನಿ ಕ್ರಿಯಭಯೋಸ್ತಥಾ ।
ಸರ್ವಮೇತದಭಿಜ್ಞಾಯ ವಕ್ತವ್ಯಂ ತದ್ ದಶಾಫಲಂ ॥೯೫॥

ಕನ್ಯಾದಿಂದ ಕರ್ಕ ಹಾಗೂ ಸಿಂಹದಿಂದ ಮಿಥುನ, ಮಿಥುನಕ್ಕೆ ಮಂಡೂಕಿ ಗತಿಯಾದರೆ (ಇಲ್ಲದ ಮಧ್ಯವರ್ತಿಯಾಗಿ ಉಲ್ಲಂಘನವಾಗಿದೆ). ಸಿಂಹದಿಂದ ಕರ್ಕಕ್ಕೆ ಬರುವುದು – ಮರ್ಕಟ ಗತಿ – ಉಲ್ಲಂಘನವಿಲ್ಲದೆ ವಿಪರೀತ ಗತಿಯಲ್ಲಿ ಹಿಂದಿನ ರಾಶಿಗೆ ಬಂದಿದೆ. ಮೀನದಿಂದ ವೃಶ್ಚಿಕ (ಮೀನ, ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ) ಹಾಗೂ ಮೇಷದಿಂದ ಧನು (ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು) ಈ ರೀತಿ ಕ್ರಮದಿಂದ ಚಲಿಸುವುದು. ಸಿಂಹಾವಲೋಕನ ಈ ಗತಿಯಿಂದಲೇ ಫಲಾದೇಶ.

## ಗತಿ ದಶ ದಶಾ ಫಲ

ಸವ್ಯಚಕ್ರೇ ತು ಮಂಡೂಕ್ಯಾಂ ಕಷ್ಟಂಬಂಧುಗಣೆ ಸ್ಮೃತಮ್ ।
ಮಾತಾ ಪಿತ್ರೈರ್ವಾಯುಧಾಗ್ನಿ ಜ್ವರಸ್ತೇನ ವಿಷಾದ್ ಭಯಮ್ ॥೯೬॥

ಹರ್ಯಕ್ಷದ್ದಂದುಯೋಸ್ತತ್ರ ಜನನ್ಯಾ ವಾತ್ಮನೋ ಮೃತೀವಮ್ ।
ರಾಜತಃ ಸನ್ನಿಪಾತಾದ್ ಭೀತಿಂ ಪ್ರಾಜ್ಞೋ ವಿನಿರ್ದೇಶೇತ್ ॥೯೭॥

ಸವ್ಯ ಚಕ್ರ ಮಂಡೂಕಿ ಗತಿ ದಶಾದಲ್ಲಿ ಬಂಧು – ಬಾಂಧವರಿಗೆ ಕಷ್ಟ. ಮಾತಾ, ಪಿತರಿಗೆ ಅಸ್ತ್ರ, ಅಗ್ನಿ, ಜ್ವರ ಹಾಗೂ ಕಳ್ಳರಿಂದ ವಿಷದಿಂದ ಭಯ. ಸಿಂಹದಿಂದ ಮಿಥುನದವರೆಗಿನ ಮಂಡೂಕ ದಶಾದಲ್ಲಿ ತಾಯಿಯ ಅಥವಾ ತನ್ನದೇ ಮರಣ – ಇಲ್ಲವೆ ಸನ್ನಿಪಾತರೋಗ ರಾಜರಿಂದ ಭಯ – ಮರಣ ಸಂಭವ.

ಸಸ್ಯಸಂಪತ್ ಪಶೂನಾಂ ತು ನಾಶಶ್ಚ ನಿಧನಂ ಪಿತುಃ ।
ತಾದೃಶಾಂ ವಾಪ್ಯಲಸತಾ ಸವ್ಯಾಯಾಂ ಮರ್ಕಟೀಗತೆ ॥೯೮॥

ಸವ್ಯಚಕ್ರದ ಮರ್ಕಟ ಗಮನದ ರಾಶಿಯ ದಶಾದಲ್ಲಿ ಸಸ್ಯ ಸಂಪತ್ತಿ (ಧನ ಧಾನ್ಯ ಕೂಡ) ಪಶುಗಳಿಗೆ ವಿನಾಶ. ತಂದೆ ಅಥವಾ ತಂದೆ ಸಮಾನ ವ್ಯಕ್ತಿಗೆ ಮರಣ ಹಾಗೂ ದೇಹಾಲಸ್ಯ ಹೇಳುವುದು.

ಸಿಂಹಾವಲೋಕನೆ ಸವ್ಯೆ ಪಶುಭಿರ್ಬಂಧು ಪೀಡನಮ್ ।
ಮಿತ್ರ ಪ್ರೇಮಾದಿ ವಿಲಯಃ ಪಾತಃ ಕೃಪಾದಿಕೇಥವಾ ॥೯೯॥

ಪತನಂ ಯಾನತೋ ವಾಗ್ರೀ ಗರಲಾಯಧತೋ ಭಯಮ್ ।
ಸ್ಥಾನಕ್ಷಯೋ ಜ್ವರರುಜಾ ಪೀಡನಂ ಚ ನೃಣಾಂ ಭವೇತ್ ॥೧೦೦॥

ಸವ್ಯಚಕ್ರದ ಸಿಂಹಾವಲೋಕನ ದಶಾದಲ್ಲಿ ಪಶುಗಳಿಗೆ ಭಯ, ಬಂಧು – ಬಾಂಧವರಲ್ಲಿ ಪೀಡೆ, ಮಿತ್ರ ಸ್ನೇಹ ವಿನಾಶ, ತಗ್ಗು ಸ್ಥಳಗಳು, ಬಾವಿ ಆದಿಯಲ್ಲಿ

ಬೀಳುವಿಕೆ. ವಿಷ ಶಸ್ತ್ರ ಭಯ, ಜ್ವರ ಪ್ರಕೋಪ, ಸ್ಥಾನದಲ್ಲಿ ಬಾಧೆ – ಸ್ವಸಹ ವ್ಯಕ್ತಿಗಳಿಗೆ ಪೀಡೆ ಹೇಳುವುದು.

ಸವ್ಯೇತರಸ್ಥ ಮಾಂಡೂಕ್ಯಂ ಜಾಯಾಪುತ್ರಾದಿ ಪೀಡನಮ್ ।
ಹಿಂಸ್ರಾಂಜೀವಾದ್ ಭಯಂ ಸ್ಥಾನವಿನಾಶಂ ಚ ಜ್ವರಂ ದಿಶೇತ್ ॥೧೦೧॥

ಮಾರ್ಕಟ್ಯಾಂ ತು ಗತೌ ಭೀತಿರ್ಜಲಾತ್ ಸ್ಥಾನಚ್ಯುತಿಸ್ತಥಾ ।
ರಾಜಕೋಪಃ ಪಿತೃ ಮೃತಿಃ ಸಂಚಾರಃ ಕಾನನೆ ಭವೇತ್ ॥೧೦೨॥

ಸಿಂಹಾವಲೋಕನೆ ಸವ್ಯೇತರೆ ಸ್ಥಾನಚ್ಯುತಿ ಸ್ತಥಾ ।
ನಿಧನಂ ಸ್ವಪಿತುಃ ಕಿಂವಾ ತತ್ಸಮಸ್ಯ ಪ್ರಜಾಯತೆ ॥೧೦೩॥

ಅಸವ್ಯ (ಅಪಸವ್ಯ)ಕಸ್ಥ ಮಂಡೂಕಿ ಗತಿಯ ರಾಶಿಯ ದಶಾದಲ್ಲಿ ಸ್ತ್ರೀ ಪುತ್ರಗಳಿಗೆ ಕಷ್ಟ. ಹಿಂಸ್ರ ಪಶುಗಳಿಂದ (ನರರು ಆಗಬಹುದು) ಭಯ, ಸ್ಥಾನ ನಾಶ, ಜ್ವರ ಭಯ – ಮರ್ಕಟ ಗತಿಯ ರಾಶಿಗಳ ದಶಾದಲ್ಲಿ ಜಲ ಭಯ, ಸ್ಥಾನ ಚ್ಯುತಿ, ರಾಜಕೋಪ ತಂದೆಯ ಮೃತ್ಯು ಹಾಗೂ ಅಡವಿಯಲ್ಲಿ ವಿನಾಕಾರಣ ಸಂಚಾರ. ಅಪಸವ್ಯಸ್ಥ ಸಿಂಹಾವಲೋಕನ ರಾಶಿ ದಶಾದಲ್ಲಿ ಸ್ಥಾನ ಚ್ಯುತಿ, ತಂದೆ ಸದೃಶ್ಯ ವ್ಯಕ್ತಿಗಳ ಮೃತ್ಯು, ಗುರುಗಳ ಮೃತ್ಯು.

## ವಿಶೇಷ ಫಲ

ಮೀನಾತ್ ತು ವೃಶ್ಚಿಕೆ ಯಾತೆ ಜ್ವರೋ ಭವತಿ ನಿಶ್ಚಿತಮ್ ।
ಕನ್ಯಾತಃ ಕರ್ಕಾಟೆ ಯಾತೆ ಬಂಧು ಬಾಂಧವ ನಾಶನಮ್ ॥೧೦೪॥

ಸಿಂಹಾತ್ತು ಮಿಥುನೆ ಯಾತೆ ಸ್ತ್ರೀಯೋ ವ್ಯಾಧಿರ್ಭವೇದ್ ಧ್ರುವಮ್।
ಕರ್ಕಾಟತ್ತಾ ಹರೌ ಯಾತೆ ವಧೊ ಭವತಿ ದೇಹಿನಾಮ್ ॥೧೦೫॥

ಪಿತೃಬಂಧು ಮೃತಿಂ ವಿದ್ಯಾಚ್ಚಾ ಪಾನ್ಮೆಷೆ ಗತೆ ಪುನಃ ।
ಕ್ರೂರ ಗ್ರಹಯುತೆ ಭೀತಿಂ ಸೌಮ್ಯಯುಕ್ತೆ ಶುಭಂ ದಿಶೇತ್ ॥೧೦೬॥

ಮೀನದಿಂದ ವೃಶ್ಚಿಕ ದಶಾದಲ್ಲಿ ಜ್ವರಭಯ ಹಾಗೂ ಕನ್ಯಾದಿಂದ ಕರ್ಕದವರೆಗೆ ಚಲನೆ, ಬಂಧು–ಬಾಂಧವರ ವಿನಾಶ, ಸಿಂಹದಿಂದ ಮಿಥುನದಲ್ಲಿ ಪರಸ್ತ್ರೀಯಿಂದ ರೋಗ ಹಾಗೂ ಕರ್ಕದಿಂದ ಸಿಂಹ ಸ್ವಯಂ ದೇಹ ಮೃತ್ಯು, ಧನುದಿಂದ ಮೇಷದ ವರೆಗೆ ತಂದೆಯ ತಮ್ಮ(ಚಿಕ್ಕಪ್ಪ)ನ ಮೃತ್ಯು, ಪಾಪಗ್ರಹ ಸಂಯೋಗದಿಂದ ಪಾಪಕೃತ್ಯ, ಶುಭ ಸಂಯೋಗದಿಂದ ಶುಭ ಫಲಾದೇಶ ಮಾಡುವುದು.

## ಪುನಃ ವಿಶೇಷ ಫಲ

ಕಾಲಚಕ್ರದಶಾಯಾಸ್ತು ಫಲಂ ಯಚ್ಚ ಶುಭಾಶುಭಮ್ ।
ತದ್ ವಾಚ್ಯಂ ರಾಶಿಖಗಯೋಃ ಪೂರ್ವಾದ್ಯಾಶಾ ವಿಭಾಗತಃ ॥೧೦೭॥

ಇತ್ಥಂ ಮುನೇ ಸಮಸ್ತಾನಾಂ ತದ್ ಶಾವತ್ಸರೆ ನೃಣಾಮ್ ।
ಯಥಾ ನಿರ್ದಿಷ್ಟಮೇವ ಸ್ಯಾತ್ ಫಲಂ ಭಾಗೆ ತು ತದ್ದಿಶಃ ॥೧೦೮॥

ಹೇ ಮುನಿಯೆ, ಕಾಲಚಕ್ರದಶಾ ಯಾವ ಶುಭಾಶುಭ ಫಲ ಹೇಳಲಾಗಿದೆ. ಅದು ರಾಶಿ ಹಾಗೂ ಗ್ರಹ ಎರಡರ ದಶಾನುಸಾರ ತಿಳಿಯುವುದು – ಅದನ್ನೇ ಮುಂದೆ ಹೇಳುತ್ತೇನೆ.

ಕನ್ಯಾತಃ ಕರ್ಕಟೆ ಯಾತೆ ಪೂರ್ವಭಾಗೆ ಮಹತ್ ಫಲಮ್ ।
ಉತ್ತರಂ ದೇಶಮಾಶ್ರಿತ್ಯ ಶಾಸ್ತಾ ಯಾತ್ರಾ ಭವಿಷ್ಯತಿ ॥೧೦೯॥

ಸಿಂಹಾತ್ತು ಮಿಥುನೆ ಯಾತೆ ಪೂರ್ವ ಭಾಗಂ ಪರಿತ್ಯಜೇತ್ ।
ಕಾರ್ಯಾಂತೋಪಿ ಚ ನೈಋತ್ಯಾಂ ಸುಖಂ ಯಾತ್ರಾ ಭವಿಷ್ಯತಿ ॥೧೧೦॥

ಕರ್ಕಾಟಾತ್ತು ಗತೆ ಸಿಂಹೆ ಕಾರ್ಯಹಾನಿರವಾಗ್ ದಿಶಿಃ ।
ದಕ್ಷಿಣಾ ದಿಶಾ ಮಾಶ್ರಿತ್ಯ ಪ್ರತಿಚ್ಯಾಂ ಗಮನಂ ಭವೇತ್ ॥೧೧೧॥

ಮೀನಾತ್ತು ವೃಶ್ಚಿಕೆ ಯಾತ್ ಉದೀಚ್ಯಾಂ ಯಾತಿ ಸಂಕಟಮ್ ।
ಚಾಪಾತ್ತು ಮಕರೆ ಯಾತೆ ಸಂಕಟಂ ಸ್ಯಾನ್ ಸಂಶಯಃ ॥೧೧೨॥

ಚಾಪಾನ್ಮೆಷೆ ತು ಯಾತ್ರಾಯಾಂ ಗದೋ ಬಂಧೋ ಮೃತಿಂ ಭವೇತ್ ।
ಸುಖಂ ಸಂಪತ್ ಕಲತ್ರಾಪ್ತಿರಪಿ ಯಾತೆ ತು ವೃಶ್ಚಿಕೆ ॥೧೧೩॥

ಹರೇಃ ಕುಲಿರಿಕೆ ಯಾತೆ ತ್ಯಾಜ್ಯಾಶಾ ಪಶ್ಚಿಮಾ ಬುಧ್ಯೆಃ ।
ಸೌಮ್ಯಯೋಗೆ ಶುಭಂ ಕ್ರೂರೆ ತ್ವಶುಭಂ ಫಲಮಾದಿಶೇತ್ ॥೧೧೪॥

ಕನ್ಯಾದಿಂದ ಕರ್ಕದವರೆಗೆ ದಶಾನಾಥ ಸಂಚಾರ ಪೂರ್ವ ದೇಶದಲ್ಲಿ ಶುಭ ಫಲ. ಈ ಸಮಯದಲ್ಲಿ ಉತ್ತರದ ಯಾತ್ರೆ ಪ್ರಶಸ್ತವಾಗಿರುತ್ತದೆ. ಆದರೆ ದಕ್ಷಿಣ ಹಾಗೂ ಪಶ್ಚಿಮ ಯಾತ್ರೆ ಶುಭಕರವಲ್ಲ.

ಸಿಂಹದಿಂದ ಮಿಥುನದವರೆಗೆ ಇದ್ದ ದಶಾದಲ್ಲಿ ಯಾತ್ರೆ ತ್ಯಾಜ್ಯನೀಯ – ಕಾರ್ಯಾಂತದಲ್ಲಿ ನೈಋತ್ಯ ಕೋಣೆಯಲ್ಲಿ ಯಾತ್ರೆ ಶುಭಪ್ರದ. ಕರ್ಕದಿಂದ ಸಿಂಹಕ್ಕೆ

ಹೋಗುವಾಗ ದಕ್ಷಿಣ ದಿಶಾದ ಯಾತ್ರೆ ಕಾರ್ಯಹಾನಿ ತರುತ್ತದೆ. ದಕ್ಷಿಣದಿಂದ ಪಶ್ಚಿಮದ ಕಡೆಗೆ ಹೋಗಬೇಕಾಗುತ್ತದೆ. ಮೀನದಿಂದ ವೃಶ್ಚಿಕದವರೆಗೆ ಉತ್ತರ ದಿಕ್ಕು ಸಂಕಟಪ್ರದ. ಧನುವಿನಿಂದ ಮಕರ ನಿಸ್ಸಂದೇಹವಾಗಿ ಯಾತ್ರೆ ಸಂಕಟಕರವಾಗುತ್ತದೆ. ಧನುದಿಂದ ಮೇಷ ಯಾತ್ರೆ ಮಾಡುವುದು ಕೊನೆ ಹಾಗೂ ಮೃತ್ಯುವಿಗೆ ಆಹ್ವಾನ ವಿದ್ದಂತೆ. ಧನುದಿಂದ ವೃಶ್ಚಿಕ ಯಾತ್ರೆ ಸುಖದಾಯಕ, ಸಮೃದ್ಧಿ, ಸ್ತ್ರೀ ಪ್ರಾಪ್ತಿ. ಸಿಂಹದಿಂದ ಕರ್ಕ – ಪಶ್ಚಿಮ ದಿಕ್ಕು ತ್ಯಾಜ್ಯ – ಆದರೂ ಶುಭಗ್ರಹ ಸಂಯೋಗ ಶುಭಪ್ರದ, ಅಶುಭಗ್ರಹ ಸಂಯೋಗ ಅಶುಭಪ್ರದವಾಗುತ್ತದೆ.

## ಕಾಲ ಚಕ್ರಾಂಶ ಫಲ

ಚೌರಃ ಶೂರಃ ಕ್ರಿಯಾಂಶೆ ಸ್ಯಾದ್ ವೃಷಭಾಂಶೆ ಶ್ರೀಯಾನ್ವಿತಃ ।
ಯುಗ್ಮಾಂಶೆ ಜ್ಞಾನ ಸಂಪನ್ನಃ ಕುಲಿರಾಶೆ ಭವೆನ್ನೃಪಃ ॥೧೧೫॥

ಸಿಂಹಾಂಶೆ ರಾಜಪೂಜ್ಯಃ ಸ್ಯಾದಂಗನಾಂಶೆ ಬುಧೊ ಭವೇತ್ ।
ತುಲಾಂಶೆ ರಾಜಮಂತ್ರಿ ಸ್ಯಾದ್‌ಲ್ವಾಂಶೆ ನಿರ್ಧನೋ ಜನಃ ॥೧೧೬॥

ಚಾಪಾಂಶೆ ಜ್ಞಾನ ಸಂಯುಕ್ತೊ ಮಕರಾಂಶೆ ತು ಪಾಪಕೃತ್ ।
ಕುಂಭಾಂಶೆ ಚ ವಣಿಕ್‌ಕರ್ಮಾ ಮೀನಾಂಶೆ ವಸುಧಾನ್ಯವಾಗ್ ॥೧೧೭॥

ಕಾಲ ಚಕ್ರಾಂಶ ಸಾರದಂತೆ ಮೇಷಾಂಶದಲ್ಲಿ ಜನನವಾದರೆ ಶೂರನು, ಕಳ್ಳನು, ವೃಷಭಾಂಶದಲ್ಲಿ ಲಕ್ಷ್ಮಿವಂತನು, ಮಿಥುನಾಂಶದಲ್ಲಿ – ಜ್ಞಾನಿಯೂ, ಕರ್ಕಾಂಶ ದಲ್ಲಿ ರಾಜನು, ಸಿಂಹಾಂಶದಲ್ಲಿ ರಾಜಮಾನ್ಯನು, ತುಲಾಂಶದಲ್ಲಿ ರಾಜ್ಯಮಾನ್ಯನು, ಮಂತ್ರಿಯೂ, ವೃಶ್ಚಿಕದಲ್ಲಿ ನಿರ್ಧನನು, ಧನುವಿನ ಅಂಶದಲ್ಲಿ ಜ್ಞಾನ ಸಂಪನ್ನನು, ಮಕರಾಂಶದಲ್ಲಿ ಪಾಪಕಾರಿಯೂ, ಕುಂಭಾಂಶದಲ್ಲಿ ವ್ಯಾಪಾರಿಯೂ, ಮೀನಾಂಶ ದಲ್ಲಿ ಧನಧಾನ್ಯ ಸಂಪನ್ನನೂ, ಕರ್ಕಾಂಶದಲ್ಲಿ ಜ್ಞಾನಿಯೂ, ರಾಜ್ಯಮಾನ್ಯನೂ ಆಗುವನು.

## ದೇಹ ಜೀವಸ್ಥಿತ ಫಲ

ಸೂರ್ಯಾಗು ಭೌಮ ಶನಿಭಿರ್ದೇಹೊ ಜೀವೋಥವಾನ್ವಿತಃ ।
ಏಕೈಕಯೋಗೆ ಮರಣಾ ಬಹುಯೋಗೆ ತು ಕಾ ಕಥಾ ॥೧೧೮॥

ದೇಹೆ ಪಾಪೈರ್ಯುತೆ ರೋಗೋ ಜೀವೊ ತ್ರೈಸ್ತು ಯುತೇತಿಭಿಃ ।
ಮನೋ ವ್ಯಥಾ ಚ ರುಗ್‌ದ್ವಾಮ್ಯಾಮ ಪಮೃತ್ಯುಸ್ತ್ರೀಭಿಃ ಸ್ಮೃತಾಃ
॥೧೧೯॥

ಚತುರ್ಭಿಸ್ತು ಭವೇನ್ಮೃತ್ಯುರ್ನಾತ್ರ ಕಂಶ್ಚನ ಸಂಶಯಃ ।
ದೇಹೆ ಜೀವೇ ತೂ ಭಯತ್ರ ಪಾಪಗ್ರಹಯುಗ್ರುತಿರ್ಯದಾ ॥೧೨೦॥

ಸ್ತೆನಾದಿತೋ ರಾಜತೋ ವಾ ಸ್ಯಾದ್ ಭೀಭೃತ್ಯುರಪಿ ಧ್ರುವವಮ್ ।
ಸೂರ್ಯೇ ತ್ವನಲಜಾ ಭೀತಿಃ ಕ್ಷೀಣಚಂದ್ರೆ ತು ವಾರಿಭೀಃ ॥೧೨೦॥

ಪೀಡಾಯುಧಾದ್ ಭೂಮಿಜೇತು ವಾತಾರ್ತಿಃ ಶಶಿಜೆ ಮತಾ ।
ಮಂದೆ ಗುಲ್ಮಾಮಯೋಗೌತು ಗರಶಾದ್‌ಭಿಃ ಶಿಖಿನ್ಯಾಪಿ ॥೧೨೨॥

ಶಶಿಜೋವಾ ಗುರುಃ ಶುಕ್ರೋ ದೇಹೆ ಜೀವ್ರೋಥವಾ ಗತಃ ।
ಸೌಖ್ಯ ಸಂಪತ್ತಿದಾಸ್ತದ್ವದ್ ವ್ಯಾಧಿಶೋಕಾಪಹಾಃ ಸಮೇ ॥೧೨೩॥

ಶುಭಾಶುಭೈಸ್ತತ್ರ ಯುಕ್ತೆ ಶುಭಾ ಪುಭಫಲಂ ಸ್ಮೃತಮ್ ।
ಮಿಶ್ರೈರ್ಮಿಶ್ರ ಫಲಂ ವಾಚ್ಯಮಿತಿ ಸರ್ವತ್ರ ನಿಶ್ಚಿತಮ್ ॥೧೨೪॥

ಸೂರ್ಯ, ಮಂಗಳ, ರಾಹು, ಶನಿ ಇವರಲ್ಲಿ ಯಾರೊಬ್ಬರೊಡನೆ ದೇಹಾಧಿಪ, ಜೀವಾಧಿಪರು ಬಂದರೆ ಮರಣ. ಅದೇ ದೇಹ, ಜೀವಗಳು ಬಹಳಷ್ಟು ಗ್ರಹಗಳೊಡನಿರಲು – ನಿಶ್ಚಿತವಾಗಿ ಮರಣವೆಂದು ಹೇಳುವುದು – ದೇಹಸ್ಥಾನದಲ್ಲಿ ಅಧಿಕ ಪಾಪಗ್ರಹಗಳಿದ್ದರೆ ರೋಗ, ಜೀವಸ್ಥಾನದಲ್ಲಿ ಅಧಿಕ ಪಾಪಗ್ರಹಗಳಿದ್ದರೆ ಅತಿಭಯ – ಈ ಗ್ರಹಗಳು (ಜೀವ, ದೇಹ) ಪಾಪಗ್ರಹಗಳ ಜೊತೆಗಿರಲು ಮನೋಭಯ ಹಾಗೂ ರೋಗ ಮೇಲಿನ ಪಾಪಗ್ರಹಗಳಲ್ಲಿ ಮೂರು ಪಾಪಗ್ರಹಯುಕ್ತವಾದರೆ - ಅಪಮೃತ್ಯು. ನಾಲ್ಕು ಪಾಪಗ್ರಹ ಯುಕ್ತವಾದರೆ ನಿಸ್ಸಂದೇಹ ಮೃತ್ಯು, ಜೀವ, ದೇಹ ಎರಡರಲ್ಲಿಯೂ ಪಾಪಗ್ರಹ ಸಂಯೋಗವಾದರೆ ರಾಜನ (ಸರ್ಕಾರ) ಮುಖಾಂತರ ಕಷ್ಟ, ಭಯ ಹಾಗು ಮರಣವೂ ನಿಶ್ಚಿತವೆಂದು ಹೇಳುವುದು – ದೇಹ, ಜೀವಯಾನ ಸ್ಥಾನದಲ್ಲಾದರೂ – ಸೂರ್ಯನಿದ್ದರೆ ಅಗ್ನಿ ಭಯ, ಕ್ಷೀಣ ಚಂದ್ರನಿರಲು ಜಲಭಯ, ಮಂಗಳನಿದ್ದರೆ ಅಸ್ತ್ರದಿಂದ ಪೀಡಾ, ಬುಧನಿದ್ದರೆ ವಾತರೋಗ ಜನ್ಯ ಪೀಡೆ, ಶನಿ – ದೇಹ ಅಥವಾ ಜೀವಗತವಾದರೆ ಗುಲ್ಮ ರೋಗ – ರಾಹು ಅಥವಾ ಕೇತುಗಳಿದ್ದರೆ ಪರರಿಂದ ವಿಷಭಯ ಹೇಳುವುದು. ದೇಹ, ಜೀವ ಸ್ಥಾನದಲ್ಲಿ ಬುಧ, ಗುರು, ಶುಕ್ರ – ವಿಚಿತ್ರ ಸೌಖ್ಯ ಹಾಗೂ ಅನೇಕ ವಿಧ ಸಂಪತ್ತು ದೊರೆಯುತ್ತದೆ ಹಾಗೂ ಶೋಕನಾಶಕವಾಗಿವೆ. ದೇಹ, ಜೀವ ಸ್ಥಾನದಲ್ಲಿ ಶುಭ ಅಥವಾ ಅಶುಭ ಗ್ರಹಗಳಿರಲು – ಶುಭಾಶುಭ ಫಲಗಳೇ. ಮಿಶ್ರ ಗ್ರಹಗಳಿದ್ದರೆ ಮಿಶ್ರಫಲಪ್ರದ ಈ ರೀತಿ ಜೀವ, ದೇಹದ ಫಲ ಹೇಳುವುದು.

ಪಾಪಕ್ಷೇತ್ರ ದಶಾಮಧ್ಯೇ ದೇಹ ಜೀವೌ ತು ದುಃಖಿತೌ ।
ಶುಭಕ್ಷೇತ್ರ ದಶಾಯಾಂ ತು ಶುಭಮತ್ರನ ಸಂಶಯಃ ॥೧೨೫॥

ಶುಭಾ ಶುಭಗ್ರಹಯುತಾ ಸತ್ ಸದ್ರಾಶಿಗಾ ದಶಾ ।
ಕ್ರಮಾನ್ಮಿಶ್ರ ಫಲಾ ಜ್ಞೇಯಾಜಾತಕಸ್ಯ ಸುಧಿಜನೈಃ ॥೧೨೬॥

ಪಾಪಗ್ರಹಗಳ ರಾಶಿ ದಶಾದಲ್ಲಿ ದೇಹ, ಜೀವ ಅತ್ಯಧಿಕ ದುಃಖ – ಶುಭಗ್ರಹ ರಾಶಿ ದಶಾದಲ್ಲಿ ನಿಸ್ಸಂದೇಹ ಶುಭ ಫಲ. ಶುಭಗ್ರಹಯುಕ್ತ ಪಾಪರಾಶಿ ದಶಾ ಹಾಗೂ ಪಾಪಗ್ರಹಯುಕ್ತ ಶುಭ ರಾಶಿ ದಶಾ ಮಿಶ್ರಫಲವಾಗುತ್ತದೆ.

ಜನನಾವಸರೇ ನೃಣಾಂ ರಾಶಿಯೋಗ ಲಗ್ನಗೇ ಭವೇತ್ ।
ಕಾಲಚಕ್ರ ದಶಾಯಾಂ ತು ತಸ್ಯ ಸೌಖ್ಯಂ ನಿರಾಮಯಮ್ ॥೧೨೭॥

ಸೌಮ್ಯೇ ಪೂರ್ಣ ಸುಖಂ ಕ್ರೂರೇ ತನೌ ವ್ಯಾದಿಸಮದ್‌ಭವಃ ।
ಸ್ವತುಂಗ ಗಗ್ರಹೈರ್ಯುಕ್ತೇ ಲೋಕಮಾನ್ಯೋ ನೃಪೋ ಭವೇತ್ ॥೧೨೮॥

ಜನ್ಮಸಮಯ ಯಾವ ರಾಶಿ ಲಗ್ನಗತವಾಗಿದೆಯೋ ಅದರ ಕಾಲಚಕ್ರ ದಶಾದಲ್ಲಿ – ನಿರಾಮಯ ಸೌಖ್ಯ ಸೂಚಕ, ಅದು ಶುಭರಾಶಿಯಾಗಿದ್ದರೆ ಪೂರ್ಣ ಸುಖ, ಪಾಪರಾಶಿಯಾಗಿದ್ದರೆ ಶರೀರ ವ್ಯಾಧಿ, ಭಯ – ಅದು ತನ್ನ ಉಚ್ಚಸ್ಥಾನ ಗತವಾಗಿದ್ದರೆ ಆ ಜಾತಕ ಲೋಕಮಾನ್ಯನಾಗುತ್ತಾನೆ.

ವಿತ್ತಭಾವಗರಾಶೇಸ್ತು ಫಲಂ ಚಕ್ರದಶೋದ್ಭವಮ್ ।
ಸದ್ಭೋಜ್ಯಾಪ್ತಿಶ್ಚಾರ್ಥಲಾಭಃ ಸ್ತ್ರೀಸೂನು ಸುಖ ಸಂಭವಃ ॥೧೨೯॥

ವಾಗ್‌ವೈದಗ್ಧ್ಯಂ ಚಸದ್ವಿದ್ಯಾ ಭವೇತ್ ಸದ್ಭಿಶ್ಚ ಸಂಗತಿಃ ।
ಸೌಮ್ಯರಾಶೌ ಫಲಂ ತ್ವೇವಂ ಪಾಪರಾಶೌತ ದನ್ಯಥಾ ॥೧೩೦॥

ದ್ವಿತೀಯ ಭಾವಗತ ರಾಶಿ ಚಕ್ರದಶಾದಲ್ಲಿ ಒಳ್ಳೆಯ ಊಟ, ಅರ್ಥಪ್ರಾಪ್ತಿ, ಸ್ತ್ರೀ ಸುಖ, ಪುತ್ರ ಸುಖ, ವಾಣಿ ವಿಲಾಸ ಸದ್‌ವಿದ್ಯಾ ವೃದ್ಧಿ ಹಾಗೂ ಸಜ್ಜನರ ಸಂಗಡ ಸಂಗತಿ – ಘಟಿಸುತ್ತದೆ. ಈ ಫಲಗಳೆಲ್ಲ ಶುಭ ರಾಶಿ ಸಂಬಂಧವಾದುದು. ಪಾಪರಾಶಿಯಲ್ಲಿ ವಿಪರೀತ ಫಲ, ಸಜ್ಜನ ಸಂಗವಿದ್ದಲ್ಲಿ ದುರ್ಜನ ಸಂಗ ಈ ರೀತಿ ನೋಡುವುದು.

ಭ್ರಾತೃಭಾವಗರಾಶೇಸ್ತು ಫಲಂ ಚಕ್ರ ದಶೋದ್ಭವಮ್ ।
ಸುಖಂ ಭ್ರಾತೃಃ ಶೂರತಾ ಚ ಧೀರತಾಪಿ ಸುಖಂ ಭೃಶಮ್ ॥೧೩೧॥

ಹೇಮಾಲಂಕಾರಸದ್ವಾಸೊ ರಾಜಸಮ್ಮಾನ ಸಂಭವಮ್ ।
ಫಲಮೇವಂ ಸೌಮ್ಯರಾಶೌ ಪಾಪರಾಶೌ ತವನ್ಯಥಾ ॥೧೩೨॥

ತೃತೀಯ ಭಾವಸ್ಥ ರಾಶಿಯ ಚಕ್ರ ದಶಾದಲ್ಲಿ ಬಂದರೆ ಅಣ್ಣಾ, ತಮ್ಮಂದಿರಿಂದ ಸೌಖ್ಯ, ಧೀರತೆ, ಅತ್ಯಧಿಕ ಸುಖ ಪ್ರಾಪ್ತಿ, ಸುವರ್ಣಾಲಂಕಾರ ಸುಂದರ ವಸ್ತ್ರ – ರಾಜ ಸಮಾಗಮ. ಇದು ಶುಭಗ್ರಹ ರಾಶಿಯಲ್ಲಿ ಹೆಚ್ಚು ಫಲಪ್ರದ, ಅಶುಭ ರಾಶಿಯಲ್ಲಿ – ಸ್ವಲ್ಪ ಅಶುಭವೆ.

ಭಾವೆ ಚತುರ್ಥೆಯೋ ರಾಶಿಸ್ತಸ್ಯ ಚಕ್ರದಶಾ ಯದಾ ।
ತದಾ ನೈರುಜ್ಯ ಮರ್ಥಾಪ್ತಿರ್ಬಂಧು ಸೌಖ್ಯಂ ವಿಶೇಷತಃ ॥೧೩೩॥

ಸದ್ವಸ್ತ್ರಯಾನಜಂ ಸೌಖ್ಯಂ ರಾಜ್ಯಭೂಗೇಹಜಂ ತಥಾ ।
ಸೌಮ್ಯಭೆ ತು ಶುಭಂ ಭೋದ್ಯಂ ಪಾಪಕ್ಷೆ ತದ್ವಿ ಪರ್ಯಯಮ್ ॥೧೩೪॥

ನಾಲ್ಕನೇ ಭಾವಸ್ಥ ರಾಶಿಗತ ದಶಾದಲ್ಲಿ ನೈರುಜ್ಯ, ಅರ್ಥಪ್ರಾಪ್ತಿ, ವಿಶೇಷ ರೂಪದಿಂದ ಬಂಧು ಬಾಂಧವ ಸೌಖ್ಯ, ಸುಂದರ ವಸ್ತ್ರ ಹಾಗೂ ವಾಹನ ಸೌಖ್ಯ, ಭೂಮಿ ಗ್ರಹ ರಾಜ್ಯದ ಸುಖವು ಪ್ರಾಪ್ತವಾಗುತ್ತದೆ. ಇಲ್ಲಿಯೂ ಶುಭಾಶುಭ ರಾಶಿಯನ್ನು ಪರಿಗಣಿಸುವುದು.

ಪುತ್ರಭಾವೆ ತು ಯೋ ರಾಶಿಸ್ತಸ್ಥ ಚಕ್ರದಶಾಯದಿ ।
ತರ್ಹಿ ಜಾಯಾರಾಜ್ಯಸೂನು ಮಿತ್ರ ದೇಹಸುಖಂ ಭವೇತ್ ॥೧೩೫॥

ಸದ್ವಿದ್ಯಾ – ಕೀರ್ತಿಧಿಧೈರ್ಯ ಪರಾಕ್ರಮ ಸಮುನ್ನಿತಿಃ ।
ಸೌಮ್ಯಭೆ ತು ಶುಭಂ ಸರ್ವ ಕ್ರೂರಭೆ ತದ್ವಿ ಪರ್ಯಯಮ್ ॥೧೩೬॥

ಪುತ್ರ ಭಾವಸ್ಥ ರಾಶಿಯ ಚಕ್ರದಶಾದಲ್ಲಿ ಸ್ತ್ರೀ, ರಾಜ್ಯಪುತ್ರ, ಮಿತ್ರ, ದೇಹಸೌಖ್ಯ, ಸದ್ವಿದ್ಯಾ, ಯಶ, ಬುದ್ಧಿ, ಧೈರ್ಯ, ಪರಾಕ್ರಮ, ಉನ್ನತಿ – ಈ ಎಲ್ಲ ಅಂಶ ಸಂಘಟಿಸುತ್ತವೆ. ಶುಭ ರಾಶಿ ಎಲ್ಲ ಅಶುಭ, ಪಾಪರಾಶಿ – ಸಾಮಾನ್ಯ ಅಶುಭ.

ರಿಪುಭಾವೆ ತು ಯೋ ರಾಶಿಸ್ತಸ್ಯ ಚಕ್ರದಶಾ ಯದಾ ।
ತರ್ಹಿ ರಾಜಗ್ನಿಗರಲಾಯುಧಸ್ತೇನ ಭಾವಾತಿಭಿಃ ॥೧೩೭॥

ಪಾಂಡು ಗುಲ್ಮ ಪ್ರಮೆಹಾದಿರುಜಾಮಪಿ ಸಮದ್ಭವಃ ।
ಕ್ರೂರರಾಶೌ ಫಲಂ ಚೈವಂ ಸೌಮ್ಯಭೆ ಸ್ಯಾಚ್ಚುಮಾಶುಭಮ್ ॥೧೩೮॥

ಷಷ್ಠ ಭಾವ ರಾಶಿಗತ ಚಕ್ರದಶಾದಲ್ಲಿ ರಾಜ ಅಗ್ನಿ, ವಿಷ, ಅಸ್ತ್ರ ಕಳ್ಳ ಆದಿ ಭಯ (ಅದು ಪಾಪಗ್ರಹ ಅತ್ಯಧಿಕ. ಆ ಸಮಯದಲ್ಲೇ ಪಾಂಡು, ಗುಲ್ಮ, ಪ್ರಮೇಹ ಆದಿರೋಗದ ಪ್ರಕೋಪ – ಪರಂತು ಇದು ಕ್ರೂರ ರಾಶಿಯಲ್ಲಿ ವಿಶೇಷ ಶುಭರಾಶಿಯಲ್ಲಿ ಮಿಶ್ರಫಲ.

ದ್ಯೂನಭಾವೇ ತು ಯೋ ರಾಶಿಸ್ತಸ್ಯ ಚಕ್ರದಶಾ ಯದಿ ।
ಉದ್ವಾ ಹಸ್ತರ್ಹಿಸೌಖ್ಯಂ ಚ ಸ್ತ್ರೀಸುತಾಪ್ತ್ಯಾದಿಜಂ ಭವೇತ್ ॥೧೩೯॥

ಅತುಲಾ ಕೀರ್ತಿರಪ್ಯಾಪ್ತಿರ್ಗೋ ಸಸ್ಯಾರ್ಥ ಸುವಾಸಸಾಮ್ ।
ಫಲಂ ಪೂರ್ಣ ತು ಸೌಮ್ಯರ್ಕ್ಷೆ ಕ್ರೂರಭೆ ತದರ್ಧಕಮ್ ॥೧೪೦॥

ಜಾಯಾಭಾವಸ್ಥ ರಾಶಿಯ ಚಕ್ರದಶಾದಲ್ಲಿ ವಿವಾಹ, ಸ್ತ್ರೀಪುತ್ರ ಲಾಭ ಜನ್ಯ ಸುಖ, ಅತುಲ ಯಶ, ಪಶು ಧಾನ್ಯಸಂಪತ್ತು ವಸ್ತ್ರಾದಿ ಲಾಭ – ಈ ಪೂರ್ಣಫಲ ಶುಭರಾಶಿಗಳಲ್ಲಿ, ಅಶುಭ ರಾಶಿಗಳಲ್ಲಿ ಅರ್ಧಫಲ ಹೇಳುವುದು.

ಮೃತಿಭಾವೇ ತು ಯೋ ರಾಶಿಸ್ತಸ್ಯ ಚಕ್ರದಶಾ ಯದಿ ।
ತರ್ಹಿ ಬಂಧು ಧನಸ್ಥಾನ ನಾಶಜಂ ದುಃಖಮಾದಿಶೇತ್ ॥೧೪೧॥

ಶತ್ರುತೋಽಪಿ ಭಯಂ ಚಾನ್ನರುಚಿಂ ಚೈವಾತಿ ನಿಃ ಸ್ವತಾಮ್ ।
ಕ್ರೂರಭೆ ತು ಫಲಂ ಸರ್ವಂ ತದರ್ಧ ಶುಭಭೆ ಸ್ಮೃತಮ್ ॥೧೪೨॥

ಅಷ್ಟಮ ಭಾವಸ್ಥ ರಾಶಿಯ ಚಕ್ರ ದಶಾದಲ್ಲಿ ಬಂಧು, ಧನಸ್ಥಾನ ವಿನಾಶದ ದುಃಖ ಹೇಳುವುದು. ಈ ಸ್ಥಿತಿಯಲ್ಲಿ ಶತ್ರುಭಯ, ಅನ್ನದಲ್ಲಿ ಅರುಚಿ ಹಾಗೂ ಅಧಿಕ ದಾರಿದ್ರ್ಯ – ಇಲ್ಲಿ ಪಾಪರಾಶಿಯಲ್ಲಿ ಪೂರ್ಣಫಲ, ಶುಭರಾಶಿಯಲ್ಲಿ ಅರ್ಧ ಫಲ.

ಭಾಗ್ಯಭಾವೇ ತು ಯೋ ರಾಶಿಸ್ತಸ್ಯ ಚಕ್ರದಶಾ ಯದಿ ।
ತರ್ಹಿ ಜಾಯಾಸುತಾಗಾರಕೃಷಿ ವಿತ್ತಸುಖಂ ತಥಾ ॥೧೪೩॥

ಸತ್ಕರ್ಮ ನಿರತೋ ಧರ್ಮವೃದ್ಧಿಃ ಸಾಧು ಸಮಾಗಮಃ ।
ಜ್ಞೇಯ ಮೇತತ್ ಫಲಂ ಪೂರ್ಣ ಶುಭರ್ಕ್ಷೇರ್ಧ ತು ಪಾಪಭೆ ॥೧೪೪॥

ನವಮ ಭಾವಸ್ಥ ರಾಶಿಯ ಚಕ್ರ ದಶಾವಧಿಯಲ್ಲಿ ಸ್ತ್ರೀಪುತ್ರ ಗೃಹ ಕೃಷಿ ಆದಿಗಳಿಂದ ಲಾಭ ಹಾಗೂ ಸುಖ. ಈ ಸಮಯದಲ್ಲಿ ಮನೆಯಲ್ಲಿ ಶುಭ ಕಾರ್ಯದಲ್ಲಿ ಸಲ್ಲಗ್ನತಾ, ಧರ್ಮಬುದ್ಧಿ ಹಾಗೂ ಸಾಧು ಸಮಾಗಮ ಈ ಫಲಗಳು – ಮೇಲಿನಂತೆ ಶುಭಾಶುಭ ರಾಶಿಗಳಿಂದಲೇ ಪರಿಗಣಿಸುವುದು.

ರಾಜ್ಯಭಾವೆ ತು ಯೋ ರಾಶಿಸ್ತಸ್ಯ ಚಕ್ರದಶಾ ಯದಿ ।
ತರ್ಹಿ ಜಾಯಾತ್ಮಜ ಸುಖಂ ರಾಜಸಮ್ಮಾನ ಮೀಶತಾ ॥೧೪೫॥

ಸತ್ಕರ್ಮ ಸಿದ್ಧಿರೈಶ್ವರ್ಯ್ಯ ವೃದ್ಧಿಃ ಸತ್ಸಂಗತಿಸ್ತಥಾ ।
ಜ್ಞೇಯ ಮೇತತ್ ಫಲಂ ಪೂರ್ಣ ಶುಭರ್ಕ್ಷೇಽರ್ಧಂತು ಪಾಪಭೆ ॥೧೪೬॥

ದಶಮ ಭಾವಸ್ಥ ರಾಶಿಯ ಚಕ್ರದಶಾದಲ್ಲಿ ಸ್ತ್ರೀ ಪುತ್ರಸೌಖ್ಯ, ರಾಜಸಮ್ಮಾನ ಹಾಗೂ ಸ್ವಯಂ ದೇವತೆಯಾಗುವ ಯೋಗ ಈ ಸಮಯದಲ್ಲಿ ಸತ್ಕಾರ್ಯ ಸಿದ್ಧಿ, ಐಶ್ವರ್ಯ ವೃದ್ಧಿ, ಸಜ್ಜನ ಸಂಗತಿ – ಇಲ್ಲಿಯೂ ಶುಭಾಶುಭ ರಾಶಿಗಳಿಂದ ನಿರ್ಧರಿಸಿ ಪೂರ್ಣ ಫಲವೋ, ಅರ್ಧ ಫಲವೋ ಹೇಳುವುದು.

ಆಯಾಭಾವೆ ತು ಯೋ ರಾಶಿಸ್ತಸ್ಯ ಚಕ್ರದಶಾ ಯದಿ ।
ತರ್ಹಿ ಜಾಯಾಸೂನು ಬಂಧು ಧನವಾಸೋ ಭವಂ ಸುಖಮ್ ॥೧೪೭॥

ನೈರುಜ್ಯಂ ರಾಜತೋ ಮಾನಂ ಸದ್ಭಿಃ ಸಂಗಃ ಸದಾ ಭವೇತ್ ।
ಜ್ಞೇಯ ಮೇತತ್ ಫಲಂ ಪೂರ್ಣ ಶುಭರ್ಕ್ಷೇಽಲ್ಪಂತು ಪಾಪಭೆ ॥೧೪೮॥

ಲಾಭಭಾವ ಗತ ರಾಶಿಸ್ಥ ದಶಾದಲ್ಲಿ ಸ್ತ್ರೀಪುತ್ರ ಬಂಧು, ಧನ, ವಸ್ತ್ರ, ಸುಖ, ನೈರುಜ್ಯ, ರಾಜಸನ್ಮಾನ, ಸಜ್ಜನ ಸಂಗತಿಗಳು ದೊರೆಯುತ್ತದೆ. ಇಲ್ಲಿಯೂ ಶುಭಾಶುಭ ರಾಶಿಗಳ ಪರಿಜ್ಞಾನದಿಂದ ಪೂರ್ಣ ಅಲ್ಪ ಫಲ ಹೇಳುವುದು.

ರಿಷ್ಫಭಾವೇತು ಯೋ ರಾಶಿಸ್ತಸ್ಯ ಚಕ್ರದಶಾ ಯದಿ ।
ತರ್ಹಿ ವ್ಯಥಾ ತನೌ ಸ್ಥಾನಹಾನಿರ್ನಿಷ್ಫಲ ತೋದ್ಯಮೇ ॥೧೪೯॥

ಆಲಸ್ಯಂ ನಿಃಸ್ವತಾ ಕಾರ್ಯನ್ನೈಷ್ಫಲ್ಯಂ ಚ ಸುಧಾವ್ಯಯಃ ।
ಜ್ಞೇಯ ಮೇತತ್ ಫಲಂರ್ಣೆ ಪೂರ್ಣೋ ಕ್ರೂರರ್ಕ್ಷೆಸೌಮ್ಯಭೆದಿಕಮ್ ॥೧೫೦॥

ದ್ವಾದಶ ಭಾವಸ್ಥ ರಾಶಿಯ ಚಕ್ರದಶಾದಲ್ಲಿ ಶರೀರದಲ್ಲಿ ವ್ಯಂಗ್ಯ ಸ್ಥಾನಭ್ರಷ್ಟ (ವರ್ಗ – ನೌಕರಿಯಲ್ಲಿ ವಿಲಂಬಿತ ಇತ್ಯಾದಿ) ಉದ್ಯೋಗದಲ್ಲಿ ವಿಫರೀತ ಆಲಸ್ಯ, ದರಿದ್ರತನ, ಕಾರ್ಯದಲ್ಲಿ ನಿಷ್ಫಲ, ವ್ಯರ್ಥ ವ್ಯಯ – ಇಲ್ಲಿ ಪಾಪರಾಶಿಯಲ್ಲಿ ಪೂರ್ಣಫಲ, ಶುಭರಾಶಿಯಲ್ಲಿ – ಅಧಿಕಫಲ ಹೇಳುವುದು.

ವಿಮರ್ಶೆಯಲ್ಲಿ – ಪಾಪರಾಶಿ, ಶುಭರಾಶಿಗಳ ವಿವರ ಲಗ್ನಾತ್ ಕಾರಕ ಸ್ಥಾನ ರಾಶಿ – ಮಾರಕ ಸ್ಥಾನ ರಾಶಿಗಳನ್ನು ನೋಡುವುದು ಹೆಚ್ಚು ವಿಹಿತ. ಕೇವಲ

ಗ್ರಹಾಧಿಪತ್ಯದಿಂದ ಶುಭಾಶುಭ ರಾಶಿಗಳೆಂದು ಪರಿಗಣಿಸಕೂಡದು ವೃಷಭ ಲಗ್ನಕ್ಕೆ ಪೂರ್ಣಕಾರಕ ಮಕರ–ಕುಂಭಗಳಾಗುವುದರಿಂದ ಅಶುಭ ಫಲ ಹೇಳುವುದು ಮೂರ್ಖತನವಾಗುತ್ತದೆ. ಈ ರೀತಿ ಲಗ್ನಾತ್ ಫಲ ಹೇಳುವುದು ಹೆಚ್ಚು ಶ್ರೇಯಸ್ಕರ ಹಾಗೂ ಆ ಫಲ ಸತ್ಯವಾಗುತ್ತದೆ. ಅದರಂತೆ ಆ ಸ್ಥಾನದಲ್ಲಿ ರಾಶಿಯ ಬಲಾಬಲ ವನ್ನು ವೀಕ್ಷಿಸಿ ಫಲ ಹೇಳುವುದು.

## ಚರದಶಾ ಜ್ಞಾನ

ಲಗ್ನಾದಿ ವ್ಯಯ ಪರ್ಯಂತಂ ರಾಶಿನಾಂ ತು ಚರಾಭಿಧಾಮ್ ।
ದಶಾಂ ಭಾವಾತ್ತು ಭಾವೇಶಾವಧಿ ಸಂಖ್ಯಾ ಬುಧಾ ಜಗುಃ ॥೧೫೧॥

ಕ್ರಮಾದೋ ಜೆ ಪದೇನೋಜೆ ಕಲನಾತು ವಿಪರ್ಯಾತ್ ।
ದಶಾಬ್ಧಿ ಸಾಧನೆ ಜ್ಞೇಯಂ ಪದಂ ಮೇ ಷಾದಿಭಿಸ್ತ್ರಿಭಿಃ ॥೧೫೨॥

ಲಗ್ನದಿಂದ ವ್ಯಯ ಪರ್ಯಂತ ಚರದಶಾ ಎಂದು ಪರಿಗಣಿಸಲ್ಪಡುತ್ತದೆ. ಭಾವದಿಂದ ಭಾವೇಶನವರೆಗಿನ ಸಂಖ್ಯಾಪ್ರಮಿತ ದಶಾವರ್ಷ ಸಂಖ್ಯೆಯಾಗುತ್ತದೆ. ಮೇಷಾದಿ 3, 3ರಾಶಿಗಳ ಗುಂಪು 1 ಪದವಾಗುತ್ತದೆ (ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾ... ಈ ರೀತಿ) ವಿಷಮದಲ್ಲಿ $(^1/_3)$ ಕ್ರಮಗಳಾದ ಸಮರಾಶಿ $(^2/_4)$ ಈ ರೀತಿ ಪದ ಪರಿಗಣಿಸುವುದು ಹಾಗೂ ದಶ ವರ್ಷ ಪರಿಗಣಿಸುವುದು.

## ದ್ವಿಯಾಧಿಪ ರಾಶಿ

ವೃಶ್ಚಿಕಾಧಿಪತಿ ದ್ವೌ ಚ ಕುಜಕೇತು ಮತೌಮುನೆ ।
ಕುಂಭಸ್ಯ ಮಂದ ಫಣಿನಾವಧಿಪೌ ಸಮುದೀರಿತೌ ॥೧೫೩॥

ವೃಶ್ಚಿಕ ರಾಶಿಗೆ ಮಂಗಳ, ಕೇತು ಅಧಿಪರು ಹಾಗೂ ಕುಂಭ ರಾಶಿಗೆ ರಾಹು, ಶನಿ ಅಧಿಪರು–ಈ ರೀತಿ ಕುಂಭ ವೃಶ್ಚಿಕಕ್ಕೆ ಇಬ್ಬರು ಅಧಿಪರು.

## ದ್ವಿಯಾಧಿಪ ರಾಶಿ ದಶಾಜ್ಞಾನ

ದ್ವಿಸ್ವಾಮಿಕ ಭಯೋರತ್ರ ದಶಾಜ್ಞಾನ ವಿಧಿಂ ಬ್ರೂವೆ ।
ಏಕತ್ರ ಸಂಗತೌ ದ್ವಾದಪ್ಯಧಿಪೌ ಚೇತ್ ಸ್ವಭೆ ಸ್ಥಿತೌ ॥೧೫೪॥

ತದಾ ದ್ವಾದಶ ವರ್ಷಾಣಿ ಚೈಕದಿಕ ಮಿತೋವ್ಯಥಾ ।
ಏಕಃ ಸ್ವಕ್ಷೇತ್ರಗೋನ್ಯಸ್ತು ಪರತ್ರ ಯದಿ ಸಂಸ್ಥಿತಃ ॥೧೫೫॥

ತದಾನ್ಯಾತ್ರ ಸ್ಥಿತಂ ನಾಥಂ ಪರಿಗೃಹಾ ದಶಾಂ ನಯೇತ್ ।
ಅನ್ಯರಾಶಿಗತೌ ತೌ ಚೆತ್ತಯೋರ್ಯಃ ಸ್ಯಾದ್ದಲಾನ್ವಿತಃ ॥೧೫೬॥

ಕ್ರಮತೋ ವ್ಯುತ್ಕ್ರಮಾತ್ಕ ಸ್ಯಾದೇವಾನೇಯಾದಶಾ ಬುಧೈ ।
ನಿರ್ಗ್ರಹಾತ್ ಸಗ್ರಹಸ್ಯೈವ ಬಲಿತ್ವಂ ಬಲನಿರ್ಣಯೋ ॥೧೫೭॥

ಗ್ರಹಸತ್ವೆ ತೂಭಯಿತ್ರ ಬಲಿ ಜ್ಞೇಯೋ ಗ್ರಹಾಧಿಕಃ ।
ಸಾಮ್ಯೆ ಗ್ರಹಯುತೆ ರಾಶಿಬಲಿತೋ ಬಲನಿರ್ಣಯಃ ॥೧೫೮॥

ವೇದ್ಯಾಶ್ಚರ ಸ್ಥಿರ ದ್ವಂದ್ವಾಃ ಕ್ರಮಾತ್ತು ಬಲಿನಃ ಸದಾ ।
ಬಲಸಾಮ್ಯೆ ತತ್ರ ರಾಶ್ಯೋರ್ಬಲವಾನ್ ಬಹುವತ್ಸರಃ ॥೧೫೯॥

ಏಕಃ ಸ್ವೋಚ್ಚಗತಶ್ಚಾನ್ಯಃ ಪರತ್ರ ಯದಿ ಸಂಸ್ಥಿತಃ ।
ಆದ್ಯಾಮುಚ್ಚಖೇಟಸ್ಥ ರಾಶಿಮನ್ಯಂ ವಿಹಾಯ ವೈ ॥೧೬೦॥

ಉಚ್ಚ ಖೇಟಸ್ಯ ಸದ್ಭಾವೋ ವರ್ಷಮೇಕಂ ಚ ನಿಕ್ಷಿಪೇತ್ ।
ತತ್ರೈವ ನೀಚಖೇಟಸ್ಯ ವರ್ಷಮೇಕಂ ಪರಿತ್ಯಜೇತ್ ॥೧೬೧॥

ಏವಂ ಸರ್ವಸಮಾಲೋಚ್ಯ ದಶಾಯಾಂ ತು ಫಲಂ ವದೇತ್ ।

ದ್ವಿಅಧಿಪ ರಾಶಿಗಳ ದಶಾವರ್ಷ ಜ್ಞಾನ ಪ್ರಕಾರ ಹೇಳುತ್ತೇನೆ. ಇಬ್ಬರು ಅಧಿಪರು (ವೃಶ್ಚಿ – ಮಂಗಳ – ಕೇತು, ಕುಂಭ – ರಾಹು – ಶನಿ) ಸಂಯುಕ್ತರಾಗಿ ಸ್ವರಾಶಿಸ್ಥರಾಗಿದ್ದರೆ 12ವರ್ಷ ದಶಾವರ್ಷ 48ದಂತೆ ರಾಶಿವರ್ಷ ಸ್ವಾಯಿ ಪರ್ಯಂತ (ಮೊದಲೇ ಹೇಳಿದಂತೆ) ಸಂಖ್ಯಾ ಗಣನೆ ಮಾಡುವುದು. ಆದರಿಂದ ವರ್ಷಜ್ಞಾನ ಈ ಎರಡು ಗ್ರಹಗಳಲ್ಲಿ ಒಂದು ಗ್ರಹ ಸ್ವಕ್ಷೇತ್ರ (ವೃಶ್ಚಿ, ಮಂಗಳ ಅಥವಾ ಕೇತು, ಕುಂಭ, ಶನಿ ಅಥವಾ ರಾಹು)ವಾಗಿ ಇನ್ನೊಂದು ಅನ್ಯರಾಶಿ ಯಲ್ಲಿದ್ದರೆ ಅನ್ಯರಾಶಿಯ ಸ್ವಾಮಿಯನ್ನೇ ಗಣನೆ ಮಾಡುವುದು. ಎರಡೂ ಗ್ರಹಗಳು ಅನ್ಯರಾಶಿಯಲ್ಲಿದ್ದರೆ ಎರಡರಲ್ಲಿ ಪ್ರಬಲ ಗ್ರಹದವರೆಗೆ ಉತ್ಕ್ರಮದಿಂದ ಗಣನೆ ದಶಾವರ್ಷ ಕಂಡುಹಿಡಿಯುವುದು. ಬಲ ನಿರ್ಣಯದಲ್ಲಿ ಗ್ರಹರಹಿತದಿಂದ ಗ್ರಹಯುಕ್ತ ಬಲಿಯಾಗುತ್ತದೆ. ಎರಡು ಗ್ರಹಗಳೂ ಗ್ರಹಯುಕ್ತವಾಗಿದ್ದರೆ ಅಧಿಕಗ್ರಹ ಯೋಗವು ಬಲಶಾಲಿಯಾಗುತ್ತದೆ. ಗ್ರಹಯೋಗ ಸಮಾನವಾಗಿದ್ದರೆ ರಾಶಿ ಬಲಾಬಲದಿಂದ ನಿರ್ಣಯಿಸುವುದು. ಚರಕ್ಕಿಂತ ಸ್ಥಿರ, ಸ್ಥಿರಕ್ಕಿಂತ ದ್ವಿಸ್ವಭಾವ ರಾಶಿ ಬಲಶಾಲಿಯಾಗುತ್ತದೆ. ರಾಶಿಯಲ್ಲಿ ಬಲಿಷ್ಠರಿಂದ ಗಣನೆ ಪ್ರಾರಂಭಿಸುವುದು ಹಾಗೂ ದಶಾವರ್ಷ ಕಂಡುಹಿಡಿಯುವುದು.

ಇಬ್ಬರು ಅಧಿಪರಲ್ಲಿ ಒಬ್ಬರು ಉಚ್ಚಸ್ಥನಾಗಿ ಹಾಗೂ ಇನ್ನೊಂದು ಗ್ರಹ ಬೇರೆ ಯಾವುದೇ ಸ್ಥಾನದಲ್ಲಿದ್ದರೂ – ಉಚ್ಚಸ್ಥ ಗ್ರಹವಗೆ ದಶಾ ವರ್ಷಕ್ಕೆ ಪರಿಗ್ರಹಿಸುವುದು. ಉಚ್ಚಸ್ಥ ಗ್ರಹ ಸಂಖ್ಯಾದಲ್ಲಿ ಒಂದು ವರ್ಷ ಸೇರಿಸಿ ನೀಚಸ್ಥ ಗ್ರಹಸಂಖ್ಯೆಯಲ್ಲಿ ಒಂದು ವರ್ಷ ಕಳೆಯುವುದು. ಈ ಪ್ರಕಾರ ಪೂರ್ಣತಃ ವಿವೇಚನೆ ನಂತರ ದಶಾಫಲ ನಿರ್ದೇಶಿಸುವುದು.

## ಚರದಶಾ ಕ್ರಮ

**ಓಜೇನೋಜೆ ಪದೆ ಲಗ್ನಾದ್ ಭಾಗ್ಯರಾಶೌ ಕ್ರಮೋತ್ಕ್ರಮಾತ್ ।**
**ದಶಾ ಚರಾಭಿದಾ ಜ್ಞೇಯ ವಿಜ್ಞೈಸ್ತನುಭತಃ ಸದಾ ॥೧೬೨॥**

ಲಗ್ನದಿಂದ ನವಮ ರಾಶಿ ದಶಮಪ್ರದವಾದರೆ ಕ್ರಮದಿಂದ ಸಮವಾದರೆ ಉತ್ಕ್ರಮದಿಂದ – ಲಗ್ನದಿಂದ ಆರಂಭಿಸಿ ಎಲ್ಲ ರಾಶಿಗಳ ದಶಾ ಕಂಡುಕೊಳ್ಳುವುದು. ಅದು ಚರ ಸಂಜ್ಞಕ ದಶಾ ಆಗುವುದು.

ಉದಾಹರಣೆಗೆ ಈ ಕುಂಡಲಿಯಲ್ಲಿ

5
6 ಶು
4
3
2 ಕೆ
7 ರ. ಬು. ಚ
1
8 ರಾ
10 ಗು.ಮ
12 ಶನಿ
9
11

| ಶನಿ | | ಕೆ | |
|---|---|---|---|
| | | | |
| ಗು ಮ | | | |
| | ರಾ | ರ ಬು ಚ | ಶು |

ಇಲ್ಲಿ ಲಗ್ನದಿಂದ ನವಮಸ್ಥ ರಾಶಿ ಸಮರಾಶಿಯಿರುವರಿಂದ (ಮೀನ) ಉತ್ಕ್ರಮದಲ್ಲಿ ಗಣನೆ ಮಾಡುವುದು – ಕಟಕದಿಂದ ಪ್ರಾರಂಭ – ಚಂದ್ರ ವಿಷಮ ಪದಿಯಲ್ಲಿರುವುದರಿಂದ ಕರ್ಕ ದಶಾವರ್ಷ 3 ವರ್ಷ, ಎರಡನೆಯ ಸ್ಥಾನ (ವ್ಯಯ) ಬುಧನು ವಿಷಮ ಪದದಲ್ಲಿರುವುದರಿಂದ ಕ್ರಮದಂತೆ ಮಿಥುನ 4 ವರ್ಷ, ನಂತರ ವೃಷಭ – ಅಧಿಪ ಶುಕ್ರ ಸಮಪದದಲ್ಲಿರುವುದರಿಂದ ಉತ್ಕ್ರಮದಲ್ಲಿ ವೃಷಭ – 7 ನೀಚ ವರ್ಷವೇ. ನಂತರ ಮೇಷ – ಮಂಗಳ ಸಮ ಪದದಲ್ಲಿರುವುದರಿಂದ – 3 – 1 = 2 ವರ್ಷ ಮೇಷ ನಂತರ ಮೀನ ಗುರುವು ಸಮ ಪದದಲ್ಲಿರುವುದರಿಂದ 2ವರ್ಷ, ಕುಂಭ – 11ವರ್ಷ, ಮಕರ 10, ಧನು 11 – 1(ನೀಚಸ್ಥ) = 10 ವೃಶ್ಚಿಕ

10+1 = 11, ಶುಕ್ರ ಸಮ 1 – 1ನೀಚ = 0 ಬುಧ, ಕನ್ಯಾ – 1, ರವಿ 2 – 1 (ನೀಚ) 1ವರ್ಷ. ಈ ರೀತಿ ದಶಾವರ್ಷ ಪರಿಗಣಿಸುವುದು. ಜನ್ಮ ದಿನಾಂಕಕ್ಕೆ ಸೇರಿಸಿದ ದಶಾ ಬರುವುದು. ಇಲ್ಲಿ ರಾಶಿ ತುಲ್ಯ ವರ್ಷಮಾನ ಗ್ರಹಣ ಮಾಡಿದ ನಂತರ ಅಂಶಾದಿ ಅನುಪಾತದಿಂದ ಮಾಸಾದಿಗಳ ಗ್ರಹಣ ಮಾಡುವುದು. ಸ್ವಲ್ಪಾಂತರದಲ್ಲಿ ಪೂರ್ಣ ವರ್ಷವೆ ಗ್ರಹಣ ಮಾಡುವುದು. ಇದನ್ನು ಸ್ವಯಂ ಪರಾಶರರೆ ಈ ಹೇಳಿದ್ದಾರೆ.

ಸ್ವರ್ಕ್ಷಸಂಸ್ಥಿತ ಖೇಟಸ್ಯ ವರ್ಷಾಣಿ ದ್ವಾದಶೈವ ಹಿ ।
ಧನಸ್ಥೆ ಚೈಕ ವರ್ಷತು ತೃತೀಯೇ ಹಾಯನದ್ವಯಮ್ ॥೧॥

ತುರ್ಯೋ ವರ್ಷ ತ್ರಯಂ ಜ್ಞೇಯಂ ಪಂಚಮೇತಂರ್ಯಹಾಯನಮ್।
ರಿಪುಸ್ಥೆ ಪಂಚವರ್ಷಾಣಿ ಷಡ್‌ವರ್ಷಾಣಿ ಚ ಸಪ್ತಮೇ ॥೨॥

ರಂಧ್ರಸ್ಥೆ ನವವರ್ಷಾಣಿ ನಾಗವರ್ಷಾಣಿ ಭಾಗ್ಯಗತೆ ।
ನಭಃಸ್ಥೇ ಚಾಂಕವರ್ಷಾಣಿ ದಿಗ್‌ವರ್ಷಾಣಿ ತು ಲಾಭಗೆ ॥೩॥

ವ್ಯಯಸ್ಥೆ ರುದ್ರವರ್ಷಾಣಿ ಕಥಿತಾನಿ ಪುರಾ ಬುಧೈಃ ।

ಈ ರೀತಿ ಹೇಳಿರುವುದರಿಂದ ಪೂರ್ಣವರ್ಷವನ್ನೇ ಗ್ರಹಿಸುವುದು.

## ಸ್ಥಿರದಶಾ

**ಪರಾಶರ ಉವಾಚ:**

ಅಧುನಾ ಸಂಪ್ರವಕ್ಷ್ಯಾಮಿ ಸ್ಥಿರಾಖ್ಯಾಂ ತು ದಶಾಂ ಮುನೆ ।
ಚರಾದಿಷು ಕ್ರಮಾದಬ್ದಾ ನಗನಾಗನವೊನ್ವಿತಃ ॥೧೬೩॥

ದಶಾವರ್ಷ ಸ್ಥಿರತಯಾ ದಶೇಯಂ ತು ಸ್ಥಿರಾಭಿಧಾ ।
ಬ್ರಹ್ಮಗತಾದ್ ರಾಶೋರ್ದಶ್ಯೈಷಾ ತು ದ್ವಿಜೋತ್ತಮ ॥೧೬೪॥

ಓಜೆ ಕ್ರಮಾದನೋಜೆ ತೂತ್ಕ್ರಮತೋಗ್ರೆ ಪ್ರವರ್ತತೆ ।

**ಪರಾಶರರು ಹೇಳಿದುದು–**

ಹೇ ಮುನಿಯೇ, ಈಗ ಸ್ಥಿರದಶಾ ವಿವರಣೆ ನೀಡುತ್ತೇನೆ. ಇದು ರಾಶಿಯಲ್ಲಿ ಕ್ರಮಶಃ 7/8/9 ವರ್ಷ ದಶಾ ಪ್ರಮಾಣವಿದ್ದು ದಶಾ ಪ್ರಮಾಣದ ಸ್ಥಿರತೆಯಿಂದ ಇದರ ಸಂಜ್ಞೆ ಸ್ಥಿರದಶಾ ಎಂದಾಗಿದೆ. ಬ್ರಹ್ಮಗ್ರಹ ಆಶ್ರಿತ ರಾಶಿಯಿಂದ ಆರಂಭವಾಗಿ 12 ರಾಶಿಯ ದಶಾವಿರುತ್ತದೆ. ವಿಷಮ ರಾಶಿಯಲ್ಲಿ ಕ್ರಮವಾಗಿ ಸಮರಾಶಿಯಲ್ಲಿ ಉತ್ಕ್ರಮದಿಂದ ದಶಾ ವಿವರಿಸಬೇಕು.

## ಮೈತ್ರೇಯ ಉವಾಚ:

ಬ್ರಹ್ಮಗ್ರಹೋಧುನಾ ಯೇಮೇ ಭಗವಾನ್ ಭವತಾದಿತಃ ।
ತಲ್ಲಕ್ಷಣು ತು ಕೃಪಾಯ ವಿಶದಿಕರ್ತು ಮರ್ಹಸಿ ॥೧೬೫॥

## ಮೈತ್ರೇಯರು ಕೇಳಿದುದು–

ಹೇ ಭಗವಾನ್, ಈಗ ತಾವು ಹೇಳಿದ ಬ್ರಹ್ಮಗ್ರಹವೆಂದ ಅಭಿದಾನ ಹೇಳಿದ್ದು ಕೃಪೆ ಮಾಡಿ ಆದರ ಪೂರ್ಣ ಲಕ್ಷಣಾದಿಗಳನ್ನು ವಿವರಿಸಿರಿ.

## ಪರಾಶರ ಉವಾಚ:

ರಿಪುರಂಧ್ರವ್ಯಯೇಷು ಯಃ ಸ್ಯಾದೋಜಭಗೋ ಬಲ ।
ಲಗ್ನ ಸಪ್ತಮಗೋ ಯಶ್ಚ ಬಲ ತತ್ಪುಪ್ಪತಃ ಸ್ಥಿತಃ ॥೧೬೬॥

ಬ್ರಹ್ಮಾ ವಾ ಕಾರಕಾದ್ ರಂಧ್ರದಿಪೋ ರಂಧ್ರಗತೋಽಪಿ ।
ಬ್ರಹ್ಮತ್ವೆ ತಮಸೋ ವಾರ್ಕೆಬ್ರಹ್ಮಾ ಷಷ್ಟಸ್ತತೋ ಗ್ರಹ ॥೧೬೭॥

ಬಹೂನಾ ಬ್ರಹ್ಮಸತ್ವೆ ತು ವೇದ್ಯೋ ಭಾಗಾಧಿಕೋ ಗ್ರಹಃ ।
ಭಾಗಸಾಮ್ಯೇಧಿಕ ಬಲೋ ಭವೇದ್ ಬ್ರಹ್ಮಗ್ರಹೊ ಮುನೆ ॥೧೬೮॥

## ಪರಾಶರರು ಹೇಳಿದುದು–

ಹೇ ಮುನಿಯೇ, 6, 8, 12 ಸ್ಥಾನಗಳ ಅಧಿಪದಲ್ಲಿ ಯಾವ ಗ್ರಹ ವಿಷಮ ರಾಶಿಗತವಾಗಿರುವುದೋ ಅದು ಬ್ರಹ್ಮಗ್ರಹವಾಗುತ್ತದೆ. ಲಗ್ನ ಸಪ್ತಮದಲ್ಲಿ ಬಲಿಷ್ಠ ಷಷ್ಟಸ್ಥ ( 6 ರಾಶಿಗಳ ಅಂತರದಲ್ಲಿ ) ವಿಷಮ ರಾಶಿಯಲ್ಲಿದ್ದ ಗ್ರಹ ಬ್ರಹ್ಮ – ಕಾರಕ ಗ್ರಹದಿಂದ ಅಷ್ಟಮೇಶ ಅಥವಾ ಅಷ್ಟಮ ಭಾವಗತ ಗ್ರಹವೂ ಬ್ರಹ್ಮ ವಾಗುತ್ತದೆ. ಶನಿ ಅಥವಾ ರಾಹು, ಕೇತುಗಳಲ್ಲಿ ಯಾರಿಗಾದರೂ ಬ್ರಹ್ಮತ್ವ ಪ್ರಾಪ್ತ ವಾದರೆ ಅವನಿಂದ 6ನೇ ಸ್ಥಾನದ ಗ್ರಹ ಬ್ರಹ್ಮತ್ವ ಪ್ರಾಪ್ತ ಮಾಡಿಕೊಳ್ಳುತ್ತದೆ.

ಈ ಅಂಶಗಳಲ್ಲಿ ಅನೇಕ ಗ್ರಹಗಳಿಗೆ ಬ್ರಹ್ಮತ್ವ ಪ್ರಾಪ್ತವಾದರೆ ಅಧಿಕ ಅಂಶವ ಗ್ರಹ – ಬ್ರಹ್ಮವಾಗುತ್ತದೆ. ಅಷ್ಟಮೇಶ ಅಷ್ಟಮದಲ್ಲಿದ್ದರೂ ಬ್ರಹ್ಮನಾಗುವನು.

ಉದಾಹರಿತ ಕುಂಡಲಿ

5, 4, 3
6 ಶು
2 ಕೆ
7 ರ.ಬು.ಚ
1
8 ರಾ
10 ಗು.ಮ
12 ಶನಿ
9, 11

| | | | |
|---|---|---|---|
| ಶನಿ 2.27 | | ಕೆ 14.18 | |
| | | | |
| ಗು 1.46<br>ಮ 4.46 | | | |
| | ರಾ 14.18 | ರ 17.35<br>ಬು 19-1'<br>ಚಂ 0.24 | ಲ 26.31 |

## ಕಾರಕತ್ವ

| ಆತ್ಮ | ಅಮಾತ್ಯ | ಭ್ರಾತಾ | ಮಾತಾ | ಪಿತಾ | ಪುತ್ರ | ಜ್ಞಾತಿ | ಸ್ತ್ರೀ |
|---|---|---|---|---|---|---|---|
| ಶನಿ | ಶುಕ್ರ | ಚಂದ್ರ | ಬುಧ | ಸೂರ್ಯ | ರಾಹು | ಮಂಗಳ | ಗುರು |

## ಬ್ರಹ್ಮ

(1) ವ್ಯಯದ ಸ್ವಾಮಿ – ಬುಧ – ತುಲಾದಲ್ಲಿ – (ವಿಷಮ) ಬ್ರಹ್ಮ

(2) ಲಗ್ನಾಧಿಪ ಚಂದ್ರ – 6 ರಾಶಿ ಅಂತರ ವಿಷಮದಲ್ಲಿ ಬ್ರಹ್ಮ

(3) ಕಾರಕನಿಂದ ಅಷ್ಟಮೇಶ – ಇಲ್ಲ

(4) ಶನಿ, ರಾಹು, ಕೇತುಗಳು – ಇಲ್ಲ

(5) ಅಷ್ಟಮೇ ಅಷ್ಟಮದಲ್ಲಿಲ್ಲ ಇಲ್ಲ

ಇಲ್ಲಿ ಚಂದ್ರ, ಬುಧ, ಬ್ರಹ್ಮರಾಗಿ ಚಂದ್ರ ಅಧಿಕಾಂಶದಲ್ಲಿರುವುದರಿಂದ.

ಬ್ರಹ್ಮ – ಚಂದ್ರ

ಚಂದ್ರರಾಶಿ ತುಲಾದಿಂದ ದಶಾ ಆರಂಭಿಸುವುದು

| ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ | ಮೇಷ | ವೃಷಭ | ಮಿಥುನ | ಕಟಕ | ಸಿಂಹ | ಕನ್ಯಾ |
|---|---|---|---|---|---|---|---|---|---|---|---|
| 7 | 8 | 9 | 7 | 8 | 9 | 7 | 8 | 9 | 7 | 8 | 9 |

ಈ ರೀತಿ ದಶಾ ಕ್ರಮವಾಗುವುದು.

## ಯೋಗಾರ್ಧ ದಶಾ

ಯೋಗಾರ್ಧ ತುಲ್ಯಮುಭಯೋ ರ್ಯೋಗರ್ಧೇ ಸ್ಯಾದ್ ದಶಾಮಿತಿಃ ।
ತನ್ವಸ್ತ್ರಯೋ ರ್ಬಲ ವತೋರ್ದಶೈಪಾರಂಭ್ಯತೆ ಬುಧೈಃ ॥೧೯॥

ಯೋಗಾರ್ಧ ದಶಾದಲ್ಲಿ ಚರಸ್ಥಿರ ವರ್ಷದ ಯೋಗಾರ್ಧ ತುಲ್ಯ ದಶಾವರ್ಷ ಪರಿಗಣಿಸುವುದು ಹಾಗೂ ಲಗ್ನ ಸಪ್ತಮದಲ್ಲಿ ಬಲಿಷ್ಠ ರಾಶಿಯಿಂದ ಆರಂಭಿಸಿ 12 ರಾಶಿ ದಶಾ ತೆಗೆಯುವುದು. ಇಲ್ಲಿ ಸಮ, ವಿಷಯಗಳಲ್ಲಿ ಉತ್ಕ್ರಮ ಕ್ರಮದಂತೆ ಪರಿಗಣಿಸುವುದು ಇಲ್ಲ. ಚರದಶಾ ಹಾಗೂ ಸ್ಥಿರದಶಾ ವರ್ಷ ಕೂಡಿಸಿ 2ರಿಂದ ಭಾಗಿಸಿದರೆ ಯೋಗಾರ್ಧ ದಶಾವರ್ಷ ಬರುವುದು.

ಉದಾಹರಣೆ – ಮೇಷದ ಚರದಶಾ ವರ್ಷ 2 ಸ್ಥಿರದಶಾ 7 ಆಗಿದ್ದರೆ – ಯೋಗಾರ್ಧದಶಾ 4-6 (ವರ್ಷ-ತಿಂಗಳು) ಆಗುವುದು. ಇದೇ ಯೋಗಾರ್ಧ ದಶಾ.

## ಕೇಂದ್ರಾದಿ ದಶಾ

ಲಗ್ನಾಸ್ತಯೋರ್ಬಲಿತೋ ರಾಶೇಃ ಕೇಂದ್ರಾದಿಗಾಮಿನಾಮ್ ।
ಬಲಾನುಸಾರಾತ್ ಭಾನುಂ ರಾಶಿನಾಮಾತ್ಮಕಾರಕಾತ್ ॥೨೦॥

ದಶಾಕ್ರಮೋ ಗ್ರಹಾಣಾಂವ್ಯೆ ಮುನಿಭಿಃ ಸಮುದೀರಿತಃ ।
ದಶಾ ವರ್ಷಾಣಿ ಚರವತ್ ಸ್ವಭಂ ಯಾವನ್ನಭಃ ಸದಾವಮ್ ॥೨೧॥

ಲಗ್ನ ಸಪ್ತಮಗಳಲ್ಲಿ ಬಲವಾನ್ ರಾಶಿಯಿಂದ ಆರಂಭವಾಗಿ ಕೇಂದ್ರಾದಿ ಯಲ್ಲಿಯ ಸ್ಥಿರರಾಶಿ ದಶಾ ಆಗುತ್ತದೆ. ಲಗ್ನ ಅಥವಾ ಸಪ್ತಮ ವಿಷಮ ರಾಶಿಯಾಗಿದ್ದರೆ ಕ್ರಮದಿಂದ ಸಮವಾಗಿದ್ದರೆ ವ್ಯತ್ಕ್ರಮದಿಂದ ಕೇಂದ್ರಸ್ಥಿತ ರಾಶಿಯ ಗಣನ ಹಾಗೂ ಬಲಕ್ರಮದಿಂದ ದಶಾ ಆಗುತ್ತದೆ. ಇದೇ ರೀತಿ ಆತ್ಮಕಾರಕದಿಂದಲೂ ರಾಶಿ ಹಾಗೂ ಗ್ರಹತಾ ದಶಾ ಕ್ರಮ ತಿಳಿಯುವುದು. ದಶಾವರ್ಷ ಚಂದ್ರ ದಶಾ ಸಮಾನ ಲಗ್ನದಿಂದ ನವಮ ವಿಷಮ ಪದಿಯವಾದರೆ ಕ್ರಮದಿಂದ ಸಮಪದವಾದರೆ ವ್ಯುತ್ಕ್ರಮದಿಂದ ರಾಶಿ ಸ್ವಾಮಿಯವರೆಗೆ ಗುಣಿಸಿ – ದಶಾ ವರ್ಷ ಸ್ವರಾಶಿಯವರೆಗೆ ಎಣಿಸುವುದರಿಂದ ಅಧಿಕ ಅಂತರವಾದ ರಾಶಿಯಿಂದಲೇ ಪ್ರಾರಂಭಿಸುವುದು. ಯಾವುದು ಬಲಿಷ್ಠ ರಾಶಿಯೋ ಅಲ್ಲಿಯವರೆಗೆ ಎಣಿಸಿ ಸಂಖ್ಯಾ ತುಲ್ಯ ಸಮಾನ ವರ್ಷಮಾನವಾಗುತ್ತದೆ.

## ದ್ವಿರಾಶೀಶ ಗ್ರಹದ ವರ್ಷಜ್ಞಾನ

ದ್ವಿಭಾಧೀಶ ಗ್ರಹಸ್ಯೈವಂ ಗಣನೀಯಾ ದ್ವಯಾವಧಿ ।
ದ್ವಯೋಃ ಸಂಖ್ಯಾದಿಕತರಾ ದಶಾಬ್ದಾಃ ಕಾರಕಸ್ಯವೈ ॥೧೭೨॥

ಎರಡು ರಾಶಿಗಳ ಗ್ರಹಗಳ ದಶಾ ವರ್ಷಕ್ಕಾಗಿ ಸ್ವರಾಶಿ ಸ್ಥಾನದಿಂದ ಎರಡೂ ರಾಶಿಗಳಿಂದ ಗ್ರಹ ಸ್ಥಾಪಿತ ಸ್ಥಾನದವರೆಗೆ ಚರದಶಾದಂತೆ ಎಣಿಸಿ ಹೆಚ್ಚು ಸಂಖ್ಯೆಯನ್ನೇ ವರ್ಷವೆಂದು (ಎರಡು ರಾಶಿಗೆ) ಪರಿಗ್ರಹಿಸುವುದು.

## ಕಾರಕ ದಶಾ

ವಿಜ್ಞೇಯಾ ಕಾರಕದಸಾ ಕ್ರಮತಸ್ತ್ವಾತ್ಮಕಾರಕಾ[illegible]
ಲಗ್ನಾತ್ಕಾರಕ ಪರ್ಯ[illegible] ಸಂ[illegible]ಖ್ಯ[illegible] ॥೧೭೩॥

ಆತ್ಮಕಾರ[illegible] ಮಾಡಿ ಕ್ರಮಶಃ ಆತ್ಮಕಾರಕ [illegible] ಆಗುತ್ತದೆ. ಲಗ್ನದಿಂದ ಕಾರ[illegible]ಂತೆ ಸಂಖ್ಯಾ ತುಲ್ಯ ದಶಾವರ್ಷ [illegible]ಯುವುದು.

ಈ ಮೊದಲೇ ನೋಡಿದಂತೆ ಆತ್ಮಕಾರಕ ಗ್ರಹ ಶನಿ – ನವಮಸ್ಥನಾಗಿದ್ದು 8 ವರ್ಷ ದಶಾ ವರ್ಷವಾದರೆ ಅಮಾತ್ಯಕಾರಕ ಶುಕ್ರ 2 ವರ್ಷ. ಈ ರೀತಿ ದಶಾವರ್ಷ ತೆಗೆದಾಗ ಆಯಾ ವರ್ಷಗಳಲ್ಲಿ ಆಯಾ ಕಾರ್ಯ ಜರುಗಿದುದು ಕಂಡುಬರುತ್ತದೆ.

## ಮಂಡೂಕ ದಶಾ

ಮಂಡೂಕಾಬ್ಯದ ಶ್ಚೈವ ಪ್ರಾಕ್ ತ್ರಿಕೂಟಾಭಿಧಯಾ ಸ್ಮೃತಾ ।
ತನ್ವಸ್ತಯೋರ್ಬಲವತೋ ರಾಶೇರೋಜೆ ಕ್ರಮಾತ್ ತಥಾ ॥೧೭೪॥

ವಿಪರ್ಯಯಾದನೋಜೆ ತು ದಶಾ ಜ್ಞೇಯ ಬುಧೈಃ ಸದಾ ।
ಮಂಡೂಖ್ಯಾ ದಶಾವರ್ಷಮಾನಂ ಸ್ಥಿರದಶಾ ಸಮಮ್ ॥೧೭೫॥

ಪ್ರಾಚೀನರು ಈ ಮಂಡೂಕ ದಶಾವನ್ನೇ ತ್ರಿಕೂಟ ದಶಾ ಎಂದು ಕರೆದದ್ದು. ಲಗ್ನ ಸಪ್ತಮದಲ್ಲಿ ಬಲಿಷ್ಟವಾದುದನ್ನು ಅದರಿಂದ ಆರಂಭಿಸಿ ವಿಷಮದಲ್ಲಿ ಕ್ರಮಶಃ ಸಮದಲ್ಲಿ ವ್ಯುತ್ಕ್ರಮದಂತೆ – ದಶಾ ವರ್ಷಗಳು ಸ್ಥಿರ ದಶಾದಂತೆ ಸ್ಥಿರ (ಚರರಾಶಿ 7 ವರ್ಷ, ಸ್ಥಿರ 8 ವರ್ಷ, ದ್ವಿ ಸ್ವಭಾವ 9 ವರ್ಷ) ಇಲ್ಲಿ ಎರಡನ್ನು ಬಿಟ್ಟು 3ರಿಂದ ಆರಂಭವಾಗುತ್ತದೆ. ಅದೇ ವಿಶೇಷ.

ಪೂರ್ವ ಲಿಖಿತ ಕುಂಡಲಿಯಲ್ಲಿ ಲಗ್ನ ಬಲಿಷ್ಠವಾಗಿದ್ದು ಲಗ್ನ ದಶಾ – (ಗುರು ದೃಷ್ಟಿ) ಹಿಡಿಯುವುದು ಲಗ್ನ ಸಮರಾಶಿ ಹಾಗೂ ಚರರಾಶಿಯಾದ್ದರಿಂದ –

ಎರಡನ್ನು ಬಿಟ್ಟು ಹಿಡಿಯುವುದು ಹೇಳಿರುವುದರಿಂದ – ವಿಪರೀತ ಕ್ರಮದಿಂದ.

| ದಶಾ ಚರಲಗ್ನಕರ್ಕ | ಮೇಷ | ಮಕರ | ತುಲಾ | ಸಿಂಹ | ವೃಷಭ | ಕುಂಭ | ವೃಶ್ಚಿಕ | ಕನ್ಯಾ | ಮಿಥುನ | ಮೀನ | ಧನು |
|---|---|---|---|---|---|---|---|---|---|---|---|
| 7 | 7 | 7 | 7 | 8 | 8 | 8 | 8 | 9 | 9 | 9 | 9 |

## ಶೂಲದಶಾ

ಕೆಚಿಚ್ಛೂಲ ದಶಾಹುರ್ನಿದನಜ್ಞಾನ ಹೇತವೆ ।
ತನ್ವಸತಯೋರಷ್ಟಮೌ ಯೌತಯೋ ರಾಶಿಸ್ತು ಬಲೀ ॥೧೭೬॥

ಓಜೆ ಕ್ರಮಾತ್ತದಾರಭ್ಯ ಸಮೇ ಸ್ಯಾಧ್ ವಿಪರೀತತಃ ।
ದಶಾಸಮಾಃ ಸ್ಥಿರ ಇವ ಮೃತ್ಯುರ್ಬಲಿನಿ ಮಾರಕೆ ॥೧೭೭॥

ಮರಣ ವಿಚಾರಾರ್ಥ ಯಾವುದೋ ಆಚಾರ್ಯರು ಶೂಲ ದಶಾ ಹೇಳಿದ್ದಾರೆ. ಲಗ್ನ ಹಾಗೂ ಸಪ್ತಮದಿಂದಾಷ್ಟಮ(ಅಷ್ಟಮ, ದ್ವಿತೀಯ)ದಲ್ಲಿ ಯಾವುದು ಬಲಿಷ್ಠವೋ ಅದರಿಂದ ಆರಂಭಿಸಿ ವಿಷಮ ರಾಶಿಯಲ್ಲಿ ಕ್ರಮಾತ್ ಸಮ ರಾಶಿಯಲ್ಲಿ ಉತ್ಕ್ರಮದಿಂದ – ಎಣಿಸಿ ಹನ್ನೆರಡು ರಾಶಿ ದಶಾ ಹೇಳುವುದು – ಸ್ಥಿರ ದಶಾದಂತೆ ವರ್ಷಮಾನ ಗಣಿಸುವುದು. ಬಲಿಷ್ಟ ಮಾರಕ ರಾಶಿಯಲ್ಲಿ ಮೃತ್ಯು ಸಂಭವಿಸುತ್ತದೆ.

## ತ್ರಿಕೋಣ ದಶಾ

ಜನಸ್ತನೂಕೋಣಗೇಷು ಭೇಷು ಪ್ರಬಲ ರಾಶಿತಃ ।
ಪಮಾರಭ್ಯೆ ಚರವದ್ ದಶಾ ಜ್ಞೇಯಾ ತ್ರಿಕೋಣಜ ॥೧೭೮॥

ಓಜೆ ಕರಮಾ ಧನೇಜ ತು ವೈಪರೀತ್ಯೇನ ನಿರ್ದಿಶೇತ್ ।
ದಶಾಬ್ದಾ ಅತ್ರ ವಿಬುಧೈರ್ನಾಥಾಂತಾಃ ಪರಿಕೀರ್ತಿತಾಃ ॥೧೭೯॥

ಜನ್ಮ ಲಗ್ನ ತದ್ ನವಮ, ಪಂಚಮ ಈ ರಾಶಿಗಳಲ್ಲಿ ಯಾವುದು ಪ್ರಬಲವೋ ಅದರಿಂದ ಆರಂಭಿಸಿ ಚರದಶಾದಂತೆ – ತ್ರಿಕೋಣ ದಶಾ ತೆಗೆಯವುದು – ವಿಷಮ ರಾಶಿಯಲ್ಲಿ ಕ್ರಮದಂತೆ ಸಮರಾಶಿಯಲ್ಲಿ ವಿಪರೀತ ಮಾಡುವುದು. 1–9–5 ಈ ಕ್ರಮದಲ್ಲಿ ಪರಿಗಣನೆ ದಶಾವರ್ಷ ಆಯಾ ರಾಶಿಗಳ ಸ್ವಾಮಿ ಪರ್ಯಂತ ಎಣಿಸಿ ಚರದಂತೆ ತೆಗೆದುಕೊಳ್ಳುವುದು. 1–9–5 ಈ ಸ್ಥಾನ ರಾಶಿ ದಶಾ ಆದ್ದರಿಮದ ತ್ರಿಕೋಣ ದಶಾ ಎನ್ನುವುದು.

ಉದಾಹರಿತ ಕುಂಡಲಿಯಲ್ಲಿ ಮೀನ (ನವಮ) ಬಲಿಷ್ಠವಾಗಿದ್ದು ಅದನ್ನೆ ಗ್ರಹಿಸುವುದು.

## ದೃಗ್ ದಶಾ

ತನೋರ್ಭಾಗ್ಯಸ್ಯ ತದನು ತದೀಕ್ಷಿತ ಗ್ರಹೋದ್ ಭವಾ ।
ಆಸ್ಪದಸ್ಯ ಚ ತತಃ ತದ್‌ದೃಷ್ಟ ಭವನೋದ್ ಭವಾ ॥೧೮೦॥

ತತೋ ಲಾಭಸ್ಯಚ ಪುನಸ್ತದ್ ದೃಷ್ಟಕ್ಷೇತ್ರಜಾ ಸಮಾಃ ।
ಸ್ಥಿರವದ್ ದೃಷ್ಟಿವಶತೋ ಜಾತೇಯಮಿತಿ ದೃಗ್ ದಶಾ ॥೧೮೧॥
ವ್ಯಕ್ರಮಾತ್ ಕ್ರಮತಶ್ಚಾಪಿ ಚರಸ್ಥಿರ ಭಯೋಸ್ತು ದೃಕ್ ।
ಓಜೋ ದ್ವಿಭೆ ಕ್ರಮಾದೇವಂ ಸಮೇ ತೂಕ್ರಮತೋ ಹಿ ಸಾ ॥೧೮೨॥

ಲಗ್ನದಿಂದ ನವಮ ರಾಶಿ ನಂತರ ಅದರಿದ ದೃಷ್ಟ ರಾಶಿಗಳು ನಂತರ ದಶಮರಾಶಿ ಅದರಿಂದ ದೃಷ್ಟರಾಶಿ ಪುನಃ ಏಕಾದಶ ರಾಶಿ ಅದರಿಂದ ದೃಷ್ಟರಾಶಿಯ ದಶಾ ಪರಿಗಣಿಸುವುದು. ದೃಗ್‌ವಿತ್ ಪ್ರವೃತ್ತಿ ಕಾರಣವಾದ್ದರಿಂದ ದೃಗ್ ದಶಾ ಎಂದು ಕರೆಯಲಾಗಿದೆ – ಉಲ್ಲೇಖಿಸಿದ ನವಮ, ದಶಮ, ಏಕಾದಶ – ರಾಶಿ ಚರ, ಸ್ಥಿರ, ದ್ವಿಸ್ವಭಾವವಾಗಿರುತ್ತವೆ. ಚರರಾಶಿ ಉತ್ಕ್ರಮ ಸ್ಥಿರವಾಗಿದ್ದರೆ ಪರಾಕ್ರಮದಿಂದ – ದೃಷ್ಟಿಯೋಗ ರಾಶಿಯೆಂದು ಪರಿಗ್ರಹಿಸುವುದು. ದ್ವಿಸ್ವಭಾವ ದಲ್ಲಿ – ದ್ವಿಸ್ವಭಾವ ವಿಷಯವಾದರೆ ಕ್ರಮದಂತೆ ಸಮರಾಶಿಯಾದರೆ ಉತ್ಕ್ರಮ ದಲ್ಲಿ ದೃಷ್ಟಿಯೋಗ ರಾಶಿಯೆಂದು ಪರಿಗ್ರಹಿಸುವುದು – ದೃಷ್ಟಿ ವರ್ತಯಲ್ಲ, ಸಮೀಪ ವರ್ತ ರಾಶಿಯಿಂದಲೇ ಆರಂಭ ಮಾಡುವುದು. ಚರದಲ್ಲಿ ಪೃಷ್ಟಸ್ಥ ಸ್ಥಿರದಲ್ಲಿಅಗ್ರಸ್ಥ – ರಾಶಿ ದೃಷ್ಟವಾಗುತ್ತವೆ. ದ್ವಿಸ್ವಭಾವದಲ್ಲಿ (ಸಮ, ವಿಷಮ) ಎರಡು ಆಗುವ ಕಾರಣ ವಿಷಮ ರಾಶಿಯಾಗಿದ್ದ ಕ್ರಮವತ್ ಸಸಮವಾದರೆ ಉತ್ಕ್ರಮದಲ್ಲಿ ದಶಾವರ್ಷ ಮಾನ ಸ್ಥಿರ ದಶಾದಿಂದ ದೃಷ್ಟಿ ವಿಚಾರವನ್ನು ದೃಷ್ಟಿ ಚಕ್ರಗ್ರಾಸದಲ್ಲಿ ನೋಡುವುದು.

ಉದಾಹರಿತ ಕುಂಡಲಿಯಲ್ಲಿ ಕರ್ಕಲಗ್ನ ನವಮ ಮೀನವಾದ್ದರಿಂದ ದ್ವಿಸ್ವಭಾವ – ಸಮವಾದ್ದರಿಂದ.

| ಮೀನ | ಧನು | ಕನ್ಯಾ | ಮಿಥುನ | ಮೇಷ | ಕಟಕ | ತುಲಾ | ಮಕರ | ವೃಷಭ | ಸಿಂಹ | ವೃಶ್ಚಿಕ | ಕುಂಭ |
|---|---|---|---|---|---|---|---|---|---|---|---|
| 9 | 9 | 9 | 9 | 7 | 7 | 7 | 7 | 8 | 8 | 8 | 8 |

ಈ ರೀತಿ ದಶಾವರ್ಷಗಳಾಗುವುವು.

## ತನ್ವಾದಿ ರಾಶಿ ದಶಾ

ತನ್ವಾದಿ – ಭಾನಾಂ ಪ್ರತಿಭಂ ದಶಾ ರಾಶಿದಶಾ ಮತಾ ।
ಭಯಾತಂ ಭಾನುಗುಣಿತಂ ಭಭೋಗೇನ ವಿಭಾಜಿತಮ್ ॥೧೮೩॥

ಭಾದ್ಯಂ ಫಲಂ ತನೌ ಯೋಜ್ಯಂ ತಷ್ಠಿತಂ ರವಿಭಿಸ್ತದಾ ।
ಜ್ಞೇಯಾಂ ದಶಾ ಬುಧೈ ರಾಶೇರೋರ್ಘೋನೋಜೆ ಕ್ರಮೋತ್ಕ್ರಮಾತ್
॥೧೮೪॥

ದಶಾ ವರ್ಷಾಣಿ ಸ್ಥಿರವದ್ ಬೋಧ್ಯಾನ್ಯತ್ರಾಪಿ ವಿದ್ವರೈಃ ।

ಪ್ರತಿ ನಕ್ಷತ್ರ ಹನ್ನೆರಡು ರಾಶಿಗಳ ದಶಾ ಆಗುತ್ತದೆ. ಆದಕ್ಕೆ ತನ್ವಾದಿ ರಾಶಿ ದಶಾ ಎನ್ನುವರು. ಭಾಯಾತ್‌ಕ್ಕೆ 12ರಿಂದ ಗುಣಿಸಿ ಭಬೋಗ ಭಾಗಿಸಿ ರಾಶ್ಯಾದಿ ಲಬ್ಧ ದೊರೆಯುತ್ತದೆ. ಅದನ್ನು (ಲಬ್ಧ) ಲಗ್ನದಲ್ಲಿ ಸೇರಿಸಿ ಪುನಃ 12ರಿಂದ ಭಾಗಿಸಲು ಯಾವ ರಾಶಿ ಬರುತ್ತದೆಯೋ ಅದೇ ರಾಶಿ ದಶಾ ಆಗುತ್ತದೆ. ವಿಷಮವಾದರೆ ಕ್ರಮದಲ್ಲಿ ಸಮರಾಶಿಯಾದರೆ ವಿಪರೀತ ಕ್ರಮದಲ್ಲಿ ರಾಶಿ ದಶಾ ಪರಿಗಣಿಸುವುದು.

## ಭುಕ್ತ ಭೋಗ್ಯ ವರ್ಷಾಧ್ಯಾನಯನ

ಯಾತಾಂಶ ಗುಣಿತಂ ತ್ರಿಶದುದ್ ಧೃತಂ ತು ದಶಾಂಬ್ಧಕಮ್ ।
ಯಾನಮಬ್ದಾದಿಕಂ ವೇದ್ಯಮೈಷ್ಯಂ ಮಾನೇ ವಿಶೋಧನಾತ್ ॥೧೮೫॥

ದಶಾಪ್ರದ ರಾಶಿಯ ಭುಕ್ತಾಂಶಕ್ಕೆ ದಶಾವರ್ಷದಿಂದ ಗುಣಿಸಿ 30ರಿಂದ ಭಾಗಿಸಿ ಲಬ್ಧ ಭುಕ್ತ ವರ್ಷ ಪುನಃ ಅದನ್ನು ಸಮಸ್ತಮಾನ (ದಶಾವರ್ಷ)ದಲ್ಲಿ ಕಳೆಯಲು ಭೋಗ್ಯದಶಾವರ್ಷಾದಿ ಬರುವುದು.

## ಪಂಚಸ್ವರ ದಶಾ

ಪ್ರಾಂಜನ್ಯಸೇತು ಕ್ರಮೇಣೈವಾಕಾರಾದಿ ಸ್ವರ ಪಂಚಕಮ್ ।
ಕಾದಿಹಾಂತಾಲ್ಲಖೇದ್ ವರ್ಣಾನ್ ಸ್ವರಾಧೋಂಜಣೋಜ್ಜಿತಾನ್
॥೧೮೬॥

ತಿರ್ಯಕ್ ಪಂಕ್ತಿ ಕ್ರಮೇಣೈವ ಪಂಚಪಂಚ ವಿಭಾಗತಃ ।
ನಪ್ರೋಕ್ತಾ ಙಞಣಾ ವರ್ಣ ನಾಮಾದೌ ಸಂತಿ ತೇ ನಹಿ ॥೧೮೭॥

ಚೇದ್ ಭವಂತಿ ತದಾ ಜ್ಞೇಯಾ ಗಜಡಾಸ್ತೆ ಯಥಾಕ್ರಮಾತ್ ।
ಸ್ವರೆ ಯಸ್ಮಿನ್ನಾತ್ಮಾನಾಮಾದಿಮ ವರ್ಣಾಸ್ತದಾದಿತಃ ॥೧೮೮॥

ದಶೇಶಾಸ್ತು ಕ್ರಮಾತ್ ಪಂಚ ದ್ವಾದಶಾಬ್ದಾಃ ಸಮೇ ಮತಾಃ ।
ಅಂತರ್ದಶಾದಯೋ ಜ್ಞೇಯಾಃ ಸ್ವರಾಣಾಂ ತದ್ವಶಾಸ್ತು ಚ ॥೧೮೯॥

ಇಲ್ಲಿ ಅಕಾರಾದಿಸ್ವಪಂಚಕ ಕ್ರಮದಿಂದ ಬರೆದು (ಅ, ಇ, ಉ, ಎ, ಓ) ಅದರ ಕೆಳಗೆ ಙಞಣ ಬಿಟ್ಟು ಉಳಿದ ಕ, ಹ, ದವರೆಗೆ ಎಲ್ಲಿ ಅಕ್ಷರ ಕ್ರಮಶಃ ಬರೆಯುವುದು. ಪಂಕ್ತಿ ಕ್ರಮದ್ದೇ ಐದು ಅಕ್ಷರಗಳು ಙ,ಞ,ಣ, ಈ ಅಕ್ಷರ ಆದಿ ಅಕ್ಷರಗಳಾಗುವುದಿಲ್ಲ. ಅದಕ್ಕೆ ಈ ಅಕ್ಷರ ವರ್ಜಿಸಿದೆ. ಆದಿ ವರ್ಣದ ಸ್ವರದಿಂದ ದಶಾರಂಭ ಕ್ರಮಶಃ ಐದು ಸ್ವರಗಳ ದಶಾ ಆಗುತ್ತದೆ. ಎಲ್ಲ ವರ್ಣಗಳ ದಶಾವರ್ಷ 12 ಇದೆ.

ದಶಾಗಳಲ್ಲಿ ಎಲ್ಲವುಗಳ ಅಂತರ ದಶಾ – ಆದಿ ಗ್ರಹಿಸಿ ನಂತರ ಫಲಾದೇಶ ಮಾಡುವುದು ಹಾಗೂ ಯಾವ ಅಕ್ಷರ (ಸ್ವರ ಅಥವಾ ವ್ಯಂಜನ) ಅಕ್ಷರಾದಿಯಾಗಿ (ನಾಮ ಆದಿ) ಬರಲಾರವೋ ಅವುಗಳನ್ನು ಬಿಟ್ಟು ಉಳಿದ ಸ್ವರ, ವ್ಯಂಜನಗಳನ್ನು ವಿಂಗಡಿಸಿಡಲಾಗಿದೆ.

ಕೆಳಗಿನ ಚಾರ್ಟ್ ನೋಡಿ ನಾಮಕ್ಷರಕ್ಕೆ ದಶಾ ಹೊಂದಿಸಿಕೊಳ್ಳುವುದು.

**ಚಾರ್ಟ್**

| ಸ್ವರ | ಅ | ಇ | ಉ | ಎ | ಓ |
|---|---|---|---|---|---|
| ದಶಾವರ್ಷ | 12 | 12 | 12 | 12 | 12 |
| ವ್ಯಂಜನಗಳು | ಕ | ಖ | ಗ | ಘ | ಚ |
| | ಛ | ಜ | ಝ | ಟ | ಠ |
| | ಡ | ಢ | ತ | ಥ | ದ |
| | ಧ | ನ | ಪ | ಫ | ಬ |
| | ಭ | ಮ | ಯ | ರ | ಲ |
| | ವ | ಶ | ಷ | ಸ | ಹ |

ಉದಾಹರಣೆ, ಉದಾಹರಿತ ಜಾತಕನ ಜನ್ಮ ವಿಶಾಖಾ 2ನೇ ಚರಣವಾಗಿದ್ದು 'ಉ' ಸ್ವರದಿಂದ ಆರಂಭ.

### ವರ್ಣ ದಶಾ

**ಅಥವಚ್ಮಿ ದಶಾಂ ವಿಪ್ರ । ತವಾಗ್ರೆ ವರ್ಣದಾಭಿದಾವ್ ।**
**ಯಜ್ಞಾನತಃ ಕ್ಷಮಾ ವಕ್ತುಮಾಯುರ್ದಾಯ ಫಲಂ ಜನಾಃ ॥೧೯೦॥**

**ಓ ಜಾನೋಜ ಲಗ್ನಜಾನಾಂ ಮೇಷ ಮೀನಾದಿತೋ ಬುಧಃ ।**
**ವಿಗಣಯ್ಯ ಜನುರ್ಲಗ್ನಂ ಹೋರಾಲಗ್ನಾಂತಮೇವ ಚ ॥೧೯೧॥**

**ಸವ್ಯಾಪಸವ್ಯಕ್ರಮತಶ್ಚೈವ ಸಂಖ್ಯಾದ್ವಯಂ ಭವೇತ್ ।**
**ತತ್ರೌ ಜಯುಗ್ಮತಃ ಸಾಜಾತ್ಯಂ ಜಾತೀಯತಾ ತಥಾ ॥೧೯೨॥**

**ಸಾಜಾತ್ಯೆ ತು ತಯೋರ್ಯೋಗೋ ವೈಜಾತ್ಯೆಂತರಮಿಷ್ಯತೆ ।**
**ಮೇಷಕ್ರಮಾತ್ ತದ್‌ವೈಶಮ್ಯೆ ಸಾಮ್ಯೆ ಮೀನಾದಿಕೋತ್ಕ್ರಮಾತ್ ॥೧೯೩॥**

**ಗಣಯೇ ದೇವ ಮಾಯಾತೋ ರಾಶಿಹ ಸ್ಯಾದ್ ವರ್ಣದಾಭಿಧ್ಯಃ ॥**

ಈಗ ನಾನು ಆಯುರ್ದಾಯ ತಿಳಿಯಲು ವರ್ಣ ದಶಾ ಹೇಳುತ್ತೇನೆ. ವಿಷಮ ಲಗ್ನವಿದ್ದರೆ ಮೇಷಾದಿ ಕ್ರಮದಿಂದ ಸಮ ಲಗ್ನದಲ್ಲಿ ಮೀನಾಧ್ಯುತ್ಕ್ರಮದಿಂದ ಜನ್ಮ ಲಗ್ನ ಹಾಗೂ ಹೋರಾಲಗ್ನದವರೆಗೆ ಎಣಿಸಿ ಈ ಪ್ರಕಾರ ಎರಡು ಸಂಖ್ಯೆಗಳು ಬರುವುದು. ಎರಡು ವಿಷಮ ಅಥವಾ ಎರಡು ಸಮ ಸಂಖ್ಯೆಯಾದರೆ ಸಜಾತಿಯಾಗುತ್ತದೆ. ಒಂದು ವಿಷಮ. ಒಂದು ಸಮವಾದರೆ ವಿಜಾತೀಯವಾಗುತ್ತದೆ. ಸಜಾತಿಯಾದರೆ ಯೋಗ. ವಿಜಾತಿಯಾದರೆ ಅಂತರವೆನ್ನುವುದು. (ಸಮ ಕೂಡಿಸುವುದು. ವಿಷಮ ಕಳೆಯುವುದು) ಈ ರೀತಿ ಸಿದ್ಧ ಸಂಖ್ಯೆ ವಿಷಮವಾದರೆ. ಮೇಷಾದಿ ಕ್ರಮದಿಂದ ಸಮವಾದರೆ ಮೀನಾದಿ ಉತ್ಕ್ರಮದಿಂದ ಎಣಿಸಿ ಆ ಗತರಾಶಿ ವರ್ಣದವೆನ್ನುತ್ತಾರೆ.

ಉದಾಹರಣೆ – ಜನ್ಮಲಗ್ನ ಕರ್ಕ 15 ಡಿಗ್ರಿಯಲ್ಲಿಯೇ ಇರುವ ಕರ್ಕ ಹೋರಾಲಗ್ನವಾಗುತ್ತಿದ್ದು (ಇದನ್ನು ಬಿಟ್ಟು ಈ ಮೊದಲೇ ತಿಳಿಸಿದ ವಿಶೇಷ ಹೋರಾ ಲಗ್ನ – ಹೋರಾ ಘಟಿ ಭಾವ ಲಗ್ನದಲ್ಲಿ ತಿಳಿಸಿದ ಹೋರಾ ಅಲ್ಲ ಲಗ್ನ ತೆಗೆದುಕೊಳ್ಳುವುದು) ಹೋರಾ ಲಗ್ನ, ಮೀನ ಎರಡು ಸಮರಾಶಿಗಳಿದ್ದು – ಮೇಷದಿಂದ ವಿಪರೀತ ಎಣಿಸದೆ ಮೀನದಿಂದ ವಿಪರೀತ ಕ್ರಮದಲ್ಲಿ ಎಣಿಸುವುದು. 9, 9 ಸಂಖ್ಯೆಯಾಗುವುದು – ವಿಷಯವಾದ್ದರಿಂದ 9 – 9 = 0ಯಾಗುತ್ತದೆ. ಮೀನವೇ ಆಗುವುದರಿಂದ ವರ್ಣದ ರಾಶಿ ಮೀನ ಮುಂದಿನ ಕ್ರಮದಂತೆ ದಶಾವರ್ಷ.

**ಹೋರಾಲಗ್ನ ಲಗ್ನಯೋರ್ಯತ್ ಪ್ರಬಲಂ ತು ತತೋದಶಾ ॥೧೯೪॥**

ಕ್ರಮವ್ಯುತ್ಕ್ರಮ ಭೇದೇನ ವಿಷಮಾನೋಜಯೋರ್ಭವೇತ್ ।
ವರ್ಣದೋ ಲಗ್ನತೋ ಯಾವನ್ನಿತಭೆ ತನ್ಮಿತಾಃ ಸಮಾಃ ॥೧೯೫॥

ಏವಂ ದ್ವಾದಶಭಾವಾನಾಂ ದಶಾಬ್ದೈಭ್ಯೋ ದಶಾ ಭವೇತ್ ।

ಹೋರಾಲಗ್ನ ಜನ್ಮಲಗ್ನದಲ್ಲಿ ಬಲಿಷ್ಠವಾಗಿದೆಯೋ ಆ ರಾಶಿಯಿಂದ ವಿಷಮವಾದರೆ, ಕ್ರಮದಿಂದ ಸಮವಾದರೆ, ವಿಪರೀತ ಕ್ರಮದಿಂದ ಪ್ರವೃತ್ತಿ ಯಾಗುತ್ತದೆ. ಲಗ್ನದಿಂದ ಎಷ್ಟನೇ ಸಂಖ್ಯಿತ ಸ್ಥಾನವಾಗುತ್ತದೆಯೋ (ವರ್ಣದವರೆಗೆ) ಅಷ್ಟು ವರ್ಷ ದಶಾ ವರ್ಷವಾಗುತ್ತದೆ. ಇದೇ ರೀತಿ 12 ಭಾವಗಳ ದಶಾ ವರ್ಷ ತೆಗೆಯುವುದು – ಅವೇ ವರ್ಷಗಳಾಗುತ್ತವೆ.

## ಯೋಗಿನಿ ದಶಾ

**ಪರಾಶರ ಉವಾಚ:**

ಅಥೋಚ್ಯತೇಧುನಾ ಶಂಭುಭಾಷಿತಾ ಯೋಗಿನಿ ದಶಾ ।
ಮಂಗಲಾ ಪಿಂಗಲಾ ಧಾನ್ಯಾ ಭ್ರಾಮರಿ ಭದ್ರಿಕಾ ತಥಾ ॥೧೯೬॥

ಉಲ್ಕಾ ಸಿದ್ಧಾ ಸಂಕಟಾ ಚೇತ್ಯಷ್ಟಧಾ ಯೋಗಿನೀ ದಶಾ ।
ಮಂಗಲಾತೋ ಜನ ಶಶಿ ಪಿಂಗಲಾತಸ್ತು ಭಾಸ್ಕರಃ ॥೧೯೭॥

ಧಾನ್ಯತೋ ದೇವಪೂಜ್ಯೋ ವೈ ಭ್ರಾಮಮರಿತೋ ಮಹಿಸುತಃ ।
ಭದ್ರಕಾತಃ ಶಶಿಸುತಶ್ಚೋಲ್ಕಾತೋ ರವಿನಂದನಃ ॥೧೯೮॥

ಸಿದ್ಧಾತೋ ಭೃಗಸುತಃ ಸಂಕಟಾತಸ್ತಮೋ ಗ್ರಹಃ ।
ಜನುರ್ಭ ವಹ್ನಿ ಸಂಯುಕ್ತಂ ವಸುಭಿಶ್ಚೋದ್ಧತಂ ತತಃ ॥೧೯೯॥

ಯೋಗಿನ್ಯೋ ಮಂಗಲಾದ್ಯಾಸ್ತು ಶೇಷಾದೇಕಾದಿತೋ ಮತಾಃ ।
ದಶಾಬ್ದಾಃ ಕ್ರಮತಸ್ತ್ವೆಷಾಮೇಕಾದೇಕಾಧಿಕಾಃ ಸ್ಮೃತಾಃ ॥೨೦೦॥

ಭುಕ್ತಭೋಗ್ಯಾದಿಕಂ ಸಾಧ್ಯಂ ತದ್‌ಭಯಾತ್ ಭ ಭೋಗಿತಃ ।

**ಪರಾಶರರು ಹೇಳಿದರು–**

ಹೇ ಮೈತ್ರೇಯ ಮುನಿಯೇ, ಈಗ ನಾನು ಶಿವನು ಹೇಳಿದ ಯೋಗಿನಿ ದಶಾದ ಬಗ್ಗೆ ವಿವರಿಸುತ್ತೇನೆ. ಈ ದಶಾ (1) ಮಂಗಲಾ (2) ಪಿಂಗಲಾ (3) ಧಾನ್ಯಾ (4) ಭ್ರಾಮರಿ (5) ಭದ್ರಿಕಾ (6) ಉಲ್ಕಾ (7) ಸಿದ್ಧಾ (8) ಸಂಕಟ. ಈ ಎಂಟು

ಯೋಗಿನಿಯರ ಹೆಸರಿನಲ್ಲಿ ದಶಾ ನಡೆಯುತ್ತವೆ. ಧಾನ್ಯಾ–ಗುರು, ಭ್ರಾಮರಿ–ಮಂಗಳ, ಭದ್ರಿಕಾ–ಬುಧ, ಉಲ್ಕಾ–ಶನಿ, ಸಿದ್ಧಾ–ಶುಕ್ರ, ಸಂಕಟಾ–ರಾಹು. ಈ ರೀತಿ ಗ್ರಹಗಳು – ಇಲ್ಲಿ ಜನ್ಮನಕ್ಷತ್ರ ಸಂಖ್ಯೆಯಲ್ಲಿ 3 ಸೇರಿಸಿ 8ರಿಂದ ಭಾಗಿಸಲು ಏಕಾದಿಶೇಷದಲ್ಲಿ (1ರಲ್ಲಿ) ಮಂಗಲಾದಿ ಯೋಗದಶಾ ಈ ಯೋಗಿನಿಯರ ದಶಾ ವರ್ಷ 1ರಿಂದ8ರವರೆಗೆ ಇವೆ. (1, 2, 3, 4, 5, 6, 7 ಹಾಗೂ 8) ಇಲ್ಲಿಯೂ ವಂಶೋತ್ತರಿಯಂತೆ ಮಾಸಗಳನ್ನು ತೆಗೆಯಬಹುದು.

### ಯೋಗಿನಿ ದಶಾ ಚಾರ್ಟ್

| ಮಂಗಲಾ 1 | ಪಿಂಗಲಾ 2 | ಧಾನ್ಯಾ 3 | ಭ್ರಾಮರಿ 4 | ಭದ್ರಿಕಾ 5 | ಉಲ್ಕಾ 6 | ಸಿದ್ಧಾ 7 | ಸಂಕಟಾ 8 |
|---|---|---|---|---|---|---|---|
| ಆರಿದ್ರಾ | ಪುನರ್ವಸು | ಪುಷ್ಯಾ | ಅಶ್ವಿನಿ | ಭರಣಿ | ಕೃತ್ತಿಕಾ | ರೋಹಿಣಿ | ಮೃಗಶಿರ |
| ಚಿತ್ರಾ | ಸ್ವಾತಿ | ವಿಶಾಖಾ | ಆಶ್ಲೇಷ | ಮಘಾ | ಪೂರ್ವ | ಉತ್ತರಾ | ಹಸ್ತ |
| ಶ್ರವಣ | ಧನಿಷ್ಠ | ಶತತಾರಾ | ಅನುರಾಧ | ಜ್ಯೇಷ್ಠ | ಮೂಲ | ಪೂ.[illegible] | [illegible] |
| | | | ಪೂ.ಭಾ. | ಉ.ಭಾ | ರೇವತಿ | | |
| ಚಂದ್ರ | ಸೂರ್ಯ | ಗುರು | ಮಂಗಳ | ಬುಧ | ಶನಿ | ಶುಕ್ರ | ರಾಹು |

ಇಲ್ಲಿ ನಿಯಮದಂತೆ ಉದಾಹರಿತ ಕುಂಡಲಿಯಲ್ಲಿ ವಿಶಾಖ ಜನ್ಮನಕ್ಷತ್ರ ಸಂಖ್ಯೆ 16+3=19÷8=3 ಮೂರನೇ ದಶಾ ಧಾನ್ಯಾ – ಕೆಳಗೆ ವಿಶಾಖಾ ನಕ್ಷತ್ರ – ಪ್ರಾರಂಭ ಗುರು ದಶಾ.

### ಪಿಂಡಾಂಶ ನಿಸರ್ಗ ದಶಾ

ಯತ್ಪಿಂಡಾಂಶ ನಿಸರ್ಗಾಯು ಗ್ರಹಾಣಾಂ [illegible]
ತತ್ತದ್ಭಶಾನಾಂ ವರ್ಷಾಣಿ ತೇಷಾಂ ಸ್ಫುಸ್ಪನ್ತಾನಿ ಪೃ [illegible]

ಲಗ್ನ ಸೂರ್ಯವಿಧೂನಾಂ ತು ಪ್ರಬಲಸ್ಯ ದಶಾದಿಮಾ ।
ತತಃ ಕೇಂದ್ರಾದಿ ಸಂಸ್ಥಾನಾಂ ಬಲನಾಂ ಚ ದಶಾ ಭವೇತ್ ॥೨೦೨॥

ಗ್ರಹಗಳ ಪಿಂಡಾಯು ಅಂಶಾಯು ನಿಸರ್ಗಾಯುಗಳ ಸಮಾನ ಪಿಂಡದಶಾ ಅಂಶದಶಾ ಹಾಗೂ ನಿಸರ್ಗ ದಶಾಗಳಿರುತ್ತವೆ. 1 ಲಗ್ನ ಸೂರ್ಯ, ಚಂದ್ರರಲ್ಲಿ ಯಾರು ಬಲಿಷ್ಠರೋ ಪ್ರಥಮ ದಶಾ ಪುನಃ ಅವರಿಂದ ಕೇಂದ್ರಗತ ಗ್ರಹ ದಶಾ ನಂತರ ಪಣಫರಸ್ಥ ಗ್ರಹದ ನಂತರ ಆಪೋಕ್ಲಿಮ ಗ್ರಹ ಈ ರೀತಿ ಸಲಗ್ನ ಎಂಟು

ಗ್ರಹಗಳ ದಶಾ ಅಂತರ ದಶಾವಿರುತ್ತದೆ. 1 ಲಗ್ನಸಹಿತ ಆಯಾ ದಶಾ ಪದ್ಧತಿ ಈ ಹಿಂದೆ ಹೇಳಿದೆ.

**ಬಲೆನಾಷ್ಟಕ ವರ್ಗಾಣಾಂ ದಶಾನಾಂ ಫಲಮಾದಿಶೇತ್ ।**
**ದಶಾ ವಿತಾಸ್ತು ವಿಬುಧೈರಷ್ಟವರ್ಗ ದಶಾ ಸ್ಮೃತಾ ॥೨೦೩॥**

ಅಷ್ಟವರ್ಗದ ಬಲಾನುಸಾರ ದಶಾಗಳ ಫಲಾದೇಶ ಮಾಡುವುದು. ಇದಕ್ಕೆ ಅಷ್ಟವರ್ಗ ದಶಾ ಎನ್ನುವುದು. (ಅಷ್ಟವರ್ಷ ಬಲ ಮುಂದೆ ಬರುವುದು)

## ಸಂಧ್ಯಾ ದಶಾ

**ಪರಾಯುಷೊ ದ್ವಾದಶಾಂಶಸ್ತತ್ಸಂಧ್ಯಾ ಸಿದ್ಧಿರೀರಿತಾ ।**
**ದಶಾನಾಂ ತನ್ಮಿತಾಬ್ದಾಃ ಸ್ಯುರ್ಲಗ್ನ ರಾಶಿಕ್ರಮಾನ್ಮತಾ ॥೨೦೪॥**

ಸಂಧ್ಯಾ ದಶಾದಲ್ಲಿ ಪರಮಾಯ ೧೨೦ ಆದರ ದ್ವಾದಶಾಂಶ ೧೦ ವರ್ಷ ಲಗ್ನಾದಿ ಕ್ರಮದಿಂದ ಪ್ರತ್ಯೇಕ ರಾಶಿ ದಶಾವನ್ನು ಸಂಧ್ಯಾ ದಶಾವೆನ್ನುವರು.

## ಪೂರ್ವೋಕ್ತ ಕುಂಡಲಿಯಲ್ಲಿ ಕರ್ಕ ಲಗ್ನ

| ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ | ಮೇಷ | ವೃಷಭ | ಮಿಥುನ |
|---|---|---|---|---|---|---|---|---|---|---|---|
| 10 | 10 | 10 | 10 | 10 | 10 | 10 | 10 | 10 | 10 | 10 | 10 |

## ಸಂಧ್ಯಾ ದಶಾದಲ್ಲಿ ಪಾಚಕ ದಶಾ

**ಸಂದ್ಯಾ ರಸ ಗುಣಾಕಾರ್ಯಾ ಚಂದ್ರವಹ್ನಿಹುತಾ ಫಲಮ್ ।**
**ಸಂಸ್ಥಾಪ್ಯಮ ಪ್ರಥಮೆ ಕೋಷ್ಟೆ ತ್ರಿಕೋಷ್ಠೇಷು ತಿದರ್ಧಕಮ್ ॥೨೦೫॥**

**ತ್ರಿಭಾಗಂ ವಸುಕೋಷ್ಟೇಷು ಲಿಖಿತ್ವಾ ತತ್ಫಲಂ ದಿಶೇತ್ ।**
**ಏವಂ ದ್ವಾದಶ ಭಾಗೇಷು ಪಾಚಕಾನಿ ಪ್ರಕಲ್ಪಯೇತ್ ॥೨೦೬॥**

ಕಂದಾ ದಶಾ ವರ್ಷಕ್ಕೆ 6ರಿಂದ ಗುಣಿಸಿ 31ರಿಂದ ಭಾಗಿಸಲು ಫಲ ಪ್ರಥಮ ಕೋಷ್ಟದಲ್ಲಿ ಅದರ ಅರ್ಧ 3 ಮುಂದಿನ ರಾಶಿಗಳಲ್ಲಿ ಪುನಃ 8 ಕೋಷ್ಟಗಳಲ್ಲಿ ಲಬ್ಧಫಲದ ತ್ರಿತಯಾಂಶವನ್ನು ಬರೆದು ಫಲಾದೇಶ ಮಾಡುವುದು ಈ ಪ್ರಕಾರ ದ್ವಾದಶ ಭಾವಗಳ ಪಾಚಕ ದಶಾ ಆಗುತ್ತದೆ.

## ತಾರಾದಶಾ

ತಾರಾದಶಾ ಬುಧ್ಯೈಃ ಕೈಶ್ಚಿದುಕ್ತಾ ವಿಂಶೋತ್ತರೀವಯಾ ।
ಕೇಂದ್ರಸ್ಥಾದ್ ಬಲಿನಃ ಖೇಟ ಜ್ಞೇಯಾ ನಾಮಸದೃಶ್ ಫಲಾ ॥೨೦೮॥

ಜನ್ಮ ಸಂಪತ್ ವಿಪತ್ ಕ್ಷೇಮ ಪ್ರತ್ಯಾರಿಕಿ ಸಾಧಕೋ ವಧಃ ।
ಮೈತ್ರಮೇವಂ ಚಾತಿಮೈತ್ರಂ ನವ ತಾರಾಹ ಪ್ರಕೀರ್ತಿತಾಃ ॥೨೦೯॥

ಅನೇಕ ವಿದ್ವಾಂಸರು ತಾರಾದಶಾವನ್ನು ವಂಶೋತ್ತರಿಯದಂತೆ ಪರಿಗಣಿಸಿದ್ದಾರೆ. ಈ ದಶಾ ಕೇಂದ್ರಸ್ಥ ಬಲಿಗ್ರಹದಿಂದ ಆರಂಭವಾಗಿ ವಿಂಶೋತ್ತರಿಯದಂತೆ ರವಿ, ಚಂದ್ರ, ಕುಜ, ರಾಹು, ಗುರು, ಶನಿ, ಬುಧ, ಕೇತು, ಶುಕ್ರರ ಅನುಸಾರವೆ ನಡೆಯುತ್ತದೆ. ದಶಾ ವರ್ಷಗಳು ವಿಂಶೋತ್ತರದಂತೆ ಪರಿಗಣಿಸಲು ಸೂಚಿಸಿದ್ದಾರೆ. ಅದನ್ನು ಈ ಕೆಳಗಿನಂತೆ ಗ್ರಹಿಸಬಹುದು.

ಉಕ್ತ ಕುಂಡಲಿ ಕರ್ಕಲಗ್ನ

5
3
6
4
ಶು
2 ಕೆ
7
1
ರ. ಬು. ಚ
8
10
11
ರಾ
ಗು.ಮ
ಶನಿ
9
10

| ಶನಿ | | ಕೆ | |
|---|---|---|---|
| | | | |
| ಗು ಮ | | | |
| | ರಾ | ರ ಬು ಚ | ಶು |

ಇಲ್ಲಿ ಮಂಗಳ – ಬಲಿಷ್ಠ ಕಾರಕ ಗ್ರಹವಾಗಿದ್ದು ಗುರುವಿನೊಡನೆ ಯುತಿಯಿಂದ ವಿಶೇಷ ಬಲಶಾಲಿಯಾಗಿರುತ್ತದೆ. ಅಂಶಾತ್ಮಕವಾಗಿ 9-4-44 ಕಲಾ ಇದ್ದಾನೆ. ವಿಂಶೋತ್ತರಿ ನಿಯಮದಂತೆ ಅಲ್ಲಿಂದಲೇ ದಶಾ ಆರಂಭಿಸುವುದು.

3-11-1937

| ಗ್ರಹ | ಕುಜ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | |
|---|---|---|---|---|---|---|---|---|---|---|
| ವರ್ಷ<br>ನಕ್ಷತ್ರ | 7<br>ಜನ್ಮ | 18<br>ಸಂಸತ್ತಿ | 16<br>ವಿಸತ್ತಿ | 19<br>ಕ್ಷೇಮ | 17<br>ಪ್ರತಾರಿ | 7<br>ಸಾಧಕ | 20<br>ವಧ | 6<br>ಮೈತ್ರಿ | 10<br>ಅತಿವೈತ | ತಾರಾ |
| ದಿ<br>ತಿಂ<br>ವರ್ಷ | 3<br>11<br>44 | 3<br>11<br>1962 | 3<br>11<br>1978 | 3<br>11<br>1997 | 3<br>11<br>2014 | 3<br>11<br>2021 | 3<br>11<br>2041 | 3<br>11<br>2047 | 3<br>11<br>2058 | |

ಈ ರೀತಿ ದಶಾ ಹಾಕುವುದು – ಕುಜನ ಅಂಶಾತ್ಮದಿಂದ ಬುಕ್ತಿ ಭೋಗ್ಯ ತೆಗೆಯಬಹುದು. 6-7-11 ದಿವಸವನ್ನು ಮಾಡಿಕೊಳ್ಳಬಹುದು.

**ದಶಾನಾಂ ವಿವಿಧಾ ಭೇದಾ ವಿಸ್ತರಾದ್ ಗದಿತಾ ಮುನೆ ।**
**ಆಸಾಂ ಭುಕ್ತಿ ಪ್ರಭೇದಾಂಶ್ಚ ಸಂಪ್ರವಕ್ಷ್ಯಾಮ್ಯತಃ ಪರಮ್ ॥೨೦೯॥**

ಹೇ ಮುನಿಯೇ, ದಶಾ ಭೇದಗಳಲ್ಲಿ ಪ್ರಮುಖವಾದುದವುಗಳನ್ನು ವಿಸ್ತಾರ ತಹ ಹೇಳಿದ್ದು ಈ ನಂತರ ಅಂತರದಶಾವನ್ನು ಹೇಳುವೆನು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ದಶಾಭೇದಾಧ್ಯಾಯಃ ಸಮಾಪ್ತಿಃ**

ಉಲನೇ ಅಧ್ಯಾಯ

## ಅಥ ದಶಾಫಲಾಧ್ಯಾಯಃ

### ಮೈತ್ರೇಯ ಉವಾಚ:

ನಾನಾ ವಿಧಾ ದಶಾಭೇದಾ ಭಗವಾನ್ । ಭವತೋದಿತಾಃ ।
ಆಕರ್ಣಿತಾ ಮಯಾಕೇದೃಕ್ ತತ್ಫಲಂ ಚಾಥ ಕಥ್ಯತಾಮ್ ॥೧॥

### ಮೈತ್ರೇಯರು ವಿನಯಪೂರ್ವಕ ಕೇಳಿದರು—

ಹೇ ಭಗವಾನ್ ತಾವು ಅನೇಕ ವಿಧ ದಶಾ ಭೇದಗಳು ಅವುಗಳ ವಿವರ ವಿವರಿಸಿದ್ದು ತಿಳಿದುಕೊಂಡಿದ್ದೇನೆ – ಈ ದಶಾದ ಫಲಗಳನ್ನು ಕೃಪೆ ಮಾಡಿ ವಿವರಿಸಿರಿ.

### ಪರಾಶರ ಉವಾಚ:

ಸಾಧಾರಣ ವಿಶೇಷಾಭ್ಯಾಂ ದ್ವಿಧಾ ಪ್ರೊಕ್ತಿ ದಶಾಫಲಮ್ ।
ಸ್ವಭಾವ ಸ್ಥಾನವಶತಃ ಖಗಾನಾಂ ಮುನಿಸಮ್ಮತಮ್ ॥೨॥

### ಪರಾಶರರು ಉತ್ತರಿಸಿದರು—

ಸಾಮಾನ್ಯ ಹಾಗೂ ವಿಶೇಷ ಹೀಗೆ ಭೇದದಿಂದ ಗ್ರಹಗಳ ದ್ವಿವಿಧ ದಶಾಫಲ ಹೇಳಲ್ಪಟ್ಟಿದೆ. ಅದು ಕ್ರಮಶಃ ಸ್ವಭಾವ ವಶ ಹಾಗೂ ಸ್ಥಾನ ವಶವಾಗಿರುತ್ತದೆ. (ಗ್ರಹ ಸ್ವಭಾವ, ಗ್ರಹಸ್ಥಾನ)

ಬಲಾನುಸಾರಿಖೇಟಾನಾಂ ಬುಧೈರ್ವೇದ್ಯಂ ದಶಾಫಲಮ್ ।
ಆದಿದ್ರೇಷ್ಕಾಣಗೆ ಖೇಟೆ ದಶಾರಂಭೆ ಫಲಂ ಭವೇತ್ ॥೩॥

ದಶಾಮಧ್ಯೆ ಫಲಂ ವಾಚ್ಯಂ ವಾಧ್ಯದ್ರೇಷ್ಕಾಣಗೆ ಸತಿ ।
ಅಂತೆ ಫಲಂ ತೃತೀಯಸೆ ವ್ಯಸ್ತ ಖೇಟೆ ಚ ವಕ್ರೀಣೆ ॥೪॥

ಗ್ರಹಗಳ ದಶಾಫಲ ಅವುಗಳ ಬಲಾಬಲದಂತೆ ಇರುತ್ತವೆ. ಪ್ರಥಮ ದ್ರೇಷ್ಕಾಣಸ್ಥ ಗ್ರಹದ ಫಲ ದಶಾರಂಭದಲ್ಲಿ ಮಧ್ಯದ್ರೇಷ್ಕಾಣ ಗತ ಗ್ರಹಫಲ ಮಧ್ಯದಲ್ಲಿ – ದ್ರೇಷ್ಕಾಣದ 3ನೇ ಭಾಗದಲ್ಲಿರುವ ಗ್ರಹಫಲ ಅಂತ್ಯದಲ್ಲಿ ದೊರೆಯುತ್ತದೆ. ವಕ್ರಗತಿಯಾದ ಗ್ರಹಫಲ ವೈಪರೀತ್ಯವಾಗಿ ಅಂದರೆ ಅಂತ್ಯ

ದ್ರೇಷ್ಕಾಣಸ್ಥ ಗ್ರಹ ಆದಿಯಲ್ಲಿ ಫಲ ಕೊಡುತ್ತದೆ. ಆದಿ ದ್ರೇಷ್ಕಾಣಸ್ಥ ಗ್ರಹಫಲ ಅಂತ್ಯದಲ್ಲಿ ಕೊಡುತ್ತದೆ.

ಈ ರೀತಿ ದ್ರೇಷ್ಕಾಣ ದಶಾಫಲದಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ದಶೇಶೆ ತು ದಶಾರಂಭೆ ತನೌ ಸೌಮ್ಯ ಯುತೇಕ್ಷಿತೆ ।
ಸ್ವರ್ಕ್ಷತತುಂಗ ಸುಹೃದ್ ಭೆ ವಾ ಶೋಭನಂ ತದ್ ದಶಾಫಲವ್ ॥೫॥

ತತ್ರ ತ್ರಿಕಸ್ಥಿತೆ ಸತ್ಯಸ್ತಾಮಿತೆ ನೀಚಶತ್ರುಭೆ ।
ದಶಾಫಲಮಸತ್ಪ್ರೋಕ್ತ ಮಥ ವಚ್ಮಿ ದಶಾ ಫಲವ್ ॥೬॥

ದಶಾರಂಭದಲ್ಲಿ ದಶೇಶ (ಗೋಚರದಂತೆ ಹಾಗೂ ಜನ್ಮತಃವೂ ಸರಿಯೇ) ಲಗ್ನದಲ್ಲಿದ್ದರೆ ಸ್ವೋಚ್ಚ ಸ್ವರಾಶಿ ಅಥವಾ ಸ್ವಮಿತ್ರ ಗ್ರಹದಲ್ಲಿದ್ದು ಶುಭಗ್ರಹ ಯುಕ್ತ ದೃಷ್ಟಿತನಾಗಿದ್ದರೆ ಅವನ ದಶಾಫಲ – ಅತ್ಯುತ್ತಮ ಶುಭಕರವಾದರೆ ಅದೇ ದಶೇಶ ತ್ರಿಕ್ (6, 8, 12)ದಲ್ಲಿದ್ದರೆ ಅನಿಷ್ಟಕಾರಕ. ಇದು ಸಾಮಾನ್ಯ ನಿಯಮ – ಇನ್ನು ದಶಾಫಲ ಹೇಳುತ್ತೇನೆ ಕೇಳು.

## ಸೂರ್ಯ ದಶಾಫಲ

ಮೂಲ ತ್ರಿಕೋಣೆ ಸ್ವಕ್ಷೇತ್ರ ಸ್ವೋಚ್ಚೆ ವಾ ಪರಮೋಚ್ಚಗೆ ।
ಕೇಂದ್ರ ತ್ರಿಕೋಣೆ ಲಾಭಸ್ಥೆ ಭಾಗ್ಯ ಕರ್ಮಾಧಿಪೈರ್ಯುತೆ ॥೭॥

ಸೂರ್ಯೋ ಬಲೇನ ಸಂಯುಕ್ತೆ ಸ್ವವರ್ಗೇಽಪಿ ಬಲೈರ್ಯುತೆ ।
ತಸ್ಮಿನ್ ದಾಯೆ ಮಹತ್‌ಸೌಖ್ಯಂ ಧನ ಲಾಭಾಧಿಕಂ ಶುಭವ್ ॥೮॥

ಅತ್ಯಂತಂ ರಾಜಸಮ್ಮಾನ ಮಶ್ವಾಂದೋಲ್ಯಾಧಿಕಂ ಸುಖವ್ ।
ಸುತಾಧಿಪ ಸಮಾಯುಕ್ತೆ ಪುತ್ರಲಾಭಂ ಚ ವಿಂದತಿ ॥೯॥

ಧನೇಶಸ್ಯ ಚ ಸಂಬಂಧೆ ಗಜಾಂತೈಶ್ವರ್ಯ ಮಾದಿಶೇತ್ ।
ವಾಹನಾಧಿಪ ಸಂಬಂಧೆ ವಾಹನ ತ್ರಯಮಾದಿಶೇತ್ ॥೧೦॥

ನೃಪಾಲತುಷ್ಟಿವಿತ್ತಾಢ್ಯಾಃ ಸೇನಾಧೀಶಃ ಸುಖಿ ನರಃ ।
ವಸ್ತ್ರವಾಹನಯುಕ್ತಶ್ಚ ಸಬಲಾರ್ಕ ದಶಾಫಲವ್ ॥೧೧॥

ಜನ್ಮಕಾಲದಲ್ಲಿ ಸೂರ್ಯ ತನ್ನ ಮೂಲ ತ್ರಿಕೋಣ ಸ್ವಭವನ ಪರಮೋಚ್ಚ ಸ್ಥಾನ ಕೇಂದ್ರ ತ್ರಿಕೋಣ ಲಾಭಸ್ಥಾನಗಳಲ್ಲಿ ಎಲ್ಲಿಯೇ ಇದ್ದರು ಅಥವಾ ಭಾಗ್ಯೇಶ

ಹಾಗೂ ಕರ್ಮೇಶರ ಜೊತೆಯಿದ್ದರೆ ಸ್ವಯಂ ಸೂರ್ಯ ಪ್ರಬಲನಿದ್ದರೆ ಹಾಗೂ ವರ್ಗಗಳಲ್ಲಿಯೂ ಬಲಿಷ್ಠನಾಗಿದ್ದರೆ (ಪಾರಿಜಾತಾದಿ) ದಶಾಕಾಲದಲ್ಲಿ ಧನ ಲಾಭಾದಿ ಪರಮಸೌಖ್ಯ ರಾಜ ಸಮ್ಮಾನಾದಿಗಳನ್ನು ನೀಡುತ್ತಾನೆ. ಪಂಚಮೇಶನ ಸಂಬಂಧವಿದ್ದರೆ ಪುತ್ರಾದಿ ಸುಖ ಧನೇಶನ ಸಂಬಂಧವಿರಲು ಆನೆ, ಕುದುರೆ, (ನವ್ಯಯುಗದಲ್ಲಿ ಕಾರು ಆದಿ) ವಾಹನ ಸೌಖ್ಯ, ಪಶು ಸೌಖ್ಯ – ವಾಹನ ತ್ರಯ ಸೌಖ್ಯ ವಾಹನೇಶನ ಸಂಬಂಧವಿರಲು ತೋರುತ್ತದೆ. ರಾಜ ಸಂತುಷ್ಟಿಯಿಂದ ಮನುಷ್ಯ ಧನಿ, ಸೇನಾಪತಿ, ಸುಖಿ, ವಸ್ತ್ರ, ವಾಹನ ಸಂಪನ್ನನಾಗುತ್ತಾನೆ.

## ಅಶುಭ ಸೂರ್ಯ ದಶಾಫಲ

ನೀಚೆಪಡಷ್ಟಕೆ ರಿಷ್ಫೆ ದುರ್ಬಲೆ ಪಾಪ ಸಂಯುತೆ ।
ರಾಹು ಕೇತು ಸಮಾಯುಕ್ತೆ ದುಃಖಿಸ್ಥಾನಾಧಿಪ ಸಂಯುತೆ ॥೧೨॥

ತಸ್ಮಿನ್ ದಾಯೋ ಮಹಾಪೀಡಾ ಧನಧಾನ್ಯ ವಿನಾಶನಮ್ ।
ರಾಜಕೋಪಃ ಪ್ರವಾಸಶ್ಚ ರಾಜದಂಡೋ ಧನಕ್ಷಯಃ ॥೧೩॥

ಜ್ವರಪೀಡಾ ಯಶೋಹಾನಿರ್ಬಂಧು ಮಿತ್ರವಿರೋಧನಮ್ ।
ಪಿತೃಕ್ಷಯ ಭಯಂ ಚೈವ ಗೃಹೆ ತ್ವಶುಭಮೇವ ಚ ॥೧೪॥

ಪಿತೃವರ್ಗೆ ಮನಸ್ತಾಪೋ ಜನದ್ವೇಷಸ್ತಥೈವ ಚ ।
ಶುಭ ದೃಷ್ಟಿಯುತೆ ಸೂರ್ಯೋ ಮಧ್ಯೆ ತಸ್ಮಿನ್ ಕಂಚಿತ್ ಸುಖಿಮ್ ॥೧೫॥

ಪಾಪಗ್ರಹೇಣ ಸಂದೃಷ್ಟೆ ವದೇತ್ ಪಾಪ ಫಲಂ ಸುಧೀಃ ।

ಜನ್ಮಕಾಲಿಕ ಪ್ರಬಲ ಸೂರ್ಯ ಫಲಕಥಾನಂತರ ಈಗ ದುರ್ಬಲ ಸೂರ್ಯನ ಫಲ ಹೇಳುತ್ತೇನೆ.

ನೀಚರಾಶಿ ತ್ರಿಕ್‌ದಲ್ಲಿ ಸೂರ್ಯ ಪಾಪಯುಕ್ತನಾಗಿದ್ದರೆ ಅಥವಾ ರಾಹೂ, ಕೇತುಗಳ ಜೊತೆಗೆ ಅಥವಾ ದುಃಖಸ್ಥಾನ (6, 8, 12) ಅಧಿಪರಿಂದ ಯುಕ್ತರಾಗಿದ್ದರೆ ದಶಾಫಲದಲ್ಲಿ ಮಹಾಕಷ್ಟ ಧನಧಾನ್ಯಕ್ಷಯ ರಾಜಕೋಪ ಪರದೇಶ ನಿವಾಸ ರಾಜ ದಂಡ ಧನಕ್ಷಯ ಜ್ವರಪೀಡಾ ಯಶಕ್ಷಯ ಬಂಧು ಮಿತ್ರವಿರೋಧ ಪಿತೃಕ್ಷಯ ಭಯ ಹಾಗೂ ಅನ್ಯವಿದ ಅಶುಭದಾಯಕವಾಗುತ್ತದೆ. ಈ ಸಮಯದಲ್ಲಿ ಪಿತೃವರ್ಗದಲ್ಲಿ ಮಾನಸಿಕ ಸಂತಾಪ, ಅಕಾರಣ ಜನದ್ವೇಷ – ಆದರೂ ನೀಚಸ್ಥ ಸೂರ್ಯನ ಮೇಲೆ

ಶುಭ ಗ್ರಹದ ದೃಷ್ಟಿ ಅಥವಾ ಸಂಯೋಗವಿದ್ದರೆ (ವಿ.ಸೂ.: ತ್ರಿಕ್‌ಗಳಲ್ಲಿ 6ರಲ್ಲಿದ್ದಾಗ) ನಡುನಡುವೆ ಸುಖ ಕಾರಣವೂ ಉಂಟು. ಪಾಪಗ್ರಹ ಮಾತ್ರ ದೃಷ್ಟಿಯಿಂದ ಸರ್ವಥಾ ಅಶುಭ ಫಲ ನಿರ್ದೇಶಿಸುವುದು.

## ಚಂದ್ರದಶಾ ಫಲ

ಇತ್ಥಂ ಸಮಾಸತಸ್ಸೂಕಂ ರವೇರಿಹ ದಶಾಫಲವಮ್ ।
ವಿಂಶೋತ್ತರ್ಯಾನುಸಾರೇಣ ವಚ್ಮ್ಯಥೆಂದು ದಶಾಫಲಮ್ ॥೧೬॥

ಸ್ವೋಚ್ಚೆ ಸ್ವಕ್ಷೇತ್ರಗೆ ಚ್ಚೈವ ಕೇಂದ್ರೆ ಲಾಭ ತ್ರಿಕೋಣಗೆ ।
ಶುಭ ಗ್ರಹೇಣ ಸಂಯುಕ್ತೆ ಪೂರ್ಣೇಂದೌ ಬಲಸಂಯುತೆ ॥೧೭॥

ಕರ್ಮಭಾಗ್ಯ ಸುಖೆಶೈಸ್ತು ಬಲಿಭಿಃ ಸಂಯುತೆ ಸತಿ ।
ಆದ್ಯಾಂತ್ಯೈಶ್ವರ್ಯಸದ್ ಭಾಗ್ಯ ಧನ ಧಾನ್ಯಾದಿಕಾಗಮಃ ॥೧೮॥

ಗ್ರಹೆ ತು ಶುಭಕಾರ್ಯಾಣಿ ವಾಹನಂ ರಾಜದರ್ಶನವಮ್ ।
ಯತ್ರ ಕಾರ್ಯಾರ್ಥಸಿದ್ಧಿಃ ಸ್ಯಾದ್ ಗ್ರಹೆ ಸರ್ವಸಮೃದ್ಧಿಯಃ ॥೧೯॥

ಮಿತ್ರಪ್ರಭುವಶಾದ್ ಭಾಗ್ಯಂ ರಾಜ್ಯಲಾಭೆ ಮಹತ್ ಸುಖಮ್ ।
ಪುತ್ರ ಲಾಭಾದಿ ಸಂತೋಷೊ ಗ್ರಹಂ ಗೋ ಧನಸಂಕುಲವಮ್ ॥೨೦॥

ಅಶ್ವಾಂದೋತ್ಯಾದಿ ಲಾಭಶ್ಚ ಶ್ವೇತ ವಸ್ತ್ರಾಧಿಕಂ ಭವೇತ್ ।
ಧನಸ್ಥಾನಗತೆ ಚಂದ್ರೆ ತುಂಗೆ ಸ್ವಕ್ಷೇತ್ರಗೇಪಿ ವಾ ॥೨೧॥

ಅನೇಕ ಧನಲಾಭಂ ಚ ಭಾಗ್ಯವೃದ್ಧಿಂ ಮಹತ್ ಸುಖಮ್ ।
ವಿಶೇಷಂ ರಾಜಸಮ್ಮಾನಂ ವಿದ್ಯಾಲಾಭಂ ಚ ವಿದಂತಿ ॥೨೨॥

ಈ ಪ್ರಕಾರ ಸಂಕ್ಷೇಪ್ತವಾಗಿ ಸೂರ್ಯನ ಶುಭಾಶುಭ ಫಲ ದಶಾದಲ್ಲಿ ಹೇಳಿದೆ. ಈಗ ಚಂದ್ರನ ಶುಭಾಶುಭ ಫಲ ಹೇಳುತ್ತೇನೆ. ಈಗ ಹೇಳುತ್ತಿರುವುದು ವಿಂಶೋತ್ತರಿ ದಶಾ ಫಲ ಪ್ರಬಲ ಪೂರ್ಣಚಂದ್ರ ಶುಭಗ್ರಹಯುಕ್ತ ತನ್ನುಚ್ಚ ಸ್ವಭವನ ಕೇಂದ್ರ ಅಥವಾ ತ್ರಿಕೋಣಸ್ಥ ಅಥವಾ ಲಾಭದಲ್ಲಿ ಬಲಿಷ್ಠ ಕರ್ಮೇಶ, ಭಾಗ್ಯೇಶ ಅಥವಾ ಸುಖೇಶನ ಜೊತೆಗೆ ಅಥವಾ ದೃಷ್ಟಿತಗಳಾದ್ದರೆ ಅತ್ಯಧಿಕ ಐಶ್ವರ್ಯ ಶಾಲಿಯಾಗುವನು. ಧನ, ಧಾನ್ಯ ಸಮೃದ್ಧಿ ಇತ್ಯಾದಿ ಸರ್ವ ಪ್ರಕಾರ ಲಾಭ ಮನೆಯಲ್ಲಿ ಅನೇಕ ಶುಭ ಕಾರ್ಯ, ವಾಹನ ಸೌಖ್ಯ, ರಾಜದರ್ಶನ ಯತ್ನದಿಂದ ಎಲ್ಲ ಕಾರ್ಯ ಸಿದ್ಧಿ. ಮನೆಯಲ್ಲಿ ಎಲ್ಲ ಸಮೃದ್ಧಿ, ಮಿತ್ರ ರಾಜನಿಂದ ಭಾಗ್ಯ ವೃದ್ಧಿ, ರಾಜ್ಯಲಾಭ,

ಮಹೌಸೌಖ್ಯ, ಪುತ್ರ ಪ್ರಾಪ್ತಿ, ಪಶುಧನ ಬಹುಲತಾ ರಥಾಧಿ ವಾಹನ ಯೋಗ, ಶ್ವೇತ ವಸ್ತ್ರಪ್ರಾಪ್ತಿ, ಧನ ಸ್ಥಾನಗತ ಚಂದ್ರ ಉಚ್ಚ ಅಥವಾ ಸ್ವಭವನ ಗತನಾಗಿದ್ದರೆ ಅನೇಕ ವಿಧ ಲಾಭ, ಭಾಗ್ಯವೃದ್ಧಿ ವಿಶೇಷ ರಾಜಸಮ್ಮಾನ – ವಿದ್ಯಾಲಾಭವೂ ಆಗುತ್ತದೆ.

## ಅಶುಭ ಚಂದ್ರದಶಾ ಫಲ

ನೀಚೆ ವಾ ಕ್ಷೀಣಚಂದ್ರೆ ವಾ ಧನಹಾನಿರ್ಭವಿಷ್ಯತಿ ।
ದುಶ್ಚಿಕ್ಯೆ ಬಲಸಂಯುಕ್ತೆ ಕ್ವಚಿತ್‌ಸೌಖ್ಯಂ ಕಚಿದ್ಧನಮ್ ॥೨೩॥

ದುರ್ಬಲೆ ಪಾಪಸಂಯುಕ್ತೆ ದೇಹಜಾಡ್ಯಂ ಮನೋರುಜಾ ।
ಭೃತ್ಯಪೀಡಾ ವಿತ್ತಹಾನಿರ್ಮಾತೃ ವರ್ಗಜನಾದ್ ವಧಃ ॥೨೪॥

ಷಷ್ಠಾಷ್ಟಮ ವ್ಯಯೇ ಚಂದ್ರೆ ದುರ್ಬಲೆ ಪಾಪ ಸಂಯುತೆ ।
ರಾಜದ್ವೇಷೊ ಮನೋದುಃಖಂ ಧನಧಾನ್ಯಾದಿ ನಾಶನಮ್ ॥೨೫॥

(ಮಾತೃಕ್ಲೇಶೋ ಮನಸ್ತಾಪೋ ದೇಹ ಜಾಡ್ಯಂ ಮನೋರುಜಾ)
ದುಃಸ್ಥೆ ಚಂದ್ರೇ ಬಲೈರ್ಯುಕ್ತೊ ಕಂಚಲ್ಲಾಭಃ ಕಚಿತ್ ಸುಖಮ್ ।
ದೇಹ ಜಾಡ್ಯಂ ಕಚ್ಚಿಚ್ಚೈವ ಶುಭಂ ಸ್ಯಾತ್ತತ್ರ ಶಾಂತಿತಃ ॥೨೬॥

ಸಾಮಾನ್ಯ ಮಾತೃಕ್ಲೇಶ ಮನಸ್ತಾಪ, ದೇಹಜಾಡ್ಯ, ಮನೋರೋಗ ಚಂದ್ರನಿಗೆ ಪರಿಗಣಿಸಿಕೊಂಡೆ ಸಾಗುವುದು. ಮನೋರೋಗದ ಮೂಲ ಕಾರಣ ಚಂದ್ರ – ಕಿಂ ಬಹೂನಾ ಎಂದಂತೆ ಮನೋರೋಗದಿಂದಲೆ ಇತರ ವ್ಯಾಧಿಭ್ರಮೆಯು ವೈದ್ಯಕಗೂ ತಿಳಿಯದ ರೋಗ ಭಾದೆ ಭ್ರಮೆ – ಚಂದ್ರ ನೀಚ ಕ್ಷೀಣನಾಗಿ ಅವನ ದಶಾದಲ್ಲಿ ಧನಹಾನಿ ತೃತೀಯ ಸ್ಥಾನಗತ ಬಲಿಷ್ಟನಾಗಿದ್ದರೆ ಕೆಲವೊಮ್ಮೆ ಸೌಖ್ಯ ಹಾಗೂ ಆಗೀಗ ಧನಪ್ರಾಪ್ತಿ. ಪಾಪಗ್ರಹಯುಕ್ತ – ದುರ್ಬಲನಾಗಿದ್ದರೆ ಶಾರೀರಿಕ ಪೀಡೆ, ಮಾನಸಿಕ ವ್ಯಥೆ ಸೇವಕರಿಂದ ಮಾನಹಾನಿ ಪ್ರಸಂಗ ಮಾತೃಪಕ್ಷಿಯ ವ್ಯಕ್ತಿದ್ವಾರಾ ಮರಣ ತುಲ್ಯ ಕಷ್ಟ ಅದೆ. ದುರ್ಬಲ ಸಪಾಪ ಚಂದ್ರ ತ್ರಿಕಸ್ಥ (6, 8, 12)ರಲ್ಲಿದ್ದರೆ ರಾಜರಿಂದ ದ್ವೇಷ ಅದರಿಂದ (ರಾಜಕೀಯದಿಂದ) ಮಾನಸಿಕ ಕಷ್ಟ, ಧನ, ಧಾನ್ಯ ವಿನಾಶ, ಮಾತೃಕ್ಲೇಶ, ಶರೀರ ಜಡತೆ, ತ್ರಿಕಸ್ಥ ಬಲಯುತನಾಗಿದ್ದರೆ ಕೆಲವೊಮ್ಮೆ ಲಾಭ ಪ್ರಸಂಗಗಳು ಬರುತ್ತವೆ. ಸುಖದೊಂದಿಗೆ ದೇಹಪೀಡೆ – ಚಂದ್ರ ಶಾಂತಿಯಿಂದ ಶುಭ.

## ಭೌಮ ದಶಾಫಲ

ಸ್ವರ್ಕ್ಷ್ಯತುಂಗಾದಿ ಸಂಸ್ಥಸ್ಯ ನೀಚಾರಿಭಗತಸ್ಯ ಚ ।
ವಚ್ಮಿ ಭೌಮಸ್ಯ ಸದಸತ್ಫಲಂ ವಿಪ್ರ । ದಶೋದ್ಭವಮ್ ॥೨೭॥

ಪರಮೋಚ್ಚಗತೆ ಭೌಮೆ ಸ್ವೋಚ್ಚೆ ಮೂಲತ್ರಿಕೋಣಗೆ ।
ಸ್ವರ್ಕ್ಷೆ ಕೇಂದ್ರ ತ್ರಿಕೋಣೆ ವಾ ಲಾಭೆ ವಾ ಧನಗೋಪಿ ವಾ ॥೨೮॥

ಸಂಪೂರ್ಣ ಬಲಸಂಯುಕ್ತೆ ಶುಭದೃಷ್ಟೆ ಶುಭಾಂಶಕೆ ।
ರಾಜ್ಯಲಾಭೋ ಭೂಮಿಲಾಭೋ ಲಾಭೋ ಧಾನ್ಯಾದಿ ಸಂಪದಾಮ್ ॥೨೯॥

ಅಧಿಕಂ ರಾಜಸಮ್ಮಾನಂ ವಾಹನಾಂಬರ ಭೂಷಣಮ್ ।
ವಿದೇಶೆ ಸ್ಥಾನ ಲಾಭಶ್ಚ ಸೋದರಾಣಾಂ ಸುಖಂ ಭವೇತ್ ॥೩೦॥

ಕೇಂದ್ರೆ ಗತೆ ಸದಾ ಭೌಮೆ ದುಶ್ಚಕ್ಯೆ ಬಲಸಂಯುತೆ ।
ಪರಾಕ್ರಮಾದ್ ವಿತ್ತಲಾಭೊ ಯುದ್ಧೆ ಶತ್ರುಕ್ಷಯೋ ಭವೇತ್ ॥೩೧॥

ಕಲತ್ರ ಪುತ್ರವಿಭವಂ ರಾಜಸಮ್ಮಾನಮೇವ ಚ ।
ದಶಾದೌ ಸದುಖಮಾಪ್ನೋತಿ ದಶಾಂತೆ ಕಷ್ಟಮಾದಿಶೇತ್ ॥೩೨॥

ಈಗ ಉಚ್ಚಾದಿ ವ ನೀಚಾದಿ ಸ್ಥಾನಗತ ಭೌಮಾದಿಗಳ ದಶಾಫಲವನ್ನು ಹೇಳುತ್ತೇನೆ. ಪರಮೋಚ್ಚ ಸ್ವೋಚ್ಚರಾಶಿ ಸ್ವಭವನ ಮೂಲ ತ್ರಿಕೋಣ ಕೇಂದ್ರ ತ್ರಿಕೋಣಗಳಲ್ಲಿ ಅಥವಾ ಲಾಭಸ್ಥಾನದಲ್ಲಿ ಅಥವಾ ಧನ ಸ್ಥಾನದಲ್ಲಿ ಬಲಿಯಾಗಿದ್ದರೆ ಶುಭಗ್ರಹಯುಕ್ತ ದೃಷ್ಟನಾಗಿದ್ದರೆ – ಜನ್ಮ ಸಮಯದಲ್ಲಿ ಈ ಉತ್ತಮ ಯೋಗಾದಿಗಳಿದ್ದರೆ ರಾಜ್ಯಲಾಭ ವಿಶೇಷ ಭೂಲಾಭ, ಧನ, ಧಾನ್ಯಾದಿ ಸಂಪತ್ತಿನ ಲಾಭ, ರಾಜರಿಂದ ಮಾನಸನ್ಮಾನ, ವಾಹನ, ವಸ್ತ್ರ ಆ ಭೂಷಣ ಲಾಭಾದಿಗಳು ವಿದೇಶದಲ್ಲಿ ಸ್ಥಾನಲಾಭ, ಸಹೋದರರ ಸುಖ ಹೇಳುವುದು. ಬಲಿಷ್ಠ ಮಂಗಳ ಕೇಂದ್ರಸ್ಥನಾದರೆ ಅಥವಾ ತೃತೀಯದಲ್ಲಿದ್ದರೂ ಸ್ವಪರಾಕ್ರಮದಿಂದ ಧನಲಾಭ ಯುದ್ಧದಲ್ಲಿ ಶತ್ರು ಜಯ. ದಶಾರಂಭದಲ್ಲಿ ಸ್ತ್ರೀ, ಪುತ್ರ ಸೌಖ್ಯ, ರಾಜಸನ್ಮಾನ ಅನನ್ಯ ಸುಖ, ದಶಾಂತ ಮಾತ್ರ ಕಷ್ಟ.

## ಅಶುಭ ಕುಜಫಲ

ನೀಚಾದಿ ದುಃಸ್ಥಗೆ ಭೂಮಿಸುತೆ ಬಲವಿವರ್ಜಿತೆ ।
ಪಾಪಯುಕ್ತೆ ಪಾಪದೃಷ್ಟೆ ಸಾ ದಶಾ ನೇಷ್ಟದಾಯಿಕಾ ॥೩೩॥

ನೀಚಾದಿ ಭೌಮ ನೀಚಸ್ಥಾನದಲ್ಲಿ ನಿರ್ಬಲನಾಗಿ – ಪಾಪಯುಕ್ತ ದೃಷ್ಟ ನಾಗಿದ್ದರೂ – ಭೌಮದಶಾ ಸುಖಕರವಾಗಲಾರದು.

### ರಾಹು ಕೇತು ಗೃಹಾದಿ ಸ್ಥಾನ ಹಾಗೂ ದಶಾಫಲ

ಅಥಾಗೋಃ ಶಿಖಿನಶ್ಚಾಪಿ ವಚ್ಮಿ ಗೇಹಾಧಿಕಂ ಮುನೆ ।
ತದ್ದಶಾಫಲ ಬೇಧಾಯ ಶೃಣು ತ್ವಂ ತತ್ಸಮಾಹಿತಃ ॥೩೪॥

ರಾಹೋಸ್ತು ವೃಷಭಂ ಕೇತೋರ್ವೃಶ್ಚಿಕಂ ತುಂಗ ಸಂಜ್ಞಕಮ್ ।
ಮೂಲ ತ್ರಿಕೋಣಕಂ ಯುಗ್ಮಂ ಚಾಪಂ ವೇದ್ಯಂ ಯಥಾಕ್ರಮಾತ್ ॥೩೫॥

ಘಟಾಲೀ ಅಪಿವಾ ಕನ್ಯಾಮೀನೌ ಕೈಶ್ಚಿದ್ ಗ್ರಹೆಸ್ಮೃತೆ ।
ತದ್ದಾಯೋ ಬಹುಸೌಖ್ಯಂ ಚ ಧನಧಾನ್ಯಾದಿ ಸಂಪದಾಮ್ ॥೩೬॥

ಮಿತ್ರಪ್ರಭು ವಶಾದಿಷ್ಟಂ ವಾಹನಂ ಪುತ್ರಸಂಭವಃ ।
ನೂತನಾಗಾರ ನಿರ್ಮಾಣಾ ಧರ್ಮಚಿಂತಾ ಮಹೋತ್ಸವಃ ॥೩೭॥
ವಿದೇಶೆ ರಾಜಸನ್ಮಾನಂ ವಸ್ತ್ರಾಲಂಕಾರ ಭೂಷಣಮ್ ।
ಶುಭಯುಕ್ತೆ ಶುಭೈರ್ದೃಷ್ಟೆ ಯೋಗಕಾರಕ ಸಂಯುತೆ ॥೩೮॥

ಕೇಂದ್ರ ತ್ರಿಕೋಣಲಾಭೆ ವಾ ದುಶ್ಚಕ್ಯೆ ಶುಭರಾಶಿಗೆ ।
ಮಹಾರಾಜ ಪ್ರಸಾದೇನ ಸರ್ವ ಸಂಪತ್ ಸುಖಾವಹಾ ॥೩೯॥

ಯವನ ಪ್ರಭು ಸನ್ಮಾನಂ ಗೃಹೆ ಕಲ್ಯಾಣ ಸಂಭವಯಃ ।

ಈಗ ರಾಹು, ಕೇತುಗಳ ದಶಾಫಲ ಅರಿಯಲು ಅವುಗಳ ಗೃಹಾದಿಗಳನ್ನು ಹೇಳುತ್ತೇನೆ. ದತ್ತಚಿತ್ತನಾಗಿ ಆಲಿಸು.

| | | |
|---|---|---|
| ರಾಹುವಿನ ಉಚ್ಚ | – | ವೃಷಭ |
| ಕೇತುವಿನ ಉಚ್ಚ | – | ವೃಶ್ಚಿಕ |
| ಮೂಲ ತ್ರಿಕೋಣ | – | ರಾಹು, ಮಿಥುನ |
| ಮೂಲ ತ್ರಿಕೋಣ | – | ಕೇತು, ಧನು |
| ರಾಹುವಿನ ಭವನ | – | ಕುಂಭ |
| ಕೇತುವಿನ ಮನೆ | – | ವೃಶ್ಚಿಕ |

ಆಚಾರ್ಯರು – ತಮ್ಮ ಮತಾನುಸಾರ ರಾಹುವಿನ ಮನೆ – ಮೀನವೆಂದು ಕೇತುವಿನ ಮನೆ ಕನ್ಯಾ ಎಂದು ಹೇಳುವರು. ಜನ್ಮಾದಿ ಸಮಯದಲ್ಲಿ ರಾಹು ಉಚ್ಚಾದಿ ಸ್ಥಾನಗತನಾದರೆ ಅವನ ದಶಾದಲ್ಲಿ ಧನ, ಧಾನ್ಯಾದಿ ಅನೇಕ ವಿಧ ಸುಖ ಮಿತ್ರ ಹಾಗೂ ರಾಜನ ಮೂಲಕ ಅಭೀಷ್ಟ ಪ್ರಾಪ್ತಿ, ವಾಹನ, ಪುತ್ರ ಲಾಭ, ನೂತನ ಗೃಹ ನಿರ್ಮಾಣ, ಧರ್ಮ ಚಿಂತನ ಮಹೋತ್ಸವ, ವಿದೇಶದಲ್ಲಿ ರಾಜಸನ್ಮಾನ, ವಸ್ತ್ರ ಅಲಂಕಾರಾದಿ ಲಾಭ. ಅದೇ ರಾಹು ಶುಭಗ್ರಹ ಯುಕ್ತ ದೃಷ್ಟನಿದ್ದರೆ ಯೋಗಕಾರ ಗ್ರಹದ ಜೊತೆಗೆ ಕೇಂದ್ರ ತ್ರಿಕೋಣ ಲಾಭಸ್ಥಾನ ಅಥವಾ ಶುಭದಲ್ಲಿದ್ದರೆ ಮಹಾರಾಜ ಪ್ರಸಾದದಿಂದ ಅತುಲ ಸಂಪತ್ತು ಪ್ರಾಪ್ತ. ಅವನಿಗೆ ಯವನ ಪ್ರಭುವಿನಿಂದ ಸನ್ಮಾನ ಹಾಗೂ ಮನೆಯಲ್ಲಿ ಅನೇಕ ವಿಧ ಕಲ್ಯಾಣ ಹೇಳುವುದು.

## ಅಶುಭ ರಾಹು ದಶಾಫಲ

ರಂಧ್ರೇವಾ ವ್ಯಯಗೆ ರಾಹೌ ತದ್ದಾಯೋ ಕಷ್ಟದಂ ಫಲಮ್ ॥೪೦॥

ಪಾಪಗ್ರಹೇಣ ಸಂಬಂಧೆ ಮಾರಕಗ್ರಹ ಸಂಯುತೆ ।
ನೀಚರಾಶಿಗತೆ ವಾಪಿ ಸ್ಥಾನಭ್ರಂಶೋ ಮನೋರುಜಾ ॥೪೧॥

ನಾಶೋ ಹಿ ದರಾಪುತ್ರಾಣಾ ಕದನ್ನಾನಾಂ ಚ ಭೋಜನಂ ।
ದಶಾದೌ ದೇಹಪೀಡಾ ಚ ಧನಧಾನ್ಯ ಪರಿಚ್ಯುತಿಃ ॥೪೨॥

ದಶಾ ಮಧ್ಯೆತು ಸೌಖ್ಯಂ ಸ್ಯಾತ್ ಸ್ವದೇಶೆ ಲಾಭವನ್ನರಃ ।
ದಶಾಂತೆ ಕಷ್ಟಮಾಪ್ನೋತಿ ಸ್ಥಾನಭ್ರಂಶಂ ಮನೋವ್ಯಥಾಮ್ ॥೪೩॥

ಅಷ್ಟಮ ಅಥವಾ ವ್ಯಯಸ್ಥಾನದಲ್ಲಿ ರಾಹು ಇದ್ದು ಅವನ ದಶಾ ಇದ್ದುದಾದರೆ ಆ ದಶಾ ಕಷ್ಟಪ್ರದವಾಗುತ್ತದೆ. ರಾಹುವಿಗೆ ಪಾಪಗ್ರಹ ಸಂಬಂಧ ಅಥವಾ ಮಾರಕಗ್ರಹ ಯುಕ್ತವಾದರೆ ನೀಚ ರಾಶಿಯಲ್ಲಿದ್ದರೆ ಜಾತಕನಿಗೆ ಸ್ಥಾನ ಭ್ರಷ್ಟತೆ ಉಂಟಾಗುತ್ತದೆ ಹಾಗೂ ಮನೋವ್ಯಥಾ ಸ್ತ್ರೀ, ಪುತ್ರನಾಶ, ಕುತ್ಸತ್ಸಾನ್ನ ಭೋಜನ – ದಶಾರಂಭದಲ್ಲಿ ಶರೀರ ಪೀಡ, ಧನ, ಧಾನ್ಯ ಕ್ಷಯಾದಿಗಳು – ಉಂಟಾಗುವುವು. ದಶಮಸ್ಥನಾದ ರಾಹು ಸುಖ ಕೊಡುವನು. ಸ್ವದೇಶದಲ್ಲಿ ಲಾಭವುಂಟು ಮಾಡುವನು. ಅಶುಭ ಗ್ರಹವಾದ್ದರಿಂದ ದಶಾಂತ ಕಷ್ಟವಾಗುವುದು. ಸ್ಥಾನಭ್ರಂಶ (ನೌಕರಿ ಆದಿ ಬಿಡಬೇಕಾದ ಪ್ರಸಂಗಗಳು) ಅದರಿಂದ ಮನೋವ್ಯಥಾ ಇತ್ಯಾದಿ ಫಲಗಳು ಉಂಟಾಗುತ್ತವೆ.

## ಜೀವ (ಗುರು) ದಶಾಫಲ

ಸರ್ವಗ್ರಹಪ್ರಶಸ್ತಸ್ಯ ದೇವೇಜ್ಯಸ್ಯ ದಶಾಫಲಮ್ ।
ವಕ್ಷ್ಯೇ ತಚ್ಛೃಣು ಮೈತ್ರೇಯ । ಸಾಂಪ್ರತ್ಯೈಕಾಗ್ರ ಚೇತಸಾ ॥೪೪॥

ಸ್ವೋಚ್ಚೇ ಸ್ವಕ್ಷೇತ್ರಗೆ ಜೀವೇ ಕೇಂದ್ರಲಾಭ ತ್ರಿಕೋಣಗೆ ।
ಮೂಲತ್ರಿಕೋಣಸ್ಥಾನೇ ವಾ ತುಂಗಾಂಶೆ ಸ್ವಾಂಶಗೇಪಿ ವಾ ॥೪೫॥

ರಾಜ್ಯಲಾಭೋ ಮಹತ್ಸೌಖ್ಯಂ ರಾಜಸನ್ಮಾನ ಕೀರ್ತನಮ್ ।
ಗಜವಾಜಿಯುತಿಶ್ಚೈವ ದೇವ ಬ್ರಾಹ್ಮಣ ಪೂಜನಮ್ ॥೪೬॥

ದಾರಾಪುತ್ರಾದಿ ಸೌಖ್ಯಂ ಚ ವಾಹನಾಂಬರಜಂ ಭವೇತ್ ।
ಯಜ್ಞಾದಿ ಕರ್ಮಸಿದ್ಧಿಃ ಸ್ಯಾದ್ವೇದಾಂತ ಶ್ರವಣಾದಿಕಮ್ ॥೪೭॥

ಮಹಾರಾಜ ಪ್ರಸಾದೇನ ಸ್ವೇಷ್ಟಸಿದ್ಧಿಃ ಸುಖಾವಹಾ ।
ಆಂದೋಲಿಕಾದಿ ಲಾಭಶ್ಚ ಕಲ್ಯಾಣಂ ಚ ಮಹತ್ ಸುಖಮ್ ॥೪೮॥

ಪುತ್ರದಾರಾದಿ ಲಾಭಃ ಸ್ಯಾದಾನಂದಾನಂ ಮಹತ್ ಪ್ರಿಯಮ್ ।

ಸರ್ವಗ್ರಹಗಳಲ್ಲಿ ಗುರುದಶಾ ಪ್ರಶಸ್ತವಾದುದು. ಅದನ್ನು ಹೇಳುತ್ತೇನೆ ಮೈತ್ರೇಯ –ಏಕಾಗ್ರ ಚಿತ್ತದಿಂದ ಕೇಳು. ಗುರು ಸ್ವೋಚ್ಚ ಸ್ವಭವನ ಕೇಂದ್ರ ಲಾಭಸ್ಥಾನ ತ್ರಿಕೋಣ ಅಥವಾ ಮೂಲ ತ್ರಿಕೋಣ ಉಚ್ಚನವಾಂಶ ಅಥವಾ ಸ್ವನವಾಂಶದಲ್ಲಿದ್ದರೆ ನಿಶ್ಚಯ ರಾಜ್ಯ ಲಾಭ, ಮಹಾಸುಖಿ, ರಾಜಸನ್ಮಾನ, ಆನೆ, ಕುದುರೆ ಇತ್ಯಾದಿ ಪಶು, ಸಂಪತ್ತು ಸೌಖ್ಯ, ದೇವ, ಬ್ರಾಹ್ಮಣ, ಗುರುವಿನ ಪೂಜೆ, ಸ್ತ್ರೀ ಧನ, ವಾಹನ, ವಸ್ತ್ರಾದಿಗಳ ಸುಖ, ಯಜ್ಞಕರ್ಮದಲ್ಲಿ ಸಿದ್ಧಿ, ವೇದಾಂತ ಶ್ರವಣ, ರಾಜಪ್ರಸಾದದಿಂದ ಸ್ವೆಷ್ಟಸಿದ್ಧಿ ಪಾಲಕ, ಆದಿ ಆರೋಹಣ, ಕಲ್ಯಾಣ, ಪುತ್ರ ಸ್ತ್ರೀ ಲಾಭ ಆದರಂತೆ ಅನ್ನದಾನ ಇತ್ಯಾದಿ. ಎಲ್ಲಿ ಸುಖ ಪ್ರಾಪ್ತವಾಗುತ್ತದೆ.

ಇಲ್ಲಿ ಮುಖ್ಯ ಅಂಶ ಗುರು ನೀಚನಾಗಿದ್ದರೂ ಸ್ವತಃ ಕೇಡು ತರುವವನಲ್ಲ.

## ಅಶುಭ ಗುರು ದಶಾಫಲ

ನೀಚಾಸ್ತ ಪಾಪ ಸಂಯುಕ್ತೇ ಜೀವೇ ರಿಷ್ಫಾಷ್ಟ ಸಂಯುತೆ ॥೪೯॥

ಸ್ಥಾನಭ್ರಂಶೋ ಮನಸ್ತಾಪಃ ಪುತ್ರಪೀಡಾ ಮಹದ್ಭಯಮ್ ।
ಪಶ್ವಾದ ಧನಹಾನಿಶ್ಚ ತೀರ್ಥಯಾತ್ರಾದಿಕಂ ಭವೇತ್ ॥೫೦॥

ಆದೌ ಕಷ್ಟಂ ಫಲಂ ಭೂಯೋ ಭವೆಲ್ಲಾ ಭಶ್ಚ ತುಷ್ಪದಾಮ್ ।
ಮಧ್ಯಾಂತೆ ಸುಖ ಮಾಪ್ನೋತಿ ರಾಜಸನ್ಮಾನ ವೈಭವಮ್ ॥೫೧॥

ಗುರು ನೀಚಗತ ಅಸ್ತ ಅಥವಾ ಪಾಪಯುಕ್ತ ಅಷ್ಟಮ ಅಥವಾ ವ್ಯಯದಲ್ಲಿದ್ದರೆ ಜಾತಕನಿಗೆ ಸ್ಥಾನಭ್ರಂಶ, ಮನಸ್ತಾಪಾದಿ ಪಶುಗಳಾಗಿದ್ದರೆ ಹಾನಿ, ತೀರ್ಥಯಾತ್ರಾದಿ – ದಶಾರಂಭದಲ್ಲಿ ಕಷ್ಟ – ಪಶು ಧನ ಲಾಭ. ದಶಾಮಧ್ಯದಲ್ಲಿ ಹಾಗೂ ದಶಾಂತದಲ್ಲಿ ಸುಖ ಪ್ರಾಪ್ತಿ, ರಾಜ ಸನ್ಮಾನಾದಿಗಳು.

ಗುರು ದಶಾದಲ್ಲಿ ನೀಚಸ್ತನಾದರು ಅಲ್ಲಿ ತೋಂದರೆ ಹಾಗೂ ಅಸ್ತನಿಯಮ ಗುರುವಿಗೆ ಬಹಳಷ್ಟು ಅನ್ವಯಿಸುವುದಿಲ್ಲ. ಈ ಅಂಶಗಳನ್ನು ಹಾಗೂ ಗುರು ಸ್ವತಃ ಕೇಡು ತರುವವನಲ್ಲ. ಈ ಅಂಶ ಲಕ್ಷ್ಯದಲ್ಲಿಟ್ಟು ಫಲ ಹೇಳುವುದು.

## ಶನಿದಶಾ ಫಲ

ಸರ್ವಗ್ರಹವರಸ್ಯೋಷ್ಣ ರಶ್ಮಿಸೂನೋರ್ದಶಾ ಫಲವಮ್ ।
ಅತಃ ಪರಮಹಂ ವಚ್ಮಿ ತವ ಪ್ರೀತ್ಯೈದ್ವಿಜೋತ್ತಮ ॥೫೨॥

ಸ್ವೋಚ್ಚೆ ಸ್ವಕ್ಷೇತ್ರಗೆ ಮಂದೆ ಮಿತ್ರ ಕ್ಷೇತ್ರೆಥವಾ ಯದಿ ।
ಮೂಲ ತ್ರಿಕೋಣೆ ಭಾಗ್ಯೆ ವಾ ತುಂಗಾಂಶೆ ಸ್ವಾಂಶಗೇಪಿವಾ ॥೫೩॥

ದುಶ್ಚಕ್ಯೆ ಲಾಭಗೆ ಚೈವ ರಾಜಸಮ್ಮಾನ ವೈಭವಮ್ ।
ಸತ್ಕೀರ್ತಿರ್ಧರ್ಮಲಾಭಶ್ಚ ವಿದ್ಯಾವಾದ್ ವಿನೋದಮನ್ ॥೫೪॥

ಮಹಾರಾಜ ಪ್ರಸಾದೇನ ಗಜವಾಹನ ಭೂಷಣವಮ್ ।
ರಾಜಯೋಗೋ ಭವೇದೇವಂ ಸೇನಾಧೀಶಾನ್ಮಹತ್ಸುಖಮ್ ॥೫೫॥

ಲಕ್ಷ್ಮಿ ಕಟಾಕ್ಷ ಚಿನ್ಹಾನಿ ರಾಜ್ಯಲಾಭೋಪಿ ಸಂಭವೇತ್ ।
ಗೃಹೆ ಕಲ್ಯಾಣ ಸಂಪತ್ತಿರ್ಲಾಭೋ ದಾರಾಸುತಾದಿಜಃ ॥೫೬॥

ಹೇ ದ್ವಿಜೋತ್ತಮನೆ, ಈಗ ನಾನು ಸರ್ವಗ್ರಹಗಳಲ್ಲಿ ಶ್ರೇಷ್ಠನೆನಿಸಿಕೊಳ್ಳುವ ರಶ್ಮಿಸೂನವ(ರವಿ ತನಯ)ನಾದ ಶನಿಯ ದಶಾಫಲ ವಿವರಿಸುತ್ತೇನೆ. ಶನಿ ಸ್ವೋಚ್ಚ ಸ್ವಭವನ ಮಿತ್ರರ ಮನೆ ಮೂಲ ತ್ರಿಕೋಣ ಭಾಗ್ಯಸ್ಥಾನ ಉಚ್ಚನವಾಂಶ ಅಥವಾ ಸ್ವನವಾಂಶ ತೃತೀಯ ಏಕಾದಶದಲ್ಲಿದ್ದರೆ ಆ ಜಾತಕನಿಗೆ ರಾಜಸನ್ಮಾನ ಲಕ್ಷ್ಮಿ ಕಟಾಕ್ಷ ವಿದ್ಯಾವಾದ ವಿನೋದಾದಿಗಳಿಂದ ಮಹಾಸುಖ ಲಭ್ಯವಾಗುತ್ತದೆ. ಉಚ್ಚದಲ್ಲಿದ್ದರಂತೂ (ತೂಲ ರಾಶಿಯೇಶ ಅನಿಲ ಪೊಕ್ಕಂತೆ) ಎಂದು ದಾಸರು ಹೇಳಿದ್ದಾರೆ. ಅತಿ ಸುಖ.

## ಶುಭಾಶುಭ ಶನಿದಶಾ ಹಾಗೂ ಅಪವಾದ

ಷಷ್ಠಾಷ್ಟಮವ್ಯಯೋ ಮಂದೋ ನೀಚೆ ವಾಸ್ತಂಗತೇಪಿವಾ ।
ವಿಷಶಸ್ತ್ರಾದಿ ಪೀಡಾ ಚ ಸ್ಥಾನಭ್ರಂಶೋ ಮಹದ್ ಭಯದ್ ॥೫೭॥

ಪಿತೃಮಾತೃ ವಿಯೋಗೆಶ್ಚ ದಾರಾಪುತ್ರಾದಿ ಪೀಡನಮ್ ।
ರಾಜವೈಷಮ್ಯಕಾರ್ಯಾಣಿ ಹಾನಿಷ್ಟಂ ಬಂಧನಂ ತಥಾ ॥೫೮॥

ಶುಭಯುಕ್ತೇಕ್ಷಿತೆ ಮಂದೆ ಯೋಗಕಾರಕಸಂಯುತೆ ।
ಕೇಂದ್ರ ತ್ರಿಕೋಣ ಲಾಭೆ ವಾ ಮೀನಗೆ ಕಾರ್ಮುಕೆ ಶನೌ ॥೫೯॥

ರಾಜ್ಯ ಲಾಭೋ ಮಹೋತ್ಸಾಹೋ ಗಜಶ್ವಾಂಬರಜಂ ಸುಖಮ್ ।

ಶನಿಯು 6, 8, 12ರಲ್ಲಿ ನೀಚ ರಾಶಿಸ್ಥ ಅಸ್ತಂಗತನಾಗಿದ್ದರೆ ವಿಷ ಶಸ್ತ್ರಾದಿಗಳ ಪೀಡೆ, ಸ್ಥಾನಭ್ರಂಶ, ಮಹಾಭಯ, ಪಿತೃಮಾತೃ ವಿಯೋಗ, ಸ್ತ್ರೀ ಪುತ್ರಾದಿ ಪೀಡೆ, ರಾಜ ವಿರುದ್ಧ ಕಾರ್ಯ ಹಾಗೂ ಅದರಿಂದ ಅನಿಷ್ಟ ಹಾಗೂ ಬಂಧನವೂ ಪ್ರಾಪ್ತವಾಗುತ್ತದೆ.

ಅದೇ 6, 8, 12ರ ಶನಿ ಶುಭಗ್ರಹ ಸಂಯುತ ಅಥವಾ ದೃಷ್ಟನಾಗಿದ್ದರೆ ಅಥವಾ ಆ ಲಗ್ನಕ್ಕೆ ಯೋಗಕಾರಕ ಗ್ರಹದ ಜೊತೆಗಿದ್ದರೆ ಕೇಂದ್ರ ತ್ರಿಕೋನ ಲಾಭಸ್ಥಾನ ಅಥವಾ ಮೀನ ಧನು ರಾಶಿಯಲ್ಲಿ ಶನಿಯಿದ್ದರೆ ರಾಜ್ಯ ಲಾಭ ಮಹೋತ್ಸಾಹ ಹಾಗೂ ಆನೆ, ಕುದುರೆ ಇತ್ಯಾದಿ ಪಶುಸೌಖ್ಯ, ವಸ್ತ್ರಾದಿ ಸುಖವೂ ಲಾಭ.

## ಬುಧ ದಶಾಫಲ

ನಿಖಿಲದ್ಯುಪದಾಂ ಮದ್ಯೆ ಪ್ರಸಿದ್ಧಸ್ಯ ಬುಧಸ್ಯವೈ ॥೬೦॥

ದಶಾಫಲ ಮಥ್ಯೋ ವಚ್ಮಿ ಶೃಣು ಚೈಕಾಗ್ರಮಾನಸಃ ।
ಸ್ವೋಚ್ಚೆ ಸ್ವಕ್ಷೇತ್ರೆ ಸಂಯುಕ್ತೆ ಕೇಂದ್ರ ಲಾಭ ತ್ರಿಕೋಣಗೆ ॥೬೦॥

ಮಿತ್ರಕ್ಷೇತ್ರ ಸಮಾಯುಕ್ತೊ ಸೌಮ್ಯೆ ದಾಯೋ ಮಹತ್‌ಸುಖಮ್ ।
ಧನಧಾನ್ಯಾದಿ ಲಾಭಶ್ಚ ಸತ್ಕೀರ್ತಿ ಧನಸಂಪದಃ ॥೬೨॥

ಜ್ಞಾನಾಧಿಕ್ಯಂ ನೃಪಪ್ರೀತಿಃ ಸತ್ಕರ್ಮ ಗುಣವರ್ಧನಮ್ ।
ಪುತ್ರದಾರಾದಿ ಸೌಖ್ಯಂ ಚ ದೇಹಾರೋಗ್ಯಂ ಮಹತ್‌ಸುಖಮ್ ॥೬೩॥

ಕ್ಷೀರೇಣ ಭೋಜನಸುಖಂ ವ್ಯಾಪಾರಾತ್ ಸ್ಯಾದ್ಧನಾಗಮಃ ।
ಶುಭದೃಷ್ಟಿಯುತೆ ಸೌಮ್ಯೆ ಭಾಗ್ಯೆ ಕರ್ಮಾಧಿಪೋ ದಶಾಹ ॥೬೪॥

ಆದಿಪತ್ಯೆ ಬಲವತ್ ಸಂಪೂರ್ಣ ಫಲದಾಯಿಕಾ ।

ಈಗ ನಾನ ಬುಧನ ದಶಾಫಲವನ್ನು ವಿವರಿಸುತ್ತೇನೆ ಏಕಾಗ್ರಚಿತ್ತನಾಗಿ ಆಲಿಸು. ತನ್ನ ಉಚ್ಚ ಸ್ವಭವನ ಕೇಂದ್ರ ತ್ರಿಕೋಣ ಅಥವಾ ಲಾಭದಲ್ಲಿದ್ದರೆ ಮಿತ್ರಗ್ರಹದಲ್ಲಿ ರಲು ಅವನ ದಶಾಮಹತ್ವ ಪೂರ್ಣವಾಗಿ ಮಹಾಸುಖಿ ಧನಧಾನ್ಯ ಸಮೃದ್ಧಿ, ಸುಯಶ ಜ್ಞಾನಾಧಿಕ್ಯ ರಾಜಪ್ರೀತಿ ಸತ್ಕಾರ್ಯ ಹಾಗೂ ಸದ್‌ಗುಣದ ವೃದ್ಧಿ ಕಾರಕವಾಗಿದೆ. ಪುತ್ರ ಸ್ತ್ರೀ ಸೌಖ್ಯ – ಪಾಯಸಾದಿ ಭೋಜನ ಸುಖ, ವ್ಯಾಪಾರದಿಂದ ಧನಲಾಭ.

ಅದೇ ಬುಧ ಶುಭಗ್ರಹ ದೃಷ್ಟನಾಗಿ ಭಾಗ್ಯಸ್ಥಾನಸ್ಥ ಅಥವಾ ದಶಮೇಶ ನಾಗಿದ್ದರೆ ದಶಾ ಸಂಪೂರ್ಣ ಫಲದಾಯಕ.

## ಅಶುಭ ಬುಧ ದಶಾ

ಪಾಪಗ್ರಹೈರ್ಯುತೆ ದೃಷ್ಟೆ ರಾಜದ್ವೇಷಂ ಮನೋರುಜವಮ್ ॥೬೫॥

ವಿರೋಧಂ ಬಾಂಧವಜನೈರ್ವಿದೇಶ ಗಮನಂ ತಥಾ ।
ಪರಪ್ರೇಷ್ಯಂ ಚ ಕಲಹಂ ಮೂತ್ರಕೃಚ್ಛ್ರಾನ್ಮಹದ್ ಭಯವಮ್ ॥೬೬॥

ಷಷ್ಠಷ್ಟಮವ್ಯಯೇ ಸೌಮ್ಯೆ ಲಾಭಭೋಗಾರ್ಥ ನಾಶನವಮ್ ।
ವಾತಪೀಡಮಪಿ ತಥಾ ಪಾಂಡುರೋಗಂ ವದೇದ್ ಬುಧಃ ॥೬೭॥
ನೃಪಚೌರಗ್ನಿಭೀತಿಂ ಚ ಕೃಷಿಗೋ ಭೂಮಿ ನಾಶನಮ್ ।
ದಶಾದೌ ಧನಧಾನ್ಯಂ ಚ ವಿದ್ಯಾಲಾಭಂ ಮಹತ್‌ಸುಖವಮ್ ॥೬೮॥

ಪುತ್ರಕಲ್ಯಾಣ ಸಂಪತ್ತಿ ಸನ್ಮಾರ್ಗಚ್ಚ ಧನಾಗಮಮ್ ।
ಮಧ್ಯೆ ನರೇಂದ್ರ ಸನ್ಮಾನಮಂತೆ ದುಃಖಂ ಚ ನಿರ್ದಿಶೇತ್ ॥೬೯॥

ಬುಧ ಪಾಪಗ್ರಹಯುಕ್ತ ದೃಷ್ಟನಾಗಿದ್ದರೆ ರಾಜದ್ವೇಷ, ಮನೋವ್ಯಥಾ, ಬಾಂಧವರ ಜೊತೆ ವಿರೋಧ, ವಿದೇಶ ಯಾತ್ರಾ ಪರಾಧೀನತಾ ಹಾಗೂ ಮೂತ್ರ ಕೃಚ್ಛರೋಗದಿಂದ ಭಯ. ಅದೇ ಬುಧ 6, 8, 12ರಲ್ಲಿದ್ದರೆ ಲಾಭ ಹಾಗೂ ಧನ ಸ್ಥಾನದಲ್ಲಿದ್ದರೆ ಧನನಾಶ, ವಾತಪೀಡಾ ಹಾಗೂ ಪಾಂಡುರೋಗ, ರಾಜರಿಂದ, ಕಳ್ಳರಿಂದ ಭಯ, ಭೂಮಿ ವಿನಾಶ, ದಶಾರಂಭದಲ್ಲಿ ಧನ ಧಾನ್ಯ ಸಮೃದ್ಧಿ,

ವಿದ್ಯಾಲಾಭ, ಮಹಾಸುಖಿ, ಸನ್ಮಾರ್ಗದಲ್ಲಿ ಮಗ, ದಶಾಮಧ್ಯೆದಲ್ಲಿ ರಾಜಸನ್ಮಾನ, ದಶಾಂತ್ಯ ದುಃಖ ಕಾಲವಾಗಿರುತ್ತದೆ.

## ಕೇತು ದಶಾ ಫಲ

ಶೃಣು ಮೈತ್ರೇಯ । ತೆ ಶ್ರದ್ಧಾ ವಶಂ ವದಾತಯಾಧುನಾ ।
ಕಬಂಧಾ ಪರಪರ್ಯಾಯ ಕೇತೋರ್ವಚ್ಮಿ ದಶಾಫಲಂ ॥೭೦॥

ಹೇ ಮೈತ್ರೇಯನೆ, ಈಗ ನಾನು ಕಬಂಧ ಹೆಸರಿನ ಕೇತುವಿನ ದಶಾಫಲ ಹೇಳುತ್ತೇನೆ ಕೇಳು.

ಕೇಂದ್ರೆ ಲಾಭೆ ತ್ರಿಕೋಣೆ ವಾ ಶುಭರಾಶೌ ಶುಭೇಕ್ಷಿತೆ ।
ಸ್ವೋಚ್ಚೆ ವಾ ಶುಭವರ್ಗೆ ವಾ ರಾಜಪ್ರೀತಿಮಭೀಕ್ಷ್ಣತಾವಮ್ ॥೭೧॥

ದೇಶಗ್ರಾಮಾಧಿಪತ್ಯಂ ಚ ವಾಹನಂ ಪುತ್ರಸಂಭವವಮ್ ।
ದೇಶಾಂತರ ಪ್ರಯಾಣು ಚ ತತೋಪ್ಯತಿ ಸುಖಂ ವದೇತ್ ॥೭೨॥

ಪುತ್ರ ದಾರಾಸುಖಂ ಚೈವ ಲಾಭಶ್ಚಾಪಿ ಚತುಷ್ಪದಾವಮ್ ।
ದುಶ್ಚಿಕ್ಯೆ ಷಷ್ಠಲಾಭೆ ವಾ ಕೇತುದಾಯೋ ಸುಖಂ ತಥಾ ॥೭೩॥

ರಾಜ್ಯಂ ತಥೈವ ಸನ್ಮಿತ್ರಗಜವಾಜಿ ಸಮನ್ವಿತವಮ್ ।
ದಶಾದೌ ರಾಜಯೋಗಃ ಸುರ್ದಶಾಮದ್ಯೆ ಮಹದ್ ಭಯವಮ್ ॥೭೪॥

ಅಂತೆ ದೂರಾಟನಂ ಚೈವ ದೇಹವಿಕ್ರಮಣು ತಥಾ ।
ಧನೆ ರಂಧ್ರೆ ವ್ಯಯೋ ಕೇತೌ ಪಾಪಗ್ರಹಯುತೆ ಕ್ಷಿತೆ ॥೭೫॥

ನಿಗಡೋ ಬಂಧುನಾಶಶ್ಚ ಸ್ಥಾನ ಭ್ರಂಶೋ ಮನೋರುಜಾ ।
ಶೂದ್ರಾದಿ ಸಂಗತೋ ಲಾಭೋ ಭವೆದ್ರೋಗ ಸಮುದ್‌ಭವಃ ॥೭೬॥

ಕೇತು ಕೇಂದ್ರ ತ್ರಿಕೋನ ಶುಭಗ್ರಹ ರಾಶಿಯಲ್ಲಿ ಶುಭಗ್ರಹದ ದೃಷ್ಟಿ ಅದರ ಮೇಲಿದ್ದರೆ ಅಥವಾ ಸ್ವೋಚ್ಚ ಶುಭವರ್ಗದಲ್ಲಿದ್ದರೆ ಮನುಷ್ಯನಿಗೆ ಅಭಿಲಾಷಿತ ರಾಜಪ್ರೀತಿ, ದೇಶ ಗ್ರಾಮಾಧಿಪತ್ಯ ಪುತ್ರಕೃತ ವಾಹನ ದೇಶಾಂತರ ಭ್ರಮಣ ಅತ್ಯಧಿಕ ಸುಖ ನಿರ್ದೇಶಿಸುವುದು. ಇಂತಹ ವ್ಯಕ್ತಿಗೆ ಪುತ್ರ ಸ್ತ್ರೀ ಸೌಖ್ಯ, ಪಶುಲಾಭ, ಕೇತು ತೃತೀಯ, ಷಷ್ಠ ಅಥವಾ ಏಕಾದಶದಲ್ಲಿದ್ದರೆ ಕೂಡ ತನ್ನ ದಶಾದಲ್ಲಿ ಸುಖವನ್ನಿಯುತ್ತಾನೆ. ಅವನು ಸನ್ಮಿತ್ರ ಗಜ, ಅಶ್ವಾದಿಗಳಿಂದ ಸಂಪನ್ನ ರಾಜ್ಯವನ್ನು

ಕೊಡಿಸುತ್ತಾನೆ – ದಶಾ ಆರಂಭದಲ್ಲಿ ರಾಜ್ಯ ಪದವಾದರೆ ದಶಾ ಮಧ್ಯ ಭಯಪ್ರದ ದಶಾಂತ ದೂರ ಪರ್ಯಟನ ಕಾರಕವಾಗುತ್ತದೆ. ಧನಸ್ಥಾನ ಅಷ್ಟಮ ವ್ಯಯ ಸ್ಥಾನದಲ್ಲಿ ಕೇತು ಪಾಪಗ್ರಹ ಯುಕ್ತ ಅಥವಾ ದೃಷ್ಟನಾದರೆ ಜೈಲುವಾಸ (ತುರಂಗ) ಬಂಧು ವಿನಾಶ, ಸ್ಥಾನ ಭ್ರಂಶ ಮನೋವ್ಯಥಾ ಶೂದ್ರಾದಿ ಸಂಗದಿಂದ ಲಾಭ ಹಾಗೂ ಮಹಾರೋಗೋತ್ಪತ್ತಿ.

## ಶುಕ್ರ ದಶಾ ಫಲ

ರೇತಸಃ ಕಾರಕತ್ವೇನ ವಿಶ್ರುತಸ್ಯ ಭೃಗೋರಿಹ ।
ದಶಾಫಲಂತ್ವ ವಿಕಲಂ ವಕ್ಷ್ಯಾಮಿ ಶೃಣು ಸನ್ಮನೆ ॥೭೭॥

ಪರಮೋಚ್ಚಗತೆ ಶುಕ್ರೆ ಸ್ವೋಚ್ಚೆ ಸ್ವಕ್ಷೇತ್ರ ಕೇಂದ್ರಗೆ ।
ನೃಪಾಭಿಷೇಕ ಸಂಪ್ರಾಪ್ತಿರ್ವಾಹನಾಂಬರ ಭೂಷಣಮ್ ॥೭೮॥

ಗಜಾಶ್ವಪಶುಲಾಭಶ್ಚ ನಿತ್ಯಂ ಮಿಷ್ಟಾನ್ನ ಭೋಜನಮ್ ।
ಅಖಂಡಮಂಡಲಾಧೀಶ ರಾಜಸಮ್ಮಾನ ವೈಭವಮ್ ॥೭೯॥

ಮೃದಂಗ ವಾದ್ಯಘೋಷಶ್ಚ ಗೃಹಂ ಲಕ್ಷ್ಮೀಕಟಾಕ್ಷಯಕ್ ।
ತ್ರಿಕೋಣಸ್ಥೆಥವಾ ಮೀನೆ ರಾಜ್ಯಾರ್ಥ ಗೃಹ ಸಂಪದಃ ॥೮೦॥

ವಿವಾಹೋತ್ಸವ ಕಾರ್ಯಾಣಿ ಪುತ್ರಕಲ್ಯಾಣ ವೈಭವಮ್ ।
ಸೇನಾಧಿಪತ್ಯಂ ಚ ತಥಾ ಸ್ವೇಷ್ಟಬಂಧು ಸಮಾಗಮಃ ॥೮೧॥

ನಷ್ಟ ರಾಜ್ಯಾದ್ಧನ ಪ್ರಾಪ್ತಿರ್ಗೃಹೆ ಗೋಧನ ಸಂಗ್ರಹಃ ।

ರಾಕ್ಷಸರ ಗುರುವಾಗಿ ಪ್ರಸಿದ್ಧನಾದ ರೇತೋಕಾರಕ ಶುಕ್ರನ ದಶಾಫಲ ಹೇಳುತ್ತೇನೆ ಕೇಳು. ಶುಕ್ರ ಪರಮೋಚ್ಚ ಅಥವಾ ಸ್ವರಾಶಿಗತವಾಗಿದ್ದು ಸ್ವೋಚ್ಚದಲ್ಲಿದ್ದು ಸ್ವಕ್ಷೇತ್ರ ಕೇಂದ್ರದಲ್ಲಿದ್ದರೆ ಆ ಜಾತಕ ರಾಜತಿಲಕ ವಾಹನ, ವಸ್ತ್ರ ಅಲಂಕಾರ ಭೂಷಿತನಾಗುವನು. ಆನೆ, ಕುದುರೆ ಇತ್ಯಾದಿ ವಾಹನ ಸೌಖ್ಯ, ಪಶು ಸಂಪತ್ತು ನಿತ್ಯ ಮೃಷ್ಟಾನ್ನ ಭೋಜನ ಪ್ರಾಪ್ತಿ (ಸುದೈವಿ) ಚಕ್ರವರ್ತಿ ರಾಜನಿಂದ ಸನ್ಮಾನಾದಿಗಳು ಮೃದುಗಾದಿ ವಾಹನಗಳಲ್ಲಿ ಅಭಿರುಚಿ – ಲಕ್ಷ್ಮೀ ಮಾಸಯುಕ್ತ ಮನೆ ಪ್ರಾಪ್ತಿ ಮನೆಯಲ್ಲಿ ಈ ಸಮಯದಲ್ಲಿ ವಿವಾಹಾದಿ ಕಾರ್ಯ ಅದೇ ಶುಕ್ರ ತ್ರಿಕೋನಸ್ಥ ಸಾಗಿದ್ದರೆ ತನ್ನುಚ್ಚ ಮೀನದಲ್ಲಿದ್ದರೆ ರಾಜ್ಯ ಮಿತ್ರ ಧನ, ಮನೆ ಹಾಗು ಇತರ ಸಂಪತ್ತು ವಿವಾಹಾದಿ ಕಾರ್ಯ ಪುತ್ರ ಕಲ್ಯಾಣ ಸೇನಾಧಿ ಪತಿತ್ವ ಸ್ವಮಿತ್ರ ಬಂಧು ಆಗಮನ ನಷ್ಟರಾಜ್ಯದಿಂದ ಧನಪ್ರಾಪ್ತಿ ಹಾಗೂ ಗೋಧನ ಸಂಗ್ರಹ ಈ ಎಲ್ಲ ಫಲಗಳು ಶುಕ್ರ ದಶಾದಲ್ಲಿ ಪ್ರಾಪ್ತಿ ಹೇಳುವುದು.

## ಅಶುಭ ಶುಕ್ರ ದಶಾ ಫಲ

ಷಷ್ಠಾಷ್ಟಮವ್ಯಯೇ ಶುಕ್ರೇ ನೀಚೆ ಪಾಪಯುತೆಕ್ಷಿತೆ ॥೮೨॥

ಆತ್ಮಬಂಧು ಜನದ್ವೇಷೋ ದಾರವರ್ಗಕಃ ಪೀಡನಮ್ ।
ವ್ಯವಸಾಯಾತ್ ಫಲಂ ನಷ್ಟಂ ಗೋ ಮಹಿಷ್ಯಾದಿ ಸಂಕ್ಷಯಃ ॥೮೩॥

ದಾರಪುತ್ರಾದಿ ಪೀಡಾ ವಾ ವಿಯೋಗಸ್ವಾತ್ಮ ಬಂಧುಭಿಃ ।

ಶುಕ್ರ 6, 8, 12ರಲ್ಲಿ ನೀಚನಾಗಿದ್ದರೆ ಪಾಪಗ್ರಹಯುತ ಅಥವಾ ಅವುಗಳಿಂದ ದೃಷ್ಟಿತನಾಗಿದ್ದರೆ ಆತ್ಮೀಯ ಜನರೊಡನೆ ದ್ವೇಷ ಸ್ತ್ರೀ ವರ್ಗಾದಿಗಳಲ್ಲಿ ಪೀಡೆ ವ್ಯವಸಾಯ ಹಾನಿ, ಪಶು, ಧನ ಹಾನಿ, ಸ್ತ್ರೀ ವರ್ಗಾದಿಗಳಲ್ಲಿ ಪೀಡೆ, ವ್ಯವಸಾಯ ಹಾನಿ, ಪಶು, ಧನ ಹಾನಿ, ಸ್ತ್ರೀ ಪುತ್ರಾದಿಗಳಿಗೆ ಪೀಡೆ ಅಥವಾ ವಿಯೋಗ.

## ಭಾಗ್ಯ ಕರ್ಮಾಧೀಶ ಶುಕ್ರ ಫಲ

ಭಾಗ್ಯ ಕರ್ಮಾಧಿ ಪತ್ಯೇನ ಲಗ್ನವಾಹನ ರಾಶಿಗೆ ॥೮೪॥

ತದ್ದಶಾಯಾಂ ಮಹತ್‌ಸೌಖ್ಯಂ ದೇಶಗ್ರಾಮಾಧಿಪತ್ಯಜಮ್ ।
ದೇವಾಲಯ ತಡಾಗಾದಿ ಪುಣ್ಯಕರ್ಮಸು ಸಂಗ್ರಹಃ ॥೮೫॥

ಅನ್ನದಾನೆ ಮಹತ್ ಸೌಖ್ಯಂ ನಿತ್ಯಂ ವಿಷ್ಟಾನ್ನ ಭೋಜನಮ್ ।
ಉತ್ಸಾಹಃ ಕೀರ್ತಿ ಸಂಪತ್ತಿ ಸ್ತ್ರೀ ಪುತ್ರ ಧನ ಸಂಪದಃ ॥೮೬॥

ಶುಕ್ರ ಭಾಗ್ಯೇಶ ಅಥವಾ ದಶಮೇಶರಾಗಿ ಲಗ್ನ ಅಥವಾ ಚತುರ್ಥ ಸ್ಥಾನಗತ ನಾಗಿ ತನ್ನ ದಶಾದಲ್ಲಿ ದೇಶ, ಗ್ರಾಮದ ಆಧಿಪತ್ಯ ಕೊಡುವುದರಲ್ಲಿದೆ. ಸುಖ ದಾಯಕನು ಆಗುತ್ತಾನೆ. ದೇವಾಲಯ ಕೇರೆ ತಡಾಗಾದಿಗಳ ನಿರ್ಮಾಣದ ಪುಣ್ಯ ಕಾರ್ಯದಲ್ಲಿ ತೊಡಗಿರುತ್ತಾನೆ. ಅನ್ನದಾಗಾದಿಗಳಲ್ಲಿಯೂ ಸುಖ ಪಡೆಯುತ್ತಾನೆ. ನಿತ್ಯ ಮೃಷ್ಟಾನ್ನ ಭೋಜನ, ಉತ್ಸಾಹ ಯಶ, ಸ್ತ್ರೀ ಪುತ್ರಾದಿ ಹಾಗೂ ಧನಾದಿ ಸುಖ – ಎಲ್ಲಾ ಸಂಪತ್ತಿನ ಸುಖ.

ಸ್ವಭುಕ್ತೌ ಫಲಮೇವಂ ಸ್ಯಾತ್‌ಫಲಾನ್ಯಾನ್ಯ ದಶಾಸ್ವಪಿ ।
ದ್ವಿತೀಯದ್ಯೂನನಾಥೆ ತು ದೇಹಪೀಡಾ ಭವಿಷ್ಯತಿ ॥೮೭॥

ತದ್ದೋಷ ಪರಿಹಾರಾರ್ಥ ರುದ್ರಂ ವಾ ತ್ರ್ಯಂಬ್ಯುಕಂ ಜಪೇತ್ ।
ಶ್ವೇತಾಂಗಾಂ ಮಹಪಿ ದದ್ಯಾದಾರೋಗಂ ಸ್ಯಾತ್ತದಾ ನೃಣಾಮ್ ॥೮೮॥

ಶುಕ್ರ ತನ್ನ ದಶಾ ಅಂತರದಶಾದಲ್ಲಿ ಮೇಲಿನ ಫಲ ಹೇಳುವುದು. ಬೇರೆ ಗ್ರಹಗಳ ದಶಾ ಶುಕ್ರ ಭುಕ್ತಿಯಲ್ಲಿ ವಿಚಾರಿಸಿ ಫಲ ಹೇಳುವುದು. ಶುಕ್ರ ದ್ವಿತೀಯ ಅಥವಾ ಸಪ್ತಮದ ಅಧಿಪರಾಗಿದ್ದರೆ ಶಾರೀರಿಕ ಪೀಡೆ – ಶಾಂತಿಗಾಗಿ ರುದ್ರಾಭಿಷೇಕ ಅಥವಾ ಮೃತ್ಯುಂಜಯ ಜಪ, ಬಿಳಿ ಆಕಳು, ಎಮ್ಮೆ ದಾನ ಮಾಡಿದರೆ ಆರೋಗ್ಯ ಲಾಭವಾಗುತ್ತದೆ.

ಇಲ್ಲಿ ದಶಾ ಫಲ ಹೇಳುವಾಗ ಆಯಾ ಲಗ್ನಗಳಿಗೆ ಕಾರಕತ್ವ ಮಾರಕತ್ವ ವಿಮರ್ಶಿಸಿ ಫಲ ಹೇಳುವುದು. ಅವಶಕ ಅದರಲ್ಲಿದೆ. ಲಾಭಾಧಿ ಸ್ಥಾನದ ಗ್ರಹ ಫಲ ಸದಾಕಾಲವೂ ಲಾಭದಾಯಕ ಅನೇಕ ಫಲ ಹೇಳಿದಾಗ – ಕಾರಕತ್ವ ಮಾರಕತ್ವದ ಅಂಶ ವಿಚಾರಣೀಯ. ಸ್ತ್ರೀ ಕಾರಕನಾದಾಗ ಇತರ ಅಂಶ ಗೌಣವೆ. ಈ ರೀತಿ ವಿಚಾರಿಸುವುದು ಪಶು ಸಂಪತ್ತು ಹೇಳಿದಾಗ – ಹಿಂದೆ ಪಶುಗಳನ್ನು ಪೂರ್ಣ ಸಂಪತ್ತು ಎಂದು ಪರಿಗಣಿಸುತ್ತಿದ್ದುದರಿಂದ ಅನೇಕ ಗ್ರಹಫಲ ಹೇಳುವಾಗ ಪಶು ಸಂಪತ್ತು ಬಂದಲ್ಲಿ ಈಗ ಸಂಪತ್ತು ಎಂದು ರಥ, ಆನೆ, ಕುದುರೆ, ವಾಹನವಾಗಿದ್ದವು ಗಳಿಂದ ಅದೇ ರೀತಿ ಹೇಳಿದ್ದು. ಈಗ ವಾಹನ ಸೌಖ್ಯವೆಂದು ಪರಿಗಣಿಸುವುದು. ಶುಭಗ್ರಹಗಳು ಕೇಂದ್ರಾಧಿಪರಾಗಿದ್ದಾಗ ಕಾರಕರಲ್ಲಿವೆಂದಿದ್ದಾಗಲೂ ಗುರು, ಶುಕ್ರ (ದಶಮ ವಿಶೇಷ)ರಿಗೆ ಫಲ ವ್ಯತ್ಯಾಸದಲ್ಲಿ ಪರಿಗಣಿಸುವುದು – ಯಾವ ಸ್ಥಾನಾಧಿಪತ್ಯ – ಯಾವ ಸ್ಥಾನದಲ್ಲಿರುವರೋ ಆಯಾ ಸ್ಥಾನದ ಕಾರಕತ್ವದ ಮೇಲೆ ಫಲವನ್ನು ಹೇಳುವುದು. ದಶಾಕಾಲದಲ್ಲಿ ಗ್ರಹಗಳು ತಮ್ಮ ಶುಭಾಶುಭ ಫಲ ಕೊಡುವರು.

### ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ದಶಾಫಲಾಧ್ಯಾಯಃ ಸಮಾಪ್ತಃ



೪೯ನೇ ಅಧ್ಯಾಯ

# ಅಥ ಭಾವೇಶ ದಶಾಫಲಾಧ್ಯಾಯಃ

## ಪರಾಶರ ಉವಾಚ:

ಭಾವಸ್ಥಿತ್ಯಗುಸಾರೇಣ ಫಲಂ ಸಿದ್ಭಿರುದೀರಿತಮ್ ।
ಭಾವಾಧಿಪತಿ ಸಂಬಂಧಾದಥ ವಚ್ಮಿ ಫಲಂ ಮುನೆ ॥೧॥

## ಪರಾಶರರು ಹೇಳಿದರು—

ಹೇ ಮುನಿಯೇ, ಗ್ರಹ ಭಾವಸ್ಥಿತದ ಅನುಸಾರ ವಿದ್ವಾಂಸರು ಫಲಾದೇಶವನ್ನು ಹೇಳಿದ್ದಾರೆ. ಈಗ ನಾನು ಭಾವೇಶ ಸಂಬಂಧದಿಂದ ಫಲಾದೇಶ ಹೇಳುತ್ತೇನೆ ಕೇಳು.

### ಭಾವೇಶ ದಶಾ ಫಲ

ಲಗ್ನಾಧಿಪ ದಶಾಯಾಂ ಸ್ಯಾತ್ತನೌ ಸೌಖ್ಯಂ ಚ ಸದ್ಯಶಃ ।
ವಿತ್ತಪಸ್ಯ ದಶಾಯಾಂ ತು ಕಷ್ಟಂ ಚಾಪಿ ಮೃತೇರ್ಭಯಮ್ ॥೨॥

ತೃತೀಯೇಶದಶಾಯಾಂ ತು ಜಾತಕಸ್ಯ ಶುಭಂ ಫಲಮ್ ।
ಚತುರ್ಥೇಶ ದಶಾಯಾಂ ವೈ ಗೇಹ ಭೂಸಂಭವಂ ಸುಖಮ್ ॥೩॥

ಪಂಚಮೇಶ ದಶಾಯಾಂ ತು ವಿದ್ಯಾತ್ಮಜಸುಖಂ ಮಹತ್ ।
ಷಷ್ಠೇಶಸ್ಯ ದಶಾಮಧ್ಯೆ ಶತ್ರುಭೀಶ್ಚ ತನೌ ರುಜಾ ॥೪॥

ಜಾಯೇಶಸ್ಯ ದಶಾಕಾಲೇ ಜಾಯಾಕಷ್ಟಂ ಮೃತೇರ್ಭಯಮ್ ।
ರಂಧ್ರೇಶಸ್ಯ ದಶಾಮಧ್ಯೆ ವಿತ್ತನಾಶೋ ಮೃತೇಶ್ಚಭೀಃ ॥೫॥

ಭಾಗ್ಯೇಶಸ್ಯ ದಶಾಕಾಲೆ ಕೀರ್ತಿರ್ಧರ್ಮಾರ್ಥ ಸಂಗ್ರಹಃ ।
ಕರ್ಮಾಧಿಪದಶಾಯಾಂ ತು ರಾಜಸಮ್ಮಾನ ಸಂಭವಃ ॥೬॥

ಲಾಭಾಧಿಪ ದಶಾಕಾಲೆ ಲಾಭೋ ವಿಘ್ನೋಽಥ ರೋಗಭಿಃ ।
ರಿಷ್ಫೇಶಸ್ಯ ದಶಾಮಧ್ಯೆ ಕಷ್ಟಂ ನಾನಾವಿಧಂ ಭವೇತ್ ॥೭॥

ಶುಭಾಭಾವಸ್ಥ ಖೇಟಸ್ಯ ದಶಾರಂಭೆ ಶುಭಂ ಫಲಂ ।
ಶುಭಸ್ಯಾಪ್ಯಾಶುಭಸ್ಥಾನ ಸ್ಥಿತಸ್ಯಾ ಶುಭದಂ ಫಲಂ ॥೮॥

ಲಗ್ನೇಶ ದಶಾದಲ್ಲಿ ಶರೀರ ಸುಖ, ಯಶಸ್ಸು. ಧನೇಶನ ದಶಾದಲ್ಲಿ ಕಷ್ಟ,

ಮರಣ ಸಂಭವ, ಭಯ. ತೃತೀಯೇಶ ದಶಾದಲ್ಲಿ ಅಶುಭ. ಚತುರ್ಥೇಶ ದಶಾಕಾಲ ಗೃಹ ಹಾಗೂ ಭೂಮಿ ಸುಖ. ಪಂಚಮೇಶನ ದಶಾ ವಿದ್ಯಾ, ಪುತ್ರ ಸುಖ. ಷಷ್ಠೇಶನ ದಶಾಕಾಲ ಶತ್ರುಭಯ, ಶರೀರದಲ್ಲಿ ಪೀಡೆ. ಸಪ್ತಮೇಶನ ದಶಾದಲ್ಲಿ ಸ್ತ್ರೀ ಕಷ್ಟ ಹಾಗೂ ಮರಣ ಭಯ. ಅಷ್ಟೇಶನ ದಶಾದಲ್ಲಿ ಧನಕ್ಷಯ, ಮೃತ್ಯುಭಯ. ಭಾಗ್ಯೇಶನ ದಶಾ ಧರ್ಮ ಹಾಗೂ ಧನ ಸಮೃದ್ಧಿ. ಕರ್ಮೇಶ ದಶಾದಲ್ಲಿ ರಾಜ ಸನ್ಮಾನ, ಲಾಭೇಶನ ದಶಾ ಲಾಭದಾಯಕ. ವಿಘ್ನ ರೋಗ ಭಯ ದ್ವಾದಶೇನನ ಫಲವಾಗಿದೆ – ಗ್ರಹ ಶುಭಸ್ಥಾನ (ತ್ರಿಕೋನಾದಿ)ಗಳಲ್ಲಿ ಗ್ರಹವಿದ್ದರೆ ದಶಾರಂಭ ಫಲದಾಯಕ – ತ್ರಿಕಗಳಲ್ಲಿದ್ದರೆ ಅಶುಭ ಗ್ರಹಗಳ ಬಗ್ಗೆ ನೋಡುವಾಗ ಜನ್ಮ ಹಾಗೂ ದಶಾರಂಭ ಕಾಲವನ್ನು ಪರಿಗಣನೆಗೆ ತೆಗೆದುಕೊಳ್ಳುವುದು.

ಸುತಾಧಿ ಪತಿಯುಕ್ತಸ್ಯ ಭಾಗ್ಯಾಧಿಪಯುತಸ್ಯ ಚಾ ।
ಕರ್ಮೇಶ ಸ್ಯಾತಿಶುಭದಾ ದಶಾ ವಿದ್ಧಿ ದ್ವಾರಾದ್ದ ತಾ ॥೯॥

ಪಂಚಮೇಶೇನ ಯುಕ್ತಸ್ಯ ಗ್ರಹಸ್ಯ ಶುಭದಾದಶಾ ।
ಅತಿ ಧರ್ಮಯುಕ್ತಸ್ಯ ದಶಾ ಪರಮಶೋಭನಾ ॥೧೦॥

ಸುಖೇಶ ಸಹಿತಸ್ಯಾಪಿ ಧರ್ಮೇಶಸ್ಯ ದಶಾಶುಭಾ ।
ಪಂಚಮಸ್ಥಾನಗಸ್ಯಾಪಿ ಮಾನೇಶಸ್ಯ ದಶಾಶುಭಾ ॥೧೧॥

ಕೇಂದ್ರ ತ್ರಿಕೋನನಾಥಾಃ ಸ್ಯುಃ ಕೋಣಕೇಂದ್ರ ಗತಾ ಯದಿ ।
ತದಾತಿ ಶುಭದಾ ಜ್ಞೇಯಾ ವಿಜ್ಞೈಸ್ತೇಷಾಂ ದಶಾಸದಾ ॥೧೨॥

ಸುತೇಶ ಯುಕ್ತ ಕರ್ಮೇಶ ಅಥವಾ ಭಾಗ್ಯೇಶಯುಕ್ತ ಕರ್ಮೇಶ ದಶಾ ಶುಭಪ್ರದವಾಗುತ್ತದೆ ಹಾಗೂ ಕರ್ಮೇಶಯುಕ್ತ ಗ್ರಹದಶಾ ಪರಮಸುಖ ದಾಯಕವೆ. ಸುಖೇಶ, ಧರ್ಮೇಶರ ದಶಾ ಪಂಚಮರತ ದಶಮೇಶ ದಶಾ ಶುಭದ ಆಗುತ್ತದೆ. ಕೇಂದ್ರ–ಕೋನ ಪರಸ್ಪರ ರಾಶ್ಯಾಂತರ ಅಂದರೆ ದಶಮೇಶ ಭಾಗ್ಯ ಭಾಗ್ಯೇಶ ದಶಮ ಈ ದಶಾಗಳು ಪರಮಸುಖಪ್ರದವಾಗಿರುತ್ತದೆ.

ಷಷ್ಠಾಷ್ಟಮ ವ್ಯಯಾಧೀಶಾಃ ಕೋನವೇನಾನ್ವಿತಾ ಯದಿ ।
ದಶಾ ಚಶುಭ ಹೊರಾ ವಿದ್ಭಿರುದಿರೀತಾ ॥೧೩॥

ಕೇಂದ್ರಗಃ ಕೋಣಪಃ ಕೇಂದ್ರಪತಿಃ ಕೋಣಗತೋ ಯದಿ ।
ತದಾ ತದ್ಯುಕ್ತದೃಷ್ಟಸ್ಯ ಗ್ರಹಸ್ಯ ಶುಭದಾ ದಶಾ ॥೧೪॥

ತನುಪೋ ಭಾಗ್ಯಗೋ ವಾಪಿ ಭಾಗ್ಯೇಶ ಸ್ತನು ಭಾವಗಃ ।
ನೃಣಾಂ ತಯೋರ್ದಶಾಮಧ್ಯೆ ಧರ್ಮಸೌಖ್ಯೋ ದಯೋ ಭವೇತ್ ॥೧೫॥

ದಶಮೇಶ ಸ್ತನುಗತಸ್ತನುಪಃ ಕರ್ಮ ಸಂಸ್ಥಿತಃ ।
ತದಾ ತಯೋರ್ದಶಾಮದ್ಯೆ ರಾಜ್ಯಾಪ್ತಿಃ ಸ್ಯಾನ್ನ ಸಂಶಯಃ ॥೧೬॥

ತ್ರಿಕೇಶರು (6, 8, 12) ತ್ರಿಕೋನೇಶನ ಸಹಿತವಾಗಿದ್ದರೆ ದಶಾ ಶುಭಪ್ರದವು. ಕೋನೇಶರು ಕೇಂದ್ರಸ್ಥ ಹಾಗೂ ಕೇಂದ್ರೇಶರ ಕೋನಗತ (ರಾಶ್ಯಾಂತರವೇನಲ್ಲ) ಅಥವಾ ಅವುಗಳಿಂದ ದೃಷ್ಟಿತ ಹಾಗೂ ಸಹಿತವಾದ ಗ್ರಹದಶಾ ಕಾಲವೂ ಶುಭವೆಂದೇ ಹೇಳುವುದು. ದಶಮೇಶ ಲಗ್ನಗತವಾಗಿ ಲಗ್ನೇಶ ದಶಮಗತ (ರಾಶ್ಯಾಂತರ) ಯೋಗವಾಗಿ ಯಾವುದೇ (ಲಗ್ನ ಅಥವಾ ದಶಮ) ಅಧಿಪನ ದಶಾ ಇದ್ದರು ನಿಃಸಂದೇಹ ರಾಜ್ಯಪ್ರಾಪ್ತಿಯಷ್ಟಾ ಸುಖಿ.

ತ್ರಿಷಡ್ ಲಾಭಗತಾನಾಂ ವಾ ಯುತಾನಾಂ ತದಿಧೀಶ್ವರೈಃ ।
ಸತಾಮಪಿ ನ ಭೋಗಾನಾಂ ದಶಾತ್ವ ಶುಭದಾ ಮತಾ ॥೧೭॥

ವಿತ್ತದ್ಯೂನ ಗತಾನಾಂ ವೈ ಮಾರಕಾಧೀಶ ಸಂಯುಜಾಮ್ ।
ಮೃತ್ಯು ಭಾವಸ್ಥಿತಾನಾಂ ಚ ದಶಾಪ್ಯ ಶುಭದಾ ಸ್ಮೃತಾ ॥೧೮॥

3, 6, 8 ಸ್ಥಾನಗತ ತ್ರಿಷಡಾಧೀಶರ ಯುತ ಶುಭಗ್ರಹ ದೆಶೆಯೂ ಅಶುಭ ಪ್ರದವಾಗುತ್ತದೆ. ದ್ವಿತೀಯ ಹಾಗೂ ಸಪ್ತಮದಲ್ಲಿ ಮಾರಕೇಶಯುಕ್ತ ಅಥವಾ ಅಷ್ಟಮ ಸ್ಥಾನಸ್ಥಿತ ಗ್ರಹದಶಾ ಅಶುಭಪ್ರದವೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಭಾವೇಶ ದಶಾ
ಫಲಾಧ್ಯಾಯಃ ಸಮಾಪ್ತಿ

೫೦ನೇ ಅಧ್ಯಾಯ

# ಅಥ ಕಾಲಚಕ್ರ ದಶಾ ಫಲಾಧ್ಯಾಯಃ

## ಪರಾಶರ ಉವಾಚ:

ಅಥ ಬ್ರವೀಮಿ ತೇ ವಿಪ್ರ । ಕಾಲಚಕ್ರ ದಶಾ ಫಲಮ್ ।
ರಾಶಿಶಾನಾ ಮೀನಾದೀನಾಂ ಫಲಂ ತತ್ರಾಪಿ ಸಂಶ್ರೃಣು ॥೧॥

ರಕ್ತಪಿತ್ತದಿಜಂ ವ್ಯಾಧಿ ಸ್ವದಶಾಯಾಂ ದಿಶೇದ್ ರವಿಃ ।
ಧನಕೀರ್ತಿ ಪ್ರಜಾವೃದ್ಧಿ ವಸ್ತ್ರಾಭರಣದಃ ಶಶಿ ॥೨॥

ಜ್ವರಮಾರು ದಿಶೇತ್ ಪೈತಂ ಗ್ರಂಥಿಸ್ಫೋಟಂ ತು ಭೂಮಿಜಃ ।
ಪ್ರಜಾದ್ರವೀಣಯೋರ್ವೃದ್ಧಿಂ ಬುಧೋ ದದ್ಯಾದ್ ವಿಶೇಷತಃ ॥೩॥

ಧನಂ ಕೀರ್ತಿಂ ಪ್ರಜಾವೃದ್ಧಿಂ ನಾನಾಭೋಗಂ ಬೃಹಸ್ಪತಿಃ ।
ವಿದ್ಯಾವಾಪ್ತಿರ್ವಿವಾಹಶ್ಚ ಗ್ರಹೆಧಾನ್ಯಾಂ ಭೃಗೋಃ ಫಲಮ್ ॥೪॥

ತಾಪಾಧಿಕ್ಯಂ ಮಹದ್‌ದುಃಖಂ ಬಂಧುನಾಶಃ ಶನೇಃ ಫಲಮ್ ।
ಏವಮರ್ಕಾದಯೋಗೇನ ರಾಶಿನಾ ಸ್ಯಾದ್ ದಶಾಫಲಮ್ ॥೫॥

## ಪರಾಶರರು ಹೇಳಿದರು–

ಹೇ ಮೈತ್ರೇಯನೆ, ಈಗ ನಾನು ಕಾಲಚಕ್ರ ದಶಾ ಫಲ ಹೇಳುತ್ತೇನೆ ಕೇಳು. ಸ್ವರಾಶಿ ಅಥವಾ ಸೂರ್ಯಾದಿಷ್ಟಿತ ರಾಶಿ ದಶಾದಲ್ಲಿ ರಕ್ತಪಿತ್ತ ಜನ್ಯ ರೋಗಕಾರಕ ವಾಗಿರುತ್ತದೆ. ಚಂದ್ರ ಯಾವ ರಾಶಿಯಲ್ಲಿರುವನೋ ಆ ರಾಶಿ ದಶಾದಲ್ಲಿ ಧನ ಕೀರ್ತಿ, ಪ್ರಜಾವೃದ್ಧಿ ಹಾಗೂ ವಸ್ತ್ರ ಆ ಭೂಷಣ ಆದಿ ಪ್ರದಾತಾನಾಗುತ್ತಾನೆ. ಮಂಗಳ ದಶಾದಲ್ಲಿ ಜ್ವರ, ಪಿತ್ತಪ್ರಕೋಪ ಗ್ರಂಥಿಗಳಿಂದ ಉತ್ಪನ್ ರೋಗದ ಕಾರಕನಾಗಿದ್ದಾನೆ. ಬುಧ ರಾಶಿ ದಶಾ ಅಥವಾ ಅವನಿದ್ದ ರಾಶಿ ದಶಾ ಪ್ರಜೆ ಧನದ ವೃದ್ಧಿ ಕಾರಕನಾಗಿರುತ್ತಾನೆ. ಕೀರ್ತಿ ಅನೇಕ ವಿಧ ಭೋಗಪ್ರದಾಯಕನಾಗಿದ್ದಾನೆ. ಶುಕ್ರ ಧನ ಪ್ರಜಾ ವಿದ್ಯಾವೃದ್ಧಿ ಕಾರಕನಾದರೆ ಶುಕ್ರ ವಿದ್ಯಾವೃದ್ಧಿ ವಿವಾಹಾದಿ ಕಾರ್ಯದಲ್ಲಿ ಧನ ವೃದ್ಧಿಕಾರಕ. ಶನಿ ಅನೇಕ ವಿಧ ತಾಪ ವೃದ್ಧಿ ದುಃಖ ಬಂದು ವಿನಾಶಕಾರಕನಾಗಿದ್ದಾನೆ. ಈ ಪ್ರಕಾರ ಸೂರ್ಯಾದಿ ರಾಶಿಯಿಂದ ರಾಶಿ ಫಲ ತಿಳಿಯುವುದು.

## ಮೇಷಗತ ನವಾಂಶ ಫಲ

ಮೇಷೆ ತು ರಕ್ತಪೀಡಾ ಚ ವೃಷಭೆ ಧಾನ್ಯವರ್ಧನಮ್ ।
ಮಿಥುನೆ ಜ್ಞಾನಿ ಸಂಪನ್ನಃ ಕರ್ಕೆ ಧನಪತಿರ್ಭವೇತ್ ॥೬॥

ಸೂರ್ಯರ್ಕ್ಷೆ ಶತ್ರುಭಾಧಾ ಚ ಕನ್ಯಾಯಾಂ ಸ್ತ್ರೀ ವಿನಾಶನಮ್ ।
ತೌಲಿಕೆ ರಾಜಮಂತ್ರತ್ವಂ ವೃಶ್ಚಿಕೆ ಮರಣಾ ಭವೇತ್ ॥೭॥

ಅರ್ಥ ಲಾಭೋ ಭವೇಚ್ಚಾಪೆ ಮೇಷಸ್ಯ ನವಾಂಶಕೆ ।

ಮೇಷ ರಾಶಿಯ ಮೇಷಾಂಶದಲ್ಲಿ (ಕಾಲಚಕ್ರ ದಶಾ) ರಕ್ತ ವಿಕಾರ ವೃಷಭಾಂಶ ದಲ್ಲಿ ಧನಧಾನ್ಯ ವೃದ್ಧಿ. ಮಿಥುನಾಂಶದಲ್ಲಿ ಜ್ಞಾನ ವೃದ್ಧಿಯನ್ನು, ಕರ್ಕಾಂಶದಲ್ಲಿ ಧನ ಪ್ರಾಪ್ತಿ ಹೇಳಿದೆ. ಸಿಂಹಾಂಶದಲ್ಲಿ ರಾಜ ಮಂತ್ರಿತ್ವ, ವೃಶ್ಚಿಕಾಂಶ ದಶಾದಲ್ಲಿ ಮರಣ, ಧನು ನವಾಂಶದಲ್ಲಿ ಅರ್ಥ ಲಾಭ. ಈ ರೀತಿ ಮೇಷ ರಾಶಿ ದಶಾದಲ್ಲಿ ನವಾಂಶ ಗತ ಅಂಶಿತ ದಶಾ ಫಲ.

## ವೃಷಭ ರಾಶಿಗತ ನವಾಂಶ ಫಲ

ಮಕರೆ ಪಾಪ ಕರ್ಮಾಣಿ ಕುಂಭೆ ವಾಣಿಜ್ಯಮೇವ ಚ ॥೮॥

ಮೀನೆ ಸರ್ವಾರ್ಥಸಿದ್ಧಿಃ ಸ್ಯಾದ್ ವೃಶ್ಚಿಕೆ ತ್ವಗ್ನತೋ ಭಯಮ್ ।
ತೌಲಿಕೆ ರಾಜಪೂಜ್ಯತ್ವಂ ಕನ್ಯಾಯಾಂ ಶತ್ರವರ್ಧನಮ್ ॥೯॥

ಶಶಿಭೆ ದಾರಸಂಬಾಧಾ ಸಿಂಹೆ ಚ ತ್ವಕ್ಷಿಜಾ ರುಜಾ ।
ಮಿಥುನೆ ವೃತ್ತಿಭಾಧಾ ಸ್ಯಾದ್ ವೃಷಭಸ್ಯ ನವಾಂಶಕೆ ॥೧೦॥

## ವೃಷಭ ಗತ

ಮಕರ – ಪಾಪಕರ್ಮ ಪ್ರವೃತ್ತಿ, ಕುಂಭ – ವ್ಯಾಪಾರ ವೃದ್ಧಿ, ಮೀನ – ಸರ್ವಕಾರ್ಯ ಸಿದ್ಧಿ, ವೃಶ್ಚಿಕ – ಅಗ್ನಿಭಯ, ತುಲಾ – ರಾಜ ಸನ್ಮಾನ, ಕನ್ಯಾ – ಶತ್ರು ವೃದ್ಧಿ, ಕರ್ಕ – ಸ್ತ್ರೀಕ್ಲೇಶ, ಸಿಂಹ – ನೇತ್ರ ರೋಗ, ಮಿಥುನ – ಉದ್ಯೋಗ ಭಾದೆ ಇವು ವೃಷಭ ರಾಶಿಯ ನವಾಂಶಗತ ಫಲ.

## ಮಿಥುನ ಗತ ನವಾಂಶ ರಾಶಿ ದಶಾಫಲ

ವೃಷಭೆ ತ್ವರ್ಥಲಾಭಶ್ಚ ಮೇಷೆ ತು ಜ್ವರಜಾ ರುಜಾ ।
ಇಷೆ ತು ಮಾತುಲ ಪ್ರೀತಿಃ ಕುಂಭೆ ಶತ್ರು ವರ್ಧನಮ್ ॥೧೧॥

ಮೃಗೆ ಚೌರಸ್ಯ ಸಂವಧಾ ಧನುರ್ಭೆ ಶತ್ರುವರ್ಧನವಮ್ ।
ಮೇಪೇತು ಶಸ್ತ್ರ ಸಂಘಾತೊ ವೃಷಭೆ ಕಲಹೋ ಮತಃ ॥೧೨॥

ಮಿಥುನೆ ಸುಖ ಮಾಪ್ನೋತಿ ಮಿಥುನಸ್ಯ ನವಾಂಶಕೆ ।

ಮಿಥುನ ಗತ ವೃಷಭ ನವಾಂಶ ದಶಾ – ಅರ್ಥ ಪ್ರಾಪ್ತಿ, ಮೇಷ – ಜ್ವರ ರೋಗ, ಮೀನ – ಸೋದರ ಮಾವ ಆದಿಗಳ ಪ್ರೀತಿ, ಕುಂಭ – ಶತ್ರುವೃದ್ಧಿ, ಮಕರ – ಚೋರವಧಾ, ಧನು – ಶತ್ರುವೃದ್ಧಿ, ಮೇಷ – ಶಸ್ತ್ರ ಸಂಘಾತ, ವೃಷ ದಶಾ – ಕಲಹ, ಮಿಥುನ – ಸುಖಪ್ರಾಪ್ತಿ.

ಕರ್ಕಟೆ ಸಂಕಟ ಪಾಪ್ತಿ ಸಿಂಹೆ ರಾಜ ಪ್ರಕೋಪನಮ್ ॥೧೩॥

ಕನ್ಯಾಯಾಂ ಭ್ರಾತೃಪೂಜಾಚ ತೌಲಿಕೆ ಪ್ರಿಯ
ವೃಶ್ಚಿಕೆ ಪಿತೃಬಾಧಾ ಸ್ಯಾಚ್ಚಾ ಪೆರ್ಥಜ್ಞಾನ ವರ್ಧನಮ್ ॥೧೪॥

ಮೃಗೆ ಭಯಂ ಭವೆದದ್‌ಭ್ಯಃ ಸಮೃದ್ಧಿ ಸಸ್ಯಗಾ ಘಟಿ
ಝಷೆ ಸಂಪತ್ತ-ಸುಖಂ ಚಾಪಿ ಕರ್ಕಟಸ್ಯ ನವಾಂಶಕೆ ॥೧೫॥

## ಕರ್ಕಗತ ನವಾಂಶ ರಾಶಿ ದಶಾ ಫಲ

ಕರ್ಕಗತ ಕರ್ಕ ನವಾಸಂಶ – ಸಂಕಟ, ಸಿಂಹ – ರಾಜಪ್ರಕೋಪ, ಕನ್ಯಾ – ಬಂಧುಗಳ ಸನ್ಮಾನ, ತುಲಾ – ಪ್ರಿಯಕರಿತಾ, ವೃಶ್ಚಿಕ – ಪಿತೃ ಕಷ್ಟ, ಧನು – ಧಾನ್ಯ ವೃದ್ಧಿ, ಮಕರ – ಜಲಭಯ, ಕುಂಭ – ಸಸ್ಯವೃದ್ಧಿ, ಮೀನ – ಸಂಪತ್ತ ಸುಖ.

## ಸಿಂಹಗತ ನವಾಂಶ ಫಲ

ವೃಶ್ಚಿಕೆ ಕಲಹಃ ಪೀಡಾ ತೌಲಿಕೆ ಹ್ರಾಧಿಕಂ ಫಲಮ್ ।
ಕನ್ಯಾಯಾ ಮತಿ ಲಾಭಶ್ಚ ಶಶಿಭೆ ಮೃಗವಾಧಿತಾ ॥೧೬॥

ಸಿಂಹೆ ಚ ಪುತ್ರಲಾಭಶ್ಚ ಮಿತುನೆ ಶತ್ರು ವರ್ಭನವಮ್ ।
ಗವಿ ಲಾಭ ಶ್ರುತು ಷ್ಣದ್ ಭ್ಯೋಃಭಿಃ ಪಶುಭ್ಯೋ ಭವೆದಜೆ ॥೧೭॥

ಮೀನೆತು ದೀರ್ಘ ಯಾತ್ರಾ ಸ್ಯಾ ತ್ ಸಿಂಹಸ್ಯ ನವಭಾಗಕೆ ।

ಸಿಂಹಸೊ ಗತ – ವೃಶ್ಚಿಕ ನವಾಂಶ – ಕಲಹ, ಪೀಡೆ, ತುಲಾ – ಅಧಿಕ ಲಾಭ, ಕನ್ಯಾ – ಪ್ರಚುರ ಲಾಭ, ಕರ್ಕ – ಮೃಗಾದಿ ಅಡವಿ ಪ್ರಾಣಿಗಳಿಂದ ಭಾದೆ, ಸಿಂಹ – ಪುತ್ರ ಪ್ರಾಪ್ತಿ, ಮಿಥುನ – ಶತ್ರು ವೃದ್ಧಿ, ವೃಷಭ – ಪಶುಗಳಿಂದ

ಲಾಭ. ಮೇಷ – ಪಶು ಭಯ. ಮೀನ – ದೂರಯಾತ್ರೆ. ಸಿಂಹಗತ ರಾಶಿ ನವಾಂಶ ಫಲ.

## ಕನ್ಯಾಗತ ನವಾಂಶ ರಾಶಿ ದಶಾಫಲ

ಕುಂಭೆ ತು ಧನಲಾಭಶ್ಚ ಮಕರೆ ದ್ರವಿಣಾಗಮಃ ॥೧೮॥
ಧನುಷಿ ಭ್ರಾತೃಸಂಸರ್ಗೋ ಮೇಷೆ ಮಾತೃ ವಿವರ್ಧನಮ್ ।
ವೃಷಭೆ ಪುತ್ರ ವೃದ್ಧಿಃ ಸ್ಯಾನ್ಮಿಥುನೆ ಶತ್ರುವರ್ಧನಮ್ ॥೧೯॥

ಶಶಿಭೆ ತು ಸ್ತ್ರೀಯಾಂ ಪ್ರೀತಿಃ ಸಿಂಹೆ ವ್ಯಾಧಿ ವಿವರ್ಧನಮ್ ।
ಕನ್ಯಾಯಾಂ ಪುತ್ರವೃದ್ಧಿಃ ಸ್ಯಾತ್ ಕನ್ಯಾಯಾ ನವಮಾಂಶಕೆ ॥೨೦॥

ಕನ್ಯಾಗತ – ನವಾಂಶ – ಕುಂಭ – ಧನಲಾಭ, ಮಕರ – ದ್ರವ್ಯಪ್ರಾಪ್ತಿ, ಧನು – ಬಂಧುಗಳ ಸಂಪರ್ಕ, ಮೇಷ – ತಾಯಿ ಸೌಖ್ಯ, ವೃಷಭ – ಪುತ್ರವೃದ್ಧಿ, ಮಿಥುನ – ಶತ್ರು ಪೀಡಾ ವೃದ್ಧಿ, ಕರ್ಕ – ಸ್ತ್ರೀ ಪ್ರೇಮ, ಸಿಂಹ – ವ್ಯಾಧಿ ಪ್ರಕೋಪ, ಕನ್ಯಾ – ಪುತ್ರ ವೃದ್ಧಿ.

## ತುಲಾಗತ ನವಾಂಶ ರಾಶಿ ಫಲ

ತುಲಾಯಾಮರ್ಥ ಲಾಭಶ್ಚ ವೃಶ್ಚಿಕೆ ಭ್ರಾತೃ ವರ್ಧನಮ್ ।
ಚಾಪೆ ತು ತಾತಸೌಖ್ಯಂ ಚ ಮೃಗೆ ಮಾತೃ ವಿರೋಧಿತಾ ॥೨೧॥

ಘಟೆ ಸಸುಧನಾಪ್ತಿಃ ಸ್ಯಾದ್ ವಿರೋಧೋ ವೈರಿ ಭಿರ್ಝಷೆ ।
ಅಲೌ ಜಾಯಾ ವಿರೋಧಶ್ಚ ತುಲೆ ತುಜಲತೋ ಭಯಮ್ ॥೨೨॥

ಕನ್ಯಾಯಾಮರ್ಥ ಸಂವೃದ್ಧಿ ಸ್ತುಲಾಯಾ ನವಭಾಗಕೆ ।

ತುಲಾಗತ ತುಲಾ ನವಾಂಶದಲ್ಲಿ ಧನಲಾಭ ವೃಶ್ಚಿಕ – ಭ್ರಾತೃ ಸೌಖ್ಯ, ಧನು – ಪಿತೃಸೌಖ್ಯ, ಮಕರ – ಮಾತೃ ವಿರೋಧ, ಕುಂಭ – ಧನಪುತ್ರರ ಪ್ರಾಪ್ತಿ, ಮೀನ – ಶತ್ರುಗಳ ಜೊತೆ ವಿರೋಧ, ವೃಶ್ಚಿಕ – ಸ್ತ್ರೀ ವಿರೋಧ, ತುಲಾ – ಜಲಭಯ, ಕನ್ಯಾ – ಧನವೃದ್ಧಿ.

## ವೃಶ್ಚಿಕ ಗತ ನವಾಂಶ ರಾಶಿ ದಶಾಫಲ

ಕರ್ಕಟೆ ಹ್ರಾರ್ಥನಾಶಿಶ್ಚ ಸಿಂಹೆ ರಾಜ ವಿರೋಧಿತಾ ॥೨೩॥

ಮಿಥುನೆ ಭೂಮಿ ಲಾಭಶ್ಚ ವೃಷಭೆ ಚಾರ್ಥ ಸಂಭವಃ ।

ಅಜೇಹಿ ಪ್ರಭೃತೇರ್ಭಿತಿಜೇಪಿ ಭೀರ್ವಾರಿತ ಸ್ತಥಾ ॥೨೪॥

ವ್ಯವಸಾಯಾದ್ ಘಟೆ ಲಾಭೋ ರೋಗ ಮೀತಿ ರ್ಮೃಗೆ ಭವೇತ್ ।
ಚಾಪೆ ತು ಧನಲಾಭಹ ಸ್ಯಾದ್ ವೃಶ್ಚಿಕಸ್ಯ ನವಾಂಶಕೆ ॥೨೫॥

ವೃಶ್ಚಿಕ ಗತ ಕರ್ಕ ನವಾಂಶ – ಧನನಾಶ, ಸಿಂಹ – ರಾಜ ವಿರೋಧ, ಮಿಥುನ – ಭೂಮಿ ಲಾಭ, ವೃಷಭ – ಧನ ಲಾಭ, ಮೇಷ – ಸರ್ಪಾದಿ ಜೀವಿಗಳಿಂದ ಭಯ, ಮೀನ – ಜಲಭಯ, ಕುಂಭ – ವ್ಯಾಪಾರ ಲಾಭ, ಮಕರ – ವ್ಯಾಧಿ ಭಯ, ಧನು – ಧನಲಾಭ, ವೃಶ್ಚಿಕ – ನವಾಂಶ ರಾಶಿ ಫಲವಿದು.

### ಧನರ್ಗತ ನವಾಂಶ ರಾಶಿ ದಶಾಫಲ

ಮೇಷೇತು ಧನಲಾಭಃ ಸ್ಯಾದ್ ವೃಷೆ ಭೂಮಿ ವಿವಿರ್ಧನಮ್ ।
ಮಿಥುನೆ ಸರ್ವಸಿದ್ಧಿಃ ಸ್ಯಾತ್ ಕರ್ಕಟೆ ಸರ್ವಸಿದ್ಧಯಃ ॥೨೬॥

ಸಿಂಹೆತು ಪೂರ್ವ ವೃದ್ಧಿಃ ಸ್ಯಾತ್ ಕನ್ಯಾಯಾಂ ಕಲಹೋ ಭವೇತ್ ।
ತೌಲಿಕೆ ಚಾರ್ಥಲಾಭಃ ಸಾದ್ ವೃಶ್ಚಿಕೆ ರೋಗಮಾಪ್ನುಯಾತ್ ॥೨೭॥

ಚಾಪೆ ತು ಸುತ ವೃದ್ಧಿಃ ಸ್ಯಾಚ್ಚಾಪಸ್ಯನವವಮಾಂಶಕೆ ।

ಧನಗತ ಮೇಷ ನವಾಂಶ – ಧನಪ್ರಾಪ್ತಿ, ವೃಷಭ – ಭೂಮಿಗಳ, ಮಿಥುನ – ಕರ್ಕ – ಸರ್ವಸಿದ್ಧಿಃ, ಸಿಂಹ – ಪೂರ್ವ ಧನ ಸಮೃದ್ಧಿಃ, ಕನ್ಯಾ – ಕಲಹ, ತುಲಾ – ಅರ್ಥಲಾಭ, ವೃಶ್ಚಿಕ – ರೋಗ, ಧನು – ಪುತ್ರ ಸೌಖ್ಯ.

### ಮಕರ ನವಾಂಶ ರಾಶಿ ದಶಾಫಲ

ಮಕರೆ ಪುತ್ರ ಲಾಭಃ ಸ್ಯಾತ್ ಕುಂಭೆ ಧಾನ್ಯ ವಿವಿರ್ಧನಮ್ ॥೨೮॥

ಮೀನೆ ಕಲ್ಯಾಣ ಮಾಪ್ನೋತಿ ವೃಶ್ಚಿಕೆ ಗರಲಾದ್ ಭಯಮ್ ।
ತೌಲಿಕೆ ತ್ವರ್ಥಲಾಭಶ್ಚ ಕನ್ಯಾಯಾಂ ಶತ್ರುವರ್ಧನಮ್ ॥೨೯॥

ಶಶಿಭೆ ಶ್ರೀಯ ಮಾಪ್ನೋತಿ ಸಿಂಹತು ಮೃಗವಾಧಿ ತಾ ।
ಮಿಥುನೆ ವೃಷಭಾದಾ ಚ ಮೃಗಸ್ಯ ನವಾಮಾಂಶಕೆ ॥೩೦॥

ಮಕರಗತ ಮಕರ ನವಾಂಶ – ಪುತ್ರಲಾಭ, ಕುಂಭ – ಧಾನ್ಯ ವೃದ್ಧಿ, ಮೀನ – ಕಲ್ಯಾಣ ಪ್ರಾಪ್ತಿ, ವೃಶ್ಚಿಕ – ವಿಷಭಯ, ತುಲಾ – ಧನ ಲಾಭ, ಕನ್ಯಾ – ಶತ್ರು ಪ್ರಕೋಪ, ಕರ್ಕ – ಲಕ್ಷ್ಮಿ ಪ್ರಾಪ್ತಿ, ಸಿಂಹ ದಶಾ – ಜಂತು ಭಯ; ಮಿಥುನ – ವೃಕ್ಷ ಭಾದಾ.

### ಕುಂಭಗತ ನವಾಂಶ ರಾಶಿಗಳ ದಶಾಫಲ

**ವೃಷಭೆ ತ್ವರ್ಥಲಾಭಶ್ಚ ಮೇಷೆ ಚಾಪ್ಯಕ್ಷಿಜಾ ರುಜಾ ।**
**ಝಷೆ ಹಿ ದೀರ್ಘ ಯಾತ್ರಾ ಸ್ಯಾತ್ ಕುಂಭೆ ತ್ವರ್ಥ ವಿವಿರ್ಧನಮ್ ॥೩೧॥**

**ಮಕರೆ ಸರ್ವಸಿದ್ಧಿಃ ಸ್ಯಾಚ್ಚಾಪೆ ಶತ್ರು ವಿವಿರ್ಧನಮ್ ।**
**ಮೇಷೆ ಸೌಖ್ಯ ವಿನಾಶಶ್ಚೆದ್ ವೃಷಭೆ ಮರಣಾ ಭವೇತ್ ॥೩೨॥**

**ಯುಗ್ಮೆ ಕಲ್ಯಾಣ ಮಾಪ್ನೋತಿ ಕುಂಭಸ್ಯ ನವಮಾಂಶಕೆ ।**

ಕುಂಭಗತ ವೃಷ ನವಾಂಶ – ಧನಪ್ರಾಪ್ತಿ, ಮೇಷ – ನೇತ್ರ ಪೀಡಾ, ಮೀನ – ದೀರ್ಘಾಯು, ಕುಂಭ – ಧನವೃದ್ಧಿ, ಮಕರ – ಸರ್ವಸಿದ್ಧಿ, ಧನು – ಶತ್ರುವೃದ್ಧಿ; ಮೇಷ – ಸುಖಕ್ಷಯ, ವೃಷಭ – ಮರಣ, ಮಿಥುನ – ಕಲ್ಯಾಣ.

### ಮೀನಗತ ನವಾಂಶ ರಾಶಿಗಳ ದಶಾಫಲ

**ಕರ್ಕಟೆ ಧನವೃದ್ಧಿಃ ಸ್ಯಾತ್ ಸಿಂಹೆ ತು ರಾಜಪೂಜನಮ್ ॥೩೩॥**

**ಕನ್ಯಾಯಾಮರ್ಥ ಲಾಭಶ್ಚ ತುಲಾಯಾಂ ಲಾಭ ಮಾಪ್ನುಯಾತ್ ।**
**ವೃಶ್ಚಿಕೆ ಜ್ವರಮಾಪ್ನೋತಿ ಚಾಪೆ ಶತ್ರು ವಿವಿರ್ಧನಮ್ ॥೩೪॥**

**ಮೃಗೆ ಜಾಯಾ ವಿರೋಧಶ್ಚ ಕುಂಭೆ ಜಲವಿರೋಧಿತಾ ।**
**ಮೀನೆ ತು ಸರ್ವಸೌಭಾಗ್ಯಂ ಮೀನಸ್ಯ ನವಮಾಂಶಕೆ ॥೩೫॥**

ಕರ್ಕ – ಧನವೃದ್ಧಿ, ಸಿಂಹ – ರಾಜಸನ್ಮಾನ, ಕನ್ಯಾ – ಧನಲಾಭ, ತುಲಾ – ಲಾಭ, ವೃಶ್ಚಿಕ – ಜ್ವರಪ್ರಾಪ್ತಿ, ಧನು – ಶತ್ರುವೃದ್ಧಿ, ಮಕರ – ಸ್ತ್ರೀ ವಿರೋಧ, ಕುಂಭ – ಜಲಭಯ, ಮೀನ – ಸರ್ವ ಸೌಭಾಗ್ಯ. ಇದು ಮೀನಗತ ರಾಶಿ ನವಾಂಶ ದಶಾಫಲ.

**ದಶಾಭಾಗ ಕ್ರಮೇಣ್ಯೆವಮ ಜ್ಞಾತ್ವಾ ಸರ್ವಫಲಂ ವಿದೇತ್ ।**
**ಕ್ರೂರ ಗ್ರಹದಶಾಕಾತಿ ಶಾಂತಿ ಕುರ್ಯಾದ್ ವಿ ಚಕ್ಷಣಃ ॥೩೬॥**

**ಇತ್ಥಂ ಸಮಾಸ ತಶ್ಚ ಕ್ರದಶಾಫಲ ಮುದೀರಿತಮ್ ॥೩೭॥**

ಈ ಪ್ರಕಾರ ದಶಾ ಭಾಗ ಕ್ರಮದಿಂದ ನಕ್ಷತ್ರ ಚರಣವಶ ಕಾಲ ಚಕ್ರ ದ್ವಾರಾ ನವಾಂಶ ರಾಶಿ ದಶಾ ಹಾಗೂ ಆ ಸಮಯ ಜ್ಞಾತ ಮಾಡಿ ಫಲಾದೇಶ ಹೇಳುವುದು. ಪಾಪ ದಶಾ ಕಾಲದಲ್ಲಿ ಶಾಂತಿ ಮಾಡಿಸುವುದು ಅವಶ್ಯಕ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಕಾಲಚಕ್ರ ದಶಾಫಲಾಧ್ಯಾಯಃ ಸಮಾಪ್ತಿಃ**



## ೫೧ನೇ ಅಧ್ಯಾಯ

# ಅಥ ಚರಾದಿ ರಾಶಿ ದಶಾ ಫಲಾಧ್ಯಾಯಃ

ಪರಾಶರ ಉವಾಚ:

ಚರಸ್ಥಿರ ಪ್ರಭೃತಯೋ ದಶಾ ಯಾಃ ಪ್ರಾಗುದೀರಿತಾಃ ।
ಶುಭಂ ವಾಪ್ಯಶುಭಂ ತಾಸಾಂ ಫಲಂ ಸಂಪ್ರತಿ ವಚ್ಮಿತೆ ॥೧॥

ಲಗ್ನಾದಾರಭ್ಯ ರಿಷ್ಫಾಂತ ಭಾವಾನಾಂ ಫಲವರ್ಣನೆ ।
ತತ್ತದ್‌ಭೇಶ ಬಲೆನೈವ ಯಥೋಚಿತ ಮುದೀರಯೇತ್ ॥೨॥

ಸಬಲೆ ಭಾಧಿಪೆ ತಸ್ಯ ಪೂರ್ಣಮೇವ ಫಲಂ ಸ್ಮೃತಮ್ ।
ತಥಾ ಮಧ್ಯೆ ಬಲೆ ಮಧ್ಯಮಲ್ಪೆ ತ್ವಲ್ಪಂ ಫಲಮ ದಿಶೇತ್ ॥೩॥

ಯಃ ಸ್ಯಾದ ದಶಾಪ್ರದೋ ರಾಶಿಸ್ತಸ್ಯ ರಂಧ್ರದ್ವಿತೀಯಕೆ ।
ಪಾಪ ಖೇಟ ಯುತೆ ವಿಪ್ರ । ತದ್ದಶಾ ದುಃಖದಾಯಿಕಾ ॥೪॥

ತೃತೀಯಷ್ಟಗೆ ಪಾಪೆ ಜಯಾದಿಃ ಪರಿಕೀರ್ತಿತಃ ।
ಶುಭಖೇಟಯತೆ ತತ್ರ ಜಾಯತೆ ಹಿ ಪರಾಜಯಃ ॥೫॥

ಲಗ್ನಸ್ಥೆ ಶುಭ ಪಾಪೆ ತು ಲಾಭೋ ಭವತಿ ನಿಶ್ಚಿತಮ್ ।
ಯದಾದಶಾಪ್ರದೋ ರಾಶಿಃ ಶುಭಖೇಟಯುತೋದ್ವಿಜ ॥೬॥

ಶುಭಕ್ಷೇತ್ರೇ ಹಿ ತದ್ರಾಶೇಃ ಶುಭಮೇವ ದಶಾಫಲಮ್ ।
ಪಾಪಯುಕ್ತೆ ಶುಭಕ್ಷೇತ್ರೆ ಪೂರ್ವಸತ್ ಸ್ಯಾತ್ತತೋಪ್ಯಸಾತ್ ॥೭॥

ಪಾಪರ್ಕ್ಷೆ ಶುಭ ಸಂಯುಕ್ತೆ ಪೂರ್ವ ಸೌಖ್ಯಂ ತತೋ ಸುಖಮ್ ।
ಪಾಪ ಕ್ಷೇತ್ರೆ ಪಾಪಯುಕ್ತೆ ಸಾದಶಾ ಸರ್ವದುಃಖದಾ ॥೮॥

ಶುಭ ಕ್ಷೇತ್ರ ದಶಾ ರಾಶೌ ಯುಕ್ತೆ ಪಾಪಶುಭೈರ್ದ್ವಿಜ ।
ಪೂರ್ವ ಕಷ್ಟಂ ಸುಖಂ ಪಶ್ಚಾನ್ನಿರ್ಯಾಣಂಕಂ ಪ್ರಜಾಯತೆ ॥೯॥

ಶುಭಕ್ಷೇತ್ರೆ ಶುಭಂ ವಾಚ್ಯಂ ಪಾಪರ್ಕ್ಷೆ ತ್ವಶುಭಂ ಫಲಮ್ ।

ಪರಾಶರರು ಹೇಳಿದುದು—

ಈ ಮೊದಲು ಹೇಳಿದ ಚರಾದಿ ದಶಾದ ಶುಭಾಶುಭ ಫಲ ಹೇಳುತ್ತೇನೆ.

ಲಗ್ನಾದಿ ದ್ವಾದಶ ಭಾವಗಳ ದಶಾಫಲ ಭಾವೇಶನ ಬಲಾನುಸಾರ ತಿಳಿಯುವುದು. ಭಾವೇಶ ಪ್ರಬಲನಾಗಿದ್ದರೆ ಪೂರ್ಣಫಲ, ಮಧ್ಯ ಬಲಿಯಾಗಿದ್ದರೆ ಮಧ್ಯಫಲ, ಅಲ್ಪ ಬಲಿಯಾಗಿದ್ದರೆ ಅಲ್ಪ ಫಲ. ದಶಾಪ್ರದ ರಾಶಿಯ ಎರಡು ಹಾಗೂ ಎಂಟನೇ ರಾಶಿ ಪಾಪಗ್ರಹಯುಕ್ತ ಅಥವಾ ದೃಷ್ಟವಾಗಿದ್ದರೆ ಆ ದಶಾ ದುಃಖಪ್ರದವಾಗಿರುತ್ತದೆ. ತೃತೀಯ ಹಾಗೂ ಷಷ್ಠದಲ್ಲಿ ಪಾಪಗ್ರಹವಿದ್ದರೆ ಹಾಗೂ (ಅಥವಾ) ದೃಷ್ಟವಾಗಿದ್ದರೆ ದಶಾ ದುಃಖಪ್ರದವೆ. ತೃತೀಯ, ಷಷ್ಠದಲ್ಲಿ ಪಾಪಗ್ರಹವಿದ್ದರೆ ವಿಜಯ. ಶುಭಗ್ರಹವಿದ್ದರೆ ಪರಾಜಯ. ಲಗ್ನದಲ್ಲಿ ಶುಭ ಅಥವಾ ಪಾಪ ಯಾವುದೇ ಗ್ರಹವಿದ್ದರೂ ನಿಶ್ಚಿತ. ಆ ದಶಾ ಲಾಭದಾಯಕ. ದಶಾಪ್ರದ ರಾಶಿ ಶುಭಗ್ರಹಯುಕ್ತ, ಶುಭಗ್ರಹ ಕ್ಷೇತ್ರವಾಗಿದ್ದರೆ ದಶಾಫಲ ಶುಭದ ಶುಭಗ್ರಹ ಕ್ಷೇತ್ರ ಪಾಪಯುಕ್ತವಾಗಿದ್ದರೆ ಪಾಪಗ್ರಹ ಕ್ಷೇತ್ರ ಶುಭಯುಕ್ತವಾದರೂ – ಮೊದಲು ಶುಭ ನಂತರ ಅಶುಭ ಫಲ ಹೇಳುವುದು. ಪಾಪಕ್ಷೇತ್ರ ಪಾಪಯುಕ್ತವಾಗಿದ್ದರೆ ಅದರ ದಶಾಫಲ ಸದಾ ಅಶುಭವಾಗಿರುತ್ತದೆ. ಶುಭಕ್ಷೇತ್ರದಲ್ಲಿ ಪಾಪ, ಶುಭವೆರಡು ಇದ್ದರೆ ಮೊದಲು ಕಷ್ಟ ನಂತರ ಸುಖ. ಶುಭ ಕ್ಷೈತ್ರದ ದಶಾಫಲ ಹಾಗೂ ಪಾಪಕ್ಷೇತ್ರ ಅಶುಭ ಫಲ ಹೇಳುವುದು.

ದ್ವಿತೀಯೇ ಪಂಚಮೆ ಸೌಮ್ಯೆ ರಾಜಪ್ರೀತಿರ್ಜಯೋ ಧ್ರುವಮ್ ॥೧೦॥

ಪಾಪೆ ತತ್ರ ಸ್ಥಿತೆ ಖೇಟೆ ತದ್ದಾಶಾಯಾಃ ಫಲಂ ತ್ವಸತ್ ।<br>
ಚತುರ್ಥೆ ತು ಶುಭಂ ಸೌಖ್ಯಮಾರೋಗ್ಯಂ ತ್ವಷ್ಟಮೆ ಶುಭೆ ॥೧೧॥

ಧರ್ಮ ವೃದ್ಧಿರ್ಗುರುಜನಾತ್ । ಸೌಖ್ಯಂ ಚ ನವಮೇ ಶುಭೆ ।<br>
ವಿಪರೀತೆ ವಿಪರ್ಯಾಸೋ ಮಿಶ್ರಂ ಮಿಶ್ರೆ ಪ್ರಕೀರ್ತಿತಮ್ ॥೧೨॥

ಪಾಕೆ ಭೋಗೆ ಚಪಾಪಾದ್ಯೆ ದೇಹ ಪೀಡಾ ಮನೋವ್ಯಥಾ ।<br>
ಸಪ್ತಮೇ ಪಾಪ ಭೋಗಾಭ್ಯಾಂ ಪಾಪೆ ದಾರಾರ್ತ್ತಿರೀರಿತಾ ॥೧೩॥

ಚತುರ್ಥೆ ಸ್ಥಾನನಿಃ ಸ್ಯಾತ್ ಪಂಚಮೇ ಪುತ್ರ ಪೀಡನಮ್ ।<br>
ದಶಮೇ ಕೀರ್ತಿಹಾನಿಃ ಸ್ಯಾನ್ನವಮೇ ಪಿತೃಪೀಡನಮ್ ॥೧೪॥

ಪಾಕಾದುದ್ರುಗತೆ ಪಾಪೆ ಪೀಡಾ ಸರ್ವಾಪ್ಯಾಭಾಧಿತಾ ।<br>
ಉಕ್ತಸ್ಥಾನಗತೆ ಸೌಮ್ಯೆ ತತಃ ಸೌಖ್ಯಂ ವಿನಿರ್ದಿಶೇತ್ ॥೧೫॥

ಕೇಂದ್ರಸ್ಥಾನಗತೆ ಸೌಮ್ಯೆ ಲಾಭಃ ಶತ್ರುಜಯಪ್ರದಃ ।<br>
ಜನ್ಮಕಾಲ ಗ್ರಹಸ್ಥಿತ್ಯಾ ಗೋಚಾರ ಗ್ರಹತೋಪಿ ಚ ॥೧೬॥

ವಿಚಾರ್ಯ ಖಲು ಬಲ ವಕ್ತವ್ಯಂ ತತ್ತದ್ರಾಶಿ ದಶಾ ಫಲಮ್ ।

ಎರಡು ಹಾಗೂ ಐದನೇ ಸ್ಥಾನದಲ್ಲಿ ಶುಭಗ್ರಹವಿದ್ದರೆ ರಾಜ ಪ್ರಸನ್ನತೆ ಹಾಗೂ ನಿಶ್ಚಯಪೂರ್ವಕ ವಿಜಯ ಪ್ರಾಪ್ತವಾಗುತ್ತದೆ. ಆಸ್ಥಾನದಲ್ಲಿ ಪಾಪಗ್ರಹ ಗಳಿದ್ದರೆ ಅವರ ದಶಾಫಲ ಅಶುಭವೆಂದು ಪರಿಗ್ರಹಿಸುವುದು. ಚತುರ್ಥ ಹಾಗೂ ಅಷ್ಟಮದಲ್ಲಿ ಶುಭವಿದ್ದರೆ ಸೌಖ್ಯ ಸ್ಥೈರುಜ್ಯ ಹೇಳುವುದು. ನವಮದಲ್ಲಿ ಶುಭಗ್ರಹ ವಿದ್ದರೆ ಅದರ ದಶಾಫಲ ಗುರು ಜನರಿಂದ ಪ್ರಶಂಸೆ ಧರ್ಮವಿದ್ದ ಸೌಖ್ಯ ಅಶುಭ ಗ್ರಹಗಳಿದ್ದರೆ ವಿಪರೀತ ಫಲ ಹೇಳುವುದು. ಶುಭಾಶುಭ ಎರಡು ಇದ್ದರೆ ಮಿಶ್ರ ಫಲ ಹೇಳುವುದು. ಭೋಗಸ್ಥಾನ ಪಾಪಯುಕ್ತವಾಗಿದ್ದರೆ ದಶಾಕಾಲದಲ್ಲಿ ಶಾರೀರಿಕ ಪೀಡಾ, ಮಾನಸಿಕ ವ್ಯಥೆ. ಸಪ್ತಮದಲ್ಲಿ ಪಾಪಗ್ರಹವಿದ್ದರೆ ಅದರ ದಶಾ ಕಾಲದಲ್ಲಿ ಸ್ತ್ರೀ ಪೀಡೆ, ಚತುರ್ಥದಲ್ಲಿ ಪಾಪಗ್ರಹವಿದ್ದರೆ ಸ್ಥಾನಚ್ಯುತಿ, ಪಂಚಮದಲ್ಲಿ ಪಾಪಗ್ರಹವಿದ್ದರೆ ಪುತ್ರ ಕಷ್ಟ. ದಶಮದಲ್ಲಿ ಪಾಪಗ್ರಹವಿದ್ದರೆ ಆ ದಶಾದಲ್ಲಿ ಯಶೋ ಹಾನಿ. ಸಪಾಪ ನವಮವಾಗಿದ್ದರೆ ಪಿತೃಕಷ್ಟ ದಶಾ ಆಗುತ್ತದೆ. ರಾಶಿಯಿಂದ 11ರಲ್ಲಿ ಪಾಪಗ್ರಹವಿದ್ದರೆ ನಿರ್ಭಾಧ ರೂಪ ಪೀಡಾ – ಅದೇ ಸ್ಥಾನದಲ್ಲಿ ಶುಭಗ್ರಹವಿದ್ದರೆ ಆ ರಾಶಿ ದಶಾವಲ್ಲಿ ಸೌಖ್ಯಕಾರಕವಾಗುತ್ತದೆ. ಕೇಂದ್ರದಲ್ಲಿ ಶುಭಗ್ರಹವಿದ್ದರೆ ಲಾಭ ಹಾಗೂ ಶತ್ರುಗಳ ಮೇಲೆ ವಿಜಯ. ಜನ್ಮ ಕಾಲಿಕ ಗ್ರಹಸ್ಥಿತಿ ಹಾಗೂ ವರ್ತಮಾನ ಗೋಚರ ಸ್ಥಿತಿ ನೋಡಿ ತಾರತಮ್ಯದಿಂದ ಫಲಾದೇಶ ಮಾಡುವುದು.

ಯಶ್ಚ ರಾಶಿಃ ಶುಭಕ್ರಾಂತೋ ಯಸ್ಯಪಶ್ಚಾಚ್ಛುಭಗ್ರಹಾಃ ॥೧೭॥

ತದ್ದಶಾ ಶುಭದಾ ಪ್ರೋಕ್ತಾ ವಿಪರೀತೆ ವಿಪರ್ಯಯಃ
ತ್ರಿಕೋಣ ರಂಧ್ರರಿಪ್ಫಸ್ಥೈ ಶುಭ ಪಾಪೈಃ ಶುಭಾಶುಭಮ್ ॥೧೮॥

ತದ್ದಶಾಯಾಂ ತು ವಕ್ತವ್ಯಂ ಫಲಂ ವಿಜ್ಞೈರ್ಯಥೋದಿತಮ್।

ಯಾವ ರಾಶಿ ಶುಭ ಗ್ರಹಯುಕ್ತವಾಗಿದೆಯೋ ಅಥವಾ ಯಾವ ರಾಶಿಯ ಹಿಂದೆ ಶುಭಗ್ರಹವಿದೆಯೋ ಆ ದಶಾ ಶುಭದವಾಗುತ್ತದೆ. ವಿಪರೀತ ಸ್ಥಿತಿಯಲ್ಲಿ ವಿಪರೀತ ಫಲ (ರಾಶಿ ಪಾಪಯುಕ್ತವಾಗಿ ಪಾಪ ಗ್ರಹ ಹಿಂದೆ ಇದ್ದರೆ) ತ್ರಿಕೋಣ ಅಷ್ಟಮ ಹಾಗೂ ದ್ವಾದಶದಲ್ಲಿ ಶುಭದ ಪಾಪಗ್ರಹವಿದ್ದರೆ ಅದು ಅಶುಭಕಾರಕ ವಾಗುತ್ತದೆ.

ಮೇಷ ಕರ್ಕ ತುಲಾನಕ್ರರಾಶೀನಾಂ ಚ ಯಥಾಕ್ರಮಮ್ ॥೧೯॥

ಬಾಧಾಸ್ಥಾನಾನಿ ಕ್ರಮಶಃ ಕುಂಭ ಗೋ ಸಿಂಹ ವೃಶ್ಚಿಕಾಃ ॥೨೦॥

ಪಾಕೆ ಶಾನ್ವಿತ ರಾಶೌ ವಾ ಬಾಧಸ್ಥಾನೆ ಶುಭೇತರೆ

ಸ್ಥಿತೆಸತಿ ಮಹಾಶೋಕೋ ವ್ಯಸನಂ ಭಂಧನಂ ಗದಾಃ।
ಉಚ್ಚಸ್ವರ್ಕ್ಷ ಗ್ರಹೆ ತಸ್ಮಿನ್ ಶುಭಂ ಸೌಖ್ಯಂ ಧನಾಗಮಃ ॥೨೦॥

ತ ಚ್ಛೂನ್ಯಂ ಚೇದಸೌಖ್ಯಂ ಸ್ಯೌತದ್ದಶಾ ನ ಫಲಪ್ರದಃ ॥೨೨।

ಮೇಷ ಕರ್ಕ ತುಲಾ ಮಕರ (ಚರರಾಶಿ) ಈ ನಾಲ್ಕು ರಾಶಿಯ ಕ್ರಮಶಃ ಕುಂಭ ವೃಷಭ ಸಿಂಹ ವೃಶ್ಚಿಕಗಳಲ್ಲಿ ತಮ್ಮ 11ನೇ ರಾಶಿ ಬಾಧಾ ಸ್ಥಾನವಾಗಿದೆ. ದಶಾಪ್ರದ ರಾಶಿ ಸ್ವಾಮಿಯಿಂದ ಯುಕ್ತ ರಾಶಿ ಅಥವಾ ಬಾಧಾ ಸ್ಥಾನದಲ್ಲಿ ಪಾಪಗ್ರಹವಿದ್ದರೆ ಮಹಾಶೋಕವನ್ನು, ಜೈಲುವಾಸ, ಕಷ್ಟ, ಅನೇಕ ಪ್ರಕಾರ ರೋಗ ಹೇಳುವುದು ಉಕ್ತರಾಶಿಯಲ್ಲಿ ಸ್ವೋಚ್ಚ ಅಥವಾ ಸ್ವಕ್ಷೇತ್ರ ಗ್ರಹವಿದ್ದರೆ ರಾಶಿದಶಾ ಶುಭ ಪ್ರದ ಸೌಖ್ಯ ಕಾರಣವಾಗುತ್ತದೆ ಹಾಗೂ ಧನದಾಯಕವಾಗುತ್ತದೆ. ಆ ಸ್ಥಾನ (11) ಗ್ರಹ ರಹಿತವಾದರೆ ಅಸೌಖ್ಯಕಾರಕ ಹಾಗೂ ನಿಷ್ಫಲ ಹೇಳುವುದು.

ಭಾದಕ ವ್ಯಾಯಷಡ್‌ರಂಧ್ರೆ ರಾಹುಯುಕ್ತೆ ಮಹದ್ಭಯಮ್॥

ಪ್ರಸ್ಥಾನೆ ಬಂಧನಪ್ರಾಪ್ತಿ ರಾಜಪೀಡಾ ರಿಪೋರ್ಭಯಮ್ ॥೨೩॥

ರವ್ಯಾರರಾಹುಶನಯೋ ಭಂಕ್ತಿ ರಾಶೌ ಸ್ಥಿತಾ ಯದಿ।
ತದ್ರಾಶಿಭುಕ್ತೌ ಪತನಂ ರಾಜಕೋಪಾನ್ಮಹದ್ಭಯಮ್ ॥೨೪।

ಭುಕ್ತರಾಶಿ ತ್ರಿಕೋಣೆ ತು ನೀಚ ಖೇಟಃ ಸ್ಥಿತೋ ಯದಿ।
ತದ್ರಾಶೌ ವಾ ಯುತೆ ನೀಚೆ ಪಾಪೆ ಮೃತ್ಯುಭಯಂ ಭವೇತ್ ॥೨೫॥

ಯಾವ ರಾಶಿಯಿಂದ ಬಾಧಕಸ್ಥಾನ ಅಥವಾ 6-8-12ರಲ್ಲಿ ರಾಹು ಇದ್ದರೆ ಅವನ ದಶಾ ಅಂತರದಶಾ ಮಹಾ ಭಯಕಾರಿಣಿಯಾಗುತ್ತದೆ. ಆ ಸಮಯ ಯಾತ್ರೆಯಲ್ಲಿ ಬಂಧನ, ರಾಜ್ಯದಿಂದ ಪೀಡೆ ಶತ್ರುಭಯ, ರವಿ ಮಂಗಳ ರಾಹು, ಶನಿ ಯಾವ ರಾಶಿಯಲ್ಲಿ ಇರುತ್ತಾರೆ, ಆ ರಾಶಿಯ ಅಂತರದಶಾ ಅವನತಿಗೆ ಕಾರಣ ವಾಗುತ್ತದೆ ಆ ಸಮಯದಲ್ಲಿ ರಾಜಕೋಪದಿಂದ ಮಹಾನ್ ಭಯ ಅಂತರದಶಾ ರಾಶಿಯಿಂದ ನವಮ ಪಂಚಮದಲ್ಲಿ ನೀಚಗ್ರಹ ಅಥವಾ ಪಾಪಗ್ರಹ ಇದ್ದರೆ ಮರಣ ಭಯ ಹೇಳುವುದು.

ಭುಕ್ತರಾಶೌ ಸ್ವತುಂಗಸ್ಥೆ ತ್ರಿಕೋಣೆ ವಾ ಗ್ರಹೆ ಸತಿ।
ಯದಾ ಭುಕ್ತಿದಶಾ ಪ್ರಾಪ್ತಾ ಸುಖಂ ಹಿ ಲಭತೆನರಃ ॥೨೬॥

ನಗರಗ್ರಾಮನಾಥತ್ವಂ ಪುತ್ರಲಾಭಂ ಧನಾಗಮಮ್।
ಕಲ್ಯಾಣಾ ಭೂರಿಭಾಗ್ಯಂ ಚ ಸೈನಾಪತ್ಯಂ ಮಹೋನ್ನತಿಮ್ ॥೨೮।

ಪಾಕೇಶ್ವರೋ ಜೀವದೃಷ್ಟಃ ಶುಭರಾಶಿಸ್ಥಿತೋ ಯದಿ।
ತದ್ದಶಾಯಾಂ ಧನಪ್ರಾಪ್ತಿರ್ಮಂಗಲಂ ಪುತ್ರಜಂ ಭವೇತ್ ॥೨೮।

ಅಂತರದಶಾರಾಶಿ ಅದರ ತ್ರಿಕೋಣದಲ್ಲಿ ಸ್ವೋಚಸ್ಥ ಗ್ರಹವಿದ್ದರೆ ಅದರ ದಶಾ ಪ್ರಾಪ್ತವಾದಾಗ ಮನುಷ್ಯ ಸುಖಿಯಾಗುತ್ತಾರೆ. ಅವನಿಗೆ ನಗರ ಗ್ರಾಮದ ಆಧಿಪತ್ಯ ಪುತ್ರಪ್ರಾಪ್ತಿ ಧನಾಗಮ ಸೌಭಾಗ್ಯ ಕಲ್ಯಾಣ ಸೇನಾಪತಿತ್ವ ಆದಿಯೊಂದಿಗೆ ಮಹೋನ್ನತಿ ಆದಿ ಲಭ್ಯವಾಗುತ್ತಿವೆ. ದನೇಶ ಶುಭ ರಾಶಿಯಲ್ಲಿ ಗುರು ದೃಷ್ಟನಾಗಿದ್ದರೆ ಅವನ ದಶಾದಲ್ಲಿ ಧನಪ್ರಾಪ್ತಿ ಹಾಗೂ ಪುತ್ರಜ ಸುಖ ದೊರೆಯುತ್ತದೆ.

ಸಿತಾಸಿತ ಭಯುಗ್ಮಾಶ್ಚ ಸೂರ್ಯಸ್ಯ ರಿಪುರಾಶಯಃ
ಕಾರ್ಪಿತೌಲಿಘಟಾ ಶ್ಚೆಂದೋರ್ಭೌಮಸ್ಯರಿ ಪುರಾಶಯಃ ॥೨೯।

ಘಟಮೀನ ನೃಯುಕ್ತೌರಿಕನ್ಯಾ ಜ್ಞಸ್ಯತ್ ತಃ ಪರಮ್ ।
ಕರ್ಕ ಮೀನಾಲಿಕುಂಭಾಶ್ಚ ರಾಶಯೇ ರಿಪವಃ ಸ್ಮೃತಾಃ ॥೩೦।

ವೃಷತೌಲಿನೃಯುಕ್ಕನ್ಯಾರಾಶಯೇ ಜೀವಶತ್ರವಃ।
ಸಿಂಹಾಲಿಕರ್ಕಚಾಪಾಶ್ಚ ಶುಕ್ರಸ್ಯ ರಿಪುರಾಶಯಃ ॥೩೧॥

ಮೇಷಸಿಂಹ ಧನುಃ ಕೌರ್ಪಿಕರ್ಕಟಾಃ ಶನಿಶತ್ರವಃ।
ಏವಂ ಗ್ರಹಾಂತರದಶಾಂ ಚಿಂತಯೇತ್ ಕೋವಿದೋ ದ್ವಿಜಃ ॥೩೨।

ವೃಷಭ ತುಲಾ ಮಕರ ಕುಂಭ ಮಿಥುನ ಇವು ಸೂರ್ಯನ ಶತ್ರುರಾಶಿಗಳವೆ. ವೃಶ್ಚಿಕ, ತುಲಾ, ಕುಂಭ, ಚಂದ್ರನ. ಕುಂಭ, ಮೀನ, ಮಿಥುನ, ತುಲಾ ಕನ್ಯಾ ಮಂಗಳನಿಗೆ, ಕರ್ಕ, ಮೀನ, ವೃಶ್ಚಿಕ, ಕುಂಭ ಬುಧನ ವೃಷಭ ತುಲಾ ಮಿಥುನ ಕನ್ಯಾ ಗುರುವಿಗೆ ಸಿಂಹ ವೃಶ್ಚಿಕ ಕರ್ಕ ಧನು ಶುಕ್ರನ ಮೇಷ ಸಿಂಹ ಧನು ವೃಶ್ಚಿಕ ಕರ್ಕ ಶನಿಯು ಶತ್ರುರಾಶಿಗಳಾಗಿವೆ. ಈ ಅಂಶವನ್ನು ವಿಚಾರಿಸಿ ಹೇಳುವುದು.

ಯೇ ರಾಜಯೋಗದಾಸ್ತೆ ಯೇ ಚ ಶುಭಮಧ್ಯಗೆತಾಗ್ರಹಾಃ।
ಯಸ್ಮಾದ್ ದ್ವಿತ್ರಿಚತುರ್ಥಸ್ಥಾಃ ಷಷ್ಠೆಬಾಃ ಪಸತ್ಪುಪ್ರವಾಃ ॥೩೩॥

ತದ್ದಶಾಯಾಂ ಶುಭಂ ಭ್ರೂಯಾದ್ ರಾಜಯೋಗಾದಿ ಸಂಭವಮ್।
ಶುಭದ್ದಯಾಂತರಗತಃ ಪಾಪೋಽಪಿ ಶುಭದೇ ಮತಃ ॥೩೪॥

ಯಾವ ಗ್ರಹವು ರಾಜ ಯೋಗಕಾರಕವಿದೆಯೋ ಹಾಗೂ ಶುಭಗ್ರಹದ ಮಧ್ಯವಿದೆಯೊ (ಶುಭಕರ್ತರಿ) ಅಥವಾ ಅದರ 2ನೇ, 3ನೇ ಹಾಗೂ ಗ್ರಹವಲ್ಲಿ (ಮನೆ) ಶುಭಗ್ರಹ ಇದೆಯೋ ಅದರ ದಶಾ ಶುಭ ಪ್ರದವಾಗುತ್ತದ. ಆ ದಶೆ ರಾಜಯೋಸಾದಿಗಳಿಂದ ಕೂಡಿರುತ್ತದೆ. ಶುಭ ಗ್ರಹಗಳ ಮಧ್ಯ ಪಾಪಗ್ರಹವೂ ಶುಭಪ್ರದವೆ ಆಗುತ್ತದೆ.

ಗತಾ ಶುಭದಶಾಮಧ್ಯಂ ದಶಾಸೌಮ್ಯಸ್ಯ ಶೋಭನಾ।
ಶುಭೋ ಯಸ್ಯ ತ್ರಿಕೋಣಾಸ್ಥಸ್ತದ್ದಶಾಪಿ ಶುಭಪ್ರದಾ ॥೩೫॥

ಆರಂಭಾಂತೌ ಮಿತ್ರಶುಭರಾಶ್ಯೋರ್ಯಾದಿ ಫಲಂ ಶುಭಮ್।
ಪ್ರತಿ ರಾಶ್ಯೈವ ಮಬ್ದಾದಿ ವಿವಿಚ್ಯ ಫಲಮೀರಯೇತ್ ॥೩೬॥

ಶುಭ(ಗ್ರಹ ಅಥವಾ ರಾಶಿ)ಯ ದಶಾದಲ್ಲಿ ಶುಭ(ರಾಶಿ-ಗ್ರಹ)ಗಳ ಅಂತರ ದಶಾ ಶುಭ ಪ್ರದವಾಗುತ್ತದೆ. ಅದರ ತ್ರಿಕೋಣ(9-5)ರಲ್ಲಿ ಶುಭ ಗ್ರಹವಿದ್ದರೆ ಅದರ ದಶಾವೂ ಶುಭ ಪ್ರದವಾಗುತ್ತದೆ.

ಯಾವುದೇ ದಶಾದ ಆರಂಭ ಅದರಂತೆ ಮುಕ್ತಾಯದಲ್ಲಿ ತನ್ನ ಮಿತ್ರ ಅಥವಾ ಶುಭರಾಶಿಯ ಸಂಬಂಧವಿದ್ದರೆ ಅದರ ಪೂರ್ಣ ದಶಾ ಶುಭಪ್ರದವಾಗುತ್ತವೆ. ಪ್ರತ್ಯೇಕ ರಾಶಿಯಲ್ಲಿ ವರ್ಷಾದಿಯ ವಿಭಾಗ ಮಾಡಿ ಅದರ ಫಲಾದೇಶ ಮಾಡುವುದು.

ಆರಂಭೌತ್ತತ್ರಿಕೋಣೆ ತುಸೌಮ್ಯೇ ತು ಶುಭಮಾಹೇತ್।
ಶುಭರಾಶೌ ಶುಭಾರಂಭೆ ದಶಾ ಸ್ಯಾದೆತಿ ಶೋಭ ನಾ ॥೩೭॥

ಶುಭಾದಿರಾಶೌ ಪಾಪ ಶ್ಚೆದ್ ದಶಾರಂಭೆ ಶುಭಾ ಭವೇತ।
ಶುಭಾರಂಭೆ ಕಥಾ ಕೇತಿ ಪ್ರಾರಂಭಸ್ಯ ಫಲಂ ದಿಶೇತ್ ॥೩೮॥

ಆರಂಭೆ ಪಾಪಭೆ ವಾ ಅನ್ನಾಥಃ ಸ್ಯಾದ ಬಲೋ ಮುನೆ।
ನೀಚಾದೌ ತದ್‌ದಶಾದ್ಯಂತೆ ದಿಶೀದ್ ಭಾಗ್ಯವಿಪರ್ಯತಮ್ ॥೩೯॥

ದಶಾರಂಭ ಸಮಯದಲ್ಲಿ ಅದರ ನವಮ ಪಂಚಮದಲ್ಲಿ ಶುಭ ಗ್ರಹವಿದ್ದರೆ ಅದರ ದಶಾ ಶೋಭಾಯಮಾನವಾಗಿರುತ್ತದೆ. ಶುಭರಾಶಿಯಲ್ಲಿ ಶುಭರಾಶಿಯ ಅಂತರ ದಶಾ ಬಂದಾಗ, ಅತೀ ಶೋಭಾಯಮಾನವಾಗಿರುತ್ತದೆ. ಶುಭ ರಾಶಿಯಲ್ಲಿ ಪಾಪದಶಾ ಆರಂಭವಾದರೆ ಆರಂಭದಲ್ಲಿ ಶುಭ ಶುಭರಾಶಿಯ ದಶಾರಂಭದಲ್ಲಿ ಆರಂಭ ಸಮಯ ನೋಡಿಯೋ ಫಲಾದೇಶ ಮಾಡುವುದು ಆರಂಭದಲ್ಲಿ ಪಾಪ

ರಾಶಿಯಿದ್ದರೆ ಅದರ ಸ್ಥಾನ ದುರ್ಬಲ ಅಥವಾ ನೀಚಗತನಾಗಿದ್ದರೆ ಅದರ ದಶಾದಿ ಅಥವಾ ದಶಾಂತದಲ್ಲಿ ಭಾಗ್ಯವಿಪರ್ಯಾಸವಾಗುತ್ತದೆ.

ಯತ್ರ ಸ್ಥಿತೋ ನೀಚಖೇಟ ಸ್ತ್ರೀಕೋಣೆ ನೀಚಗೋಥವಾ।
ತಥಾ ರಾಶೀಶ್ವರೆ ನೀಚೆ ಸಂಬಂದೋ ನೀಚಖೇಟಕೈಃ ॥೪೦।

ಭಾಗ್ಯಸ್ಯ ವಿಪರೀತತ್ವಂ ಕರೋತ್ಯೇವ ದ್ವಿಜೋತ್ತಮ।
ಅರ್ಥಸಮ್ಮಾದಿನಾಶಃ ಸ್ಯಾದ್ ರೋಗ ಭೀತಸ್ತನಾವಪಿ ॥೪೧॥

ಯಾವ ರಾಶಿಯಲ್ಲಿ ನೀಚಸ್ಥ ಗ್ರಹವಿರುತ್ತದೆಯೋ ಆ ರಾಶಿಯ ನವಮ ಪಂಚಮದಲ್ಲಿ ನೀಚದ ಗ್ರಹವಿದ್ದರೆ ಅದರ ಸ್ವಾಯಿ ನೀಚದಲ್ಲಿದ್ದರೆ ಅಥವಾ ನೀಚಸ್ಥ ಗ್ರಹದಿಂದ ಯಾವುದೇ ಸಂಬಂಧ (ದೃಷ್ಟಿಯುತ ನವಪಂಚಕ ಪ್ರದೇಶಾದಶ ಕೇಂದ್ರಾದಿಯೋಗ)ವಿದ್ದರೆ ಅದರ ದಶಾ ಭಾಗ್ಯಕಾರಕವಾಗುತ್ತದೆ ಆ ಸಮಯ ಧನ ಧಾನ್ಯ ವಿನಾಶ ಶರೀರದಲ್ಲಿ ರೋಗೋತ್ಪನ್ ಆದಿ ಅಶುಭ ಫಲಗಳುಂಟಾಗುತ್ತದೆ.

ರಾಹೋಃ ಕೇತೋಶ್ಚ ಕುಂಭಾದಿ ವೃಶ್ಚಿಕಾದಿ ಚತುಷ್ಟಯವ್।
ಸ್ವರ್ಕ್ಷ ತತ್ರ ಸಮಾರಂಭಸ್ತದ್ದಶಾಯಾಂ ಶುಭಂ ಭವೇತ್ ॥೪೨॥

ಕುಂಭ ವೃಶ್ಚಿಕಗಳಿಂದ ನಾಲ್ಕು ನಾಲ್ಕು ರಾಶಿ ಕ್ರಮಶಃ ರಾಹುಕೇತುಗಳ ಅರ್ಥಾತ್ ಕುಂಭದಿಂದ (ಕುಂಭ ಮೀನ ಮೇಷ ವೃಷಭ) ಅದರಂತೆ ವೃಶ್ಚಿಕದಿಂದ ನಾಲ್ಕು ರಾಶಿ (ವೃಶ್ಚಿಕ, ಧನು, ಮಕರ, ಕುಂಭ) ಕೇತುವಿನ ಸ್ವಕ್ಷೇತ್ರಗಳೆಂದು ಗಣಿಸಲ್ಪಡುತ್ತದೆ ಈ ಎರಡು ಗ್ರಹಗಳು ಸ್ವಕ್ಷೇತ್ರಗಳಾದರೆ ಅದರ ದಶಾ ಶುಭವೆ.

ವಿಶೇಷವಾಗಿ ಈ ಗ್ರಹಗಳು ವಕ್ರಿಗತದಲ್ಲಿರುವುದರಿಂದ ವಕ್ರವಾಗಿ ಪರಿಗಣಿಸುವುದೋ ಅಥವಾ ಮಾರ್ಗಿ ಕ್ರಮವೊ ವಿವರಿಸಿಲ್ಲ) ವಿದ್ವದ್ ಜನರು ತಮ್ಮ ಅನುಭವದಂತೆ ಪರಿಗ್ರಹಿಸುವುದು.

ಯುದ್ದಶಾಯಾಂ ಶುಭಂ ಬ್ರೂಯಾತ್ ಸ ಚೆನ್ಮಾರಕಸಂಸ್ಥಿತಃ।
ಯಸ್ಮಿನ್ ರಾಶೌ ದಶಾಂತಃ ಸ್ಯಾತ್ತಸ್ಮಿನ್ ದೃಷ್ಟಿಯುತೆಪಿವಾ ॥೪೩॥
ಶುಕ್ರೇಣ ವಿಧುನಾ ವಾ ಸ್ಯಾದ್ ರಾಜಗೋಪಾದ್ ಧನಕ್ಷಯಃ।
ದಶಾಂತಶೆದರಿಕ್ಷೇತ್ರೆ ರಾಹುದೃಷ್ಟಯುತೆ ಪಿ ವಾ ॥೪೪।

ಇದಂ ಫಲಂ ಶನೇಃ ಪಾಕೆ ನ ವಿಚಿಂತ್ಯಂ ದ್ವಿಜೋತ್ತಮ।
ದಶಾಪ್ರದೆ ನಕ್ರರಶೌ ನ ವಿಚಿಂತ್ಯಮಿಗಂ ಫಲವ್ ॥೪೫॥

ಯಾವ ದಶಾದಲ್ಲಿ ಶುಭ ಫಲ ನಿರ್ದೇಶಿಸಬೇಕಾಗಿದೆಯೋ ಅದು ಮಾರಕ

ಸ್ಥಾನದಲ್ಲಿ ಆ ರಾಶಿಯಲ್ಲಿ ದಶಾಂತವಾಗಿದ್ದು, ಅದರ ಮೇಲೆ ಶುಕ್ರ ಅಥವಾ ಚಂದ್ರ ದೃಷ್ಟಿಯಿದ್ದು ಅಥವಾ ಮಿತಿಯಾಗಿದ್ದರೆ ಆ ದಶಾದಲ್ಲಿ ರಾಜಪ್ರಕೋಪದಿಂದ ಧನಹಾಸ ದಶಾಂತ್ಯದೋ ಶತ್ರುರಾಶಿಯಲ್ಲಿದ್ದರೆ ಅಥವಾ ದಶಾಂತ ರಾಶಿ ರಾಹು ಯುಕ್ತವಾಗಿದ್ದರೆ ಅಥವಾ ದೃಷ್ಟವಾಗಿದ್ದರೆ (ರಾಜಕೋಪದಿಂದ) ಧನಕ್ಷಯವೆಂದು ಹೇಳುವುದು. ಈ ಫಲ ಶನಿ ಅಥವಾ ಮಕರ ರಾಶಿ ದಶಾದಲ್ಲಿ ಆಗುವುದಿಲ್ಲ.

ರಾಹೋರ್ದಶಾಂತೆ ಸರ್ವಸ್ವನಾಶೋ ಮರಣ ಬಂಧನೆ।
ದೇಶಾನ್ನಿರ್ವಾಸನಂ ವಾ ಸ್ಯಾತ್ ಕಷ್ಟಂ ವಾ ಮಹದಶ್ನುತೆ ॥೪೬॥

ತತ್ರಿಕೋಣಗತೆ ಪಾಪೆ ನಿಶ್ಚಯಾದ್ ದುಃಖಮಾದಿಶೇತ್।
ಏವಂ ಶುಭಾಶುಭಂ ಸರ್ವನಿಶ್ಚಯೇನ ವದೇದ್ ಬುಧಃ ॥೪೭॥

ರಾಹುವಿನ ದಶಾಂತದಲ್ಲಿ ಸರ್ವಸ್ವಕ್ಷಯ ಮರಣ, ಜೈಲು ವಾಸದಿಂದ ಕಷ್ಟ ನಿರ್ವಸನ (ಮನೆಯಿಲ್ಲದಿರುವಿಕೆ) ಅಥವಾ ಅನ್ಯ ವಿಧ ಮಹಾಕಷ್ಟ ಸಾಧ್ಯತೆಗಳಿವೆ. ಅದೆ ರಾಹುವಿನಿಂದ ನವಮ ಪಂಚಮದಲ್ಲಿ ಪಾಪಗ್ರಹವಿದ್ದರೆ ಮೇಲಿನ ಫಲ ಸುನಿಶ್ಚಯವೆಂದು ಹೇಳುವುದು. ಇದೇ ರೀತಿ ಸಮಸ್ತ ಶುಭಾಶುಭ ನಿಶ್ಚಯಪೂರ್ವಕ ಹೇಳುವುದು.

ರಾಹುದಿಶ್ರಿತ ರಾಶಿಃ ಸ್ಯಾಚ್ಚೆನ್ನೈತ್ರೆಯ। ದಶಾಪ್ರದಃ।
ತತ್ರ ಕಾಲೇಪಿ ಪೂರ್ವೋಕ್ತಂ ಚಿಂತನೀಯಂ ಪ್ರಯತ್ನತಃ ॥೪೮॥

ದಶಾರಂಭೊ ದಶಾಂತೋ ವಾ ಮಾರಕೆ ಚೆನ್ನ ಶೋಭನಮ್।
ತಸ್ಮಿನ್ನೇವ ಚ ರಾಹುಶ್ಚೆನ್ನಿರಧೋ ದ್ರವ್ಯನಾಶನಮ್ ॥೪೯॥

ರಾಹು ಆದಿ (ಪಾಪಗ್ರಹಗಳು) ಯಾವ ರಾಶಿಯಲ್ಲಿವೆಯೋ ಆ ರಾಶಿ ದಶಾ ಕಾಲದಲ್ಲಿಯೂ ಮೇಲ ಹೇಳಿದ ಫಲ ಹೇಳುವುದು. ಮಾರಕ ಗ್ರಹ ರಾಶಿಯ ದಶಾರಂಭ ದಶಾಂತ ಶುಭಪ್ರದವಾಗಲಾರದು. ಅಲ್ಲಿ ರಾಹುಯಿದ್ದರಂತೂ ಬಂಧನ ದ್ರವ್ಯನಾಶ ಹೇಳುವುದು.

ಯತ್ರ ಕ್ವಾಪಿ ಚ ಭೆ ರಾಹೌ ದಶಾರಂಭೆ ವಿನಾಶನಮ್ ।
ಗ್ರಹಭ್ರಂಶಃ ಸಮುದ್ದಿಷ್ಟೊ ಧನೆ ರಾಹುದಶನಾತ್ತಿದಃ ॥೫೦॥

ಚಂದ್ರಶುಕ್ರೌ ದ್ವಾದಶೆ ಚೇದ್ರಾಜಕೋಪೊ ಭವೇದ್ ಧ್ರುವಮ್ ।
ಭೌಮ ಕೇತು ತತ್ರ ಯದಿ ವಧೋಗ್ನೆರ್ಮ್ಹತಿ ವ್ಯಥಾ ॥೫೦॥

ಚಂದ್ರಶುಕ್ರೌ ಧನೇ ವಿಪ್ರ ಸ್ಥಿತೌ ಚೆದ್ರಾಜ್ಯದಾಯಕೌ।
ದಶಾರಂಭೆ ದಶಾಂತೆ ಚ ದ್ವಿತೀಯಸ್ಥ ಮಿದಂ ಫಲಮ್ ॥ ೫೨॥

ಯಾವುದೇ ಗ್ರಹ ರಾಶಿಯಲ್ಲಿ ದಶಾರಂಭದಲ್ಲಿ ಆ ರಾಶಿಯಲ್ಲಿ ರಾಹು ಇದ್ದರೆ ಅವನ ವಿನಾಶ ಗ್ರಹನಾಶಾದಿಗಳನ್ನು ಹೇಳುವುದು. ಧನಬಾವದಲ್ಲಿ ರಾಹು ಇದ್ದರೆ ಧನಕ್ಷಯ ದ್ವಾದಶ ಭಾವದಲ್ಲಿ ಚಂದ್ರಶುಕ್ರ ಇಬ್ಬರು ಇದ್ದರೆ ನಿಶ್ಚಿತ ರಾಜಕೋಪ ಅಲ್ಲಿ ಮಂಗಳ ಅಂತೆ ಕೇತು ಇದ್ದರೆ ಕೊರತೆ ಅಥವಾ ಅಂಗೀಕೃತ ಯಾವುದೆ ಕಾರ್ಯದಲ್ಲಿ ಯಶವಿಲ್ಲ. ಚಂದ್ರ ಅಂತೆ ಶುಕ್ರ ಧನಭಾವದಲ್ಲಿದ್ದರೆ ರಾಜ್ಯಪದ ದಾಯಕವಾಗಿರುತ್ತದೆ. ಈ ಎಲ್ಲ ಫಲಗಳು ಉಂಟಾಗುವುದು ಅಥವಾ ಆದಿ ಅಂತ್ಯದಲ್ಲಿ ಹೇಳುವುದು (ದಶಾ ವರ್ಷ 3 ಭಾಗ ಮಾಡಿ, ಮಧ್ಯವಿಟ್ಟು ಹೇಳುವುದು).

ಇತ್ಥಂ ಸಾರ್ಗಲಭಾವೋತ್ಥಂ ಫಲಂ ಸದ್ಭಿರಂದೀರಿತಮ್।
ಯಸ್ಯ ಪಾಪಃ ಶುಭೋ ವಾಪಿ ಗ್ರಹಸ್ತಿಷ್ಠೆಚ್ಛುಭಾರ್ಗತಿ ॥೫೩॥

ತೇನ ದೃಷ್ಟೇಕ್ಷಿತಂ ಲಗ್ನಂ ಪ್ರಾಬಲ್ಯಾಯೇಪಕಲ್ಪತೆ।
ಯದಿ ಪಶ್ಯೇದ್ ಗ್ರಹಸ್ತತ್ರ ವಿಪರಿತಾಗಲಸ್ಥಿತಃ ॥೫೪।

ದಶಾಯಾಂ ತಸ್ಯ ಭಾವಸ್ಯ ವಿಪರೀತಂ ಫಲಂ ಭವೇತ್
ಶುಭ ದೃಷ್ಟೆ ಶುಭಂ ಬ್ರೂಯಾನ್ನಿರ್ವಿಶಂಕಂ ದ್ವಿಜೋತ್ತಮ। ೫೫॥

ಭಾವಸ್ಮಿತಗ್ರಹ ಫಲದಂತೆ ಅರ್ಗಲ ಭಾವದಿಂದಲೂ ವಿದ್ವಾಂಸರು ಫಲಾದೇಶ (ಅದೇ ರೀತಿ) ಮಾಡಿದ್ದಾರೆ. ಶುಭ ಅಥವಾ ಪಾಪ ಗ್ರಹ ಯಾವುದರ ಶುಭಾರ್ಗಲ ಕಾರಕವಾಗಿವೆಯೋ ಅದರಿಂದ ದೃಷ್ಟಲಗ್ನ ಅಥವಾ ಅನ್ಯಭಾವಗಳುಂಟು. ಅನ್ಯ ಪ್ರಬಲವಾಗುತ್ತವೆ ನಿರ್ಬಾಧಾ ಅರ್ಗಲಕಾರಕ ಗ್ರಹ ದೃಷ್ಟ ಯಾವುದೆ ರಾಶಿ ಪ್ರಬಲವೆಂದು ತಿಳಿಯುವುದು ಹಾಗೂ ಅದರ ದಶಾ ಶುಭಪ್ರದವಾಗುತ್ತದೆ. ವಿಪರೀತಾರ್ಗಲ ರಾಶಿ ಹಾಗೂ ಶುಭಾರ್ಗಲ ಗ್ರಹ ದೃಷ್ಟಿರಹಿತ ರಾಶಿಯಾದರೂ ಅಶುಭಪ್ರದವಾಗುತ್ತದೆ. ಶುಭಗ್ರಹ ದೃಷ್ಟರಾಶಿಯ ದಶಾಶುಭಕಾರಕ ಅರ್ಗಲ ವಿಚಾರ ಅರ್ಗಲಾಧ್ಯಾಯದಲ್ಲಿ ನೋಡಿರಿ.

ಭಾವೆ ಯತ್ರ ಶುಭೆಶೋಚ್ಚ ಗ್ರಹ ಸಂಬಂಧ ಈಕ್ಷ್ಯತೆ।
ದಶಾಯಾಂ ತಸ್ಯ ಭಾವಸ್ಯ ಧನಾಪ್ತಿರತುಲಾ ಭವೇತ್ ॥೫೬॥

ಯದ್‌ಭಾವಾಧಿಪತಿಃ ಸ್ವಾರ್ಥ ಭಮಧ್ಯಾಸ್ತೇಥವೇಕ್ಷತ್।
ತದ್ ಭಾವಸ್ಯ ದಶಾಯಾಂ ಸ್ಯಾದ್ ನಿತ್ಯಮರ್ಥಾಗಮೋ ಮಹಾನ್ ॥೫೭॥

ಯಸ್ಮಾದ್ ರಿಪ್ಫಸ್ಥಿತೋಯಃ ಸ್ಯಾತ್ತದ್ದಶಾರ್ಥಕ್ಷತಿಪ್ರದಾ।
ಪಾಪಾ ಯತತ್ರಿಕೋಣ ಸ್ಥಾಸ್ತತ್ರಾಪ್ಯ ಶುಭಸಂ ಚಯಃ ॥೫೮॥

ಪಿತುಃ ಕಷ್ಟಂ ಸೂನುನಾಶೋ ಮಹಾನಾಧಿಶ್ಚ ಸಂಭವೇತ್।
ತ್ರಿಕೋಣಸ್ಥಾ ಯತಸ್ಪನ್ವ್ಯಮೃತ ಶೀನಕ್ಯಜಾರ್ಕಜಾಃ ॥೫೯॥

ಯಾವ ಭಾಗದಲ್ಲಿ ಶುಭ ಸ್ಥಾಯಿಗೆ ಉಚ್ಚಸಂಬಂಧವಿದೆಯೊ ಆ ಗ್ರಹದಶಾದಲ್ಲಿ ಅತುಲಧನ ಪ್ರಾಪ್ತಿ ಹೇಳುವುದು. ಭಾವೇಶ ಸ್ವರಾಶಿಯಲ್ಲಿರಲು ಅಥವಾ ಸ್ವರಾಶಿ ನೋಡುತ್ತಿದ್ದರೆ ಆ ರಾಶಿ ದಶಾದಲ್ಲಿ ನಿತ್ಯ ಧನಾಗಮವನ್ನು ಹೇಳುವುದು. ಭಾವೇಶನು ಒಂದು ವೇಳೆ ವ್ಯಯಸ್ಥಾನನಾಗಿದ್ದರೆ ಆ ರಾಶಿಯ ದಶಾ ಧನಕ್ಷಯ ಕಾರಣವಾಗುತ್ತದೆ. ಯಾವ ಭಾಗದ ನವಮ ಪಂಚಮದಲ್ಲಿ ಪಾಪಗ್ರಹ ವಿರುತ್ತವೆಯೋ ಅದರ ದಶಾ ಅಶುಭದ ಅಂಜಿಕೆ ಪುತ್ರ ಹೇತುತ್ವಾದಿ, ಹಾಗೂ ತಂದೆಗೆ ಕಷ್ಟದಾಯಕ ಮಾನಸಿಕ ಸಂತಾಪ ಇತ್ಯಾದಿ ತೋಂದರೆ ಹೇಳುವುದು. ಯಾವ ಭಾವದ ತ್ರಿಕೋಣ(9-5)ದಲ್ಲಿ ದ್ವಾದಶೇಶ, ಅಷ್ಟಮೇಶ ಅಥವಾ ಸೂರ್ಯ ಭೌಮ, ಶನಿಗಳಿದ್ದರೇ ಅವನ ದಶಾಕೂಡ ಅಶುಭಕಾರಕವಾಗುತ್ತದೆ.

ರಾಹೌಕೇತೌ ತ್ರಿಕೋಣಸ್ಥೆ ಸುತಾತ್ತಿರ್ದ್ರವಿಣಕ್ಷಯಃ।
ಪರದೇಶಾಟನಂ ಕಷ್ಟಂ ಭೀತಿಃ ಸರ್ವತ್ರ ಜಾಯತೆ ॥೬೦॥

ಯತೋರಿಮೃತಿಭೆ ಪಾಪಾ ನೀಚಾ ವಾಸ್ತಂಗತಾ ಗ್ರಹಾಃ।
ಭೂಪಾರಿರೋಗತೋ ಭೀತಿರಪ್ಯಾನಿಶಮೀರಿತಾ ॥೬೧॥

ಯತಸ್ತುರ್ಯಗತಃ ಪಾಪಸ್ತತ್ರ ಭೂಕ್ಷೇತ್ರವೆಶ್ಮನಾಮ್।
ಪಶೂನಾಷ್ಪ ಕ್ಷಯಸ್ತತ್ರ ಕುಜೆದಗ್ಧಂ ಗ್ರಹಂ ಭವೇತ್ ॥೬೨॥

ಪ್ರಚ್ಯೂಮರ್ಕಾಜೆ ಭಾನ್ ರಾಜಕೋಪಃ ಪ್ರಜಾಯತೆ।
ರಾಹೌ ಸರ್ವಸ್ವನಾಶಃ ಸ್ಯಾದ್ ಭೀತ್ಶ್ಚೌರಗರಲಾದಿಜಾ ॥೬೩॥

ಯಾವ ರಾಶಿಯ ನವಮ ಪಂಚಮದಲ್ಲಿ ರಾಹು ಕೇತುಗಳಿರುವರೋ ಅವನ ದಶಾದಲ್ಲಿ ಪುತ್ರಪೀಡಾ ಧನಕ್ಷಯ ಪರದೇಶಗಮನ ಕಷ್ಟ ಹಾಗೂ ಸರ್ವತ್ರ ಭಯ, ಅದರಂತೆ ಷಷ್ಠಾಷ್ಟಮದಲ್ಲಿ ಪಾಪ ಗ್ರಹ ಅಥವಾ ನೀಚ ಅಸ್ತಂಗತ ಗ್ರಹವಿದ್ದರೆ ಅವನ ದಶಾ, ರಾಜಕೋಪ ಶತ್ರುಪೀಡಾ ರೋಗದಿಂದ ಮಹಾ ಭಯಂಕರ ಕಷ್ಟ

ದಾಯಕವಾಗುತ್ತದೆ. ಯಾವ ರಾಶಿಯ ಚತುರ್ಥದಲ್ಲಿ ಪಾಪಗ್ರಹವಿರುವುದೋ ಅವನದಶಾದಲ್ಲಿ ಭೂಮಿ ಮನೆ ಪಶು ಆದಿಗಳ ವಿನಾಶವಾಗುತ್ತದೆ. ನಾಲ್ಕರಲ್ಲಿ ಮಂಗಳನಿದ್ದರೆ (ಯಾವುದೇ ರಾಶಿಯಿಂದ) ಗ್ರಹದಾಹ ಹೇಳುವುದು. ಶನಿಯಿದ್ದರೆ ಹೃದಯ ಶೂಲೆ ಸೂರ್ಯ ರಾಜ್ಯಕೋಪ ರಾಹು ಇದ್ದರೆ ಸರ್ವನಾಶ ಹಾಗೂ ಕಳ್ಳರ ಅಲ್ಲದೆ ವಿಷಭಯ ಹೇಳುವುದು.

ಯತಃ ಕರ್ಮಗತೋ ರಾಹುಸ್ತದ್ದಶಾ ಪುಣ್ಯತೀರ್ಥದಾ।
ಶುಭಗ್ರಹೌ ಕರ್ಮಲಾಭತಪೋಭಾವಗತಾ ಯತಃ ॥೬೪॥

ಸದ್ ವಿಧ್ಯಾ ಧನ ಸತ್ಕೃತ್ಯಕೀರ್ತಿಧರ್ಮಪುಮರ್ಥದಾಃ।
ಯಸ್ಮಾತ್ ಸೂನ್ವಸ್ತಶತ್ರುಸ್ಥಾಃ ಸ್ವೋಚ್ಚಗಾಃ ಸ್ಯುಃ ಶುಭಗ್ರಹಾಃ ॥೬೫॥

ಜಾಯಾತ್ಮಜಾದಿಸೌಖ್ಯಂ ರಾಜಸಮ್ಮಾನ ಮುತ್ತಮಮ್।
ಯತ್ರ ತನ್ವಂಬುಕೋಣಾ ಯರಾಜ್ಯನಾಥಸ್ತು ಸಂಗತಾಃ ॥೬೬॥

ತತ್ತದ್ ಭಾವಾಭವೃದ್ಧಿಸ್ತು ಭವೇದ್ಯೋಗಬಲಾ ಶ್ರಯಾತ್।

ಯಾವ ರಾಶಿಯಿಂದ ದಶಮದಲ್ಲಿ ರಾಹು ಇದ್ದರೆ ಅವನ ದಶಾ ಪುಣ್ಯತೀರ್ಥ ಯಾತ್ರಾ ಆದಿ ಸುಕಾರ್ಯ ಯಾವ ರಾಶಿಯಿಂದ 10, 11, 9ನೇ ಭಾವದಲ್ಲಿ ಶುಭಗ್ರಹವಿದ್ದರೆ ಆ ರಾಶಿದಶಾ ಸದ್ ವಿದ್ಯಾಧನ ಸತ್ಕಾರ್ಯ ಯಶ ಧರ್ಮ ಅನ್ಯಪುರುಷಾರ್ಥ ಕೊಡುವುದಾಗುತ್ತದೆ. ಯಾವ ರಾಶಿಯಿಂದ 5, 7, 6 ಸ್ಥಾನಗಳಲ್ಲಿ ಶುಭಗ್ರಹವಿದ್ದರೆ ಅವನ ದಶಾ ಸ್ತ್ರೀಪುತ್ರ ಸೌಖ್ಯ ಉತ್ತಮ ರಾಜ ಸನ್ಮಾನ ಪ್ರಾಪ್ತ ವಾಗುತ್ತದೆ. ಯಾವ ರಾಶಿಯಲ್ಲಿ ಲಗ್ನೇಶ ಸುಖೇಶ ತ್ರಿಕೋಣೇಶ ಆಯೇಶ ಹಾಗೂ ದಶಮೇಶ ಸ್ಥಿತರಾಗಿದ್ದಾರೋ ಅದರ ರಾಶಿ ದಶಾದಲ್ಲಿ ಆ ಭಾವ ವೃದ್ಧಿಕಾರಕ ವಾಗುತ್ತದೆ. ಅದು ಯೋಗಬಲಾದಿ ನೋಡಿ ಹೇಳುವುದು.

ಯತ್ರೇಜ್ಯೋ ಭಾರ್ಗವೋ ವಾಪಿ ತ್ರಿಕೋಣಾಧಿಪತಿಃ ಸ್ಥಿತಃ ॥೬೭॥

ಭವ್ಯಂ ನಾನಾರ್ಥ ಸಂಪತ್ತಿಃ ಸುರಭೂಸುರಪೂಜನಮ್।
ಯಸ್ಮಾತ್ತುರ್ಯೋ ನಿಜೋಚ್ಚಸ್ಥಾ ಗ್ರಹಾಃ ಕಿಂವಾ ತ್ರಿಕೋಣಪಃ ॥ ೬೮॥

ಗ್ರಾಮ ವಾಹನಸಂಪ್ರಾಪ್ತಿಃ ಪಶು ಸಂಪತ್ತಿರೇವ ಚ।
ತಸ್ಮಿನ್ನಿಂದ್ಯೋ ಭವೇಲಾಭೋ ಭೂರಿಸಸ್ಯರಸೋದ್‌ಭವಃ ॥೬೯॥

ನಿರ್ದೋಭಃ ಪೂರ್ಣಚಂದ್ರೋ ಮಣಿರತ್ನಾದಿಕಸ್ಯ ಚ ।
ಆರೋಗ್ಯವಾದ್ಯಸಂಗೀತಸುಖಂ ಸ್ಯಾತತ್ರಿ ಭಾರ್ಗವೇ ॥೭೦।

. ಯಾವ ರಾಶಿಯಲ್ಲಿ ಗುರು, ಶುಕ್ರ ಅಥವಾ ತ್ರಿಕೋಣೇಶಸ್ಥಿತರಾಗಿದ್ದಾರೋ ಆ ರಾಶಿದಶಾದಲ್ಲಿ ಅನೇಕ ಕಲ್ಯಾಣ, 6ನೇ ವಿಧ ಸಂಪತ್ತು,ಲಾಭದೇವ ಪೂಜೆಯ ಅವಸರ ಒದಗಿಬರುತ್ತದೆ. ಯಾವ ದಶಾದೀಶ 4ರಲ್ಲಿ ಉಚ್ಚಗ್ರಹ ತ್ರಿಕೋಣಾಂಶ ವಿದ್ದರೆ ಅವನ ದಶಾದಲ್ಲಿ ಗ್ರಾಮ ಲಾಭ ವಾಹನ ಪಶುಸಂಪತ್ತಿನ ಪ್ರಾಪ್ತಿ ಆಗುತ್ತದೆ. ಪೂರ್ಣಚಂದ್ರ ಅಲ್ಲಿರಲು ಖಜಾನೆ ಮಣಿ ರತ್ನಾದಿಲಾಭ, ಮೃದಂಗಾದಿ ವಾದ್ಯ ಹಾಗೂ ಸಂಗೀತ ಸುಖ ಪ್ರಾಪ್ತವಾಗುತ್ತದೆ.

ಸೌವರ್ಣ ಶಿಬಿಕಾಧ್ಯಾಪ್ತಿರ್ಯಚ್ಚತುರ್ಥೇ ಗುರುರ್ಭವೇತ್<br>
ಯತ್ರ ಲಗ್ನತಪೋರಾಜ್ಯಾಧಿಪತುಂಗಗ ಸದ್ ಗ್ರಹಾಃ ॥೭೦॥

ತತ್ರಸರ್ವಕ್ಕೃತೌ ಸಿದ್ದಿ ರಾಜ್ಯಭಾವ ಸಮೃದ್ಧಯಃ।<br>
ಇತ್ಥಂ ವದೇದ್ ವಿವಿಚ್ಯೈವ ತತ್ತದ್ ಭಾವದಶಾ ಫಲವಮ್ ॥೭೧॥

ಯಾವ ರಾಶಿಯ ನಾಲ್ಕರಲ್ಲಿ ಗುರುವಿರುವನೋ ಅವನ ದಶಾದಲ್ಲಿ ಬಂಗಾರ, ಪಾಲಕಿ ಆದಿಪ್ರಾಪ್ತಿ ಯಾವ ಸ್ಥಾನದಲ್ಲಿ ಲಗ್ನಾಧಿಪ ಭಾಗ್ಯಾಧಿಪ ರಾತ್ರ್ಯೇಶ ಅಥವಾ ಇತರ ಉಚ್ಚಸ್ಥ ಸದ್ ಗ್ರಹವಿದ್ದರೆ ಆ ದಶಾ ಸರ್ವಾರ್ಥಸಿದ್ದಿ ಕಾರಕವಿದೆ. ರಾಜ್ಯಾದಿ ಲಾಭವಿದೆ.

ಏಕೈಕರ್ಕ್ಷಗ್ರಹದಶಾ ಗುಣ್ಯೈಸ್ತು ಧೃತಿಭಿರ್ನಿಜೈಃ।<br>
ನಾನಾವಿಧಂ ಫಲಂ ಯ ಚ್ಛೇದಿತ ದ್ವಿಜ ಸತಾಂ ಮತವಮ್ ॥೭೩॥

ತುಂಗೆ ಪರಮ ತುಂಗೆ ಚ ತತ್ಪೂರ್ದ ವಾ ತತಃ ಪರವಮ್<br>
ಮೂಲ ತ್ರಿಕೋಣ ರಾಶೌ ವಾ ಸ್ವರಾಶೌ ಸ್ವಾಧಿಮಿತ್ರಭೆ ॥೭೪॥

ತಾಕ್ತಾಲಿಕ ಸುಹೃದ್ ರಾಶಾವುದಾಮೀನಾರಿಭೆ ತಥಾ।<br>
ಅಧಿ ಶತ್ರುಗ್ರಹೆ ನೀಚೆ ನೀಚಾದೂರ್ಧ್ವ ಪ್ರದೇಶ ಭೆ ॥೭೫॥

ನೀಚಾಧೋಪಿ ನೀಚಸ್ಯ ಪರಮಾಂಶೆ ಸ್ವವರ್ಗಕೆ।<br>
ನೀಚವರ್ಗಾರಿವರ್ಗೆ ಚ ಸಕ್ರೂರೆ ಕೋಣಕೇಂದ್ರ ಭೆ ॥೭೬॥

ಸಂಸ್ಥಿತಸ್ಯ ತಥಾ ಯುದ್ಧ ಜಿತ ಸ್ಯಾಸ್ತಂಗತಸ್ಯ ಚ।<br>
ದ್ಯಾಪದಸ್ತು ದಶಾಪಾಕಫಲಂ ನೈಜ ಗುಣಾನುಗವಮ್ ॥೭೭॥

ಪ್ರತ್ಯೇಕ ಗ್ರಹ ಅಥವಾ ರಾಶಿಯ ದಶಾ ತನ್ನ (18) ಗುಣದಿಂದ ವಶಿಸ್ನದಿಂದ ಫಲ ನೀಡುತ್ತದೆ 1) ಉಚ್ಚ 2) ಪರಮೋಚ್ಚ 3) ಅದರಿಂದ ಪೂರ್ವ ಅಥವಾ ನಂತರ (ಏರಿಕೆ ಇಳಿಕೆ ಕ್ರಮದಲ್ಲಿ -ಉಚ್ಚತ್ವ ನೀಚತ್ವ ಅನುಪಾತದಂತೆ) 4) ಮೂಲ ತ್ರಿಕೋಣ

5) ಸ್ವಭರ್ವ 6) ಅಧಿಮಿತ್ರಗ್ರಹ 7) ತಾತ್ಕಾಲಿಕ ಮಿತ್ರಗ್ರಹ 8) ಉದಾಸೀನ 9) ಶತ್ರು ರಾಶಿ 10) ಅಧಿಶತ್ರು ರಾಶಿ 11) ನೀಚ 12) ನೀಚದಿಂದ ಪೂರ್ವ ನಂತರ (ಅನುಪಾತ) 13) ಪರಮನೇಚಾಂಶ 14) ಸ್ವವರ್ಗ 15) ಶತ್ರುವರ್ಗ 16) ಕೇಂದ್ರಗತ 17) ತ್ರಿಕೋಣ 18) ಯುದ್ಧದಲ್ಲಿ ವಜೀಕ ಅಂಚೆ ಅಸ್ತಗತಗಳೊಂದಿಗೆ ಸ್ಥಾನಾನುಸಾರ ಫಲವೀಯುತ್ತವೆ.

ಅತಿತುಂಗಗತೋ ಯಃ ಸ್ಯಾದ್ಯೋವಾತಿಬಲ ಸಂಯುತಃ।
ದಶಾ ತ್ಯದೀಯಾ ಸಂಪೂರ್ಣಾ ರಾಜ್ಯಭೋಗ ಸುಖ ಪ್ರದಾ ॥೭೮॥

ತತ್ರ ಲಕ್ಷ್ಮೀವಿಲಾಸಶ್ಚ ಸರ್ವೈಶ್ವರ್ಯಸಮುನ್ನಿ ತಃ।
ಉಚ್ಚಗಸ್ಯಾಥ ಬಲಿನೋ ದಶಾ ಪೂರ್ಣಾ ಭಿಧಾ ಮತಾ ॥೭೯॥

ಪರಮೈಶ್ವರ್ಯದಾ ಕಿಂತು ಮಹಾರೋಗ ಪ್ರದಾಪಿ ಚ।
ಅತ್ಯಂತ ನೀಚಭಸ್ಥಸ್ಯ ನಿರ್ಬಲಸ್ಯ ಖಚಾರಿಣಃ ॥೮೦॥

ದಶಾರಿಕ್ತಾ ತ್ವಶುಭದಾ ರೋಗಾರ್ಥಕ್ಷತಿ ಮೃತ್ಯು ದಾ।
ಅತ್ಯುಚ್ಚನೀಚ ಮಧ್ಯಸ್ಥಗ್ರಹಸ್ಯ ತ್ವವರೋಹಿಣೆ ॥೮೧॥

ಸುರ್ಯತ್ತುಂಗಭಸಂಸ್ಥಸ್ಯ ಮಧ್ಯಮಾ ಧನದಾ ದಶಾ।
ನೀಚೋಚ್ಚಯೋದಂತೆ ರಾಲೆ ಸ್ಥಿತಸ್ಯಾರೋಹಿಣಿ ದಶಾ ॥೮೨॥

ನೀಚಶತ್ರು ನವಾಂಶಸ್ಥ ಗ್ರಹಸ್ಯ ತ್ವಧಮಾ ದಶಾ।
ನಾನಾಭಯಾತ್ತಿಂ ಸಂಕಷ್ಟ ಬಹುಭೀತಿ ಪ್ರದಾಯಿನಿ ॥೮೩॥

ಉಕ್ತಾ ದಶಾಃ ಸ್ವಪಾಕೆ ತು ನಾಮತುಲ್ಯ ಫಲಪ್ರದಃ

ಅತ್ಯುಚ್ಚ ಸ್ಥಾನಗತ ಹಾಗೂ ಬಲಿ ಗ್ರಹದ ದಶಾ ಸಂಪೂರ್ಣ ಫಲದಾಯಕ ವಾಗಿರುತ್ತದೆ. ಆ ಗ್ರಹದಶಾದಲ್ಲಿ ಲಕ್ಷ್ಮಿಮನೆ ನರ್ತಿಸುತ್ತಿರುತ್ತಾಳೆ ಸರ್ವ ವಿಧ ಐಶ್ವರ್ಯದ ಸಮೃದ್ಧಿ ಭೋಗಕಾರಕವಾಗಿರುತ್ತದೆ. ಬಲಿ ಹಾಗೂ ಉಚ್ಚಸ್ಥ ಗ್ರಹದ ದಶಾ ಪೂರ್ಣ ಸಂಜ್ಞಕವೆನ್ನಿಸಿಕೊಂಡು ಅದು ಐಶ್ವರ್ಯದಾತ್ರಯಾಗಿರುತ್ತದೆ ಹಾಗೂ ಐಶ್ವರ್ಯ ಸಮೃದ್ಧಿ ತೋರಿಸುತ್ತದೆ. ಆದರೆ ಮಹಾರೋಗ ಕಾರಣಿ ಯಾಗಿರುತ್ತದೆ. ಅತೀ ನೀಚಸ್ಥ ನಿರ್ಬಲ ಗ್ರಹದ ದಶಾ ರಿಕ್ತವಾಗಿರುತ್ತದೆ. ರೋಗ ಧನನಾಶ ಮೃತ್ಯು ಆದಿ ಅಶುಭ ಫಲದಾಯಕವಾಗಿರುತ್ತದೆ. ಅತ್ಯುಚ್ಚ ಅತೀ ನೀಚದ ಮಧ್ಯವರ್ತಿ ಗ್ರಹದ ದಶಾ ಅವರೋಹಿಣಿ ಹಾಗೂ ಮಿತ್ರ ಹಾಗೂ ಉಚ್ಚರಾಶಿ ಸ್ಥಿತ ಗ್ರಹದಶಾ ಮಧ್ಯಮ ಸಂಜ್ಞಕವಾಗಿರುತ್ತದೆ. ಈ ದಶಾ ಧನಪ್ರದವಾಗಿರುತ್ತದೆ.

ನೀಚ, ಉಚ್ಚ, ಮಧ್ಯಸ್ಥ ಗ್ರಹ ಆರೋಹಿಣಿ ದಶಾ ಆಗಿದ್ದು ನೀಚ ಶತ್ರುವರ್ಗಾಂಶಗತ ಗ್ರಹದ ದಶಾ ಅಧಮವಾಗಿರುತ್ತದೆ. ಅನೇಕ ರೋಗ ಜನ್ಯ ಪೀಡಾ ಸಂಕಟಕ್ಕೆ ಕಾರಣ ವಾಗಿರುತ್ತದೆ. ಹಾಗೂ ಭಯಕ್ಕೆ ಕಾರಣೀಭೂತವಾಗಿರುತ್ತದೆ. ಈ ಎಲ್ಲ ದಶಾಗಳು ತಮ್ಮ ಹೆಸರಿನ ಸಂಜ್ಞಕದಂತೆ ಫಲದಾಯಕವಾಗಿರುತ್ತವೆ.

ಜೀವ ಧರ್ಮೇಶ ಸಂಬಂಧೋ ಯುತಿದೃಕ್ ಕೇಂದ್ರಗೇಹಜಃ ॥೮೪॥

ದಶಾಯಾಮಪರಸ್ಯಾಪಿ ಭವೇತ್ ಸೌಭಾಗ್ಯವರ್ಧಕಃ।
ಭಾಗ್ಯವೃದ್ಧಿಕರೋ ಯಸ್ತು ನಭೋಗೋ ಜನ್ಮನಿ ಸ್ಥಿತಃ ॥೮೫॥

ವಕ್ರಿತ್ಯಾಗಾತ್ ಪರಂ ಪೂರ್ಣ ಫಲದಶ್ಚೈವ ಮಕ್ಷವಮಾನ್।
ಖಗಾನ್ ಸಂಬಂಧಯೋಗಾಭ್ಯಾಂ ಫಲದಾನ್ ವಿಬುಧಾ ಜಗುಃ ॥೮೬॥

ಕೇಂದ್ರಾದಿಗಾನಾಮೇಷಾಂ ತು ದಶಾಪಿ ಫಲದಾಸ್ಮೃತಾ।
ಪೂರ್ಣತೋ ದಲಿತ ಶ್ಚೈವಂ ಪಾದತಶ್ಚ ಕ್ರಮಾದ್ ಬುಧೈಃ ॥೮೭॥

ಭಾಗ್ಯೇಶ ಹಾಗೂ ಗುರು ಇವರ ಯೋಗ ದೃಷ್ಟಿ ಕೇಂದ್ರ ಅಥವಾ ದೇಹ ಸಂಬಂಧದಲ್ಲಿ ಯಾವುದೇ ಸಂಬಂಧ (ತ್ರಿರೇಕಾದಶಾ ನವಪಂಚಕಾದಿಯೋಗ) ಯಾವುದೇ ಬೇರೆ ಗ್ರಹದ ದಶಾದಲ್ಲಿಯೂ ಶುಭವರ್ಧಕವಾಗಿರುತ್ತದೆ. ಜನ್ಮ ಸಮಯ ಯಾವುದೇ ಗ್ರಹ ಭಾಗ್ಯವೃದ್ಧಿಕರವಾಗಿದ್ದು, ಅವು ಮಾರ್ಗಿಯಾದಾಗ ಪೂರ್ಣ ಫಲದವಾಗಿರುತ್ತವೆ. ಈ ರೀತಿ ಫಲ ದಾನದಲ್ಲಿ ಸಮರ್ಥ ಗ್ರಹದ ಯೋಗ ಹಾಗೂ ಸಂಬಂಧ ಫಲಪ್ರದವೇ. ಕೇಂದ್ರ ಪಣಫರ ಆಪೋಕ್ಲಿವಮ್ ರಾಶಿಯ ಸಂಯೋಗ ಕ್ರಮಶಃ ಪೂರ್ಣ (ಕೇಂದ್ರ) ಮಧ್ಯ(ಫಣಪರ) ಆಪೋಕ್ಲಿಮ (ಅಲ್ಪ) ರೂಪದಲ್ಲಿ ದಶಾಫಲ ತಿಳಿಯುವುದು.

ಗ್ರಹಾಃ ಶೀರ್ಷೋದಯರ್ಕ್ಷಸ್ಥಾಃ ಸ್ವದಾಯತಾದೌ ಫಲಪ್ರದಃ
ದಶಾಮಧ್ಯೇ ತು ಫಲದಾ ಉಭಯೋದ ಪರಾರಾಶಿಗಾಃ ॥೮೮॥

ದಶಾವಸಾನೇ ಸಫಲಾಃ ಪೃಷ್ಠೋದಯಭಾಗಾಸ್ತು ತೇ।
ಭುಕ್ತೌ ನಿಸರ್ಗತ ತ್ಯಾಲಘುದಾಂ ಸತ್ಫಲಂ ದಿಶೇತ್ ॥೮೯॥

ತದನ್ಯಥಾ ಸಂಸ್ಥಿತಾನಾಮಸತ್ಫಲ ಮುದಿರಿತಮ್।

ಶೀರ್ಷೋದಯ ರಾಶಿಯಲ್ಲಿ (ಸಿಂಹ, ಕನ್ಯಾ, ತುಲಾ, ವೃಶ್ಚಿಕ ಕುಂಭ) ಗ್ರಹದಶಾ ಆರಂಭದಲ್ಲಿ ಫಲದವಾದರೆ ಉಭಯೋದಯ ರಾಶಿಗಳಲ್ಲಿ (ಮಿಥುನ, ಮೀನ) ದಶಾಫಲ ಮಧ್ಯದಲ್ಲಿ ಹಾಗೂ ಪೃಷ್ಠೋದಯ ರಾಶಿಗಳಲ್ಲಿ ಫಲ (ಮೇಷ,

ವೃಷಭ, ಕಟಕ, ಧನು, ಮಕರ) ದಶಾಂತದಲ್ಲಿ ಅಶುಭ ಫಲ.

ದಶಾಧಿಪಯುತಾದ್ ರಾಶೇರ್ಯಾವದ್ ದ್ವಾದಶರಾಶಿಕಮ್ ॥೯೦॥

ರಾಶಿನಾಂ ಕ್ರಮತೋ ವೇದ್ಯಾ ದಶಾಭುಕ್ತಿಸ್ತು ಕೋವಿದೈಃ।
ತತ್ರ ಯಾ ಸ್ವಸುಹೃತ್ಸ್ವರ್ಕ್ಷಗತಾ ತಸ್ಯಾಂ ಶುಭಂ ಫಲಂ ॥೯೧॥

ತ್ರಿಕಸ್ಥಾ ಪಾಪನೀಚಾರಿ ರಾಶಿಸ್ಥ ಗ್ರಹ ಸಂಯುತಾ।
ತತ್ರಾರ್ಥ ಹಾನಿಃ ಕಲಹೋ ಮೃತಿರುಗ್‌ಭಿತಯಃ ಸ್ಮೃತಾಃ ॥೯೨॥

ಸ್ವಾಷ್ಟವರ್ಗೆ ವೃದ್ಧಿದಾನಿಃ ತದ್ರಣೆ ಭವಸ್ಯತು।
ಕ್ರಮೇಣ ಬಿಂದುಬಾಹುಲ್ಯ ಶೂನ್ಯತ್ವವಶತಃ ಸ್ಮೃತೆ ॥೯೩॥

ತತ್ವದ್ ಭಾವಸ್ಥಿತಾದ್ ರಾಶಿಸ್ತನ್ವಾದೀನಾಂ ಪ್ರಕಲ್ಪನಾತ್।
ಜಾತಕಸ್ಯ ಸುತಾದಾನಾಂ ಸುಭಾಶುಭ ಫಲಂ ದಿಶೀತ್ ॥೯೪॥

ರಾಶಿಖೇಚರಯೋರ್ಯೇ ಚ ಧಾತ್ವಾದಯ ಉದೀರಿತಾಃ।
ತಚ್ಚಯಾ ಪಚಯೌ ಜ್ಞೇಯೌ ಶುಭ ಪಾಪದ ಶಾವಶಾತ್ ॥೯೫॥

ಶುಭಾಶುಭದ್ದಿ ಷದ್ಯೋಗಾತ್ ಸದಸದ್ ಗ್ರಹಯೋಗತಃ।
ಎವಂ ಸಮಸ್ತ ಖೇಟಾನಾಂ ಸ್ವಸ್ವಭುಕ್ತಿ ಫಲಂ ದಿಶೇತ್ ॥೯೬॥

ದಶಾಧೀಶ ಯಾವ ರಾಶಿಯಲ್ಲಿರುವನೋ ಅದರಿಂದ 12ನೇ ರಾಶಿಯ ಅಂತರ್ ದಶಾ ಆಗುತ್ತದೆ. ಯಾವ ರಾಶಿ ಸ್ವಸ್ಥಾಯಿಯುಕ್ತ ಅಥವಾ ಸ್ವಮಿತ್ರ ನಿಜತೆಗೆ ಅವನ ಅಂತರ್ದಶಾದಿ ಶುಭಫಲ ಹೇಳುವುದು. ತ್ರಿಕ್ರಿಸ್ಥ ರಾಶಿಗಳ ಅಂತರದಶಾ ಅಥವಾ ಯಾವ ರಾಶಿ ಪಾಪ ನೀಚಸ್ಥ ಅಥವಾ ಶತ್ರು ಗ್ರಹದಲ್ಲಿ ಗ್ರಹಯುಕ್ತ (ಶತ್ರು) ಅದರ ಅಂತರದಶಾ ಹಾನಿಕಾರಕವಾಗಿರುತ್ತದೆ. ಅದರಲ್ಲಿ ಧನ ಕ್ಷಯ, ಕಲಹ, ರೋಗ ಭಯ ಉಂಟಾಗುತ್ತದೆ. ಯಾವ ರಾಶಿಯಲ್ಲಿ ಅಷ್ಟವರ್ಗ ಸಂಬಂಧಿ ಶುಭ ಚಿಷ್ನೆ ಅಧಿಕವಾಗಿದ್ದರೆ ಅದರಲ್ಲಿ ಶುಭ ಅಲ್ಪವಾಗಿ ಅಶುಭ ಅಧಿಕವಾಗಿದ್ದರೆ ಅದರ ಅಶುಭ ಫಲ ಅಷ್ಟಕವರ್ಗ ರಾಶಿಯ ಬಿಂದು ಬಹುತ್ವಟ್ಟಿ ವೃದ್ಧಿಯಿಂದ ವೃದ್ಧಿ ಬಿಂದು ಅಭಾವದಲ್ಲಿ ಭಾವದ ಹಾನಿ ಎಂದು ತಿಳಿಯುವುದು ಆ ಭಾವಗತ ರಾಶಿಯಿಂದ ತನ್ವಾದಿ ದ್ವಾದಶ ಭಾವಗಳ ಕಲ್ಪನೆ ಮಾಡಿ ಜಾತಕನ ಪುತ್ರಾದಿಗಳಿಗೂ ಶುಭಶುಭ ಫಲ ನಿರ್ದೆಶಿಸುವುದು. ಉದಾಹರಣೆಗೆ ಸಪ್ತಮ ಭಾವವೆ ಲಗ್ನವೆಂದು ಗ್ರಹಿಸಿ ಅದರಿಂದ ಮುಂದಿನ ಅಷ್ಟಮದಿಂದ ಸ್ತ್ರೀಧನ ವಿಚಾರ 9 ರಿಂದ ಸ್ತ್ರೀಯರು ಸಹಜ ವಿಚಾರ ಅದರಿಂದ ಸಪ್ತಮ ಸಪ್ತಮ ಲಗ್ನದಿಂದ ತಂದೆಯ ವಿಚಾರ ಮಾಡುವುದು

ಗ್ರಹ ಹಾಗೂ ರಾಶಿಗಳ ಪೂರ್ವದಲ್ಲಿ ಹೇಳಲಾಗಿದೆ. ಶುಭದ ಅಂತರದಶಾವಲ್ಲಿ ಆ ಧಾತುಗಳ ವೃದ್ಧಿ, ಪಾಪ ಅಂತರದಶಾದಲ್ಲಿ ಅದರ ಹಾನಿ ಹೇಳುವುದು. ಶುಭ ಹಾಗೂ ಪಾಪಗ್ರಹದ ಯೋಗ ಹಾಗೂ ಶುಭ ಪಾಪಗ್ರಹ(ಸ್ಥಾನ)ದ ಭೇದದಿಂದ ಎಲ್ಲ ಗ್ರಹಗಳ ಅಂತರದಶಾದ ಶುಭಾಶುಭ ಫಲ ಹೇಳುವುದು.

ದಶಾ ಅಂತರ ದಶಾದಲ್ಲಿಯೂ ಯಾವ ಸ್ಥಾನಗತವಾಗಿದೆಯೋ ಅದನ್ನೇ ಲಗ್ನವೆಂದು ಪರಿಗಣಿಸಿ ವಿಚಾರಿಸಲು ಹೇಳಿದೆ.

**ಎವಂ ಸ್ವರಾಶ ರಾಶಿನಾಂ ಪ್ರಕಲ್ಪ್ಯಾಂತರ್ದಶಾಧಿಕಮ್।**

**ಫಲಂ ವಾಚ್ಯಂ ವಿಶೇಷೇಣ ಜಾತಕಸ್ಯತು ಕೋವಿ ದೈಃ ॥೯೭॥**

ಈ ತರಹ ರಾಶಿಗಳಲ್ಲಿ ಎಲ್ಲಿ ರಾಶಿಗಳ ಅಂತರದಶಾ ಪ್ರತ್ಯಂತರದಿಂದ ಕಲ್ಪಿಸಿ ಫಲಾದೇಶ ಮಾಡುವುದು.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಚರಾದಿ ರಾಶಿ ದಶಾ ಫಲಾಧ್ಯಾಯಃ ಸಮಾಪ್ತ

## ೫೨ನೇ ಅಧ್ಯಾಯ

# ಅಥ ಅಂತರದಶಾ ಸಾಧನಾಧ್ಯಾಯ

## ವಂಶೋತ್ತರಿ ಪ್ರಭೃತಿ ದಶಾಗಳಲ್ಲಿ ಅಂತರ ದಶಾ।

ದಶಾ ದಶಾಬ್ದಾ ಗುಣಿತಾ ವಿಹುತ್ ಪರವಮಾಯುಷಾ
ಲಬ್ಧಮಬ್ದಾದಿಕಂ ವಿಜ್ಞೈರ್ವೇದ್ಯಮಂತರ್ದಶೋದ್‌ಭವಮ್ ॥೧॥

ಯಾವುದೇ ಗ್ರಹದ ಮಹಾದಶಾದಲ್ಲಿ ಅದರಿಂದ ಉಳಿದ ಗ್ರಹಗಳ ಅಂತರ ದಶಾಜ್ಞಾನ ಅತೀ ಅವಶ್ಯಕವಾಗಿದೆ. ಇಲ್ಲಿ ದಶಾಗಾಥ ಹಾಗೂ ಯಾವ ಗ್ರಹದ ಅಂತರದಶಾ ತೆಗೆಯಬೇಕಾಗಿದೆಯೋ ಆ ಗ್ರಹದ ಮಹಾದಶಾ ವರ್ಷಗಳಿಂದ ಗುಣಿಸಿ ಗುಣಫಲ ತೆಗೆದು ಅದರಲ್ಲಿ ಪರವಾಗಿಯು (ವಿಂಶೋತ್ತರಿ 120 ವರ್ಷ ಈ ರೀತಿ) ವರ್ಷದಿಂದ ಭಾಗಿಸಿ ಲಬ್ಧ ವರ್ಷಾದಿ ಅಂತರದಶಾವಾಗುತ್ತದೆ. ಅದರಂತೆ ಪ್ರತ್ಯಂತರ ದಶಾ ಮಾನವನ್ನು ಗ್ರಹಗಳ ದಶಾವರ್ಷಗಳಿಂದ ಗುಣಿಸಿ ನಿವೀವುಗಳ ದಶಾ ಯೋಗದಿಂದ ಭಾಗ ಮಾಡಿದರೆ ಬೇರೆ ಬೇರೆ ಅಂತರ ಬರುತ್ತದೆ.

ಉದಾಹರಣೆ : ಸೂರ್ಯನ ಮಹಾದಶಾವಲ್ಲಿ ಸೂರ್ಯನ ಅಂತರ ವಶಾ ತೆಗೆಯಲು ಸೂರ್ಯ ಮಹಾದಶಾ ವರ್ಷ 6 ಆದರಿಂದ 6 × 6- ಗುಣೆ = 36 ÷ 120 ಭಾಗ ಹೋಗದೆಯಿರುವುದರಿಂದ, 12 ಗುಣಿಸಿ 423 ÷ 120 ಮಾಡಿದಾಗ 0.3 ತಿಂಗಳದಾಯಿತು. ಉಳಿದ 72 (ಶೇಷ)ಕ್ಕೆ 30 ರಿಂದ ಗುಣಿಸಿ 2160ಕ್ಕೆ ÷ 120ರಿಂದ ಭಾಗಿಸಿದಾಗ 18 ದಿವಸ ಅಂದರೆ ಸೂರ್ಯ ಮಹಾದಶಾದಲ್ಲಿ ಸೂರ್ಯಾಂತರ ದಶಾ 0.3 18 ದಿವಸವಾದರೆ ಅದೇ ಸೂರ್ಯನಲ್ಲಿ ಚಂದ್ರದಶಾ ತೆಗೆಯಿರಿ

$$\frac{6 \times 10}{120} = \frac{60}{120} = \frac{1}{2}$$

ವರ್ಷವಾಗುತ್ತದೆ. ಅಂದರೆ ಸೂರ್ಯ ದಶಾದಲ್ಲಿ ಚಂದ್ರನ ಅಂತರ ವಶಾ 1/2 ವರ್ಷ= 0 ವ-6 ತಿಂ- 0 ದಿವಸ- ಇದೇ ರೀತಿಯಲ್ಲಿ ಗ್ರಹಗಳ ಅಂತರ ಪಶಾ ತೆಗೆಯುವುದು. (ಪ್ರತ್ಯೇಕ ಚಾರ್ಟ್ ಕೊಡಲಾಗಿದೆ) ಇಲ್ಲಿ ಕ್ರಮ ಮಾತ್ರ ಆ ದಶಾ ಪದ್ಧತಿಯಂತೆ ಗುಣಿಸುವುದು (ವಿಂಶೋತ್ತರಿಯಲ್ಲಿ ರವಿ, ಚಂದ್ರ, ಮಂಗಳ, ರಾಹು, ಗುರು, ಶನಿ, ಬುಧ, ಕೇತು ಹಾಗೂ ಶುಕ್ರ).

ಆದ್ಯಾ ದಶಾಪತೆರಂತರ್ದಶಾಂನ್ಯೆಷಾಂ ತತಃ ಕ್ರಮಾತ್।
ಪ್ರತ್ಯಂತರ ದಶಾ ಮದ್ಯೆಪ್ಯೆವಮೇವ ಕ್ರಮೋಮತಃ ॥೨॥

ಮೇಲೆ ತಿಳಿಸಿದಂತೆ ಯಾವುದೇ ಗ್ರಹದ ಮಹಾದಶದಲ್ಲಿ ಅಂತರದಶಾ ಮೊದಲನೆಯದು ಅದರದೆ ಆಗಿದ್ದು ನಂತರ ಆಯಾ ದಶಾದ ಅದರ ಮುಂದಿನ ಗ್ರಹವಾಗಿರುತ್ತದೆ. ಇದೇ ಪ್ರಕಾರ ಪ್ರತ್ಯಂತರ ದಶಾದಲ್ಲಿಯೂ ಸರ್ವಪ್ರಥಮ ಅದೆ ಗ್ರಹದ ಪ್ರತ್ಯಂತರವಾಗಿ ಮುಂದಿನ ಕ್ರಮ ಪುನಃ ಆ ಆ ದಶಾದ ಗ್ರಹ ಕ್ರಮದಂತಿರುತ್ತದೆ. (ಪಂಶಿಷ್ಪದಲ್ಲಿ ದಶಾ ಅಂತರದಶಾ ವಿದಶಾ ಚಾರ್ಟ್ ಕೊಡಲಾಗಿದೆ)

## ಚರಾದಿ ದಶಾಗಳಲ್ಲಿ ಗ್ರಹ ಅಂತರದಶಾ

ದಶಾವಿಭಕ್ತಾಃ ನವಭಿರ್ಭುಕ್ತಿಃ ಸ್ಯಾದ್ ದ್ಯುಸದಾಂ ಸಮ।
ಪ್ರಾಗ್ ದಶೋಶಾಂತರ ದಶಾ ತತಃ ಕೇಂದ್ರದಿಗಾಮಿನಾಮ್ ॥೩॥

ಪ್ರತ್ಯಂತರ ದಶಾದ್ಯಂ ಚ ವೇದ್ಯಮೇ ವಂ ಕ್ರಮಾದ್ ಬುಧೈಃ।
ಬಲಾಬಲ ವಿವೇಕೆನ ಫಲಂ ವಾಚ್ಯಂ ವಿಪಶ್ಚಿತಾ ॥೪॥

ಗ್ರಹಗಳ ಚರದಶಾಗಳಲ್ಲಿ ದಶಮಾನವನ್ನು 9ರಿಂದ ಭಾಗಿಸಿ ಯಾವ ಲಬ್ಧ ಬರುತ್ತದೆಯೇ ಅದೆ ಎಲ್ಲ ಗ್ರಹಗಳ ಒಂದೇ ಆಗಿ ಅಂತರ ದಶಾಮಾನ ಪರಿಗಣಸುವುದು. ಪ್ರಥಮತಃ ದಶಾಪತಿಯ ಅಂತರದಶಾ ನಂತರ ಆಪೋಕ್ಲಿಮ್‌ದಲ್ಲಿ ಗ್ರಹದ ಅಂತರ ದಶಾಪರದಿಂದ ಪ್ರತ್ಯಂತರ ಆದಿಯಾಗಿರುತ್ತದೆ.

## ರಾಶಿಗಳ ಅಂತರ ದಶಾನಯನ

ರಾಶಿದಾಯಮಿತೆ ಭಾಗಾಃ ಸಮಾ ದ್ವಾದಶ ಭುಕ್ತಯಃ।
ಭಾನಾ ಮಂತರ್ದಶಾಭ್ಯಾಸ್ತು ಜ್ಞೇಯಂ ಪ್ರತ್ಯಂತರಾದಿಕಮ್ ॥೫॥

ರಾಶಿಯ ದಶಾವರ್ಷಮಾನವನ್ನು 12ರಿಂದ ಭಾಗಿಸಲು (ದಶಾವರ್ಷ ಸಂಖ್ಯೆ ತುಲ್ಯಮಾಸ) ಪ್ರತ್ಯೇಕ ರಾಶಿಯ ಅಂತರದಶಾ ಆಗುತ್ತದೆ. ಇದೇ ರೀತಿ ರಾಶಿಗಳ ಅಂತರದಶಾದ ಮೇಲಿಂದ ಪ್ರತ್ಯಂತರ ದಶಾದ ಜ್ಞಾನ ಮಾಡಿಕೊಳ್ಳುವುದು.

## ರಾಶಿಯ ಅಂತರದಶಾದಲ್ಲಿ ಗಣನ ಕ್ರಮ

ದಶಾಶ್ರಯರ್ಕ್ಷತಸ್ತಸ್ತ ಮಯೋಸ್ತ ಬಲಿನಃ ಕ್ರಮಾದ್।
ವಿಷಮೇ ಗಣಯೇದೆವ ಮುಕ್ರಮಾತ್ತು ಸಮೇ ಬುಧಃ ॥೬॥

ದಶ್ರಾಶ್ರಯ ರಾಶಿ ಹಾಗೂ ಅದರ ಸಪ್ತಮದಲ್ಲಿಯಾವದು ಬಲಿಷ್ಟವಾಗಿದೆಯೋ ಅದರಿಂದ ಆರಂಭಿಸಿ ವಿಷಮವಾಗಿದ್ದರೆ ಕ್ರಮದಂತೆ ಸಮ ವಿಪರೀತದಂತೆ ಅಂತರ್ ದಶಾಕ್ಕೆ ಗಣನೆ ಮಾಡುವುದು ಮೇಷತತ್ ಮ ತುಲಾ

ಮೇಷ ಬಲಿಷ್ಠವಾಗಿದ್ದರೆ ಅದರಿಂದಲೆ ಆರಂಭಿಸಿ ಕ್ರಮದಿಂದ ದ್ವಾಧಶರಾಗಿ ಅಂತರ್‌ದಶಾವಾಗುತ್ತದೆ

## ಚರಾದಿ ಅಂತರ ದಶಾ ವಿಶೇಷ

ಅಥವ ಚರ್ಕ್ಷಪರಂ ಕಿಂಚಿದ್ ವಿಶೇಷಂ ಶಶೃಣುತದ್ ದ್ವಿಜ।
ಚರೆ ಪ್ರಾಗ್‌ವದ್ ವಿಧಿಃ ಪಷ್ಠ ಪಷ್ಠೌದ್ಯಸ್ತು ಸ್ಥಿತೆ ಸ್ಮೃತಃ ॥೭॥

ಲಗ್ನಪಂಚಮ ಧರ್ಮಾಣಾಂ ಕೇಂದ್ರತೋ ದ್ವಿಸ್ವಭಾವಭೆ।
ಚರಸ್ಥಿರ ದ್ವಿಸ್ವಭೆಷು ವಿಷಮೇಷು ಕ್ರಮಾಂಮುನೆ ॥೮॥

ವೆದಥಂ ಸಮೇಷು ತೆಷ್ವೆವ ವ್ಯತ್ಸು ಮಾದಿತಿ ಸಂಪತವರ್।
ಏವಂ ದಶಾಶ್ರಯೇ ರಾಶಿಃ ಪಾಕರಾಶಿರ್ನಿಗಧ್ಯತೆ ॥೯॥

ತಮೆವಾದ್ಯೆತು ಪರ್ಯಾಯೇ ಭೊಗರಾಶಿ ಬುಧಾ ಜಗುಃ।
ಪರ್ಯಾಯೇ ಪ್ರಥಮಾದ್ಯತ್ರ ಪಾಕೋ ಯಾವನ್ಮಿತೋ ಭವೆತ್ ॥೧೦।

ತತ್ತಸ್ತಾವನ್ಮಿತಂ ಭೋಗಂ ತತ್ರ ವಿಜ್ಞಃ ಪ್ರಕಲ್ಪಯೇತ್।
ಚರಸ್ಥಿರ ತ್ರಿಕೋಣಾ ಹ್ಯದಶಾಸು ದ್ವಿಜಸತ್ತಮ ॥೧೧॥

ಏವಂ ಭುಧ್ಯೆಃ ಕಲ್ಪನೀ ಯಔ ಪಾಶ ಭೋಗೌ ವಿಶೇಷತಃ।
ಪಾಪಾನ್ವಿತೌ ಪಾಕಭೋಗಾ ವಾಧಿವ್ಯಯಾದಿ ಪ್ರದಾಯಕೌ ॥೧೨॥

ಹೇ ಮುನಿಯೇ! ಈಗ ನಾನು ಚರಾದಿ ರಾಶಿಯ ಅಂತರದಶಾ ಕ್ರಮದಲ್ಲಿ ವಿಶೇಷತೆ ಹೇಳುತ್ತೇನೆ. ದಶಾಕ್ರಮ ಚರ ರಾಶಿಯಲ್ಲಿದ್ದರೆ ಪ್ರಾಗ್‌ವಿತ್ ಕ್ರಮೇತ್ರಮ ದಿಂದ (ಹಿಂದೆ ಹೇಳಿದಂತೆ) ರಾಶಿಯ ಅಂತರದಶಾ ಆಗುತ್ತದೆ. ಸ್ಥಿರರಾಶಿಯಾಗಿದ್ದರೆ ಅದರಿಂದ ಆರಂಭ ಮಾಡಿ ಪಷ್ಠಪಷ್ಠ ರಾಶಿಕ್ರಮದಂತೆ ಅಂತರದಶಾ ತಿಳಿಯಿವುದು. ದ್ವಿಸ್ವಭಾವರಾಶಿ ದಶಾಶಯ ರಾಶಿಯಾದರೆ ಮೊದಲು ಆ ರಾಶಿಯಿಂದ ನಂತರ ಅದರ ಕೇಂದ್ರರಾಶಿ ನಂತರ ಪಂಚಮದ ಕೇಂದ್ರ ರಾಶಿ ನಂತರ ನವಮದ ಕೇಂದ್ರ ರಾಶಿಗಳ ಅಂತದಶಾ ಗುಣಿಸುವುದು. ಚರ, ಸ್ಥಿರ ದ್ವಿಸ್ವಭಾವ, ಈ ಮೂರರಲ್ಲಿ ವಿಷಮ ದಶಾಶ್ರಯವಾಗಿದ್ದರೆ ಕ್ರಮದಿಂದ ಸಮವಾಗಿದ್ದರೆ ಉತ್ಕ್ರಮದಿಂದ ರಾಶಿ ಯನ್ನ ಗ್ರಹಣ ಮಾಡುವುದು. ದಶಾಶ್ರಯ ರಾಶಿಯನ್ನು 'ಪಾಕ' ರಾಶಿಯೆಂದೂ ಹಾಗೂ ಪರ್ಯಾಯದಲ್ಲಿ ಭೋಗರಾಶಿಯಂದು ಕರೆಯುವರು. ದಶಾ ಪ್ರದ ರಾಶಿ ಸಮರಾಶಿಯಾಗಿದ್ದರೆ ಅದರಿಂದ ದಶಾಕ್ರಮ ರಾಶಿ ಎಷ್ಟು ದೂರವಿರುವುದೋ ಅಷ್ಟು ಮುಂದಿನ ರಾಶಿಗೆ ಭೋಗ ಸಾಜ್ಞಕ ರಾಶಿಯೆನ್ನುವರು. ಸಾಕ ಹಾಗೂ ಭೋಗದ ಕಲ್ಪನೆ ಚರಸ್ಥಿರ ಹಾಗೂ ತ್ರಿಕೋನ ದಶಾದಲ್ಲಿಯೂ ಪರಿಗಣಿಸುತ್ತಾರೆ.

ಪಾಕ-ಭೋಗ ಸಪಾಪ ರಾಶಿಯಾಗಿದ್ದರೆ (ಅರ್ಧಾಧ್ಯಾಯ) ಆಧಿವ್ಯಾಧಿ ಎರಡು ಸಂಭವ ಶುಭಗ್ರಹ ಯುಕ್ತವಾಗಿದ್ದರೆ ಶುಭಫಲ.

ಉದಾಹರಣೆ - ಮೇಷ ಲಗ್ನವೆಂದಾದರೆ ಚರದಶಾದರಿತೆ ಅಂತರ ತೆಗೆಯ ಬೇಕಾದವರು ಮೇಷ ಚರ ಹಾಗೂ ವಿಷಮವೂ ಇದೆ. ಹೀಗಾಗಿ ಮೇಲೆ ತಿಳಿಸಿದ ನಿಯಮಾನುಸಾರ ಮೇಷದಿಂದ ಆರಂಭ ಮಾಡಿ ಕ್ರಮಶಃ ಎಲ್ಲ ಹನ್ನೆರಡು ರಾಶಿಯ ಅಂತರದಶಾ ಆಗುತ್ತದೆ ಮೇಷ ದಶಾವರ್ಷಮಾನ ಅಂದರೆ ಮೇಷದ ಸ್ವಾಮಿ ಮಂಗಳ, ಮಿಥುನದಲ್ಲಿದ್ದು ಅದು ವಿಷಮವಾಗಿದ್ದು ಎಣಿಸಿದಾಗ 2 ಆಗುವುದರಿಂದ 2 ವರ್ಷ ಅಂತರದಶಾ ನಿಯಮದಂತೆ $2 \div 12 = 2$ ಮಾಸವಾಗುತ್ತದೆ.

## ಇಲ್ಲಿ ರಾಶಿ ಅಂತರದಶಾ

ಮೇಷ-2 ಮಾಸ ವೃಷಭ 2 ಮಾಸ ಮಿಥುನ 2, ಕರ್ಕ-2, ಮಾಸ ಸಿಂಹ-2 ಮಾಸ, ಕನ್ಯಾ-2 ಮಾಸ, ತುಲಾ-2 ಮಾಸ, ವೃಶ್ಚಿಕ-2 ಮಾಸ, ಧನುಸ್ಸು-2 ಮಾಸ, ಮಕರ, ಕುಂಭ, ಮೀನ-2 ಮಾಸಗಳಾಗುವವು.

ಇಲ್ಲಿ ಪ್ರಥಮ ದಶಾಶ್ರಯ ರಾಶಿ ಮೇಷ ಪಾಕ ರಾಶಿಯಾಯಿತು- ಮೇಷದಲ್ಲಿ ಸೂರ್ಯನಿದ್ದಾನೆ. ಆದ ಪಾಪಗ್ರಹವಾದ್ದರಿಂದ ಇದರ ಅಂತರ ದಶಾ 2 ಮಾಸವೇ ಶಾರೀರಿಕ ಪೀಡೆ. ಮನೋವ್ಯಥಾ (ಈ ಫಲ ಮನೋವ್ಯಥಾ ಪ್ರಾರಂಭಕ್ಕೆ ಅಲ್ಲಿ ಮುಂದೆ ತಿರುಗಿ ಬಂದಾಗ 24 ವರ್ಷ ದಶಾಫಲ (ಈಗ 12 ವರ್ಷ) ಮೃತ್ಯು ಶಾರೀರಿಕ ಪೀಡೆಯವಿನಃ ಬೇರಾವುದನ್ನು ನೋಡಕೂಡದು.

ಲಗ್ನ ಕುಂಡಲಿ ಈ ರೀತಿಯಿದ್ದು

2 ಶ
12 ಬು
3 ಮ ಶು
1 ರವಿ
11
4 ಕೆ
10 ರಾ. ಚ
7
5
9 ಗುರು
6
8

| ಬು | ರ | ಶ | ಮ ಶು |
|---|---|---|---|
| | | | ಕೆ |
| ರಾ ಚ | | | |
| ಗು | | | |

ಈ ರೀತಿಯಿದ್ದು - 2ನೇ ದಶಾ ವರ್ಷದಲ್ಲಿ 1 ಅಂದರೆ ವೃಷಭದಲ್ಲಿ ಪ್ರಥಮ ವೃಷಭವಾಗಿ ಪುನಃ ಷಷ್ಠಷಷ್ಠ ಕ್ರಮದಿಂದ ತುಲಾ, ಮೀನ, ಸಿಂಹ, ಮಕರ, ಮಿಥುನ, ವೃಶ್ಚಿಕ, ಮೇಷ, ಕನ್ಯಾ, ಕುಂಭ, ಕರ್ಕ, ಧನು – ಈ ರಾಶಿಗಳ ಅಂತರದಶಾ ಆಗುತ್ತದೆ.

ಎರಡನೆ ಪರ್ಯಾಯದಲ್ಲಿ ವೃಷಭದಲ್ಲಿ ಶನಿ ಅತೀ ಸಾಮಾನ್ಯ ಶಾರೀರಿಕ ತೊಂದರೆ, ವೃಶಭ, ಮಿಥುನದಲ್ಲಿ ಶನಿ, ಮಂಗಳರಿರುವುದರಿಂದ ಅಶುಭ-ಕರ್ಕ ಮಿತ್ರಮಣದಿಂದ ನೋಡುವುದು.

## ಪಿಂಡಾದಿ ದಶಾದಲ್ಲಿ ಅಂತರ ದಶಾ

ನಿಸರ್ಗಪಿಂಡಾಂಶ ದಶಾಮಧ್ಯೆ ಭುಕ್ತಿವಿಧಿಂ ಭ್ರುವೆ ।
ಪೂರ್ಣ ದಶೇಶಸ್ತದ್ಯುಕ್ತಸ್ತದ್ದಲಿಂ ಯಚ್ಛತಿ ಗ್ರಹಃ ॥೧೩॥

ತ್ರಿಭಾಗಂ ಕೋಣಗಸ್ತುರ್ಯಭಾಗಂ ವಾಹನರಂಧ್ರಗಃ।
ಮದಗಸ್ತುಂ ಸಪ್ತಮಾಂಶ ಮನೇಕೆಷು ಬಲಾನ್ವಿತಃ ॥೧೪।

ಗ್ರಹಶ್ಚೈವಂ ಲಗ್ನಾಯುತಾಃ ಪಾಪಕಾಸ್ತತ್ರ ಸಂಸ್ಥಿತಾಃ
ಅಂಶಾಃ ಸವರ್ಣಾತಾಶ್ಛಿಧವರ್ಜಿತಾಸ್ತಂ ತದಂಶತಃ ॥೧೫॥

ದಶಾಬ್ದಾ ಗುಣಿತಾ ಭಾಗಯಿತಭಿರ್ವಿಹುತಾಸ್ತದಾ।
ಜಾಯತೆ ತ್ವಂತರ ದಶಾ ತತಃ ಪ್ರತ್ಯಂತರಾದಿಕಮ್ ॥೧೬॥

ಈಗ ನಿಸರ್ಗ ಪಿಂಡ ಅಂಶದಶಾರಾಶಿ ಅಂತರರ್ದಶಾ ಸಾಧನ ಹೇಳುತ್ತೇನೆ. ದಶೇಶ ಪೂರ್ಣ ಭಾಗ (1) ಅವನ ಸಹವಾಸಿ ಗ್ರಹ ($^1/_2$) ಅವನಿಂದ ತ್ರಿಕೋಣಸ್ಥ ತ್ರಿಭಾಗ ($^1/_3$) ಅವನಿಂದ ವಾಹನ (ರಂಧ್ರ) 4.8ರಲ್ಲಿ ಸ್ಥಿತಿ ಗ್ರಹ $^1/_4$ ಹಾಗೂ ಸಪ್ತಮ ಸ್ಥಿತಗ್ರಹ ($^1/_7$) ದಶಾದ ಪಾಚಕವಾಗುತ್ತದೆ. ಈ ಪ್ರಕಾರ ಲಗ್ನ ಸಹಿತ ಎಂಬ ಗ್ರಹಗಳು ತಮ್ಮ ತಮ್ಮ ಸ್ಥಾನಗಳಿಂದ ಪಾಚಕವಾಗುತ್ತವೆ. ಒಂದೆ ಸ್ಥಾನದಲ್ಲಿ ಅನೇಕ ಗ್ರಹವಿದ್ದರೆ ಬಲಿಷ್ಠ ಗ್ರಹವೆ ಪಾಚಕವಾಗುತ್ತದೆ. ಗ್ರಹಗಳ ದಶಾದಲ್ಲಿ ಪ್ರಾಪ್ತ ಪಾಚಕಗಳ ಅಂಶ ಸವರ್ಣನ ಮಾಡಿ ಛೆದಬಿಟ್ಟು ಬಿಡುವುದು ಪುನಃ ಪ್ರಾಪ್ತ ಅಂಶದಿಂದ ಪ್ರಥಕ್ ಪ್ರಥಕ್ ದಶಾಕ್ಕೆ ಗುಣಿಸಿ ಅಂಶಯೋಗದಿಂದ ಭಾಗಿಸಲು ಲಬ್ದ ವರ್ಷಾದಿ ಅಂತರ ದಶಾಮಾನವಾಗುತ್ತದೆ.

ವಿಶೇಷ ಎಂಟು ಗ್ರಹಗಳ ದಶಾವರ್ಷ, ನಿಸರ್ಗದಶಾ, ಪಿಂಡಾಂಶ ದಶಾದಿಗಳ ವಿವರಕ್ಕೆ ಬೃಹತ್ ಜಾತಕ ವಿಮಲ ಟೀಕಾ ನೋಡಿರಿ.

ಇತಿ ಪರಾಶರ ಹೋರಾಶಾಸ್ತ್ರೇಂತರರ್ದಶಾ ಸಾಧ್ಯನಾಧ್ಯಾಯಂ ಸಮಾಪ್ತಃ

# ಅಥ ರವಿದಶಾಂತರರ್ದಶಾಧ್ಯಾಯಃ

## ಸೂರ್ಯಯದಾ ದಶಾದಲ್ಲಿ

## ವಿಂಶೋತ್ತರಿ ಸೂರ್ಯಂತರದಶಾ ಫಲ.

### ಪರಾಶರ ಉವಾಚ:

ಸ್ವರ್ಕ್ಷೆ ಸ್ವೋಚ್ಚೆಗತಃ ಸೂರ್ಯಃ ಕೇಂದ್ರಲಾಭ ತ್ರಿಕೋಣಯೋಃ।
ಸ್ವದಾಯೇ ಚಾತ್ಮಾಭುಕ್ತೌ ಚ ಧನ ಧಾನ್ಯಾದಿ ಲಾಭಕೃತ ॥೧॥

ನೀಚಾದಾವಶುಘಭೆ ಭೇ ತು ವಿಪರೀತ ಫಲ ಪ್ರದಃ।
ದ್ವಿತೀಯದ್ಯೂನಪೆ ತಸ್ಮಿನ್ನಪಮೃತ್ಯುಭಯಂ ದಿಶೇತ್ ॥೨॥

ತದ್ದೋಶ ಪರಿಹಾರಾರ್ಥ ಮೃತ್ಯುಂಜಯಂ ಚರೇತ್।
ಸೂರ್ಯ ಪ್ರೀತಿಕರಿಂ ಶಾಂತಿಂ ಕುರ್ಯಾದಾರೋಗ್ಯ ಸಿದ್ದಯೇ ॥೩॥

### ಪರಾಶರರು ಹೇಳಿದರು–

ಹೇ ಮೈತ್ರೆಯೇನೆ- ಸೂರ್ಯ ತನ್ನ ಉಚ್ಚ ರಾಶಿ (ಮೇಷ) ಕೇಂದ್ರ ಲಾಭಸ್ಥಾನ ಅಥವಾ ತ್ರಿಕೋಣದಲ್ಲಿದ್ದರೆ ತನ್ನ ದಶಾ ಹಾಗೂ ತನ್ನ ಅಂತರ ದಶಾದಲ್ಲಿ ಧನ ಧಾನ್ಯಾದಿಗಳಿಂದ ಲಾಭಕಾರಿಯಾಗುವನು. ನೀಚಾದಿ ಅಶುಭ ರಾಶಿಸ್ಥನಾಗಿದ್ದರೆ ವಿಪರೀತ ಫಲ (ಅಶುಭ) ಸೂರ್ಯ ದ್ವಿತೀಯೇ ಸಪ್ತಮೇಶ (ಮಾರಕೇಶ)ನಾಗಿದ್ದರೆ ಅಪಮೃತ್ಯುವಿನ ಭಯ ಹೇಳುವುದು. ಆರೋಗ್ಯದಿ ಸಲುವಾಗಿ ಮೃತ್ಯುಂಜಯ ಜಪ ಸೂರ್ಯರಾಧನೆ, ಸೂರ್ಯ ಅಥವಾ ಶೀರ್ಷಾದಿ ಪಠಣ ಉತ್ತಮ.

## ಚಂದ್ರಾಂತರ್ದಶಾ ಫಲ

ಸೂರ್ಯಸ್ಯಾಂತರ್ಗತೆ ಚಂದ್ರೆ ಲಗ್ನಾತ್ ಕೇಂದ್ರ ತ್ರಿಕೋಣಕೆ।
ವಿವಾಹಃ ಶುಭಕಾರ್ಯ ಚ ಸಮೃದ್ಧಿರ್ಧನ ಧಾನ್ಯಯೋಃ ॥೪॥

ಗೃಹಕ್ಷೇತ್ರಭಿವೃದ್ಧಿಶ್ಚ ಪಶುವಾಹನ ಸಂಪದಃ।
ತುಂಗೆ ವಾ ಸ್ವರ್ಕ್ಷಗೆ ವಾಪಿ ದಾರಾಸೌಖ್ಯಂ ಧನಾಗಮಃ ॥೫॥

ಪುತ್ರಲಾಭಸುಖಃ ಚೈವ ಸೌಖ್ಯಂ ರಾಜಸಮಾಗಮಃ।
ಮಹಾರಾಜ ಪ್ರಸಾದೇನಾಭೀಷ್ಟಸಿದ್ಧಿಃ ಸುಖಾವಹಾ ॥೬॥

ಕ್ಷೀಣೇ ವಾ ಪಾಪ ಸಂಯುಕ್ತೆ ದಾರಾ ಪುತ್ರಾದಿ ಪೀಡನಮ್।
ವೈಷಮ್ಯಂ ಜನಸಂವಾದಂ ಭೃತ್ಯವರ್ಗವಿನಾಶನಮ್ ॥೭॥

ವಿರೋಧಂ ರಾಜಕಲಹಂ ಧನಧಾನ್ಯಪಶುಕ್ಷಯಂ।
ಷಷ್ಟಾಷ್ಟಮೆ ವ್ಯಯೋ ಚಂದ್ರೆ ಜಲಭೀತಿಂ ಮನೋರುಜಂ ॥೮॥

ಬಂಧನಂ ರೋಗ ಪೀಡಾಂ ಚ ಸ್ಥಾನವಿಚ್ಯುತಿಕಾರಕಮ್।
ದುಃಸ್ಥಾನಂ ಚಾಪಿ ಚಿತ್ತೇನ ದಾಯಾದಜನ ವಿಗ್ರಹಮ್ ॥೯॥

ವದೇದತಿ ಕುತ್ಸಿ, ತಾನ್ನಂ ಚೌರಾದಿನೃಪ ಪೀಡನಂ।
ಮೂತ್ರಕೃಚ್ಛಾದಿ ರೋಗಂ ಚ ದೇಹ ಪೀಡಾಂ ಚ ನಿರ್ದಿಶೇತ್ ॥೧೦।

ಚಂದ್ರನು ಲಗ್ನದಿಂದ ಕೇಂದ್ರ ಅಥವಾ ತ್ರಿಕೋಣದಲ್ಲಿದ್ದು ಸೂರ್ಯ ಮಹಾ ದಶಾದಲ್ಲಿ ಚಂದ್ರದಶಾ (ಅಂತರ) ವಿವಾಹಾದಿ ಶುಭಕಾರ್ಯಕಾರಕ ಧನಧಾನ್ಯ ಸಮೃದ್ಧಿ ಮನೆ, ಭೂಮಿ, ಪಶು, ವಾಹನ ಹಾಗೂ ಅನ್ನ ಸಂಪತ್ತಿನ ವೃದ್ಧಿಕಾರಕ, ಅದೇ ಚಂದ್ರ ಉಚ್ಚ ಅಥವಾ ಸ್ವಕ್ಷೇತ್ರದಲ್ಲಿದ್ದರೆ ಸ್ತ್ರಿಸುಖ, ಧನಪ್ರಾಪ್ತಿ, ಪುತ್ರಸುಖ, ರಾಜ ಸಮ್ಮಾನ ಹಾಗೂ ರಾಜ ಪ್ರಸಾದ ಅಭಿಷ್ಟಸಿದ್ಧಿ ಚಂದ್ರ ಕ್ಷೀಣ, ಪಾಪಯುಕ್ತ ನಾಗಿದ್ದರೆ ಸ್ತ್ರೀಪುತ್ರ ಪೀಡೆ ಅನುಚಿತ ಸಂವಾದ ನೌಕರಿಯನ್ನು ಕಳೆದುಕೊಳ್ಳುವುದು, ಜನವಿರೋಧ ರಾಜನ ಜತೆಗೆ ಕಲಹ ಧನಧಾನ್ಯ ಪಶು ವಿನಾಶ ಚಂದ್ರ ತ್ರಿಕಸ್ಥ ನಾಗಿದ್ದರೆ ಜಲಭಯ, ಮನೋವ್ಯಥಾ ಬಂಧನ ರೋಗ ಪೀಡಾ ಸ್ಥಾನ ಭ್ರಂಶ್ ದಾಯಾದಿಗಳೊಡನೆ ಕಲಹ, ಕದನ್ನ ಭೋಜನ, ಕಳ್ಳರು ರಾಜರಿಂದ ಪೀಡೆ, ಮಾತೃಕೃಚ್ಛವಾ ರೋಗ ಪ್ರಕೋಪ, ದೇಹ ವ್ಯಥಾ ನಿರ್ದೇಶನ ಮಾಡುವುದು.

ದಾಯೋಶಾಲ್ಲಾಭಭಾಗ್ಯೆ ಚ ಕೇಂದ್ರೆ ವಾ ಶುಭ ಸಂಯುತೆ।
ಭೋಗಭಾಗ್ಯಾದಿ ಸಂತೋಷ ದಾರಾಪುತ್ರಾದಿ ವರ್ಧನಮ್ ॥೧೧॥

ರಾಜ್ಯಪ್ರಾಪ್ತಿಂ ಮಹಸೌಖ್ಯಂ ಸ್ಥಾನ ಪ್ರಾಪ್ತಿಂ ಚ ಶಾಶ್ವತೀಮ್।
ವಿವಾಹಂ ಯಜ್ಞದಿಂ ಕ್ಷಾಂ ಚ ಸುಲದರಾಂಬರ ಭೂಷಣಮ್ ॥೧೨॥

ವಾಹನಂ ಪುತ್ರ ಪೌತ್ರಾದಿ ಲಭತೆ ಸುಖವರ್ಧನಮ್।

ದಶೇಶನಿಂದ 9-11 ಹಾಗೂ 1-4-7-10 ಸ್ಥಾನ ಶುಭಗ್ರಹಯುಕ್ತೆ ಚಂದ್ರನ

ಅಂತರದಶಾದಲ್ಲಿ ಐಶ್ವರ್ಯ ಭಾಗ್ಯಾದಿವೃದ್ಧಿ ಸ್ತ್ರೀ ಪುತ್ರಾದಿಸುಖ ರಾಜ್ಯಪ್ರಾಪ್ತಿ ಮಹಾಸುಖ ಸುಸ್ಥಾನ ಲಾಭ ವಿವಾಹ ಉಪನಯನ ಸುಂದರ ವಸ್ತ್ರ ಆಭೂಷಣ ವಾಹನ ಪುತ್ರಪೌತ್ರಾದಿ ಸುಖದ ಅಭಿವೃದ್ಧಿ ಈ ಎಲ್ಲವೂ ಸಂಭವಿಸುತ್ತದೆ.

ದಾಯೇಶಾದ್ರಿಪುರಂ ಧ್ರುಷ್ಥೆ ವ್ಯಯೇ ವಾ ತಲವರ್ಜಿತೆ ॥೧೩॥

ಅಕಾಲೆ ಭೋಜನಂ ಚೈವ ದೇಶಾದ್ದೆಶಂ ಗಮಿಷ್ಯತಿ।
ದ್ವಿತೀಯದ್ಯೂಗನಾಥೆ ಚಾಪ್ಯಪಮೃತ್ಯುರ್ಭವಿಷ್ಯತಿ ॥೧೪॥

ಶ್ವೇತಾಂ ಗಾಂ ಮಹಿರ್ಷಿ ದಧಾಚ್ಛಾಂತಿ ಕುರ್ಯಾತ್ ಸುಖಾಪ್ತಿದಾವ್।

ದಶಾಪತಿಯಾದ ಸೂರ್ಯನಿಂದ 6, 8, 12ರಲ್ಲಿ ಚಂದ್ರನಿದ್ದರೆ ಅಥವಾ ಬಲರಹಿತನಾಗಿದ್ದರೆ ಅವನ ಅಂತರ ದಶಾದಲ್ಲಿ ಅಕಾಲ ಭೋಜನ (ಕದನ್ನ) ದೇಶಾಂತರ ಗಮನ ದ್ವಿತಿಯೇಶ ಸಪ್ತಮೇಶ ತ್ರಿಕಸ್ಥನಾಗಿದ್ದರೆ ಚಂದ್ರನ ಅಂತದಶಾ ಅಪಮೃತ್ಯುಪದ –

ಈ ಶಾಂತಿಗಾಗಿ ಕರಿ ಆಕಳು (ಕಪಿಲೆ) ಎಮ್ಮೆ ದಾನ ಮಾಡುವುದು ಚಂದ್ರ ಶಾಂತಿ –

## ಸೂರ್ಯ ದಶಾದಲ್ಲಿ ಭೌಮಾಂತರದಶಾ

ಸೂರ್ಯಸ್ಯಾಂತರ್ಗತೆ ಭೌಮೇ ಸ್ವೋಚ್ಚೆ ಸ್ವಕ್ಷೇತ್ರ ಲಾಭಗೆ ॥೧೫॥

ಲಗ್ನಾತ್ ಕೇಂದ್ರ ತಿಕೋಣೆ ವಾ ಶುಭಕಾರ್ಯ ವದೇದ್ ಬುಧಃ।
ಭೂಲಾಭಂ ಕೃಪಿಲಾಭಂ ಚ ಧನಧಾನ್ಯದಿವರ್ಧನಮ್ ॥೧೬॥

ಗೃಹಕ್ಷೇತ್ರಾದಿ ಲಾಭಂ ಚ ರಕ್ತ ವಸ್ತ್ರಾದಿಕಾಗಮಮ್।
ಲಗ್ನಾಧಿಪೆನ ಸಂಯುಕ್ತೆ ಸೌಖ್ಯಂ ರಾಜಪ್ರಿಯಂ ತಥಾ ॥೧೭॥

ಭಾಗ್ಯಲಾಭಾಧಿಪೈರ್ಯುಕ್ತೆ ಲಾಭಶ್ಚೈವ ಭವಿಷ್ಯತಿ।
ಬಹುಸೇನಾಧಿಪತ್ಯಂ ಚ ಶತ್ರುನಾಶೋ ಮನೋ ದೃಢಮ್ ॥೧೮॥

ಆತ್ಮಬಂಧು ಸುಖಂ ಚೈವ ಭ್ಯಾತ್ಯುವರ್ಧನಕಂ ತಥಾ।

ಮಂಗಳ ತನ್ನ ಉಚ್ಚ ಸ್ವಭರ್ವ, ಲಾಭಸ್ಥಾನ ಕೇಂದ್ರ ಅಥವಾ ತ್ರಿಕೋಣದಲ್ಲಿ ಇದ್ದರೆ ಸೂರ್ಯದಶಾದಲ್ಲಿ ಮಂಗಳಶನ ಅಂತರದಶಾ ಶುಭ ಕಾರ್ಯಾನುಕೂಲಕರ ವಾಗಿರುತ್ತದೆ. ಭೂಕೃಷಿ ಲಾಭ ಧನಧಾನ್ಯಾದಿ ವೃದ್ಧಿ, ಮನೆ ಹೊಲ ಲಾಭ ರಕ್ತ ವಸ್ತ್ರ (ಕೇಂದ್ರ) ಲಾಭ-ಭೌಮ ಲಗ್ನೇಶನ ಜತೆಗಿರಲು ಸೇನಾಧಿಪತಿ ಪದವಿಲಾಭ

ಶತ್ರುನಾಶ ಮನಃಸ್ಥಿರತಾ ಆತ್ಮಸುಖ ಭ್ರಾತೃವೃದ್ಧಿ (ಸುಖ)

ದಾಯೋದ್ರಿಪ್ಫರಂಧ್ರಸ್ಥೆ ಪಾಪೈರ್ಯುಕ್ತೇ ಚ ವೀಕ್ಷತೆ ॥೧೯॥

ಆಧಿಪತ್ಯ ಬಲೈರ್ಹಿನೆ ಕ್ರೂರಬುದ್ಧಿ ಮನೋರುಜವಮ್।

ಕಾರಾಗ್ರಹೆ ಪ್ರವೇಶಂ ಚ ನಿರ್ದಿಶೇದ್ ಬಂಧುನಾಶನವಮ್ ॥೨೦॥

ಭ್ರಾತೃವರ್ಗ ವಿರೋಧಂ ಚ ಕರ್ಮನಾಶಮಥಾಪಿ ವಾ।
ನೀಚೆ ವಾ ವಿಬಲೆ ಭೌಮೇ ರಾಜಮೂಲಾದ್ಧನಕ್ಷಯಃ ॥೨೧॥

ದ್ವಿತೀಯದ್ಯೂನಾಥೆ ತು ದೇಹೆ ಜಾಡ್ಯಂ ಮನೋರುಜಾ।
ಸುಬ್ರಹಾಜಪದಾನಂ ಚ ವೃಷಭೋತ್ಸರ್ಜನಂ ತಥಾ।
ಶಾಂತಿ ಕುರ್ವಿತ ವಿಧಿವದಾಯರಾರೋಗ್ಯಸಿದ್ಧಿದಾವಮ್ ॥೨೨॥

ದಶಾಪತಿಯಿಂದ 6-8ರಲ್ಲಿ ಸ್ಥಿತ ಭೌಮ ಪಾಪಯುಕ್ತ ಪಾಪ ದೃಷ್ಟನಾಗಿದ್ದರೆ ಅನಧಿಕಾರ ಹಾಗೂ ನಿರ್ಭಲನಾಗಿದ್ದರೆ ಅವನ ಅಂತರದಶಾ ಕಾಲದಲ್ಲಿ ಮನುಷ್ಯನಿಗೆ ದುರ್ಬುದ್ಧಿ ಪ್ರಾಪ್ತವಾಗಿ ಮನೋವ್ಯಥಾ ಜೈಲುವಾಸ ಬಂಧುನಾಶವನ್ನು ಹೇಳುವುದು. ಅದೇ ಮಂಗಳ ನೀಚಸ್ಥ ಅಥವಾ ನಿರ್ಬಲನಾಗಿದ್ದರೆ ಅಣ್ಣತಮ್ಮರೊಡನೆ ವಿರೋಧ ಕಾರ್ಯನಾಶ, ರಾಜ ಮೂಲಕ ಧನಕ್ಷಯ 2-7ರ ಅಧಿಪ ನೀಚಸ್ಥಾನದಲ್ಲಿ ಅಥವಾ ದುರ್ಬಲನಾಗಿದ್ದರೆ ಶಾರೀರಿಕ ಪೀಡೆ. ಮನೋರೋಗ (ವ್ಯಥಾ) (ಪ್ರೆಶರ್) ಆದಿ ದುಷ್ಫಲ.

ಚಂದ್ರನ -ಶಾಂತಿಗಾಗಿ ವೇದಪಾಠ, ಜಪ ದಾನಾದಿ ವೃಷೋತ್ಸರ್ಗವನ್ನು ಮಾಡುವುದು (ವೇದಪಾಠ ತಮ್ಮ ತಮ್ಮ ಶಾಖಾನುಗುಣವಾಗಿ ಸ್ವಾಧ್ಯಾಯ ರೂಪ ಪಠಣ), ವೇದ ತಿಳಿಯದಿದ್ದಲ್ಲಿ ವೇದ ಮಂತ್ರಗಳ ಶಾಂತಿಸೂಕ್ತ ಪಠಿಸುವುದು.

## ಸೂರ್ಯಮಹಾದಶಾದಲ್ಲಿ ರಾಹು ಅಂತರ ದಶಾ

ಸೂರ್ಯಸ್ಯಾಂತರ್ಗತೆ ರಾಹೌ ಲಗ್ನಾತ್ ಕೇಂದ್ರ ತ್ರಿಕೋಣಗೆ।
ಆದೌ ದ್ವಿಮಾಸ ಪರ್ಯಂತಂ ಧನನಾಶೋ ಮಹದ್ ಭಯವಮ್ ॥೨೩॥

ಚೌರಾಹಿವ್ರಣ ಭೀತಿಶ್ಚ ದಾರಾ ಪುತ್ರಾದಿ ಪೀಡನಮ್ ।
ತತ್ಪರಂಸುಖ ಮಾಪ್ನೋತಿ ಶುಭಯುಕ್ತೆ ಶುಭಾಂಶಕೆ ॥೨೪॥

ದೇಹಾರೋಗ್ಯಂ ಮನಸ್ತುಷ್ಟಿ ರಾಜಪ್ರೀತಿಕರಂ ಸುಖವಮ್।
ಲಗ್ನಾದುಪಚಯೇ ರಾಹೌ ಯೋಗಕಾರಕ ಸಂಯುತೆ ॥೨೫॥

ದಾಯೋಶಾಚ್ಚೇಚ್ಛುಭರಾಶಿಸ್ಥೆ ಸಮ್ಮಾನಂ ರಾಜತೋವದೇತ
ಭಾಗ್ಯವೃದ್ಧಿ ಯಶೋಲಾಭಂ। ದಾರಾಪುತ್ರಾದಿ ಸೌಖ್ಯದಮ್ ॥೨೬॥

ಪುತ್ರೋತ್ಸವಾದಿ ಸಂತೋಷಂ ಗೃಹೆ ಕಲ್ಯಾಣ ಶೋಭನಮ್।

ರಾಹು ಲಗ್ನದಿಂದ ಕೇಂದ್ರ ತ್ರಿಕೋಣ ಸ್ಥನಾಗಿದ್ದು, ಸೂರ್ಯನ ಮಹಾದಶಾದಲ್ಲಿ ಅಂತರದಶಾ ಬಂದಾಗ ಮೊದಲಿನ ಎರಡು ತಿಂಗಳು ಧನನಾಶಕಾರಕ ಹಾಗೂ ಮಹಾಭಯ ಆಗ ಕಳ್ಳರು ಸರ್ಪಜಂತುಗಳಿಂದ ಹಾಗೂ ವ್ರಣ ಭಯ ಅಲ್ಲದೆ ಸ್ತ್ರೀ-ಪುತ್ರರಿಗೂ ಕಷ್ಟಕಾರಕವಿರುತ್ತದೆ, ಎರಡು ತಿಂಗಳ ನಂತರ ಸುಖಪ್ರಾಪ್ತಿ. ಒಂದು ವೇಳೆ ರಾಹು ಶುಭಗ್ರಹಯುಕ್ತ ಅಥವಾ ಶುಭನವಾಂಶದಲ್ಲಿದ್ದರೆ ಸುಖ ಮಾನಸಿಕ ಸಂತುಷ್ಟಿ ರಾಜ ಪ್ರೀತಿ ಕಾರಕ ಲಗ್ನದಿಂದ ಉಪಚಯ ಸ್ಥಾನ (3, 6, 11, 10) ರಲ್ಲಿ ಯೋಗಕಾರಕ ಗ್ರಹದ ಜತೆಯಿದ್ದರೆ ಅಥವಾ ದಶಾಪತಿಯೊಡನೆ ಶುಭ ರಾಶಿಯಲ್ಲಿದ್ದರೆ ರಾಜ್ಯದಿಂದ ಸನ್ಮಾನ ಭಾಗ್ಯವೃದ್ಧಿ ಯಶೋಲಾಭ ಸ್ತ್ರೀ-ಪುತ್ರಾದಿಗಳಿಗೆ ಸುಖ ಹಾಗೂ ಮನೆಯಲ್ಲಿ ಪುತ್ರೋತ್ಸವ ಜನಿತ ಕಲ್ಯಾಣ.

ದಾಯೋಶಾತ್ ಸಂಸ್ಥಿತೆ ರಿಷ್ಫೆ ರಂಧ್ರೆ ವಾ ಬಲವರ್ಜಿತೆ ॥೨೭।

ಬಂಧನಂ ಸ್ಥಾನನಾಶಶ್ಚ ಕಾರಾಗ್ರಹ ನಿವೇಶನಮ್।
ಚೌರಾಹಿ ವ್ರಣ ಭೀತಿಶ್ಚ ದಾರಾಪುತ್ರಾದಿ ಪೀಡನಮ್ ॥೨೮।

ಚತುಷ್ಪಾಜ್ಜೀವನಾಶಶ್ಚ ಗ್ರಹೆ ಕ್ಷೇತ್ರಾದಿ ನಾಶನಮ್।
ಗುಲ್ಮಕ್ಷಯಾದಿ ರೋಗಃ ಸ್ಯಾದತಿ ಸಾರಾದಿ ಪೀಡನಮ್ ॥೨೯।

ದ್ವಿ ಸಪ್ತಸ್ಥೆ ತಥಾ ರಾಹೌ ತತ್ಸ್ಥಾನಧಿಪಸಂಯುತೆ।
ಅಪಮೃತ್ಯುಭಯಂ ಚೈವ ಸರ್ಪಭೀತಿಶ್ಚ ಸಂಭವೇತ್ ॥೩೦।

ದುರ್ಗಾಜಪಂ ಚ ಕುರ್ವಿತ ಛಾಗದಾನಂ ಸಮಾಚರೇತ್।
ಕೃಷ್ಣಾಂ ಗಾಂ ಮಹಿಷಿಂ ದದ್ಯಾಚ್ಛಾಂತಿ ಮಾಪ್ನೋತ್ಯಸಂಶಯಮ್॥೩೧॥

ದಶಾಪತಿಯಿಂದ (ರವಿಯಿಂದ) 8, 12 ಸ್ಥಾನಗಳಲ್ಲಿ ನಿರ್ಬಲ ರಾಹು ಇದ್ದು ಅವನ ಅಂತರದಶಾದಲ್ಲಿ ಬಂಧನ ಸ್ಥಾನ ಭ್ರಂಶ ಕಾರಾವಾಸ, ಕಳ್ಳ, ಸರ್ಪಾದಿ ಹಾಗೂ ವ್ರಣ ರೋಗಾದಿ ಭಯ, ಸ್ತ್ರೀಪುತ್ರರಿಗೆ ಪೀಡಾಕಾರಕ ಪಶು, ಮನೆ, ಭೂಮಿ ಆದಿ ವಿನಾಶ, ಕ್ಷಯರೋಗ ಹಾಗೂ ಅತೀಸಾರದ ಪ್ರಕೋಪಾದಿ ಸಂಭವ ದ್ವಿತೀಯ ಸಪ್ತಮಸ್ಥಾನ ಆ ಅಧಿಪರ ಜತೆ ರಾಹು ಇದ್ದರೆ ಅಪಮೃತ್ಯು ಗ್ರಹ ಶಾಂತಿಗಾಗಿ ದುರ್ಗಾಜಪ ಛಾಗದಾನ(ಆಡು) ಕಪಿಲೆ, ಎಂಹಿಷಿನಿ ದಾನದಿಂದ ನಿಃಸಂಶಯ ಭಯ ನಿವಾರಣೆ.

## ರವಿ ಮಹಾದಶಾದಲ್ಲಿ ಗುರು ಅಂತರದಶಾ

ಸೂರ್ಯಸ್ಯಾಂತರ್ಗತೆ ಜೀವೆ ಲಗ್ನಾತ್ ಕೇಂದ್ರ ತ್ರಿಕೋಣಗೆ।
ಸ್ವೋಚ್ಚೆ ಮಿತ್ರಸ್ಯ ವರ್ಗಸ್ಥೆ ವಿವಾಹೋ ರಾಜದರ್ಶನಮ್ ॥೩೨॥

ಧನಧಾನ್ಯಾದಿ ಲಾಭಶ್ಚ ಪುತ್ರಲಾಭೋ ಮಹತ್ಸುಖಮ್।
ಮಹಾರಾಜ ಪ್ರಸಾದೇನಾ ಭಿಷ್ಟಕಾರ್ಯಾರ್ಥಸಾದನಮ್ ॥೩೩॥

ಬ್ರಾಹ್ಮಣಪ್ರಿಯ ಸಮ್ಮಾನಂ ಪ್ರಿಯ ವಸ್ತ್ರಾದಿಜಂ ಸುಖಮ್।
ಭಾಗ್ಯಕರ್ಮಾಧಿಪವಶಾದ್ ರಾಜ್ಯಲಾಭಶ್ಚ ಸಂಭವೇತ್ ॥೩೪॥

ನರವಾಹನ ಯೋಗಸ್ಚ ಸ್ಥಾನಾಧಿಕ್ಯಂ ಮಹತ್ ಸುಖಮ್।
ದಾಯೋಶಾಚ್ಛುಭರಾಶಿಸ್ಥೆ ಭಾಗ್ಯವೃದ್ಧಿಃ ಸುಖಾವಹಾ ॥೩೫॥

ದಾನಧರ್ಮ ಕ್ರಿಯಾಯುಕ್ತೋ ದೇವತಾರಾಧನ ಪ್ರಿಯಃ।
ಗುರು ಭಕ್ತಿರ್ಮನಃ ಸಿದ್ಧಿಃ ಪುಣ್ಯಕರ್ಮಾದಿ ಸಂಗ್ರಹಃ ॥೩೬॥

ಕೇಂದ್ರ ತ್ರಿಕೋಣ ಸ್ವೋಚ್ಚ ಮಿತ್ರರ್ಗಸ್ಥ, ಗುರು ಸೂರ್ಯನ ಮಹಾ ದಶಾದಲ್ಲಿ ಅಂತರ ದಶಾಕಾರಕನಾಗಿದ್ದರೆ ವಿವಾಹ, ರಾಜದರ್ಶನ, ಧನಧಾನ್ಯಲಾಭ, ಪುತ್ರ ಪ್ರಾಪ್ತಿ ಮಹಾರಾಜ ಪ್ರಸಾದದಿಂದ ಅಭೀಷ್ಟ ಕಾರ್ಯದ ಸಂಸಿದ್ಧಿ ಬ್ರಾಹ್ಮಣ ಪ್ರಿಯ ಸಮ್ಮಾನ ಅದರಂತೆ ಪ್ರಿಯ ವಸ್ತ್ರದಿಗಳ ಲಾಭ, ಅದೇ ಗುರು ಭಾಗ್ಯೇಶ ಕರ್ಮೇಶನಾಗಿದ್ದರೆ ರಾಜ್ಯ ಲಾಭ (ಪಾಲಿಕಾ ಆರೋಹಣ), ಸ್ಥಾನಲಾಭ ಸುಖಾಧಿಕ್ಯ ಅದರಂತೆ ದಶೇಶ ಸೂರ್ಯನಿಂದ ಶುಭ ಸ್ಥಾನದಲ್ಲಿ ಗುರುವಿದ್ದರೆ ಭಾಗ್ಯವೃದ್ಧಿ, ದಾನಧರ್ಮ ಕ್ರಿಯಾದಲ್ಲಿ ಆಸಕ್ತಿ ದೇವರಾಧನ ಗುರುಭಕ್ತಿ ಮಾನಸಿಕ ತುಷ್ಟಿ ಹಾಗೂ ಪುಣ್ಯಕಾರ್ಯ ಸಂಸಿದ್ಧಿ.

ದಾಯೋಶಾದ್ ರಿಪುರಂಧ್ರಸ್ಥೆ ನೀಚ ವಾ ಪಾಪಸಂಯುತೆ।
ದಾರಪುತ್ರಾದಿ ಪೀಡಾ ಸ್ಯಾದ್ ದೇಹ ಪೀಡಾ ಮಹದ್ ಭಯಮ್।

ರಾಜಕೋಪಂ ಪ್ರಕುರುತೆ ಭಿಷ್ಟವಸ್ತು ವಿನಾಶನಮ್।
ಪಾಪಮೂಲಾದ್ ದ್ರವ್ಯನಾಶಂ ದೇಹಕಷ್ಟಂ ಮನೋರುಜುಮ್॥೩೮॥

ಸ್ವರ್ಣದಾನಂ ಪ್ರಕುರ್ವೀತಾಭಿಷ್ಟಜಾಪ್ಯಂ ಚ ಕಾರಯೇತ
ಗವಾಂ ಕಪಿಲ ವರ್ಣಾನಾಂ ದಾನೇನಾರೋಗ್ಯವರಾದಿಶೇತ್... ॥೩೯॥

ದಶಾಧಿಪನಿಂದ 6-8 ಅಥವಾ ನೀಚಸ್ಥಾನ ಪಾಪಯುಕ್ತ ಗುರು ಇದ್ದರೆ (ಸೂರ್ಯ ದಶಾ ಗುರು ಅಂತರದಶಾ) ಸ್ತ್ರೀಪುತ್ರಾದಿ ಕಷ್ಟ ಸ್ವತಃ ಶಾರೀರಿಕ ಕಷ್ಟ ಮಹಾಭೀತಿ ರಾಜಾದಿಕೋಪ ಅಭೀಷ್ಟವಸ್ತು ಹಾಗೂ ಪಾಪಮೂಲ ದ್ರವ್ಯ ವಿನಾಶ ಮನೋವ್ಯಾಕುಲ.

ಶಾಂತಿಗಾಗಿ ಬಂಗಾರ ದಾನ ಇಷ್ಟಮಂತ್ರಜಪ ಕಪಿಲವರ್ಣ ಆಕಳ ದಾನ ಮಾಡುವುದು.

## ರವಿ ಮಹಾದಶಾ – ಶನಿ ಅಂತರದಶಾ

ಸೂರ್ಯಸ್ಯಾಂತರ್ಗಗತೆ ಮಂದೆ ಲಗ್ನಾತ್ ಕೇಂದ್ರ ತ್ರಿಕೋಣಗೆ
ಶತ್ರುನಾಶೋ ಮಹತ್ ಸೌಖ್ಯಂ ಸ್ವಲ ಧಾನ್ಯಾರ್ಥ ಸಂಭವಮ್। ೪೦।

ವಿವಾಹಾದಿ ಕಸತ್ಕಾರ್ಯ ತದ್ ಗೇಹೆ ಸ್ಯಾಚ್ಚು ಭಾವಹಮ್।
ಸ್ವೋಚ್ಚೆ ಸ್ವ ಕ್ಷೇತ್ರಗೆ ಮಂದೆ ಸುಹ್ರುದ್ ಗ್ರಹಸಮಾನ್ವಿತೆ ॥೪೦॥

ಗ್ರಹೆ ಕಲ್ಯಾಣ ಸಂಪತ್ತಿರ್ವಿವಾಹಾದಿಷು ಸತ್ಕ್ರಿಯಾ।
ರಾಜಸಮ್ಮಾನ ಕೀರ್ತಿಶ್ಚ ನಾನಾವಸ್ತ್ರಧನಾಗಮಃ ॥೪೨॥

ಲಗ್ನದಿಂದ ಕೇಂದ್ರ ಅಥವಾ ತ್ರಿಕೋಣಸ್ಥ ಶನಿ ಸೂರ್ಯ ಮಹಾದಶಾದ ಅಂತರದಶಾದಲ್ಲಿ ಪಶು ಕ್ಷಯ ಸ್ವಲ್ಪಧನಧಾನ್ಯ ಸುಖ ಮನದಲ್ಲಿ ಶುಭ ಕಾರ್ಯ ಶನಿ ಆಸ್ಥಾನಗಳಲ್ಲಿ (ಕೇಂದ್ರ ತ್ರಿಕೋಣ) ತನ್ನುಚ್ಚ ಸ್ವರಾಶಿ ಅಥವಾ ಮಿತ್ರ ಗ್ರಹದಲ್ಲಿದ್ದರೆ ಮನೆಯಲ್ಲಿ ಕಲ್ಯಾಣೋತ್ಸವ ಸಂಪತ್ತು ಹೆಚ್ಚಿಸಿ ಅನೇಕ ವಿಧ ವಸ್ತ್ರ ಹಾಗೂ ಅರ್ಥ ಲಾಭ ಶುಭ–

ದಾಯೇಶಾದಿಪಿ ರಂಧ್ರಸ್ಥೆ ವ್ಯಯೇ ವಾ ಪಾಪಸಂಯುತೆ।
ವಾತಶೂಲ ಮಹಾವ್ಯಾಧಿಜ್ವರಾತೀಸಾರ ಪೀಡನಮ್ ॥೪೩॥

ಬಂಧನಂ ಕಾರ್ಯಹಾನಿಶ್ಚ ವಿತ್ತನಾಶೋ ಮಹದ್ ಭಯಮ್।
ಅಕಸ್ಮಾತ್ ಕಲಹಶ್ಚೈವ ದಾಯಾದಜನ ವಿಗ್ರಹಃ ॥೪೪॥

ದಶಾಪತಿಯಿಂದ 8, 12ರಲ್ಲಿ ಅಥವಾ ಪಾಪಯುಕ್ತ ಶನಿಯಿದ್ದರೆ ಅವನ ಅಂತರ ದಶಾ ವಾತ ಶೂಲಿ ಕುಷ್ಟ ಜ್ವರಾದಿ ರೋಗಕ್ಕೆ ಕಾರಣವಾಗುತ್ತದೆ ಹಾಗೂ ಬಂಧನ ಕಾರ್ಯ ಹಾನಿ ಧನ ನಾಶ, ಮಹಾ ಭಯ, ಅಕಸ್ಮಾತ್ (ಏಕಾಏಕಿ) ಕಲಹ ಮನೆಯವರೊಡನೆ ವಿರೋಧವು ಉಂಟಾಗುತ್ತದೆ.

ಭುಕ್ತ್ಯಾದೌ ಮಿತ್ರಹಾನಿಃ ಸ್ಯಾನ್ಮಧ್ಯೆ ಕಿಂಚಿತ್ ಸುಖಂ ಸ್ಮೃತಮ್।
ಅಂತೆ ಕ್ಲೇಶೋದಯ ಶ್ಚೈವ ನೀಚೆ ತೇಷಾಂ ತಥೈವ ಚ ॥೪೫॥
ಪಿತ್ರು ಮಾತ್ರು ವಿಯೋಗಶ್ಚ ಸಮನಾಗಮನಂ ತಥಾ।
ದ್ವಿತೀಯ ದ್ಯೂನಾಥೆ ತು ಹಾ ಪಮೃತ್ಯುಭಯಂ ಭವೇತ್ ॥೪೬॥

ಕೃಷ್ಣಾಂಗಾಂ ಮಹಿಷೀಂ ದದ್ಯಾನ್ಮಮೃತ್ಯುಂಜಯ ಜಪಂ ಚರೇತ್।
ಥಾಗದಾನಂ ಪ್ರಕುರ್ವಿತ ಸರ್ವಸಂಪತ್ಕ್ರದಾಯಕಮ್। ॥೪೭॥

ಸೂರ್ಯನ ಮಹಾದಶಾದಲ್ಲಿ ಶನಿಯ ಅಂತರದಶಾ ಕಾಲದ ಆರಂಭದಲ್ಲಿ ಮಿತ, ಹಾನಿ, ಮಧ್ಯದಲ್ಲಿ ಸ್ವಲ್ಪ ಸುಖ, ಅಂತ್ಯ ಕ್ಲೇಶ, ನೀಚಸ್ಥನಾಗಿದ್ದರೆ ಮಾತ್ರ ಪಿತ್ರ ವಿಯೋಗ ಭ್ರಮಣಾದಿ ಫಲ ಶನಿ ದ್ವಿತೀಯೋಸಪ್ತಮೇಶನಾಗಿದ್ದ ಅಪಮೃತ್ಯು ಭಯ, ಶಾಂತಿಗಾಗಿ ಕರಿ, ಆಕಳ (ಕಪಿಲೆ) ಎಮ್ಮೆ ಆಡುದಾನ ಹಾಗೂ ಮೃತ್ಯುಂಜಯ ಜಪ ಅತೀ ಅವಶ್ಯಕವಾಗಿದೆ.

## ರವಿ ಮಹಾದಶಾದಲ್ಲಿ ಬುಧನ ಅಂತರ ದಶಾ

ಸೂರ್ಯಸ್ಯಾಂತರಗರ್ತೆ ಸೌಮ್ಯೆ ಸ್ವೋಚ್ಚೆ ವಾ ಸ್ವರ್ಕ್ಷೆಗೆಪಿವಾ।
ಕೇಂದ್ರ ತ್ರಿಕೋಣ ಲಾಭಸ್ಥೆ ಬುಧೆ ವರ್ಗಬಲೈರ್ಯುತೆ ॥೪೮॥

ರಾಜ್ಯಲಾಭೋ ಮಹೋತ್ಸಾಹೋ ದಾರ ಪುತ್ರಾದಿಜಂ ಸುಖಮ್
ಮಹಾರಾಜ ಪ್ರಸಾದೇನ ವಾಹನಂಬರ ಭೂಷಣು ॥೪೯॥

ಪುಣ್ಯತೀರ್ಥ ಫಲಾವಾಪ್ತಿಗೃಹಂ ಗೋಕುಲ ಸಂಕುಲಮ್।
ಭಾಗ್ಯಲಾಭಾದಿ ಪೈಯುಕ್ತೆ ಲಾಭವೃದ್ದಿಶ್ಚ ಸಂಭವೇತ್ ॥೫೦।

ಭಾಗ್ಯ ಪಂಚಮ ವರ್ಗಸ್ಥೆ ಸಮ್ಮಾನಂ ಭವತಿ ಧ್ರುವಮ್।
ಸುಕರ್ಮಧರ್ಮ ವೃದ್ದಿಶ್ಚ ಗುರುದೇವದ್ವಿಜಾಚನಮ್ ॥೫೦॥

ಧನಧಾನ್ಯಾದಿ ಸಂಯೋಗೇ ವಿವಾಹಂ ಪುತ್ರಸಂಭವಃ।

ಸೂರ್ಯ ಮಹಾದಶಾದಲ್ಲಿ ಬುಧನ ಅಂತರದಶಾ ಬುಧನು ಸ್ವೋಚ್ಚ ಅಥವಾ ಸ್ವಗ್ರಹಸ್ಥ ಅಥವಾ 1, 4, 7, 10, 9, 5, 11 ಈ ಸ್ಥಾನಗಳಲ್ಲಿ ಸ್ಥಿತನಾದರೆ ಬಲಯುಕ್ತ ಬುಧನ ಅಂತರದಶಾ, ರಾಜ್ಯಲಾಭ ಪ್ರದವಾಗಿ ಮಹಾನ್ ಉತ್ಸಾಹ ನೀಡುತ್ತದೆ. ಸ್ತ್ರೀಪುತ್ರಾದಿಸೌಖ್ಯ ರಾಜ ಕೃಪಾದಿಂದ ವಾಹನ ವಸ್ತ್ರ ಭೂಷಣದ ಪ್ರಾಪ್ತಿ ಪುಣ್ಯತೀರ್ಥದ ಪ್ರಾಪ್ತಿ ಪಶುಸಂಪತ್ತು ಈ ಎಲ್ಲ ಸತ್ಫಲ ಲಭ್ಯ ಅದೇ

ಬುಧ ಭಾಗ್ಯೇಶ ಅಥವಾ ಲಾಭೇಶನ ಜತೆಗಿದ್ದರೆ ಬಲವೃದ್ಧಿಯಾಗುತ್ತದೆ. ನವಮ ಪಂಚಮ ಅಥವಾ ದಶಮದಲ್ಲಿ ಸ್ಥಿತನಾಗಿದ್ದರೆ ಶತಾಯಸ್ಸ್, ಧರ್ಮವೃದ್ಧಿ ನವಮ, ಪಂಚಮ ದಶಮಾದಿಗಳಲ್ಲಿ ಸ್ಥಿತನಾದರೆ ಗುರುದೇವಾರ್ಚನೆ ಧನಧಾನ್ಯವೃದ್ಧಿ ವಿವಾಹ ಪುತ್ರಪೌತ್ರ ಜನ್ಮಾದಿಗಳು.

ದಾಯೋಶಾಚ್ಛುಭರಾಶಿ ಸ್ಥಿ ಸೌಮ್ಯಯುಕ್ತೆ ಮಹತ್ ಸುಖಮ್ ।೫೨॥

ವೈವಾಹಿಕಂ ಯಜ್ಞಕರ್ಮದಾನಧರ್ಮ ಜಪಾದಿಕಮ್।
ಸ್ವನಾಮಾಂಕಿತ ಪದ್ಯಾನಿ ನಾಮದ್ವಯಮಥಾ ಪಿ ವಾ ॥೫೩॥

ಭೋಜನಾಂಬರ ಭೂಷಪ್ತಿರಮರೇಶೋ ಭವೇನ್ನರಃ।

ದಶಾಪತಿಯಿಂದ ತ್ರಿಕೋಣಾದಿ ಶುಭಸ್ಥಾನದಲ್ಲಿ ಶುಭಯುಕ್ತಿ ಬುಧ (ದಶಾಧಿಪ ಸೂರ್ಯನಿಂದ ತ್ರಿಕೋಣದಲ್ಲಿರಲು ಸಾಧ್ಯವಿಲ್ಲ ಬುಧ ದಶಾಧಿಪ ನ ಾದ ಸೂರ್ಯನಿಂದ 1 ರಾಶಿ ಹಿಂದೆ ಮುಂದೆ ಸುತ್ತುವುದರಿಂದ ಅವನಿಂದ ತ್ರಿಕೋಣ ಸ್ಥನಾಗಲು ಹೇಗೆ ಸಾಧ್ಯ? ತ್ರಿಕೋಣಾಧಿಪನೊಂದಿಗೆ ಎಂದು ಪರಿಗಣಿಸುವುದು) ಶುಭಗ್ರಹಯುಕ್ತನಾಗಿದ್ದರೆ ವೈವಾಹಿಕ ಮಹಾಸೌಖ್ಯ ಯಜ್ಞ ದಾನಧರ್ಮ ಜಪ ಆದಿ ಸಾಮ್ರಾಜ್ಯದಲ್ಲಿರುವನು ಪ್ರಶಸ್ತಿಪತ್ರ ಪ್ರಾಪ್ತಿ ವಿಮಲ ಯಶಸ್ಸಿನ ಎರಡನೇ ಹೆಸರೇ ಈ ದಶಾ ಸುಭೋಜನ ವಸ್ತ್ರಭೂಷಣ ಪ್ರಾಪ್ತಿ ದೇವೇಂದ್ರ ತುಲ್ಯ ಮನುಷ್ಯ ನಾಗುತ್ತಾನೆ.

ದಾಯೋಶಾದ್ ರಿಪುರಂಧ್ರಸ್ಥೆ ರಿಷ್ಪಗೆ ನೀಚಗೆಪಿವಾ ॥೫೪॥

ದೇಹ ಪೀಡಾ ಮನಸ್ತಾಪೋ ದಾರಪುತ್ರಾದಿಪೀಡನಮ್।
ಬುಕ್ತ್ಯಾದೌ ದುಃಖಮಾಪ್ನೋತಿ ಮಧ್ಯೆ ಕಿಂಚಿತ್ ಸುಖಂ ಭವೇತ್ ॥೫೫॥

ಅಂತೆ ತು ರಾಜ ಭೀತಿಶ್ಚ ಗಮನಾಗಮನಂ ತಥಾ ।
ದ್ವಿತೀಯದ್ಯೂತನಾಥೆ ತು ದೇಹಜಾಡ್ಯಂ ಜ್ವರಾಧಿಕಮ್ ॥೫೬॥

ವಿಷ್ಣುನಾಮಸಹಸ್ರಂ ಚ ಹ್ಯಾಸ್ನದಾನಂ ಚ ಕಾರಯೇತ್।
ರಾಜತಪ್ರತಿಮಾದಾನಾಂ ಕುರ್ಯಾದಾರೋಗ್ಯವೃದ್ಧಯೇ ॥೫೭॥

ದಶೇಶನಿಂದ 6, 8, 12 ಸ್ಥಾನದಲ್ಲಿ ಅಥವಾ ನೀಚದಲ್ಲಿ ಬುಧನಿದ್ದ ಶಾರೀರಿಕ ಪೀಡೆ ಮನಸ್ತಾಪ ಸ್ತ್ರೀಪುತ್ರರಿಗೆ ಕಷ್ಟ ಅಂತರದಶಾದಿಯಲ್ಲಿ ಕ್ಲೇಶ ಮಧ್ಯ ಅಲ್ಪ ಸುಖ ಅಂತ್ಯ ರಾಜ ಭಯಪ್ರವಾದ್ದರಿಂದ ಹಾಗೂ 2, 12ರಲ್ಲಿ ದೇಹ ಪೀಡಾ ಜ್ವರಾದಿ ಲಿಸತ್ ಫಲ, ಶಾಂತಿಗಾಗಿ ವಿಷ್ಣುಸಹಸ್ರನಾಮಜಪ, ಬೆಳ್ಳಿಯ ಬುಧನ

ಪ್ರತಿಮೆ ಮಾಡಿಸಿ ದಾನ. ಇದರಿಂದ ಆರೋಗ್ಯ ಲಾಭವಾಗುತ್ತದೆ.

ಇಲ್ಲಿಯೂ ದಶಾನಾಥನಿಂದ 6, 8ರಲ್ಲಿ ಬುಧನು ಬರಲು ಸಾಧ್ಯವಿಲ್ಲ. ಹೀಗಾಗಿ ಬುಧನ ಮೇಲೆ 6, 8ರ ಅಧಿಪರ ದೃಷ್ಟಿಯೆಂದು ಪರಿಗಣಿಸುವುದು.

## ರವಿಮಹಾದಶಾ ಕೇತು ಅಂತರದಶಾ

ಸೂರ್ಯಸ್ಯಾಂತರ್ಗತೆ ಕೇತೌ ದೇಹೆ ಪೀಡಾಂ ಮನೋವ್ಯಥಾವರ್।
ಅರ್ಥವ್ಯಯಂ ರಾಜಕೋಪಂ ಸ್ವಜನಾದೇರುಪದ್ರವವರ್ ॥೫೮॥

ಲಗ್ನಾಧಿಪೇನ ಸಂಯುಕ್ತ ಆದೌಸೌಖ್ಯಂ ಧನಾಗಮವರ್।
ಮಧ್ಯೆ ತತ್ಕ್ಲೇಶಮಾಪ್ನೋತಿ ಮೃತ್ಯುವಾರ್ತಾಗಮಂ ವದೇತ್ ॥೫೯॥

ಸೂರ್ಯನ ದಶಾದಲ್ಲಿ ಕೇತುವಿನ ಅಂತರದಶಾ ದೇಹ ಪೀಡಾಕಾರಕ ಮನೋವ್ಯಥಾ ಧನಧಾನ್ಯನಾಶ ರಾಜಕೋಪ ಸ್ವಜನರಿಂದ ತೊಂದರೆ ಲಗ್ನೇಶನ ಜತೆಗೆ ಕೇತುಯಿರಲು ಆರಂಭ, ಶುಭ ಮಧ್ಯದಲ್ಲಿ ಕ್ಲೇಶ ಅಂತ್ಯ ಮೃತ್ಯು ಸಮಾಚಾರ ಆಗಮನ.

ಅಷ್ಟಮೇಪಿ ವ್ಯಯೇ ಚೈವಂ ದಾಯೋಶಾತ್ ಪಾಪಸಂಯುತೆ।
ಕಪೋಲ ದಂತರೋಗಶ್ಚ ಮೂತ್ರಕೃಚ್ಛಸ್ಯ ಸಂಭವಃ ॥೬೦॥

ಸ್ಥಾನವಿಚ್ಯುತಿರರ್ಥಾದಿ ಮಿತ್ರಹಾನಿಃ ಪಿತೃಮೃತಿಃ।
ವಿದೇಶ ಗಮನಃ ಚೈವ ಶತ್ರುಪೀಡಾ ಮಹದ್‌ಭಯವ್ ॥೬೧॥

ದಶೇಶ ರವಿಯಿಂದ 8, 12ರಲ್ಲಿ ಪಾಪಯುಕ್ತ ಕೇತು, ಕಪಾಲ ಹಾಗೂ ದಂತ ರೋಗ ಕಾರಣನಾಗುವನು. ಮೂತ್ರಕಚ್ಚ ಸ್ಥಾನ ಭ್ರಂಶ ಅರ್ಥಹಾನಿ ಮಿತ್ರಹಾನಿ ಪಿತೃಮರಣ ವಿದೇಶಯಾತ್ರಾ ಶತ್ರುಪೀಡಾ ಹಾಗೂ ಮಹಾನ್ ಭಯ-

ಲಗ್ನಾದುಪಚ್ಛಯೇ ಕೇತೌ ಯೋಗಕಾರಕ ಸಂಯುತೆ।
ಶುಭಾಂಶೆ ಶುಭವರ್ಗೆ ಚ ಶುಭಕರ್ಮ ಫಲೋದ್ಭವಃ ॥೬೨॥

ಪುತ್ರ ದಾರಾದಿ ಸೌಖ್ಯ ಚ ಸಂತೋಷಃ ಪ್ರಿ[illegible] ವರ್ಧನವರ್
ವಿಚಿತ್ರ ವಸ್ತ್ರಲಾಭಃ ಸ್ಯಾದ್ ಯಶೋ ವೃದ್ಧಿ ಸುಖಾವಹಾ ॥೬೩॥

ದ್ವಿತೀಯ ದ್ಯೂನನಾಥೆ ವಾ ಹಾಪಮೃತ್ಯು[illegible]ಯಂ ವದೇತ್।
ದುರ್ಗಾಜಪಂ ಚ ಕ[illegible]ವಿನ್ತ ಛಾಗದಾನಂ [illegible] ವಪವರ್

ಲಗ್ನದಿಂದ ಉಪಚರಯ ಸ್ಥಾನದಲ್ಲಿ ಯೋಗಕಾರಕ ಗ್ರಹಯುಕ್ತನಾಗಿದ್ದರೆ ಕೇತುವಿನ ಅಂತರದಶಾ ಅದು ಶುಭಾಂಶ ಶುಭವರ್ಗದಲ್ಲಿ ಕೇತು ಇದ್ದರೆ ಶುಭ ಕರ್ಮ ಫಲೋದಯ (ಸೌಭಾಗ್ಯವೃದ್ಧಿ ಸ್ತ್ರೀಪುತ್ರ ಸುಖ ಸಂತೋಷ ಪ್ರಿಯ ಜನರ ವೃದ್ಧಿ ವಿಲಕ್ಷಣ ವಸ್ತ್ರ ಲಾಭ, ಯಶೋವೃದ್ಧಿ, ದ್ವಿತಿಯ ಸಪ್ತಮೇಶನ ಜತೆಗಿರಲು ಅಪಘಾತ, ಅಪಮೃತ್ಯು ಭಯ, ಶಾಂತಿಗಾಗಿ ದುರ್ಗಾ ಮಂತ್ರ ಜಪ, ಛಾಗದಾನ ದಿಂದ ಶಾಂತಿ.

## ರವಿ ಮಹಾದಶಾ ಶುಕ್ರಾಂತರದಶಾ

ಸೂರ್ಯಸ್ಯಾಂತರ್ಗತೆ ಶುಕ್ರೆ ತ್ರಿಕೋಣೆ ಕೇಂದ್ರಗೇ ಪಿ ವಾ।
ಸ್ವೋಚ್ಚೆ ಮಿತ್ರಸ್ವವರ್ಗಸ್ಥೆ ಭಿಷ್ಟಸ್ತ್ರಿ ಭೋಗ್ಯಸಂಪದಃ ॥೬೫॥

ಗ್ರಾಮಾಂತರ ಪ್ರಯಾಣ ಚ ಬ್ರಾಹ್ಮಣಪ್ರಭುದರ್ಶನಮ್।
ರಾಜ್ಯಲಾಭೋ ಮಹೋತ್ಸಾಹಚ್ಛತ್ರ ಚಾಮರ ವೈಭವಮ್ ॥೬೬॥

ಗೃಹೆ ಕಲ್ಯಾಣ ಸಂಪತ್ತಿರ್ನಿತ್ಯಂ ಮಿಷ್ಟಾನ್ನ ಭೋಜನಮ್।
ವಿದ್ರುಮಾದಿರತ್ನಲಾಭೊ ಮಕ್ತಾ ವಸ್ತ್ರಾದಿಕಾಗಮಃ ॥೬೭॥

ಚತುಷ್ಪಾಜ್ಜೀವಲಾಭಃ ಸ್ಯಾದ್ ಬಹುಧಾನ್ಯಧನಾದಿಕಮ್।
ಉತ್ಸಾಹಃ ಕೀರ್ತಿ ಸಂಪತ್ತಿರ್ನರವಾಹನ ಸಂಪದಃ ॥೬೮॥

ತನ್ನುಚ್ಚ ಕೇಂದ್ರ ತ್ರಿಕೋಣ ಮಿತ್ರ ಅಥವಾ ಸ್ವವರ್ಗ ಸಲ್ಲಿಸ್ಥಿತ ಶುಕ್ರ ರವಿಯ ಅಂತರದಶಾದಲ್ಲಿ ದುಷ್ಟಸ್ತ್ರೀ ಹಾಗೂ ಭೋಗ್ಯ ವಸ್ತುಲಾಭ ಗ್ರಾಮಾಂತರಗಮನ ಬ್ರಾಹ್ಮಣ ಹಾಗೂ ರಾಜದರ್ಶನ ರಾಜ್ಯಲಾಭ ಮಹಾನ್ ಉತ್ಸಾಹ ಛತ್ರ ಚಾಮರ ಆದಿ ರಾಜಚಿಹ್ನ ಪ್ರಾಪ್ತಿ ಮನೆಯಲ್ಲಿ ಕಲ್ಯಾಣ ಸಮೃದ್ಧಿ ನಿತ್ಯ ಮೃಷ್ಟಾನ್ನ ಭೋಜನ, ಉದ್ಯಮ ಆದಿ ರತ್ನಪ್ರಾಪ್ತಿ ಮತ್ತು ವಸ್ತ್ರಾದಿ ಲಾಭ ಪಶುಲಾಭ ಧನ ಧಾನ್ಯವೃದ್ಧಿ ಉತ್ಸಾಹ ಯಶೋವೃದ್ಧಿ ಪಾಲಿಕಾ ಯಾತ್ರೆ–

ಷಷ್ಠಾಷ್ಟಮವ್ಯಯೇ ಶುಕ್ರೆ ದಾಯೋಶಾದ್ ಬಲವರ್ಜಿತೆ।
ರಾಜಕೇಪೋ ಮನಃಕ್ಲೇಶಃ ಪುತ್ರಸ್ತ್ರೀ ಧನನಾಶನಮ್ ॥೬೯॥

ಭುಕ್ತ್ಯಾದೌ ತು ಸಮೇ ಮಧ್ಯೆ ಲಾಭಃ ಶುಭಕರೋ ಭವೇತ್।
ಅಂತೆ ಯಶೋನಾಶಾನಂ ಚ ಸ್ಥಾನ ಭ್ರಂಶ ಮಥಾಪಿ ವಾ ॥೭೦॥

ಬಂಧುದ್ವೇಷಂ ತು ನಿಗದೇತ್ ಸ್ವಕುಲಾದ್ ಭೋಗನಾಶನಮ್।
ಭಾರ್ಗವೆ ದ್ಯೂನನಾಥೆ ತು ದೇಹೆ ಜಾಡ್ಯಂ ಮನೋರುಜಾ ॥೭೦॥

ರಂಧ್ರ-ರಿಪ್ಪಸಮಾಯುಕ್ತೆ ತ್ವಪಮೃತ್ಯುರ್ಭವಿಷ್ಯತಿ।
ತದ್ದೋಷಪರಿಹಾರಾರ್ಥ ಮೃತ್ಯುಂಜಯ ಜಪಂ ಚರೇತ್।
ಶ್ವೇತಾಂ ಗಾಂ ಮಹಿಷಿದದ್ಯಾದ್ ರುದ್ರಜಾಪ್ಯಂ ಚ ಕಾರಯೇತ್ ॥೭೫॥

ದಶೇಶನಿಂದ 6, 8, 12 (ಇದು ಬುಧನಂತೆ ಸಾಧ್ಯವಿಲ್ಲ. ಹೀಗಾಗಿ 'ಸಮಾಯುಕ್ತೆ' ಎಂಬುದನ್ನೇ ಪರಿಗಣಿಸಬೇಕು ಅಥವಾ ದೃಷ್ಟಿಯನ್ನು ಸೇರಿಸ ಬಹುದು) ರಲ್ಲಿ ನಿಭರಲ ಶುಕ್ರ ರಾಜಕೋಪಕ್ಕೆ ಮಾನಸಿಕ ಕ್ಲೇಶಕ್ಕೆ ಕಾರಣ ಪುತ್ರ ಸ್ತ್ರೀ ಧನದ ವಿನಾಶ ಅಂತರರದಶಾರಂಭ ಮಧ್ಯಮ ಫಲ ಮಧ್ಯ ಶುಭಕರ ಹಾಗೂ ಲಾಭದಾಯಕ ಅಂತದಲ್ಲಿ ಯಶೋನಾಶ ಸ್ಥಾನಭಂಶ ಬಂಧು ದ್ವೇಷ ಭೋಗಕ್ಷಯ ಶುಕ್ರ ಸಪ್ತಮೇಶನಾಗಿದ್ದರೆ ಶರೀರಪೀಡಾ ಮನೋವ್ಯಥಾ ಸಪ್ತಮೇಶಗಾಗಿ ವ್ಯಯ ಅಷ್ಟಮದಲ್ಲಿದ್ದರೆ ಅಪಮೃತ್ಯು ಈ ದೋಷ ಪರಿಹಾರಕ್ಕಾಗಿ 'ಮೃತ್ಯುಂಜಯ ಜಪ-ಮುಖ್ಯ' ಬಿಳಿ ಆಕಳು, ಎಮ್ಮೆ ದಾನ ರುದ್ರ ಜಪಾದಿಕಗಳನ್ನು ಆಚರಿಸುವುದು.

ಇತಿ ಪರಾಶರ ಹೋರಾಶಾಸ್ತ್ರೇ ರವಿ
ದಶಾಂತರ್ದಶಾಧ್ಯಾಯಃಸಮಾಪ್ತಃ



೫೪ನೇ ಅಧ್ಯಾಯ

# ಅಥ ಚಂದ್ರಮಹಾದಶಾ ಚಂದ್ರಾಂತರ ದಶಾ

## ಪರಾಶರ ಉವಾಚ:

ಸ್ವೋಚ್ಚೆ ಸ್ವಕ್ಷೇತ್ರಗೆ ಚಂದ್ರೆ ತ್ರಿಕೋಣೆ ಲಾಭಗೆ ಪಿ ವಾ।
ಭಾಗ್ಯಕರ್ಮಾಧಿಪೈರ್ಯುಕ್ತೆ ಗಜಾಶ್ವಾಂಬರ ಸಂಕುಲಮ್ ||೧||

ದೇವತಾಗುರು ಭಕ್ತಿಶ್ಚ ಪುಣ್ಯಶ್ಲೋಕಾದಿ ಕೀರ್ತನಮ್।
ರಾಜ್ಯಲಾಭೊ ಮಹತ್ ಸೌಖ್ಯಂ ಯಶೋವೃದ್ಧಿಃ ಸುಖಾವಹಾ ||೨||

ಪೂರ್ಣ ಫಲಂ ಪೂರ್ಣಚಂದ್ರೆ ಸೇನೆಶತ್ವಂ ಮಹತ್ ಸುಖಮ್।

## ಪರಾಶರರು ಹೇಳಿದರು—

ಹೇ ಮೈತ್ರೇಯ. ಸ್ವೋಚ್ಚ ಸ್ವಭವನ. ತ್ರಿಕೋಣ ಲಾಭಸ್ಥಾನದಲ್ಲಿದ್ದ ಚಂದ್ರನ ದಶಾ ಅದು ಭಾಗ್ಯೇಶ ಕರ್ಮೇಶದಿಂದ ಯುಕ್ತನಾಗಿದ್ದರೆ ತನ್ನ ದಶಾಂತರ ದಶಾದಲ್ಲಿ ಆನೆ. ಕುದುರೆ (ವಾಹನ) ವಸ್ತ್ರಾದಿ ಪ್ರಾಪ್ತಿ ದೇವ ಗುರು ಭಕ್ತಿ ಪುಣ್ಯ ಪ್ರದ ಸ್ತೋತ್ರ ಪಾಠ. ರಾಜ್ಯ ಲಾಭ ಮಹಾಸೌಖ್ಯ ಸುಖಪ್ರದ ಯಶೋವೃದ್ಧಿ. ಪೂರ್ಣಚಂದ್ರ ಸಂಪೂರ್ಣ ಫಲ. ಸೇನಾಧಿಪತಿತ್ವ ಮಹಾಸುಖ ಪ್ರಾಪ್ತಿ.

ಪಾಪ ಯುಕ್ತೇಥವಾ ಚಂದ್ರೆ ನೀಚೆ ವಾ ರಿಪ್ಫಷಷ್ಠಗೆ ||೩||

ತತ್ಕಾಲೆ ಧನನಾಶಃ ಸ್ಯಾತ್ ಸ್ಥಾನಚ್ಯುತಿರಥಾಪಿ ವಾ।
ದೇಹಾಲಸ್ಯಂ ಮನಸ್ತಾಪೋ ವಿರೋಧೋ ರಾಜಮಂತ್ರಿಣ ||೪||

ಮಾತೃಕ್ಲೇಶೋ ಮನೋದುಃಖಂ ನಿಗಡಂ ಬಂಧುನಾಶನಮ್।
ದ್ವಿತೀಯ ದ್ಯೂನ್ಯನನಾಥೆ ತು ರಂಧ್ರಿ ರಿಪಾ ಧಿಪಾನ್ವಿತೆ ||೫||

ದೇಹ ಜಾಡ್ಯಂ ಮಹಾಭಂಗ ಮಪಮೃತ್ಯೋರ್ಭಯಂ ದಿಶೀತ್
ಶ್ವೇತಂಗಾಂ ಮಹಿಷಂ ದದ್ಯಾತ್ ತತೋ ನೈರುಜ್ಯಮಾಪುಯಾತ್ ||೬||

ಸಪಾಪ ಚಂದ್ರ ನೀಚ ಅಥವಾ 6, 8ರಲ್ಲಿ ಸ್ಥಿತನಾಗಿದ್ದರೆ ತನ್ನದೆ ಅಂತರ ದಶಾದಲ್ಲಿಯೂ ಧನನಾಶ ಸ್ಥಾನಭ್ರಂಶ ದೇಹಾಲಸ್ಯ ಮನೋದುಃಖ ಅಥವಾ ಸ್ಟ್ರೆಸ್ ರಾಜ ಮಂತ್ರಿಯಿಂದ ವಿರೋಧ ಮಾತೃಕಷ್ಟ ಮನಸ್ತಾಪ ಜೈಲುವಾಸ ಬಂಧುನಾಶ ಆದಿ ಅನಿಷ್ಟಗಳು ಅದೇ ಚಂದ್ರ ಮಾರಕೇಶ(2, 7ರ ಅಧಿಪ)ನಾಗಿ ಅಷ್ಟಮೇಶ ಅಥವಾ ವ್ಯಯೇಶನ ಜತೆಗಿದ್ದರೆ ಶರೀರದಲ್ಲಿ ಜಡತೆ ಪೀಡಾ ಅಪಮೃತ್ಯು ಇವರಿಂದ ಬಿಡುಗಡೆಗಾಗಿ ಬಿಳಿಯ ಆಕಳು ಎಮ್ಮೆಯ ದಾನ ಹೇಳಿದೆ.

## ಚಂದ್ರ ಮಹಾದಶಾ – ಕುಜಾಂತರ ದಶಾ

ಚಂದ್ರಸ್ಯಾಂತರ್ಗತೆ ಭೌಮೇ ಲಗ್ನಾತ್ ಕೇಂದ್ರ ತ್ರಿಕೋಣಗೆ।
ಸೌಭಾಗ್ಯಂ ರಾಜಸಮ್ಮಾನಂ ವಸ್ತ್ರಭರಣ ಭೂಷಣವ್ ॥೭॥

ಯತ್ನಾತ್ ಕಾರ್ಯಸಿದ್ಧಿಸ್ತು ಭವಿಷ್ಯತಿ ನ ಸಂಶಯಃ।
ಗೃಹಕ್ಷೇತ್ರಾಭಿವೃದ್ಧಿಶ್ಚ ವ್ಯವಹಾರೆ ಜಯೋಃ ಭವೇತ್ ॥೮॥

ಲಗ್ನದಿಂದ ಕೇಂದ್ರ ಅಥವಾ ತ್ರಿಕೋಣದಲ್ಲಿ ಸ್ವಚ್ಚ ಅಥವಾ ಸ್ವಕ್ಷೇತ್ರದಲ್ಲಿ ಸ್ಥಿತ ಮಂಗಳನಿದ್ದರೆ ಚಂದ್ರನ ದಶಾ ಮಂಗಳನ ಅಂತರದಶಾ ಬಂದಾಗ ಸೌಭಾಗ್ಯ ವೃದ್ಧಿ (ವಿಮರ್ಶೆ ಅವಶ್ಯಕ) ರಾಜಸಮ್ಮಾನ ವಸ್ತ್ರ ಆಭೂಷಣದ ಪ್ರಾಪ್ತಿ ಯತ್ನದಿಂದ ಕಾರ್ಯಸಿದ್ಧಿ ಮನೆ, ಹೊಲ, ವ್ಯಾಪಾರ ಅಭಿವೃದ್ಧಿಯಾಗುತ್ತದೆ.

ಇಲ್ಲಿ ವಿಶೇಷ ವಿಮರ್ಶೆ ಅತೀ ಅವಶ್ಯಕ- ಈ ದಶಾದಲ್ಲಿ ಕೇಂದ್ರಗತನಾದ ಮಂಗಳನ ವಿಚಾರ ಮಾಡುವಾಗ ಕರ್ಕ ಸಿಂಹಗಳಿಗೆ ಮಾತ್ರ ಅನ್ವಯಿಸಿಕೊಳ್ಳು ವುದೋ ಎಲ್ಲ ಲಗ್ನಗಳಿಗೂ ಎಂಬ ಪ್ರಶ್ನೆ ಮಾತ್ರ ಏಳುತ್ತದೆ. ಲಗ್ನಾತ್ ಚಂದ್ರಾತ್ ಶುಕ್ರಾತ್ ಕೇಂದ್ರದಲ್ಲಿದ್ದ ಮಂಗಳ ಸೌಭಾಗ್ಯ(ವಿವಾಹಜೀವನದಲ್ಲಿ)ಕ್ಕೆ ಹಾನಿಕಾರಕನಾಗಿದ್ದಾರೆ.

ಲಗ್ನದಲ್ಲಿದ್ದ ಮಂಗಳ ಲಗ್ನ- ಸಪ್ತಮ, ಅಷ್ಟಮ ನೋಡುವುದರಿಂದ ಕುಜದೋಷ ಪ್ರಾಪ್ತವಾಗಿ ಅದರಂತೆ ಚತುರ್ಥದಲ್ಲಿದ್ದಾಗ ನಾಲ್ಕನೇ ವಿಶೇಷ ದೃಷ್ಟಿಯಿಂದ ಸಪ್ತಮ ನೋಡುವುದರಿಂದ ಅದರಂತೆ ಸಪ್ತಮದಲ್ಲಿದ್ದಾಗ ಲಗ್ನ ನೋಡುವುದರಿಂದ ಹಾಗೂ ದ್ವಿತೀಯ ನೋಡುವುದರಿಂದ ಅದರಂತೆ ದಶಮದಲ್ಲಿದ್ದಾಗ ಚತುರ್ಥ ದೃಷ್ಟಿಯಿಂದ ಲಗ್ನ ನೋಡುವುದರಿಂದ (4, 7, 8 ಪೂರ್ಣದೃಷ್ಟಿ) ವೈವಾಹಿಕ ಜೀವನಕ್ಕೆ ತೊಂದರೆದಾಯಕನಾಗುತ್ತಾನೆ ಎಂಬುದ ಮರೆಯುವಂತಿಲ್ಲ

### ದೃಷ್ಟಿ ಸ್ಥಾನ (ಅಪಾಯಕಾರಿ ದೃಷ್ಟಿಮಾತ್ರ)




| ಮ | ಮ | ಮ | |
|---|---|---|---|
| | | | ಮ |
| ಮ | | | |
| | | | |

*ಈ ದೃಷ್ಟಿಗಳು ವೈಧವ್ಯ ಹಾಗೂ ಸಾಂಸಾರಿಕ ತೊಂದರೆಗೆ ಕಾರಣೀಭೂತ ವಾಗಿದೆ. ಗಂಡಸು ವಿಧುರ ಹೆಣ್ಣು ಮಗಳು ವಿಧವೆಯಾಗಬಹುದು.* ಶ್ರೀರಾಮಚಂದ್ರ ದೇವರ ಕುಂಡಲಿಯಲ್ಲಿ ಬಲಿಷ್ಠ ಮಂಗಳ (ತನ್ನುಚ್ಚ ಮಕರದಲ್ಲಿದ್ದು ಪ್ರಭು ಗುರುವಿನ ದೃಷ್ಟಿವಿದ್ದಾಗಲೂ 12 ವರ್ಷ ವನವಾಸಕ್ಕಿಂತ ರಾವಣ ಕದ್ದೊಯ್ದದು ಅವರನ್ನು ವಿರಹಕ್ಕೀಡುಮಾಡಿತು. ಅಗಸನ ಮಾತಿಗೆ ಹೆಂಡತಿಯನ್ನು ಬಿಡುವ ಪ್ರಸಂಗ.ಆದಿ ಅವಲೋಕಿಸಿವಾಗ ಸೀತೆಯ ಮೇಲೆ ಅತಿಶಯ ಪ್ರೇಮವಿದ್ದಾಗಲೂ ಸೀತಾಮಾತೆಯಿಂದ ದೂರವಾಗಿರುವ ಪ್ರಸಂಗ ನೆನೆಸಿದಾಗ ಮಂಗಳನಿಂದ ಏನೇ ಸೌಭಾಗ್ಯವಿದ್ದರೂ ವಿರಹ ಮಾತ್ರ ಸತ್ಯ. ಪ್ರಮುಖವಾಗಿ ತುಲಾ, ವೃಷಭ, ಮಿಥುನ, ಕನ್ಯಾ ಲಗ್ನಗಳಿಗೆ ಪೂರ್ಣ ಪ್ರಮಾಣ ತೊಂದರೆಯಾದರೆ ಮಕರ ಕುಂಭಕ್ಕೆ $^3/_4$ ತೊಂದರೆ ಧನು ಮೀನಗಳಿಗೆ $^1/_2$ ತೊಂದರೆ- ವೃಶ್ಚಿಕ ಮೇಷಕ್ಕೆ $^1/_4$ ತೊಂದರೆಯಾದರೆ ಕರ್ಕ, ಸಿಂಹಕ್ಕೆ ಕೆಲಕಾಲ ವಿರಹವಾದರೂ ಇರುತ್ತದೆ. ಮಂಗಳ ದೋಷಕ್ಕೆ ಇದೇ ಲೇಖಕರ ವಿವಾಹ ಜ್ಯೋತಿಷ್ಯ ನೋಡಿರಿ.

ಇಲ್ಲಿ ಸಾಂಸಾರಿಕ ಸುಖ ಹೊರತುಪಡಿಸಿ ಎಲ್ಲ ಸುಖ ದೊರೆಯುತ್ತ ಕೆಲ ವೇಳೆ ಸಾಂಸಾರಿಕ ವೈಮನಸ್ಸು ಸಂಶಯ ಆದಿಗಳು ವಯದಲ್ಲಿ ವ್ಯತ್ಯಾಸ, ವಿದ್ಯೆಯಲ್ಲಿ ಸಾಮಾಜಿಕ ಸ್ಥರ ವ್ಯತ್ಯಾಸವಿರಲೆಬೇಕು. ಹೀಗಾಗಿ ಪರಾಶರರು ಹೇಳಿದ ಸುಖ ಇತರ ಸುಖ ಮಾತ್ರ ಗಣಿಸುವುದು. ಆದರೆ ಸಾಮಾನ್ಯ ಸಿಂಹ, ಕರ್ಕ ಲಗ್ನದಲ್ಲಿ ಗಂಡಹೆಂಡಿರಲ್ಲಿ ಅನ್ಯೋನ್ಯತೆ ಮಾತ್ರ ಕಂಡುಬರುತ್ತದೆ. ವ್ಯಾಪಾರ ಹೊಲ, ಮನೆಯಲ್ಲಿ ಲಾಭ ಮಾತ್ರವಿರುತ್ತದೆ.

ಕಾರ್ಯಲಾಭೊ ಮಹತ್ ಸೌಖ್ಯಂ ಸ್ವೋಚ್ಚೆ ಸ್ವಕ್ಷೇತ್ರಗೆ ಫಲಮ್।
ಅಷ್ಟಮವ್ಯಯಗೆ ಭೌಮೇ ಪಾಪಯುಕ್ತೆ ಥವಾ ಯದಿ ॥೯॥

ದಾಯೋಶಾದಶು ಭಸ್ಥಾನೆ ದೇಹಾರ್ತಿಃ ಶತ್ರುವೀಕ್ಷತೆ।
ಗೃಹಕ್ಷೇತ್ರಾದಿಹಾನಿಶ್ಚ ವ್ಯವಹಾರೆ ತಥೈವ ಚ ॥೧೦॥

ಭೃತ್ಯವರ್ಗೇಷು ಕಲಹೋ ಭೂಪಾಲಸ್ಯ ವಿರೋಧನಮ್।
ಆತ್ಮಬಂಧು ವಿಯೋಗಶ್ಚ ನಿತ್ಯಂ ನಿಷ್ಠುರಭಾಷಣಮ್ ॥೧೧॥

ದ್ವಿತೀಯದ್ಯೂನಗಾಥೆ ತು ರಂಧ್ರೆ ರಂಧ್ರಾಧಿಪೋ ಯದಾ।
ತದ್ದೋಪ ಪರಿಹಾರಾರ್ಥ ಬ್ರಾಹ್ಮಣಸ್ಯರ್ಚನಂ ಚರೇತ್ ॥೧೨॥

ಅಷ್ಟಮ ಅಥವಾ ದ್ವಾದಶದಲ್ಲಿ ಪಾಪಯುಕ್ತ ಭೌಮನಿದ್ದರೆ ಅಥವಾ

ದಶಾಧಿಪನಿಂದ ಅಶುಭ ಸ್ಥಾನ ತ್ರಿಕಾದಿಗಳಲ್ಲಿ ಶುಭಗ್ರಹ ದೃಷ್ಟಿತನಾದರೆ ಚಂದ್ರನ ದಶಾ ಭೌಮಂತರದಶಾ ಬಂದಾಗ ದೇಹಪೀಡಾ ಮನೆ, ಹೊಲ, ವ್ಯಾಪಾರಾದಿಗಳಲ್ಲಿ ಹಾನಿ, ಭೃತ್ಯುವರ್ಗದಲ್ಲಿ ಕಲಹ, ರಾಜ ವಿರೋಧ ಆತ್ಮ ಬಂಧುಗಳ ವಿಯೋಗ ನಿತ್ಯ ಕಷ್ಟಭಾಷಣ (ಕಟಲಭಾಷಣ) ಭೌಮ 2, 7ರ ಅಧಿಪನಾದರೆ ಅಥವಾ ಅಷ್ಟಮೇಶ ಅಷ್ಟಮದಲ್ಲಿದ್ದರೆ ಅಶುಭ ಫಲ ಹೇಳುವುದು.

ಇಲ್ಲಿ ತುಲಾ, ವೃಷಭ ಲಗ್ನಗಳಲ್ಲಿ ದ್ವಿತೀಯ ಸಪ್ತಮಾಧಿಪನಾದಾಗ ಮಾತ್ರ ಅಶುಭಕಾರಕನು ಮೀನ ಲಗ್ನಕ್ಕೆ ಕಾರಕನಾದ್ದರಿಂದ ಶುಭನೆಂದು ಗ್ರಹಿಸುವುದು (ಮೀನಕ್ಕೆ ದ್ವಿತೀಯ ಭಾಗ್ಯಾದಿಪ) ಈ ರೀತಿ ಪ್ರತಿ ಅಂಶ ಪರಿಗಣಿಸಿಯೇ ಫಲ ಹೇಳುವುದು. ಉರು ಹೊಡೆದ ಫಲ ಹೇಳುವುದಲ್ಲಿ

ದೋಷ ಪರಿಹಾರಾರ್ಥ ಬ್ರಾಹ್ಮಣಪೂಜನ ಮಾಡುವುದು

## ಚಂದ್ರದಶಾ ರಾಹು ಅಂತರದಶಾ ಫಲ

ಚಂದ್ರಸ್ಯಾಂತರ್ಗತೆ ರಾಹೌ ಲಗ್ನಾತ್ ಕೇಂದ್ರ ತ್ರಿಕೋಣಗೇ।
ಆದೌ ಸ್ವಲ್ಪಫಲಂ ಜ್ಞೇಯಂ ಶತ್ರುಪೀಡಾ ಮಹದ್ ಭಯಮ್ ॥೧೩॥

ಚೌರಾಹಿರಾಜ ಭೀತಿಶ್ಚ ಚತುಷ್ಪಾಜ್ಜೀವಪೀಡನಮ್।
ಬಂಧುನಾಶೋ ಮಿತ್ರಹಾನಿ ರ್ಮಾನ ಹಾನಿರ್ಮನೋವ್ಯಥಾ ॥೧೪॥

ಕೇಂದ್ರ ಅಥವಾ ತ್ರಿಕೋಣದಲ್ಲಿ ರಾಹು (ಲಗ್ನಾತ್) ಇದ್ದರೆ ಚಂದ್ರ ಮಹಾದಶಾದಲ್ಲಿ ತನ್ನ ಅಂತರದಶಾಕಾಲದಲ್ಲಿ ಆರಂಭದಲ್ಲಿ ಅಲ್ಪಸುಖ ನಂತರ ಶತ್ರುಪೀಡಾ ಮಹಾಭಯ ಕಳ್ಳರು ಸರ್ಪ ರಾಜನಿಂದ ಭಯ, ಪಶು, ಬಂಧುನಾಶ ಮಿತ್ರತ್ವ ಹಾನಿ ಮಾನಸಿಕ ವ್ಯಥಾ.

ವಿಶೇಷವಾಗಿ ಚಂದ್ರನೊಡನಿದ್ದರೆ ವಿಶೇಷ ಮಾನಸಿಕ ಒತ್ತಡ.

ಶುಭದೃಷ್ಟೇ ಶುಭೈರ್ಯುಕ್ತೆ ಲಗ್ನದಪಚಯೇಪಿ ವಾ।
ಯೋಗಕಾರಕ ಸಂಬಂಧೆ ಸಿದ್ಧಿಃ ಕಾರ್ಯಾರ್ಥ ಸಂಭವಾ ॥೧೫॥

ನೈರುತ್ಯೆ ಪಶ್ಚಿಮೇ ಭಾಗೆ ಕ್ವಚಿತ್ತ ಪ್ರಭುಸಮಾಗಮಃ।
ವಾಹನಾಂಬರಲಾಭಶ್ಚಾಭಿಷ್ಟಕಾರ್ಯಾರ್ಥ ಸಾಧನಮ್ ॥೧೬॥

ಚಂದ್ರದಶಾದಲ್ಲಿ ರಾಹು ಲಗ್ನದಿಂದ ಉಪಚಯ ಸ್ಥಾನದಲ್ಲಿ ಶುಭಗ್ರಹ ಯುತ ದೃಷ್ಟಯೋಗಕಾರಕ ಗ್ರಹದ ಸಂಬಂಧ (ಶುಧ ಸಂಬಂಧ ನವಪಂಚಕ

ತ್ರಯೋದಶ ಯೋಗಾದಿಗಳು) ಆ ಕಾಲ ಸರ್ವಕಾರ್ಯಸಿದ್ಧಿ ನೈರುತ್ಯ ಪಶ್ಚಿಮ ದಿಕ್ಕಿನಲ್ಲಿ ರಾಜಾಧಿಕಾರಿಗಳೊಡನೆ ಸಮ್ಮಿಲನ ವಾಹನ ವಸ್ತ್ರ-ಹಾಗೂ ಅಭೀಷ್ಟಮಾ ಸಿದ್ಧಿಯಾಗುತ್ತದೆ.

> ದಾಯೇಶಾದಪಿ ರಂಧ್ರಸ್ಥೇ ವ್ಯಯೇ ವಾ ಬಲ ವರ್ಜಿತೇ।
> ಸ್ಥಾನಭ್ರಂಶೋ ಮನೋದುಃಖಂ ಪುತ್ರಕ್ಲೇಶೋ ಮಹದ್ ಭಯಂ॥೧೭।
>
> ಕುತ್ರಚಿದ್ದಾರಪೀಡಾ ಸ್ಯಾತ್ ಕ್ವಚಿದ್ರೋಗಾನ್ಮಹದ್ ಭಯವಮ್।
> ವೃಶ್ಚಿಕಾದಿ ವಿಷಾದ್ ಭೀತಿಶ್ಚೌರಾಹಿನೃಪಪೀಡನವಮ್ ॥೧೮॥

ಬಲಹೀನ ರಾಹು ದಶೇಶನಿಂದ ಯುತನಾಶ ಅಷ್ಟಮ ಅಥವಾ ದ್ವಾದಶದಲ್ಲಿ ಸ್ಥಿತನಾದರೆ ಚಂದ್ರದಶಾ ರಾಹು ಅಂತರ ದಶಾ ಸ್ಥಾನ ಭ್ರಂಶ ಮಾನಸಿಕ ಕಷ್ಟಪುತ್ರ ಕ್ಲೇಶ ಮಹಾಭಯ ಸ್ತ್ರೀಪುತ್ರಕಷ್ಟ ಅಥವಾ ರೋಗ ಭಯ ಚೇಳು ಇತ್ಯಾದಿ ವಿಷಜಂತು ಭಯ ಸರ್ಪಾದಿ ಭಯ ರಾಜಕಳ್ಳರ ಭಯ ಉಂಟಾಗುತ್ತದೆ.

> ದಾಯೇಶಾತ್ ಕೇಂದ್ರಕೋಣೇ ವಾ ದುಶ್ಚಿಕ್ಯೇ ಲಾಭಗೇ ವಾ।
> ಪುಣ್ಯತೀರ್ಥ ಫಲಾವಾಪ್ತಿರ್ದೇವತಾದರ್ಶನಂ ಮಹತ್ ॥೧೯।
>
> ಪರೋಪಕಾರ ಧರ್ಮಾದಿ ಪುಣ್ಯ ಕೃತ್ಯಾದಿ ಸಂಗ್ರಹಃ।
> ದ್ವಿತೀಯ ದ್ಯೂನ ರಾಶಿಸ್ಥೇ ದೇಹ ಬಾಧಾ ಭವಿಷ್ಯತಿ ॥೨೦।
>
> ಭಾಗದಾನಂ ಪ್ರಕುರ್ವೀತ। ದೇಹಾರೋಗ್ಯಂ ಪ್ರಜಾಯತೇ ॥೨೦॥

ದಶೇಶನ ಜತೆ ಕೇಂದ್ರ ತ್ರಿಕೋಣ ತೃತೀಯ ಅಥವಾ ಏಕಾದಶ ಸ್ಥಾನದಲ್ಲಿ ಸ್ಥಿತ ರಾಹು ಚಂದ್ರದಶಾದ್ಯೋಜ್ಯರೆ ಪುಣ್ಯತೀರ್ಥ ಫಲದ ಪ್ರಾಪ್ತಿ ದೇವದರ್ಶನ ಪರೋಪಕಾರ ಧರ್ಮಕಾರ್ಯದಲ್ಲಿ ಪ್ರವೃತ್ತಿ 2, 7 ಸ್ಥಾನಗಳಲ್ಲಿದ್ದರೆ ಶಾರೀರಿಕ ತೊಂದರೆ ಶಾಂತ್ಯರ್ಥ ಭಾಗದಾನವನ್ನ(ಆಡು) ಹೇಳಲಾಗಿದೆ.

## ಚಂದ್ರದಶಾ ಗುರುವಂತರ್ಗತ ದಶಾಫಲ

> ಚಂದ್ರಸ್ಯಾಂತರ್ಗತೇ ಜೀವೋ ಲಗ್ನಾತ್ ಕೇಂದ್ರತ್ರಿಕೋಣಗೇ।
> ಸ್ವರ್ಕ್ಷೇ ಸ್ವತುಂಗಲಾಭಸ್ಥೇ ರಾಜ್ಯಲಾಭೋ ಮಹೋತ್ಸವಃ ॥೨೨॥
>
> ವಸ್ತ್ರಾಲಂಕಾರಭೂಪ್ರಾಪ್ತಿ, ರಾಜಪ್ರೀತಿರ್ಧನಾಗಮ।
> ಇಷ್ಟದೇವ ಪ್ರಸಾದೇನ ಗರ್ಭಾಧಾನಾದಿಕಂ ಫಲಮ್ ॥೨೩॥

ಅಪಿ ಶೋಭನಕಾರ್ಯಾಣಿ ಗೃಹೆ ಲಕ್ಷ್ಮೀಃ ಕಟಾಕ್ಷಾತ್।
ರಾಜಾಶ್ರಯಾದ್ಧನಂ ಭೂಮಿಗಜವಾಜಿ ಸಮನ್ವಿತಮ್ ॥೨೪॥

ಮಹಾರಾಜಪ್ರಸಾದೇನಾಭಿಷ್ಟಸಿದ್ಧಿಃ ಸುಖಾವಹಾ।

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವಭವನ ಸ್ವಕ್ಷೇತ್ರ ಅಥವಾ ಲಾಭಸ್ಥಾನಗತ ಗುರುವಿನ ಅಂತರದಶಾ ಚಂದ್ರ ಮಹಾದಶಾದಲ್ಲಿ ಬಂದಾಗ ರಾಜ್ಯಲಾಭ (ರಾಜ್ಯತುಲ್ಯ ಧನಕನಕಾದಿ) ಮಹೋತ್ಸವ ವಸ್ತ್ರ ಅಲಂಕಾರದ ಪ್ರಾಪ್ತಿ ರಾಜನಿಂದ ಸಮ್ಮಾನ ಧನಾಗಮ ಇಷ್ಟದೇವ ಪ್ರಸಾದದಿಂದ ಗರ್ಭದಾನ, ಶುಭ ಕಾರ್ಯ ಮನೆಯಲ್ಲಿ ಲಕ್ಷ್ಮೀಕಟಾಕ್ಷದಿಂದ ಸುಖ ರಾಜನಿಂದ ಸನ್ಮಾನ, ಭೂಮಿ ಗಜ, ಅಶ್ವಾದಿ ಪಶು ಸಂಪತ್ತಿ (ವಾಹನ) ಧನ ಪ್ರಾಪ್ತಿ ರಾಜ ಕೃಪಾದಿಂದ ಅಭೀಷ್ಟ ಕಾರ್ಯ ಸಿದ್ಧಿಯಾಗುತ್ತದೆ.

ಷಷ್ಠಾಷ್ಟಮವ್ಯಯೇ ಜೀವೆ ನೀಚೆ ವಾಸ್ತಂಗತೆ ಯದಿ ॥೨೫॥

ಪಾಪಯುಕ್ತೆಶುಭಂ ಕರ್ಮ ಗುರು ಪುತ್ರಾದಿ ನಾಶನಮ್।
ಸ್ಥಾನ ಭ್ರಂಶೋ ಮನೋದುಃಖಮಕಸ್ಮಾತ್ ಕಲಹೋದ್ಭವಮ್ ॥೨೬॥

ಗೃಹ ಕ್ಷೇತ್ರಾದಿನಾಶಶ್ಚ ವಾಹನಂಬರನಾಶನಮ್।
ದಾಯೇಶಾತ್ ಕೇಂದ್ರಕೋಣೆ ವಾ ದುಶ್ಚಿಕ್ಯೇ ಲಾಭಗೇ ವಾ ॥೨೭॥

ಭೋಜನಾಂಬರಪಶ್ವಾದಿ ಲಾಭ ಕುರ್ಯಾನ್ಮಹೋತ್ಸವಮ್।
ಭ್ರಾತ್ರಾದಿಸುಖಸಂಪತ್ತಿ ಧೈರ್ಯವೀರ್ಯ ಪರಾಕ್ರಮಮ್ ॥೨೮॥

ಯಜ್ಞವ್ರತ ವಿವಾಹಾದಿ ರಾಜ್ಯಶ್ರೀ ಧನಸಂಪದಃ।

ತ್ರಿಕ್‌ಸ್ಥಾನ ನೀಚರಾಶಿಯಲ್ಲಿ ಅಸ್ತಂಗತ ಗುರು ಚಂದ್ರದಶಾದಲ್ಲಿದ್ದರೆ ಅಶುಭ ಗುರುಪುತ್ರ ಆದಿ ವಿನಾಶ ಸ್ಥಾನ ಭ್ರಂಶ ಮನೋವ್ಯಥಾ ಜಹಾಗೂ ಅರಿವಿಗೆ ಬರದೆ ಜಗಳ ಪ್ರಸಂಗ ಗೃಹ ಭೂಮಿ ಆದಿ ಹಾಗೂ ವಸ್ತ್ರ ವಾಹನದ ವಿನಾಶ ದಶೇಶ ನೊಂದಿಗೆ ಕೇಂದ್ರ ಅಥವಾ ತ್ರಿಕೋಣ ಅಥವಾ ತೃತೀಯ, ಏಕಾದಶದಲ್ಲಿ ಗುರು ವಿದ್ದರೆ ತನ್ನ ಅಂತರದಶಾದಲ್ಲಿ ಭೋಜನ ಸೌಖ್ಯ, ವಸ್ತ್ರ, ಪಶು ಆದಿ ಲಾಭ, ಭ್ರಾತೃ ಸುಖ ಸಂಪತ್ತು, ಧೈರ್ಯ ಪರಾಕ್ರಮಾದಿ ಶಕ್ತಿ ಯಜ್ಞವ್ರತ, ವಿವಾಹ ಕಾರ್ಯ ರಾಜಾಶ್ರಯದಿಂದ ಅನೇಕ ವಿಧ ಸಂಪತ್ತಿನ ಲಾಭವಾಗುತ್ತದೆ.

ದಾಯೇಶಾದ್ರಿಪುರಂಧ್ರಸ್ಥೆ ವ್ಯಯೇ ವಾ ಬಲವರ್ಜಿತೆ ॥೨೯॥

ತತ್ಫಲಂ ಕುತ್ಸಿತಾನ್ನಂ ಚ ವಿದೇಶಗಮನಂ ತಥಾ।
ಭುಕ್ತ್ಯಾದೌ ಶೋಭನಂ ಪ್ರೋಕ್ತಮಂತೇ ಕ್ಲೇಶಶ್ಚ ಜಾಯತೇ ॥೩೦॥

ದ್ವಿತೀಯಾದ್ಯೂನನಾಥೇ ಚ ಹ್ಯಾಪಮೃತ್ಯುರ್ಭವಿಷ್ಯತಿ।
ತದ್ದೋಷಪರಿಹಾರಾರ್ಥಂ ಶಿವಸಹಸ್ರಕಂ ತಥಾ।

ಸುವರ್ಣದಾನಮಿತಿ ಪ್ರೋಕ್ತಂ ಸರ್ವಕ್ಲೇಶಾಪಹಾರಕಮ್ ॥೩೧॥

ದಶಾಪತಿಯಿಂದ ನಿರ್ಬಲ ಗುರು 6, 8, 12ರಲ್ಲಿದ್ದರೆ ಕದನ್ನಭೋಜನ ವಿದೇಶಗಮನ ಆರಂಭ ಶುಭವಾಗಿ ಅಂತ್ಯದಲ್ಲಿ ಕ್ಲೇಶಪ್ರದವಾಗುವುದು. ಅದೇ ಗುರು 2, 7ರ ಅಧಿಪನಾಗಿದ್ದರೆ ಅಪಮೃತ್ಯು ಭಯ ಈ ದೋಷ ಪರಿಹಾರಾರ್ಥ ಶಿವಸಹಸ್ರನಾಮ ಜಪ ಹಾಗೂ ಸ್ವರ್ಣದಾನ ಮಾಡುವುದು ವಿಹಿತ.

## ಚಂದ್ರದಶಾದಲ್ಲಿ – ಶನಿ ಅಂತರ ದಶಾ ಫಲ

ಚಂದ್ರಸ್ಯಾಂತರ್ಗತೇ ಮಂದೇ ಲಗ್ನಾತ್ ಕೇಂದ್ರ ತ್ರಿಕೋಣಗೇ।
ಸ್ವಕ್ಷೇತ್ರ ಸ್ವಾಂಶಗೇ ಚೈವ ಮಂದೇ ಲಗ್ನಾಂಶ ಸಂಯುತೇ ॥೩೨॥

ಶುಭದೃಷ್ಟಿಯುತೇ ವಾಪಿ ಲಾಭೇ ವಾ ಬಲಸಂಯುತೇ।
ಪುತ್ರ ಮಿತ್ರಾರ್ಥಸಂಪತ್ತಿಃ ಶೂದ್ರಪ್ರಭುಸಮಾಶ್ರಯಾತ್ ॥೩೩॥

ವ್ಯವಸಾಯಾತ್ ಫಲಾಧಿಕ್ಯಂ ಗ್ರಹಂ ಕ್ಷೇತ್ರಾದಿವೃದ್ಧಿಮತ್।
ಪುತ್ರಲಾಭಶ್ಚ ಕಲ್ಯಾಣಾ ರಾಜಾನುಗ್ರಹ ವೈಭವಮ್ ॥೩೪॥

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವಭವನ ಸ್ವನವಾಂಶದಲ್ಲಿ ಶನಿ ಶುಭ ಗ್ರಹದೃಷ್ಟಿತ ಅಥವಾ ಬಲಯುಕ್ತನಾಗಿ ಲಾಭಸ್ಥಾನದಲ್ಲಿದ್ದಾಗ ಚಂದ್ರನ ಮಹಾದಶಾ ಶನ್ಯಂತರ ದಶಾ ಪುತ್ರ ಮಿತ್ರ ಧನಸಂಪತ್ತಿನ ಪ್ರಾಪ್ತಿ ಶೂದ್ರರಾಜನ ಆಶ್ರಯದಿಂದ ವ್ಯವಸಾಯದಲ್ಲಿ ಸಾಫಲ್ಯ ಹೊಲಾದಿ ವೃದ್ಧಿ, ಪುತ್ರಲಾಭ ಕಲ್ಯಾಣ ಹಾಗೂ ರಾಜಾನುಗ್ರಹ ಈ ಸರ್ವವಿಧ ವೈಭವ.

ಷಷ್ಠಾಷ್ಟಮವ್ಯಯೆ ಮಂದೆ ನೀಚೆ ವಾ ಧನಗೆ ಪಿ ವಾ ।
ತದ್‌ಭುಕ್ತ್ಯಾದೌ ಪುಣ್ಯ ತೀರ್ಥ ಸ್ನಾನಂ ಚೈವ ತು ದರ್ಶನಮ್ ॥೩೫॥

ಅನೇಕಜನ ಸಂತ್ರಾಸಃ ಶತ್ರುಪೀಡಾ ಭವಿಷ್ಯತಿ।

ಶನಿ 6, 8, 12ರಲ್ಲಿ ನೀಚನಾಗಿದ್ದು ಇಲ್ಲಿಯೆ ದ್ವಿತೀಯದಲ್ಲಿದ್ದರೆ ಚಂದ್ರದಶಾ

ಫಲ ಅಂತರದಶಾ ಪುಣ್ಯತೀರ್ಥ ಸ್ನಾನ ದೇವತಾ ತೀರ್ಥದರ್ಶನ ಅನೇಕ ಜನ ಭಯ ಶತ್ರುಪೀಡಾ ಪ್ರಾರಂಭ.

ದಾಯೇಶಾತ್ ಕೇಂದ್ರರಾಶಸ್ಥೆ ತ್ರಿಕೋಣೆ ಬಲಗೇ ಪಿ ವಾ ॥೩೬॥

ಕ್ವಚಿತ್‌ಸೌಖ್ಯಂ ಧನಾಪ್ತಿಶ್ಚ ದಾರಾಪುತ್ರ ವಿರೋಧನವ್ಮ್।
ದ್ವಿತಿಯದ್ಯೂನ ರಂಧ್ರಸ್ಥೆ ದೇಹಬಾಧಾ ಭವಿಷ್ಯತಿ ॥೩೭॥

ತದ್ದೋಶ ಪರಿಹಾರಾರ್ಥ ಮೃತ್ಯುಂಜಯಜಪಂ ಚರೇತ್।
ಕೃಷ್ಣಾಂ ಗಾಂ ಮಹಿಷಿಂ ದದ್ಯಾದ್ಯಾನೇಗಾರೋಗ್ಯ ಮಾಪ್ನುಯಾತ್॥೩೮॥

ದಶೇಶನಿಂದ ಕೇಂದ್ರ ಅಥವಾ ತ್ರಿಕೋಣದಲ್ಲಿ ಬಲಿಷ್ಠ ಶನಿಯಿದ್ದರೆ ಚಂದ್ರದಶಾಂತರದಶಾದಲ್ಲಿ ಒಮ್ಮೆ ಸೌಖ್ಯ ಧನ ಪ್ರಾಪ್ತಿ ಸ್ತ್ರೀ ಪುತ್ರರಿಂದ ವಿರೋಧ ಅದೇ ಶನಿ 2, 7, 8 ಸ್ಥಾನದಲ್ಲಿದ್ದರೆ ಶರೀರ ಪೀಡಾ ದೋಷ ಪರಿಹಾರಾರ್ಥ ಮೃತ್ಯುಂಜಯ ಜಪ ಕಪಿಲೆ (ಕರಿ ಆಕಳು) ಎಮ್ಮೆ ದಾನ ಹೇಳಿದೆ.

## ಚಂದ್ರದಶಾ ಬುಧಾಂತರದಶಾ

ಚಂದ್ರಸ್ಯಾಂತರ್ಗತೆ ಸೌಮ್ಯೆ ಕೇಂದ್ರ ಲಗಾಭತ್ರಿಕೋಣಗೆ।
ಸ್ವರ್ಕ್ಷೆ ನಿಜಾಂಶಕೆ ಸೌಮ್ಯೆ ತುಂಗೆ ವಾ ಬಲ ಸಂಯುತೆ ॥೩೯।

ಧನಾಗಮೊ ರಾಜಮಾನಂ ಪ್ರಿಯ ವಸ್ತ್ರಾದಿಜಂ ಸುಖಮ್।
ವಿದ್ಯಾವಿನೊದ ಸಂದ್ಯೋಷ್ಟಿ ಜ್ಞಾನವೃದ್ಧಿಃ ಸುಖಾವಹಾ ॥೪೦॥

ಪುತ್ರಪ್ರಾಪ್ತಿಶ್ಚ ಸಂತೋಷೋ ವಾಣಿಜ್ಯಂ ಧನಲಾಭಕೃತ್।
ವಾಹನಂ ಛತ್ರಸಂಯುಕ್ತಂ ನಾನಾಲಂಕಾರ ಭೂಷಿತಮ್ ॥೪೧॥

ಕೇಂದ್ರ ತ್ರಿಕೋಣ ಲಾಭಸ್ಥಾನ ಸ್ವಭವನ ಸ್ವನವಾಂಶ ಸ್ವೋಚ್ಚದಲ್ಲಿದ್ದ ಬುಧ ಚಂದ್ರಾಂತರದಶಾದಲ್ಲಿ ದ್ಯಾನ ಧನಾಗಮ ರಾಜ ಸ್ಮಾಮನ ಪ್ರಿಯ ಮಿತ್ರಾದಿ ಸುಖ ಶಾಸ್ತ್ರ ವಿಚಾರ ಜ್ಞಾನವೃದ್ಧಿ ಪುತ್ರ ಪ್ರಾಪ್ತಿ ಸಂತೋಷ, ಲಾಭಕಾರಿ ವ್ಯಾಪಾರ ಛತ್ರಯುಕ್ತ ಹಾಗೂ ಅನೇಕ ಅಲಂಕಾರಯುಕ್ತ ವಾಹನ ಸೌಖ್ಯ ಈ ಎಲ್ಲ ಅಂಶ ಪ್ರಾಪ್ತಿ.

ದಾಯೇಶಾತ್ ಕೇಂದ್ರ ಕೋಣೆ ವಾ ಲಾಭೋ ವಾ ಧನೇಪಿ ವಾ।
ವಿವಾಹೋ ಯಜ್ಞ ದೀಕ್ಷಾ ಚ ದಾನಧರ್ಮ ಶುಬಾದಿಕಮ್ ॥೪೨॥

ರಾಜಪ್ರೀತಿಕರಶ್ಚೈವ ವಿದ್ವಜ್ಜನ ಸಮಾಗಮಃ।
ಮುಕ್ತಾಮಣಿ ಪ್ರವಾಲಾನಿ ವಾಹನಾಂಬರ ಭೂಷಣಮ್ ॥೪೩॥

ಆರೋಗ್ಯ ಪತ್ರೀತಿ ಸೌಖ್ಯಂ ಚ ಸೋಮ ಪಾನಾದಿಜಂ ಸುಖಮ್।

ದಶಾಪತಿಯಿಂದ ಕೇಂದ್ರ ತ್ರಿಕೋಣ ಲಾಭ ಅಥವಾ ದ್ವಿತೀಯದಲ್ಲಿ ಚಂದ್ರನ ದಶಾದಲ್ಲಿ ಬುಧನ ದಶಾ ಬಂದಾಗ ವಿವಾಹ ಯಜ್ಞಾದಿಗಳು ದಾನ ಧರ್ಮ ಆದಿ ಶುಭ ಕಾರ್ಯ ಹೇಳುವುದು. ಹಾಗೂ ರಾಜ ಪ್ರೀತಿಕಾರಿ ವಿದ್ವಾನರ ಸಂಗೀತ ಫಲ ಮತ್ತು ಮಣಿ ಪ್ರದಾಶಾದಿ ರತ್ನ ಹಾಗೂ ವಾಹನ ವಸ್ತ್ರಭೂಷಣಾದಿ ಪ್ರಾಪ್ತಿ ಪ್ರೇಮ ಸುಖ-ಸೋಮಪಾನಾದಿಸುಖ.

ದಾಯೋಶಾದ್ ಪುರಂಧ್ರಸ್ಥೆ ವ್ಯಯೋ ವಾ ನೀಚಗೇ ಪಿ ವಾ ॥೪೪॥

ತದ್ ಭುಕ್ತೌ ದೇಹಭಾಧಾ ಚ ಕೃಷಿ ಗೇ ಭೂಮಿನಾಶನಮ್।
ಕಾರಾಗ್ರಹ ಪ್ರದೇಶಶ್ಚ ದಾರ ಪುತ್ರಾದಿ ಪೀಡನಮ್ ॥೪೫॥

ದ್ವಿತೀಯ ದ್ಯೂಗನಾಥೆ ತು ಜ್ವರಪೀಡಾ ಮಹದ್ಭಯಮ್।
ಛಾಗದಾನಂ ಪ್ರಕುರ್ವೀತ ವಿಷ್ಣುಸಾಹಸ್ರಕಂ ಜಪೇತ್ ॥೪೬॥

ದಶಾಪತಿಯಿಂದ 6, 8, 12ರಲ್ಲಿ ಅಂತರದಶಾಪತಿ ಬುಧ ಬಂದಾಗ ಶಾರೀರಿಕ ಪೀಡೆ ಕೃಷಿಗೇ ಭೂಮಿಯ ವಿನಾಶಕಾರ ಗ್ರಹಪ್ರವೇಶ ಸ್ತ್ರೀಪುತ್ರಾದಿಗಳಿಗೆ ಕಷ್ಟ ಅದರಂತೆ 2, 7ರ ಅಧಿಪ ಅಂತರದಶಾನಾಥನಾಗಿದ್ದರೆ ಜ್ವರ ಪೀಡಾ ಮಹಾಭಯ ಇದರ ಶಾಂತಿಗಾಗಿ ಛಾಗದಾನ ಹಾಗೂ ವಿಷ್ಣುಸಹಸ್ರನಾಮ ಪಠಣವೇ ಸೂಕ್ತ ಮಾರ್ಗ.

## ಚಂದ್ರ ಮಹಾದಶಾ ಕೇತು ಅಂತರದಶಾ

ಚಂದ್ರಸ್ಯಾಂತರ್ಗತೆ ಕೇತೌ ಕೇಂದ್ರ ಲಾಭ ತ್ರಿಕೋಣಗೆ।
ದುಶ್ಚಿಕ್ಯೇ ಬಲಸಂಯುಕ್ತೆ ಧನಲಾಭೋ ಮಹತ್ ಸುಖಮ್ ॥೪೭॥

ಪುತ್ರಾದಾರಾದಿ ಸೌಖ್ಯಂ ಚ ವಿಧಿಕರ್ಮ ತಥೈವ ಚ।
ಭುಕ್ತ್ಯಾದೌ ಧನಹಾನಿಃ ಸ್ಯಾನ್ಮಧ್ಯೇತು ಸುಖ ಮುತ್ತಮಮ್ ॥೪೮॥

ಕೇಂದ್ರ ತ್ರಿಕೋಣ ಲಾಭಸ್ಥಾನ ಅಥವಾ ತೃತೀಯ ಸ್ಥಾನದಲ್ಲಿ ಸಬಲ ಕೇತು ಚಂದ್ರಗಂತರ ದಶಾ(ಜನ್ಮತಂ)ದಲ್ಲಿದ್ದಾಗ ಧನಲಾಭ ಮಹಾ ಸೌಖ್ಯ ಪುತ್ರ ಸ್ತ್ರೀ

ಸುಖ ಧರ್ಮಕಾರ್ಯ ಆರಂಭ, ಆರಂಭದಲ್ಲಿ ಧನ ಹಾನಿ ಮಧ್ಯ ಉತ್ತಮ ಅಂತ್ಯ ಸಾಮಾನ್ಯ.

ದಾಯೇಶಾತ್ ಕೇಂದ್ರ ಲಾಭೆ ವಾ ತ್ರಿಕೋಣೆ ಬಲಸಂಯುತೆ
ಕಚ್ಚಿತ್ತ ಫಲಂ ದಶಾದೌ ತು ದಿಶೇತ್ ಸೌಖ್ಯಂ ಧನಾಗಮಮ್ ॥೪೯॥

ಗೋಮಘ್ಯಾದಿಲಾಭಂ ಚ ಭುಕ್ತ್ಯಂತೆ ಚಾರ್ಥನಾಶನಮ್।

ದಶಾಧೀಶನಿಂದ ಕೇಂದ್ರ ತ್ರಿಕೋಣ ಅಥವಾ ಲಾಭ ಸ್ಥಾನದಲ್ಲಿ ಬಲಯುತ ನಾಗಿದ್ದರೆ ಚಂದ್ರನಲ್ಲಿ ಕೇತು ದಶಾ ಆರಂಭದಲ್ಲಿ ಧನಾಗಮ ಗೋಮಹಿದಿ ಪಶು ಸಂಪತ್ತಿ ಈ ಅಂತರದಶಾಂತ್ಯ ಧನನಾಶಕಾರಕವಾಗಿರುತ್ತದೆ.

ಪಾಪಯುಕ್ತೋಥವಾ ದೃಷ್ಟಿ ದಾಯೇಶಾದ್ ರಂಧ್ರಷ್ಟಗೆ ॥೫೦॥

ಹಿನ್ಯೈಃ ಶತೃತ್ವಕಾರ್ಯಾಣಿ ಹ್ಯಾಕಸ್ಮಾತ್ ಕಲಹೋ ಧೃವಮ್।
ದ್ವಿತೀಯದ್ಯೂನ ರಾಶಿಸ್ಥೆ ತ್ವನಾರೋಗ್ಯ ಮಹದ್ ಭಯಮ್ ॥೫೧॥

ಮೃತ್ಯುಂಜಯ ಮುಪಾಸೀತ ಸರ್ವಸಂಪತ್ ಪ್ರದಾಯಕಮ್।
ತತಃ ಕ್ಲೇಶಾನಿವೃತ್ತಿಃ ಸ್ಯಾತ್ ಶಿವಾನುಗ್ರಹತೋ ದ್ವಿಜ।

ದಶಾಧಿಪನಿಂದ ಅಷ್ಟಮ ಅಥವಾ 12ರಲ್ಲಿ ಸ್ಥಿತನಾದ ಕೇತು ಪಾಪಗ್ರಹಯುತ ದೃಷ್ಟನಾದರೆ ಚಂದ್ರದಶಾ ಕೇತು ಅಂತರದಶಾದಲ್ಲಿ ನೀಚ ಜನರೊಡನೆ ಶತೃತ್ವ ಆಕಸ್ಮಾತ್ ಕಲಹ ಅದೇ ಕೇತು 2, 7ರಲ್ಲಿದ್ದರೆ ಅನಾರೋಗ್ಯ ಮಹಾಭಯ ಈ ಸ್ಥಿತಿಯಲ್ಲಿ ಸರ್ವಸಂಪತ್ತ ಪ್ರದಾಯಕ ಮೃತ್ಯುಂಜಯದ ಉಪಾಸನೆ, ಶಿವಾನುಗ್ರಹ ದಿಂದ ಕ್ಲೇಶನಿವಾರಣೆ

## ಚಂದ್ರದಶಾ – ಶುಕ್ರಾಂತರ ದಶಾ ಫಲ

ಚಂದ್ರಸ್ಯಾಂತರ್ಗತೆ ಶುಕ್ರೆ ಕೇಂದ್ರ ಲಾಭತ್ರಿಕೋಣೆ।
ಸ್ವೋಚ್ಚೆ ಸ್ವಕ್ಷೇತ್ರಗೆ ವಾಪಿ ರಾಜ್ಯಲಾಭಂ ಕರೋತಿ ಚ ॥೫೩॥
ಮಹಾರಾಜ ಪ್ರಸಾದೇನ ವಾಹನಾಂಬರ ಭೂಷಣಮ್।
ಚತುಷ್ಪಾಜ್ಜೀವ ಲಾಭಃ ಸ್ಯಾದ್ದಾರಪುತ್ರಾದಿ ವರ್ಧನಮ್ ॥೫೪॥
ನೂತನಾಗಾರನಿ ರ್ಮಾಣಂ ನಿತ್ಯಂ ಮಿಷ್ಟಾನ್ನ ಭೋಜನಮ್।
ಸುಗಂಧಪುಷ್ಪಮಾಲಾದಿರಂಮ್ಯಸ್ತ್ಯಾರೋಗ್ಯ ಸಂಪದಃ ॥೫೫॥

ದಶಾಧಿಪೇನ ಸಂಯುಕ್ತೇ ದೇಹಸೌಖ್ಯಂ ಮಹತ್ ಸುಖಮ್।
ಸತ್ಕೀರ್ತಿಸುಖ ಸಂಪತ್ತಿ ಗೃಹಕ್ಷೇತ್ರಾದಿ ವರ್ಧನಮ್ ॥೫೬॥

ಕೇಂದ್ರ ತ್ರಿಕೋಣ ಲಾಭದಲ್ಲಿ ಸ್ವಭವನದಲ್ಲಿ ಶುಕ್ರ ಜನ್ಮ ಸಮಯದಲ್ಲಿ ಇದು ಚಂದ್ರಾಂತರವಾಗಿ ಬಂದಾಗ ರಾಜ್ಯಲಾಭ ಮಹಾರಾಜರ ಕೃಪಾದಿಂದ ವಾಹನ ವಸ್ತ್ರ ಆಭೂಷಣ ಲಾಭ ಸಪುತ್ರ, ಅಭಿವೃದ್ಧಿ ಪಶುಲಾಭ ನಿತ್ಯ ಮೃಷ್ಟಾನ್ನ ಭೋಜನ ಸುಗಂಧಪುಷ್ಪ ಪಶು ಸ್ತ್ರೀ ಲಾಭ, ಅಭಿವೃದ್ಧಿ ನೂತನ ಭವನ ನಿರ್ಮಾಣ ಅನೇಕ ವಿಧ ಸಂಪತ್ತು ಲಾಭ ಗೃಹ ಕ್ಷೇತ್ರ (ಹೊಲ, ಮನೆ ಆದಿ ವೃದ್ಧಿಯಾಗುತ್ತದೆ)

ನೀಚೆ ವಾಸ್ತಂಗತೆ ಶುಕ್ರೆ ಪಾಪಗ್ರಹಯುತೆ ಕ್ಷಿತೆ।
ಭೂನಾಶಃ ಪುತ್ರಮಿತ್ರಾದಿ ಪತ್ನಿ ನಾಶೋಪಿ ಸಂಭವೇತ್ ॥೫೭॥

ಶುಕ್ರ ನೀಚಸ್ತ (ಕನ್ಯಾದಲ್ಲಿ) ಅಥವಾ ಅಸ್ತಂಗತನಾಗಿ ಪಾಪಗ್ರಹ ಸಹಿತ ನಾಗಿದ್ದರೆ ಅಂತರ ದಶಾ ಕಾಲದಲ್ಲಿ ಭೂಮಿ ಪುತ್ರ, ಮಿತ್ರಾದಿ ಹಾಗೂ ಸ್ತ್ರೀಯ ನಾಶಕಾರಕನಾಗುತ್ತಾರೆ. ಪಶುವಿನ ರಾಜದ್ವಾರದಲ್ಲಿ ಸರ್ವರ ವಿರೋಧ ಹೇಳುವುದು.

ಚತುಷ್ಪಾಜ್ಜೀವಹಾನಿಃ ಸ್ಯಾದ್ರಾಜದ್ವಾರೆ ವಿರೋಧನಮ್।
ಧನಸ್ಥಾನಗತೆ ಶುಕ್ರೆ ಸ್ವೋಚ್ಚೆ ಸ್ವಕ್ಷೇತ್ರ ಸಂಯುತೆ ॥೫೮॥

ಪಶುವಿನ ನಾಶದಲ್ಲಿ ರಾಜದ್ವಾರ ವಿರೋಧಾನಂತರ ದ್ವಿತೀಯ ಸ್ಥಾನದಲ್ಲಿದ್ದರೆ ಅಂತರದಶಾ ಕಾಲದಲ್ಲಿ ಈ ರೀತಿ ಫಲ ಹೇಳುತ್ತಾರೆ.

ನಿಧಿ ಲಾಭೋಮಹತ್ ಸೌಖ್ಯಂ ಭೂಲಾಭಃ ಪುತ್ರ ಸಂಭವಃ।
ಭಾಗ್ಯಲಾಭಾಧಿಪೈರ್ಯುಕ್ತೆ ಭಾಗ್ಯವೃದ್ಧಿರ್ಭವೇದಪಿ ॥೫೯॥

ಮಹಾರಾಜ ಪ್ರಸಾದೇನಾಭಿಷ್ಟಸಿದ್ಧಿಃ ಸುಖಾವಹಾ।
ದೇವ ಬ್ರಾಹ್ಮಣಭಕ್ತಿಶ್ಚ ಮುಕ್ತಾವಿದ್ರುಮಲಬ್ಧಯಃ ॥೬೦॥

ದಾಯೇಶಾದ್ ಲಾಭಗೆ ಶುಕ್ರೆ ತ್ರಿಕೋಣೆ ಕೇಂದ್ರಗೇ ತಿಪಿ ।ವಾ।
ಗೃಹಕ್ಷೇತ್ರಾಭಿವೃದ್ಧಿಶ್ಚ ವಿತ್ತಲಾಭೋ ಮಹತ್ ಸುಖಮ್ ॥೬೧॥

ದಾಯೇಶಾದ್ ರಿಪುರಂಧ್ರೆಸ್ಥ ವ್ಯಯೇ ವಾ ಪಾಪಸಂಯುತಿಕೆ।
ವಿದೇಶವಾಸ ದುಃಖಾರ್ತ ಮೃತ್ಯು ಚೌರಾದಿ ಪೀಡನಂ ॥೬೨॥

ದಶಾಪತಿಯಿಂದ ಲಾಭ ಸ್ಥಾನ ತ್ರಿಕೋಣ ಕೇಂದ್ರ ಗಣಿತ ಶುಕ ಚಂದ್ರದಶಾದ ಅಂತರದಶಾದಲ್ಲಿ ಗೃಹ-ಭೂಮಿ ವೃದ್ಧಿಯಾಗುತ್ತಿದೆ. ಧನಲಾಭ-ಮಹಾಸುಖ ಪ್ರದವು ಅದೇ ಶುಕ್ರ 6-8-12 ಪಾಪಗ್ರಹಯತನಾಗಿದ್ದರೆ ವಿಶೇಷವಾಗಿ ವಿದೇಶ ವಾಸ, ದುಃಖದಿಂದ ಪೀಡೆ, ಮೃತ್ಯು ಚೌರ್ಯಾದಿ ಪೀಡಾ – ಪ್ರಾರಂಭ.

ದ್ವಿತೀಯಾದ್ಯೂನನಾಥೆ ತು ಮಹಾಮೃತ್ಯುಭಯಂ ಭವೇತ್ ।
ತದ್ದೋಶ ವಿನಿವೃತ್ಯರ್ಥ ರುದ್ರಜಾಪ್ಯಂ ಚ ಕಾರಯೇತ್ ॥೬೩॥

ಶುಕ್ರ 2-7ರಲ್ಲಿ ಅಥವಾ ಅಧಿಪರ ದೃಷ್ಟಿಯಲ್ಲಿದ್ದರೆ ಅಪಮೃತ್ಯುಭಯ-ದೋಷ ನಿವಾರಣೆಗೆ ರುದ್ರೀಯ ಜಪ ಬಿಳಿ ಹರಳು ಹಾಗೂ ಬೆಳ್ಳಿಯ ದಾನ ವಿಶೇಷ ಫಲದಾಯಕ.

## ಚಂದ್ರದಶಾ ಸಕಾಯತ್ ಅಂತರದಶಾ ಫಲ

ಚಂದ್ರಸ್ಯಾಂತರ್ಗತೆ ಭಾನೌ ಸೆಸ್ವೋಚ್ಚೆ ಸ್ವಕ್ಷೇತ್ರಸಂಯುತೆ ।
ಕೇಂದ್ರೆ ತ್ರಿಕೋಣೆ ಲಾಭೆವಾಧನೆ ಬಲಿನಿ ಸೋದರೆ ॥೬೪॥

ನಷ್ಟರಾಜ್ಯ ಧನಪ್ರಾಪ್ತಿ ಗೃಹೆ ಕಲ್ಯಾಣಶೋಭನಮ್ ।
ಮಿತ್ರರಾಜಪ್ರಸಾದೇನ ಗ್ರಾಮಭೂಮ್ಯಾದಿಕಾಗಮಃ ॥೬೫॥

ಗರ್ಭಾಧಾನಫಲ ಪ್ರಾಪ್ತಿರ್ಗೃಹೆ ಲಕ್ಷ್ಮಿ ಕಟಾಕ್ಷಕೃತ್ ।
ಭುಂಕ್ತ್ಯಾಂತೆ ದೇಹ ಆಲಸ್ಯಂ ಜ್ವರಪೀಡಾ ಭವಿಷ್ಯತಿ ॥೬೬॥

ಸ್ವೋಚ್ಚ ಸ್ವಭವನ ಕೇಂದ್ರ ತ್ರಿಕೋಣ ಲಾಭಸ್ಥಾನ ಧನಸ್ಥಾನ ತೃತೀಯ ಸ್ಥಾನ ಸ್ಥಿತ ಬಲಿ ಸೂರ್ಯ ಚಂದ್ರ ನಂತರ ದಶಾದಲ್ಲಿ ಬರಲು, ವಿನಿಷ್ಟನಸ್ಯನಾದ ರಾಜ್ಯಧನ ಪ್ರಾಪ್ತಿ ಮನೆಯಲ್ಲಿ ಕಲ್ಯಾಣೋದಯ ಮಿತ್ರ ಹಾಗೂ ರಾಜ ಪ್ರಸಾದದಿಂದ ಊರು, ಭೂಮಿಯ ಲಾಭ (ಊರು ಇದ್ದಲ್ಲಿ ಜಾಹಗೀರ ಎಂದುಕೊಳ್ಳುವುದು) ಪುತ್ರಾದಿಪ್ರಾಪ್ತಿ ಮನೆಯಲ್ಲಿ ಲಕ್ಷ್ಮಿ ವಿಲಾಸ ಅಂತರ ದಶಾಂಶದಲ್ಲಿ ಆಲಸ್ಯ ಹಾಗೂ ಜ್ವರಪೀಡಾ.

ದಾಯೇ ಶಾದಥ ರಂಧ್ರಸ್ಥೆ ವ್ಯಯೇ ವಾಪಾಪಸಂಯೇತೆ ।
ನೃಪಚೌರಾ ಹಿಭೀತಿ ಶ್ಚ ಜ್ವರ ರೋಗಾದಿ ಸಂಭವಃ ॥೬೭॥

ವಿಧೇಶ ಗಮನೆ ಚಾರ್ತಿರ್ಭೃತ್ಯೇವ ನ ಸಂಶಯಃ ।
ದ್ವಿತೀಯ ದ್ಯೂನನಾಥೆ ತು ಜ್ವರ ಪೀಡಾ ಭವಿಷ್ಯತಿ ॥೬೮॥

**ತದ್ದೋಷಪರಿಹಾರಾರ್ಥ ಶಿವಪೂಜಾಂ ಚಕಾರಯೇತ್ ।**

ದಶಾಧಿಪನಿಂದ ಪಾಪಯುಕ್ತಸರಾರ್ಯ ಅಷ್ಟಮ ಅಥವಾ ದ್ವಾದಶ ಸ್ಥಾನದಲ್ಲಿದ್ದರೆ ರಾಜ, ಕಳ್ಳ ಸರ್ಪಾದಿ - ಕ್ರೂರ ಜಂತು ಭಯ ಜ್ವರ ಪೀಡಾ ರೋಗ ವಿದೇಶ ಗಮನದಲ್ಲಿ ಪೀಡೆ ಅದೇ ಸೂರ್ಯ 2, 7ರ ಅಧಿಪನಾದರೆ ಜ್ವರಪೀಡಾ ಈ ದೋಷ ಪರಿಹಾರಾರ್ಥ ಶಿವಪೂಜೆ ತಾರಕವು.

ಇಲ್ಲಿ ಶಿವಪೂಜೆ ಹೋಮ ಚಂದ್ರಪರ್ವವು ಹೆಣ್ಣುದೇವತೆಯನ್ನು ತೋರಿಸು ವುದರಿಂದ ಶಿವಪಾರ್ವತಿ ಹೇಳಬಹುದು. ಇದರಂತೆ ಎಲ್ಲಿ ಗ್ರಹಗಳಿಗೂ ಅನ್ವಯಿಸು ವುದು ಅದರಂತೆ ಶಿವ-ಪ್ರತ್ಯಧಿದೇವತೆಯಿಂದ ಶ್ರೀರಾಮ ದೇವತೆಯಿಂದ ರಾಮ-ಸೀತಾ(ಲಕ್ಷ್ಮಿ) ಪೂಜಾವಿಶೇಷವನ್ನು ಹೇಳುವುದು. ಎಲ್ಲಿ ಗ್ರಹ ಶಾಂತಿಗಳಲ್ಲಿಯೂ ಅಧಿ ದೇವತೆ ಪ್ರತ್ಯಧಿದೇವತೆಗಳ ವಿಚಾರ ಮಾಡಿ ಆಯಾ ಜನರ ಮನೋ ಭಾವನೆಗೆ ಅನುಗುಣವಾಗಿ ವಿವರಿಸುವುದು ಹಾಗೂ ಆಗ ಆತ್ಮಕಾರಕಗ್ರಹದ ದೇವತೆ ಪರಿಗಣಿಸಿ ಹೇಳುವುದು.

ಇತಿ ಚಂದ್ರ ಅಂತರದಶಾಧ್ಯಾಯ ಸಮಾಪ್ತಃ



# ಅಥ ಭೌಮದಶಾಂತರ ದಶಾಧ್ಯಾಯಃ

## ಕುಜಮಹಾದಶಾ – ಕುಜಾಂತರದಶಾ

ಪರಾಶರ ಉವಾಚ:

ಕುಜಸ್ಯಾಂತರ್ಗತೆ ಭೌಮೆ ದ್ವಿಜ! ಕೇಂದ್ರ ತ್ರಿಕೋಣಗೆ ।
ಲಾಭೆ ವಾ ಸೌಮ್ಯ ಸಂಯುತೆ ದುಶ್ಚಕ್ಯೆ ಧನಸಂಯತೆ ॥೧॥

ಲಗ್ನಾಧಿಪೇನ ಸಂಯತೆ ರಾಜಾನುಗ್ರಹ ವೈಭವ ಮ್ ।
ಲಕ್ಷ್ಮೀಕಟಾಕ್ಷ ಚಿನ್ಹಾನಿ ನಷ್ಟರಾಜ್ಯಾರ್ಥ ಲಬ್ಧಯಃ ॥೨॥

ಪುತ್ರೋತ್ಸವಾದಿ ಸಂತೋಷೊ ಗ್ರಹಂ ಗೋಕುಲಸಂಕುಲವ್ ।
ಸ್ವೊಚ್ಚ ವಾ ಸರ್ಕ್ಷಗೆ ಭೌಮೆ ಸ್ವಾಂಶೆ ವಾ ಬಲಸಂಯುತೆ ॥೩॥

ಗ್ರಹಕ್ಷೇತ್ರಾಭಿವೃದ್ಧಿಶ್ಚ ಗೇಮಹಿಷ್ಯಾದಿಜಂ ಸುಖವ್ ।
ಮಹಾರಾಜ ಪ್ರಸಾದೇನಾಭಿಷ್ಟಸಿದ್ಧಿಃ ಸುಖಾವಹಾ ॥೪॥

ಪರಾಶರರು ಹೇಳಿದರು–

ಹೇ ಮೈತ್ರೇಯ,

ಕೇಂದ್ರ ತ್ರಿಕೋಣ ಲಾಭ ತೃತೀಯ ಅಥಾ ಧನ ಸ್ಥಾನದಲ್ಲಿ ಶುಭಗ್ರಹ ಅಂತೆ ಲಗ್ನೇಶನ ಜತೆಗೆ ಭೌಮನಿದ್ದರೆ ಅಂಗಾರಕನ ದಶಾದಲ್ಲಿ ಅವನದೇ ಅಂತರದಶಾ - ರಾಜಕೃಪಾದಿಂದ ಐಶ್ವರ್ಯ ಪ್ರಾಪ್ತಿ ತಂದುಕೊಡುತ್ತದೆ. ಮನೆಯಲ್ಲಿ ಲಕ್ಷ್ಮೀ ಲಾಸ್ಯವಾಡುತ್ತಾಳೆ. ವಿನಷ್ಟರಾಜ್ಯ ಹಾಗೂ ಧನಪ್ರಾಪ್ತಿಯೂ ಆಗುತ್ತದೆ. ಪುತ್ರೋತ್ಸವ ಗೌ ಆದಿ ಪಶು ಸಂಪತ್ತುಗಳಿಂದ ಮನೆ ಪರಿಪೂರ್ಣವೆನಿಸುತ್ತದೆ. ಆದರೆ ಮಂಗಳ ತನ್ನ ಉಚ್ಚದಲ್ಲಿ ಸ್ವಭವನ ಸ್ವನವಾಂಶದಲ್ಲಿ ಸಬಲನಾಗಿದ್ದರೆ ಗ್ರಹ, ಹೊಲಗಳ ವೃದ್ಧಿ ಆಕಳು, ಪಶು ಸಂಪತ್ತಿನಿಂದ ಸುಖ ರಾಜ ಮಹಾರಾಜರ ಕೃಪೆಯಿಂದ ಅಭೀಷ್ಟಸಿದ್ಧಿ.

ಅಷ್ಟಮೇ ವಾ ವ್ಯಯೇ ಭೌಮೇ ಪಾಪದೃಗ್ಯೋಗಸಂಯುತೆ ।
ಮೂತ್ರಕೃಚ್ಛಾದಿ ರೋಗಶ್ಚ ಕ್ಲೇಶಾಧಿಕ್ಯಂ ವ್ರಣಾದ್ ಭಯವ್ ॥೫॥

ಚೌರಾಹಿರಾಜಪೀಡಾ ಚ ಧನಧಾನ್ಯಪಶುಕ್ಷಯಃ ।
ದ್ವಿತೀಯ ದ್ಯೂನನಾಥೆ ತು ದೇಹ ಜಾಡ್ಯಂ ಮನೋರುಜಾ ॥೬॥

ತದ್ದೋಷ ಪರಿಹಾರಾರ್ಥ ರುದ್ರಜಾಪ್ಯಂ ಚ ಕಾರಯೇತ್ ।
ಅನಂಗಾಹಂ ಪ್ರದದ್ಯಾಚ್ಚ ಕುಜದೋಷ ನಿವೃತ್ತಯೇ ॥೭॥

ಅಷ್ಟಮ ದ್ವಾದಶದಲ್ಲಿ ಪಾಪಗ್ರಹ ದೃಷ್ಟ ಅಥವಾ ಪಾಪಯುತ ಮುಂದಾಗಿದ್ದರೆ ಅವನಡೆ ಅಂತರದಶಾ ಮೂತ್ರಕೃಚ್ಛಾದಿ ರೋಗ ಮೂಲವಾಗುತ್ತದೆ. ವ್ರಣಭಯ ರಶ್ಮಸರ್ಪಾದಿ ಪೀಡೆ ರಾಜಭಯ ಧನಧಾನ್ಯ ಪಶು ವಿನಾಶ ಅದೇ ಮಂಗಲ 2, 7ರ ಅಧಿಪನಾಗಿದ್ದರೆ ದೇಹ ಪೀಡಾ ಮನೋದುಃಖ ಹೇಳುವುದು ದೋಷ ಪರಿಹಾರಾರ್ಥ ರುದ್ರಜಪ ಎತ್ತಿನ ದಾನ ಹೇಳುವುದು.

## ಭೌಮದಶಾ ರಾಹು ಅಂತರದಶಾ

ಕುಜಸ್ಯಂತರ್ಗತೆ ರಾಹೌ ಸ್ವೋಚ್ಚೆ ಮೂಲ ತ್ರಿಕೋಣಗೆ ।
ಶುಭಯುಕ್ತೆ ಶುಚೈದೃಷ್ಟೆ ಕೇಂದ್ರ ಲಾಭ ತ್ರಿಕೋಣಗೆ ॥೮॥

ತತ್ಕಾಲೆ ಈಷ್ಟಿ ಸಮ್ಮಾನಂ ಗ್ರಹಭೂಮ್ಯಾದಿರಾಗಮಃ ।
ಕಲತ್ರಪುತ್ರಯೋರ್ಲಾಭಃ ವ್ಯವಸಾಯೇತೆ ಘರಾಧಿಕಮ್ ॥೯॥

ಗಂಗಾಸ್ನಾನಫಲವಾಪ್ತಿರ್ವಿದೇಶಗಮನಂ ತಥಾ ॥

ಸ್ವೋಚ್ಚ ಮೂಲ ತ್ರಿಕೋಣ ಕೇಂದ್ರ ಲಾಭ ಸ್ಥಾನ ಅಥವಾ ತ್ರಿಕೋಣದಲ್ಲಿ ರಾಹು ಶುಭಯುಕ್ತನಾಗಿ, ಶುಭದೃಷ್ಟನಾಗಿ ಮಂಗಳ ಮಹಾದಶಾದಲ್ಲಿ ಅಂತರದಶಾಧೀಶನಾಗಿ ಬಂದಾಗ ರಾಜಸನ್ಮಾನ ಗ್ರಹಭೂಮಿ ಆದಿಲಾಭ ಸ್ತ್ರೀಪುತ್ರಪ್ರಾಪ್ತಿ ವ್ಯಾಪಾರದಲ್ಲಿ ಅಧಿಕ ಲಾಭ, ಸಫಲತಾ ಗಂಗಾಸ್ನಾನಾದಿ ಪ್ರಾಪ್ತಿ ಹಾಗೂ ವಿದೇಶಗಮನ.

ಅಷ್ಟಮೇ ವಾ ವ್ಯಯೇ ರಾಹೌ ಪಾಪಯುಕ್ತೇಥ ವೀಕ್ಷಿತೆ ॥೧೦॥

ಚೌರಾವ್ರಣಭೀತಿಶ್ಚ ಚತುಷ್ಪಾಜೀವನಾಶನಮ್ ।
ವಾತಪಿತ್ತಾಮಯಾದ್ ಭೀತಿಃ ಕಾರಾ ಗ್ರಹಾನಿಮೇಶನಮ್ ॥೧೧॥

ಧನಸ್ಥಾನಗತೆ ರಾಹೌ ಧನನಾಶೆ ಮಹದ್ ಭಯಮ್
ದ್ಯೂನಗೆ ಚಾಪಿ ಭವತಿ ಹಾಪಮೃತ್ಯುಭಯಂ ಮಹತ್ ॥೧೨॥

ನಾಗಾರ್ಚನಂ ಪ್ರಾಕುರ್ವೀತ ದೇವ ಬ್ರಾಹ್ಮಣ ಪೂಜನಮ್ ।
ಮೃತ್ಯುಂಜ್ಞಯಜಪಂ ಕುರ್ಯಾದಾಯುರಾರೋಗ್ಯಸಿದ್ಧಿಯೇ ॥೧೩॥

ಅಷ್ಟಮ ದ್ವಾದಶ ಸ್ಥಿತ ರಾಹು ಪಾಪಯುಕ್ತ ಪಾಪದೃಷ್ಟನಾಗಿದ್ದರೆ ಅಂತರ ದಶಾ ಸರ್ಪವ್ರಣ ಭಯ ಪಶುನಾಶ ವಾತ, ಪಿತ್ತರೋಗದ ಭಯ, ಕಾರಗೃಹ ವಾಸ, ಧನಸ್ಥಾನಗತನಾದರೆ ಧನಕ್ಷಯ ಮಹಾವ್ಯಯ ಸಪ್ತಮದಲ್ಲಿ ಅಪಮೃತ್ಯುಭಯ ಆರೋಗ್ಯ ಭಾಗ್ಯಕ್ಕಾಗಿ ನಾಗಾರ್ಚನೆ ದೇವಬ್ರಾಹ್ಮಣಪೂಜೆ ಹಾಗೂ ಮೃತ್ಯುಂಜಯ ಮಾಡುವುದು ಉತ್ತಮ.

## ಗುರು ಅಂತರ ದಶಾ

ಕುಜಸ್ಯಾಂತರ್ಗತೇ ಜೀವೇ ತ್ರಿಕೋಣೆ ಕೇಂದ್ರಗೆ ಪಿ ವಾ ।
ಲಾಭೆವಾ ಧನಸಂಯುಕ್ತೆ ತುಂಗಾಂಶೆ ಸ್ವಾಂಶಗೇಪಿವಾ ॥೧೪॥

ಸತ್ಕೀರ್ತಿ ರಾಜಸಮ್ಮಾನಂ ಧನಧಾನ್ಯಸ್ಯ ವರ್ಧನಮ್ ।
ಗೃಹೆ ಕಲ್ಯಾಣ ಸಂಪತ್ತಿರ್ದಾರಪುತ್ರಾದಿಕಾಗಮಃ ॥೧೫॥

ತ್ರಿಕೋಣ ಕೇಂದ್ರ ಲಾಭ ಸ್ಥಾನ ಧನಸ್ಥಾನ ಉಚ್ಚನವಾಂಶ ಅಥವಾ ಸ್ವನವಾಂಶ ದಲ್ಲಿ ಗುರು ಇದ್ದ ಮಂಗಳದಶಾದಿ, ಅಂತರ ದಶಾಧೀಶನಾಗಿ ತನ್ನುಚ್ಛದ ಬರಲು ಶುಭಫಲ ಯಶಪ್ರದ ರಾಜನಿಂದ ಸನ್ಮಾನ ಧನ ಧಾನ್ಯವೃದ್ಧಿ ಮನೆಯಲ್ಲಿ ಶುಭ ಕಾರ್ಯ ಸಂಪತ್ತಿನ ಹೆಚ್ಚಳ ಸ್ತ್ರೀಪುತ್ರಾದಿ ಪ್ರಾಪ್ತಿ.

ದಾಯೇಶಾತ್ ಕೇಂದ್ರರಾಶಸ್ಥೆ ತ್ರಿಕೋಣೆ ಲಾಭಗೇ ಪಿ ವಾ ।
ಭಾಗ್ಯಕರ್ಮಾ ಧಿ ಪೈರ್ಯುಕ್ತೆ ವಾಹನಾಧಿಪಸಂ ಯುತೆ ॥೧೬॥

ಲಗ್ನಾಧಿಪಸಮಾಯುಕ್ತೆ ಶುಭಾಂಶೆ ಶುಭವರ್ಗ ಗೆ ।
ಗೃಹ ಕ್ಷೇತ್ರಾಭಿಪ್ಪವೃದ್ಧಿಶ್ಚ ಗೃಹೆ ಕಲ್ಯಾಣ ಸಂಪದಃ ॥೧೭॥

ದೇಹಾರೋಗ್ಯಂ ಬಹುತ್ಕೀರ್ತಿ ಗೃಹೆ ಗೋಕುಲ ಸಂಗ್ರಹಃ ।
ಚತುಷ್ಪಾಜೀವಲಾಭಃ ಸ್ಯಾದ್ ವ್ಯವಸಾಯತ್ ಫಲಾಧಿಕಮ್ ॥೧೮॥

ದಶಾಧಿಪತಿಯಿಂದ ಕೇಂದ್ರ ತ್ರಿಕೋಣ ಲಾಭಸ್ಥಾನ ಸ್ಥಿತ ಗುರುಭಾಗ್ಯೇಶ ಕರ್ಮೆಶ ವಾಹಗೇನ, ಲಗ್ನೇಶನಿಂದ ಸಹಿತನಾಗಿದ್ದ ಗುರು ಶುಭ ವರ್ಗದಲ್ಲಿ ಮಂಗಳ ದಶಾದಲ್ಲಿದ್ದರೆ ಮನೆ, ಹೊಲದ ಅಭಿವೃದ್ಧಿ ಮನೆಯಲ್ಲಿ ಮಂಗಳ ಕಾರ್ಯ ಸೂರ್ಯ ಪಶ್ವಾಧಿವೃದ್ಧಿ ಪಶುಗಳಿಂದ ಲಾಭ, ವ್ಯಾಪಾರದಿಂದ ಅಧಿಕಲಾಭ,

ಸ್ತ್ರೀಪುತ್ರ ಸೌಕರ್ಯ ಹಾಗೂ ರಾಜ ಸಮ್ಮಾನಾದಿ ಶುಭ ಫಲ ಹೇಳುವುದು.

ಕಲತ್ರಪುತ್ರಜಂ ಸೌಖ್ಯಂ ರಾಜಸಮ್ಮಾನ ವೈಭವಮ್ ।
ಷಷ್ಠಾಷ್ಟಮವ್ಯಯೇ ಜೀವೇ ನೀಚೆ ವಾಸ್ತಂಗತೇಪಿ ಚ ॥೧೯॥

ಪಾಪಗ್ರಹೇಣ ಸಂಯುಕ್ತೆ ದೃಷ್ಟೇ ವಾದುರ್ಬಲೆ ಭವೇತ್ ।
ಚೌ ರಾಹಿಪಭೀತಿಶ್ಚ ಪಿತ್ತರೋಗಾದಿ ಸಂಭವಃ ॥೨೦॥

ಪ್ರೇತಭಾಧಾಭೃತ್ಯುನಾಶಃ ಸೋದರಣಾಂ ವಿನಾಶನಮ್।
ದ್ವಿತೀಯದ್ಯೂನಗಾಥೆ ಸ್ಯಾದಪಮೃತ್ಯಜ್ವರಾದಿ ಕಮ್ ॥೨೧॥

ತದ್ದೋಶಪರಿಹಾರಾರ್ಥ ಶಿವಸಹಸ್ರಕಂ ಜಪೇತ್।

ಗುರು ದಶೇಶನಿಂದ 6, 8, 12ರಲ್ಲಿ ನೀಚರಾಗಿದ್ದ ಅಸ್ತಂಗತ ಪಾಪಗ್ರಹಯುತ ಅಥವಾ ದೃಷ್ಟಿ ದುರ್ಬಲನಾಗಿ ಮಂಗಳ ದಶಾ ಅಂತರ ದಶಾಧೀಶನಾಗಿದ್ದರೆ ಕಳ್ಳಸರ್ಪ ಹಾಗೂ ರಾಜಭಯ ಪಿತ್ತ ಜನ್ಮರೋಗ - ಪ್ರೇತಭಯ ಸೇವಕರ ಮೃತ್ಯು ಸಹೋದರರ ವಿನಾಶ ಅದೆ ಗುರು 2-7ರ ಸ್ವಾಮಿಯಾಗಿದ್ದರೆ ಅಪಮೃತ್ಯು ಜ್ವರ ಭಾದೆ ಈ ದೋಷ ನಿವಾರಣೆಗೆ ಶಿವಸಹಸ್ರನಾಮದ ಜಪವೊಂದೇ ಉಪಾಯ.

## ಮಂಗಳ ಮಹಾದಶಾ ಶನಿ ಅಂತರದಶಾ

ಕಂಜಸ್ಯಾಂತರ್ಗಿತೆ ಮುಂದೆ ಸ್ವರ್ಕ್ಷೆ ಕೇಂದ್ರ ತ್ರಿಕೋಣಗೆ ॥೨೨॥

ಮೂಲ ತ್ರಿಕೋಣ ಕೇಂದ್ರೆ ವಾ ತುಂಗಾಂಶೆ ಸ್ವಾಂಶಗೇಪಿ ಚ ।
ಲಗ್ನಾಧಿಪತಿ ನಾ ವಾಪಿ ಶುಭ ದೃಷ್ಟಿಯುತೆ ಸತಿ ॥೨೩॥

ರಾಜ್ಯ ಸೌಖ್ಯಂ ಯುಶೋವೃದ್ಧಿ, ಸಮೃದ್ಧಿರ್ಧನ ಧಾನ್ಯಯೋಃ ।
ಪುತ್ರಪೌತ್ರಾದಿಸೌಖ್ಯಂ ಚ ಗ್ರಹೆ ಗೋಧನ ಸಂಗ್ರಹಃ ॥೨೪॥

ಸ್ವವಾರೆ ರಾಜ ಸಮ್ಮಾನಂ ಸ್ವಮಾಸೆ ಪುತ್ರವರ್ಧನಮ್।

ಸ್ವಭವನ ಕೇಂದ್ರ ತ್ರಿಕೋಣ ಮೂಲತ್ರಿಕೋಣ ಏಚ್ಚ ನವಾಂಶ ಅಥವ ಸ್ವನವಾಂಶ ಸ್ಥಿತ ಶನಿ ಲಗ್ನೇಶ ಅಥವಾ ಶುಭಗ್ರಹಯುತ ಅಥವ ದೃಷ್ಟರಾಗಿದ್ದರೆ ಕುಜ ದಶಾ ಶನಿ ಅಂತರದಶಾದಲ್ಲಿ ರಾಜಸೌಖ್ಯ ಯಶೋವೃದ್ಧಿ ಧನ ಧಾನ್ಯದ ಸಮೃದ್ಧಿ ಪುತ್ರಪೌತ್ರಾದಿ ಸೌಖ್ಯ ಮನೆಯಲ್ಲಿ ಗೋ ದನದ ವೃದ್ಧಿ ಶನಿವಾರ ರಾಜ ಸನ್ಮಾನ ಶನಿಮಾಸದಲ್ಲಿ ಪುತ್ರವೃದ್ಧಿ ಹೇಳುವುದು.

ನೀಚಾದಿಕ್ಷೇತ್ರಗೆ ಮಂದೇಪಿ ವಾಂಷ್ಟವ್ಯಯ ರಾಶಿಗೆ ॥೨೫॥
ಮ್ಲೇಂಚ್ಛವರ್ಗಪ್ರಭು ಭಯಂ ಧನಧಾನ್ಯಾದಿನಾಶನಮ್ ।
ನಿಗಡೈರ್ಭಂಧನಂ ರೋಗೋವಸಾನೆ ಕ್ಷೇತ್ರ ನಾಶನಮ್ ॥೨೬॥

ಶನಿಸ್ವನೀಚ (ಮೇಷ) ಅಥವಾ ಶತ್ರುಕ್ಷೇತ್ರ ಅಥವಾ 8-12ರಲ್ಲಿದ್ದರೆ ಅಂತರದಶಾದಲ್ಲಿ ಮ್ಲೇಚ್ಛವರ್ಗೀಯ ಸಂಸರ್ಗ ರಾಜನಿಂದ ಭಯ ಧನಧಾನ್ಯ ಹಾಗೂ ಇತರ ಸಂಪತ್ತು ನಾಶ ಬೇಡಿಯಿಂದ ಬಂಧನ ರೋಗ ದಶಾಂಶದಲ್ಲಿ ಕ್ಷೇತ್ರದ (ಮನೆ) ವಿನಾಶ.

ದ್ವಿತೀಯದ್ಯೂನನಾಥೆ ತು ಪಾಪಯುಕ್ತೆ ಮಹದ್ ಭಯಮ್।
ಧನನಾಶ್ಚ ಸಂಚಾರೆ ರಾಜದ್ವೇಷೊ ಮನೋರುಜಾ ॥೨೭॥

ಚೌರಾಗ್ನಿ ಪಡಾ ಚ ಸಹೋದರ ವಿನಾಶನಮ್
ಬಂಧುಭಿಃ ಸಹ ಉದ್ವೇಷೊ ಜೀವಹಾನಿಶ್ಚ ಜಾಯತೆ ॥೨೮॥

ಅಕಸ್ಮಾಚ್ಚ ಮೃತೇರ್ಭೀತಿಃ ಪುತ್ರದಾರಾದಿ ಪೀಡನಮ್ ।
ಕಾರಾಗೃಹಾದಿ ಭೀತಿಶ್ಚ ರಾಜ ದಂಡೋ ಮಹದ್ ಭಯಮ್ ॥೨೯॥

ಪಾಪಗ್ರಹ ಯುಕ್ತ ಶನಿ 2, 7 ರ ಸ್ವಾಮಿಯಾಗಿದ್ದರೆ ಅಂತರದಶಾ ಕಾಲದಲ್ಲಿ ಮಹಾಭಯ ಯಾತ್ರಾದಿಗಳಲ್ಲಿ ಧನವ್ಯಯ ರಾಜದ್ವೇಷ ಮನೇ ವ್ಯಥಾ ಕಳ್ಳ ಅಗ್ನಿ ರಾಜಪೀಡಾ ಸಹೋದರ ವಿನಾಶ ಬಂಧುಗಳ ಜತೆಗೆ ಉದ್ವೇಶ ಜೀವಹಾನಿ ಅಕಸ್ಮಾತ ಮೃತ್ಯುಭಯ ಸ್ತ್ರೀಪುತ್ರರಿಗೆ ಪೀಡೆ ಬಂಧನದ ಭಯ ರಾಜರಿಂದ ಮಹಾಭಯವುಂಟಾಗುತ್ತದೆ.

ದಾಯೇಶಾತ್ ಕೇಂದ್ರ ರಾಜಸ್ಥೆ ಲಾಭಸ್ಥೆ ವಾ ತ್ರಿಕೋಣಗೆ ।
ವಿದೇಶಯಾನಂ ಲಭತೆ ದುಷ್ಕೀರ್ತಿ ವಿವಿಧಾ ತಥಾ ॥೩೦॥

ಪಾಪಕರ್ಮರತಿನಿಂತ್ಯಂ ಬಹುಜೀವಾದಿಹಿಂಸನಮ್ ।
ವಿಕ್ರಯಃ ಕ್ಷೇತ್ರ ಹಾನಿಶ್ಚ ಸ್ಥಾನ ಭ್ರಂಶೋ ಮನೋವ್ಯಥಾ ॥೩೧॥
ಪರರಾಜಯೊಪಿ ಯುದ್ದೆ ಸ್ಯಾನ್ಮೂತ್ರಕೃಚ್ಛ್ರಾನ್ಮಹದ್ ಭಯಮ್ ।

ದಶಾಪತಿಯಿಂದ (ಮಂಗಳನಿಂದ) ಕೇಂದ್ರ ತ್ರಿಕೋಣ ಅಥವಾ ಲಾಭ ಸ್ಥಾನದಲ್ಲಿದ್ದರೆ ಶನಿ ಅಂತರದಶಾ ವಿದೇಶಯಾತ್ರೆಯನ್ನು ತಂದುಕೊಡುತ್ತದೆ. ವಿವಿಧ ರೀತಿ ದುಷ್ಕೀರ್ತಿ ಯುದ್ಧದಲ್ಲಿ ಪರಾಜಯ ಮೂತ್ರಕೃಚ್ಛ್ರಾದಿ ರೋಗಭಯದ ವಾತಾವರಣ.

ದಾಯೇಶಾತ್ ಸಂಸ್ಥಿತೇ ರಂದ್ರೇ ವ್ಯಯೇ ಪಾಪಾಪಸಂಯುತೇ ॥೩೨॥

ತದ್‌ಭಕ್ತೌ ಮರಣಾ ಜ್ಞೇಯಂ ನೃಪಚೌರಾದಿ ಪೀಡನಂ ।
ವಾತ ಪೀಡಾಚ ಶೂಲಾದಿಜ್ಞಾತಿ ಶತ್ರು ಭಯಂ ಭವೇತ್ ॥೩೩॥

ತದ್ದೋಷ ಪರಿಹಾರಾರ್ಥ ಮೃತ್ಯುಂಜಯಜಪಂ ಚರೇತ್ ।

ದಶಾಧಿಪನಿಂದ ಪಾಪಿಯುಕ್ತ ಶನಿ ಅಷ್ಟಮ ದ್ವಾದಶಸ್ಥನಾಗಿದ್ದರೆ ಅಂತರ ದಶಾಕಾಲ ಮರಣವನ್ನು ತರುತ್ತದೆ. ರಾಜಕಳ್ಳರಿಂದ ಪೀಡೆ ವಾತಿವ್ಯಾಧಿಯಿಂದ ಕಷ್ಟ ಶೂಲಾದಿ ರೋಗ ಕುಟುಂಬ ಹಾಗೂ ಶತ್ರುಭಯ ಹೋಗುವುದು. ದೋಷ ಪರಿಹಾರಾರ್ಥ ಮೃತ್ಯುಂಜಯ ಜಪ ಶ್ರೇಯಸ್ಕರವಾಗುತ್ತದೆ.

## ಮಂಗಳದಶಾ ಬುಧಾಂತರದಶಾ

ಕುಜಸ್ಯಾಂತರ್ಗತೇ ಸೌಮ್ಯೇ ಲಗ್ನಾತ್ ಕೇಂದ್ರ ತ್ರಿಕೋಣಗೇ ॥೩೪॥

ಸತ್ಕಥಾಶ್ಚ ಜಪಾದಾನಂ ಧರ್ಮವೃದ್ಧಿರ್ಮಹಾಯಶಃ ।
ನೀತಿ ಮಾರ್ಗ ಪ್ರಸಂಗಶ್ಚ ನಿತ್ಯಂ ಮೃಷ್ಟಾನ್ನಭೋಜನಂ ॥೩೫॥

ವಾಹನಾಂಬರಪಶ್ವಾದಿ ರಾಜಕರ್ಮ ಸುಖಾನಿ ಚ ।
ಕೃಷಿಕರ್ಮ ಫಲಂ ಸಾಧು ವಾರಣಾಂಬರ ಭೂಷಣಮ್ ॥೩೬॥

ಲಗ್ನದಿಂದ ಕೇಂದ್ರ ಅಥವಾ ತ್ರಿಕೋಣಸ್ಥ ಬುಧ ಮಂಗಲ ಮಹಾದಶಾದಲ್ಲಿ ಅಂತರ ದಶಾಧೀಶನಾಗಿ ಬಂದಾಗ ಸತ್‌ಸಂಗತ ಜಪಾದಿ - ಅದರ ಸಲುವಾಗಿ ಅಥ: ದಾನಾದಿ ಧಾರ್ಮಿಕ ಕಾರ್ಯವೃದ್ಧಿಯಲ್ಲಿ ಮನಸ್ಸನ್ನು ತೊಡಗಿಸುತ್ತಾನೆ. ಬುದ್ಧಿಯಲ್ಲಿ ಧಾರ್ಮಿಕತೆ ಎಲ್ಲದರ ಎಲ್ಲಾ ಯುದ್ಧ ನೀತಿ ಮಾರ್ಗಾನುಸಾರ ನಡವಳಿಕೆ ನಿತ್ಯ ಮೃಷ್ಟಾನ್ನಭೋಜನ ವಾಹನ, ವಸ್ತ್ರ, ಪಶು ಆದಿ ಹಾಗೂ ರಾಜಾಧಿಕಾರದಿಂದ ಸುಖ ಕೃಷಿಕಾರ್ಯದಲ್ಲಿ ಸಫಲತೆ ಆನಂದ, ಪಶುಸಂಪತ್ತು, ವಸ್ತ್ರಭೂಷಣ ಪ್ರಾಪ್ತಿ.

ನೀಚೆ ವಾಸ್ತಂಗತೆ ವಾಪಿ ಷಷ್ಠಾಷ್ಟವ್ಯಯಗೇ ಪಿ ವಾ।
ಹೃದ್ರೋಗೋ ಮಾನ ಹಾನಿಶ್ಚ ನಿಗಡಂ ಬಂಧುನಾಶನಮ್ ॥೩೭॥

ದಾರಾಪುತ್ರಾರ್ಥನಾಶಃ ಸ್ಯಾಚ್ಚತುಷ್ಪಾಜ್ಜೀವ ನಾಶನಮ್।
ದಶಾಧಿಪೇನ ಸಂಯುಕ್ತೇ ಶತ್ರುವೃದ್ಧಿರ್ಮಹದ್ ಭಯಮ ॥೩೮॥

ವಿದೇಶಗಮನಂ ಚೈವ ನಾನಾರೋಗಸ್ತಥೈವ ಚ।
ರಾಜದ್ವಾರೆ ವಿರೋಧಶ್ಚ ಕಲಹೋ ಬಂಧುಭಿಃ ಸಹ ॥೩೯॥

ಬುಧ ನೀಚರಾಶಿ (ಮೀನ) ಷಷ್ಠ ಅಷ್ಟಮ ಅಥವಾ ದ್ವಾದಶವಿದ್ದರೆ, ಅಸ್ತಂಗತನಾಗಿದ್ದರೆ ಭೌಮನದಶಾದಲ್ಲಿ ಬುಧನ ಅಂತರ ದಶಾ ಬಂದಾಗ ಹೃದ್ರೋಗ ಮಾನಹಾನಿ, ಬಂಧನ ಬಂಧುನಾಶ ಸ್ತ್ರೀಪುತ್ರವಿನಾಶ, ಪಶುನಾಶವೂ ಹೇಳುವುದು. ಅದೆ ಬುಧ ದಶೇಶನಿಂದ ಯುಕ್ತನಾಗಿದ್ದರೆ ಶತ್ರುವೃದ್ಧಿ ಮಹಾಭಯ ವಿದೇಶಗಮನ ಅನೇಕ ರೋಗ ರಾಜ ದರ್ಬಾರದಲ್ಲಿ ವಿರೋಧ ಬಂಧುಜನರೊಡನೆ ಸದಾ ಕಲಹ ತೋರಿಸುತ್ತಾನೆ.

ಎಲ್ಲ ಗ್ರಹಗಳಿಗೂ ಅವು ನೀಚಸ್ಥನಾಗಿದ್ದಾಗ ವಿದೇಶಗಮನ ತೋರಿಸಿದ್ದು, ಆಗ ಪರ ಊರು, ಪ್ರಾಣ ಸಂಕಟನೆಂಬ ಗಾದೆಯಂತೆ ವಿದೇಶ ಯಾತ್ರೆ ಕಷ್ಟಕರವಾಗಿ ಪರಿಗಣಿಸಲಾಗಿತ್ತು. ಈಗ ವಿದೇಶ ಯಾತ್ರೆ ಒಂದು ಗೌರವದ ಚಿಹ್ನೆಯಾಗಿದೆ. ಆಗ ಊರು ಬಿಡುವುದು ಹೊಟ್ಟೆಗಿಲ್ಲದಾಗ ಎಂಬುದಾಗಿತ್ತು. ಈಗ ಜ್ಯೋತಿಷಿಗಳು ಚಂದ್ರ-ಗುರು ಆದಿ ಶುಭಸ್ಥರಾದರೆ ವಿದೇಶಯಾತ್ರೆ ಹೋಗುವ ವಾಡಿಕೆಯಾಗಿದೆ. ಎರಡೂ ಅಂಶ ಕೂಲಂಕಶ ವಿಚಾರ ಮಾಡಿ ವಿದೇಶ ಯಾತ್ರೆಯ ಬಗ್ಗೆ ಹೇಳಬೇಕಾಗು ವುದು. 'ಪರ ಊರು ಪ್ರಾಣ ಸಂಕಟ' ಈ ಅಂಶ... ಪರದೇಶ ಗಮನಕ್ಕೆ ತರುವುದು ವಿಹಿತ. ಅದೇ ಆಧಾರದ ಮೇಲೆ ಹಿಂದಿನ ಋಷಿಮುನಿಗಳು-ಗ್ರಹಗಳ- ನೀಚತ್ವದಲ್ಲಿ ಪರದೇಶಗಮನವನ್ನು ವಿವರಿಸಿದ್ದಾರೆ. ವರಾಹಮಿಹಿರರ ನಂತರ ಸ್ವಲ್ಪ ಬದಲಾವಣೆ ಯಾಗಿದೆ.

ದಾಯೇಶಾತ್ ಕೇಂದ್ರಕೋಣೆ ವಾ ಸ್ವೋಚ್ಚೇಯಕ್ತಾರ್ಥ ಸಂಪದಃ।
ಅನೇಕ ಧನನಾಥತ್ವಂ ರಾಜಸಮ್ಮಾನ ಮೇದ ಚ ॥೪೦॥

ಭೂಪಾಲಯೋಗಂ ಕುರುತೆ ಧನಾಂಬರವಿಭೂಷಣಾವ್।
ಭೂರಿವಾದ್ಯಮೃದಂಗಾದಿ - ಸೇನಾಪತ್ಯಂ ಮಹತ್ ಸುಖವ್ ॥೪೧॥

ವಿದ್ಯಾವಿನೋದ ವಿಮಲಾ ವಸ್ತ್ರವಾಹನ ಭೂಷಣಾವ್।
ದಾರಪುತ್ರದಿವಿಭವೊ ಗ್ರಹೆ ಲಕ್ಷ್ಮೀಃ ಕಟಾಕ್ಷಕೃತ್ ॥೪೨॥

ದಶಾನಾಥನಿಂದ ಅಂತರ ದಶಾನಾಥನು ಕೇಂದ್ರ ತ್ರಿಕೋಣ ಅಥವಾ ಸ್ವೋಚ್ಚದಲ್ಲಿದ್ದರೆ ಅಂತರದಶಾಕಾಯಿ ಧನ ಸಂಪತ್ತಿನ ಬಾಧಾಕಾಲವಾಗುತ್ತದೆ. ಅನೇಕ ವಿಧ ಸಂಪತ್ತಿನ ಸ್ವಾಮಿ ಸ್ವಲಾಭ ರಾಜ ಸನ್ಮಾನ, ಇತರ ರಾಜಯೋಗ ಧನ ವಸ್ತ್ರ ಭೂಷಣಾದಿ ಪ್ರಾಪ್ತಿ ಮೃದಂಗಾದಿ ವಾದ್ಯಗಳ ಬಹುಲತೆ ಸೇನಾಪತ್ಯಾಧಿಕಾರ

ಲಾಭ ಮಹಾಸುಖ ವಿನೋದಪೂರ್ಣ ವಿದ್ಯಾದಿ ಪ್ರತಿಷ್ಠಾ ವಸ್ತ್ರವಾಹನ ಭೂಷಣಗಳ ಪ್ರಾಪ್ತಿ ಸ್ತ್ರೀಪುತ್ರಾದಿಯರ ಸುಖ ಮನೆಯಲ್ಲಿ ಲಕ್ಷ್ಮೀ ಕಟಾಕ್ಷ.

ದಾಯೇಶಾತ್ ಷಷ್ಠರಿಪ್ಫಸ್ಥೆ ರಂಧ್ರೆ ವಾ ಪಾಪಸಂಯುತೆ।
ತದ್ದಾಯೇ ಮೌನ ಹಾನಿಃ ಸ್ಯಾತ್ ಕ್ರೂರ ಬುದ್ಧಿ ಸ್ತುಕ್ರೂರವಾಕ್ ॥೪೩॥

ಚೌರಾಗ್ನಿನೃಪಪೀಡಾ ಚ ಮಾರ್ಗೆ ಚೌರಾದಿಜಂ ಭಯಮ್ ।
ಅಕಸ್ಮಾತ್ ಕಲಹಶ್ಚೈವ ಕುಜ ಭುಕ್ತೌ ನ ಸಂಶಯಃ ।

ದಶಾನಾಥನಿಂದ ಷಷ್ಠ ಅಷ್ಟಮ ದ್ವಾದಶ(6, 8, 12)ರಲ್ಲಿ ಪಾಪಯುಕ್ತ ಬುಧನಿದ್ದರೆ ಅವನ ಅಂತರ ದಶಾದಲ್ಲಿ ಮಾನಹಾನಿ ಕ್ರೂರ ಬುದ್ಧಿ ಹಾಗೂ ಕ್ರೂರ ವಚನ ಕಶ್ಯ ಅಗ್ನಿ ರಾಜಪೀಡಾದಿಗಳು ದಾರಿಯಲ್ಲಿ ಧನಕಳವು ಅಕಸ್ಮಾತ್ ಕಲಹ ಜನ್ಯ.

ದ್ವಿತೀಯ ದ್ಯೂನನಾಥೆ ತು ಮಹಾವ್ಯಾಧಿರ್ಭಯಂಕರಃ।
ಅಶ್ವದಾನಂ ಪ್ರಕುರ್ವೀತೆ ವಿಷ್ಣೋರ್ನಾಮಂಸಹಸ್ರಕಮ್ ॥೪೫॥

ಸರ್ವಸಂಪತ್ತ್ಸುಖಕರಂ ಸರ್ವರಿಪ್ಪಪ್ರಶಾಂತಯೇ ।

ಅದೇ ಬುಧ 2, 7ರ ಅಧಿಪನಾಗಿದ್ದರೆ ತನ್ನ ಅಂತರದಶಾದಲ್ಲಿ ಭಯಂಕರ ವ್ಯಾಧಿಕಾರಕನಾಗುತ್ತಾನೆ. ಅದರ ಶಾಂತಿಗಾಗಿ ಅಶ್ವದಾನ ವಿಷ್ಣು ಸಹಸ್ರನಾಮದ ಪಾಠ, ಸುಖಸಂಪತ್ತ್ದಾಯಕವಾಗುತ್ತದೆ.

## ಕೇತು ಅಂತರದಶಾ ಫಲ

ಕುಜಸ್ಯಾಂತರ್ಗತೆ ಕೇತೌ ತ್ರಿಕೋಣೆ ಕೇಂದ್ರಗೇಪಿ ವಾ ॥೪೬॥

ದುಶ್ಚಿಕ್ಯೇ ಲಾಭಗೆ ವಾಪಿ ಶುಭಯುಕ್ತೆ ಶುಭೇಕ್ಷಿತೆ ।
ರಾಜಾನುಗ್ರಹ ಶಾಂತಶ್ಚ ಬಹುಸೌಖ್ಯಂ ಧನಾಗಮಃ ॥೪೭॥

ಕಿಂಚಿತ್ ಫಲಂ ದಶಾದೌ ಸ್ಯಾಲ್ಲಾಭೋ ಭೂಸುತಯೋ ರಪಿ ।
ರಾಜಸಂಲಾಭಕಾರ್ಯಾಣಿ ಲಾಭೋಶ್ವಾದಿ ಚತುಷ್ಪಾದಮ್ ॥೪೮॥

ತ್ರಿಕೋಣ ಕೇಂದ್ರ ತೃತೀಯ ಏಕಾದಶ ಸ್ಥಾನದಲ್ಲಿ ಶುಭಯುಕ್ತನಾದ ಅಥವಾ ಶುಭದೃಷ್ಟನಾದ ಕೇತು ಅಂತರದಶಾದಲ್ಲಿ ರಾಜಕೃಪಾದಿಂದ ಮನಶಾಂತಿ, ಪ್ರಚುರ ವಾದ ಸುಖ, ಧನಾಗಮ, ದಶಾರಂಭ ಸುಖ ಭೂಮಿ ಪುತ್ರಲಾಭ ರಾಜಕಾರ್ಯಾಧಿ ಕಾರ ಅಶ್ವಾದಿ ಪಶುಲಾಭ.

ಯೋಗಕಾರಕಸಂಸ್ಥಾನೆ ಬಲವೀರ್ಯ ಸಮನ್ವಿತೆ ।
ಪುತ್ರಲಾಭೋ ಯಶೋವೃದ್ಧಿರ್ಗೃಹೆ ಲಕ್ಷ್ಮೀಃ ಕಟಾಕ್ಷಕೃತ್ ॥೪೯॥

ಭೃತ್ಯವರ್ಗಾದ್ಧನಪ್ರಾಪ್ತಿಃ ಸೇನಾಪತ್ಯಂ ಮಹತ್ ಸುಖಮ್ ।
ಭೂಪಾಲಮಪಿಮಪಿ ತು ಯಾಗಾಂಬರವಿಭೂಷಣಮ್ ॥೫೦॥

ಪ್ರಬಲ ಕೇತು ಯೋಗಕಾರಕನಾಗಿ ಅಂತರದಶಾ ಕಾಲದಲ್ಲಿ ಪುತ್ರಲಾಭ ಯಶೋವೃದ್ಧಿ ಮನೆಯಲ್ಲಿ ಲಕ್ಷ್ಮೀಕಟಾಕ್ಷ ಭೃತ್ಯುವರ್ಗದಿಂದ ಧನಪ್ರಾಪ್ತಿ ಸೇನಾಪತಿತ್ವ ಮಹಾಸುಖ ರಾಜಮಿತ್ರ ಹಾಗೂ ಯಜ್ಞಕಾರ್ಯ ವಸ್ತ್ರಭೂಷಣದ ಲಾಭ-

ದಾಯೇಶಾತ್ ಷಷ್ಟ್ಯರಿಪ್ಫಷ್ಠೆ ರಂಧ್ರೆ ವಾ ಪಾಪಸಂಯುಕ್ತೆ ।
ಕಲಹೋ ದಂತರೋಗಶ್ಚ ಚೌರಾವ್ಯಾಘ್ರಾದಿ ಪೀಡನಮ್ ॥೫೧॥

ಜ್ವಗತಿಸಾರ ಕ್ಯುಷ್ಟಾದಿ ದಾರಪುತ್ರಾದಿ ಪೀಡನಮ್ ।
ದ್ವಿತೀಯ ಸಪ್ತಮಸ್ಥಾನೆ ದೇಹೆ ವ್ಯಾಧಿರ್ಭವಿಷ್ಯತಿ ॥೫೨॥

ಸಂತಾಪೋ ಮಾನ ಹಾನಿಃ ಸ್ಯಾದ್ ಧನಧಾನ್ಯಾದಿಕಚ್ಯುತಿಃ।

ದಶಾಪತಿಯಿಂದ 6, 8, 12ರಲ್ಲಿ ಸಪಾಪ ಕೇತು ಮಂಗಳ ದಶಾದಲ್ಲಿ ಅಂತರ ದಶಾಪ್ರೈಯುಗಿದ್ದಾಗ ಮನೆಯಲ್ಲಿ ವಿನಾಕಾರಣ ಕಲಹ ದಂತ ರೋಗ ಕಳ್ಳಶಾಕಾದಿ ಭಯ ವ್ಯಾಘ್ರ ಆದಿ ಹಿಂಸ್ರ ಪಶು ಭಯ ಪೀಡಾ ಜ್ವರ ಅತಿಸಾರ ಕುಷ್ಟ ಆದಿರೋಗ ಸ್ತ್ರೀಪುತ್ರಂಗೆರ್ಪಿಡಾ ಅದೆ ಕೇತು ದಶೇಸನಿಂದ ದ್ವಿತೀಯ ಸಪ್ತಮ ಸ್ಥಾನದಲ್ಲಿದ್ದರೆ ಅಂತರ ದಶಾಕಾಲದಲ್ಲಿ ಶಾರೀರಿಕ ಕ್ಲೇಶ ಸಂತಾಪ ಮಾನಹಾನಿ ಧನ-ಧಾನ್ಯ ಕ್ಷಯ-

ಇಲ್ಲಿ ಪರಿಹಾರೋಪಾಯ ಸೂಚಿಸಿಲ್ಲವಾದರೂ ರುದ್ರ ಜಾಪಾದಿಕಗಳು ಇಲ್ಲಿವೆ. ದುರ್ಗಾಸ್ತುತಿ ಪರಿಹಾರವಾಗಿದೆ.

## ಶುಕ್ರಾಂತರ ದಶಾಫಲ

ಕುಜಸ್ಯಾಂತರ್ಗತೆ ಶುಕ್ರೆ ಕೇಂದ್ರ ಲಾಭ ತ್ರಿಕೋಣಗೆ ॥೫೩॥

ಸ್ವೋಚ್ಚೆ ವಾ ಸ್ವರ್ಕ್ಷಗೆ ವಾಪಿ ಶುಭಸ್ಥಾನಾಧಿಪೇಥವಾ ।
ರಾಜ್ಯಲಾಭೋ ಮಹತ್ ಸೌಮ್ಯಂ ಗಜಾಶ್ವಾಂಬರ ಭೂಷಣಮ್ ॥೫೪॥

ಲಗ್ನಾಧಿಪೀನ ಸಂಬಂಧೆ ಪುತ್ರದಾರಾದಿವರ್ಧನಮ್ ।
ಆಯುಷೊ ಬುದ್ಧಿ ರೈಶ್ವರ್ಯ ಭಾಗ್ಯವೃದ್ಧಿಃ ಸುಖಂ ಭವೇತ್ ॥೫೫॥

ಕೇಂದ್ರ ತ್ರಿಕೋಣ ಲಾಭಸ್ಥಾನ ಸ್ವೋಚ್ಚ ಅಥವಾ ಸ್ವಭವನಗತ ಶುಕ್ರ ಅಂತರದಶಾ ಮಂಗಳ ಮಹಾದಶಾದಲ್ಲಿ ರಾಜ್ಯಲಾಭ-

ಮಹಾಸೌಖ್ಯ ಕುದುರೆ, ಆನೆ ಇತ್ಯಾದಿ ಪಶು ಲಾಭ, ವಸ್ತ್ರ ಆಭೂಷಣದ ಪ್ರಾಪ್ತಿ ಲಗ್ನೇಶನ ಸಂಬಂಧವಿದ್ದರೆ ಸ್ತ್ರೀ ಪುತ್ರಾಭಿವೃದ್ಧಿ. ಆಯುರ್‌ವೃದ್ಧಿ ಐಶ್ವರ್ಯ ಹಾಗೂ ಭಾಗ್ಯವೃದ್ಧಿ-ಸುಖ ಹೇಳುವದು.

ದಾಯೋಶಾತ್ ಕೇಂದ್ರ ಲಾಭಸ್ಥೆ ಕೋಣೆ ವಾ ಧನಗೇಪಿ ವಾ ।
ತತ್ಕಾಲೆ ಶ್ರೀಯಮಾಪ್ನೋತಿ ಪುತ್ರಲಾಭ ಮಹತ್ ಸುಖಂ ॥೫೬॥

ಸ್ವಪ್ರಭೋಶ್ಚ ಮಹತ್ ಸೌಖ್ಯಂ ಲಾಭಃ ಸ್ಯಾದ್ಧನ ವಸ್ತ್ರಯೋಃ।
ಮಹಾರಾಜ ಪ್ರಸಾದೇನ ಲಾಭೊ ಗ್ರಾಮಾದಿಕಸ್ಯ ಚ ॥೫೭॥

ಭು ಕ್ತ್ಯಂತೆ ಫಲ ಮಾ ಪ್ನೋತಿ ಗೀತನೃತ್ಯ ದಿಜಂ ಸುಖಮ್ ।
ಪುಣ್ಯತೀರ್ಥ ಸ್ನಾನಲಾಭಂ ಕರ್ಮಾಧಿಪಸಮನ್ವಿತೆ ॥೫೮॥
ಪೂತಧರ್ಮದಯಾಪುಣ್ಯತಡಾಗಂ ಕಾರಯಿಷ್ಯತಿ ।

ದಶಾನಾಥನಿಂದ ಲಗ್ನಸ್ಥಾನ ತ್ರಿಕೋಣ ಧನಸ್ಥಾನ ಸ್ಥಿತ ಶುಕ್ರನಿಮದ್ದರೆ ಅಂತರದಶಾ ಲಕ್ಷ್ಮೀಪ್ರದ ಪುತ್ರಲಾಭ (ಗರ್ಭದಾರಣ) ಮಹಾ ಸುಖ- ತನ್ನ ಸ್ವಾಮಿಯಿಂದಲೂ (ಅಧಿಕಾರಿ) ಸುಖ, ಧನ ವಸ್ತ್ರ ಪ್ರಾಪ್ತಿ ರಾಜನ ಕೃಪೆಯಿಂದ ಗ್ರಾಮಾಧಿಲಾಭ ಅಂತರದಶಾಂತದಲ್ಲಿ ಗೀತನೃತ್ಯ ಸುಖ ಪುಣ್ಯತೀರ್ಥ ಸ್ನಾನಲಾಭ ಅದೆ ಶುಕ್ರ ದಶಮಾಧಿಪನ ಜತೆಗಿರಲು ಪುಣ್ಯದ ಧರ್ಮ ಕಾರ್ಯ ಅಂತೆ ಕೇರೆ ಕಾಲುವೆ, ಬಾವಿ ನಿರ್ಮಾಣ, ಆದಿ ಶುಭ ಕಾರ್ಯಕಾರಕವಾಗಿರುತ್ತದೆ.

ದಾಯೇಶಾದ್ರಂಧ್ರರಿ ಫ್ಪಸ್ಥೆ ಪಷ್ಠೆ ವಾ ಪಾಪಸಂಯುತೆ ॥೫೯॥

ಕರೋತಿ ದುಃಖಬಾಹುಲ್ಯಂ ದೇಹ ಪೀಡಾಂ ಧನಕ್ಷಯಮ್ ।
ರಾಜಚಾರಾದಿಭೀತಿಂ ಚ ಗ್ರಹೆ ಕಲಹಮೇವಚ ॥೬೦॥

ದಾರಾಪುತ್ರಾದಿ ಪೀಡಾಂ ಚ ಗೋಮಹಿಪ್ಯಾದಿ ನಾಶನಮ್ ।
ದ್ವಿತೀಯ ದ್ಯೂನ ನಾಥೆ ತು ದೇಹಬಾಧಾ ಭವಿಷ್ಯತಿ ॥೬೦॥

ಶ್ವೆತಾಂ ಗಾಂ ಮಹಿಷಿಂ ದದ್ಯಾದಾಯು ರಾ ರೋಗ್ಯ ವೃದ್ಧಿ ದಾಮ್
ತತಃಶಾಂತಿ ವಮಾಪ್ನೋತಿ ನಾತ್ರ ಕಾರ್ಯ ವಿಘ್ನರಣಾ ॥೬೨॥

ದಶಾಧಿಪ ಭೌಮನಿಂದ 6, 8, 12 ಸಪಾಪ ಶುಕ್ರನ ಅಂತರದಶಾ ಕಾಲದಲ್ಲಿ ದುಃಖಾಧಿಕ್ಯ, ದೇಹ ಪೀಡಾ ಧನಕ್ಷಯರಾಜ ಹಾಗೂ ಕಳ್ಳರ ಭಯ ಗೃಹ ಕಲಹ ಸ್ತ್ರೀಪುತ್ರರ ನಷ್ಟ, ಆಕಳು ಆದಿ ಪಶುಕ್ಷಯ ಅದೆ ಶುಕ್ರ ದಶೇಶನಿಂದ 2, 7ರ ಅಧಿಪನಾಗಿದ್ದರೆ ಶಾರೀರಿಕ ಕಷ್ಟ-ಶಾಂತಿಗಾಗಿ ಶ್ವೇತ ಆಕಳ ಎಮ್ಮೆ ದಾನ ಫಲಕಾರಿ.

## ಸೂರ್ಯಾಂತರ ದಶಾಫಲ

ಕುಜಸ್ಯಾಂತರ್ಗತೇ ಸೂರ್ಯೆ ಸ್ವೋಚ್ಚೆ ಸ್ವಕ್ಷೇತ್ರಕೇಂದ್ರಗೆ ।
ಮೂಲ ತ್ರಿಕೋಣ ಲಾಭೆ ವಾ ಭಾಗ್ಯ ಕರ್ಮೇಶ ಸಂಯುತೆ ॥೬೩॥

ತದ್ ಭುಕ್ತೌ ವಾಹನಂ ಕೀರ್ತಿ ಪುತ್ರಲಾಭಂ ಚ ವಿಂದತಿ ।
ಧನಧಾನ್ಯ ಸಮೃದ್ಧಿಃ ಸ್ಯಾದ್ ಗೃಹೆ ಕಲ್ಯಾಣಸಂಪದಃ ॥೬೪॥

ಕ್ಷೇಮಾರೋಗ್ಯಂ ಮಹದ್ಧೈರ್ಯಂ ರಾಜಪೂಜಾ ಮಹತ್ಸುಖಮ್ ।
ವ್ಯವಸಾಯಾತ್ ಫಲಾಧಿಕ್ಯಂ ವಿದೇಶೆ ರಾಜದರ್ಶನಮ್ ॥೬೫॥

ಸ್ವೋಚ್ಚ ಸ್ವಭವನ, ಕೇಂದ್ರ ತ್ರಿಕೋಣ ಲಾಭಸ್ಥಾನ ಸ್ಥಿತ ಸೂರ್ಯ ಕರ್ಮೇಶ ಅಥವಾ ಭಾಗ್ಯೇಶನ ಜತೆಗಿದ್ದು ಮಂಗಲ ಮಹಾದಶಾದಲ್ಲಿ ಅಂತರ ದಶಾನಾಥನಾದಾಗ ವಾಹನ, ಪುತ್ರಾದಿ ಪ್ರಾಪ್ತಿ ಜತೆಗೆ ಸುಯಶವನ್ನು ಪಡೆಯುತ್ತಾನೆ ಧನಧಾನ್ಯವೃದ್ಧಿ ಮನೆಯಲ್ಲಿ ಕಲ್ಯಾಣ ಕಾರ್ಯಗಳು (ಮಂಗಳ) ಆರೋಗ್ಯ ಧೈರ್ಯಾದಿಗಳ ವೃದ್ಧಿಯೊಂದಿಗೆ ರಾಜಸನ್ಮಾನ ಕೃಷಿಯಲ್ಲಿ ವೃದ್ಧಿಯನ್ನು ತೋರಿಸುತ್ತಾನೆ. ವಿದೇಶದಲ್ಲಿ ರಾಜದರ್ಶನ ಫಲ.

ದಾಯೇಶಾತ್ ಷಷ್ಠರಿಷ್ಫೆ ವಾ ವ್ಯಯೇ ವಾಪಾಪ ಸಂಯತೆ ।
ದೇಹಪೀಡಾ ಮನಸ್ತಾಪಃ ಕಾರ್ಯಹಾನಿರ್ಮಹದ್ ಭಯಮ್ ॥೬೬॥

ಶಿರೋರೋಗೋ ಜ್ವರಾದಿಃ ಸ್ಯಾದತೀಸಾರಮಥಾಪಿ ವಾ ।
ದ್ವಿತೀಯದ್ಯೂನನಾಥೆ ತು ಸರ್ಪಜ್ವರ ವಿಷಾದ್ ಭಯಮ್ ॥೬೭॥

ಸುತಪೀಡಾಭವಾ ಭೀತಿಃ ಶಾಂತಿ ಕುರ್ಯಾದ್ ಯಥಾವಿಧಿ ।
ದೇಹಾರೋಗ್ಯಂ ಪ್ರಕುರುತೆ ಸಮೃದ್ಧಿಂ ಧನಧಾನ್ಯಯೋಃ ॥೬೮॥

ದಶೇಶನಿಂದ 6-8-12ರಲ್ಲಿ ಪಾಪಯುಕ್ತ ಸೂರ್ಯನ ಅಂತರದಶಾಕಾಲದಲ್ಲಿ ಶಾರೀರಿಕ ಪೀಡೆ ಮನಸ್ತಾಪ ಕಾರ್ಯಹಾನಿ ಮಹಾಭಯ ಶಿರೋರೋಗ ಜ್ವರ ಹಾಗೂ ಅತೀಸಾರ ಭಯ ಇದೆ. ಸೂರ್ಯ ದಶೇಶನಿಂದ 2, 7ರ ಸ್ವಾಮಿಯಾಗಿದ್ದರೆ

ಸರ್ಪವಿಷ ಜ್ವರ-ವಿಷ ಜನ್ಯ ಪುತ್ರಕಷ್ಟಜನ್ಯ ಭಯ -ಯಥಾವಿಧಿಸೂರ್ಯಮಂಗಳ ಶಾಂತಿಯಿಂದ ಆರೋಗ್ಯ ಹಾಗೂ ಧನಧಾನ್ಯದ ಸಮೃದ್ಧಿಯಾಗುತ್ತದೆ.

ಇಲ್ಲಿ ಗೋದಾನ ವಿಶೇಷ ಫಲದಾಯಕ (ಶಾಂತಿಕರ್ಮಾನಂತರ)

## ಚಂದ್ರಾಂತರದಶಾ ಫಲ

ಕುಜಸ್ಯಾಂತರ್ಗತೆ ಚಂದ್ರೆ ಸ್ವೋಚ್ಚೆ ಸ್ವಕ್ಷೇತ್ರಕೇಂದ್ರಗೆ ।
ಭಾಗ್ಯವಾ ಇನಕರ್ಮೇಶ-ಲಗ್ನಾಧಿಪ ಸಮನ್ವಿತೆ ॥೬೯॥

ಕರೋತಿ ವಿಪುಲಂ ರಾಜ್ಯಂ ಗಂಧಮಾಲ್ಯಾಂಬರಾಧಿಕಮ್ ।
ತದಾಗಂ ಗೋಪುರಾದೀನಾಂ ಪುಣ್ಯಾಧರ್ಮಾದಿ ಸಂಗ್ರಹಃ ॥೭೦॥

ವಿವಾಹೋತ್ಸವಕರ್ಮಾಣಿ ದಾರಪುತ್ರಾದಿಜಂ ಸುಖಮ್ ।
ಪಿತೃಮಾತು ಸುಖಾವಾಪ್ತಿರ್ಗೃಹೆ ಲಕ್ಷ್ಮೀಃ ಕಟಾಕ್ಷಾಕೃತ್ ॥೭೧॥

ಮಹಾರಾಜಪ್ರಸಾದೇನಾಭಿಷ್ಟಸಿದ್ಧಿ ಸುಖಾದಿಕಮ್ ।
ಪೂರ್ಣೆ ಚಂದ್ರೆ ಫಲಂ ಪೂರ್ಣಂ ಕ್ಷೀಣೆ ಸ್ವಲ್ಪ ಫಲಂ ಭವೇತ್ ॥೭೨॥

ಸ್ವೋಚ್ಚ ಸ್ವಕ್ಷೇತ್ರ-ದಲ್ಲಿ ಕೇಂದ್ರ ಗತಿ ಚಂದ್ರ ಭಾಗ್ಯೇಶ ಚತುರ್ಥ

ಕರ್ಮೇಶ (ರಾಜ್ಯೇಶ) ಲಗ್ನೇಶರ ಜತೆಗಿದ್ದರೆ ಮಂಗಳ ದಶಾ

ತನ್ನಂತರ ದಶಾದಲ್ಲಿ ಗಂಧಮಾಲ್ಯಾದಿ ವಸ್ತ್ರಾದಿ ಪ್ರಾಪ್ತಿ ಸುಭೂದೇ ವಿಪುಲ ರಾಜ್ಯ, ಕೆರೆ ಕೊಳ್ಳ, ಬಾವಿ, ಗೋಶಾಲಾದಿ ಪುಣ್ಯ ಕಾರ್ಯ ನಿರ್ಮಾಣನಿರತ ಮನೆಯಲ್ಲಿ ವಿವಾಹೋತ್ಸಾಹ ಕಾರ್ಯ ಸ್ತ್ರೀಪುತ್ರಾದಿ ಜನ್ಯಸುಖ ಮಾತೃಪಿತೃಸುಖ ಮನೆಯಲ್ಲಿ ಲಕ್ಷ್ಮೀ ಕಟಾಕ್ಷ, ಮಹಾರಾಜರ ಪ್ರಸಾದದಿಂದ ಅಭೀಷ್ಟಸಿದ್ಧಿ ಪೂರ್ಣ ಚಂದ್ರನಿದ್ದರೆ ಪೂರ್ಣಫಲ ಕ್ಷೀಣ ಚಂದ್ರನಿದ್ದರೆ ಅಲ್ಪ ಫಲವನ್ನು ಹೇಳುವುದು.

ನೀಚಾರಿಸ್ಥೇಷ್ಟಮೆ ಷಷ್ಠೆ ದಾಯೇಶಾದ್ರಿಪುರಂಧ್ರಕೆ ।
ಮರಣು ದಾರ ಪುತ್ರಾಣು ಕಷ್ಟಂ ಮಹಾ ವಿನಾಶನಮ್ ॥೭೩॥

ಪಶುಧಾನ್ಯ ಕ್ಷಯ ಶ್ಚೈವ ಚೌರದಿರಣತೋ ಭಯಮ್ ।
ದ್ವಿತೀಯದ್ಯೂನನಾಥೆ ತು ಹ್ಯಾ ಪಮೃತ್ಯುರ್ಭವಿಷ್ಯತಿ ॥೭೪॥

ದೇಹ ಜಾಡ್ಯಂ ಮನೋದುಃಖಂ ದುರ್ಗಾ ಲಕ್ಷ್ಮೀ ಜಪಂ ಚರೇತ್ ।
ಶ್ವೇತಾಂ ಗಾಂ ಮಹಿಷಿಂ ದದ್ಯಾದಪಿ ಗಾರೋಗ್ಯಮಾದಿ ಶೇತ್ ॥೭೫॥

ಸ್ವನೀಚ ಶತ್ರುರಾಶಿ ಲಗ್ನ ಅಥವಾ ದಶಾಧಿಪನಿಂದ ಷಷ್ಠಅಸ್ಠನಾದಲ್ಲಿ ಅಂತರದಶಾದಲ್ಲಿ ಚಂದ್ರ ಸ್ತ್ರೀಪುತ್ರರಿಗೆ ಕ್ಲೇಶ ತಂದು ಭೂಮಿನಾಶ ಪಶುಧನಧಾನ್ಯ ನಾಶ, ಕಳ್ಳತನದ, ಯುದ್ದದ ಭಯ ಅದೆ ಚಂದ್ರ ದಶೇಶನಿಂದ 2, 7ರ ಅಧಿಪನಾಗಿದ್ದರೆ ಅಪಮೃತ್ಯು ದೇಹದಲ್ಲಿ ಜಡತೆ ಮಾನಸಿಕ ವ್ಯಥಾದಿ ಫಲಗಳು ಈ ದೋಷ ಪರಿಹಾರಾರ್ಥ ದುರ್ಗಾ, ಲಕ್ಷ್ಮಿ, ಯಜಪ ಬಿಳಿ ಆಕಳು ದಾನ ಎಮ್ಮೆ ದಾನ ಎಮ್ಮೆ ಇದರಿಂದ ಆರೋಗ್ಯಾದಿ ಭಾಗ್ಯ ಲಭಿಸುತ್ತದೆ. ಗೌರಿ ಪೂಜೆಯೂ ಫಲದಾಯಕ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ
ಭೌಮದಶಾಂತರದಶಾಧ್ಯಾಯಃ ಸಮಾಪ್ತಃ

# ಅಥ ರಾಹುದಶಾಂತರ್ದಶಾಧ್ಯಾಯಃ

## ರಾಹು ಮಹಾದಶಾ:

### ರಾಹು ಅಂತರದಶಾಫಲ

ಪರಾಶರ ಉವಾಚ:

ಕುಲಿಕೆ ವೃಶ್ಚಿಕೇಗೌ ತುಕನ್ಯಾಯಾಂ ಚಾಪಗೇ ಪಿ ವಾ।
ತದ್ ಭುಕ್ತೌ ರಾಜಸಮ್ಮಾನಂ ವಸ್ತ್ರವಾಹನ ಭೂಷಣಮ್ ॥೧॥

ವ್ಯವಸಾಯಾತ್ ಫಲಾಧಿಕ್ಯಂ ಭವೆಲ್ಲಾಭಶ್ಚತುಸ್ಪದಾಮ್ ।
ಪ್ರಯಾಣು ಪಶ್ಚಮೇ ಭಾ ಗೆ ಲಾಭೋ ವಾಹನ ವಸ್ತ್ರಯೋಃ ॥೨॥

ಲಗ್ನಾದುಪಚಯೇ ರಾಹೌ ಶುಭ ಖೇಟಯುತೆ ಕ್ಷಿ ತೆ।
ಮಿತ್ರಾಂಶೆ ತುಂಗ ಭಾಗೆ ವಾ ಯೋಗಕಾರಕ ಸಂಯುತೆ ॥೩॥

ರಾಜ್ಯಲಾಭೊ ಮಹೋತ್ಸಾಹೋ ರಾಜಪ್ರೀತಃ ಶುಭಾ ವಹಾ।
ಗ್ರಹೆ ಕಲ್ಯಾಣ ಸಂಪತ್ತಿರ್ದಾರ ಪುತ್ರಾದಿ ವರ್ಧನಮ್ ॥೪॥

ಪರಾಶರರು ಹೇಳಿದರು– (ಹೇ ಮೈತ್ರೇಯ)

ಕರ್ಕವೃಶ್ಚಿಕ, ಕನ್ಯಾ, ಧನುವಿನಲ್ಲಿದ್ದ ರಾಹುವಿನ ದಶಾದಲ್ಲಿ ತನ್ನ ದೆ ಅಂತರ ದಶಾದಲ್ಲಿ ರಾಜ ಸನ್ಮಾನ ವಸ್ತ್ರವಾಹನ ಆಭೂಷಣದ ಲಾಭವಾಗುತ್ತಿದೆ. ವ್ಯಾಪಾರದಲ್ಲಿ ಫಲಾಧಿಕ್ಯ ಪಶುಲಾಭ ಪಶ್ಚಿಮ ದಿಕ್ಕಿನಲ್ಲಿ ಯಾತ್ರೆ, ವಾಹನ ವಸ್ತ್ರ ಪ್ರಾಪ್ತಿ.

ಲಗ್ನದಿಂದ 3, 6, 10, 11ರಲ್ಲಿ ಶುಭ ಗ್ರಹ ಮೂಲಕ ಅಥವಾ ಇಷ್ಟಮಿತ್ರ ಗ್ರಹ ನವಾಂಶ ಅಥವಾ ವಿಚ್ಚಾಂಶದಲ್ಲಿ ಯೋಗಕಾರಕನಾಗುತ್ತಾರೆ. ಯೋಗಕಾರಕ ಗ್ರಹಯುತನಾಗಿದ್ದರೆ ರಾಜ್ಯಲಾಭ ಮಹೋತ್ಸಾಹ ಸುಖ ಪ್ರದರಾಜ್ಯಪ್ರಾಪ್ತಿ ಮನೆಯಲ್ಲಿ ಕಲ್ಯಾಣ-ಸಂಪತ್ತಿನ ಸಂಚಯ ಸ್ತ್ರೀ ಪುತ್ರ ಅಭಿವೃದ್ಧಿ.

ಅಷ್ಟಮ ವ್ಯಯತಗೆ ರಾಹೌಪಾಪಯುಕ್ತೆ ತಿಥ ವಿಕ್ಷೀತೆ
ಚೌರಾದಿವ್ರಣ ಪೀಡಾ ಚ ಸರ್ವತ್ರೈವ ಪ್ರಜಾಯತೆ ||೫||

ರಾಜದ್ವಾರ ಜನ ದ್ವೇಷ ಇಷ್ಟಬಂಧುವಿನಾಶನವ್ ।
ದಾರಪುತ್ರಾದಿ ಜಾ ಪೀಡಾ ಜಾಯತೆ ನಾತ್ರಸಂಶಯಃ ||೬||

ದ್ವಿತೀಯ ದ್ಯೂನಾಥೆ ತು ಸಪ್ತಮಸ್ಥಾನ ಮಾಶ್ರೀತೆ ।
ಸದಾ ರೋ ಗೋ ಮಹಾಕಷ್ಟಂ ಶಾಂತಿ ಕುರ್ಯಾದ್ಯಥಾವಿಧಿ ||೭||

ಆರೋಗ್ಯಂ ಸಂಪದಶ್ಚೈವ ಭವಿಷ್ಯತಿ ನ ಸಂಶಯಃ।

ಅಷ್ಟಮ ಅಥವಾ ದ್ವಾದಶಸ್ಥ ರಾಹು ಪಾಪಯುಕ್ತ ಅಥವಾ ಪಾಪ ದೃಷ್ಟನಾಗಿ ತನ್ನದಶಾಂತರದಶಾದಲ್ಲಿ ಕಳ್ಳತನೆ ವ್ರಣ ಭಯಾದಿ ಪೀಡೆ ರಾಜದ್ವಾರ (ಸರ್ಕಾರ ಕಾರ್ಯಾಲಯ) ಅಧಿಕಾರಿಗಳಿಂದ ವೈರತ್ವ ಇಷ್ಟ ಬಂಧುನಾಶ, ಸ್ತ್ರೀಪುತ್ರರಿಗೆ ಕ್ಲೇಶ, ರಾಹು 2, 7ರ ನಾಥರೋಡನೆ ಯುತನಾಗಿ ಸಪ್ತಮದಲ್ಲಿದ್ದರೆ ಸತತ ರೋಗ ಪೀಡೆ, ಮಹಾನ್ ಕಷ್ಟ-ಯಥಾವಿಧಿ ರಾಹುಶಾಂತಿಯಿಂದ ಪೀಡಾ ನಿವೃತ್ತಿ ಲಕ್ಷ್ಮಿ ಪ್ರಾಪ್ತಿ ನಿಃಸಂದೇಹವಾಗುತ್ತದೆ.

## ಗುರು ಅಂತರದಶಾ ಫಲಃ

ರಾಹೋರಂತರ್ಗತೆ ಜೀವೊ ಲಗ್ನಾತ್ ಕೇಂದ್ರ ತ್ರಿಕೋಣಗೆ ||೮||

ಸ್ವೋಚ್ಚೆ ಸ್ವಕ್ಷೇತ್ರಗೆ ವಾಪಿ ಸ್ವಾಂಶ ಸ್ವೋಚ್ಚಾಂಶ ಗೇ ಪಿ ವಾ ।
ಸ್ಥಾನಲಾಭಂ ಮನೋಧೈರ್ಯ ಶತ್ರುನಾಶಂ ಮಹಾಸುಬಮ್ ||೯||

ರಾಜಪ್ರೀತಿಕರಂ ಸೌಖ್ಯಂ ಜಾತೋತೀವ ಸಮಶ್ನುತೆ ।
ದಿನೆ ದಿನೆ ವೃದ್ಧಿರಪಿ ಸೀತಪಕ್ಷೆ ಶಶೀ ಯಥಾ ||೧೦||

ವಾಹನಾದಿಧನಂ ಭೂರಿ, ಗೃಹಂ ಗೋಧನ ಸಂಕುಲವ್ ।
ನೈಋುತ್ಯೆ ಪಶ್ಚಿಮೆ ಭಾಗೆ ಪ್ರಯಾಣು ರಾಜದರ್ಶನವ್ ||೧೧||

ಯುಕ್ತ ಕಾರ್ಯಾರ್ಥಸಿದ್ಧಿಃ ಸ್ಯಾತ್ ಸ್ವದೇಶೆ ಪುನರೇ ಷ್ಯತಿ ।
ಉಪಕಾರೋ ಬ್ರಾಹ್ಮಣಾನಂ ತೀರ್ಥಯಾತ್ರಾದಿ ಕರ್ಮಣಾಮ್ ||೧೨||

ವಾಹನ ಗ್ರಾಮಲಾಭಶ್ಚ ದೇವ ಬ್ರಾಹ್ಮಣ ಪೂಜನವ್ ।
ಪುತ್ರೋತ್ಸವಾದಿ ಸಂತೋಷೋ ನಿತ್ಯಂ ಮಿಷ್ಟಾನ್ನ ಭೋಜನಮ್ ||೧೩||

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವನ ಸ್ವನವಾಂಶ ಅಥವಾ ಉಚ್ಚನವಾಂಶ ಗತ ಗುರು ರಾಹುನ ಮಹಾದಶಾ ಗುರು ಅಂತರದಶಾದಲ್ಲಿ - ಸ್ಥಾನ ಲಾಭ (ನೌಕರಿಸ್ಥಿರತೆ, ಮನೆ ಆದಿ) ಮನದಲ್ಲಿ ಧೈರ್ಯ, ಶತ್ರುನಾಶನ, ಮಹಾಸುಖ ರಾಜಪ್ರಸಾದ ಸೌಖ್ಯ ಶುಕ್ಲ ಪಕ್ಷೀಯ ಚಂದ್ರನಂತೆ ಪ್ರತಿದಿನ ವೃದ್ಧಿ ಮನೆಯಲ್ಲಿ ವಾಹನ ಧನ ಪಶುಧನ ಹೆಚ್ಚಾಗುವಿಕೆ ಸುಖಶಾಂತಿ, ನೈರುತ್ಯ ಪಶ್ಚಿಮ ದಿಶಾದಲ್ಲಿ ಯಾತ್ರೆ ರಾಜದರ್ಶನ ಅದರಿಂದ ಅಭೀಷ್ಟಕಾರ್ಯ ಸಿದ್ಧಿ ಪರದೇಶಕ್ಕೆ ಹೋದರೆ ಪುನಃ ಸ್ವದೇಶಾಗಮನ ತೀರ್ಥಯಾತ್ರಾದಿ ಬ್ರಾಹ್ಮಣರಿಗೆ ಉಪಕಾರ ವಾಹನ ಗ್ರಾಮ, ಲಾಭ ದೇವ ಬ್ರಾಹ್ಮಣ ಪೂಜನ ಪುತ್ರಜನ್ಮಾದಿ ಸಂತೋಷ ಹಾಗೂ ನಿತ್ಯ ಮೃಷ್ಟಾನ್ನ ಭೋಜನ ಈ ಎಲ್ಲ ಫಲಗಳು ದೊರೆಯುತ್ತವೆ.

ನೀಚೆ ವಾಸ್ತಂಗತೆ ವಾಪಿ ಷಷ್ಠಷ್ಟಾವ್ಯಯ ರಾಶಿಗೆ ।
ಶತ್ರು ಕ್ಷೇತ್ರೆ ಪಾಪ ಯುಕ್ತ ಧನಹಾನಿರ್ಭವಿಷ್ಯತಿ ॥೧೪॥

ಕರ್ಮ ವಿಘ್ನೊ ಮನೋಹಾನಿರ್ಭವತೀತಿ ನ ಸಂಶಯಃ।
ಕಲತ್ರಪುತ್ರ ರಾಜಕಾರ್ಯ ಹೃದ್ರೋ ಗದಃ ॥೧೫॥

ಗುರು ನೀಚಸ್ಥ ಅಸ್ತಂಗತ ಅಥವಾ 6, 8, 12ರಲ್ಲಿ ಶತ್ರು ಕ್ಷೇತ್ರದಲ್ಲಿ ಪಾಪಯುಕ್ತನಾಗಿದ್ದರೆ ರಾಹುದಶಾದ್ಯೇ ಗುರುವಂತರ ದಶಾ ಬಂದಾಗ ಧನಹಾನಿ ಕಾರ್ಯದಲ್ಲಿ ವಿಘ್ನ ಮನೇಲಿ ವೈಕಲ್ಯ ಸ್ತ್ರೀಪುತ್ರ ಕ್ಲೇಶ ರಾಜಕಾರ್ಯಾಧಿಕಾರ ಹಾಗೂ ಹೃದ್ ರೋಗ ಭಯ

ದಾಯೋಶಾತ್ ಕೇಂದ್ರಕೊಣೇ ವಾ ಲಾ ಭೆ ವಾಧನಗೇ ಪಿ ವಾ ।
ದುಶ್ಚಿಕ್ಯೆ ಬಲಸಂಪೂರ್ಣೆ ಸಮೃದ್ಧಿಃ ಕ್ಷೇತ್ರಗೆ ಹಯೋಃ ॥೧೬॥

ಭೋಜನಾಂಬರ ಪಶ್ವಾದಿ ದಾನಧರ್ಮಜಪಾದಿಕಮ್ ।
ಭುಕ್ತ್ಯಂತೆ ರಾಜಕೋಪಾಚ್ಚ ದ್ವಿಮಾಸಂ ದೇಹಪೀಡನಮ್ ॥೧೭॥

ಜೇಷ್ಠ ಭ್ರಾತುವಿನಾಶಶ್ಚ ಮಾತೃಪೀತ್ರಾದಿಪೀಡನಂ।

ದಶೇಶನಿಂದ ಕೇಂದ್ರ ತ್ರಿಕೋಣ ಲಗ್ನ ಧನ ಅಥವಾ ತೃತೀಯ ಸ್ಥಾನದಲ್ಲಿ ಪೂರ್ಣ ಬಲಿಷ್ಟ ಗುರು ರಾಹುದಶಾದಲ್ಲಿ ಅಂತರದಶಾಧೀನನಾಗಿದ್ದಾಗ ಭೂಮಿ, ಮನೆಯ ವೃದ್ಧಿ ಭೋಜನ ವಸ್ತ್ರ ಪಶ್ವಾದಿರಾದ ದಾನಧಮತಿ ಜಪದಲ್ಲಿ ಪ್ರವೃತ್ತಿ ಅಂತರ ದಶಾಂತದಲ್ಲಿ ರಾಜಕೋಪದಿಂದ ಒಂದು ತಿಂಗಳವರೆಗೆ ಶಾರೀರಿಕ ಕಷ್ಟವೂ ಹೇಳುವುದು ಅಣ್ಣನ ನಾಶ ಮಾತಾಪಿತಾರಿಗೆ ಕಷ್ಟ ಈ ಎಲ್ಲ ಫಲ ಅನಿವಾರ್ಯ.

ದಾಯೋಶಾತ್ ಷಷ್ಠರಂಧ್ರೆ ವಾ ರಿಪ್ಫೆವಾ ಪಾಪಸಂಯುತೆ ॥೧೮॥

ತದ್ ಭುಕ್ತೌ ಧನಹಾನಿಃ ಸ್ಯಾದ್ದೇಹಪೀಡಾ ಭವಿಷ್ಯತಿ ।
ದ್ವಿತೀಯ ದ್ಯೂನನಾಥೆ ವಾ ಹ್ಯಾಪಮೃತ್ಯುರ್ಭವಿಷ್ಯತಿ ॥೧೯॥

ಸ್ವರ್ಣಸ್ಯ ಪ್ರತಿಮಾದಾನಂ ಶಿವಪೂಜಾಂ ಚ ಕಾರಯೇತ್

ದಶಾಪತಿ ರಾಹುವಿನಿಂದ 6, 8, 12ರಲ್ಲಿ ಪಾಪಯುಕ್ತ ಗುರುವಿದ್ದರೆ ಅವನ ಅಂತರ ದಶಾ ಧನಹಾನಿಕಾರಕ ಶರೀರದಲ್ಲಿ ಪೀಡೆ ದಶೇಶನಿಂದ 2, 7ರ ಅಧಿಪನಾಗಿದ್ದರೆ ಅಪಮೃತ್ಯು ಭಯ ಅದರ ಶಾಂತಿಗಾಗಿ ಗುರುವಿನ ಸ್ವಣ (ಬಂಗಾರ) ಪ್ರತಿಮೇ ಪೂಜೆ ದಾನ ಶಿವಪೂಜೆಯು ತಾರಕ.

## ಶನಿ ಅಂತರದಶಾ ಫಲ

ರಾಹೋರಂತರ್ಗತೆ ಮುಂದೆ ಲಗ್ನಾತೆ ಕೇಂದ್ರ ತ್ರಿಕೋಣಗೆ ॥೨೦॥

ಸ್ವೋಚ್ಚ ಮೂಲ ತ್ರಿಕೊಣೆ ವಾ ದುಶ್ಚಿಕ್ಯೆ ಲಾಭರಾಶಿಗೆ ।
ತದ್ ಭುಕ್ತೌ ರಾಜಸೇವಾ ಸ್ಯಾತ್ ರಾಜಪ್ರೀತಿಕಾರಿ ಶುಭಾ ॥೨೧॥

ವಿವಾಹೋತ್ಸಹಕಾರ್ಯಾಣಿ ಕೃತ್ವಾ ಪುಣ್ಯಾನಿ ಭೂರಿಶಃ।
ಆರಾಮಕರಣೆ ಯುಕ್ತಸ್ತಡಾಗಮಪಿ ಕಾರ ಯೇತ್ ॥೨೨॥

ಶೂದ್ರ ಪ್ರಭುವಶಾದಿಷ್ಟಲಾಭೋ ಗೋಧನ ಸಂಗ್ರಹಃ ।
ಪ್ರಯಾಣಾಂ ಪಶ್ಚಿಮೇ ಭಾಗೆ ಪ್ರಭುಂ ಮೂಲಾದ್ದಿನ ಕ್ಷಯಂ ॥೨೩॥

ದೇಹಾಲಸ್ಯಂ ಫಲಾಲ್ಪಿತ್ವಂ ಸ್ವದೇಶೆ ಪುನರೇಷ್ಯತಿ ।

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಮೂಲ ತ್ರಿಕೋಣ ತೃತೀಯ ಏಕಾದಶದಲ್ಲಿ ಶನಿ ಇದ್ದರೆ ರಾಹುದಶಾದಲ್ಲಿ ಅಂತರ ದಶಾ ಕಾಲದಲ್ಲಿ ರಾಜನು ಪ್ರಸನ್ನನಾಗುವನು, ರಾಜಸೇವಾ ವಿವಾಹೋತ್ಸವಾದಿ ಪುಣ್ಯ ಕಾರ್ಯ ತೋಟ ಕೆರೆಗಳ ನಿರ್ಮಾಣ ಶೂದ್ರ ರಾಜನಿಂದ ಅಭಿಷ್ಟಲಾಭ, ಗೋಧನವೃದ್ಧಿ ಪಶ್ಚಿಮ ದಿಶಾದಲ್ಲಿ ಯಾತ್ರೆ ರಾಜಮೂಲ ಕಥನ ನಾಶ ದೇಹಾಲಸ್ಯ ಅಲ್ಪಲಾಭ ಪುನಃ ಸ್ವದೇಶಾಗಮನಾದಿಗಳು

ನೀಚಾರಿಕ್ಷೇತ್ರಗೆ ಮುಂದೆ ರಂಧ್ರೆವಾ ವ್ಯಯ ಗೇ ಪಿ ವಾ ॥೨೪॥

ನೀಚಾರಿ ರಾಜಭೀತಶ್ಚ ದಾರಪುತ್ರಾದಿ ಪೀಡನವ್।
ಆತ್ಮಾಬಂಧುಮನಸ್ತಾಪಂ ದಾಯಾದಜನವಿಗ್ರಹವ್ ॥೨೫॥

ವ್ಯವಹಾರೆ ಚ ಕಲಹ ಮಕಸ್ಮಾದ್ ಭೂಷಣ ಲಭೇತ್ ।

ನೀಚಸ್ಥಾನ ಶತ್ರು ಕ್ಷೇತ್ರ, 6, 12ರಲ್ಲಿ ಶನಿಯಿದ್ದರೆ ರಾಹುದಶಾ ಶನಿ ಅಂತರ ದಶಾ ಕಾಲದಲ್ಲಿ ನೀಚ ಜನ ಶತ್ರು ವರ್ಗ ಹಾಗೂ ರಾಜಾಧಿಕಾರಿಗಳಿಂದ ಭಯ ಸ್ತ್ರೀಪುತ್ರರಿಗೆ ಕ್ಲೇಶ ಪ್ರಿಯ ಬಂಧುಜನರಿಗೆ ಸಂತಾಪ ದಾಯಾದಿಗಳ ವಿರೋಧ ವ್ಯವಹಾರದಲ್ಲಿ ಕಲಹ ಒಮ್ಮಿಂದೊಮ್ಮೆಲೆ ಭೂಷಣಾದಿ ಪ್ರಾಪ್ತಿಯೆಂದ ಹೇಳುವುದು.

ದಾಯೇಶಾತ್ ಷಷ್ಠರಿಷ್ಫೇ ವಾಷ್ಟಮೆ ವಾ ಪಾಪ ಸಂಯುತೆ ॥೨೬॥

ಹೃದ್ರೋಗೋ ಮಾನಹಾನಿಶ್ಚ ವಿವಾಹಃ ಶತೃಪೀಡನಂ।<br>
ಅನ್ಯದೇಶಾದಿ ಸಂಚಾರೊ ಗುಲ್ಮವದ್ ವ್ಯಾಧಿಭಾಗ್ಭವೇತೆ ॥೨೭॥

ಕುಭೋಜನಂ ಕೊದ್ರವಾದಿ ಜಾತಿದುಃಖಾದ್ ಭಯ ಭವೇತ್ ।<br>
ದ್ವಿತೀಯ ದ್ಯೂನನಾಥೆ ತು ಹ್ಯಾಪಮೃತ್ಯುರ್ಭ ವಿಪ್ಯತಿ ॥೨೮॥

ಕೃಷ್ಣಾಂ ಗಾಂ ಮಹಿಷಿಂ ದದ್ಯಾದ್ದಾನೇನಾರೋಗ್ಯ ಮಾಪ್ನೇಯಾತ್ ।

ದಶಾಧೀಶನಿಂದ ಶನಿ 6, 8, 12ರಲ್ಲಿ ಪಾಪಯುಕ್ತನಾಗಿ ಅಂತರ ದಶಾನಾಥನಾಗಿ ಬಂದರೆ ಹೃದ್ರೋಗ ಮಾನ ಹಾನಿ ವಿವಾಹ ಶತ್ರುಪೀಡಾ ಅನ್ಯದೇಶದಲ್ಲಿ ಭ್ರಮಣ, ಗುಲ್ಮರೋಗ-ಬೇರೆಯವರಲ್ಲಿ ಕದನ್ನ ಭೋಜನ ಸ್ವಜಾತಿಯಿಂದ ದುಃಖ ಭಯ ಅದೆ ಶನಿ ದಶೀಶನಿಂದ 2, 7ರ ಅಧಿಪನಾದರೆ ಅಪಮೃತ್ಯು ಭಯ. ಇದಕ್ಕೆ ಪರಿಹಾರ ಕರಿಆಕಳುದಾನ ಅಥವ ಎಮ್ಮೆ ದಾನದಿಂದ ಆರೋಗ್ಯ ಪ್ರಾಪ್ತಿ.

## ಬುಧಾಂತರ ದಶಾಫಲ

ರಾಹೋರಂತರ್ಗತೆ ಸೌಮ್ಯೆ ಭಾಗ್ಯೇ ವಾ ಸ್ವಕ್ಷೇತ್ರಗೆ ಪಿ ವಾ ॥೨೯।

ತುಂಗೆ ವಾ ಕೇಂದ್ರ ರಾಶಿಸ್ಥೆ ಪುತ್ರೆ ವಾ ಬಲಗೇ ಪಿ ವಾ ।<br>
ರಾಜ ಯೋಗಂ ಪ್ರಕುರುತೆ ಗ್ರಹೆ ಕಲ್ಯಾಣ ವರ್ಧನಮ್ ॥೩೦॥

ವ್ಯಾಪಾರೇಣ ಧನಪ್ರಾಪ್ತಿರ್ವಿ ದ್ಯಾವಾಹನ ಮುತ್ತಮಮ್।<br>
ವಿವಾಹೋತ್ಸವ ಕಾರ್ಯಾಣಿ ಭವೆಲ್ಲಾಭಶ್ಚತು ಷ್ಪಾದಮ್ ॥೩೧॥

ಸೌಮ್ಯ ಮಾಸೆ ಮಹತ್ ಸೌಖ್ಯಂ ಸ್ವವಾರೆ ರಾಜದರ್ಶನಮ್ ।<br>
ಸುಗಂಧ ಪುಷ್ಪಶಯ್ಯಾದಿ-ಸ್ತ್ರೀಸೌಖ್ಯಂ ಚಾತಿಶೋಭನಮ್ ॥೩೨॥

ಮಹಾರಾಜ ಪ್ರಸಾದೇನ ಧನಲಾಭೊ ಮಹಾಯಶಃ।

ಕೇಂದ್ರ ರಾಶಿ ತ್ರಿಕೋಣ (5, 9) ಸ್ವಭವನ ಉಚ್ಚರಾಶಿ (ಎರಡು ಕನ್ಯಾ)ದಲ್ಲಿ ಸಬಲ ಬುಧ ರಾಹು ಅಂತರದಶಾದಲ್ಲಿ ಬುಧನಿದ್ದಾಗ (ರಾಹುದಶಾ-ಬುಧ ಅಂತರ ದಶಾ) ರಾಜ ಯೋಗಕಾರಕ ಮನೆಯಲ್ಲಿ ಕಲ್ಯಾಣವೃದ್ಧಿ, ವ್ಯಾಪಾರ ವೃದ್ಧಿ. ಆದರಿಂದ ಧನ ಪ್ರಾಪ್ತಿ ಉತ್ತಮ ವಿದ್ಯೆ ಹಾಗೂ ಉತ್ತಮ ವಾಹನ ವಿವಾಹೋತ್ಸವ ಕಾರ್ಯ ಪಶುಲಾಭ ಬುಧನ ಮಾಸದಲ್ಲಿ ಪೂರ್ಣಸುಖ ಬುಧವಾರ ರಾಜದರ್ಶನ ಸುಗಂಧಿತ ಪುಷ್ಪದ ಹಾಸಿಗೆ, ಸ್ತ್ರೀಸೌಖ್ಯ ಮಹಾರಾಜ ಪ್ರಸಾದದಿಂದ ಧನಲಾಭ ಹಾಗೂ ಮಹಾಯಶ

ದಾಯೋಶಾತ್ ಕೇಂದ್ರ ಲಾಭೆ ವಾ ದುಶ್ಚಿಕ್ಯೆ ಭಾಗ್ಯ ಕರ್ಮಗೆ ॥೩೩॥

ದೇಹಾರೋಗ್ಯಂ ಹೃದುತ್ಸಾಹ ಇಷ್ಟಸಿದ್ಧಿಃ ಸುಖಾವಹಾ ।
ಪುಣ್ಯಶ್ಲೋಕಾದಿ ಕೀರ್ತಿಶ್ಚ ಪುರಾಣ ಶ್ರವಣಾದಿಕಮ್ ॥೩೪॥

ವಿವಾಗೋ ಯಜ್ಞದೀಕ್ಷಾ ಚ ದಾನಧರ್ಮದಯಾದಿಕಮ್ ।

ದಶಾಪತಿಯಿಂದ ಕೇಂದ್ರ, ಲಾಭಸ್ಥಾ ಅಥವಾ 3, 9, 10ರಲ್ಲಿ ಬುಧನಿದ್ದರೆ ರಾಹುದಶಾಂತರದಶಾ ಬುಧ ಶಾರೀರಿಕ ಆರೋಗ್ಯ ಹೃದಯೋತ್ಸಾಹ, ಅಭಿಷ್ಟಸಿದ್ಧಿ ಸ್ತೋತ್ರಾದಿ ಕೀರ್ತನ ಪುರಾಣ ಶ್ರವಣ.

ವಿವಾಹ ಯಜ್ಞದೀಕ್ಷಾ ದಾನ ಧರ್ಮ

ಷಷ್ಠಾಷ್ಟಮ ವ್ಯಯಗೆ ಸೌಮ್ಯೆ ಮಂದೇನ ಚ ಯುತೇಕ್ಷಿತೆ ॥೩೫॥

ದಾಯೋಶಾತ್ ಷಷ್ಠರಿಷ್ಟೆವಾ ರಂಧ್ರೆ ವಾ ಪಾಪಸಂಯುತೆ ।
ದೇವಬ್ರಾಹ್ಮಣನಿಂದಾ ಚಭೋಗಭಾಗ್ಯೋಜ್ಝಿತೋ ಭವೇತ್ ॥೩೬॥

ಸತ್ಯ ಹಿನಶ್ಚ ದುರ್ಬುದ್ಧಿ ಶ್ಚೌರಾದಿನೃಪಪೀಡನಮ್ ।
ಅಕಸ್ಮಾತ್ ಕಲಹಶ್ಚೈವ ಗುರುಪುತ್ರಾದಿನಾಶನಮ್ ॥೩೭॥

ಅರ್ಥ ವ್ಯಯೋ ರಾಜಕೋಪೋ ದಾರಪುತ್ರಾದಿ ಪೀಡನಮ್ ।

ಲಗ್ನದಿಂದ 6, 8, 12ಸರಲ್ಲಿ ಬುಧ ಶನಿಯಿಂದ ದೃಷ್ಟಿ ಅಥವಾ ಯುತನಾಗಿ ರಾಹು ದಶಾಂತರದಶಾನಾಥನಾದರೆ ದೇವ ಬ್ರಾಹ್ಮಣನಿಂದೆ ಭೋಗ ಭಾಗ್ಯದ ಕ್ಷಯ ಮಿಥ್ಯಾಭಾಷಣ ದುರ್ಬದ್ಧಿ ಕಳ್ಳರಾಜರ ಪೀಡೆ ಅಕಸ್ಮಾತ್ ಕಲಹ ಗುರು ಪುತ್ರರ ವಿನಾಶ ಅರ್ಥ ವ್ಯಯ ರಾಜಕೋಪ ಸ್ತ್ರೀಪುತ್ರರಿಗೆ ಕಷ್ಟ.

ದ್ವಿತೀಯ ದ್ಯೂನನಾಥೆ ವಾ ಹ್ಯಾಪಮೃತ್ಯುಭಯಂ ಭವೇತ್ ॥೩೮॥

ತದ್ದೋಷಪರಿಹಾರಾರ್ಥ ವಿಷ್ಣುಸಾಹಸ್ರಕಂ ಜಪೇತ್ ।

ಬುಧ ದಶೇಶ ದಶೇಶನಿಂದ 2, 7ರ ಸ್ವಾಮಿಯಾಗಿದ್ದರೆ ರಾಹುದಶಾ ಅಂತರ ದಶಾದಲ್ಲಿ (ಬುಧ) ಅಪಮೃತ್ಯು ಈ ದೋಷ ಪರಿಹಾರಾರ್ಥ ವಿಷ್ಣು ಸಹಸ್ರ ನಾಮದ ಜಪ ಶ್ರೇಯಸ್ಕರವಾಗಿದೆ.

### ಕೇತು ಅಂತರ ದಶಾ ಫಲ

ರಾಹೋರಂತರ್ಗತೆ ಕೇತೌ ಭ್ರಮಣಾ ಭೀಶ್ಚ ಭೂಪತೇಃ
ವಾತ ಜ್ವರಾದಿರೋಗಶ್ಚ ಭವೇದ್ದಾನಿಶ್ಚತು ಷ್ಪಾದಮ್ ॥೩೯।

ಅಷ್ಟಮಾದಿಪಸಂಯುಕ್ತೆ ದೇಹ ಜಾಡ್ಯಂ ಮನೋ ರುಜಾ
ಶುಭಯುಕ್ತೆ ಶುಭದ್ದೃಷ್ಟೆ ದೇಹಸೌಖ್ಯಂ ಧನಾಗಮಃ ॥೪೦॥

ರಾಜಸಮ್ಮಾನ ಭೂಷಾಪ್ತಿರ್ಗೃಹೆ ಶುಭಫಲಂ ಭವೇತ್ ।

ರಾಹುದಶಾದಲ್ಲಿ ಕೇತುವಿನ ಅಂತರದಶಾದಲ್ಲಿ ಯಾವುದೇ ಸ್ಥಾನಗತನಾದರೂ ತಿರುಗಾಟ ರಾಜಭಯ ವಾತಜ್ವರಪೀಡೆ ಪಶುಕ್ಷಯ ಅದೆ ಕೇತು ಅಷ್ಟಪೀಡನ ಜತೆಗಿದ್ದರೆ ಶರೀರ ಜಡತೆ ಮನೋವ್ಯಥಾ ಶುಭಗ್ರಹಯುತ ಅಥವಾ ಶುಭದೃಷ್ಟನಾಗಿದ್ದರೆ ಶಾರೀರಿಕ ಸೌಖ್ಯ ಧನಾಗಮ ರಾಜಸಮ್ಮಾನಿ ಸವರ್ಣಾದಿ ಭೂಷಣ ಪ್ರಾಪ್ತಿ ಮನೆಯಲ್ಲಿ ಶುಭ ಫಲ

ಲಗ್ನಾಧಿಪೇನ ಸಂಬಂಧೆ ಸ್ವೆಷ್ಟಸಿದ್ಧಿಃ ಸುಖಾವಹಾ।
ಲಗ್ನಾಧಿಪಸಮಾಯುಕ್ತೆ ಲಾಭೋ ವಾ ಭವತಿ ಧ್ರುವಮ್ ।
ಚತುಷ್ಪಾಜ್ಜಿವ ಲಾಭಃ ಸ್ಯಾತ್ ಕೇಂದ್ರೆ ವಾಥ ತ್ರಿಕೋಣಗೆ ॥೪೨॥

ಕೇತು ಲಗ್ನೇಶನ ಸಂಬಂಧ ಹೊಂದಿದ್ದರೆ ಅಭಿಷ್ಟ ಸಿದ್ಧಿದಾಯಕ ನಿಶ್ಚಯವಾಗಿ ಲಾಭದಾಯಕ ಕೇಂದ್ರ ತ್ರಿಕೋಣದಲ್ಲಿ ಕೇತು ಇದ್ದರೆ ಪಶುಲಾಭ.

ರಂಧ್ರ ಸ್ಥಾನಗತೆ ಕೇತೌ ವ್ಯಯೋ ವಾ ಬಲ ವರ್ಜಿತೆ ।
ತದ್ ಭುಕ್ತೌ ಬಹುರೋಗಃ ಸ್ಯಾಚೌರಾಹಿ ವ್ರಣ ಪೀಡನಮ್ ॥೪೩॥

ಪಿತೃಮಾತೃವಿಯೋಗಶ್ಚ ಭ್ರಾತೃದ್ವೆಷೊ ಮನೋರುಜಾ।
ದ್ವಿತೀಯ ದ್ಯೂನನಾಥೆ ತು ದೇಹ ಬಾಧಾ ಭವಿಷ್ಯತಿ ॥೪೪।

ತದ್ದೋಶಪರಿಹಾರಾರ್ಥ ಭಾಗದಾನಂ ಚ ಕಾರಯೇತ್।

ನಿರ್ಭಲ ಕೇತು 8, 12ರಲ್ಲಿ ರಾಹುದಶಾದಲ್ಲಿ ಅಂತರ ದಶಾನಾಥರಾಗಿ ಬಂದಾಗ ರೋಗಾಧಿಕ್ಯ ಕಳ್ಳ-ಸರ್ಪ ವ್ರಣದಿಂದ ಪೀಡನೆ ತಂದೆ ತಾಯಿಗಳ ವಿಯೋಗ, ಅಣ್ಣತಮ್ಮಂದಿರಲ್ಲಿ ದ್ವೇಷ, ಮಾನಸಿಕ ಕಷ್ಟ ಅದೆ ಕೇತು 2, 7ರ ಅಧಿಪನಾದರೆ (ವೃಶ್ಚಿಕ ಅಥ ಕೇತುವಿನ ಆಧಿಪತ್ಯ) ಶಾರೀರಿಕ ಬಾಧೆ ಶಾಂತ್ಯರ್ಥ ಭಾಗ(ಆಡು)ದಾನ ಹೇಳಿದೆ.

## ಶುಕ್ರಾಂತರದಶಾ ಫಲ

ರಾಹೋರಂತರ್ಗತೆ ಶುಕ್ರೆ ಲಗ್ನಾತ್ ಕೇಂದ್ರ ತ್ರಿಕೋಣಗೆ ॥೪೫॥

ಲಾಭೆ ವಾ ಬಲಸಂಯುಕ್ತೆ ಯೋಗ ಪ್ರಾಬಲ್ಯಮಾದಿಶೇತ್ ।
ವಿಪ್ರಮೂಲಾದ್ಧಾನ ಪ್ರಾಪ್ತಿಃ ಸಂಲಾಭಃಸ್ಯಾಪ್ಪತುಷ್ಪಾದಾಮ್ ॥೪೬॥

ಪುತ್ರೋತ್ಸವಾದಿ ಸಂತೋಷೊ ಗ್ರಹೆ ಕಲ್ಯಾಣ ಸಂಭವಃ ।
ಸಮ್ಮಾನಂ ರಾಜಸಮ್ಮಾನಂ ರಾಜ್ಯಲಾಭೊ ಮಹತ್ ಸುಖಮ್ ॥೪೭।

ಸ್ವೋಚ್ಚೆ ವಾ ಸ್ವರ್ಕ್ಷಗೆ ವಾಪಿ ತುಂಗಾಶೆ ಸ್ವಾಂಶಗೇಪಿ ವಾ ।
ನವೀನ ಗ್ರಹ ನಿರ್ಮಾಣಂ ನಿತ್ಯಂ ಮೃಷ್ಪಾನ್ನ ಭೋಜನಮ್ ॥೪೮॥

ಕಲತ್ರಪುತ್ರವಿಭವೋ ಮಿತ್ರೈಃ ಸಹ ಸುಖಭೋಜನಮ್।
ಅನ್ನದಾನಂ ಪ್ರಿಯಂ ನಿತ್ಯಂ ದಾನಧರ್ಮಾದಿ ಸಂಗ್ರಹಃ ॥೪೯॥

ಮಹಾರಾಜ ಪ್ರಸಾದೇನ ವಾಹನಾಂಬರ ಭೂಷಣಮ್ ।
ವ್ಯವಸಾಯಾಲಾತ್ ಫಫಲಾಧಿಕ್ಯಂ ವಿವಾಹೋಮೌಂಜ ಬಂಧನಮ್ ॥೫೦॥

ಕೇಂದ್ರ ತ್ರಿಕೋಣ ಲಾಭಸ್ಥಾನದಲ್ಲಿ ಸಬಲ ಶುಕ್ರನಿದ್ದು, ರಾಹುದಶಾದಲ್ಲಿ ಅಂತರ ದಶಾಧೀಶನಾಗಿ ಬಂದಾಗ ಬ್ರಾಹ್ಮಣರ ಮುಖಾಂತರ ಧನಪ್ರಾಪ್ತಿ ಪಶುಲಾಭ, ಪುತ್ರೋತ್ಸವ ಮನೆಯಲ್ಲಿ ಕಲ್ಯಾಣೋತ್ಸವ ಜನರಿಂದ ಆದರ ರಾಜ ಸಮ್ಮಾನ ರಾಜ್ಯಲಾಭ ಮಹಾಸುಖ ಆತಿ ಫಲ ಅದೆ ಶುಕ್ರ ನೀ ಸ್ವಭವನ ಸ್ವನವಾಂಶ ಸ್ವೋಚ್ಚದಲ್ಲಿದ್ದರೆ ಅವನ ಅಂತರ ದಶಾಕಾಲ ಹೊಸ ಮನೆ ಕಟ್ಟುವ ಯೋಗ ನಿತ್ಯ ಮೃಷ್ಟಾನ್ನ ಭೋಜನ ಅನ್ನದಾನ ದಾಗಾದಿ ವಿಸ್ತಾರ ರಾಜ ಕೃಪಾದಿಂದ ವಾಹನಾದಿ, ವಸ್ತ್ರ ಭೂಪಶಾದಿ ಪ್ರಾಪ್ತಿ ವ್ಯವಸಾಯದಲ್ಲಿ ಅಧಿಕಲಾಧ ವಿವಾಹ ಉಪನಯಗಾದಿ ಫಲ.

ಷಷ್ಠಾಷ್ಟಮವ್ಯಯೇ ಶುಕ್ರೇ ನೀಚೆ ಶತ್ರು ಗೃಹೆ ಸ್ಥಿತೆ ।
ಮಂದಾರ ಫಣಿಸಂಯುಕ್ತೇ ಚಿದ್ ಭುಕ್ತೌ ರೋಗಮಾದಿಶೇತ್ ॥೫೦॥

ಅಕಸ್ಮಾತ್ ಕಲಹಶ್ಚೈವ ಪಿತೃಪುತ್ರಾವಿಯೋಜನಮ್ ।
ಸ್ವಬಂಧುಜನಹಾನಿಶ್ಚ ಸರ್ವತ್ರ ಜನಪೀಡನಮ್ ॥೫೨॥

ದಾಯಾದಕಲಹಶ್ಚೈವ ಮೃತ್ಯು ಸ್ಯಾತ್ ಸ್ವಸ್ಯ ಚಪ್ರಭೋಃ।
ಕಲತ್ರ ಪುತ್ರ ಪೀಡಾ ಚ ಶೂಲ ರೋಗಾದಿ ಸಂಭವಃ ॥೫೩॥

ಶುಕ್ರ ತ್ರಿಕಸ್ಥ ಅಥವಾ ನೀಚ ಅಥವಾ ಶತಗ್ರಹದಲ್ಲಿ ಶನಿ ರಾಹು, ಮಂಗಳ ಯುಕ್ತನಾಗಿದ್ದರೆ, ರಾಹುದಶಾ, ಶುಕ್ರ ಅಂತರ ದಶಾದಲ್ಲಿ ರೋಗ ಅಕಸ್ಮಾತ ಕಲಹ ಪಿತ್ರು-ಪುತ್ರಾದಿ ವಿಯೋಗ ಸ್ವಬಂಧು ಜನರಿಂದ ತೊಂದರೆ ಅವರನಾಶ ದಯಾದಿಗಳೊಡನೆ ಕಲಹ-ಯಜಮಾನನ ಮೃತ್ಯು ಸ್ತ್ರೀಪುತ್ರ ಕಷ್ಟ ಶೂಲ ರೋಗಾದಿ ತೊಂದರೆ ಸಂಭವ.

'ದಾಯೋಶಾತ್ ಕೇಂದ್ರ ರಾಶಿಸ್ಥೆ ತ್ರಿಕೋಣೆ ವಾಸಮನ್ವಿತೆ ।
ಲಾಭೆವಾ ಶುಭರಾಶಿಸ್ಥೆ ಕ್ಷೇತ್ರಪಾಲಾನ್ಮಹತ್ ಸುಖಮ್ ॥೫೪॥

ಸುಗಂಧವಸ್ತ್ರಶಯ್ಯಾದಿ ಗಾನ ವಾದ್ಯಭವಂ ಸುಖಮ್।
ಛತ್ರಚಾಮರಭೂಷಾದಿ ಸ್ವೆಷ್ಟವಸ್ತವಾಪ್ತಿರುತ್ತಮ ॥೫೫॥

ದಶಾಪತಿಯಿಂದ ಕೇಂದ್ರ ತ್ರಿಕೋಣ ಲಾಭಸ್ಥಾನ ಆದಿ ಶುಭ ರಾಶಿಯಲ್ಲಿ ಶುಕ್ರನಿದ್ದರೆ, ಅಂತರದಶಾ ಕ್ಷೇತ್ರ ಪಾಲನಿಂದ ಸೌಖ್ಯ ಸಂಗಂಧಪೂರ್ಣ ವಸ್ತ್ರ, ಶಯ್ಯಾ ಗಾನವಾದ್ಯಜ ಸುಖ ಛತ್ರ ಚಾಮರ ಭೂಷಣ ಹಾಗೂ ಅದೃಷ್ಟವಸ್ಕ ಪ್ರಾಪ್ತಿ ಸುಖ.

ದಾಯೇಶಾದ್ರಿಪುರಂಧ್ರೆಸ್ಥೆ ವ್ಯಯೇ ವಾ ಪಾಪಸಂಯುತೆ
ವಿಪಾಹಿ ನೃಪಚೌರಾದಿ ಮೂತ್ರಕೃ ಸ್ಯಾನ್ಮಹದ್ ಭಯಮ್ ॥೫೬॥

ಪ್ರಮೇಹೋ ರಕ್ತವಿಕೃತಿಃ ಕುತ್ಸಿತಾನ್ನಂ ಶಿರೋವ್ಯಥಾ ।
ಕಾರಾಗ್ರಹ ಪ್ರವೇಶಶ್ಚ ರಾಜದಂಡಾದ್ಯಾನ ಕ್ಷಯಃ ॥೫೭॥

ದ್ವಿತೀಯ ದ್ಯೂನನಾಥೆ ವಾ ದಾರಪುತ್ರಾದಿ ನಾಶನಮ್ ।
ಆತ್ಮಪೀಡಾ ಭಯಂ ಚ ಸ್ಯಾದಪಮೃತ್ಯುಸ್ತಥಾ ಭವೇತ್ ॥೫೮॥

ದುರ್ಗಾಲಕ್ಷ್ಮೀ ಜಪಂ ಕುರ್ಯಾತ್ ಕಲ್ಯಾಣಾಪ್ತಿಸ್ತತೋ ಭವೇತ್ ॥೫೯॥

ದಶಾಧೀಶನಿಂದ 6, 8, 12ರಲ್ಲಿ ಪಾಪಯುಕ್ತ ಶುಕ್ರನಿದ್ದರೆ ರಾಹು ದಶಾ ಶುಕ್ರಾಂತರ ದಶಾಕಾಲದಲ್ಲಿ ವಿಷಪ್ರಾಶನ ಸರ್ಪರಾಜ ಕಳ್ಳ, ಆದಿ ಹಾಗೂ ಮೂತ್ರಕೃಚ್ಚದ ಮಹಾಭಯ ಪ್ರಮೇಹ ರಕ್ತವಿಕಾರ ಕುಚ್ಚಿತನ್ನಾ ಭೋಜನ ಶರಪೀಡೆ ಕಾರಗೃಹ ವಾಸ ರಾಜದಂಡದಿಂದ ಧನನಾಶ ಅದೇ ಶುಕ್ರ ದಶೇಶನಿಂದ 2, 7ರಲ್ಲಿ ಅಧಿಪನಾಗಿದ್ದರೆ ಅಂತರದಶಾ ಕಾಲದಲ್ಲಿ ಸ್ತ್ರೀಪುತ್ರರ ವಿನಾಶ ಆತ್ಮಪೀಡೆ ಭಯ ಅಪಮೃತ್ಯುಕಾರಕ ಈ ದೋಷ ಶಾಂತ್ಯರ್ಥ ದುರ್ಗಾ ಲಕ್ಷ್ಮೀ ಸ್ತವಸೂಕ್ತ ಪಠನ ಜಪಾದಿಗಳಿಂದ ಕಲ್ಯಾಣ ಪ್ರಾಪ್ತಿ ಹೇಳಿದೆ.

## ಸೂರ್ಯಾಂತರ ದಶಾ

ರಾಹೋರಂತರ್ಗತೇ ಸೂರ್ಯೇ ಸ್ವೋಚ್ಚೇ ಸ್ವಕ್ಷೇತ್ರ ಕೇಂದ್ರಗೇ ।
ತ್ರಿಕೋಣೇ ಲಾಭಗೇ ವಾಪಿ ತುಂಗಾಂಶೇ ಸ್ವಾಂಶಗೇ ಪಿ ವಾ ॥೬೦॥

ಶುಭಗ್ರಹಣೇ ಸಂದೃಷ್ಟೇ ರಾಜಪ್ರೀತಿಕರಂ ಶುಭಮ್ ।
ಧನಧಾನ್ಯಸಮೃದ್ಧಿಶ್ಚ ಸಮ್ಮಾನಮಪಿ ಸೌಖ್ಯದಮ್ ॥೬೧॥

ಅಲ್ಪ ಗ್ರಾಮಾಧಿಪತ್ಯಂ ಚ ಸಲಲಾಭೋ ಭವಿಷ್ಯತಿ ।
ಭಾಗ್ಯಲಗ್ನೇ ಶ ಸಂಯುಕ್ತೇ ಕರ್ಮೇಶೇನ ನಿರೀಕ್ಷಿತೆ ॥೬೨॥

ರಾಜಾಶ್ರಯೇ ಮಹಾಕೀರ್ತಿರ್ವಿದೇಶಗಮನಿಂ ತಥಾ।
ದೇಶಾಧಿಪತ್ವಯೋಗಶ್ಚ ಗಜಾಶ್ವಾಂಬರ ಭೂಷಣಮ್ ॥೬೩॥

ಮನೋಭಿಷ್ಟಾಪ್ರದಾನಂ ಚ ಪುತ್ರ ಕಲ್ಯಾಣ ಸಂಭವಮ್ ।

ಸ್ವೋಚ್ಚ ಸ್ವಭವನ ಕೇಂದ್ರ ತ್ರಿಕೋಣ ಲಾಭಸ್ಥಾನ ಸ್ವೋಚಾಂಶ ಅಥವಾ ಸ್ವನವಾಂಶ ದ ಸೂರ್ಯನ ಅಂತರದಶಾ ರಾಹುದಶಾದಲ್ಲಿ ಶುಭಕರವಾಗುತ್ತದೆ. ರಾಜಪ್ರೇಮ ಧನಧಾನ್ಯ ಸಮೃದ್ಧಿ ಸೌಖ್ಯಪ್ರದ ಸಮ್ಮಾನ ಸಣ್ಣ ಸಣ್ಣ ಗ್ರಾಮ ಸಂಸ್ಥೆಗಳ ಗ್ರಾಮಾಧಿಪತ್ಯ ಸಲೀ ಲಾಭ ಅದೇ ಸೂರ್ಯ ಲಗ್ನೇಶನ ಜತೆಗಿದ್ದು ಕರ್ಮೇಶನ ದೃಷ್ಟಿಯಿದ್ದರೆ ರಾಜಾಶ್ರಯ ಮಹಾಕೀರ್ತಿ ವಿದೇಶಗಮನ, ದೇಶದ ಮೇಲೆ ಪ್ರಭುತ್ವ ಆನೆ, ಕುದುರೆ ವಸ್ತ್ರ ಭೂಷಣ ಪ್ರಾಪ್ತಿ ಅಭಿಷ್ಟಸಿದ್ಧಿ ಪುತ್ರ ಕಲ್ಯಾಣವನ್ನು ಹೇಳುವುದು.

ದಾಯೋಶಾದ್ರಿಪ್ಪರಂಧ್ರಸ್ಥೆ ಷಷ್ಠೆವಾ ನೀಚಗೇ ಪಿ ವಾ ॥ ೬೪॥

ಜ್ವರಾತಿಸಾರ ರೋಗಶ್ಚ ಕಲಹೊ ರಾಜಭಿಃ ಸಹ ।
ಪ್ರಯಾಣು ಶತ್ರುವೃದ್ಧಿಶ್ಚ ನೃಪಚೌರಾಗ್ನಿ ಪೀಡನಮ್ ॥೬೫॥

ದಾಯೋಶಾತ್ ಕೇಂದ್ರ ಕೋಣೆ ವಾ ದುಶ್ಚಿಕ್ಯೆ ಲಾಭಗೋಪಿ ವಾ ।
ವಿದೇಶೆ ರಾಜಸಮ್ಮಾನಂ ಕಲ್ಯಾಣು ಚ ಶುಭಾವಹವ್ ॥೬೬॥

ದ್ವಿತೀಯ ದ್ಯೂನನಾಥೆ ತು ಮಹಾರೋಗೋ ಭವಿಷ್ಯತಿ।
ಸೂರ್ಯ ಪ್ರಣಾಮತಃ ಶಾಂತಿ ಕುರ್ಯಾದಾರೋಗ್ಯದಾಯಿನೀಮ್ ॥೬೭॥

ದಶಾಪತಿಯಿಂದ ೬, ೮, ೧೨ ಅಥವಾ ನೀಚದಲ್ಲಿ ಸೂರ್ಯನಿದು

ನೀಚ ದಶಾ ಕಾಲದಲ್ಲಿ ಜ್ವರ ಅತೀಸಾರ ರಾಜನಿಂದ ವಿರೋಧ ದೇಶಾಟನೆ ಶತ್ರುವೃದ್ಧಿ ರಾಜಕಳ್ಳ ಅಗ್ನಿಯಿಂದ ಪೀಡೆ ದಶಾಧಿಪನಿಂದ ಕೇಂದ್ರ ತ್ರಿಕೋಣ ತೃತೀಯ ಹಾಗೂ ಏಕಾದಶಲ್ಲಿ ವಿದೇಶದಲ್ಲಿ ರಾಜ ಸಮ್ಮಾನ ಶುಭ ಪ್ರದ ಕಲ್ಯಾಣ ಅದೇ ಸೂರ್ಯ ದಶೇಶನಿಂದ 2, 7, 8 ಅಧಿಪನಾಗಿದ್ದರೆ ಮಹಾರೋಗಕಾರಕ ಈ ದುಸ್ಸಫಲ ಶಾಂತಿಗಾಗಿ ಸೂರ್ಯಶಾಂತಿ ಸೂರ್ಯನಮಸ್ಕಾರಾದಿ ಅರ್ಘದಾಪೂಜನ ಆದಿಯಿಂದ ದೋಷಪರಿಹಾರ ಆಯುರಾರೋಗ್ಯ.

## ಚಂದ್ರಾಂತರ ದಶಾಫಲ

ರಾಹೋರಂತರ್ಗತಿ ಚಂದ್ರೆ ಸ್ವಕ್ಷೇತ್ರೆ ಸ್ವೋಚ್ಚಗೆ ಪಿ ವಾ ।
ಕೇಂದ್ರ ತ್ರಿಕೋಣಲಾಭೆ ವಾ ಮಿತ್ರರ್ಕ್ಷೇ ಸದ್ ಗ್ರಹಾನ್ವಿತೆ ॥೬೮॥

ರಾಜತ್ವಂ ರಾಜಪೂಜ್ಯತ್ವಂ ಧನಲಾಭಶ್ಚ ಜಾಯತೆ ।
ಆರೋಗ್ಯಂ ಭೂಷಣು ಚೈವ ಮಿತ್ರಸ್ತ್ರೀಪುತ್ರ ಸಂಪದಃ ॥೬೯॥

ಪೂರ್ಣೆ ಚಂದ್ರೆ ಫಲಂ ಪೂರ್ಣ ರಾಜಪ್ರೀತ್ಯಾ ಶುಭಾವಹವ್ ।
ಅಶ್ವವಾಹನಲಾಭಃ ಸ್ಯಾತ್ ಸಮೃದ್ಧಿಃ ಕ್ಷೇತ್ರಗೇಹಯೋಃ ॥೭೦॥

ಸ್ವಭವನ ಸ್ವೋಚ್ಚ ಕೇಂದ್ರ ತ್ರಿಕೋಣ ಲಾಭಸ್ಥಾನ ಮಿತ್ರಗ್ರಹದಲ್ಲಿ ಶುಭಯುಕ್ತ ಚಂದ್ರ ರಾಹುದಶಾ ಅಂತದಶಾಧೀಶನನಾಗಿ ಬಂದಾಗ ಸ್ವಯಂ ರಾಜ್ಯತ್ವ, ಅಥವಾ ರಾಜ್ಯಪೂಜ್ಯತ್ವ ಅಥವಾ ಅವನಿಂದ ಸನ್ಮಾನ, ಧನಲಾಭ, ಆರೋಗ್ಯ ಭೂಷಣ ಮಿತ್ರ ಸ್ತ್ರೀಪುತ್ರಾದಿಗಳಿಂದ ಸೌಖ್ಯ ಅಶ್ವದಿ ವಾಹನ ಸೌಖ್ಯ, ಮನೆ, ಹೊಲಗಳ ವಿಸ್ತಾರ ಪೂರ್ಣ ಚಂದ್ರನಿದ್ದರೆ ಪೂರ್ಣ ಸುಖ-ಲಾಭ ಕ್ಷೀಣಚಂದ್ರನಿದ್ದರೆ ಅಲ್ಪಲಾಭ.

ದಾಯೋಶಾತ್ ಸಂಖ ಭಾಗ್ಯಸ್ಥೆ ಕೇಂದ್ರ ವಾ ಲಾಭಗೇ ಪಿ ವಾ ।
ಲಕ್ಷ್ಮೀಕಟಾಕ್ಷ ಚಿನ್ಹಾನಿ ಗೃಹೆ ಕಲ್ಯಾಣ ಸಂಭವಃ ॥೭೦॥

ಸಮಸ್ತ ಕಾರ್ಯಸಿದ್ಧಿಃ ಸ್ಯಾತ್ ಧನಧಾನ್ಯ ಸುಖಾವಹಾ ।
ಸತ್ಕೀರ್ತಿ ಲಾಭಸಮ್ಮಾನಂ ದೇವ್ಯಾರಾಧನ ಮಾಚರೇತ್ ॥೭೨॥

ದಶಾಪತಿಯಿಂದ 4, 9, 14, 7, 10 ಅಥವಾ 11ರಲ್ಲಿ ಚಂದ್ರನಿದ್ದರೆ ಅವನ ಅಂತರ ದಶಾ ಮನೆಯಲ್ಲಿ ಲಕ್ಷ್ಮೀಕಟಾಕ್ಷ ಚಿನ್ಹೆ (ಲಕ್ಷ್ಮೀಕೃಪಾ) ಕಲ್ಯಾಣ ಕಾರ್ಯಗಳು ಸರ್ವಕಾರ್ಯಸಿದ್ಧಿ ಧನಧಾನ್ಯಾಗಮ ಶುಭ್ರ ಯಶೋಲಾಭ ಸನ್ಮಾನ ಹಾಗೂ ದಾತಾನಿಂದ ಧನಲಾಭ.

ದಾಯೇಶಾತ್ ಷಷ್ಠರಂಧ್ರಸ್ಥೆ ವ್ಯಯೋ ವಾ ಬಲವರ್ಜಿತೆ ।
ಪಿಶಾಚ ಕ್ಷುದ್ರವ್ಯಾಘ್ರು ದ್ಯೌಗ್ರಹ ಕ್ಷೇತ್ರಾರ್ಥ ನಾಶನಮ್ ॥೭೩॥

ಮಾರ್ಗೆಚೌರಭಯ ಚೈವ ವ್ರಣಾಧಿಕ್ಯಂ ಮಹೋದರಃ ।
ದ್ವಿತೀಯ ದ್ಯೂನನಾಥೆ ತು ಹ್ಯಾಪಮೃತ್ಯುಸ್ತದಾ ಭವೇತ್ ॥೭೪॥

ಶ್ವೇತಾ ಗಾ ಮಹಷಿ ದದ್ಯಾದಾಯರಾರೋಗ್ಯದಾಯಿನಿವ್ ।

ದಶಾಪತಿಯಿಂದ 6, 8, 12ರಲ್ಲಿ ನಿರ್ಬಲ ಚಂದ್ರನಿರೆ ಅವನ ಅಂತರ ದಶಾ ಪಿಶಾಚಾದಿ ಕಾಟ ವ್ಯಾಘ್ರಾದಿ ಹಿಂಸ್ರಪಶುಕಾಟ ಮನೆ ಹಾಗೂ ಭೂಮಿಯಿಂದ ವನಕ್ಷಯ (ಬೆಳೆಯದಿರವಿಕೆ ಇತ್ಯಾದಿ).ಮಾರ್ಗದಲ್ಲಿ ಕಳ್ಳಕಾಕರ ಭಯ, ವ್ರಣಾಧಿಕ್ಯ ಉದರ (ಜಲೋದರ ಇತ್ಯಾದಿ) ರೋಗ ಅದೆ ಚಂದ್ರ ದಶೇಶನಿಂದ 2, 7ರ ಅಧಿಪನಾಗಿದ್ದರೆ ಅಪಮೃತ್ಯು ಆಯುಸ್ಯ ಆರೋಗ್ಯಕ್ಕಾಗಿ ಬಿಳಿ ಹರಳ ಅಥವಾ ಎಮ್ಮೆದಾನ ಶ್ರೇಯಸ್ಕರ.

## ಭೌಮಾಂತರ್ ದಶಾ

ರಾಹೋರಂತರ್ಗತೆ ಭೌಮೇ ಲಗ್ನಲಾಭ ತ್ರಿಕೋಣಗೆ ।
ಕೇಂದ್ರೆ ವಾ ಶುಭ ಸಂಯುಕ್ತೆ ಸ್ವೋಚ್ಚಸ್ವ ಕ್ಷೇತ್ರ ಗೆ ಪಿ ವಾ ॥೭೫॥

ನಷ್ಪ ರಾಜ್ಯಧನಪ್ರಾಪ್ತಿಃ ಸಮೃದ್ಧಿಃ ಕ್ಷೇತ್ರಗೇಹಯೇಃ ।
ಇಷ್ಪದೇವಪ್ರಸಾದೇನ ಸಂತಾನಂ ಸುಖ ಭಾಜನಮ್ ॥೭೬॥

ಕ್ಷಿಪ್ರಂ ಭೋಜ್ಯಾನ್ನಹತ್ ಸೌಖ್ಯಂ ಪ್ರಾಪ್ತಿ ಭೂಪಾಶ್ವವಾಸಸಾವ್ ।

ಲಗ್ನದಿಂದ ಕೇಂದ್ರ ತ್ರಿಕೋಣ ಅಥವಾ ಲಾಭನ ಸ್ವೋಚ್ಚ ಅಥವಾ ಸ್ವಭವನ ಗತ ಕುಜ ಶುಭ ಯುತನಾಗಿ ರಾಹು ದಶಾದಲ್ಲಿ ಅಂತರ ದಶಾಧೀಶನಾದಾಗ ನಷ್ಪ ರಾಜ್ಯ ನಷ್ಪ ಧನದ ಪ್ರಾಪ್ತಿ ಹೊಲ, ಮನೆ ಸಮೃದ್ಧಿ ಹಾಗೂ ಇಷ್ಪದೇವರ ಕೃಪೆಯಿಂದ ಸುಖವೃರ್ದಕ ಸನ್ಮಾನ ಭೋಜ್ಯದಿಂದ ಸೌಖ್ಯ ಭೂಷಣಾದಿ ಅಶ್ವಾದಿ

ಹಾಗೂ ವಸ್ತ್ರದ ಪ್ರಾಪ್ತಿ.

ದಾಯೋಶಾತ್ ಕೇಂದ್ರ ಕೋಣೆ ವಾ ದುಶ್ಚಕ್ಯೆ ಲಾಭಗೆ ಪಿ ಬಾ ।
ರಕ್ತ ವಸ್ತ್ರಾದಿ ಲಾಭಃ ಸ್ಯಾತ್ ಪ್ರಯಾಣಾ ರಾಜದರ್ಶನಂ ॥೭೭॥

ಪುತ್ರವರ್ಗೇಷು ಕಲ್ಯಾಣು ಸ್ವಪ್ರಭೋಶ್ಚ ಮಹತ್ಸುಖಮ್ ।
ಸೇಗ್ರಾಪತ್ಯಂ ಮಹೋತ್ಸಾಹೋ ಭ್ರಾತೃವರ್ಗಾದಾನಾಗಮಃ ॥೭೮॥

ದಶಾಪತಿಯಿಂದ ಕೇಂದ್ರ ತ್ರಿಕೋಣ ತೃತೀಯ ಏಕಾದಶದಲ್ಲಿ ಮಂಗಳನಿದ್ದರೆ, ಅಂತರದಶಾಕಾಲದಲ್ಲಿ ರಕ್ತವಸ್ತ್ರ (ಕೆಂಪು ಅರಿವೆ) ಲಾಭ ಯಾತ್ರೆ ರಾಜದರ್ಶನ ಪುತ್ರವರ್ಗದಲ್ಲಿ ಕಲ್ಯಾಣ (ವಿವಾಹ) ಸ್ವಶುಭದಿಂದ ಸುಖ ಸೇನಾಪತ್ಯಾಧಿಕಾರ, ಭಾರಿ ಮಹೋತ್ಸಾಹ ಭ್ರಾತ್ರು ವರ್ಗದಿಂದ ಧನಾಗಮನ.

ದಾಯೋಶಾದಂಧ್ರರಿಷ್ಪೆ ವಾ ಷಷ್ಠೆ ಪಾಪಸಮನ್ವಿತೆ ।
ಪುತ್ರದಾರಾದಿ ಹಾನಿಶ್ಚಿ ಸೋದರಾಣಾಂ ಚ ಪೀಡನಮ್ ॥೭೯॥

ಸ್ಥಾನ ಭ್ರಂಶೊ ಬಂಧುವರ್ಗದಾರ ಪುತ್ರವಿರೋಧನಮ್ ।
ಚೌರಾಹಿ ವ್ರಣಭೀತಿಶ್ಚ ಸ್ವಜನೋರಪಿ ಪೀಡನಮ್ ॥೮೦॥

ಅದೌ ಕ್ಲೇಶಸ್ತತೋ ಮಧ್ಯೆ ತಥಾಂತೊಪಿ ಸುಖಂ ಭವೇತ್ ।

ದ್ವಿತೀಯ ದ್ಯೂನನಾಥೆ ತು ದೇಹಾಲಸ್ಯಂ ಮಹದ್ ಭಯಮ್
ಅನಂಗ್ ವಾಹಂ ಚಣಾಂ ದದ್ಯದಾರೋಗ್ಯಂ ಚತತೋಭವೇ॥೮೧॥

ದಶಾಧೀಶನಿಂದ ಪಾಪಯುಕ್ತ ಭೌಮ 6, 8, 12ರಲ್ಲಿದ್ದು, ಅಂತರದಶಾ ಕಾಲದಲ್ಲಿ ಪುತ್ರ ಸ್ತ್ರೀ ಸಹೋದರರಂತೆ ಮನೋಕ್ಲೇಶ ಸ್ಥಾನಭ್ರಂಶ (ನೌಕರಿಯಲ್ಲಿ ವಿಳಂಬ, ಕಿತ್ತೊಗೆಯುವುದು, ಪರಪ್ರಾಂತ ವರ್ಗ) ಬಂಧು ಬಾಂಧವ ಹಾಗೂ ಸ್ತ್ರೀಪುತ್ರರಿಂದ ವಿರೋಧ ಕಳ್ಳರು, ಸರ್ಪ ವ್ರಣದ ಭಯ, ಶರೀರಪೀಡೆ ಈ ಅಂತರ ದಶಾರಂಭ ಕ್ಲೇಶ. ಮಧ್ಯ ಹಾಗೂ ಅಂತ್ಯ ಸುಖದಾಯಕ ಅದೇ ಭೌಮ ದಶೇಶನಿಂದ 2,7ರ ಅಧಿಪನಾಗಿದ್ದರೆ ಶರೀರಾಲಸ್ಯ ಮಹಾಭಯ, ಶಾಂತಿಗಾಗಿ ಎತ್ತಿನ ದಾನ ಅದರಿಂದ ಆರೋಗ್ಯ ಪ್ರಾಪ್ತಿ ಸುಖ ಹೇಳಲಾಗಿದೆ.

ಬೃಹತ್ ಪರಾಶರ ಹೋರಾಶಾಸ್ತ್ರೇ
ರಾಹು ಅಂತರ ದಶಾಧ್ಯಾಯಃ ಸಮಾಪ್ತಃ

# ಅಥ ಗುರುದಶಾಂತರರ್ದಶಾಧ್ಯಾಯಃ

# ಗುರುದಶಾದಲ್ಲಿ ಗುರ್ವಂತರ ದಶಾ

**ಪರಾಶರ ಉವಾಚ:**

ಸ್ವೋಚ್ಚೆ ಸ್ವಕ್ಷೇತ್ರಗೆ ಜೀವೆ ಲಗ್ನಾತ್ ಕೇಂದ್ರ ತ್ರಿಕೋಣಗೆ ।
ಅನೇಕ ರಾಜರಾಜೋ ವಾ ಸಂಪತ್ತೋ ರಾಜಪೂಜಿತಃ ॥೧॥

ಗೋಮಹಿಷ್ಯಾದಿ ಲಾಭಶ್ಚ ವಸ್ತ್ರವಾಹನ ಭೂಷಣವ್ ।
ನೂತನ ಸ್ಥಾನನಿರ್ಮಾಣು ಹರ್ಮ್ಯಾಪ್ರಕಾರಸಂಯುತವ್ ॥೨॥

ಗಜಾಂತೈಶ್ವರ್ಯ ಸಂಪತ್ತಿರ್ಭಾಗ್ಯ ಸತ್ಕರ್ಮ ಸಂಯುತಾ ।
ಬ್ರಾಹ್ಮಣ ಪ್ರಭುಸಮ್ಮಾನಂ ಸಮಾನಂ ಪ್ರಭುದರ್ಶನಂ ॥೩॥

ಸ್ವಪ್ರಭೋಃ ಸ್ವಫಲಾಧಿಕ್ಯಂ ಲಾಭಃ ಸ್ಯಾದ್ದಾರಪುತ್ರಯೋಃ ।

**ಪರಾಶರರು ಹೇಳಿದರು– (ಹೇ ಮೈತ್ರೇಯ)**

ತ್ರಿಕೋಣ ಸ್ವೋಚ್ಚ ತನ್ನ ಮನೆಯಲ್ಲಿ ಸ್ಥಿತ ಗುರುವಿದ್ದರೆ, ಗುರು ಮಹಾದಶಾ ಗುರು ಅಂತರದಶಾದಲ್ಲಿ ಅನೇಕ ರಾಜರ ರಾಜನಾಗುವನು. (ಮಹಾರಾಜ) ಹಾಗೂ ರಾಜರಿಂದ ಪೂಜಿತನಾಗುವನು ಅದೇ ಸಮಯದಲ್ಲಿ ಆಕಳಾದಿ ಪಶು ಸಂಪತ್ತು ಲಾಭ ವಸ್ತ್ರ ವಾಹನ ಭೂಷಣ ಪ್ರಾಪ್ತಿ ಹೊಸ ಸ್ಥಾನದ ನಿರ್ಮಾಣ ಕೊನೆಯವರೆಗೆ ಎಲ್ಲ ಐಶ್ವರ್ಯ ಪ್ರಾಪ್ತಿ ಸೌಭಾಗ್ಯ ಸತ್ಕಾರ್ಯದ ಸಮ್ರಾಜ್ಯ ಬ್ರಾಹ್ಮಣ ರಾಜರಿಂದ ಸನ್ಮಾನ ರಾಜದರ್ಶನ ತನ್ನ ಪ್ರಭುವಿನಿಂದ ವಿಶೇಷ ಲಾಭ ಸ್ತ್ರೀಪುತ್ರರಿಗೂ ಲಾಭ.

ನೀಚಾಂಶೆ ನೀಚರಾಶಿಸ್ಥೆ ಷಷ್ಠಾಷ್ಟವ್ಯಯ ರಾಶಿಗೆ ॥೪॥

ನೀಚಸಂಗೋ ಮಹದ್ ದುಃಖಂ ದಾಯೊದ್ಯೈಃ ಕಲಹಃ ಸಮವ್।
ಅವಿಚಾರೇಣ ಕಲಹೋಪಮೃತ್ಯುಃ ಸ್ವಪ್ರಭೋರಪಿ ॥೫॥

ಪುತ್ರದಾರ ವಿಯೋಗಸ್ಪ ಧನಧಾನ್ಯಾರ್ಥ ನಾಶನವ್ ।
ಸಪ್ತಮಾಧಿಪದೋಷಣ ದೇಹ ಭಾಧಾ ಭವಿಷ್ಯತಿ ॥೬॥

ತದ್ದೋಶ ಪರಿಹಾರಾರ್ಥ ಶಿವಸಾಹಸ್ರಕಂ ಜಪೇತ್
ರುದ್ರಜಾಪ್ಯಂ ಚ ಗೋದಾನಂ ಕಾರ್ಯ ದಿ ಪ್ಪಪ್ರದಾಯಕವಮ್ ॥೭॥

ಗುರು ನೀಚರಾಶಿ ಅಥವಾ ನೀಚ ನವಾಂಶದಲ್ಲಿ ಅಥವಾ 6, 8, 12ರಲ್ಲಿ ಅವನ ಅಂತರದಶಾದಲ್ಲಿ ನೀಚಸಂಗ ಮಹಾದುಃಖಿ ದಯಾದಿಗಳೊಡನೆ ಜಗಳ, ಅವಿವೇಕ ಪೂರ್ಣ ಕಲಹ, ಯಜಮಾನನ ಅಪಮೃತ್ಯು, ಪುತ್ರಸ್ತ್ರೀವಿಯೋಗ, ಧನಧಾನ್ಯ ಕ್ಷಯ, ಅದೆ ಗುರು ಸಪ್ತಮೇಶನಾಗಿದ್ದರೆ ಶರೀರ ಬಾಧಾ ದೋಷ ಶಾಂತಿಗಾಗಿ ಶಿವಸಹಸ್ರನಾಮ ಜಪ ರುದ್ರ ಜಪ ಗೋದಾನಾದಿಗಳು ಫಲಕಾರಿಯಾಗಿವೆ.

## ಶನ್ಯಂತರ ದಶಾ ಫಲ

ಜೀವಸ್ಯಾಂತರ್ಗತೆ ಮುಂದೆ ಸ್ವೋಚ್ಚೆ ಸ್ವಕ್ಷೇತ್ರಮಿತ್ರಭೆ ।
ಲಗ್ನಾತ್ ಕೇಂದ್ರ ತ್ರಿಕೋಣಸ್ಥೆ ಲಾಭೆ ವಾ ಬಲಸಂಯುತೆ ॥೮॥

ರಾಜ್ಯಲಾಭೋ ಮಹತೌಖ್ಯಂ ವಸ್ತ್ರಾಭರಣ ಸಂಯುತವಮ್ ।
ಧನಧಾನ್ಯದಿಲಾಭಶ್ಚ ಸ್ತ್ರೀಲಾಭೋ ಬಹುಲಂ ಸುಖಮ್ ॥೯॥

ವಾಹನಾಂಬರಪಶ್ವಾದೇರ್ಲಾಭೋ ಭೂಸ್ಥಾನಯೋರಪಿ।
ಪುತ್ರ ಮಿತ್ರಾದಿಸೌಖ್ಯಂ ಚ ನರ ವಾಹನಜಂ ತಥಾ ॥೧೦॥

ನೀಲ ವಸ್ತ್ರಾಧಿ ಲಾಭಶ್ಚ ನೀಲಶ್ವಾಂ ಲಭತೆ ಚ ಸಃ।
ಪಶ್ಚಿಮಾಂ ದಿಶಾಮಾಶ್ರತ್ಯ ಪ್ರಯಾಣ ರಾಜದರ್ಶನವಮ್ ॥೧೧॥

ಕನೇಕ ಯಾನಲಾಭಂ ಚ ಮಂದಭುಕ್ತಿಷು ನಿರ್ದಿಶೇತ್ ।

ಸ್ವೋಚ್ಚ ಸ್ವಭವನ ಕೇಂದ್ರ (4, 10, 1) ತ್ರಿಕೋಣ (9, 5) ಲಾಭ (1) ಸ್ಥಾಸ್ಥಿತ ಶನಿ ಅಂತರದಶಾ ಗುರುದಶಾ, ರಾಜ್ಯಲಾಭ, ವಸ್ತ್ರ ಆಭೂಷಣ. ಮಹಾಸೌಖ್ಯ, ಧನಧಾನ್ಯಾಧಿ ವೃದ್ಧಿ ಸ್ತ್ರೀಲಾಭ ಪ್ರಚುರ ಸುಖ ವಾಹನ ವಸ್ತು ಪಶು ಆದಿಲಾಭ ಭೂಮಿ, ಗೃಹಾದಿಗಳ ಲಾಭವೂ ಉಂಟು ಪುತ್ರಮಿತ್ರ ಸುಖ ಪಾಲಿಕೆ ಆದಿ ಸುಖ ನೀಲವಸ್ತ್ರ ರಾಹೂ ನೀಲಿ ಕುದುರೆ ಲಾಭ ಪಶ್ಚಿಮ ದಿಶಾದ ಯಾತ್ರೆ ರಾಜ ದರ್ಶನ ಅನೇಕ ತರಹದ ವಾಹನಸೌಖ್ಯ.

ಲಗ್ನಾತ್ ಷಷ್ಟಾಷ್ಟಮೆ ಮುಂದೆ ವ್ಯಯೇ ನೀಚೆಸ್ತಗೇ ಪ್ಯಾರೌ ॥೧೨॥

ಧನಧಾನ್ಯಾದಿ ನಾಶಶ್ಚ ಜ್ವರ ಪೀಡಾ ಮನೋರುಜಾ।
ಸ್ತ್ರೀಪುತ್ರಾದಿಷು ಪೀಡಾ ಚ ವ್ರಣಾತ್ಯಾಧಿ ಕಮುದ್ ಭವೇತ್ ॥೧೩॥

ಗ್ರಹೆ ತ್ವಶುಭ ಕಾರ್ಯಾಣಿ ಭೃತ್ಯವರ್ಗಾದಿಪೀಡನಮ್ ।
ಗೋಮಹಿಷ್ಯಾದಿ ಹಾನಿಶ್ಚ ಬಂಧುದ್ವೆಷೋ ಭವಿಷ್ಯತಿ ॥೧೪॥

6, 8, 12 ರಲ್ಲಿ ನೀಚ ರಾಶಿ ಶತ್ರು ಕ್ಷೇತ್ರದಲ್ಲಿ ಅಥವಾ ರವಿಯೊಡನೆ ಯುತ (ಅಸ್ತ)ವಾಗಿದ್ದರೆ ಧನಧಾನ್ಯ ಹಾನಿ ಜ್ವರಕ್ಲೇಶ, ಮಾನಸಿಕ ಕಷ್ಟ, ಸ್ತ್ರೀಪುತ್ರಾದಿ ಗಳಿಗೂ ಕಷ್ಟ, ವ್ರಣಜನ್ಯಪೀಡಾ ಉದ್ಭವ ಅಶುಭಕಾರ್ಯ, ನೌಕರರಿಗೂ ಕಷ್ಟ, ದೋಷ, ಆಕಳು, ಎಮ್ಮೆ ಆದಿ ಪಶು ಹಾನಿ ಬಂಧುದ್ವೇಷ.

ದಾಯೋಶಾತ್ ಕೇಂದ್ರಕೋಣಸ್ಥೆ ಲಾಭೆ ವಾ ಧನಗೇ ಽಪಿ ವಾ।
ಭೂ ಲಾಭಶ್ವಾರ್ಥ ಲಾಭಶ್ಚ ಪುತ್ರಲಾಭಸುಖಂ ಭವೇತ್ ॥೧೫॥

ಗೋಮಹಿಷ್ಯಾದಿ ಲಾಭಶ್ಚ ಶೂದ್ರ ಮೂಲಾದ್ಧನಾಗಮಃ ।

ದಶಾಧಿಪನಿಂದ ಕೇಂದ್ರ ತ್ರಿಕೋಣ ಲಾಭಸ್ಥಾನದಲ್ಲಿ ಶನಿಯಿದ್ದರೆ ಭೂಮಿ ಅರ್ಥ ಪುತ್ರಾದಿಲಾಭ ಸೌಖ್ಯ ಆಕಳು, ಎಮ್ಮೆ ಆದಿ ಪಶುಗಳ ಪಶುಲಾಭ ಶೂದ್ರ ಮೂಲದಿಂದ ಧನಲಾಭಾದಿ ಫಲಗಳು.

ದಾಯೋಶಾದ್ರಿಪುರಂಧ್ರಸ್ಥೆ ವ್ಯಯೋ ವಾ ಪಾಪಸಂಯುತೆ ॥೧೬॥

ಧನಧಾನ್ಯಾದಿನಾಶಶ್ಚ ಬಂದುಮಿತ್ರ ವಿರೋಧನಮ್ ।
ಉದ್ಯೋಗ ಭಂಗೋ ದೇಹಾರ್ತಿಃ ಸ್ವಜನಾನಾಂ ಮಹದ್ ಭಯಮ್ ॥೧೭॥

ದ್ವಿಸಪ್ತಮಾಧಿಪೆ ಮುಂದೆ ಹ್ಯಾಪಮೃತ್ಯುರ್ಭವಿಷ್ಯತಿ ।
ತದ್ದೋಶಪರಿಹಾರಾರ್ಥ ವಿಷ್ಣು ಸಾಹಸ್ರಕಂ ಜಪೇತ್ ॥೧೮॥

ಕೃಷ್ಣಾಂ ಗಾಂ ಮಹಿಷಿಂ ದದ್ಯಾದನೆ ನಾರೋಗ್ಯಮಾದಿಶೇತ್ ।

ದಶಾಪತಿಯಿಂದ 6, 8, 12ರಲ್ಲಿ ಸಪಾಪ ಶನಿಯಿದ್ದರೆ ಅವನ ಅಂತರದಶಾ (ಗುರು ಮಹಾದಶಾದಲ್ಲಿ) ಧನಧಾನ್ಯದ ವಿನಾಶ ಬಂಧು ಮಿತ್ರರೊಡನೆ ವಿರೋಧ, ಉದ್ಯೋಗದಲ್ಲಿ ಬಾಧೆ, ಶರೀರದಲ್ಲಿ ಪೀಡೆ ಸ್ವಜನರಿಂದ ಭಯ, ಅದೇ ಶನಿ 2, 7ರಲ್ಲಿದ್ದರೆ ಅಧಿಪನಾಗಿದ್ದರೆ ಅಪಮೃತ್ಯು ದೋಷ, ಶಾಂತಿಗಾಗಿ ವಿಷ್ಣು ಸಹಸ್ರ ನಾಮ, ಕಪಿಲೆ (ಕರಿ ಆಕಳು) ಎಮ್ಮೆ ದಾನದಿಂದ ಆರೋಗ್ಯ ಪ್ರಾಪ್ತಿ ದೋಷ ಪರಿಹಾರ.

## ಬುಧಾಂತರ ದಶಾ ಫಲ

ಜೀವಸ್ಯಾಂತರ್ಗತೆ ಸೌಮ್ಯೆ ಕೇಂದ್ರಲಾಭ ತ್ರಿಕೋಣಗೆ ॥೧೯॥

ಸ್ವೋಚ್ಚೆ ವಾ ಸ್ವರ್ಕ್ಷಗೆ ವಾಪಿ ದಶಾಧಿಪಸಮನ್ವಿತೆ ।
ಅರ್ಥ ನಾಶೋ ದೇಹಸೌಖ್ಯಂ ರಾಜ್ಯಲಾಭೋ ಮಹಾಸುಖಮ್॥೨೦॥

ಮಹಾರಾಜ ಪ್ರಸಾದೇನಭೀಷ್ಟಸಿದ್ಧಿಃ ಸುಖಾವಹಃ
ವಾಹನಾಂಬರ ಪಶ್ವಾದಿ ಗೋಧನೈಃ ಸಂಕಲಂ ಗೃಹಮ್ ॥೨೧॥

ಕೇಂದ್ರ ತ್ರಿಕೋಣ ಲಾಭಸ್ಥಾನ ತನ್ನ ಉಚ್ಚ ಸ್ವಗೃಹದಲ್ಲಿ ಸ್ಥಿತ ಬುಧನಾದರೆ ಗುರುವಿನ ದಶಾದಲ್ಲಿ ಬುಧಾಂತರ ದಶಾಬರಲು ಅರ್ಥನಾಶ, ಆದರೆ ದೇಹಸುಖ ರಾಜಲಾಭ ಮಹಾಸುಖ ರಾಜರ ಕೃಪೆಯಿಂದ (ಸರ್ಕಾರ) ಅಭೀಷ್ಟಸಿದ್ಧಿ ವಾಹನ ವಸ್ತ್ರ ಹಾಗೂ ಗೋ ಆದಿ ಪಶುಗಳ ಪೂರ್ಣ ಫಲ ಆಗುತ್ತದೆ. ಸುಖ ಧನಹಾನಿಯಾದರೂ ಇತರ ಸುಖ ಹೇಳಲ್ಪಟ್ಟಿದೆ.

ಮಹಿಸುತೇನ ಸಂದೃಷ್ಟೆ ಶತ್ರುವೃದ್ಧಿಃ ಸುಖಕ್ಷಯಃ
ವ್ಯವಸಾಯತ್ ಫಲಂ ನೇಷ್ಟಂ ಜ್ವರಾತಿ ಸಾರ ಪೀಡನಮ್ ॥೨೨॥

ಬುಧನು ಮಂಗಳನಿಂದ ದೃಷ್ಟನಾದರೆ ಶತ್ರುವೃದ್ಧಿ ಸುಖನಾಶ, ವ್ಯಾಪಾರದಲ್ಲಿ ಅಡಚಣೆ, ಜ್ವರ ಅತೀಸಾರ ಭಯ.

ದಾಯೇಶತ್ ಕೇಂದ್ರಗೆ ಕೋಣೆ ಗತೆ ವಾ ತುಂಗ ಸಂಸ್ಥಿತೆ ।
ಸ್ವದೇಶೆ ಧನ ಲಾಭ ಶ್ಚ ಪಿತೃಮಾತೃಸುಖಾವಹಃ ॥೨೩॥

ಗಜವಾಜಿ ಸಮಾಯುಕ್ತೋ ರಾಜಮಿತ್ರ ಪ್ರಸಾದತಃ ।

ದಶಾಧಿಪ ಗುರುವಿನಿಂದ ಕೇಂದ್ರ ತ್ರಿಕೋಣ ಅಥವಾ ತನ್ನ ಉಚ್ಚದಲ್ಲಿ ಅಂತರದಶಾಧೀಶಿ ಬುಧನಿರಲು ಸ್ವದೇಶದಲ್ಲಿ ಧನಾಗಮ ಪಿತೃಮಾತೃ ಸೌಖ್ಯ ಹಾಗೂ ರಾಜ, ಮಿತ್ರ ಕೃಪೆಯಿಂದ ಆನೆ, ಕುದುರೆಗಳಿಂದ ಪೂರ್ಣತೆ.

ದಾಯೇಶಾತ್ ಷಷ್ಟರಂಧ್ರಸ್ಥೆ ವ್ಯಯೇ ವಾ ಪಾಪಸಂಯುತೆ ॥೨೪॥

ಶುಭದೃಷ್ಟಿವಿಹೀನೇ ಚ ಧನ ಧಾನ್ಯ ಪರಿಚ್ಯುತಿಃ ।
ವಿದೇಶಗಮನಂ ಚೈವ ಮಾರ್ಗೆ ಚೌರಭಯಂ ತಥಾ ॥೨೫॥

ವ್ರಣದಾಹಾಕ್ಷಿರೋಗಶ್ಚ ನಾನಾ ದೇಶಾಟನಂ ಭವೇತ್ ।
ಲಗ್ನಾತ್ ಷಷ್ಠೆಷ್ಟಮೇ ವಿಪ್ರ । ವ್ಯಯೇವಾ ಪಾಪಸಂಯುತೆ ॥೨೬॥

ಅಕಸ್ಮಾತ್ ಕಲಹಶ್ಚೈವ ಗೃಹೆ ನಿಷ್ಠುರ ಭಾಷಣಮ್ ।
ಚತುಷ್ಪಾಜ್ಜೀವಜಾ ಹಾನಿ ರ್ವ್ಯವಹಾರೆ ತಥೈವ ಚ ॥೨೭॥

ಅಪಮೃತ್ಯು ಭಯಂ ಚೈವ ಶತ್ರುಭಿಃ ಕಲಹೋ ಭವೇತ್ ।

ದಶಾದಿಪನಿಂದ 6, 8, 12ರಲ್ಲಿ ಪಾಪಯುಕ್ತ ಬುಧ ಶುಭಗ್ರಹ ದೃಷ್ಟಿಯಿಂದ ವಂಚಿತನಾಗಿದ್ದ ಧನ, ಕ್ಷಯ ವಿದೇಶಗಮನ ದಾರಿಯಲ್ಲಿ ಕಳ್ಳಕಾಕರ ಭಯ ವ್ರಣದಿಂದ ದಾಹ ಹಾಗೂ ನೇತ್ರರೋಗ ಅನೇಕ ದೇಶಭ್ರಮಣ ಅದೇ ಪಾಪಯುಕ್ತಿ ಬುಧ ಲಗ್ನದಿಂದ 6, 8, 12ರಲ್ಲಿದ್ದರೆ ಗುರುದಶಾ ಬುಧಾಂತರದಶಾ ಅಕಸ್ಮಾತ್ ಕಲಹಕ್ಕೆ ನಾಂದಿಯಾಗುವರು. ನಿಷ್ಠುರವಾಕ್, ಪಶುಹಾನಿ ವ್ಯಾಪಾರದಲ್ಲಿ ಹಾನಿ (ತಡೆ) ಅಪಮೃತ್ಯು ಭಯ, ಶತ್ರುಗಳೊಡನೆ ಜಗಳ ಅದೆ ಬುಧ-

ಶುಭದೃಷ್ಟಿ ಶುಭೈರ್ಯುಕ್ತೆ ದಾನಸೌಖ್ಯಂ ಧನಾಗಮಃ ॥೨೮॥

ಆದೌ ಶುಭಂ ದೇಹಸೌಖ್ಯಂ ಲಾಭೋ ವಾಹನವಾಸಸೋಃ ।
ಅಂತೆ ತು ಧನಹಾನಿಶ್ಚೆತ್ ಸ್ವಾತ್ಮಾಸೌಖ್ಯಂ ನ ಜಾಯತೆ ॥೨೯॥

ದ್ವಿತೀಯದ್ಯೂನನಾಥೆ ವಾ ಹ್ಯಾಪಮೃತ್ಯುರ್ಭವಿಷ್ಯತಿ ।
ತದ್ದೋಷಪರಿಹಾರರ್ಥ ವಿಷ್ಣು ಸಾಹಸ್ರಕಂ ಜಪೇತ್ ॥೩೦॥

ಅದೆ ತ್ರಿಕಸ್ಥ (6, 8, 12) ಬುಧ ಶುಭಗ್ರಹ ಮಿಲಿತನಾಗಿದ್ದರೆ ಅಂತರ ದಶಾಕಾಲದಲ್ಲಿ ಸ್ತ್ರೀಸೌಖ್ಯ ಧನಾಗಮ ಅಂತರದಶಾರಂಭ ದೇಹಸುಖ ವಾಹನ ವಸ್ತ್ರಲಾಭ ಅಂತರದಶಾಂತದಲ್ಲಿ ಧನಹಾನಿ ಹಾಗೂ ಆತ್ಮಕ್ಲೇಶ ಅದೆ ಬುಧ 2, 7ರಲ್ಲಿದ್ದರೆ ಅಧಿಪನಾಗಿದ್ದರೆ ಅಪಮೃತ್ಯು. ಈ ದೋಷ ನಿವಾರಣಾರ್ಥ ವಿಷ್ಣು ಸಹಸ್ರನಾಮದ ಪಠನ -ಶುಭಕರ.

## ಕೇತ್ವಂತರ ದಶಾ

ಜೀವಸ್ಯಾಂತರಗತೆ ಕೇತೌ ಶುಭಗ್ರಹ ಸಮನ್ವಿತೇ।
ಸ್ವಲ್ಪ ಸೌಂಖ್ಯಂ ಧನಾವಾಪ್ತಿಃ ಕುತ್ಸಿತಾನ್ನಸ್ಯ ಭೋಜನಮ್ ॥೩೧॥

ಶ್ರಾದ್ಧಾನಂ ವಾ ಪಶಾನ್ನಂ ಪಾಪ ಮೂಲಾದ್ದಿ ನಾನಿ ಚ ।

ಕೇತು ಶುಭಗ್ರಹಯುಕ್ತನಾಗಿ ಗುರುದಶಾಂತರ ದಶಾಧೀಶನಾಗಿದ್ದರೆ ಸ್ವಲ್ಪ ಮಾತ್ರ ಸುಖ ಧನ ಪ್ರಾಪ್ತಿ, ತಿರಸ್ಕೃತಾನ್ನ ಶ್ರಾದ್ಧಾನ್ನ ಅಥವಾ ಪರಾನ್ನ, ಭೋಜನ, ಪಾಪಮೂಲಧನಪ್ರಾಪ್ತಿ,

ದಾಯೋಶಾದ್ರಿಃಪುರಂಧ್ರಸ್ಥೆ ವ್ಯಯೇ ವಾ ಪಾಪಸಂಯುತೆ ॥೩೨॥
ರಾಜಕೋಪಾದ್ಧನ ಚ್ಛೆದೋ ಬಂಧನಂ ರೋಗಪೀಡನಮ್

ದಾಯೋಶಾತ್ ಸುತಭಾಗ್ಯಸ್ಥೆ ವಾಹನೆ ಕರ್ಮಗೇ ಪಿ ವಾ ।
ನರವಾಹನ ಯೋಗಶ್ಚ ಗಜಾಶ್ವಾಂಬರಸಂಕುಲಮ್ ॥೩೪॥

ಮಹಾರಾಜ ಪ್ರಸಾದೇನಾ ಭಿಷ್ಟ ಕಾರ್ಯಾರ್ಥ ಸಿದ್ಧಿಯಃ ।
ವ್ಯವಸಾಯತ್ ಫಲಾಧಿಕ್ಯಂ ಗೋಮಹಿಷ್ಯಾದ್ಯಾ ವಾಪ್ತಯಃ ॥೩೫॥

ಯವನ ಪ್ರಭು ಮೂಲಾದ್ ವಾ ಸಂಲಾಭೋ ವಿತ್ತ ವಾಸಸಾಮ್ ।
ದ್ವಿತೀಯ ದ್ಯೂನನಾಥೆ ತು ದೇಹ ಬಾಧಾ ಭವಿಷ್ಯತಿ ॥೩೬॥

ಭಾಗದಾನಂ ಪ್ರಕುರ್ವಿತ ಮೃತ್ಯುಂಜಯ ಜಪಂ ಚರೇತ್ ।
ಸರ್ವದೋಷಪ್ರಶಮನಿಂ ಶಾಂತಿಂ ಕುರ್ಯಾದ್ವಿಧಾನತಃ ॥೩೭॥

ಸಪಾಪ ಕೇತು ದಶಾಪತಿಯಿಂದ 6, 8, 12ರಲ್ಲಿದ್ದರೆ ಗುರುದಶಾ ಕೇತ್ವಾಂತರ ದಶಾದಲ್ಲಿ ರಾಜಕೋಪದಿಂದ ಧನಕ್ಷಯ ಬಂಧನ ರೋಗದಿಂದ ಕಷ್ಟ ಬಲನಾಶ ತಂದೆ ಅಣ್ಣಂದಿರೊಂದಿಗೆ ದ್ವೇಷ, ಮಾನಸಿಕ ಕಷ್ಟ. ಅದೇ ಕೇತು ದಶಾಧಿಪನಿಂದ 9, 5, 4, 10ರಲ್ಲಿದ್ದ ಪಾಲಿಕಾಂದೋಲನ ಯೋಗ ಆನೆ ಕುದುರೆಗಳ ಸಂಗ್ರಹ, ರಾಜಕೃಪೆಯಿಂದ ಅಭಿವೃದ್ಧಿ, ವ್ಯವಸಾಯದಲ್ಲಿ ಫಲಾಧಿಕ್ಯ ಆಕಳು, ಆದಿ ಪಶು ಸಂಪತ್ತು ಹೆಚ್ಚಳ, ಯವನ ರಾಜರಿಂದ ಧನವಸ್ತ್ರದ ಲಾಭ ಅದೇ ದಶೇಶ 2, 7ರಲ್ಲಿದ್ದರೆ ಅಧಿಪನಾಗಿದ್ದರೆ ಶಾರೀರಿಕ ಬಾಧಾ ಶಾಂತಿಗಾಗಿ ಹೊತನ (ಭಾಗ) ದಾನ ಮೃತ್ಯುಂಜಯ ಜಪಗಳಿಂದ ಸರ್ವದೋಷ ಪರಿಹಾರ.

## ಶುಕ್ರಾಂತರದಶಾ ಫಲ

ಜೀವಾಶ್ಯಾಂತರ್ಗತೆ ಶುಕ್ರೆ ತ್ರಿಕೋಣೆ ಕೇಂದ್ರಗೇ ಪಿ ವಾ ।
ಲಾಭೆ ವಾ ಸ್ವೋಚ್ಚರಾಶಿಸ್ಥೆ ಸ್ವಕ್ಷೇತ್ರೆ ಶುಭಸಂಯುತೆ ॥೩೮॥

ನರವಾಹನ ಯೋಗಶ್ಚ ಗಜಾಶ್ವಾಂಬರ ಸಂಯುತಿಃ ।
ಮಹಾರಾಜ ಪ್ರಸಾದೇನ ಧನಾಧಿಕ್ಯಂ ಮಹತ್ ಸುಖಂ ॥೩೯॥

ಪೂರ್ವಾಮಾಶಾಂ ಸಮಾಶ್ರಿತ್ಯ ಪ್ರಯಾಣಾ ಧನಲಾಭ ಕೃತ್ ।
ಕಲ್ಯಾಣಾ ಚ ಮಹಾಪ್ರೀತಿಃ ಪಿತೃಮಾತೃ ಸುಖಾವಹಾ ॥೪೦॥

ದೇವತಾ ಗುರುಭಕ್ತಿಶ್ಚಾಪ್ಯನ್ನದಾನಂ ಮಹತ್ ತಥಾ ।
ತಡಾಗ ಗೋಪುರಾದೀನಿ ಕುರ್ಯಾತ್ ಪುಣ್ಯಾನಿ ಭೂರಿಶಃ ॥೪೧॥

ತ್ರಿಕೋಣ ಕೇಂದ್ರ ಲಾಭ ಸ್ವೋಚ್ಚ ಸ್ವಭವನದಲ್ಲಿ ಸ್ಥಿತ ಶುಕ್ರ ಶುಭ ಗ್ರಹ ಯುತನಾಗಿದ್ದರೆ ಗುರು ದಶಾದಲ್ಲಿ ಅವನ ಅಂತರದಶಾ ಪಾಲಿಕಾಂದೇಯಿನ (ಪಲ್ಲಕಿಯಲ್ಲಿ ಮೆರವಣಿಗೆ) ಆನೆ, ಕುದುರೆ ಹಾಗೂ ವಸ್ತ್ರ, ಆಗರ ರಾಜಕೃಪೆಯಿಂದ ಧನಾಧಿಕ್ಯ ಮಹಾಸುಖ ಪೂರ್ವದಿಕ್ಕಿನ ಯಾತ್ರೆಯಿಂದ ಧನಲಾಭ, ಕಲ್ಯಾಣ, ತಂದೆ ತಾಯಿಗೆ ಸುಖ ಪ್ರೇಮ, ದೇವತಾಗುರುಗಳಲ್ಲಿ ಭಕ್ತಿ, ಅನ್ನದಾನ ಕೆರೆಗಳ ನಿರ್ಮಾಣ, ಗೋಶಾಲೆಗಳನ್ನು ತೆರೆಯುವಿಕೆ ಈ ರೀತಿ ಅನೇಕ ಪುಣ್ಯಕಾಯಕ ಜರುಗುತ್ತವೆ.

ಷಷ್ಠಾಷ್ಟಮ ವ್ಯಯೋ ನೀಚೆ ದಾಯೋಶಾದ್ ತಥೈವಚ
ಕಲಹೋ ಬಂಧುವೈಷಮ್ಯಂ ದಾರಪುತ್ರಾದಿ ಪೀಡನಮ್ ॥೪೨॥

ಮಂದ ರಾಹುಸಮಾಯುಕ್ತೆ ಕಲಹೋ ರಾಜತೋಽತಿಭಿಃ ।

ಸ್ತ್ರೀಮೂಲಾತ್ ಕಲಹ ಶ್ಚೈವ ಶ್ವಶುರಾತ್ ಕಲಹಸ್ತಥಾ ॥೪೩॥

ಸೋದರೇಣ ವಿವಾಹಃ ಸ್ಯಾದ್ ಧನ ಧಾನ್ಯ ಪರಿಚ್ಯುತಿಃ ।

ಲಗ್ನ ಅಥವಾ ದಶಾಪತಿಯಿಂದ 6, 8, 12ರಲ್ಲಿ ನೀಚದಲ್ಲಿ ಶುಕ್ರನಿದ್ದರೆ ಅವನ ಅಂತರದಶಾ ಗುರುದಶಾದಲ್ಲಿ ಜಗಳಕ್ಕೆ ಕಾರಣವಾಗುತ್ತದೆ. ಬಂಧುಗಳೊಡನೆ ವಿನಾ ಕಾರಣ, ಮನಸ್ತಾಪ, ಸ್ತ್ರೀ ಪುತ್ರಾದಿಗಳಿಗೆ ಕಷ್ಟ. ಅದೇ ಶುಕ್ರ, ಶನಿ, ರಾಹು ಯುಕ್ತ ನಾಗಿದ್ದರೆ ಕಲಹ ಜತೆಗೆ ರಾಜರಿಂದ ಅತೀ ಭಯ, ಸ್ತ್ರೀ ಮೂಲಕ ಕಲಹ ಮಾವನೊಡನೆ ಜಗಳ, ಸೋದರರೊಂದಿಗೆ ವಿವಾದ ಧನಕ್ಷಯವಾಗುತ್ತದೆ.

ದಾಯೋಶಾತ್ ಕೇಂದ್ರರಾಶಿಸ್ಥೆ ಧನೆ ವಾ ಭಾಗ್ಯಗೇ ಪಿ ವಾ ॥೪೪॥

ಧನಧಾನ್ಯಾದಿಲಾಭಶ್ಚ ಸ್ತ್ರೀಲಾಭೆ ರಾಜದರ್ಶನಮ್ ।
ವಾಹನಂ ಪುತ್ರ ಲಾಭಶ್ಚ. ಪಶುವೃದ್ಧಿರ್ಮಹಿತ್ ಸುಖಮ್ ॥೪೫॥

ಗೀತವಾದ್ಯಪ್ರಸಂಗಾದಿ ವಿದ್ವಜ್ಜನ ಸಮಾಗಮಃ ।
ದಿವ್ಯಾನ್ನ ಭೋಜನಂ ಸೌಖ್ಯಂ ಸ್ವಬಂಧಂ ಜನಪೋಷಣಮ್ ॥೪೬॥

ದಶಾಪತಿಯಿಂದ ಕೇಂದ್ರ ಧನರಾಶಿ ಅಥವಾ ಭಾಗ್ಯದಲ್ಲಿ ಶುಕ್ರನಿದ್ದು, ದಶಾಪತಿಯಿಂದ ಕೇಂದ್ರ ಧನರಾಶಿ ಅಥವಾ ಭಾಗ್ಯದಲ್ಲಿ ಲಾಭದಾಯಕ. ಸ್ತ್ರೀಲಾಭ ರಾಜದರ್ಶನ ವಾಹನ ಪುತ್ರ ಲಾಭ. ಪಶುವೃದ್ಧಿ ಮಹಾಸುಖ ಗಾಯನ ನೃತ್ಯವಾದನ

ಗಳ ಸುಖ, ವಿದ್ವದ್ ಜನ ಸಂಗೀತ, ದಿವ್ಯಾನ್ನ ಭೋಜನ ಬಂಧು ಬಾಂಧವರ ಪೋಷಣೆ ಆಗುತ್ತದೆ.

ದ್ವಿಸಪ್ತಮಧಿಪೆ ಶುಕ್ರೆ ತದ್ದಶಾಯಂ ವಸುಕ್ಷಯಃ ।
ಅಪಮೃತ್ಯುಭಯಂ ತಸ್ಯ ಸ್ತ್ರೀಮುಲಾದೌಷಧಾದಿ ಭಿಃ ॥೪೭॥

ತಸ್ಯರೋಗಸ್ಯ ಶಾಂತ್ಯರ್ಥ ಶಾಂತಿ ಕರ್ಮ ಸಮಾಚರೇತ್
ಶ್ವೇತಾಂ ಗಾಂ ಮಹಿಷಿಂದದ್ಯಾದಾಯುರಾರೋಗ್ಯ ದಾಯಿನೀಮ್ ॥೪೮॥

ದಶಾಧಿಪ ಗುರುವಿನಿಂದ 2, 7ರ ಅಧಿಪ ಶುಕ್ರನಾಗಿದ್ದರೆ. ಅಂತರದಶಾ ಫಲ, ಧನಕ್ಷಯ ಸ್ತ್ರೀ ಮೂಲಕ ಔಷಧಿ(ವಿಷ)ಯ ಮುಖಾಂತರ ಅಪಮೃತ್ಯುವಿನ ಭಯ, ಶಾಂತಿಗಾಗಿ ಶುಕ್ರ ಶಾಂತಿ ಕರ್ಮ ಜರುಗಿಸಿ, ಬಿಳಿ ಆಕಳು, ಎಮ್ಮೆದಾನ ಮಾಡಿ ಆಯುರಾರೋಗ್ಯ ಪಡೆಯಬಹುದು.

## ಸೂರ್ಯಂತರ ದಶಾಫಲ

ಜೀವಸ್ಯಂತರ್ಗತೆ ಸೂರ್ಯೆ ಸ್ವೋಚ್ಚೆ ಸ್ವಕ್ಷೇತ್ರಗೆ ಪಿ ವಾ।
ಕೇಂದ್ರೆ ವಾಥ ತ್ರಿಕೋಣೆ ಚ ದು ಶ್ಚ ಕ್ಯೆ ಲಾಭಗೆ ಪಿ ಚ ॥೪೯॥

ವಿತ್ತೆ ವಾ ಬಲಸಂಯುಕ್ತೆ, ದಾಯೋಶಾದ್ ವಾ ತಥೈವ ಚ ।
ತತ್ಕಾಲೆ ಧನಲಾಭಃ ಸ್ಯಾದ್ ರಾಜಸಮ್ಮಾನ ವೈಭವಮ್ ॥೫೦॥

ವಾಹನಾಂಬರ ಪಶ್ವಾದಿ ಭೂಷಣ ಪುತ್ರಸಂಭವಃ ।
ಮಿತ್ರ ಪ್ರಭುವಶಾದಿಷ್ಟಂ ಸರ್ವಕಾರ್ಯ ಶುಭಾವಹವಮ್ ॥೫೧॥

ತನ್ನ ಉಚ್ಚ ತನ್ನ ಸ್ವರಾಶಿ ಲಗ್ನ ಅಥವಾ ದಶಾಧಿಪನಿಂದ ಕೇಂದ್ರ ತ್ರಿಕೋಣ ತೃತೀಯ ಏಕಾದಶ ಅಥವಾ ವಿತ್ತ (ದ್ವಿತೀಯ) ಸ್ಥಾನದಲ್ಲಿ ಸ್ಥಿತ ಸಬಲ ಸೂರ್ಯ, ಗುರುಮದಾದಶಾ ಅಂತರದಶಾದಲ್ಲಿದ್ದಾಗ ಧನಲಾಭ, ರಾಜ ಸನ್ಮಾನ ಪ್ರಯುಕ್ತ ಐಶ್ವರ್ಯಯುತ ವಾಹನ ಸುಖ ಪಶು ಭೂಷಣ ಆದಿಪ್ರಾಪ್ತಿ ಪುತ್ರಶುಭಮಿತ್ರ ಹಾಗೂ ಮೇಲಾಧಿಕಾರಿ(ಪ್ರಭು)ವಿನಿಂದ ಸರ್ವ ಕಾರ್ಯ ಜಯ ಹಾಗೂ ಸಿದ್ಧಿ ಯಾಗುತ್ತದೆ.

ಷಷ್ಠಾಷ್ಟಮ ವ್ಯಯೆ ಸೂರ್ಯೇ ದಾಯೋಶಾದ್ ತಥೈವಚ ।
ಶಿರೋರೋಗಾದಿ ಪೀಡಾ ಚ ಜ್ವರ ಪೀಡಾ ತಥೈವ ಚ ॥೫೨॥

ಸತ್ಕರ್ಮತೋ ವಿಹೀನತ್ವಂ ಪಾಪಕರ್ಮರತಿಸ್ಥತಾ।
ಸರ್ವತ್ರ ಜನದ್ವೇಷೋ ವಿಯೋಗಸ್ತ್ವಾತ್ಮ ಬಂಧುಭಿಃ ॥೫೩॥

ಅಕಸ್ಮಾತ್ ಕಲಹಶ್ಚೈ ಜೀವಸ್ಯಾಂತರ್ಗತೇ ರವೌ।
ದ್ವಿತೀಯದ್ಯೂನಾಥೆ ತು ದೇಹಪೀಡಾ ಭವಿಷ್ಯತ ॥೫೪॥

ತದ್ದೋಷಪರಿಹಾರಾರ್ಥಮಾದಿತ್ಯಹೃದಯಂ ಜಪೇತ್ ।
ಸರ್ವಪೀಡೋಪಶಮನಂ ಸೂರ್ಯಪೂಜನಮಾ ಚರೇತ್ ॥೫೫॥

ಲಗ್ನ ಅಥವಾ ದಶೇಶನಿಂದ 6, 8, 12ರಲ್ಲಿ ಸೂರ್ಯನಿಂದ ಗುರು ದಶಾದಲ್ಲಿ ಸೂರ್ಯಾಂತರ ದಶಾದಲ್ಲಿ ಶಿರೋರೋಗ ಜ್ವರ ಪೀಡಾ - ಸತ್ಕರ್ಮದಲ್ಲಿ ಮನಸ್ಸು ಇರದಿರುವಿಕೆ.

ಪಾಪ ಕಾರ್ಯನಿರತ, ಸದಾ ಜಗಳ ಎಲ್ಲ ಜನರೊಡನೆ ದ್ವೇಷ, ಆತ್ಮ ಬಂಧುಗಳ ವಿಯೋಗ ಒಮ್ಮೆಂದೋಮ್ಮೆಲೆ ಜಗಳ, ಅದೆ ಸೂರ್ಯ 2, 7ರ ಅಧಿಪನಾಗಿದ್ದರೆ ಶಾರೀರಿಕ ಬಾಧೆ, ಈ ಎಲ್ಲ ದೋಷನಾಶಕ್ಕೆ ಆದಿತ್ಯ ಹೃದಯದ ಜಪ, ಸೂರ್ಯ ಪೂಜನಾದಿಗಳಿಂದ ದೋಷ ಪರಿಹಾರ, ಸುಖ ಶಾಂತಿ.

## ಚಂದ್ರಾಂತರ್ದಶಾ ಫಲ

ಜೀವಸ್ಯಾಂತರ್ಗತೇ ಚಂದ್ರೆ ಕೇಂದ್ರೆ ಲಗ್ನ ತ್ರಿಕೋಣಗೆ ।
ಸ್ವೋಚ್ಚೆವಾ ಸ್ವಕ್ಷ್ರರಾಶಿಸ್ಥೆ ಪೂರ್ಣೆ ಚಂದ್ರೆ ಬಲೈರ್ಯುತೆ ॥೫೬॥

ದಾಯೇಶಾತ್ ಶುಭ ರಾಶಿಸ್ಥೆ ರಾಜಸಮ್ಮಾನ ವೈಭವಮ್ ।
ದಾರಪುತ್ರಾದಿ ಸೌಖ್ಯಂ ಚ ಕ್ಷೀರಾನ್ನಾಂ ಭೋಜನಂ ತಥಾ ॥೫೭॥

ಸತ್ಕರ್ಮ ಚ ತಥಾ ಕೀರ್ತಿಃ ಪುತ್ರಪೌತ್ರಾದಿ ವರ್ಧನಮ್ ।
ಮಹಾರಾಜ ಪ್ರಸಾದೇನ ಸರ್ವಸೌಖ್ಯಂ ಧನಾಗಮಃ ॥೫೮॥

ಅನೇಕ ಜನಸೌಖ್ಯಂ ಚ ದಾನಧರ್ಮಾ ಸಂಗ್ರಹಃ ।

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಅಥವಾ ಸ್ವಭವನದಲ್ಲಿ ಪ್ರಬಲ ಪೂರ್ಣ ಚಂದ್ರನಿದ್ದರೆ ಹಾಗೂ ದಶಾಧಿಪನಾದ ಗುರುವಿನ ಶುಭ ರಾಶಿಯಲ್ಲಿದ್ದರೆ ರಾಜಸನ್ಮಾನ ಐಶ್ವರ್ಯ, ಸ್ತ್ರೀ ಪುತ್ರಾದಿಗಳಿಂದ ಸುಖ, ಹಾಲಿನಾನ್ನ ಭೋಜನ, ಸತ್ಕಾರ್ಯದಲ್ಲಿ ಮನಸ್ಸು, ಪುತ್ರಪೌತ್ರಾದಿವೃದ್ಧಿ ರಾಜ ಕೃಪಾದಿಂದ ಸರ್ವವಿಧ ಸೌಖ್ಯ, ಧನಾಗಮನ ಅನೇಕ ಜನರಿಂದ ಸುಖ, ದಾನ, ಧರ್ಮ ಪ್ರವೃತ್ತಿ.

ಷಷ್ಠಾಷ್ಟ ಮವ್ಯಯೇ ಚಂದ್ರೆ ಗತೆ ವಾ ಪಾಪಸಂಯುತೆ ।
ದಾಯೇಶಾತ್ ಷಷ್ಠರಂಧ್ರೆ ವಾ ವ್ಯಯೇ ವಾ ಬಲವರ್ಜಿತೆ ॥೫೯॥

ಮಾನಾರ್ಥ ಬಂಧು ಹಾನಿಶ್ಚ ವಿದೇಶಪರಿವಿಚ್ಯುತಿಃ।
ನೃಪಚೌರಾದಿಪೀಡಾ ಚ ದಾಯಾದ್ಯೈಃ ಕಲಹಃ ಸಮವ್ ॥೬೦॥

ಮಾತುಲಾದಿ ವಿಯೋಗಶ್ಚ ಮಾತೃಪೀಡಾ ತಥೈವ ಚ ।

ಲಗ್ನ ಅಥವಾ ದಶಾನಾಥನಿಂದ, ನಿರ್ಬಲ ಹಾಗೂ ಪಾಪಯುಕ್ತ ಚಂದ್ರ 6, 8, 12ರಲ್ಲಿದ್ದರೆ, ಗುರು ದಶಾ ಚಂದ್ರಾಂತರದಶಾಮಾನ, ಧನ, ಹಾಗೂ ಬಂಧು ಹಾನಿ ವಿದೇಶೋಚ್ಚಾಟನೆ ರಾಜ ಕಳ್ಳರುಗಳಿಂದ ಪೀಡೆ ದಾಯಾದಿಗಳಿಂದ ಕಲಹ, ಮಾವನ ವಿಯೋಗ ಹಾಗೂ ತಾಯಿಗೆ ಕಷ್ಟ ಈ ಎಲ್ಲ ಫಲಗಳು ಸಂಭವಿಸುತ್ತವೆ.

ದ್ವಿತೀಯದ್ಯೂನಷಷ್ಠಶೆ ದೇಹಪೀಡಾ ಭವಿಷ್ಯತಿ ।
ತದ್ದೋಶ ಪರಿಹಾರಾರ್ಥ ದುರ್ಗಾಪಾಠಂ ಚ ಕಾರಯೇತ್

ದ್ವಿತೀಯೆತ್ ಸಪ್ತಮೇಷ ಷಷ್ಠಶನಾಗಿ ಚಂದ್ರನಿಂದ ಗುರು ದಶಾ ಚಂದ್ರಾಂತರ ದಶಾದಲ್ಲಿ ಶಾರೀರಿಕ ಕಷ್ಟ ಕಾರಕವಾಗಿರುತ್ತದೆ. ದೋಷ ಪರಿಹಾರಾರ್ಥ ದುರ್ಗಾಸ್ತುತಿ ಪಾಠ ಹೇಳಿದೆ.

## ಕುಜಾಂತರ ದಶಾ ಫಲ

ಜೀವಸ್ಯಾಂತರ್ಗತೆ ಭೌಮೆ ಲಗ್ನಾತ್ ಕೇಂದ್ರ ತ್ರಿಕೋಣಗೆ ।
ಸ್ವೋಚ್ಚೆ ವಾ ಸ್ವರ್ಕ್ಷಗೆ ವಾಪಿ ತುಂಗಾಂಶೆ ಸ್ವಾಂಶಗೇ ಪಿ ವಾ ॥೬೨॥

ವಿದ್ಯಾವಿವಾಹ ಕಾರ್ಯಾಣಿ ಗ್ರಾಮಭೂಮ್ಯಾಧಿಕಾಗಮಃ ।
ಜನಸಾಮರ್ಥ್ಯಾ ಮಾಪ್ನೋತಿ ಸರ್ವ ಕಾರ್ಯಾರ್ಥ ಸಿದ್ಧಿದವ್ ॥೬೩॥

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವ ಉಚ್ಚಾಂಶ ಅಥವಾ ಸ್ವಭಾವಾಂಶದಲ್ಲಿ ಭೌಮ ಸಿದ್ಧ ಗುರುವಿನ ಮಹಾದಶಾದಲ್ಲಿ ಅಂತರ ದಶಾಧೀಶನಾಗಿದ್ದಲ್ಲಿ ವಿದ್ಯಾ ವಿವಾಹ ಕಾರ್ಯ ಗ್ರಾಮ ಹಾಗೂ ಭೂಮಿ ಲಾಭ ಈ ಸಮಯ ಜಾತಕನಿಗೆ ಸರ್ವಸಿದ್ಧಿಪ್ರದವಿರುತ್ತದೆ. ಲೋಕ ಒಲವು ದೊರೆಯುತ್ತದೆ.

ದಾಯೇಶಾತ್ ಕೇಂದ್ರ ಕೋಣಸ್ಥೆ ಲಾಭೆ ವಾ ಧನಗೇ ಪಿ ವಾ ।
ಶುಭಯುಕ್ತೆ ಶುಭದೃಷ್ಟೆ ಧನಧಾನ್ಯಾದಿ ಸಂಪದಃ ॥೬೪॥

ಮಿಷ್ಟಾನ್ ದಾನ ವಿಭವೋ ರಾಜಪ್ರೀತಿಃ ಶುಭಾವಹಾ।
ಸ್ತ್ರೀಸೌಖ್ಯಂ ಚ ಸುತುವಾಪ್ತಿಃ ಪುಣ್ಯತೀರ್ಥಫಲಂ ಭವೇತ್ ॥೬೫॥

ದಶಾಧಿಪನಿಂದ ಕೇಂದ್ರ ಕೋಣ ಲಾಭದಲ್ಲಿ ಅಥವಾ ಧನ ಸ್ಥಾನದಲ್ಲಿ ಶುಭಗ್ರಹಯುಕ್ತ ಅಥವಾ ದೃಷ್ಟಿ ತಥೌಮ ಗುರುದಶಾದಲ್ಲಿ ಅಂತರ ದಶಾಧೀಶ ನಾಗಿದ್ದರೆ ಧನಧಾನ್ಯ, ಉಳಿದ ಸಂಪತ್ತಿನ ಅಧಿಪನಾಗುವನು. ಮೃಷ್ಟಾನ ದಾನವ ಐಶ್ವರ್ಯ ಶುಭ ಪ್ರದ, ರಾಜಪ್ರೇಮ, ಸ್ತ್ರೀಸುಖಿ ಪುತ್ರಾಪ್ರಾಪ್ತಿ ಪುಣ್ಯತೀರ್ಥ ಫಲೋದಯ.

ದಾಯೇಶಾದ್‌ಷ್ಟಮೆ ವಾಪಿ ವ್ಯಯೇ ವಾ ನೀಚಗೆ ಪಿ ವಾ।
ಪಾಪಯುಕ್ತೇಕ್ಷಿತೆ ವಾಪಿ ಧಾನ್ಯರ್ಥ ಗೃಹನಾಶನವ್ ॥೬೬॥

ನಾನಾರೋಗ ಭಯಂ ದುಃಖಂ ನೇತ್ರರೋಗಾದಿ ಸಂಭವವ್ ।
ಪೂರ್ವಾರ್ಧೆ ತ್ವಧಿಕಃ ಕ್ಲೇಶೋ ಪರಾರ್ಧೆ ಚ ಮಹತ್ ಸುಖಿವ್॥೬೭॥

ದ್ವಿತೀಯ ದ್ಯೂನನಾಥೆ ತು ದೇಹ ಜಾಡ್ಯಂ ಮನೋರುಜಾ ।
ಅನಡ್ ವಾಹಂ ಪ್ರದಾದ್ಯಾಚ್ಚ ಸರ್ವ ಶಾಂತಿ ಪ್ರದಾಯಕವ್

ದಶಾಧಿಪನಿಂದ 8, 12ರಲ್ಲಿ ನೀಚಸ್ಥಿತ ವಲಯಗಳ ಪಾಪಯುಕ್ತ ಅಥವಾ ದುಷ್ಟನಾಗಿದ್ದರೆ ತನ್ನ ಅಂತರ ದಶಾ ಗುರು ಮಹಾದಶಾದಲ್ಲಿ ಧನಧಾನ್ಯ ಮನೆ ಆದಿನಾಶ, ಅನೇಕ ರೋಗ ಭಯ ಕ್ಲೇಶ, ನೇತ್ರರೋಗ ಪೂರ್ವಾರ್ಧ ಅಧಿಕ ಕಷ್ಟ, ಉತ್ತರಾರ್ಧ ಸುಖಿ, ಅದೆ ಮಂಗಳ 2, 7ರ ಅಧಿಪನಾಗಿದ್ದರ ಶರೀರ ಪೀಡಾ ಮಾನಸಿಕ ವ್ಯಥಾ ದೋಷ ಶಾಂತಿಗಾಗಿ ಶಾಂತಿ ಹಾಗೂ ವೃಶಭ (ಎತ್ತು) ದಾನ-ಲಾಭಕರ.

## ರಾಹುಂತರದಶಾ ಫಲ

ಜೀವಸ್ಯಾಂತರ್ಗತೆ ರಾಹೌ ಸ್ವೋಚ್ಚೆ ವಾ ಕೇಂದ್ರಗೇ ಪಿ ವಾ।
ಮೂಲ ತ್ರಿಕೋಣೆ ಕೋಣೆ ಚ ಕೇಂದ್ರಾಧಿಪ ಸಮನ್ವಿತೆ ॥೬೯॥

ಶುಭಯುಕ್ತೇಕ್ಷಿತೆ ವಾಪಿ ಯೋಗಪ್ರೀತಂ ಸವಾಧಿಶಿತ್ ।
ಭುಕ್ತ್ಯಾದೌ ಶರಮಾಸಾಂಶ್ರ ಲಾಭಃ ಸ್ಯಾದ್ ಧನಧಾನ್ಯಯೋಃ ॥೭೦॥

ದೇಶ ಗ್ರಾಮಾಧಿಕಾರಶ್ಚ ಯವನಪ್ರಭುದರ್ಶನವ್ ।
ಗೃಹೆ ಕಲ್ಯಾಣ ಸಂಪತ್ತಿಃ ಸೇನಾಪತ್ಯಂ ವಿಶೇಷತಃ ॥೭೦॥

ದೂರಯಾತ್ರಾಧಿಗಮನಂ ಪುಣ್ಯ ಧರ್ಮಾದಿಸಂಗ್ರಹಃ।
ಸೇತುಸ್ನಾನ ಫಲಾವಾಪ್ತಿರಿಷ್ಟಸಿದ್ಧಿ ಸುಖಪ್ರದಾ ॥೭೨॥

ಸ್ವೋಚ್ಚ ಸ್ವಭವನ ಮೂಲ ತ್ರಿಕೋಣ ಲಗ್ನದಿಂದ ಕೇಂದ್ರಯಾತ್ರಿಕೋಣದಲ್ಲಿ ಸ್ಥಿತ ರಾಹು ಕೇಂದ್ರೇಶ ಯುಕ್ತ ಶುಭಗ್ರಹಯುಕ್ತ ಅಥವಾ ದೃಷ್ಟಿತನಾಗಿದ್ದು, ಗುರುದಶಾದಲ್ಲಿ, ರಾಹುವಿನ ಅಂತರದಶಾದಲ್ಲಿ 'ಯೋಗ'ದ ಬಗ್ಗೆ ಪ್ರೇಮ ಆರಂಭದ ಐದು ತಿಂಗಳು ಧನ ಧಾನ್ಯ ಲಾಭ ದೇಶ ಗ್ರಾಮ ಲಾಭ ಅಧಿಕಾಶಯವನ ರಾಜದರ್ಶನ, ಮನೆಯಲ್ಲಿ ಕಲ್ಯಾಣ ಹಾಗೂ ಸಂಪತ್ತು, ಸೇನಾಪತಿತ್ವ ಅಧಿಕಾರ ದೂರ ಯಾತ್ರೆ, ಪುಣ್ಯ ಪ್ರದಧರ್ಮಕರ್ಮಾದಿ ಕಾರ್ಯ ಸಮುದ್ರ ಸ್ನಾನ ಸುಖ ಅಭಿಷ್ಟಸಿದ್ಧಿಯಾಗುತ್ತದೆ.

ದಾಯೋಶಾದ್ರಂಧ್ರಗೇಹೆ ವಾ ವ್ಯಯಿಗೆ ಪಾಪಸಂಯುತೆ ।
ಚೌರಾಹಿವ್ರಣ ಭಿತೀಶ್ಚ ರಾಜ ವೈಮ್ಯೇವ ಚ ॥೭೩॥

ಗ್ರಹೆ ಕರ್ಮ ಕಲಾಪೇನ ವ್ಯಾಕುಲೊ ಭವತಿ ಧ್ರುವಮ್।
ಸೋದರೇಣ ವಿರೋಧಃ ಸ್ಯಾದ್ ದಾಯಾದಾದ್ಯೈಃ ಕಲಿಸ್ತಥಾ ॥೭೪॥

ಗ್ರಹೆ ತ್ವಶುಭಕಾರ್ಯಾಣಿ ದುಃಸ್ವಪ್ನಾದಿ ಭಯಂ ಧ್ರುವಮ್ ।
ಅಕಸ್ಮಾತ್ ಕಲಹಶ್ಚೈವ ಕ್ಷುದ್ರ ಶುನ್ಯಾದಿ ಕಾಮಯಃ ॥೭೫॥

ದ್ವಿಸಪ್ತಮಸ್ಥಿತೆ ರಾಹೌ ದೇಹಭಾಧಾಂ ವಿನಿರ್ದಿಶೆತ್ ।
ತದ್ದೋಶಪರಿಹಾರಾರ್ಥ ಮೃತ್ಯುಂಜಯ ಜಪಂ ಚರೇತ್ ॥೭೬॥

ಛಾಗದಾನಂ ಪ್ರಕುರ್ವಿತ ಸರ್ವಸೌಖ್ಯಂ ತಥಾ ಭವೇತ್ ।
ಜಪಪೂಜನತೋ ರಾಹುಸಂತುಷ್ಟಿಃ ಸ್ಯಾನ್ನ ಸಂಶಯಃ ॥೭೭॥

ದಶಾಧಿಪನಾದ ಗುರುವಿನಿಂದ 0, 8, 12 ಪಾಪಯುಕ್ತ ರಾಹು ಅಂತರ ದಶಾದಲ್ಲಿ ಕಳ್ಳರ, ಸರ್ಪ ಹಾಗೂ ವ್ರಣ ಭಯ, ರಾಜನೊಂದಿಗೆ ವಿರೋಧ, ಮನೆಯಲ್ಲಿ ಕಾರ್ಯಾಧಿಕ್ಯದಿಂದ ವ್ಯಾಕುಲತೆ. ಸಹೋದರರ ವಿರೋಧ, ದಾಯಾದಿ ಗಳೊಡನೆ ಜಗಳ, ಅಶುಭ ಕಾರ್ಯ ದುಃಸ್ವಪ್ನದ ಭಯ, ಕಲಹ, ಕ್ಷುದ್ರ ಶೂನ್ಯಾಧಿಕರೋಗ ರಾಹುದರ್ಶೇಶನಿಂದ 2, 7ರಲ್ಲಿದ್ದರೆ ಶರೀರ ಭಾದೆ, ದೋಷ ಶಾಂತಿಗಾಗಿ ಮೃತ್ಯುಂಜಯ ಜಪ ಛಾಗದಾನ (ಹೋತ) ಜಪ ಪೂಜೆಯಿಂದ ರಾಹುವಿನ ಸಂತುಷ್ಟಿಯಿಂದ ಶುಭ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಗುರುದಶಾಂತರ ದಶಾಧ್ಯಾಯಃ ಸಮಾಪ್ತಿಃ

# ಅಥ ಶನಿ ದಶಾಂತರದಶ ಅಧ್ಯಾಯ

## ಶನಿ ಮಹಾದಶಾ

### ಶನ್ಯಾಂತರ ದಶಾ

**ಪರಾಶರ ಉವಾಚ:**

ಮೂಲ ತ್ರಿಕೋಣೆ ಸ್ವರ್ಕ್ಷೆ ವಾ ತುಲಾಯಾಮುಚ್ಚಗೇ ಪಿ ವಾ।
ಕೇಂದ್ರ ತ್ರಿಕೋಣ ಲಾಭೆ ವಾ ರಾಜಯೋಗಾದಿ ಸಂಯುತೆ ॥೧॥

ರಾಜ್ಯ ಲಾಭೋ ಮಹತ್ ಸೌಖ್ಯಂ ದಾರಾಪುತ್ರಾದಿ ವರ್ಧನವ್ ।
ವಾಹನತ್ರಯ ಸಂಯುಕ್ತಂ ಗಜಾಶ್ವಾಂಬರ ಸಂಕುಲವ್ ॥೨॥

ಮಹಾರಾಜ ಪ್ರಸಾದೇನ ಬಲಾಧೀಶತ್ವ ಮಾಪ್ನುಯಾತ್ ।
ಚತುಷ್ಪಾಜ್ಜೀವಲಾಭಃ ಸ್ಯಾಲ್ಲಾಭೋ ಗ್ರಾಮಾಧಿಕಸ್ಯ ಚ ॥೩॥

**ಪರಾಶರರು ಹೇಳಿದರು– (ಹೇ ಮೈತ್ರೇಯನೆ)**

ಮೂಲ ತ್ರಿಕೋಣ ಸ್ವಭವನ ತುಲಾ ಉಚ್ಚ ಕೇಂದ್ರ ತ್ರಿಕೋಣದಲ್ಲಿ ರಾಜಯೋಗಯುಕ್ತ ಶನಿ ಇದ್ದು, ಶನಿದಶಾ ಶನ್ಯಾಂತರದಶಾದಲ್ಲಿ ರಾಜಲಾಭ ಮಹಾಸೌಖ್ಯ ಸ್ತ್ರೀಪುತ್ರರ ಅಭಿವೃದ್ಧಿ ವಾಹನತ್ರಯ ಸೌಖ್ಯ, ಆನೆ, ಕುದುರೆ ವಸ್ತ್ರಾದಿಗಳ ಅಧಿಕತೆ ರಾಜಕೃಪಾದಿಂದ ಸೇನಾಪತ್ಯ ಪಶುಲಾಭ ಗ್ರಾಮಾಧಿಕಾರ ಲಾಭ.

ಅಷ್ಟಷ್ಟಮೇ ವ್ಯಯೇ ಮಂದೆ ನೀಚೆ ಪಾಪಪಸಂಯುತೆ ।
ತದ್ ಭುಕ್ತ್ಯಾದೌ ರಾಜತೋಭಿರ್ವಿಷ ಶಸ್ತ್ರಾದಿಪೀಡನವ್ ॥೪॥

ರಕ್ತ ಸ್ರಾವೋ ಗುಲ್ಮರೋಗ ಶ್ಚಾತಿಸಾರಾದಿ ಪೀಡನವ್ ।
ಮಧ್ಯೆ ಚೌರಾದಿಭೀತಿಶ್ಚ ದೇಶತ್ಯಾಗೊ ಮನೋರುಜಾ ॥೫॥

ಅಂತೆ ತು ಶುಭದಾ ಭುಕ್ತ ರ್ಗ್ರಾಮಭೂಮ್ಯಾದಿ ಲಾಭದಾ ।
ದ್ವಿತೀಯ ದ್ಯೂನಗಾಥೆ ತು ಹ್ಯಾಪ ಮೃತ್ಯುರ್ಭವಿಷ್ಯತಿ ॥೬॥

ತದ್ದೋಷ ಪರಿಹಾರಾರ್ಥ ಮೃತ್ಯುಂಜಯಜಪಂ ಚರೇತ್ ।
ಪ್ರಸನ್ನಃ ಶಂಕರಃ ಸದ್ಯಃ ಸರ್ವಕ್ಲೇಶ ಹರೋ ಭವೇತ್ ॥೭॥

ಅಷ್ಟಮ ದ್ವಾದಶ ಅಥವಾ ನೀಚರಾಶಿಯಲ್ಲಿ ಸಪಾಪ ಶನಿ ಇದ್ದಾರ ಅವನ ಅಂತರದಶಾ ಆರಂಭದಲ್ಲಿ ರಾಜ ಭಯ ವಿಷಶಸ್ತ್ರಾದಿ ಪೀಡೆ ರಕ್ತಸ್ರಾವ ಗುಲ್ಮರೋಗ, ಅತೀಸಾರದ ಕಷ್ಟ ಅಂತರದಶಾ ಮಧ್ಯದಲ್ಲಿ ಕಳ್ಳಕಾಕರಿಂದ ಭಯ, ದೇಶ ತ್ಯಾಗ ಪ್ರಸಂಗ, ಮಾನಸಿಕ ಕಷ್ಟ, ದಶಾಂತದಲ್ಲಿ ಗ್ರಾಮ ಭೂಮಿ, ಆದಿಲಾಭ, ಅದೆ ಶನಿ 2, 7ರ ಸ್ವಾಮಿಯಾದಾಗ ಅಪಮೃತ್ಯು, ದೋಷಪರಿಹಾರಕ್ಕೆ ಮೃತ್ಯುಂಜಯ ಜಪ ಶಾಂತಿಯಿಂದ ಶಂಕರನು ಪ್ರಸನ್ನನಾಗಿ ಸರ್ವ ಕಷ್ಟಹಾರಕ ನಾಗುತ್ತಾನೆ.

## ಬುಧಾಂತರದಶಾ ಫಲ

ಮಂದಸ್ಯಾಂತರ್ಗತೆ ಸೌಮ್ಯೇ ತ್ರಿಕೋಣೆ ಕೇಂದ್ರಗೇ ಪಿ ವಾ ।
ಸಮ್ಮಾನಂ ಚಾಮಿತಯಶೋ ವಿದ್ಯಾಲಾಭಂ ಧನಾಗಮಮ್ ॥೮॥

ಸ್ವದೇಶೆ ಸುಖ ಮಾಪ್ನೋತಿ ವಾಹನಾದಿಫಲೈರ್ಯುತಮ್ ।
ಯಜ್ಞಾದಿ ಕರ್ಮಸಿದ್ಧಿಶ್ಚ ರಾಜ್ಯೋಗಾದಿಸಂಭವಃ ॥೯॥
ದೇಹಸೌಖ್ಯಂ ಹೃದುತ್ಸಾಹೋ ಗೃಹೆ ಕಲ್ಯಾಣ ಸಂಭವಃ
ಕೇತು ಸ್ನಾನ ಫಲಾವಾಪ್ತಿ ಸ್ತೀರ್ಥಯಾತ್ರಾದಿ ಕರ್ಮಣಾ ॥೧೦॥

ವಾಣಿಜ್ಯಾದ್ ಧನಲಾಭಶ್ಚ ಪುರಾಣ ಶ್ರವಣಾದಿಕಮ್ ।
ಅನ್ನದಾನ ಫಲಂ ಚೈವ ನಿತ್ಯಂ ಮೃಷ್ಟಾನ್ನ ಭೋಜನಂ ॥೧೧॥

ಬುಧ ತ್ರಿಕೋಣ ಅಥವಾ ಕೇಂದ್ರದಲ್ಲಿ ಶನಿ ಮಹಾದಶಾದಲ್ಲಿ ಅವನ ಅಂತರದಶಾ ಸನ್ಮಾನ ಅಪಾರ ಯಶ ವಿದ್ಯಾಲಾಭ, ಧನಾಗಮ ವಾಹನಾದಿಸುಖ, ಯಜ್ಞಾದಿ ಕಾರ್ಯಸಿದ್ಧಿ ರಾಜಯೋಗಾದಿ ಶರೀರ ಸುಖ, ಮಾನಸಿಕ ಉತ್ಸಾಹ ಮನೆಯಲ್ಲಿ ಕಲ್ಯಾಣ ಕಾರ್ಯಗಳು, ತೀರ್ಥಯಾತ್ರೆ ದ್ವಾರ ಸಮುದ್ರ ಸ್ನಾನ, ವಾಣಿಜ್ಯ(ವ್ಯಾಪಾರ)ದಲ್ಲಿ ಧನಲಾಭ, ಪುರಾಣ ಶ್ರವಣ ತನ್ನ ದಾನದ ಪುಣ್ಯ ಫಲ, ಮೃಷ್ಟಾನ್ನ ಭೋಜನ.

ಷಷ್ಠಾಷ್ಟಮೆ ವ್ಯಯೋ ಸೌಮ್ಯೆ ನೀಚೆ ವಾ ಸ್ತಂಗತೆ ಸತಿ।
ರವ್ಯಾರಫಣಿ ಸಂಯುಕ್ತೆ ದಾಯೋಶಾದ್ ತಥೈವ ಚ ॥೧೨॥

ನೃಪಾಧಿಷೆಕ ಮರ್ಥ ಪ್ರಾಪ್ತಿರ್ದೇಶಗ್ರಾಮಾಧಿಕಾರಿತಾ ।
ಫಲಮಿದ್ದಶಮಾದೌ ತು ಮಧ್ಯಾಂತೆ ರೋಗ ಪೀಡನಮ್ ॥೧೩॥

ಸಪ್ತಾನಿ ಸರ್ವ ಕರ್ಮಾಣಿ ವ್ಯಾಕುಲತ್ವಂ ಮಹದ್ ಭಯಮ್ ।
ದ್ವಿತೀಯ ಸಪ್ತಮಾಧೀಶೇ ದೇಹಬಾಧಾ ಭವಿಷ್ಯತಿ ॥೧೫॥

ತದ್ದೋಷ್ ಪರಿಹಾರಾರ್ಥ ವಿಷ್ಣುಸಾಹಸ್ರಕಂ ಜಪೇತ್
ಅನ್ನದಾನಂ ಪ್ರಕುರ್ವೀತ ಸರ್ವ ಸಂಪತ್ ಪ್ರದಾಯಕಮ್ ।

ಲಗ್ನ ಅಥವಾ ದಶಾಪತಿಯಿಂದ 6, 8, 12ರಲ್ಲಿ ನೀಚರಾಶಿಗತನಾಗಿ ಅಥವಾ ಅಸ್ತಂಗತನಾಗಿ ಬುಧ, ಸೂರ್ಯ, ಮಂಗಳ, ರಾಹುವಿನಿಂದ ಯುತನಾಗಿದ್ದರೆ ಶನಿದಶಾ, ಬುಧಾಂತರ ದಶಾ ರಾಜತಿಲಕ, ಧನಪ್ರಾಪ್ತಿ, ದೇಶ ಅಧಿಕಾರ, ಊರಿನ ಸ್ವಾಮಿತ್ವ ಇದು ದಶಾರಂಭದಲ್ಲಿ ದೊರೆಯುವ ಫಲ. ಮಧ್ಯ ಹಾಗೂ ದಶಾ ಕೊನೆ ಮಾತ್ರ ರೋಗದಿಂದ ಕಷ್ಟ. ಎಲ್ಲಾ ಕಾರ್ಯ ಸಿದ್ಧಿಯಲ್ಲಿ ಅಡೆತಡೆ ವ್ಯಾಕುಲತೆ ಮಹಾಭಯ, ಅದೇ ಬುಧ 2, 7ರ ಅಧಿಪನಾಗಿದ್ದರೆ ಶಾರೀರಿಕ ಬಾಧೆಯೂ ಆರಂಭ, ದೋಷ ಪರಿಹಾರಕ್ಕೆ ವಿಷ್ಣು ಸಹಸ್ರನಾಮ ಜಪ ಅನ್ನದಾನಾದಿ ಪುಣ್ಯ ಕರ್ಮ ವಿಹಿತ ದೋಷ ಪರಿಹಾರ.

## ಕೇತ್ವಾಂತರ್ದಶಾ ಫಲ

ಮಂದಸ್ಯಾಂತರ್ಗತೇ ಕೇತೌ ಶುಭದೃಷ್ಟಿಯುತೆ ಕ್ಷಿತೌ।
ಸ್ವೋಚ್ಚೆ ವಾ ಶುಭರಾಶಿಸ್ಥೆ ಯೋಗಕಾರಕ ಸಂಯುತೆ ॥೧೬॥

ಕೇಂದ್ರಗೆ ಕೋಣ ಸಂಸ್ಥೆ ವಾ ಸ್ಥಾನಭಂಶೋಮಹದ್ ಭಯಮ್।
ದಾರಿದ್ರ್ಯಬಂಧನಂ ಭೀತಿಃ ಪುತ್ರದಾರಾದಿನಾಶನಮ್ ॥೧೭॥

ಸ್ವಪ್ರಭೋಃಶ್ಚ ಮಹಾನ್ ಕ್ಲೇಶೆ ವಿದೇಶ ಗಮನಂ ತಥಾ।
ಲಗ್ನಾಧಿಪೇನ ಸಂಯುಕ್ತೆ, ತ್ವಾದೌ ಸೌಖ್ಯಂ ಧನಾಗಮಃ ॥೧೮॥

ಗಂಗಾದಿ ಸರ್ವ ತೀರ್ಥೇಷ ಸ್ನಾನಂ ದೈವತ ದರ್ಶನಮ್ ।

ಕೇಂದ್ರ ತ್ರಿಕೋಣ ಸ್ವೋಚ್ಚ ಅಥವಾ ಶುಭರಾಶಿಯಲ್ಲಿ ಸ್ಥಿತ ಕೇತು ಯೋಗಕಾರಕ ಗ್ರಹ ಅಥವಾ ಶುಭ ಗ್ರಹದ ಜತೆಗಿದ್ದರೆ, ದುಷ್ಟನಾಗಿದ್ದರೆ ಶನಿದಶಾ ಕೇತು ಅಂತರದಶಾದಲ್ಲಿ ಸ್ಥಾನ ಭ್ರಂ (ನೌಕರಿಯಿಂದ ವಜಾ, ವರ್ಗ ಆದಿ) ಮಹಾನ್ ಕ್ಲೇಶ, ವಿದೇಶ ಯಾತ್ರಾ, ಲಗ್ನೇಶ ಯುಕ್ತ ಕೇತು ಇದ್ದರೆ ಅಂತರದಶಾ ರಂಭದಲ್ಲಿ ಸುಖಿ, ಧನಾಗಮ ಗಂಗಾದಿ ಎಲ್ಲ ತೀರ್ಥದಲ್ಲಿ ಸ್ನಾನ ದೇವತಾದರ್ಶನವಾಗುತ್ತದೆ.

ದಾಯೇಶಾತ್ ಕೇಂದ್ರಕೋಣೆ ವಾ ತೃತೀಯಾಯಗತೆ ದ್ವಜೆ.. ॥೧೯॥

ಸಾಮಾರ್ಥ್ಯ ಧರ್ಮ ಬುದ್ಧಿಶ್ಚ ಸೌಖ್ಯಂ ನೃಪ ಸಮಾಗಮಃ ।

ದಶೇಶನಿಂದ ಕೇಂದ್ರ ತ್ರಿಕೋಣ ಹಾಗೂ 3, 11ರಲ್ಲಿ ಕೇತು ಇದ್ದರೆ ಅಂತರದಶಾ ಸಾಮರ್ಥ್ಯ ತಂದುಕೊಡುವುದು ಹಾಗೂ ಧಾರ್ಮಿಕ ಬುದ್ಧಿ ಸುಖ ಹಾಗೂ ರಾಜ ಸಮಾಗಮ.

ರಂಧ್ರೇಥವಾ ವ್ಯಯೇ ಕೇತೌ ದಾಯೋಶಾದ್ ವಾ ತಥೈವ ಚ ॥೨೦॥

ಅಪಮೃತ್ಯು ಭಯಂ ಚೈವ ಕುತ್ಸಿ. ತಾನ್ನ್ಸ್ಯ ಭೋಜನಮ್ ।
ಶೀತಜ್ವರೋತಿಸಾರಶ್ಚ ವ್ರಣಾಚೌರಾದಿ ಪೀಡನಮ್ ॥೨೧॥

ದಾರಪುತ್ರವಿಯೋಗಶ್ಚ ಸಂಸಾರೆ ಭವತಿ ಧ್ರುವಮ್ ।
ದ್ವಿತೀಯ ದ್ಯೂನ ರಾಶಿಸ್ಥೆ ದೇಹಪೀಡಾ ಭವಿಷ್ಯತಿ ॥೨೨॥

ಛಾಗದಾನಂ ಪ್ರಕುರ್ವೀತೆ ಹಾಪಮೃತ್ಯುಭಯಾಪಹಮ್ ।

ಲಗ್ನ ಅಥವಾ ದಶೇಶನಿಂದ ಕೇತು 6, 12ರಲ್ಲಿದ್ದು, ಅಂತರದಶಾಕಾಲದಲ್ಲಿ ಅಪಮೃತ್ಯುಕಾರಕನಾಗುವನು. ಕದನ್ನ-

ಭೋಜನ ಶೀತಜ್ವರ ಅತೀಸಾರ ವ್ರಣ, ಕಳ್ಳಕಾಕರ ಭಯ, ಆದಿ ಕಷ್ಟ ಹೇಳುವುದು, ಸ್ತ್ರೀಪುತ್ರ ವಿಯೋಗವು ಅದೇ ಕೇತು 2, 7ರಲ್ಲಿದ್ದರೆ ಶರೀರ ಬಾಧೆ. ಅಪಮೃತ್ಯು-ದೋಷ ಪರಿಹಾರಕ್ಕೆ ಹೋತದ (ಛಾಗ) ದಾನ ಮಾಡುವುದು.

## ಶುಕ್ರಾಂತರ ದಶಾಫಲ

ಮಂದಸ್ಯಾಂತರ್ಗತೆ ಶುಕ್ರೆ ಸ್ವೋಚ್ಚೆ ಸ್ವಕ್ಷೇತ್ರಗೇ ಪಿ ವಾ ॥೨೩॥

ಕೇಂದ್ರೆ ವಾ ಶುಭಸಂಯುಕ್ತೆ ತ್ರಿಕೋಣೆ ಲಾಭಗೇ ಪಿ ವಾ ।
ದಾರ ಪುತ್ರ ಧನಪ್ರಾಪ್ತಿರ್ದೇಹಾರೋಗ್ಯಂ ಮಹೋತ್ಸವಃ ॥೨೪॥

ಗೃಹೆ ಕಲ್ಯಾಣ ಸಂಪತ್ತಿ ರಾಜ್ಯಲಾಭೊ ಮಹತ್ ಸುಖಮ್ ।
ಮಹಾರಾಜ ಪ್ರಸಾದೇನಾ ಭಿಷ್ಟಸಿದ್ಧಿಃ ಸುಖಾವಹಾ ॥೨೫॥

ಸಮ್ಮಾನಂ ಪ್ರಭುಸಮ್ಮಾನಂ ಲಾಭಃ ಸ್ಯಾತ್ ಪ್ರೀಯವಾಸಸಾಮ್ ।
ದ್ವೀಪಾಂತರಾದ್ ವಸ್ತ್ರಲಾಭಃ ಶ್ವೇತಾಶ್ವೋ ಮಹಿಷಿ ತಥಾ ॥೨೬॥

ಗುರು ಚಾರದಶಾದ್ ಭಾಗ್ಯಂ ಸೌಖ್ಯಂ ಚ ಧನಸಂಪದಃ
ಶನಿಚಾಗಾನ್ಮನು ಷ್ಯೋಸೌ ಯೋಗ ಮಾಪ್ನೋತ್ಯ ಸಂಶಯಮ್ ॥೨೭॥

ಸ್ವೋಚ್ಚ ಸ್ವಭವನ, ಕೇಂದ್ರ ತ್ರಿಕೋಣ ಲಾಭದಲ್ಲಿ ಶುಕ್ರ ಶುಭ ಗ್ರಹಯುತ ಅಥವಾ ದೃಷ್ಟನಾಗಿದ್ದರೆ ಶನಿ ಮಹಾದಶಾದಲ್ಲಿ ಶುಕ್ರ, ಅಂತರದಶಾ ಕಾಲದಲ್ಲಿ ಸ್ತ್ರೀ ಪುತ್ರಧನಪ್ರಾಪ್ತಿ ಶಾರೀರಿಕ ಆರೋಗ್ಯ ಮಹೋತ್ಸವ ಮನೆಯಲ್ಲಿ ಕಲ್ಯಾಣ ಹಾಗೂ ಸಂಪತ್ತು ರಾಜ್ಯಲಾಭ, ಮಹಾಸುಖಿ, ರಾಜ ಕೃಪಾದಿಂದ ಸುಖಪ್ರದ, ಅಭಿಷ್ಟಸಿದ್ಧಿ ಜನಾದರ ಹಾಗೂ ರಾಜನಿಂದ ಸನ್ಮಾನ, ಪ್ರಿಯ ವಸ್ತ್ರಲಾಭ, ದ್ವೀಪಾಂತರದಿಂದ ವಸ್ತ್ರ ಬಿಳಿ ಕುದುರೆ ಮಹಿಷಿ (ಎಮ್ಮೆ) ಲಾಭ ಸಂಚಾರವುಳ್ಳ ಗುರುವಿನ ಅನುಕೂಲತಾದಿಂದ ಸುಖಿ, ಧನಸಂಪತ್ತು, ಶನಿ ಅನುಕೂಲತೆಯಿಂದ ಯೋಗ ಕರ್ಮ ಪ್ರಾಪ್ತಿ.

ಶತ್ರು ನೀಚಸ್ತಗೆ ಶುಕ್ರೆ ಷಷ್ಠಾಷ್ಟವ್ಯಯೆರಾಶಿಗೆ ।
ದಾರನಾಶೊ ಮನಃ ಕ್ಲೇಶಃ ಸ್ಥಾನನಾಶೋ ಮನೋರುಜಾ ॥೨೮॥

ದಾರಾಣಾಂ ಸ್ವಜನ ಕ್ಲೇಶಃ ಸಂತಾಪಃ ಕಲಹೊ ಜನೈಃ ।
ದಾಯೋಶಾದ್ ಭಾಗ್ಯಗೆ ಚೈವ ಕೇಂದ್ರೆ ವಾ ಲಾಭ ಸಂಯುತೆ ॥೨೯॥

ರಾಜಪ್ರತಿಕಾರಂ ಚೈವ ಮನೋಭಿಷ್ಟಪ್ರದಾಯಕಮ್ ।
ದಾನಧರ್ಮಾದಯಾಯುಕ್ತಂ ತೀರ್ಥಯಾತ್ರಾದಿಕಂ ಫಲಮ್ ॥೩೦॥

ಶಾಸ್ತ್ರಾರ್ಥಕಾವ್ಯರ ಚನಾ ವೇದಾಂತಶ್ರವಣಾದಿಕಮ್ ।
ದಾರ ಪುತ್ರಾದಿಸೌಖ್ಯಂ ಚ ಸಂಲಾಭಶ್ಚ ತ್ರಯಾನಯೋಃ ॥೩೧॥

ಶತ್ರುಗ್ರಹ ನೀಚರಾಶಿ ಅಸ್ತಂಗತ ಅಥವಾ ತ್ರಿಕ್ ದಲ್ಲಿ ದಶಾತ್ರ ತನ್ನ ಅಂತರ ದಶಾಕಾಲದಲ್ಲಿ ಸ್ತ್ರೀನಾಶ ಮನೋ ವ್ಯಥಾ ಸ್ಥಾನನಾಶ ಸ್ತ್ರೀ ಹಾಗೂ ಬಂಧುಗಳಿಗೆ ಕ್ಲೇಶದಾಯಕನಾದರೂ, ಸಂತಾಪದಾಯಕನಾಗಿ ಜನರಲ್ಲಿ ವಿನಾಕಾರಣ ಜಗಳಕ್ಕೆ ಕಾರಣನಾಗುವನು.

ದಶಾಪತಿಯಿಂದ ಕೇಂದ್ರ ಭಾಗ್ಯಸ್ಥಾನ ಲಾಭದಲ್ಲಿದ್ದಾರೆ ಶನಿ ದಶಾ ಶುಕ್ರಾಂತರ ದಶಾ ರಾಜಕೃಪೆ ಉಪಯೋಗಿಸಿ ಕೊಡುವನು. ಮನೋಭಿಲಾಸೆ ಸಿದ್ಧಿ ದಾನಧರ್ಮ ದಯಾದಿಂದ ಕೂಡಿದವನಾಗುವನು. ತೀರ್ಥ ಯಾತ್ರಾದಿ ಫಲ ದೊರೆಯುವುದು. ಶಾಸ್ತ್ರಾರ್ಥ ಕಾವ್ಯರಚನೆ ವೇದಾಂತ ಶ್ರವಣದಲ್ಲಿ ಕಾಲ ಕಳೆಯುವನು. ಸ್ತ್ರೀಪುತ್ರರಿಗೆ ಸೌಖ್ಯ, ಛತ್ರ ವಾಹನಾದಿ ಪ್ರಾಪ್ತಿ.

ದಾಯೋಶಾದ್ ವ್ಯಯಿಗೆ ಶುಕ್ರೆ ಷಷ್ಠೆ ವಾ ಹಾಷ್ಟಮೆಪಿ ವಾ ।
ನೇತ್ರ ಪೀಡಾ ಜ್ವರ ಭಯಃ ಸ್ವಕುಲಾಚಾರ ವರ್ಜನಮ್ ॥೩೨॥

ಕಪೋಲೆ ದಂತ ಶೂಲಾದಿ ಹೃದಿ ಗುಹೆ, ಚ ಪೀಡನಮ್ ।
ಜಲಭೀತಿಮನಸ್ತಾಪೋ ವೃಕ್ಷಾತ್ ಪತನ ಸಂಭವಃ ॥೩೩॥

ರಾಜದ್ವಾರೆ ಜನದ್ವೇಷಃ ಸೋದರೇಣ ವಿರೋಧನಮ್ ।
ದ್ವಿತೀಯ ಸಪ್ತಮಾದೀಶೆ ಚಾತ್ಮಕ್ಲೇಶೋ ಭವಿಷ್ಯತಿ ॥೩೪॥

ತದ್ದೋಷಪರಿಹಾರರ್ಥ ದುರ್ಗಾದೇವಿಜಪಂ ಚರೇತ್ ।
ಶ್ವೇತಾಂ ಗಾಂ ಮಹಿಷಿಂ ದದ್ಯಾದಾಯುರಾರೋಗ್ಯಾದಾಯಿನಿಮ್॥೩೫॥

ಶುಕ್ರ ದಶೇಶನಿಂದ 6, 8, 12ರಲ್ಲಿದ್ದಾಗ ಅಂತರ ದಶಾಕಾಲದಲ್ಲಿ ನೇತ್ರ ಪೀಡಾ ಜ್ವರ ಭಯ ಕುಲಾಚಾರದಿಂದ ರಾಹಿತ್ಯ ಕಪೋಲ ಹಾಗೂ ದಂತರೋಗ ಶೂಲರೋಗ ಹೃದಯ ಹಾಗೂ ಗುದದ್ವಾರದಲ್ಲಿ ಪೀಡೆ, ಜಲಭಯ, ಮನಸ್ತಾಪ ಗಿಡದಿಂದ ಬಿದ್ದುಗಾಯ ರಾಜದ್ವಾರದಲ್ಲಿ ಜನದ್ವೇಷ ಸಹೋದರರ ವಿರೋಧ ಅದೇ ಶುಕ್ರ 2, 7ರ ಅಧಿಪನಾದರೆ ಆತ್ಮಕ್ಲೇಶ, ದೋಷ ಶಾಂತಿಗಾಗಿ ದುರ್ಗಾ ದೇವಿ ಪೂಜೆ ಜಪಾದಿಗಳು ಹಾಗೂ ಬಿಳಿ ಆಕಳು ಎಮ್ಮೆ ದಾನದಿಂದ ಆಯುರಾರೋಗ್ಯ.

## ಸೂರ್ಯಾಂತರ ದಶಾ ಫಲ

ಮಂದಸ್ಯಾಂತರ್ಗತೆ ಸೂರ್ಯೆ ಸೋಚ್ಚೆ ಸ್ವಕ್ಷೇತ್ರ ಗೇ ಪಿ ವಾ।
ಭಾಗ್ಯಾಧಿಪೇನ ಸಂಯುಕ್ತೆ ಕೇಂದ್ರ ಲಾಭ ತ್ರಿಕೋಣಗೆ ॥೩೬॥

ಶುಭ ದೃಷ್ಟಿಯುತೆ ವಾಪಿ ಸ್ವಪ್ರಭೋಶ್ಚ ಮಹತ್ ಸುಖಮ್ ।
ಗೃಹೆ ಕಲ್ಯಾಣ ಸಂಪತ್ತಿಃ ಪುತ್ರಾದಿ ಸುಖವರ್ಧನಮ್ ॥೩೭॥

ವಾಹನಾಂಬರ ಪಶ್ವಾದಿಗೋಕ್ಷೀರೈಃ ಸಂಕುಲಂ ಗೃಹಮ್ ।

ತನ್ನ ಉಚದಲ್ಲಿ (ಮೇಷ) ಸ್ವ ಗೃಹದಲ್ಲಿ (ಸಿಂಹ) ಕೇಂದ್ರ ತ್ರಿಕೋಣ ಲಾಭಸ್ಥಾನಗತ ಸೂರ್ಯ ಭಾಗ್ಯೇಶನ ಜತೆಗೆ ಶುಭ ಗ್ರಹದ ದೃಷ್ಟಿ ಅಥವಾ ಯೋಗ ಅವನ ಮೇಲಿದ್ದರೆ ಶನಿ ಮಹಾದಶಾದಲ್ಲಿ ಸೂರ್ಯಾಂತರದಶಾ ಬಂದಾಗ ಸ್ವಾಮಿಯಿಂದ (ಯಜಮಾನ) ಮಹಾಶುಭ ಮನೆಯಲ್ಲಿ ಕಲ್ಯಾಣಕಾರ್ಯಗಳು ಹಾಗೂ ಸಂಪತ್ತು ಪುತ್ರಾದಿ ಸುಖ ವೃದ್ಧಿ ವಾಹನದ ಮೇಲೆ ಸವಾರಿ ಪಶು ವಸ್ತ್ರ ಹಾಲು, ಮೊಸರು ಇತ್ಯಾದಿ ಸಮೃದ್ಧಿಯಿಂದ ಮನೆ ಕೂಡಿ ಸುಖಿ.

ಲಗ್ನಾದ್ರಂಧೆ, ವ್ಯಯೇ ಭಾನೌ ದಾಯೋಶಾದ್ ವಾ ತಥೈವಚ ॥೩೮॥

ಹೃದ್ರೋಗೇ ಮಾನಹಾನಿಶ್ಚ ಸ್ಥಾನ ಭ್ರಂಶೋ ಮನೋರುಜಾ ।
ಇಷ್ಟಬಂಧು ವಿಯೋಗಶ್ಚಾ ಪ್ಯುದ್ಯೋಗಸ್ಯ ವಿನಾಶನಮ್ ॥೩೯॥

ತಾಪಜ್ವರ ಪೀಡಾ ಚ ವ್ಯಾಕುಲತ್ವಂ ಭಯಂ ತಥಾ ।
ಆತ್ಮ ಸಂಬಂಧಿ ಮರಣಾ ವಿಯೋಗಶ್ಚೇಷ್ಟವಸ್ತುನಃ ॥೪೦॥

ಸೂರ್ಯ ಲಗ್ನ ಅಥವಾ ದಶಾಪತಿಯಿಂದ 8, 12 ಸ್ಥಾನದಲ್ಲಿದ್ದರೆ ಸೂರ್ಯಾಂತರ ದಶಾ ಹೃದಯರೋಗ, ಮಾನ ಹಾನಿ ಸ್ಥಾನಾಶಾದಿ ಮನೋವ್ಯಥಾ ಇಷ್ಟಮಿತ್ರ ವಿಯೋಗ, ಉದ್ಯೋಗದ ನಾಶ, ತಾಪದಿಂದ ಜ್ವರ ಆದಿ ಪೀಡೆ ವ್ಯಾಕುಲತೆ ಭಯ ಸಂಬಂಧಿಗಳ ಮರಣ ವಾರ್ತೆ ಇಷ್ಟವಸ್ತು ವಿಯೋಗ ಇತ್ಯಾದಿ ಸಂಭವಿಸುತ್ತದೆ.

ದ್ವಿತೀಯದ್ಯೂನನಾಥೆ ತು ದೇಹ ಪೀಡಾ ಭವಿಷ್ಯತಿ ।
ತದ್ದೋಶಪರಿಹಾರಾರ್ಥ ಸೂರ್ಯಪೂಜಾಂ ಚ ಕಾರಯೇತ್ ।

2, 7ರ ಸ್ವಾಮಿ ಸೂರ್ಯನಾಗಿದ್ದಾಗ ಅವನ ಅಂತರ ದಶಾ ಬರಲು ಶಾರೀರಿಕ ಕಷ್ಟದಾಯಕವಾಗುತ್ತದೆ. ಆ ದೋಷಪರಿಹಾರಕ್ಕೆ ಸೂರ್ಯಪೂಜನ ಅವಶ್ಯಕ.

## ಚಂದ್ರಾಂತರ್ದಶಾ ಫಲ

ಮಂದಸ್ಯಾಂತರ್ಗತೆ ಚಂದ್ರೆ ಜೀವದೃಷ್ಟಿ ಸಮನ್ವಿತೆ।
ಸ್ವೋಚ್ಚೆ ಸ್ವಕ್ಷೇತ್ರ ಕೇಂದ್ರಸ್ಥೆ ತ್ರಿಕೋಣೆ ಲಾಭಗೋ ಪಿ ವಾ ॥೪೨॥

ಪೂರ್ಣೆ ತು ಸದ್ ಗ್ರಹೈರ್ಯುಕ್ತೆ ರಾಜ ಪ್ರಿತಸಮಾಗಮಃ।
ಮಹಾರಾಜ ಪ್ರಸಾದೇನ ವಾಹನಾಂಬರ ಭೂಷಣಮ್ ॥೪೩॥

ಸೌಭಾಗ್ಯಂ ಸುಖವೃದ್ಧಿಶ್ಚ ಪರಿಚಾರಕ ಪಾಲನಮ್ ।
ಪಿತೃಮಾತೃ ಕುಲೆ ಸೌಖ್ಯಂ ಪಶು ವೃದ್ಧಿಃ ಸುಖಾವಹಾ ॥೪೪॥

ಗುರುದೃಷ್ಟಿಯುತನಾದ ಚಂದ್ರ ಸೋಚ್ಚ ಸ್ವಭವನ ಕೇಂದ್ರ ತ್ರಿಕೋಣ ಅಥವಾ ಲಾಭಸ್ಥಾನ ಸ್ಥಿತ ಪೂರ್ಣಚಂದ್ರ ಗುರು ಸಹಿತನಾಗಿದ್ದರೂ ಅಂತರದಶಾ ಕಾಲದಲ್ಲಿ ರಾಜಪ್ರೀತಿ, ರಾಜಕೃಪಾದಿಂದ ವಾಹನಾದಿ ವಸ್ತ್ರ ಭೂಷಣ ಪ್ರಾಪ್ತಿ ತಂದು ಕೊಡುವನು. ಸೌಭಾಗ್ಯೋದಯ ಸುಖವೃದ್ಧಿ ಸೇವಕರ ಪಾಲನೆ ಪೋಷಣೆಯಲ್ಲಿ ಸುಖ, ಪಶುವೃದ್ಧಿ ಫಲ ನೀಡುವನು.

ಕ್ಷೀಣೇ ವಾ ಪಾಪಸಂಯುಕ್ತೇ ಪಾಪದೃಷ್ಟೇ ಚ ನೀಚಗೆ ।
ಕ್ರೂರಾಂಶಕ ಗತೇ ವಾಪಿ ಕ್ರೂರ ಕ್ಷೇತ್ರಗತೇ ಪಿ ವಾ ॥೪೩॥

ಜಾತಕಸ್ಯ ಮಹತ್ ಕಷ್ಟಂ ರಾಜ ಕೋಪೋ ಧನಕ್ಷಯಃ ।
ಪಿತೃಮಾತೃವಿಯೋಗಶ್ಚ ಪುತ್ರಿಪುತ್ರದಿಕಾಮಯಃ ॥೪೬॥

ವ್ಯವಸಾಯತ್ ಫಲಂ ನೇಷ್ಟಂ ನಾನಾಮಾರ್ಗೆ ಧನವ್ಯಯಃ ।
ಅಕಾಲೆ ಭೋಜನಂ ಚೈವಮೌಷಧಸ್ಯ ಚ ಭಕ್ಷಣಮ್ ॥೪೭॥

ಜ್ಞೇಯಮೇತತ್ ಫಲಂ ಪ್ರೋಕ್ತ ಮಾದೌಸೌಖ್ಯಂ ಧನಾಗಮಃ ।

ನೀಚ ರಾಶಿಸ್ಥ ಪಾಪಯುಕ್ತ ಪಾಪದೃಷ್ಟ ಕ್ಷೀಣ ಚಂದ್ರಪಾಪ ಕ್ಷೇತ್ರ ಅಥವಾ ಪಾಪಗ್ರಹ ನವಾಂಶದಲ್ಲಿದ್ದಾಗ ಅಂತರದಶಾ ಕಾಲ ಜಾತಕನಿಗೆ ಮಹಾಕಷ್ಟ ಕಾಲವಾಗಿ ಪರಿಣಮಿಸುತ್ತದೆ.

ರಾಜಕೋಪ ಧನನಾಶ ಪಿತೃ ಮಾತೃವಿಯೋಗ, ಪುತ್ರ, ಪುತ್ರಿಯರಿಗೆ ರೋಗಭಯ, ಉದ್ಯೋಗದಲ್ಲಿ ಹಾನಿ ಅನೇಕ ರೂಪದಲ್ಲಿ ಧನಕ್ಷಯ ಅಸಮಯ ಭೋಜನ ಔಷಧ ಸೇವನೆ ಇತ್ಯಾದಿ ಫಲ. ಅಂತರ ದಶಾರಂಭ ಶುಭ ಸುಖ ಧನಾಗಮನ ಉಂಟಾಗುತ್ತದೆ.

ದಾಯೇಶಾತ್ ಕೇಂದ್ರರಾಶಿಸ್ಥೆ ತ್ರಿಕೋಣೆ ಲಾಭಗೇ ಪಿ ವಾ ।
ವಾಹನಾಂಬರ ಪಶ್ವಾದಿ ಭ್ರಾತೃವೃದ್ಧಿಃ ಸುಖಾವಹಾ ॥೪೮॥

ಪಿತೃಮಾತೃ ಸುಖಾವಾಪ್ತಿಃ ಸ್ತ್ರೀಸೌಖ್ಯಂ ಚ ಧನಾಗಮಃ।
ಮಿತ್ರ ಪ್ರಭುವಶಾಧಿಷ್ಟಂ ಸರ್ವಸೌಖ್ಯಂ ಶುಭಾವಹಮ್ ॥೪೯॥

ದಾಯೇಶಾದಷ್ಟಮೆ ಕಿಂ ವಾ ದ್ವಾದಶ ಬಲವರ್ಜಿತೆ ।
ಶಯನಂ ರೋಗ ಆಲಸ್ಯಂ ಸ್ಥಾನ ಭ್ರಂಶಃ ಸುಖಾಪಹಃ।
ಶತ್ರುವೃದ್ಧಿ ರ್ವಿರೋಧಶ್ಚ ವಿಗ್ರಹಶ್ಚೇಷ್ಟ ಬಂಧುಭಿಃ।

ಚಂದ್ರನು ದಶೇಶನಿಂದ ಕೇಂದ್ರ ತ್ರಿಕೋಣ ಅಥವಾ ಲಾಭಸ್ಥಾನದಲ್ಲಿದ್ದಾರೆ ತನ್ನ ಅಂತರ ದಶಾದಲ್ಲಿ ವಾಹನ ವಸ್ತ್ರ ಪಶು ಹಾಗೂ ಬಂಧುಗಳ ಸುಖ ಮಾತೃಪಿತೃ, ಸ್ತ್ರೀಸುಖ ಧನಾಗಮ ಮಿತ್ರ ಹಾಗೂ ಯಜಮಾನ (ನೌಕರಿಯಲ್ಲಿ) ದ್ವಾರಾ ಸರ್ವಸೌಖ್ಯ ಪ್ರಾಪ್ತಿ ನಿರ್ಬಲ ಚಂದ್ರ ದಶಾಧಿಪನಿಂದ 6, 12, ಸುಖನಾಶ ಸ್ಥಾನಭ್ರಂಶ ಶತ್ರು ವೃದ್ಧಿ ಹಾಗೂ ವಿರೋಧ ಇಷ್ಟಬಿಂದುಗಳೊಡನೆ ವಿರೋಧ.

ದ್ವಿತೀಯದ್ಯೂನ ನಾಥೆ ತು ದೇಹಾಲಸ್ಯಂ ಭವಿಷ್ಯತಿ।
ತದ್ದೋಷಶಮನಾರ್ಥ ಚ ತಿಲಹೋಮಾಧಿಕಂ ಚರೇತ್ ॥೫೦॥

ಗುಡಂ ಘೃತಂ ಚ ದಧ್ಯಾಕ್ತಂ ತಂಡುಲಂ ಚ ಯಥಾವಿಧಿ।
ಶ್ವೇತಾಂ ಗಾಂ ಮಹಿಷಿ ದದ್ಯಾದಾಯುರಾರೋಗ್ಯ ಲಬ್ಧ ಯೇ ॥೫೧॥

ಅದೆ ಚಂದ್ರ ದಶಾಧೀಶನಿಂದ 7, 2ರ ಅಧಿಪನಾಗಿದ್ದರೆ ಶನಿ ದಶಾ ಚಂದ್ರ ಅಂತರದಶಾ ಕಾಲದಲ್ಲಿ ಶಾರೀರಿಕ ಬಾಧಾ ಆಲಸ್ಯ ಆಧಿ ಕಾರಕನಾಗುತ್ತಾನೆ. ದೋಷ ಶಾಂತಿಗಾಗಿ ತಿಲಹೋಮ ಬೆಣ್ಣೆ, ತುಪ್ಪ, ಅಕ್ಕಿ (ಮೊಸರು) ಬಿಳಿ ಆಕಳು, ಎಮ್ಮೆ ಇವುಗಳನ್ನೆಲ್ಲ ದಾನ ರೂಪವಾಗಿ ಕೊಡುವರು. ಇದರಿಂದ ಆರೋಗ್ಯ ಆಯುಷ್ಯ ಲಾಭವಾಗುತ್ತದೆ.

## ಭೌಮಾಂತರ ದಶಾ ಫಲ

ಮಂದಸ್ಯಾಂತರ್ಗತೆ ಭೌಮೆ ಕೇಂದ್ರಲಾಭ ತ್ರಿಕೋಣಗೆ।
ತುಂಗೆ ಸ್ವಕ್ಷೇತ್ರಗೆ ವಾಪಿ ದಶಾದಿಪ ಸಮನ್ವಿತೆ ॥೫೩॥

ಲಗ್ನಾಧಿಪೇನ ಸಂಯುಕ್ತೆ ತ್ವಾದೌಸೌಖ್ಯಂ ಧನಾಗಮಃ।
ರಾಜ ಪ್ರೀತಿಕರಂ ಸೌಖ್ಯಂ ವಾಹನಾಂಬರ ಭೂಷಣಮ್ ॥೫೪॥

ಸೇನಾಪತ್ಯಂ ನೃಪಪ್ರೀತಿಃ ಕೃಗೋಧಾನ್ಯ ಸಂಪದಃ।
ನೂತನ ಸ್ಥಾನ ನಿರ್ಮಾಣಾ ಭ್ರಾತೃವರ್ಗೇಷ್ವಜಂ ಸುಖಮ್ ॥೫೫॥

ಕೇಂದ್ರ ತ್ರಿಕೋಣ ಲಾಭಸ್ಥಾನ ಉಚ್ಚ ಸ್ವಭವನದಲ್ಲಿ ಸ್ಥಿತ

ಮಂಗಳ ದಶೇಶನಾದ ಶನಿ ಹಾಗೂ ಲಗ್ನೇಶರ ಜತೆಗಿದ್ದರೆ ಶನಿ ದಶಾದಲ್ಲಿ ಮಂಗಳ ಅಂತರದಶಾ ಬಂದಾಗ ಸೌಖ್ಯ, ಧನಾಗಮ ರಾಜಪ್ರೇಮ ವಾಹನ ವಸ್ತ್ರ ಭೂಷಣ ಪ್ರಾಪ್ತಿ ಸೇನಾಧಿಪ ಪದ ಪ್ರಾಪ್ತಿ ರಾಜನ ಆದರ ಸೌಖ್ಯ ಧನಾಗಮ ರಾಜಪ್ರೇಮ ವಾಹನ ವಸ್ತ್ರಭೂಷಣ ಪ್ರಾಪ್ತಿ ಹೊಲ ಪಶು ಧಾನ್ಯ ಸಂಪತ್ತು ಹೆಚ್ಚಳ ಹೊಸಸ್ಥಾನ ನಿರ್ಮಾಣ ಅಣ್ಣತನ್ನ ತಮ್ಮಂದಿರಿಂದ ಇಷ್ಟಸಿದ್ಧಿ.

ನೀಚೆ ಚಾಸ್ತಂಗತೆ ಭೌಮೆ ಚಾಷ್ಟಮವ್ಯಯರಾಶಿಗೆ।
ಪಾಪದೃಷ್ಟಿಯುತೆ ವಾಪಿ ಧನಹಾನಿರ್ಭವಿಷ್ಯತಿ ॥೫೬॥

ಚೌರಾಹಿವ್ರಣಶಸ್ತ್ರಾದಿ ಗ್ರಂಥಿರೋಗಾದಿ ಪೀಡನಮ್।
ಭ್ರಾತೃಪಿತ್ರಾದಿ ಪೀಡಾ ಚ ದಾಯದ್ಯೈಃ ಕಲಹಸ್ತಥಾ ॥೫೭॥

ಚತುಷ್ಪಾಜ್ಜೀವಹಾನಿಶ್ಚ ಕುತ್ಸಿತಾನ್‌ಸ್ಯ ಭೋಜನಮ್ ।
ವಿದೇಶಗಮನಂ ಚೈವ ನಾನಾಮಾರ್ಗೆ ಧನವ್ಯಯಃ ॥೫೮॥

ಅಷ್ಟಮದ್ಯೂನನಾಥೆ ತು ದ್ವಿತೀಯ ಸ್ಥೆಥವಾ ಯದಿ ।
ಅಪಮೃತ್ಯುಭಯಂ ಚೈವ ನಾನಾಕಷ್ಟಂ ಪರಾಭವಃ ॥೫೯॥

ತದ್ದೋಷಪರಿಹಾರಾರ್ಥ ಶಾಂತಿಹೋಮಂ ಚ ಕಾರಯೇತ್।
ಕುರ್ಯಾದ್ ವೃಷಭದಾನಂ ಚ ಸರ್ವಾರಿಷ್ಟನಿವಾರಣಾಮ್ ॥೬೦॥

ಮಂಗಳ ನೀಚರಾಶಿ ಅಥವಾ ಲಗ್ನದಿಂದ 8, 12ರಲ್ಲಿ ಅಥವಾ ಅಸ್ತಂಗತನಾಗಿದ್ದರೆ ಅಥವಾ ಪಾಪಯುಕ್ತ, ದೃಷ್ಟನಾಗಿದ್ದರೆ, ಅಂತರದಶಾದಲ್ಲಿ ಧನಹಾನಿ, ಕಳ್ಳಸರ್ಪ, ವ್ರಣ ವಸ್ತ್ರಗ್ರಹಣಾದಿ ರೋಗದ ಪೀಡೆ, ಅಣ್ಣ, ತಂದೆಗೆ ಕಷ್ಟ ದಾಯಾದಿಗಳೊಡನೆ ಜಗಳ, ಪಶುಹಾನಿ ಕದನ್ನ ಭೋಜನ ವಿದೇಶ ಯಾತ್ರಾ ಅನೇಕ ತರಹ ಧನಕ್ಷಯ.

ಅದೇ ಮಂಗಳ ಅಷ್ಟಮ ಅಥವಾ ಸಪ್ತಮಾಧಿಪರೊಡನೆ ಅಥವಾ ಧನ ಸ್ಥಾನಗತನಾದರೆ ಅಂತರದಶಾ ಕಾಲದಲ್ಲಿ ಧನಹಾನಿ ಕಳ್ಳಸರ್ಪಾದಿ ತೊಂದರೆಗಳೊಂದಿಗೆ ಅಪಮೃತ್ಯು ಭಯ ಅನೇಕ ಕಷ್ಟ ಪರಾಜಯ ಉಂಟಾಗುತ್ತದೆ. ದೋಷಪರಿಹಾರಕ್ಕಾಗಿ ಶಾಂತಿ ಹೋಮ ಎತ್ತಿನ ದಾನ ಮಾಡಬೇಕಾಗುವುದು।

## ರಾಹೂಂತರ್ದಶಾ ಫಲಃ

ಮಂದಸ್ಯಾಂತರ್ಗತೆ ರಾಹೌ ಕಲಹಶ್ಚ ಮನೋವ್ಯಥಾ।
ದೇಹಪೀಡಾ ಮನಸ್ತಾಪಃ ಪುತ್ರದ್ವೇಷೋ ಗದಾದ್ ಭಯಮ್ ॥೬೧॥

ಅರ್ಥವ್ಯಯೋ ರಾಜಭಯಂ ವಿರೋಧಃ ಸ್ವಜನಾದಿ ಭಿಃ।
ವಿದೇಶಗಮನಂ ಚೈವ ಗೃಹಕ್ಷೇತ್ರಾದಿನಾಶನಮ್ ॥೬೨॥

ಶನಿ ಮಹಾದಶಾ ರಾಹ್ವ ಅಂತರದಶಾ ಕಾಲದಲ್ಲಿ ಕಲಹ, ಮಾನಸಿಕ ಕಷ್ಟ ಶರೀರ ಪೀಡೆ ಮನಸ್ತಾಪ ಮಕ್ಕಳ ದ್ವೇಷ ರೋಗ ಭಯ, ಧನಕ್ಷಯ ಸ್ವಜನ ವಿರೋಧ ವಿದೇಶಗಮನ ಗೃಹ ಕ್ಷೇತ್ರಾದಿಗಳ ವಿನಾಶಕಾರಕ.

ಲಗ್ನಾಧಿಪೇನ ಸಂಯುಕ್ತೆ ಯೋಗಕಾರತ ಸಂಯತೆ।
ಸ್ವೋಚ್ಚ ಸ್ವಕ್ಷೇತ್ರಗೆ ಕೇಂದ್ರೆ ದಾಯೇ ಶಾಲ್ಲಾಭರಾಶಿಗೆ ॥೬೩॥

ಆದೌಸೌಖ್ಯಂ ಧನಾವಾಪ್ತಿಂ ಗೃಹಕ್ಷೇತ್ರಾದಿ ಸಂಪದವ್ ।
ದೇವ ಬ್ರಾಹ್ಮಣ ಭಕ್ತಿಂ ಚ ತೀರ್ಥ ಯಾತ್ರಾದಿಕಂ ವದೇತ್ ॥೬೪॥

ಚತುಷ್ಪಾಜ್ಜೀವಲಾಭಃ ಸ್ಯಾದ್ ಗೃಹೆ ಕಲ್ಯಾಣವರ್ಧನವ್ ।
ಮಧ್ಯೆ ತು ರಾಜ ಭೀತಿಶ್ಚ ಪುತ್ರ, ಮಿತ್ರಾದಿ ರೋಧನವ್ ॥೬೫॥

ಅದೆ ರಾಹು ಸ್ವೋಚ್ಚ ಸ್ವಭವನ ದಶಾಪತಿಯಿಂದ ಕೇಂದ್ರ ಅಥವಾ ಲಾಭ ರಾಶಿಯಲ್ಲಿ ಸ್ಥಿತನಾಗಿದ್ದರೆ, ಹಾಗೂ ಲಗ್ನೇಶ ಅಂತೆ ಯೋಗಕಾರಕ (ಲಗ್ನಕ್ಕೆ) ಗ್ರಹದಿಂದ ಯುತನಾಗಿದ್ದರೆ ಅಂತರ ದಶಾಕಾಲದಲ್ಲಿ ಅಂದ ಆರಂಭದಲ್ಲಿ ಸೌಖ್ಯ ಧನಾಗಮ ಗೃಹ ಕ್ಷೇತ್ರ, ಅನ್ಯ ಸಂಪತ್ತು ಲಾಭ ದೇವಬ್ರಾಹ್ಮಣ ಭಕ್ತಿ ತೀರ್ಥ ಯಾತ್ರಾ ಪಶುಲಾಭ ಮನೆಯಲ್ಲಿ ಕಲ್ಯಾಣ ವೃದ್ಧಿ, ಅಂತರ ದಶಾಮಧ್ಯದಲ್ಲಿ

ಮೇಷೆಗತೆಥ ಕನ್ಯಾಯಾಂ ಕುಲೀರೆ ವೃಶಭೆ ತಥಾ।
ಮೀನ ಕೋದಂಡಸಿಂಹೇಷು ಗಜಾಂತೈಶ್ವರ್ಯ ಮಾದಿಶೇತ್ ॥೬೭॥

ರಾಜಸವ್ಮಾನ ಭೂಷಾಪ್ತಿರ್ಮದುಲಾಂಬರಜಂ ಸುಖವ್ ।
ದ್ವಿಸಪ್ತಮಾಧಿಪೈರ್ಯಕ್ತೆ ದೇಹ ಬಾಧಾ ಭವಿಷ್ಯತಿ ॥೬೮॥

ಮೃತ್ಯುಂಜಯಂ ಭಾಗದಾನಂ ವೃಷದಾನಂ ತಥೈವ ಚ ।
ಕಾರ ಯೇತ್ ವೈ ಭಕ್ತಿಪೂರ್ವಸರ್ವಸಂಪತ್ ಸುಖಾವಹವ್ ॥೬೯॥

ರಾಹು ಮೇಷ ಕನ್ಯಾ, ಕರ್ಕ, ಮೀನ, ಧನು, ಸಿಂಹ ಈ ರಾಶಿಗಳಲ್ಲಿದ್ದ ತನ್ನ ಅಂತರದಶಾದಲ್ಲಿ ಕೊನೆಯವರೆಗೆ ಐಶ್ವರ್ಯ ಸಕಲ ಐಶ್ವರ್ಯ ರಾಜಸನ್ಮಾನ ಭೂಷಣ ಕೆಂಪು ವಸ್ತ್ರ ಸುಖ ಪ್ರದಾನ ಮಾಡುತ್ತಾನೆ. ಅದೆ ರಾಹು ದ್ವಿತೀಯೇಶ ಅಥವಾ ಸಪ್ತಮೇಶ ನೋಡನಿದ್ದರೆ ಶಾರೀರಿಕ ಬಾಧೆ, ಒಟ್ಟು ದೋಷ ಪರಿಹಾರಕ್ಕೆ ಮೃತ್ಯುಂಜಯ ಜಪ ಎತ್ತಿನ ದಾನ ಹೋತ (ಭಾಗ)ದ ದಾನ ಭಕ್ತಿ ಪೂರ್ವಕ ಮಾಡಿದರೆ ಸರ್ವಥಾ ಸುಖ ಸಂಪತ್ತು ದಾಯಕವಾಗಿರುತ್ತದೆ.

## ಗುರ್ವಂತರದಶಾ ಫಲ

ಮಂದಸ್ಯಾಂತರ್ಗತೆ ಜೀವೆ ಕೇಂದ್ರೆ ಲಾಭ ತ್ರಿಕೋಣಗೆ ।
ಲಾಭಾಧಿಪೇನ ಸಂಯುಕ್ತೆ ಸೋಚ್ಚೆ ಸ್ವಕ್ಷೇತ್ರಗೇ ಪಿ ವಾ ॥೭೦॥

ಸರ್ವಕಾರ್ಯಾರ್ಥಸಿದ್ಧಿಃ ಸ್ಯಾಚ್ಶೋಭನಂ ಭವತಿ ಧ್ರುವವ್ ।
ಮಹಾರಾಜ ಪ್ರಸಾದೇನ ಧನವಾಹನ ಭೂಷಣ ವ್ ॥೭೦॥

ಸಮ್ಮಾನಂ ಪ್ರಭುಸಮ್ಮಾನಂ ಲಾಭಃ ಸ್ಯಾತ್ ಪ್ರಿಯವಾಸಸಾಮ್ ।
ದೇವತಾಗುರು ಭಕ್ತಿಶ್ಚ ವಿದ್ಯುಜ್ಜನಸಮಾಗಮಃ ॥೭೨॥

ದಾರ ಪುತ್ರಾದಿಲಾಭಶ್ಚ ಪುತ್ರ ಕಲ್ಯಾಣ ವೈಭವಮ್ ।

ಸ್ವೋಚ್ಚ ಸ್ವಕ್ಷೇತ್ರ ಕೇಂದ್ರ ತ್ರಿಕೋಣ ಅಥವಾ ಲಾಭ ಸ್ಥಾನದಲ್ಲಿ ಸ್ಥಿತ ಗುರು ಲಗ್ನೇಶಯುಕ್ತನಾಗಿ ಶನಿ ಮಹಾದಶಾದೇ ಅಂತರ ದಶಾ ಧೀಶನಾಗಿದ್ದಾಗ ಎಲ್ಲಿ ತರಹದ ಕೀರ್ತಿಭಾಜ್ಯತೆ ಸರ್ವ ಕಾರ್ಯಸಿದ್ಧಿ ಸರ್ವಥಾ ಶುಭ ರಾಜಕೃಪಾದಿಂದ ಧನವಾಹನ ಭೂಷಣ ಪ್ರಾಪ್ತಿ ಜನತೆ ಹಾಗೂ ರಾಜರಿಂದ ಸನ್ಮಾನ ಪ್ರಿಯವಸ್ತ್ರ ಪ್ರಾಪ್ತಿ ದೇವತಾ ಗುರುಗಳಲ್ಲಿ ಭಕ್ತಿ ವಿದ್ವಾನ ಜನರ ಸಂಗತಿ ಸ್ತ್ರೀ ಪುತ್ರ ಆದಿ ಲಾಭ ಪುತ್ರ ಕಲ್ಯಾಣ.

ಷಷ್ಠಾಷ್ಟಮವ್ಯಯೇ ಜೀವೆ ನೀಚೆ ವಾ ಪಾಪ ಸಂಯುತೆ ॥೭೩॥

ಆತ್ಮಾಸಂಬಂಧಿಮರಣಂ ಧನಧಾನ್ಯ ವಿನಾಶನಮ್ ।
ರಾಜಸ್ಥಾನೆ ಜನದ್ವೇಷಃ ಕಾರ್ಯಹಾನಿರ್ಭವಿಷ್ಯತಿ ॥೭೪॥

ವಿದೇಶಗಮನಂ ಚೈವ ಕುಷ್ಠರೋಗಾದಿ ಸಂಭವಃ ।
ದಾಯೋಶಾತ್ ಕೇಂದ್ರ ಕೋಣೆ ವಾ ಧನೆ ವಾ ಲಾಭೆಗೆ ಪಿ ವಾ ॥೭೫॥

ವಿಭವೋ ದಾರಸೌಭಾಗ್ಯಂ ರಾಜಶ್ರೀ ಧನ ಸಂಪದಃ ।
ಭೋಜನಾಂಬರ ಸೌಖ್ಯಂ ಚ ದಾನ ಧರ್ಮಾದಿಕಂ ಭವೇತ್ ॥೭೬॥

ಬ್ರಹ್ಮ ಪ್ರತಿಷ್ಠಾ ಸಿದ್ಧಿಶ್ಚ ಕ್ರತುಕರ್ಮಭವಂ ಫಲಮ್ ।
ಅನ್ನದಾನಂ ಮಹಾಕೀರ್ತಿರ್ವೇದಾಂತ ಶ್ರವಣಾ ದಿ ಕಮ್ ॥೭೭।

ಸಪಾಪ ಗುರು ನೀಚ ಅಥವಾ 6, 8, 12ರಲ್ಲಿದ್ದು ಶನಿ ದಶಾದಲ್ಲಿ ಗುರು ಅಂತರದಶಾ ಕಾಲದಲ್ಲಿ ಸಂಬಂಧಿ ಜನ ಮೃತ್ಯು ಧನಧಾನ್ಯ ಕ್ಷಯ ರಾಜದ್ವಾರ (ಕಾರ್ಯಾಲಯ) ಜನರ ವಿರೋಧ ಕಾರ್ಯಚ್ಯುತಿ ವಿದೇಶ ಯಾತ್ರಾ ಕುಷ್ಠಾದಿ ರೋಗೋತ್ಪತ್ತಿ ಈ ಫಲಗಳು ದೋರೇತರ ಗುರು ದಶಾಪತಿಯಿಂದ ಕೇಂದ್ರ ತ್ರಿಕೋಣದಲ್ಲಿ ಹಾಗೂ ಧನಸ್ಥಾನದಲ್ಲಿದ್ದರೆ, ಲಾಭದಲ್ಲಿರಲು, ಅಂತರದಶಾ ಐಶ್ವರ್ಯ ತಂದು ಕೊಡುವದಲ್ಲಿದೆ ಸೌಭಾಗ್ಯ, ರಾಜ ಲಕ್ಷ್ಮೀ ಧನಸಂಪತ್ತಿಯ ಪ್ರಾಪ್ತಿ ನೀಡುತ್ತದೆ. ಭೋಜನ ವಸ್ತ್ರ ಸುಖ, ದಾನಧರ್ಮಾಚರಣೆ ವೇದಾಂತ ಜ್ಞಾನ ಯಜ್ಞ ಕರ್ಮಫಲ ಅನ್ನದಾನ ಮಹಾಯಶ ವೇದಾಂತ ಶ್ರವಣ ಫಲವನ್ನೇ ನೀಡುತ್ತದೆ.

ದಾಯೋಶಾತ್ ಷಷ್ಟರಂಧ್ರೆ ವಾ ವ್ಯಯೇ ವಾ ಬಲವರ್ಜಿತೆ ।
ಬಂಧುದ್ವೇಷೊ ಮನೋದುಃಖಂ ವಿಗ್ರಹಃ ಪದವಿ ಚ್ಯುತಿಃ ॥೭೮॥

ಭೋಜನಂ ಕರ್ಮಹಾನೀ ರಾಜದಂಡಾದ್ಧನ ಕ್ಷಯಃ ।
ಕಾರಗ್ರಹ ಪ್ರವೇಶಶ್ಚ ಪುತ್ರದರಾದಿ ಪೀಡನಮ್ ॥೭೯॥

ದ್ವಿತೀಯ ದ್ಯೂನನಾಥೆ ತು ದೇಹ ಬಾಧಾ ಮನೋರುಜಾ ।
ಆತ್ಮ ಸಂಬಂಧಿಮರಣಾ ಭವಿಷ್ಯತಿ ನ ಸಂಶಯಃ ॥೮೦॥

ತದ್ದೋಷಪರಿಹಾಶಾರ್ಥ ಶಿವಸಾಹಸ್ರಕಂ ಜಪೇತ್ ।
ಸ್ವರ್ಣದಾನಂ ಪ್ರಕುರ್ವಿತ ಹ್ಯಾರೋಗ್ಯಂ ಭವತಿ ಧ್ರುವಮ್ ॥೮೧॥

ನಿರ್ಭಲ ಗುರು ದಶಾನಾಥನಿಂದ 6, 8, 12ರಲ್ಲಿ ಸ್ಥಿತನಾಗಿ ಶನಿ ಮಹಾದಶಾದಲ್ಲಿ ತನ್ನ ಅಂತರದಶಾದಲ್ಲಿ ಬಂಧು ದ್ವೇಷ ಮನೋದುಃಖ, ಕಲಹ, ಸ್ಥಾನ ಚ್ಯುತಿಗೆ ಕಾರಣನಾಗುವನು ಹಾಗೂ ಕದನ್ನ ಭೋಜನ, ಕಾರ್ಯ ಹಾನಿ ರಾಜದಂಡ ಮೂಲಕ ಧನ ಕ್ಷಯಂಲ್ಯಾ ಕಾರಣನಾಗುವನು. ಕಾರಗ್ರಹ ಪ್ರದೇಶ ಶಾರೀರಿಕ ಬಾಧೆ ಮಾನಸಿಕ ಕಷ್ಟ ಹಾಗೂ ಸಂಬಂಧಿಗಳ ಮರಣಕ್ಕೂ ಕಾರಣೀಭೂತನಾಗುವನು.

ಈ ದೋಷ ಪರಿಹಾರಕ್ಕೆ ಶಿವಸಹಸ್ರನಾಮ ಜಪ ಸುವರ್ಣ (ಬಂಗಾರ) ದಾನ ಮಾಡುವುದರಿಂದ ನಿಶ್ಚಿತ ಆರೋಗ್ಯ ಐಶ್ವರ್ಯ ಪ್ರಾಪ್ತಿಯಾಗುತ್ತದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಶನಿ ದಶಾಂತರ ದಶಾಫಲಾಧ್ಯಾಯಃ ಸಮಾಪ್ತಃ

# ಅಥ ಬುಧ ದಶಾಂತರ್ದಶಾಧ್ಯಾಯಃ

## ಬುಧ ಮಹಾದಶಾ

### ಬುಧಾಂತರ್ದಶಾ

**ಪರಾಶರ ಉವಾಚ:**

ಮುಕ್ತಾವಿದ್ರುಮಲಾಭಶ್ಚ ಜ್ಞಾನ ಕರ್ಮ ಸುಖಾದಿಕಮ್।
ವಿದ್ಯಾಮಹತ್ವಂ ಕೀರ್ತಿಶ್ಚ ನೂತನ ಪ್ರಭುದರ್ಶನಮ್ ॥೧॥

ವಿಭವೋ ದಾರಪುತ್ರಾದಿ-ಪಿತೃಮಾತೃಭವಂ ಸುಖಮ್ ।
ತುಂಗಗೇಸ್ತೇಥ ನೀಚಸ್ಥೆ ಷಷ್ಠಾಷ್ಟವ್ಯಯರಾಶಿಗೆ ॥೨॥

ಪಾಪಯುಕ್ತೇಥವಾ ದೃಷ್ಟೆ ಧನಧಾನ್ಯ ಪಶುಕ್ಷಯಃ।
ಆತ್ಮಬಂದು ವಿರೋಧಶ್ಚ ಶೂಲ ರೋಗಾದಿ ಸಂಭವಃ ॥೩॥

ರಾಜಕಾರ್ಯಕಲಾಪೇನ ವ್ಯಾಕುಲತ್ವಂ ಪ್ರಜಾಯತೆ।
ದ್ವಿತೀಯ ದ್ಯೂನಗಾಥೆ ತು ದಾರಕ್ಲೇಶೋ ಭವಿಷ್ಯತಿ ॥೪॥

ಆತ್ಮಸಂಬಂಧಿ ಮರಣು ಭವೇದೇವ ನ ಸಂಶಯಃ ।
ತದೋಪಪರಿಹಾರಾರ್ಥ ವಿಷ್ಣುಸಾಹಸ್ರಕಂ ಜಪೇತ್ ॥೫॥

**ಪರಾಶರರು ಹೇಳಿದರು– (ಹೇ ಮೈತ್ರೇಯ)**

ಉಚ್ಚಾದಿ ಶುಭ ಸ್ಥಾನದಲ್ಲಿ ಬುಧನಿದ್ದರೆ ಬುಧದಶಾಂತರ ದಶಾ-ಮುತ್ತು ರತ್ನಾದಿ ಲಾಭ ಜ್ಞಾನಕರ್ಮ ಸುಖ ಪ್ರಾಪ್ತಿ ವಿದ್ಯಾದ ಮಹತ್ವಫಲ ಯಶ ಹೊಸ ರಾಜದರ್ಶನ ಐಶ್ವರ್ಯ ಸ್ತ್ರೀಪುತ್ರ ತಂದೆ ತಾಯಿಯ ಸುಖ. ಅದೇ ಬುಧ ನೀಚಸ್ಥ ಅಥವಾ ಅಸ್ತಂಗತನಾಗಿದ್ದರೆ ಅಥವಾ 6, 8, 12ರಲ್ಲಿ ಪಾಪಯುತ ಅಥವಾ ದೃಷ್ಟ ನಾಗಿದ್ದರೆ ಧನಧಾನ್ಯ ಪಶು ಆದಿಸಂಪತ್ತು ವಿನಾಶವಾಗುತ್ತದೆ. ಆತ್ಮೀಯ ಜನರೊಡನೆ ವಿರೋಧ ಅಥವಾ ಸಪ್ತಮೇಶನಾಗಿದ್ದರೆ ಸ್ತ್ರೀಗೆ ಕಷ್ಟ ಸಂಬಂಧಿಗಳ ಮರಣ ದೋಷ ಪರಿಹಾರಕ್ಕೆ ವಿಷ್ಣು ಸಹಸ್ರನಾಮ ಜಪ ಶ್ರೇಯಸ್ಕರ.

## ಕೇತು ಅಂತರದಶಾ ಫಲ

ಬುಧಸ್ಯಾಯಿತರ್ಗತೇ ಕೇತೌ ಲಗ್ನಾತ್ ಕೇಂದ್ರ ತ್ರಿಕೋಣ ಗೆ ।
ಶುಭಯುಕ್ತೆ ಶುಭೈರ್ದೃಷ್ಟೌ ಲಗ್ನಾಧಿಪಸಮುನ್ವಿತೆ ॥೬॥

ಯೋಗ ಕಾರಕ ಸಂಬಂದೆ ದಾಯೋಶಾತ್ ಕೇಂದ್ರ ಲಾಭಗೆ ।
ದೇಹಸೌಖ್ಯಂ ಧನಾಢ್ಯತ್ವಂ ಬಂಧು ಸ್ನೇಹಾದಿಕಂ ಭವೇತ್ ॥೭॥

ಚತುಷ್ಪಾಜ್ಜೀವಲಾಭಃ ಸ್ಯಾತ್ ಸಂಚಾರೇಣ ಧನಾಗಮಃ ।
ವಿದ್ಯಾಕೀರ್ತಿಪ್ರಸಂಗಶ್ಚ ಸಮಾನಂ ಪ್ರಭುದರ್ಶನಮ್ ॥೮॥

ಭೋಜನಾಂಬರ ಸೌಖ್ಯಂ ಸ್ಯಾದಾದೌ ಮಧ್ಯೆ ಸುಖಾವಹಮ್ ।

ಲಗ್ನದಿಂದ ಕೇಂದ್ರ ತ್ರಿಕೋಣ ಆದಿ ಶುಭಸ್ಥಾನಗಳಲ್ಲಿ ಸ್ಥಿತನಾದ ಕೇತು ಶುಭಗ್ರಹಯುತ ಅಥವಾ ದೃಷ್ಟ ಲಗ್ನೇಶನ ಜತೆಗೆ ಅಥವಾ ದಶಾಧಿಪನಿಂದ ಕೇಂದ್ರ ಲಾಭ ಸ್ಥಾನಗಳಲ್ಲಿದ್ದು, ಯೋಗಕಾರಕ ಗ್ರಹ ಸಂಬಂಧವಿದ್ದರೆ ಬುಧ ಧಶಾಕೇತು ಅಂತರ ದಶಾವಲ್ಲಿ ಶರೀರ ಸುಖ ಧನಾಢ್ಯತ್ವ ಬಂಧುಸ್ನೇಹ ಪಶುಲಾಭ ಭ್ರಮಣ ದಿಂದ ಲಾಭ ವಿದ್ಯೆಯಿಂದ ಲಾಭ ಕೀರ್ತಿಯೂ ನಾಲ್ಕುಕಡೆ ಪಸರಿಸುವಿಕೆ, ಮಾನಸಹಿತ ರಾಜದರ್ಶನ, ಭೋಜನ ವಸ್ತ್ರದ ಸುಖ, ಈ ಫಲ ಅಂತರದಶಾರಂಭ ಮಧ್ಯದ ಲ್ಲಿಯೇ ದೊರೆಯುತ್ತದೆ.

ದಾಯೋಶಾದಷ್ಟಮೇ ಕಿಂವಾ ವ್ಯಯೇ ವಾ ಪಾಪಸಂಯುತೆ ॥೯॥

ವಾಹನಾತ್ ಪತನಂ ಚೈವ ಪುತ್ರಕ್ಲೇಶಾದಿ ಸಂಭವೇತ್।
ಚೌರಾದಿರಾಜ ಭೀತಶ್ಚ ಪಾಪಕರ್ಮರತಿಃ ಸದಾ ॥೧೦॥

ವೃಶ್ಚಿಕಾದಿ ವಿಷಾದ್ ಭೀತಿರ್ನೀಚೈಃ ಸಹ ಕಲಿಸ್ತಥಾ।
ತೋಕ ರೋಗಾದಿ ದುಃಖಂ ಚ ಭವೆನ್ನಿಚಾದಿ ಸಂಗತಿಃ ॥೧೧॥

ದ್ವಿತೀಯದ್ಯೂನ ನಾಥೆ ತು ದೇಹಜಾಡ್ಯಂ ಭವಿಷ್ಯತಿ।
ತದ್ದೋಷ ಪರಿಹಾರಾರ್ಥ ಛಾಗದಾನಂ ತು ಕಾರಯೇತ್ ॥೧೨॥

ದಶಾಪತಿಯಿಂದ 6, 8, 12ರಲ್ಲಿ ಸಪಾಪ ಕೇತು ಇಬ್ಬರೆ ವಾಹನದಿಂದ ಬಿದ್ದು, ಗಾಯ, ಪುತ್ರಕ್ಲೇಶ ವಿಷಭಯ ನೀಚರೊಡನೆ ಕಲಹ ಶೋಕ ರೋಗ ದುಃಖ ನೀಚಸಂಗತಿ. ಅದೇ ಕೇತು ದಶೇಶನಿಂದ 2, 7ರಲ್ಲಿದ್ದರೆ ಶರೀರದಲ್ಲಿ ಜಡತೆ ದೋಷ ಪರಿಹಾರಾರ್ಥ ಹೋತಿನ (ಛಾಗ) ದಾನದಿಂದ ದೋಷ ಪರಿಹಾರ.

## ಶುಕ್ರಾಂತರ್ದಶಾ ಫಲಃ

ಸೌಮ್ಯಸ್ಯಾಂತರ್ಗತೆ ಶುಕ್ರೆ ಕೇಂದ್ರೆ ಲಾಭೆ ತ್ರಿಕೋಣಗೆ ।
ಸತ್ಕಥಾಪುಣ್ಯ ಧರ್ಮಾದಿ ಸಂಗ್ರಹಃ ಪುಣ್ಯಕರ್ಮ ಚ ॥೧೩॥

ಮಿತ್ರಪ್ರಭುವಶಾದಿಷ್ಟಂ ಕ್ಷೇತ್ರಲಾಭಃ ಸುಖಂ ಭವೇತ್ ।
ದಶಾಧಿಪಾತ್ ಕೇಂದ್ರಗತೆ ತ್ರಿಕೋಣೆ ಲಾಭೆಗೆ ಪಿ ವಾ ॥೧೪॥

ತತ್ಕಾಲೆ ತು ಶ್ರೀಯಃ ಪ್ರಾಪ್ತಿ ರಾಜಶ್ರೀ ಧನಸಂಪದಃ ।
ವಾಪಿಕೂಪ ತಡಾಗಾದಿ ದಾನಧರ್ಮಾಧಿ ಸಂಗ್ರಹಃ ॥೧೫॥

ವ್ಯವಸಾಯಾತ್ ಫಲಾಧಿಕ್ಯಂ ಧನಧಾನ್ಯ ಸಮೃದ್ಧಿಯಃ ।

ಕೇಂದ್ರ ತ್ರಿಕೋಣ ಲಾಭ ಸ್ಥಾನಾದಿ ಶುಭಸ್ಥಾನಗೆತ ಶುಕ್ರ (ಶುಕ್ರಗ್ರಹ ಯುತ ದೃಷ್ಟ) ಬುಧದಶಾದಲ್ಲಿ ಶುಕಾಂತರ ದಶಾ. ಸತ್ಕಥಾಶ್ರವಣ ಪುಣ್ಯ ಧರ್ಮಾದಿ ಕಾರ್ಯ ಪ್ರವೃತ್ತ ಮಿತ್ರ ಹಾಗೂ ಅಧಿಕಾರಿಯಿಂದ ಇಷ್ಟಸಿದ್ಧಿ ಕ್ಷೇತ್ರ ಲಾಭ ಸುಖ. ಆದೇ ಶುಕ್ರ ದಶೇಶನಿಂದ ಕೇಂದ್ರ ತ್ರಿಕೋಣ ಲಾಭಸ್ಥಾನ ಆದಿ ಶುಭ ಸ್ಥಾನ ಗಳಲ್ಲಿದ್ದರೆ ತತ್ಕಾಲದಲ್ಲಿ ಲಕ್ಷ್ಮೀ ಪ್ರಾಪ್ತಿ ರಾಜನಿಂದ ಧನಸಂಪತ್ತಿನ ಲಾಭ. ಕೆರೆ ಬಾವಿ, ಕೊಳ್ಳ ಆದಿ ನಿರ್ಮಾಣ, ದಾನಧರ್ಮದಲ್ಲಿ ಪ್ರವೃತ್ತ ವ್ಯಾಪಾರದಲ್ಲಿ ಅಧಿಕ ಲಾಭ.

ದಾಯೋಶಾತ್ ಷಷ್ಠರಂಧ್ರಸ್ಥೆ ವ್ಯಯೇವಾ ಬಲವರ್ಜಿತೆ ॥೧೬॥

ಹೃದ್‌ರೋಗೋ ಮಾನಹಾನಿಶ್ಚ ಜ್ವರಾತೀಸಾರ ಪೀಡನಮ್ ।
ಆತ್ಮಬಂಧುವಿಯೋಗಶ್ಚ ಸಂಸಾರೆ ಸ್ಯಾನ್ನ ಸಂಶಯಃ ॥೧೭॥

ಆತ್ಮಕಷ್ಟಂ ಮನಸ್ತಾಪ ಆಪದ್ದಾಯಾದತೋ ಭವೇತ್ ।
ದ್ವಿತೀಯ ದ್ಯೂನನಾಥೆ ತು ಹ್ಯಾಪಮೃತ್ಯುರ್ಭ ವಿಷ್ಯತಿ ॥೧೮॥

ತದ್ದೋಷ ಪರಿಹಾರಾರ್ಥ ದುರ್ಗಾದೇವಿಜಪಂ ಚರೇತ್ ।

ದಶಾಪತಿಯಿಂದ 6, 8, 12ರಲ್ಲಿ ನಿರ್ಬಲ ಶುಕ್ರನಿದು ಅವನ ಅಂತರದಶಾದಲ್ಲಿ ಹೃದಯ ರೋಗ ಮಾನಹಾನಿ ಜ್ವರ ಅತಿಸಾರ ಪೀಡೆ ಆತ್ಮೀಯ ಬಂಧುಗಳ ವಿಯೋಗ ಸ್ವ ಆತ್ಮಕಷ್ಟ ಮಾನಸಿಕ ಸಂತಾಪ ದಾಯಾದಿಗಳಿಂದ ಅಪತ್ತು ಅದೇ ಶುಕ್ರ ದಶೇಶನಿಂದ 2, 7ರ ಅಧಿಪನಾಗಿದ್ದರೆ ಅಪಮೃತ್ಯು ಈ ದೋಷ ಪರಿಹಾರಕ್ಕೆ ದುರ್ಗಾ ಜಪಾ ಶ್ರೇಯಸ್ಕರ

## ಸೂರ್ಯಾಂತರ ದಶಾಫಲ

ಸೌಮ್ಯಸ್ಯಾಂತರ್ಗತೆ ಸೂರ್ಯೇ ಸೊಚ್ಚೆ ಸ್ವಕ್ಷೇತ್ರ ಕೇಂದ್ರಗೆ ॥೧೯॥

ತ್ರಿಕೋಣೆ ಧನಲಾಭೆ ತು ತುಂಗಾಂಶೆ ಸ್ವಾಂಶಗೇ ಪಿ ವಾ ।
ರಾಜಪ್ರಸಾದ ಸೌಭಾಗ್ಯಂ ಮಿತ್ರಪ್ರಭುವಶಾತ್ ಸುಖಮ್ ॥೨೦॥

ಭೂಮ್ಯಾತ್ಮಜೇನ ಸಂದೃಷ್ಟೆ ಚಾದೌ । ಭೂಲಾಭ ಸಂಭವಃ ।
ಲಗ್ನಾಧಿಪೇನ ಸಂದೃಷ್ಟೆ। ಬಹುಸೌಖ್ಯಂ ಧನಾಗಮಃ ॥೨೧॥

ಗ್ರಾಮಭೂಮ್ಯಾದಿಲಾಭಶ್ಚ ಭೋಜನಾಂಬರಯೋಃ ಸುಖಮ್ ।

ಸ್ವೋಚ್ಚ ಸ್ವಭವನ ಕೇಂದ್ರ ತ್ರಿಕೋಣ ಧನ ಹಾಗೂ ಲಾಭ ಸ್ಥಾನದಲ್ಲಿ, ಉಚ್ಚಾಂಶ ಅಥವಾ ಸ್ವನವಾಂಶದಲ್ಲಿ ಬುಧ ದಶಾ, ಸೂರ್ಯಾಂತರದಶಾ ಇದ್ದಾಗ ರಾಜಕೃಪಾದಿಂದ ಸೌಭಾಗ್ಯೋದಯ ಮಿತ್ರ ಹಾಗೂ ಯಜಮಾನನಿಂದ ಸುಖ ಮಂಗಳ (ಭೂಮಿಪುತ್ರ) ದೃಷ್ಟಿ ಸೂರ್ಯನ ಮೇಲಿದ್ದಾಗ ಭೂಮಿ ಲಾಭ ಲಗ್ನೇಶನ ದೃಷ್ಟಿಯಿದ್ದಾಗ ಬಹಳ ಸುಖ, ಧನಾಗಮ, ಗ್ರಾಮ ಭೂಮಿ ಆದಿ ಲಾಭ ಭೋಜನ ವಸ್ತ್ರ ಸುಖ.

ತನೋ ರಂಧ್ರೆ ವ್ಯಯೋ ವಾಪಿ ಶನ್ಯಾರ ಫಣಿ ಸಂಯಿತೆ ॥೨೨॥

ದಾಯೋಶಾದ್ರಿಪುರಂಧಸ್ಥೆ ವ್ಯಯೋ ವಾ ಬಲವರ್ಜಿತೆ ।
ಚೌರಾಗ್ನಿಶಸ್ತ್ರಪೀಡಾ ಚ ಪಿತ್ತಧಿಕ್ಯಂ ಭವಿಷ್ಯತಿ ॥೨೩॥

ಶಿರೋರುಂಗಮ್ಯಾನಸ್ತಾಪ ಇಷ್ಟಬಂಧು ವಿಯೋಜನಮ್ ।
ದ್ವಿತೀಯಸಪ್ತಮಾಧೀಶೆ ಹ್ಯಾಪಮ್ಯಾತ್ಯುರ್ಭವಿಷ್ಯತಿ ॥೨೪॥

ತದ್ದೋಶ ಪರಿಹಾರಾರ್ಥ ಶಾಂತಿಂ ಕುರ್ಯಾದ್ಯಥಾ ವಿಧಿ ।
ಸೂರ್ಯಾಪ್ರೀತಿಕರಿ ಧೇನುಂ ದದ್ಯಾಚ್ಚೈವ ಹಿರಣ್ಯಕಮ್ ॥೨೫॥

ಲಗ್ನದಿಂದ 6, 12ರಲ್ಲಿ ಶನಿ, ಮಂಗಳ, ರಾಹು ಯುಕ್ತಸೂರ್ಯನಿದ್ದರೆ ಹಾದ ದಶಾಧಿಪತಿಯಿಂದ 6, 8, 12ರಲ್ಲಿ ನಿರ್ಬಲನಾಗಿದ್ದರೆ ಅಂತರದಶಾದಲ್ಲಿ ಕಳ್ಳರು ಅಗ್ನಿ ಶಸ್ತ್ರದಿ ಪೀಡೆ. ಪಿತ್ತಾಧಿಕ್ಯದಿಂದ ತೊಂದರೆ ಶಿರೋರೋಗ ಮನಸ್ತಾಪ ಹಾಗೂ ಇಷ್ಟಮಿತ್ರ ವಿಯೋಗ ಅದೆ ಸೂರ್ಯ 2 ಅಥವಾ 7ರ ಅಧಿಪನಾದರೆ ಅಪಮೃತ್ಯು ಈ ದೋಷ ಶಾಂತಿಗಾಗಿ ಸೂರ್ಯನಿಗೆ ಶಾಂತಿ ಹಾಗೂ ಅವನಿಗೆ ಪ್ರಿಯವಾದ ಧೇನು (ಆಕಳು) ಬಂಗಾರ ದಾನದಿಂದ ಶುಭ.

## ಚಂದ್ರಾಂತರ್ದಶಾ ಫಲ

ಸೌಮ್ಯಾಸ್ಯಾಂತರ್ಗತೆ ಚಂದ್ರೇ ಲಗ್ನಾತ್ ಕೇಂದ್ರ ತ್ರಿಕೋಣ ಗೆ ।
ಸ್ವೋಚ್ಚೇ ವಾ ಸ್ವಕ್ಷೇತ್ರೇ ವಾಪಿ ಗುರುದೃಷ್ಟಿ ಸಮನ್ವಿತೆ ॥೨೬॥

ಯೋಗಸ್ಥಾನಾಧಿಪತ್ಯೇನ ಯೋಗ ಪ್ರಾಬಲ್ಯ ಮಾದಿಶೇತ್ ।
ಸ್ತ್ರೀಲಾಭಂ ಪುತ್ರಲಾಭಶ್ಚ ವಾಹನಾಂಬರ ಭೂಷಣಮ್ ॥೨೭॥

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವಗ ಸ್ಥಿತಿ ಚಂದ್ರ

ಗುರುದೃಷ್ಟಿಯುಕ್ತನಾಗಿದ್ದರೆ ಸ್ವಯಂ ಯೋಗಕಾರಕನಾಗಿದ್ದರೆ ಯೋಗ ಪ್ರಾಬಲ್ಯ ಹೇಳುವುದು. ಬುಧ ದಶಾದಲ್ಲಿ ಚಂದ್ರನ ಅಂತರದಶಾ ಸ್ತ್ರೀಪುತ್ರ ವಸ್ತ್ರಭೂಷಣ ಸುಖ ನೀಡುತ್ತದೆ ಹಾಗೂ

ನೂತನಾಲಯಲಾಭಂ ಚ ನಿತ್ಯಂ ಮಿಷ್ಟಾನ್ನ ಭೋಜನಮ್ ।
ಗೀತವಾದಯ ಪ್ರಸಂಗಂ ಚ ಶಾಸ್ತ್ರವಿದ್ಯಾಪರಿಶ್ರಮಮ್ ॥೨೮॥

ದಕ್ಷಿಣಾಂ ದಿ ಶ ಮಾಶ್ರುತ್ಯ ಪ್ರಯಾಣಾ ಚ ಭವಿಷ್ಯತಿ
ದ್ವಿಪಾಂತರಾದಿ ವಸ್ತ್ರಾಣಾಂ ಲಾಭಶ್ಚೈವ ಭವಿಷ್ಯತಿ ॥೨೯॥

ಮುಕ್ತಾವಿದ್ರುಮರತ್ನಾನಿ ಧೌತವಸ್ತ್ರಾದಿ ಮಾಪ್ನುಯಾತ್ ।

ಪೂರ್ವೋಕ್ತ ಶುಭ ಸ್ಥಾನಗಳಲ್ಲಿ ಚಂದ್ರನಿದ್ದಾಗ ಬುಧ ದಶಾ ಚಂದ್ರಾಂತರ ದಶಾಕಾಲದಲ್ಲಿ ಹೊಸ ಮನೆ ಲಾಭ, ನಿತ್ಯ ಮೃಷ್ಟಾನ್ನ ಭೋಜನ ಹಾಡು-ನೃತ್ಯಾದಿಗಳ ನೋಟ ಶ್ರವಣ, ವಿದ್ಯಾಶಾಸ್ತ್ರಗಳಲ್ಲಿ ಪರಿಶ್ರಮ ದಕ್ಷಿಣ ದಶಾದಲ್ಲಿ ಗಮನ, ದ್ವಿಪಾಂತರ ದಿನ ವಸ್ತ್ರಲಾಭ ಮತ್ತು ವಿದ್ರುಮಾದಿ ರತ್ನ ಧೋತ್ರ (ಪಂಚೆ) ಆದಿ ಪ್ರಾಪ್ತಿಯಾಗುತ್ತದೆ.

ನೀಚೌದಿಕ್ಷೇತ್ರ ಸಂಯುಕ್ತೇ ದೇಹಬಾಧಾ ಭವಿಷ್ಯತೆ ॥೩೦॥

ದಾಯೋಶಾತ್ ಕೇಂದ್ರಕೋಣಸ್ಥೆ ದುಶ್ಚಿಕ್ಯೆ ಲಾಭಗೇಪಿ ವಾ ।
ತದ್‌ಭುಕ್ತ್ಯಾದೌ ಪುಣ್ಯತೀರ್ಥಸ್ನಾನ ದೈವತದರ್ಶನಮ್ ॥೩೧॥

ಮನೋದೈರ್ಯಂ ಹೃದುತ್ಸಾಹೋಧನಲಾಭೋ ವಿದೇಶಾತ್ ।
ದಾಯೇಶಾತ್ ಷಷ್ಠರಂಧ್ರೆ ವಾ ವ್ಯಯೋ ವಾಪಾಪಸಂಯುತೆ ॥೩೨॥

ಚೌರಾಗ್ನಿ ನೃಪಭೀತಿಶ್ಚ ಸ್ತ್ರೀಸಂಗತಿ ವಶಾದ್ ಭವೇತ್ ।
ದುಷ್ಕೀರ್ತಿರ್ಧನಹಾನಿಶ್ಚ ಕೃಷಿಪಶ್ವಾದಿನಾಶನಮ್ ॥೩೩॥

ಚಂದ್ರ ನೀಚನಾಗಿ ಅಶುಭ ಕ್ಷೇತ್ರದಲ್ಲಿದ್ದರೆ ಶಾರೀರಿಕ ಕಷ್ಟ ದಶಾಧಿಪತಿಯಿಂದ ಕೇಂದ್ರ ತ್ರಿಕೋಣ ತೃತೀಯ ಏಕಾದಶದಲ್ಲಿದ್ದು ಅವನ ಅಂತರ ದಶಾಕಾಲದಲ್ಲಿ ಅದು ದಶಾರಂಭ ಪುಣ್ಯತೀರ್ಥಸ್ನಾನ, ದೇವದರ್ಶನ ಮನದಲ್ಲಿ ಧೀರತೆ ಹೃದಯ ವಿಚಾರ ಪೂರ್ಣವಾಗಿರುತ್ತದೆ. ವಿದೇಶದಿಂದ ಧನಾಗಮನವೂ ಉಂಟು. ಅದೇ ಚಂದ್ರ ದಶಾಧೀಶನಿಂದ 6, 8, 12ರಲ್ಲಿ ಪಾಪಯುಕ್ತನಾಗಿದ್ದರೆ ಕಳ್ಳ ಅಗ್ನಿರಾಜಭಯ ಸ್ತ್ರೀಸಂಗದಿಂದ ದುರ್ಯಶ ಹಾಗೂ ಧನಹಾನಿ. ಹೊಲ ಮನೆ, ಪಶು ಆದಿ ವಿನಾಶ.

ದ್ವಿತೀಯದ್ಯೂನನಾಥೆ ತು ದೇಹಬಾಧಾ ಭವಿಷ್ಯತೆ ।
ತದ್ದೋಷಪರಿಹಾರಾರ್ಥ ದುರ್ಗಾದೇವಿ ಜಪಂ ಚರೇತ್ ॥೩೪॥

ವಸ್ತ್ರದಾನಂ ಪ್ರಕುರ್ವಿತ, ಹ್ಯಾಯುವೃದ್ಧಿ ಸುಖಾನಾವಹಮ್ ।

ಬುಧ ದಶಾ ಚಂದ್ರಾಂತರ ದಶಾ, ಚಂದ್ರ 2, 7ರ ಅಧಿಪನಾಗಿದ್ದರೆ ಶಾರೀರಿಕ ಬಾಧೆ. ದೋಷ ಪರಿಹಾರಾರ್ಥ ದುರ್ಗಾದೇವಿ ಪೂಜೆಯಿಂದ ಆಯುರಾರೋಗ್ಯ ಸುಖ ದೊರೆಯುತ್ತದೆ.

## ಭೌಮಾಂತರ್ದಶಾಫಲ

ಸೌಮ್ಯಸ್ಯಾಂತರ್ಗತೆ ಭೌಮೆ ಲಗ್ನಾತ್ ಕೇಂದ್ರ ತ್ರಿಕೋಣಗೆ ॥೩೫॥

ಸ್ವೋಚ್ಚ ವಾ ಸ್ವಕ್ಷ್ರಗೆ ಚಾಪಿ ಲಗ್ನಾಧಿಪ ಸಮನ್ವಿತೆ ।
ರಾಜಾನುಗ್ರಹಶಾಂತಿಃ ಸಾದ್ ಗೃಹೆ ಕಲ್ಯಾಣ ಸಂಭವತಃ ॥೩೬॥

ಲಕ್ಷ್ಮೀಕಟಾಕ್ಷ ಚಿನ್ಹಾನಿ ನಷ್ಟರಾಜ್ಯರ್ಥಲಬ್ಧಯಃ
ಪುತ್ರೋತ್ಸವಾದಿ ಸಂತೋಷೊ ಗೃಹಂ ಗೋಧನ ಸಂಕುಲಮ್ ॥೩೭॥

ಗೃಹಕ್ಷೇತ್ರಾದಿಲಾಭಶ್ಚ ಗಜವಾಜಿ ಸಮನ್ವಯಃ ।
ರಾಜಪ್ರೀತಿಸ್ತಥಾ ಸೌಖ್ಯಂ ಸ್ತ್ರೀಯುಶ್ರಾತೀವ ಶೋಭನಮ್ ॥೩೮॥

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವನದಲ್ಲಿ ಲಗ್ನೇಶ ಯುಕ್ತ ಭೌಮಆದಿ ಬುಧ ದಶಾದಲ್ಲಿ ಮಂಗಳಂತರ ದಶಾ ಕಾಲದಲ್ಲಿ ರಾಜನ ಕೃಪೆಯಿಂದ ಸುಖ, ಶಾಂತಿ ಮನೆಯಲ್ಲಿ ಕಲ್ಯಾಣ ಲಕ್ಷ್ಮೀ ಆಗಮನ ಚಿಹ್ನೆ. ನಷ್ಟರಾಜ್ಯ ನಷ್ಟ ಧನ ದಲಆಬ. ಪುತ್ರೋತ್ಸವ ಪಶು-ಧನಪೂರ್ಣ ಮನೆ, ಹೊಲ, ಆಧಿಲಾಭ ಆನೆ, ಕುದುರೆಗಳ ಭರಭರಾಟೆ ರಾಜ ಪ್ರೀತಿ ಹಾಗೂ ಸ್ತ್ರೀಸೌಖ್ಯಂ.

ನೀಚ ಕ್ಷೇತ್ರ ಸಮಾಯುಕ್ತೆ ಹೃಷ್ಠಮೆ ವಾ ವ್ಯಯೋಪಿವಾ ।
ಪಾಪೈರ್ದೃಷ್ಟೇ ಯುತೆ ವಾಪಿ ದೇಹಪೀಡಾ ಮನೋವ್ಯಥಾ ॥೩೯॥

ಉದ್ಯೋಗಭಂಗೋ ದೇಶಾದೌ ಸ್ವಗ್ರಾಮೇ ಧಾನ್ಯನಾಶನಮ್ ।
ಗ್ರಂಥಿಶಸ್ತ್ರವ್ರಣಾದೀನಾಂ ಭಯಂ ತಾಪಜ್ವರಾದಿಕಮ್ ॥೪೦॥

ದಾಯೇಶಾತ್ ಕೇಂದ್ರಗೆ ಭೌಮೆ ತ್ರಿಕೋಣೆ ಲಾಭಗೆ ಪಿ ವಾ।
ಶುಭದೃಷ್ಟೆ ಧನಪ್ರಾಪ್ತಿರ್ದೇಹಸೌಖ್ಯಂ ಪ್ರಜಾಯತೆ ॥೪೭॥

ಪುತ್ರಲಾಭೊ ಯಶೋವೃದ್ಧಿ ರ್ಭ್ರಾತೃವರ್ಗೆ ಮಹಾಪ್ರಿಯಃ

ನೀಚ ಸ್ಥಾನಗಳಾದ 6, 12ರಲ್ಲಿ ಪಾಪಗ್ರಹಯುತ ಅಥವಾ ಪಾಪದೃಷ್ಟ ಭೌಮನಿದ್ದು ಬುಧನ ದಶಾಂತರ ದಶಾದಲ್ಲಿ (ಭೌಮ) ದೇಹಪೀಡೆ ಮನೋವ್ಯಥೆ ಉದ್ಯೋಗ ಕಳೆದುಕೊಳ್ಳುವಿಕೆ ವ್ಯಾಪಾರ ಹಾನಿ ದೇಶಗ್ರಾಮದಲ್ಲಿ ಧನ ಧಾನ್ಯ ನಾಶ, ಗಂಟಲ ಶಸ್ತ್ರವ್ರಣ. ಆದಿಭಯ ಹಾಗೂ ತಾಪಜ್ವರ ಸಂಭವ ದಶಾಪತಿಯಿಂದ ಕೇಂದ್ರ ತ್ರಿಕೋಣ, ಲಾಭಸ್ಥಾನ, ಶುಭಗ್ರಹಯರಿತ ದಸ್ಮನಾಗಿದ್ದರೆ ಮಂಗಳನ ಅಂತರದಶಾ ಧನಲಾಭಕರ ಶಾರೀರಿಕ ಸೌಖ್ಯದಾಯಕ ಪುತ್ರಲಾಭ ಯಶೋವೃದ್ಧಿ ದಾಯಕವಾಗಿರುತ್ತದೆ. ಅಣ್ಣತಮ್ಮರಲ್ಲಿ ಮಹಾಪ್ರಿಯನಾಗುವನು.

ದಾಯೋಶಾದ್ರಂ ಧೃಭಾವಸ್ಥೆ ವ್ಯಯೋ ವಾ ಪಾಪಸಂಯುತೆ ॥೪೨॥

ತದ್ ಭುಕ್ತ್ಯಾದೌ ಮಹಾಕ್ಲೇಶೆ ಭ್ರಾತೃವರ್ಗೆ ಮಹದ್ ಭಯಮ್ ।
ನೃಪಾಗ್ನಿ ಚೈರ ಭೀತಶ್ಚ ಪುತ್ರ ಮಿತ್ರವಿರೋಧನಮ್ ॥೪೩॥

ಆರಂಭೆ ಸ್ಥಾನ ವಿಭ್ರಂಶೋ ಮಧ್ಯೆ ಸೌಖ್ಯಂ ಧನಾಗಮಃ ।
ಅಂತೆ ತು ರಾಜಭೀತಿಃ ಸ್ಯಾತ್ ಸ್ಥಾನ ಭ್ರಂಶೋ ಹಥಾಪಿ ವಾ ॥೪೪॥

ದ್ವಿತೀಯ ದ್ಯೂನನಾಥೆ ತು ಹಾಪಮೃತ್ಯುಭಯಂ ಜಪಂ ಚರೇತ್
ವೃಷದಾನಂ ಪ್ರಕುರ್ವಿತ ಮೃತ್ಯುಂಜಯ ಜಪಂ ಜರೇತ್ ॥೪೫॥

ದಶಾಪತಿಯಿಂದ 8, 12 ಪಾಪಯುಕ್ತ ಮಂಗಳನ ಅಂತರದಶಾರಂಭದಲ್ಲಿ ಮಹಾನ್ ಕಷ್ಟ ಬಂಧುವರ್ಗದಲ್ಲಿ ಭಯ ರಾಜ ಅಗ್ನಿ ಕಳ್ಳರ ಭಯ ಪುತ್ರ ಮಿತ್ರ ವಿರೋಧ, ಆರಂಭದಲ್ಲಿ ಸ್ಥಾನ ಭ್ರಂಶ ಮಧ್ಯಸುಖ, ಧನಾಗಮ ಅಂತ್ಯದಲ್ಲಿ ರಾಜನಿಂದ ಭಯ ಸ್ಥಾನಚ್ಯುತಿ ಆದೇ ಮಂಗಳ 2, 7ರ ಅಧಿಪನಾದರೆ ಅಪಮೃತ್ಯು ಭಯ ದೋಷ ನಿವಾರಣೆಗೆ ಎತ್ತಿನ ದಾನ ಮೃತ್ಯುಂಜಯ ಜಪ ಶ್ರೇಯಸ್ಕರ.

## ರಾಹುಂತರ್ದಶಾ ಫಲ

ಬುಧಸ್ಯಾಂತರ್ಗತೆ ರಾಹೌ ಕೇಂದ್ರ ಲಾಭ ತ್ರಿಕೋಣಗೆ ।
ಕುಲೀರೆ ಘಾಟಿಗೆ ವಾಪಿ ಕನ್ಯಾಯಾಂ ವೃಷಭೆ ಪಿ ವಾ ॥೪೬॥

ರಾಜಸನ್ಮಾನ ಕೀರ್ತಿ ಚ ಪ್ರಚುರಂ ದ್ರವಿಣು ತಥಾ ।
ಪುಣ್ಯತೀರ್ಥ ಸ್ನಾನಲಾಭೊ ದೇವತಾದರ್ಶನಂ ತಥಾ ॥೪೭॥

ಇಷ್ಟಪೂರ್ತೆ ಚ ಮಹತೋ ಮಾನೋ ಲಾಭಃ ಸುವಾಸಸಃ।
ಭುಕ್ತ್ಯಾದೌ ದೇಹಪೀಡಾ ಚಾಷ್ಯಂತೆ ಸೌಖ್ಯಂ ವಿನಿರ್ದಿಶೆತ್ ॥೪೮॥

ಕೇಂದ್ರ ತ್ರಿಕೋಣ ಲಾಭ ಸ್ಥಾನ ಕರ್ಕ ಶನಿ ಕನ್ಯಾ ವೃಷಭ ಈ ರಾಶಿಯಲ್ಲಿ ರಾಹು ಇದ್ದು, ಬುಧನ ದಶಾ ರಾಹು ಅಂತರ ದಶಾಕಾಲದಲ್ಲಿ ರಾಜನಿಂದ ಆದರ ಸೂರ್ಯ ಸಾಕಷ್ಟು ದ್ರವ್ಯಲಾಭ ಪುಣ್ಯತೀರ್ಥ ಸ್ನಾನ ದೇವತಾರ್ದಾನ ಕೆರೆ ಆದಿ ನಿರ್ಮಾಣ ದೊಡ್ಡವರಿಂದ ಯಜ್ಞದಲ್ಲಿ ಸನ್ಮಾನ ವಸ್ತ್ರಲಾಭ ಅಂತರ ದಶಾರಂಭ ದಲ್ಲಿ ಶಾರೀರಿಕ ಕಷ್ಟ ಆದರೂ ಅಂತ್ಯದಲ್ಲಿ ಸೌಖ್ಯ.

ಅಷ್ಟಮ ವ್ಯಯರಾಶಿಷ್ಠೆ ತದ್‌ಭುಕ್ತೌ ಧನನಾಶನಮ್ ।
ಭುಕ್ತ್ಯಾದೌ ದೇಹಬಾಧಾ ಚಾರ್ಜೀರ್ಣವಾತ ಜ್ವರಾಮಯಾಃ ॥೪೯॥

ಲಗ್ನಾದುಪಚಯೇ ರಾಹೌ ಶುಭಗ್ರಹ ಸಮನ್ವಿತೆ ।
ರಾಜಸಂಲಾಪ ಸಂತೋಷೊ ನೂತನ ಪ್ರಭುದರ್ಶನಮ್ ॥೫೦॥

ದಾಯೋಶಾದಷ್ಟಮೆ ಕಿಂ ವಾ ವ್ಯಯಗೆ ಪಾಪಸಂಯುತೆ ।
ನಿಷ್ಠುರಂ ರಾಜಕಾರ್ಯಾಣಿ ಸ್ಥಾನಭ್ರಂಶೋಮಹದ್ ಭಯಂ ॥೫೧॥

ಬಂಧನಂ ರೋಗಪೀಡಾ ಚ ಸ್ತ್ರಿಯ ಬಂಧುವನೋವ್ಯಥಾ।
ಹೃದ್ರೋಗೋ ಮಾನಹಾನಶ್ಚ ಧನಹಾನಿರ್ಭವಿಷ್ಯತಿ ॥೫೨॥

ದ್ವಿತೀಯ ಸಪ್ತಮಷ್ಠೆ ವಾ ಹಾಪಮೃತ್ಯುರ್ಭ ವಿಷ್ಯತಿ ।
ತದ್ದೋಷ ಪರಿಹಾರಾರ್ಥ ದುರ್ಗಾಲಕ್ಷ್ಮೀ ಜಪಂ ಚರೇತ್ ॥೫೩॥

ಶ್ವೇತಾಂ ಗಾಂ ಮಹಿಷಿಂ ದದ್ಯಾದಾಯುರಾರೋಗ್ಯ ದಾಯಿನಿಮ್ ।

ಲಗ್ನದಿಂದ ಅಷ್ಟಮ ಅಥವಾ ಹನ್ನೆರಡನೇ ಮನೆಯಲ್ಲಿ ರಾಹು ಇದ್ದರೆ ಅವನು ಅಂತರದಶಾಕಾಲದಲ್ಲಿ ಧನನಾಶವನ್ನು ಉಂಟುಮಾಡುತ್ತಾನೆ. ಆರಂಭದಲ್ಲಿ ಶರೀರ ಬಾಧೆ, ಅಜೀರ್ಣ ವಾಚರೋಗ ಹಾಗೂ ಜ್ವರ ಉಂಟಾಗುತ್ತವೆ. ಲಗ್ನದಿಂದ

ಉಪಚಯ ಸ್ಥಾನ 3, 6, 10, 11ರಲ್ಲಿ ಶುಭಗ್ರಯುಕ್ತ ರಾಹು ಇದ್ದಾಗ, ರಾಜನ ಜತೆಗೆ ಸಲ್ಲಾಪದಲ್ಲಿ ಭಾಗ ಹಾಗೂ ಸಂತೋಷ ಹೊಸ ರಾಜರ ದರ್ಶನ ದಶಾ ನಾಥನಿಂದ 8, 12ರಲ್ಲಿ ಸಪಾಹ ರಾಹು ಇದ್ದರೆ ಅಂತರದಶಾ ಕಾಲದಲ್ಲಿ ಸಿಷ್ಮ ರತೆ, ರಾಜಕಾರ್ಯದಲ್ಲಿ ವಿಘ್ನ, ಸ್ಥಾನ ಭ್ರಂಶ, ಮಹಾಭಯ, ಬಂಧನ ಹಾಗೂ ರೋಗದಿಂದ ಕಷ್ಟ. ಆತ್ಮೀಯ ಬಂಧುಗಳೂ ಮಾನಸಿಕ ಕಷ್ಟ ಹೃದಯ ರೋಗ, ಮಾನಹಾನಿ, ಧನಕ್ಷಯವಾಗುತ್ತದೆ. ಅದೆ ರಾಹು 2,7ರಲ್ಲಿದ್ದರೆ ಅಪಮೃತ್ಯುಸಂಭವ ದೋಷ ಪರಿಹಾರಕ್ಕೆ ದುರ್ಗಾ, ಲಕ್ಷ್ಮೀ ಜಪ, ಬಿಳಿ ಆಕಳು ಹಾಗೂ ಎಮ್ಮೆ ದಾನದಿಂದ ದೋಷ ಶಾಂತಿಕಾರಕ.

## ಗುರ್ವಂತರ್ದಶಾ ಕಾಲ

ಬುಧಸ್ಯಾಂತರ್ಗತೆ ಜೀವೆ ಲಗ್ನಾತ್ ಕೇಂದ್ರ ತ್ರಿಕೋಣಗೆ ॥೩೪॥

ಸೋಚ್ಚೆ ವಾ ಸ್ವಕ್ಷೆಗೆ ವಾಪಿ ಲಾಭೆ ವಾ ಧನ ರಾಶಿಗೆ ।
ದೇಹ ಸೌಖ್ಯಂ ಧನಪ್ರಾಪ್ತಿ ರಾಜಪ್ರೀತಿಸ್ತ ದೈವ ಚ ॥೩೫॥

ವಿವಾಹೋತ್ಸವಕಾರ್ಯಾಣಿ ನಿತ್ಯಂ ಮೃಷ್ಟಾನ್ನ ಭೋಜನಮ್ ।
ಗೋಮಹಿಷ್ಯಾದಿಲಾಭಶ್ಚ ಪುರಾಣಶ್ರವಣಾಧಿಕಮ್ ॥೩೬॥

ದೇವತಾಗುರು ಭಕ್ತಿಶ್ಚ ದಾನಧರ್ಮ ಸುಖಾದಿಕಮ್ ।
ಯಜ್ಞಕರ್ಮ ಪ್ರವೃದ್ಧಿಶ್ಚ ಶಿವಪೂಜಾಫಲಂ ತಥಾ ॥೩೭॥

ಲಗ್ನದಿಂದ ಕೇಂದ್ರ ತ್ರಿಕೋಣ ಸೋಚ್ಚ ಸ್ವಭವನ ಲಾಭ ಅಥವಾ ಧನರಾಶಿ (ದ್ವಿತೀಯ)ಯಲ್ಲಿ ಗುರು ಇದ್ದಾಗ ಬುಧ ದಶಾ ಗುರು ಅಂತರದಶಾಕಾಲ, ಶರೀರ ಸುಖ ಧನಪ್ರಾಪ್ತಿ ರಾಜನಿಂದ ಪ್ರೇಮ, ವಿವಾಹ ಉತ್ತಮ ಆದಿ ಶುಭ ಕಾರ್ಯ, ನಿತ್ಯ ಮೃಷ್ಟನ್ನ ಭೋಜನ, ಆಕಳು, ಎಮ್ಮೆ ಆದಿ ಪಶು ಧನಪ್ರಾಪ್ತಿ ಪುರಾಣಾದಿ ಶ್ರವಣ ದೇವತಾ ಹಾಗೂ ಗುರುಗಳಲ್ಲಿ ಭಕ್ತಿ ದಾನ ಧನ ಸುಖ ಪ್ರಾಪ್ತಿ ಯಜ್ಞ ಕರ್ಮ ಪ್ರವೃತ್ತಿ ಹಾಗೂ ಶಿವಪೂಜನದ ಫಲ ಪ್ರಾಪ್ತಿ.

ನೀಚೆ ವಾಸ್ತಂಗತೆ ವಾರಿರಂಧ್ರವ್ಯಯಗತೇಪಿ ವಾ ।
ಶನ್ಯಾರಪಿಕ್ಷಿತಯುತೆ ಕಲಹೊ ರಾಜಭೀಃ ಸಹ ॥೩೮॥

ಚೌರಾದಿತೋ ದೇಹಪೀಡಾ ಪಿತೃಮಾತೃವಿನಾಶನಮ್
ಮಾನಹಾನಿ ರಾಜದಂಡೋ ಧನಹಾನಿಸ್ತ ಥೈವ ಚ ॥೩೯॥

ವಿಷಾಹಿಜ್ವರಪೀಡಾ ಚ ಕೃಷಿಗೋಭೂಮಿನಾಶನಮ್ ।

ಆದೆ ಗುರು (ಬುಧ ದಶಾ ಗುರು ಅಂತರದಶಾಗುರು) 6, 8, 12ರಲ್ಲಿ ಅಥವಾ ಅಸ್ತಂಗತನಾಗಿ ಶನಿ, ಮಂಗಳಯುತನಾಗಿ ಅಥವಾ ದೃಷ್ಟನಾಗಿದ್ದರೆ ರಾಜನೊಡನೆ ಕಲಹ ಕಳ್ಳರಿಂದ ಶಾರೀರಿಕ ಕಷ್ಟ. ಪಿತೃಮಾತೃಕ್ಷಯ ಮಾನ ಹಾನಿ ರಾಜದಂಡ ಧನನಾಶ, ವಿಷಸರ್ಪ, ಜ್ವರದಿಂದ ಪೀಡೆ, ಕೃಷಿ ಆಕಳು, ಭೂಮಿಯ ವಿನಾಶ.

ದಾಯೇಶಾತ್ ಕೇಂದ್ರಕೋಣೆ ವಾ ಲಾಭೆ ವಾ ಬಲ ಸಂಯುತೆ ॥೬೦॥

ಬಂಧುಪುತ್ರ ಹೃದುತ್ಸಾಹಃ ಶುಭಂ ಚಾರ್ಥ ಸಮನ್ವಿತಮ್ ।
ಪಶುವೃದ್ಧಿಯುತರ್ತೋಲಾಭ ಸ್ಯಾನ್ನದಾನಾದಿಕಂ ಫಲಮ್ ॥೬೦॥

ದಾಯೇಶಾತ್ ಷಷ್ಠರಂಧ್ರೆ ವಾ ವ್ಯಯೇ ವಾ ಬಲವರ್ಜಿತೆ ।
ಅಂಗತಾಪಶ್ಚ ವೈಕಲ್ಯಂ ದೇಹಬಾಧಾ ಭವಿಷ್ಯತಿ ॥೬೨॥

ಕಲತ್ರಬಂಧಂ ವೈಷಮ್ಯಂ ರಾಜಕೋಪೋ ಧನಕ್ಷಯಃ ।
ಅಕಸ್ಮಾತ್ ಕಲಹಾದ್ ಭೀತಿಃ ಪ್ರಸಾದೋ ರಾಜವಿಗ್ರಹಃ ॥೬೩॥

ದಶಾಪತಿಯಿಂದ ಕೇಂದ್ರ ತ್ರಿಕೋಣ ಅಥವಾ ಲಾಭ ಸ್ಥಾನದಲ್ಲಿ ಸಬಲ ಗುರು ಇದ್ದು ಅಂತರ ದಶಾಕಾಲದಲ್ಲಿ ಬುಧ ದಶಾ ಬಂಧು ಪುತ್ರರಿಂದ ಹೃದಯೋತ್ಸಾಹ, ಧನ ಪ್ರದ ಕಲ್ಯಾಣ ಪಶುವೃದ್ಧಿಯ ಶುಭಲಾಭ, ಅನ್ನದಾನ ಆದಿ ಶುಭ ಫಲ.

ದಶಾಪತಿಯಿಂದ ನಿರ್ಬಲ ಗುರು 6, 8, 12ರಲ್ಲಿ ಶಾರೀರಿಕ ತ್ರಾಸಿನಿಂದ ಜ್ವರ ವಿಕಲತಾ ಶಾರೀರಿಕ ಕಷ್ಟ, ಸ್ತ್ರೀಪುತ್ರಾದಿಗಳಿಂದ ವಿಷಮತೆ (ವಿರೋಧ) ರಾಜ ಕೋಪ ಧನನಾಶ, ಒಮ್ಮೆಂದೊಮ್ಮೆಲೆ ಜಗಳ, ಅಸಮಾಧಾನ ರಾಜ ವಿಗ್ರಹದ ದುಷ್ಫಲ ಪ್ರಾಪ್ತಿ.

ದ್ವಿತೀಯ ಸಪ್ತಮಸ್ಥೆ ವಾ ದೇಹ ಬಾಧಾ ಭವಿಷ್ಯತಿ ।
ತದ್ದೋಷ ಪರಿಹಾರಾರ್ಥ ಶಿವಸಾಹಸ್ರಕಂ ಜಪೇತ್ ॥೬೪॥

ಗೋ ಹಿರಣ್ಯಾದಿದಾನೋ ಸರ್ವಾರಿಷ್ಟಂ ವ್ಯಪೋಹತಿ ।

2, 7ರದಲ್ಲಿ ಗುರು ತನ್ನ ಅಂತರ ದಶಾಕಾಲದಲ್ಲಿ ಶಾರೀರಿಕ ಬಾಧಕ ನಾಗುತ್ತಾನೆ. ಈ ದೋಷ ಪರಿಹಾರಕ್ಕೆ ಶಿವಸಹಸ್ರನಾಮ ಜಪ ಆಕಳು ಬಂಗಾರ ದಾನ ಸರ್ವಕಷ್ಟ ನಾಶಕವಾಗಿ ಶ್ರೇಯಸ್ಕರವಾಗಿದೆ.

## ಶನ್ಯಂತರ್ದಶಾ ಫಲ

ಸೌಮ್ಯಸ್ಯಾಂತರ್ಗತೆ ಮುಂದೆ ಸ್ವೋಚ್ಚೆ ಸ್ವಕ್ಷೇತ್ರ ಕೇಂದ್ರಗೆ ॥೬೫॥

ತ್ರಿಕೋಣ ಲಾಭಗೆ ವಾಪಿ ಗೃಹೆ ಕಲ್ಯಾಣವರ್ಧನಮ್ ।
ರಾಜ್ಯಲಾಭಂ ಮಹೋತ್ಸಾಹಂ ಗೃಹಂ ಗೋಕುಲಸಂಕುಲಮ್ ॥೬೬॥

ಭವ್ಯಸ್ಥಾನ ಫಲ ವ್ಯಾಪ್ತಿಂ ತೀರ್ಥ ಸ್ನಾನಾದಿಕಂ ವದೇತ್

ತನ್ನ ಉಚ್ಚ ರಾಶಿ ಸ್ಥಾನ ತನ್ನ ಮನೆ ಕೇಂದ್ರ ತ್ರಿಕೋಣ ಅಥವಾ ಲಾಭ ಸ್ಥಾನದಲ್ಲಿ ಶನಿಯಿದ್ದು, ಬುಧ ದಶಾಂತರದಶಾಧೀಶನಾಗಿ ಶನಿ ರಾಜ್ಯಲಾಭದಲ್ಲಿ ಕಲ್ಯಾಣವನ್ನು ಉಂಟುಮಾಡುವನು ಉತ್ಸಾಹದಾಯಕಮ್, ಗೋಸಂಕುಲ ವೃದ್ಧಿ ಕಾರಕನು ಸುಂದರ ಸ್ಥಾನ ಪ್ರಾಪ್ತಿಯನ್ನು ನೀಡುವನು ಹಾಗೂ ನಾನಾ ತೀರ್ಥ ಸ್ನಾನಾದಿಗಳ ಫಲವೀಯುವನು.

ರಂಧ್ರೇಥವಾ ವ್ಯಯೋ ಮುಂದೆ ದಾಯೋಶಾದ್‌ತಥೈವ ಚ ॥೬೭॥

ಅರಾತಿದುಃಖ ಬಾಹುಲ್ಯಂ ದಾರ ಪುತ್ರಾದಿ ಪೀಡನಮ್
ಬುದ್ಧಿಭ್ರಂಶೋ ಬಂಧುನಾಶಃ ಕರ್ಮನಾಶೋಮನೋವ್ಯಥಾ ॥೬೮॥

ವಿದೇಶಗಮನಂ ಚೈವ ದುಷ್ಪಸ್ವಪ್ನಾವಲೋಕನಮ್ ।
ದ್ವಿತೀಯದ್ಯೂನನಾಥೆ ತು ಹಾಪಮೃತ್ಯುರ್ಭವಿಷ್ಯತಿ ॥೬೯॥

ತದ್ದೋಷಪರಿಹಾರಾರ್ಥ ಮೃತ್ಯುಂಜಯಜಪಂ ಚರೇತ್
ಕೃಷ್ಣಾಂಗಾಂ ಮಹಿಷಿಂ ದದ್ಯಾದಾಯುರಾರೋಗ್ಯದಾಯಿನೀಮ್ ॥೭೦॥

ದಶೇಶನಿಂದ 6, 12ರಲ್ಲಿ ಶನಿ ಇದ್ದರೆ ಅಂತರದಶಾ ಕಾಲದಲ್ಲಿ ಶತ್ರುಗಳಿಂದ ಕಷ್ಟ. ಸ್ತ್ರೀಪುತ್ರಾದಿಗಳಿಂದ ಕಷ್ಟ, ಬುದ್ಧಿ ಭ್ರಂಶ ಬಂಧುಕ್ಷಯ ಕರ್ಮನಾಶ ಮಾನಸಿಕ ವ್ಯಥಾ ವಿದೇಶಯಾತ್ರಾ ಕೆಟ್ಟ ಕನಸು ಕಾಣುವಿಕೆ, ಅದೇ ಶನಿ 2, 7ರ ಸ್ವಾಮಿಯಾಗಿದ್ದರೆ ಅಪಮೃತ್ಯು ಈ ದೋಷನಿವಾರಣೆಗೆ ಕಪಿಲೆ (ಕರಿ ಆಕಳು)ಯನ್ನು ದಾನವಾಗಿ ಅಥವಾ ಎಮ್ಮೆಯನ್ನು ದಾನವಾಗಿ ನೀಡಿದರೆ ಕಷ್ಟಪರಿಹಾರ ಹಾಗೂ ಆಯುರಾರೋಗ್ಯ ಭಾಗ್ಯ ದೊರಕುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ
ಬುಧದಶಾಂತರ್ದಶಾಧ್ಯಾಯಃ ಸಮಾಪ್ತಃ

# ಅಥ ಕೇತು ದಶಾಂತರ್ದಶಾಧ್ಯಾಯಃ

## ಕೇತು ಮಹಾದಶಾ

### ಕೇತು ಅಂತರದಶಾ

ಪರಾಶರ ಉವಾಚ:

ಕೇಂದ್ರ ತ್ರಿಕೋಣ ಲಾಭೇ ವಾ ಧ್ವಜೇ ಲಗ್ನಾಧಿಪಾನ್ವಿತೇ
ಭಾಗ್ಯಕರ್ಮಸುಸಂಬಂಧೇ ವಾಹನೇಶ ಸಮಾನ್ವಿತೇ ॥೧॥

ತದ್‌ಭುಕ್ತೌ ಧನಧಾನ್ಯದೇಃ ಸಂಲಾಭಶ್ಚ ಚತುಷ್ಪದಾವ್ ।
ಪುತ್ರದಾರಾದಿಸೌಖ್ಯಂ ಚ ರಾಜ ಪ್ರೀತರ್ಮನೋರು ಜಾ ॥೨॥

ಗ್ರಾಮ ಭೂಮ್ಯಾದಿ ಲಾಭಶ್ಚ ಗ್ರಹಂ ಗೋಕುಲ ಸಂಕುಲವ್ ।

ಪರಾಶರರು ಹೇಳಿದರು– (ಹೇ ಮೈತ್ರೇಯ)

ಲಗ್ನೇಶ ಯುಕ್ತಕೇತು ಕೇಂದ್ರ ತ್ರಿಕೋಣ ಲಾಭಸ್ಥಾನದಲ್ಲಿ ಸ್ಥಿತನಾಗಿ ವಾಹನೇಶ (4)ನ ಜತೆಗಿದ್ದರೆ ಹಾಗೂ ಧರ್ಮೇಶ ಕರ್ಮೇಶರ ಸಂಬಂಧಿ ಹೊಂದಿದ್ದರೆ ಕೇತು ದಶಾ ಕೇತು ಅಂತರದಶಾದಲ್ಲಿ ಧನ ಧಾನ್ಯ ಪಶು ಲಾಭೆ ಸ್ತ್ರೀಸುಖ, ರಾಜಕೃಪಾ, ಆದರೂ ಮಾನಸಿಕ ಕಷ್ಟ ಗ್ರಾಮ ಭೂಮಿ ಆದಿಲಾಭ ಗೋಧನ ಪೂರ್ಣ ಮನೆ.

ನೀಚಾಸ್ತಖೇ ಟಸಂಯುಕ್ತೇ ಹಾಷ್ಟಮೆ ವ್ಯಯಗೇಪಿ ವಾ ॥೩॥

ಹೃದ್ರೋಗೊ ಮಾನಹಾನಿಶ್ಚ ಧನಧಾನ್ಯ ಪಶುಕ್ಷಯಃ
ದಾರಾಪುತ್ರಾದಿಪೀಡಾ ಚ ಮನಶ್ಚಂಚಲ್ಯವೇವ ಚ ॥೪॥

ಅದೇ ಕೇತು ನೀಚನಾಗಿ ಅಥವಾ ಅಸ್ತಂಗತನಾಗಿದ್ದ ಗ್ರಹಯುಕ್ತನಾಗಿದ್ದರೆ 8, 12ರಲ್ಲಿದ್ದರೆ ಅಂತರದಶಾ ಕಾಲದಲ್ಲಿ ಹೃದಯರೋಗ ಮಾನಹಾನಿ ಧನಧಾನ್ಯ ಪಶುಗಳ ನಾಶ ಸ್ತ್ರೀಪುತ್ರರಿಗೆ ಕಷ್ಟ ಮಾನಸಿಕ ಚಂಚಲತಾದಿ ಫಲಗಳು.

ದ್ವಿತೀಯ ದ್ಯೂನನಾಥೇನ ಸಂಬಂಧೆ ತತ್ರ ಸಂಸ್ಥಿತೇ ।
ಅನಾರೋಗ್ಯಂ ಮಹತ್ಕಷ್ಟಂ ವಿಯೋಗಶ್ಚಾತ್ಮ ಬಂಧುಭಿಃ ॥೫॥

ತದ್ದೋಷಪರಿಹಾರಾರ್ಥ ದುರ್ಗಾದೇವಿ ಜಪಂ ತಥಾ ।
ಮೃತ್ಯುಂಜಯ ಜಪಂ ಕುರ್ಯಾದಾಯರಾರೋಗ್ಯವರ್ಧಕಮ್ ॥೬॥

2, 7ರ ಸ್ವಾಮಿಯಿಂದ ಕೇತು ಸಂಬಂಧ ಹೊಂದಿ ಅಥವಾ 2, 7ರಲ್ಲಿ ಕೇತು ಇದ್ದು, ಅವನ ದಶಾಂತರ ದಶಾ ಕಾಲದಲ್ಲಿ ಅನಾರೋಗ್ಯ ಮಹಾಕಷ್ಟ ಬಂಧುಗಳ ವಿಯೋಗ, ಈ ದೋಷ ಪರಿಹಾರಕ್ಕಾಗಿ ದುರ್ಗಾದೇವಿ ಜಪಂ ತಾರಕ ಅಥವಾ ಮೃತ್ಯುಂಜಯ ಜಪಾದಿಕಗಳಿಂದ ಶ್ರೇಯಸ್ಕರ.

## ಶುಕ್ರಾಂತರ್ದಶಾಫಲ

ಕೇತೋರಂತರ್ಗತೆ ಶುಕ್ರೆ ಸ್ವೋಚ್ಚೆ ಸ್ವಕ್ಷೇತ್ರ ಸಂಯುತೆ।
ಕೇಂದ್ರ ತ್ರಿಕೋಣ ಲಾಭೆ ವಾ ರಾಜ್ಯನಾಥೆನ ಸಂಯುತೆ ॥೭॥

ರಾಜಪ್ರೀತಿಂ ಚಸೌಭಾಗ್ಯಂ ರಾಜತೋಂಬರ ಸಂಕುಲಮ್ ।
ತತ್ಕಾಲೆ ಶ್ರೀಯಮಾಪ್ನೋತಿ ಭಾಗ್ಯಕರ್ಮೆಶ ಸಂಯುತೆ ॥೮॥

ನಷ್ಟರಾಜ್ಯಧನಪ್ರಾಪ್ತಿಂ ಸುಖವಾಹನ ಮುತ್ತಮಮ್ ।
ಸೇತು ಸ್ನಾನಾಧಿಕಂ ಚೈವ ದೇವತಾ ದರ್ಶನಂ ಮಹತ್ ॥೯॥

ಮಹಾರಾಜ ಪ್ರಸಾದೇನ ಗ್ರಾಮಭೂಮ್ಯಾದಿಕಾಗಮಃ ।

ತನ್ನುಚ್ಚ ತನ್ನರಾಶಿ, ಕೇಂದ್ರ ತ್ರಿಕೋಣ ಲಾಭಸ್ಥಾನ ಸ್ಥಿತನಾದ ಶುಕ್ರದಶಮೇಶ (ರಾಜ್ಯೆಶ) ಸಹಿತನಾಗಿದ್ದರೆ ಕೇತು ದಶಾ ಶುಕ್ರಾಂತರ ದಶಾದಲ್ಲಿ ರಾಜ ಪ್ರಸನ್ನತಾ ಸೌಭಾಗ್ಯೋದಯ, ರಾಜನಿಂದ ವಸ್ತ್ರಾದಿಪ್ರಾಪ್ತಿ. ಭಾಗ್ಯೇಶ ಕರ್ಮೇಶನೊಡನಿದ್ದರೆ ತತ್ಕಾಲದಲ್ಲಿ ಲಕ್ಷ್ಮೀ ಪ್ರಾಪ್ತಿ ನಷ್ಟರಾಜ್ಯ ಅಥವಾ ನಷ್ಟಧನ ಪ್ರಾಪ್ತಿ. ಉತ್ತಮ ವಾದ ವಾಹನ ಸೌಖ್ಯ ದೇವದರ್ಶನದ ಕೃಪೆಯಿಂದ ಗ್ರಾಮಭೂಮಿ ಆದಿಲಾಭ.

ದಾಯೇಶಾತ್ ಕೇಂದ್ರಕೋಣೆ ವಾದುಶ್ಚಿಕ್ಯೆ ಲಾಭಗೇ ಪಿ ವಾ ॥೧೦॥

ದೇಹಾರೋಗ್ಯಂ ಶುಭಂ ಚೈವಗೃಹೆ ಕಲ್ಯಾಣ ಶೋಭನಮ್ ।
ಭೋಜನಾಂಬರಭೂಷಾಪ್ತಿರಪಾಪ್ತಿ ರಥದೋಲಾಯೋಃ ॥೧೧॥

ದಶಾಧಿಪನಿಂದ ಕೇಂದ್ರ ತ್ರಿಕೋಣದಲ್ಲಿ ಅಥವಾ 3, 10ರಲ್ಲಿ ಶುಕ್ರನಿದ್ದರೆ ಅಂತರದಶಾ ಕಾಲ ಶಾರೀರಿಕ ಆರೋಗ್ಯ ಮನೆಯಲ್ಲಿ ಸರ್ವವಿಧ ಕಲ್ಯಾಣ, ಭೋಜನ ಭೂಷಣದ ಪ್ರಾಪ್ತಿ ಹಾಗೂ ರಥ ಪಲ್ಲಕ್ಕಿಯ ಲಾಭವಾಗುತ್ತದೆ.

ದಾಯೇಶಾದ್ರಿಪುರಂ ಧ್ರಸ್ಥೆ ವ್ಯಯೇ ವಾ ಪಾಪಸಂಯುತೆ
ಅಕಸ್ಮಾತ್ ಕಲಹ ಶ್ಚೈವ ಪಶುಧಾನ್ಯಾದಿ ಪೀಡನವ್ ॥೧೨॥

ನೀಚಸ್ಥ ಖೇಟಸಂಯುಕ್ತೆ ಲಗ್ನಾತ್ ಪಷ್ಠಾಷ್ಟ ರಾಶಿಗೆ
ಸ್ವಬಂಧು ಜನ ವೈಷಮ್ಯಂ ಶಿರೋಕ್ಷಿವ್ರಣಾಪೀಡನವ್ ॥೧೩॥

ಹೃದ್ರೋಗಂ ಮಾನಹಾನಿಂ ಚ ಧನಧಾನ್ಯ ಪಶುಕ್ಷಯವ್ ।
ಕಲತ್ರಪುತ್ರಪೀಡಯಾಃ ಸಂಚಾರಂ ಚ ವದೇದ್ ಬುಧಃ ॥೧೪॥

ದಶಾಪತಿಯಿಂದ 6, 8, 12ರಲ್ಲಿ ಸಪಾಪ ಶುಕ್ರನಿದ್ದರೆ ಅಂತರ ದಶಾಕಾಲದಲ್ಲಿ ಅಕಸ್ಮಾತ್ ಕಲಹ ಪಶುಧಾನ್ಯಾದಿ ಕ್ಷಯ, ಅದೆ ಶುಕ್ರ ನೀಚಗತನಾದರೆ ಅಥವಾ ನೀಚಗತ ಗ್ರಹದ ಜತೆಗಿದ್ದರೆ ಅಥವಾ ಲಗ್ನದಿಂದ 6, 8ರಲ್ಲಿದ್ದರೆ ಅಂತರ ದಶಾ ಆತ್ಮೀಯ ಬಂಧುನಾಶ ವೈಶಮ್ಯ ಶಿರೋ ನೇತ್ರ ರೋಗ ವ್ರಣಯುಕ್ತಪೀಡೆ ಹೃದಯ ರೋಗ, ಮಾನಹಾನಿ ಧನಧಾನ್ಯ ಪಶು ವಿನಾಶ ಸ್ತ್ರೀಪುತ್ರರಿಗೆ ಪೀಡೆ.

ದ್ವಿತೀಯ ದ್ಯೂನನಾಥೆ ತು ದೇಹಜಾಡ್ಯಂ ಮನೋರುಜಾ ।
ತದ್ದೋಶ ಪರಿಹಾರಾರ್ಥ ದುರ್ಗಾ ದೇವಿಜಪಂ ಚರೇತೆ ॥೧೫॥

ಶ್ವೇತಾಂಗಾಂ ಮಹಿಷಿಂ ದದ್ಯಾದಾಯುರಾರೋಗ್ಯದಾಯಿನಿವ್ ।

ಶುಕ್ರ 2, 7ರ ಅಧಿಪನಾಗಿದ್ದರೆ ಶಾರೀರಿಕ ಕಷ್ಟ, ಮಾನಸಿಕ ವ್ಯಥಾ ಉಂಟಾಗುತ್ತದೆ. ಈ ದೋಷ ಪರಿಹಾರಾಕ್ಕಾಗಿ ದುರ್ಗಾದೇವಿ ಜಪ ಬಿಳಿ ಆಕಳು, ಎಮ್ಮೆ ದಾನದಿಂದ ದೋಷ ಪರಿಹಾರ ಶ್ರೇಯಸ್ಕರ ಹೇಳುವುದು.

## ಸೂರ್ಯಾಂತರ ದಶಾ ಫಲ

ಕೇತೋರಂತರ್ಗತೆ ಸೂರ್ಯೆ ಸೋಚ್ಚೆ ಸ್ವಕ್ಷೇತ್ರಗೇ ಪಿ ವಾ ॥೧೬॥

ಕೇಂದ್ರ ತ್ರಿಕೋಣ ಲಾಭೆ ವಾ ಶುಭೈರ್ಯುತನಿರೀಕ್ಷಿತೆ
ಧನಧಾನ್ಯಾದಿ ಲಾಭಶ್ಚ ರಾಜಾನುಗ್ರಹ ವೈಭವವ್ ॥೧೭॥

ಅನೇಕ ಶುಭ ಕರ್ಯಾಣಿ ಚೇಷ್ಟಸಿದ್ಧಿಃ ಸುಖಾವಹಾ।

ಉಚ್ಚದಲ್ಲಿ (ಮೇಷ) ಸ್ವಗ್ರಹ (ಸಿಂಹ) ಕೇಂದ್ರ ತ್ರಿಕೋಣ ಲಾಭ ಸ್ಥಾನದಲ್ಲಿ ಸೂರ್ಯ ಶುಭಗ್ರಹ ಸಹಿತನಾಗಿದ್ದರೆ ಅಥವಾ ದೃಷ್ಟನಾಗಿದ್ದರೆ ಕೇತು ದಶಾ ಸೂರ್ಯಾಂತರದಶಾದಲ್ಲಿ ಧನ ಧಾನ್ಯದಿ ಲಾಭ ರಾಜ ಕೃಪೆಯಿಂದ ಐಶ್ವರ್ಯ ಅನೇಕ ಶುಭಕಾರ್ಯ ಹಾಗೂ ಸುಖಪ್ರದ ಅತಿಪ್ರಸಿದ್ಧಿದಾಯಕನಾಗಿರುತ್ತದೆ.

ಲಗ್ನಾದ್ರಂಧ್ರವ್ಯಯಗತೇ ಪಾಪಗ್ರಹ ಸಮನ್ವಿತೇ ॥೧೮॥

ತದ್ ಭುಕ್ತೌ ರಾಜಭೀತಿಶ್ಚ ಪಿತೃಮಾತೃವಿಯೋಜನಮ್ ।
ವಿದೇಶಗಮನಂ ಚೈವ ಚೌರಾಹಿವ್ರಣ ಪೀಡನಮ್ ॥೧೯॥

ರಾಜಮಿತ್ರ ವಿರೋಧಶ್ಚ ರಾಜದಂಡಾದ್ಧಾನಕ್ಷಯಃ ।
ಶೋಕರೋಗಭಯಂ ಚೈವ ತಾಪಾಧಿಕ್ಯಂ ಜ್ವರಸ್ತಥಾ ॥೨೦॥

ದಾಯೇಶಾತ್ ಕೇಂದ್ರಕೋಣೇ ವಾ ಲಾಭೇ ವಾ ಧನ ಸಂಸ್ಥಿತೇ
ದೇಹಸೌಖ್ಯಂ ಚಾರ್ಥಲಾಭಃ ಪುತ್ರಲಾಭೋ ಮನೋ ದೃಢಮ್॥೨೧॥

ಯಾತುಃ ಕಾರ್ಯಾರ್ಥ ಸಿದ್ಧಿಃ ಸ್ಯಾತ್ ಸ್ವಲ್ಪ ಗ್ರಾಮಾಧಿಪತ್ಯಕಮ್ ।

ಲಗ್ನದಿಂದ 6, 12ರಲ್ಲಿ ಪಾಪಗ್ರಹಯುಕ್ತ ಸೂರ್ಯನಿದ್ದರೆ ಅಂತರದಶಾ ಕಾಲದಲ್ಲಿ ರಾಜಭಯ ಪಿತೃಮಾತೃ ವಿಯೋಗ ವಿದೇಶಯಾತ್ರಾ ಕಳ್ಳ ಸರ್ಪ ವ್ರಣ ಪೀಡಾ ರಾಜ, ಮಿತ್ರರ ವಿರೋಧ ರಾಜದಂಡ ಯುಕ್ತ ಧನಕ್ಷಯ ಶೋಕ ರೋಗ ಭಯ ತಾಪಾಧಿಕ್ಯ ಹಾಗೂ ಜ್ವರಾದಿ ಪೀಡನ ಅದೇ ಸೂರ್ಯದಶಾ ಪತಿಯಿಂದ ಕೇಂದ್ರ ತ್ರಿಕೋಣ ಲಾಭಸ್ಥಾನ ಧನಸ್ಥಾನದಲ್ಲಿದ್ದರೆ ದೇಹಸೌಖ್ಯ ಧನಲಾಭ, ಪುತ್ರ ಲಾಭ ಮನದಲ್ಲಿ ಧೃಡತೆ ಕಾರ್ಯಸಿದ್ಧಿ ಚಿಕ್ಕ ಹಳ್ಳಿ ಸ್ವಾಮಿತ್ವ ಪ್ರಾಪ್ತಿಯಾಗುತ್ತದೆ.

ದಾಯೇಶಾದ್‌ಷ್ಟರಿಷ್ಫೇ ವಾ ಸಂಸ್ಥಿತೇ ಪಾಪಸಂಯುತೇ ॥೨೨॥

ಅನ್ನವಿಘ್ನಂ ಮನೋಭೀತಿಂ ಧನಧಾನ್ಯಪಶುಕ್ಷಯಂ ।
ಆದೌ ಮಧ್ಯೇ ಮಹಾಕ್ಲೇಶಾನಂತೇ ಸೌಖ್ಯಂ ವಿನಿರ್ದಿಶೇತ್ ॥೨೩॥

ದ್ವಿತೀಯ ಸಪ್ತಮಾಧೀಶೇ ಹಾಪಮೃತ್ಯುರ್ಭವಿಷ್ಯತಿ ।
ಶಾಂತಿಂ ತತ್ರಪ್ರಕುರ್ವೀತ ಸ್ವರ್ಣಂ ಧೇನುಂ ಪ್ರದಾಪಯೇತ್ ॥೨೪॥

ದಶಾಪತಿಯಿಂದ 8, 12ರಲ್ಲಿ ಪಾಪಯುತ ಸೂರ್ಯನಿದ್ದರೆ ಅಂತರದಶಾಕಾಲ ಅನ್ನಕ್ಕೆ ವಿಘ್ನವಯದಲ್ಲಿ ಭಯ, ಧನಧಾನ್ಯ ಕ್ಷಯ ಪಶುನಾಶ ಹಾಗೂ ದಶಾರಂಭ ಮಧ್ಯದಲ್ಲಿ ಮಹಾಕ್ಲೇಶ. ಅಂತ್ಯದಲ್ಲಿ ಸುಖ ಅದೇ ಸೂರ್ಯ 2, 7ರ ಅಧೀಶ ನಾಗಿದ್ದರೆ ಅಪಮೃತ್ಯು, ಅರಿಷ್ಟ ಶಾಂತಿಗಾಗಿ ಸೂರ್ಯ ಶಾಂತಿ ಬಂಗಾರ ಹಾಗೂ ಆಕಳ ದಾನ ಮಾಡುವುದು.

## ಚಂದ್ರಾಂತರ್ದಶಾ ಫಲ

ಕೇತೋರಂತರ್ಗತೆ ಚಂದ್ರೆ ಸ್ವೋಚ್ಚೆ ಸ್ವಕ್ಷೇತ್ರಸಂಸ್ಥಿತೆ ।
ಕೇಂದ್ರ ತ್ರಿಕೋಣ ಲಾಭೆ ವಾ ಧನೆ ಸದ್ ಗ್ರಹ ಸಂಯುತೆ ॥೨೫॥

ರಾಜಪ್ರೀತಿರ್ಮಹೋತ್ಸಾಹಃ ಕಲ್ಯಾಣ ಚ ಮಹಾಸುಖಂ
ಮಹಾರಾಜ ಪ್ರಸಾದೇನ ಗೃಹ ಭೂಮ್ಯಾದಿಕಾಗಮಃ ॥೨೬॥

ಭೋಜನಾಂಬರ ಪಶ್ವಾದಿವ್ಯವಸಾಯೋಧಿಕಂ ಫಲಮ್ ।
ಅಶ್ವವಾಹನಲಾಭಶ್ಚ ವಸ್ತ್ರಾಭರಣ ಭೂಷಣಮ್ ॥೨೭॥

ದೇವಾಲಯತಡಾಗಾದಿ ಪುಣ್ಯಧರ್ಮಾದಿ ಸಂಗ್ರಹಃ ।
ಪುತ್ರದಾರಾದಿ ಸೌಖ್ಯಂ ಚ ಪೂರ್ಣೆ ಚಂದ್ರೆ ವಿಶೇಷತಃ ॥೨೮॥

ಉಚ್ಚಸ್ಥನ ಅಥವಾ ಸ್ವಗ್ರಹದಲ್ಲಿರುವ ತ್ರಿಕೋಣ ಲಾಭ ಹಾಗೂ ಧನಸ್ಥಾನದಲ್ಲಿಯ ಚಂದ್ರ ಶುಭಯುಕ್ತನಾಗಿ ಕೇತು ದಶಾದಲ್ಲಿ ಚಂದ್ರಾಂತಾರದಶಾದಲ್ಲಿ, ರಾಜ ಪ್ರೇಮ ಮಹೋತ್ಸಾಹ ಕಲ್ಯಾಣ ಸುಖ ರಾಜಕೃಪಾದಿಂದ ಮನೆ ಭೂಮಿ ಲಾಭ, ಭೋಜನ ವಸ್ತ್ರ ಪಶು ಆದಿ ಹಾಗೂ ವ್ಯವಸಾಯದಲ್ಲಿ ಅಧಿಕ ಲಾಭ, ಕುದುರೆ ಹಾಗೂ ಅನ್ಯವಾಹನದ ಲಾಭ, ವಸ್ತ್ರ ಭೂಷಣದ ಪ್ರಾಪ್ತಿ ದೇವಾಲಯ, ಕೆರೆ, ಕಾಲುವೆಗಳಲ್ಲಿ ಪ್ರವೃತ್ತಿ ಪುಣ್ಯ ಧರ್ಮಕಾರ್ಯದಲ್ಲಿ ಮನಪ್ರವೃತ್ತಿ ಪುತ್ರಸುಖ, ಪೂರ್ಣಚಂದ್ರನಿಂದ ಫಲ ವಿಶೇಷ ರೂಪದಿಂದ ದೊರಕುತ್ತದೆ.

ನೀಚಗೆ ಕ್ಷೀಣ ಚಂದ್ರೆ ವಾ ಪಷ್ಟಾಷ್ಟ ವ್ಯಯರಾಶಿಗೆ ।
ಆತ್ಮಾಸೌಖ್ಯಂ ಮನಸ್ತಾಪಃ ಕಾರ್ಯ ವಿಘ್ನ ಮಹದ್ ಭಯಮ್॥೨೯।

ಪಿತೃಮಾತೃ ವಿಯೋಗಶ್ಚ ದೇಹಜಾಡ್ಯಂ ಮನೋರುಷಾ ।
ವ್ಯವಸಾಯಾತ ಫಲಂ ನೇಷ್ಟಂ ಗೋಮಹಿಷ್ಯಾದಿ ನಾಶನಮ್ ॥೩೦॥

ನೀಚರಾಶಿಯಲ್ಲಿ 6, 8, 12ರಲ್ಲಿ ಕ್ಷೀಣ ಚಂದ್ರನಿದ್ದರೆ ಅಂತರದಶಾ ಕಾಲ ಆತ್ಮದಲ್ಲಿ ಕಷ್ಟ ಮಾನಸಿಕ ಸಂತಾಪ ಶರೀರರ ಜಡತೆ ವ್ಯವಸಾಯದಲ್ಲಿ ಅಸಫಲತಾ ಪಶುಗಳ ನಾಶ ಆದಿ ಫಲ.

ದಾಯೋಶಾತ್ ಕೇಂದ್ರಕೋಣೆ ವಾ ಲಾಭೆ ವಾ ಬಲಸಂಯುತೆ
ಕೃಷಿ ಗೋಭೂಮಿಲಾಭ ಶ್ವಾಭೀಷ್ಟ ಬಂಧುಗವಾಗಮಃ ॥೩೧॥

ತತಃ ಸ್ವಕಾರ್ಯಸಿದ್ಧಿಶ್ಚ ಗೃಹೆ ಗೋಕ್ಷೀರವೇವ ಚ ।
ಆರಂಭೆ ಶುಭಾರೋಗ್ಯಂ ಮಧ್ಯೆ ರಾಜ ಪ್ರಸನ್ನತಾ ॥೩೨॥

ಅಂತೆ ತು ರಾಜ ಭೀತಿಶ್ಚ ವಿದೇಶಗಮನಂ ತಥಾ ।
ದೂರೆ ಯಾತ್ರಾದಿ ಸಂಚಾರಃ ಸಂಬಂಧಿ ಜನ ಪೂಜನಮ್ ॥೩೩॥

ದಶಾಪತಿಯಿಂದ ಪ್ರಬಲನಾದ ಚಂದ್ರ ಕೇಂದ್ರ ತ್ರಿಕೋಣ, ಲಾಭಸ್ಥಾನದಲ್ಲಿದ್ದರೆ ಅಂತರದಶಾ ಸಮಯದಲ್ಲಿ ಕೃಷಿ ಭೂಮಿಯ ಲಾಭವಾಗುತ್ತದೆ. ಇಷ್ಟಮಿತ್ರರ ಶುಭಾಗಮನ ಅದರಿಂದ ಕಾರ್ಯಸಿದ್ಧಿ ಗೋಕ್ಷೀರದಿಂದ ಪೂರ್ಣ (ಹಾಲು, ಮೊಸರಲ್ಲಿ ಕೈತೊಳೆಯುವಿಕೆ, ಸಂಪತ್ತು) ಆರಂಭದಲ್ಲಿ ಆರೋಗ್ಯ ಮಧ್ಯದಲ್ಲಿ ರಾಜಕೃಪೆ, ಅಂತ್ಯದಲ್ಲಿ ರಾಜಭಯ, ವಿದೇಶ ಯಾತ್ರೆ, ದೂರ ಪ್ರಯಾಣ ಯಾತ್ರೆ, ಸಂಬಂಧಿಗಳಿಂದ ಸನ್ಮಾನಾದಿ ಫಲ.

ದಾಯೇಶಾತ್ ಷಷ್ಠರಿಷ್ಫೇವಾ ರಂಧ್ರೆ ವಾ ಬಲವರ್ಜಿತೆ ।
ಧನಧಾನ್ಯಾದಿ ಹಾನಿಶ್ಚ ಮನೋವ್ಯಾಕುಲವೇವ ಚ ॥೩೪॥

ಸ್ವಬಂಧುಜನ ವಿದ್ವೇಷಿ ಭ್ರಾತೃಪೀಡಾ ತಥೈವ ಚ ।
ನಿಧಾನಾಧಿ ಪದೋಷೇಣ ದ್ವಿಸಪ್ತಸ್ವಾಮಿಸಂ ಯುತೆ ॥೩೫॥

ಅಪಮೃತ್ಯುಭಯಂ ತಸ್ಯ ಶಾಂತಿಂ ಕುರ್ಯಾದ್ಯಥಾ ವಿಧಿ ।
ಚಂದ್ರಪ್ರೀತಿಕರಿ ಚೈವ ಹಾಯುರಾರೋಗ್ಯ ವೃದ್ಧ್ಯ ಯೆ ॥೩೬॥

ದಶಾಪತಿಯಿಂದ ನಿರ್ಬಲಚಂದ್ರದ ಕ್ಷಯ ಮನದಲ್ಲಿ ವ್ಯಾಕುಲತೆ ಬಂಧುಗಳೊಂದಿಗೆ ದ್ವೇಷ, ಅಣ್ಣನಿಗೆ ಕಷ್ಟ, ಚಂದ್ರ ಅಷಮೇಶನಾಗುವ ದೋಷ ಅಥವಾ 2,7ರ ಅಧಿಪರ ಜತೆಗೆ ಇದ್ದರೆ, ಅಪಮೃತ್ಯುವಿನ ಭಯ, ಆರೋಗ್ಯ ಹಾಗೂ ಕಷ್ಟನಿವಾರಣೆಗೆ ಚಂದ್ರ ಶಾಂತಿ ಮಾಡಿಸುವುದು ವಿಹಿತ.

## ಭೌಮಾಂತರ ದಶಾಫಲ

ಕೇತೋರಂತರ್ಗತೆ ಭೌಮೆ ಲಗ್ನಾತ ಕೇಂದ್ರ ತ್ರಿಕೋಣ ಗೆ ।
ಸ್ವೋಚ್ಚೆ ಸ್ವಕ್ಷೇತ್ರಗೆ ಚೈವ ಶುಭಖೇಟಯುತೆಕ್ಷಿತೆ ॥೩೭॥

ಆದೌ ಶುಭಫಲಂ ಚೈವ ಗ್ರಾಮಭೂಮ್ಯಾದಿಕಾಗಮಃ ।
ಧನಧಾನ್ಯ ಚತುಷ್ಪಾದ ಜೀವಲಾಭೋ ಭವೇದಪಿ ॥೩೮॥

ಗೃಹಾರಾಮಕ್ಷೇತ್ರಲಾಭೊ ರಾಜಾನುಗ್ರಹ ವೈಭವಮ್
ಭಾಗ್ಯೆ ಕರ್ಮೇಶ ಸಂಬಂಧೆ ಭೂಲಾಭಃ ಸೌಖ್ಯಮೇವಚ ॥೩೯॥

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವನಗತ ಮಂಗಳ ಶುಭ ಗ್ರಹಯುತ ಅಥವಾ ದೃಷ್ಟನಾಗಿದ್ದರೆ ಕೇತು ದಶಾದಲ್ಲಿ ಮಂಗಳನ ಅಂತರದಶಾದಲ್ಲಿ ಊರು (ಎಂಬಳಿಯಾಗಿ) ಭೂಮಿ ಧನಧಾನ್ಯ ಪಶು ಆದಿ ಲಾಭ ಮನೆ, ಹೊಲ, ತೋಟದ ಲಾಭ, ರಾಜಕೃಪಾದಿಂದ ಐಶ್ವರ್ಯ ಭಾಗ್ಯೇಶ ಭಾಗ್ಯಸ್ಥಾನವನ್ನು ಕರ್ಮೇಶನ ಸಂಬಂಧವಿರಲು ಭೂಮಿ ಲಾಭ ಹಾಗೂ ಪೂರ್ಣ ಸೌಖ್ಯ

ದಾಯೋಶಾತ್ ಕೇಂದ್ರಕೋಣೆ ವಾ ದುಶ್ಚಕ್ಯೆ ಲಾಭಗ್ಯೆಪಿವಾ ।
ರಾಜಪ್ರೀತಿರ್ಯಶೋಲಾಭಃ ಪುತ್ರ ಮಿತ್ರಾದಿಜಂ ಸುಖಮ್॥೪೦॥

ರಂಧ್ರಗೆ ವ್ಯಯಗೆ ಭೌಮೆ ದಾಯೇಶಾದ್ದನಗೇಪಿ ಚ ।
ದ್ರುತಂ ಕರೋತಿ ಮರಣಂ ವಿದೇಶೆ ಚಾಪದಂ ಭ್ರಮಮ್ ॥೪೧॥

ಪ್ರವೇಹಮೂತ್ರಕೃಚ್ಛ್ರಾದಿ ಚೌರಾದಿನೃಪ ಪೀಡನಮ್ ।
ಕಲಹಾದಿ ವ್ಯಥಾಯುಕ್ತಂ ಕಿಂಚಿತ್ ಸುಖವಿವರ್ಧನಮ್ ॥೪೨॥

ದಶಾಧೀಶನಿಂದ(ಕೇತು) ಕೇಂದ್ರ ಕೋಣ ತೃತೀಯ ಏಕಾದಶ ಸ್ಥಾನದಲ್ಲಿ ಲಭ್ಯ ಪುತ್ರ ಮಿತ್ರರ ಸುಖ, ಅದೇ ಮಂಗಳ 8, 12ರಲ್ಲಿ ಅಥವಾ ದ್ವಿತೀಯದಲ್ಲಿದ್ದರೆ ತೀವ್ರ ಮರಣ ಭಯ, ವಿದೇಶದಲ್ಲಿ ಆಪತ್ತು, ಪ್ರಮೇಹ ಮೂತ್ರ ಕೃಚ್ಛರೋಗ ಕಳ್ಳ, ರಾಜರ ಪೀಡೆ ವ್ಯಥೆಯಿಂದ ವ್ಯಯಯುಕ್ತ ಕಲಹವು ಆಗುತ್ತದೆ. ಸುಖವೃದ್ಧಿಯೂ ಆಗುತ್ತದೆ.

ದ್ವಿತೀಯದ್ಯೂನನಾಥೆ ತು ತಾಪಜ್ವರ ವಿಚಾದ್ ಭಯಮ್ ।
ದಾರಪೀಡಾ ಮನಃ ಕ್ಲೇಶೋ ಹಾಪ ಮೃತ್ಯುಭಯಂ ಭವೇತ್ ॥೪೩॥

ಅನಡ್ ವಾಹಂ ಪ್ರದಾದ್ಯಾತ್ತು ಸರ್ವಸಂಪತ್ ಸುಖಾವಹಮ್ ।

2, 7ರ ಅಧಿಪ ಮಂಗಳನಾಗಿದ್ದರೆ ಕೇತು ಮಹಾದಶಾದಲ್ಲಿ ಮಂಗಳ ದಶಾ, ತಾಪಜ್ವರ, ವಿಷಭಯಕ್ಕೆ ಕಾರಣವಾಗುತ್ತದೆ. ಸ್ತ್ರೀಗೆ ಕಷ್ಟ, ಮನದಲ್ಲಿ ಕ್ಲೇಶ ಹಾಗೂ ಅಪಮೃತ್ಯು. ಶಾಂತಿಗಾಗಿ ವೃಷಭ(ಎತ್ತು)ದ ದಾನ ಹಾಗೂ ಕೇತು ಮಂಗಳ ಶಾಂತಿ ಶ್ರೇಯಸ್ಕರ.

## ರಾಹೂಂತರ್ದಶಾ ಫಲ

ಕೇತೋರಂತರ್ಗತೇ ರಾಹೌ ಸ್ವೋಚ್ಚೆ ಮಿತ್ರಸ್ವರಾಶಿಗೆ ॥೪೪॥

ಕೇಂದ್ರ ತ್ರಿಕೋಣ ಲಾಭೇ ವಾ ದುಶ್ಚಿಕ್ಯೆ ಧನರಾಶಿಗೆ ।
ತತ್ಕಾಲೆ ಧನಲಾಭಃ ಸ್ಯಾತ್ ಸಂಚರೋ ಭವತಿ ಧ್ರುವಮ್ ॥೪೫॥

ಮ್ಲೇಂಛ ಪ್ರಭುವಶಾತ್ ಸೌಖ್ಯಂ ಧನಧಾನ್ಯ ಫಲಾದಿಕಮ್ ।
ಚತುಷ್ಪಾಜ್ಜೀವಲಾಭಃ ಸ್ಯಾದ್ ಗ್ರಾಮಭೂಮ್ಯಾದಿಕಾಗಮಃ ॥೪೬॥

ಭುಕ್ತ್ಯಾದೌ ಕ್ಲೇಶ ಮಾಪ್ನೋತಿ ಮಧ್ಯಾಂತೆ ಸೌಖ್ಯಮಾಪ್ನುಯಾತ್

ಸ್ವೋಚ್ಚ ಸ್ವಭವನ ಮಿತ್ರಗೃಹ ಕೇಂದ್ರ ತ್ರಿಕೋಣ ಲಾಭ ಸ್ಥಾನ ತೃತೀಯ ಹಾಗೂ ಧನಸ್ಥಾನದಲ್ಲಿ ರಾಹು ಇದ್ದು, ಕೇತು ದಶಾ ರಾಹು ಅಂತರದಶಾದಲ್ಲಿ ತತ್ಕಾಲದಲ್ಲಿ ಧನಲಾಭವುಂಟಾಗುತ್ತದೆ. ಮ್ಲೇಂಛ ರಾಜರಿಂದ (ಅಧಿಕಾರಿಗಳಿಂದ) ಸೌಖ್ಯ ಪ್ರಾಪ್ತಿ ಧನಧಾನ್ಯ ಪಶುಗ್ರಾಮ ಭೂಮಿಯ ಲಾಭ ಅಂತರದಶಾರಂಭ ಕ್ಲೇಶ ಮಧ್ಯ ಸುಖ-

ರಂಧ್ರೆ ವಾವ್ಯಯಗೆ ರಾಹೌ ಪಾಪೈರ್ದೃಷ್ಟೇಥ ಸಂಯುತೆ ।
ಬಹುಮೂತ್ರ ಕೃಷೋ ದೇಹಃ ಶೀತಜ್ವರ ವಿಷಾದ್‌ಭಯಮ್ ॥೪೮॥

ಚಾತುರ್ಥಿಕಜ್ವರ ಶ್ಚೈವ ಕ್ಷುದ್ರೋಪ್ರುದಪೀಡನಮ್ ।
ಅಕಸ್ಮಾತ್ ಕಲಹಶ್ಚೈವ ಪ್ರಮೇಹಃ ಶೂಲಮೇವ ಚ ॥೪೯॥

ದ್ವಿತೀಯ ಸಪ್ತಮಸ್ಥೆ ವಾ ತದಾ ಕ್ಲೇಶೋ ಮಹದ್ ಭಯಮ್ ।
ತದ್ದೋಷಪರಿಹಾರಾರ್ಥ ದುರ್ಗಾದೇವಿಜಪಂ ಚರೇತ್ ॥೫೦॥

ರಾಹು 8, 12ರಲ್ಲಿ ಪಾಪಗ್ರಹಯುತ ಅಥವಾ ದೃಷ್ಟನಾಗಿದ್ದರೆ ಅಂತರ ದಶಾಕಾಲದಲ್ಲಿ ಬಹುಮೂತ್ರರೋಗ, ಪ್ರಮೇಹ ಶಾರೀರಿಕ ದೌರ್ಬಲ್ಯ ಶೀತಜ್ವರ ಪ್ರಕೋಪ ಹೃದರೋಗ ಪೀಡಾ ಏಕಾಏಕಿ ಬೇರೆಯವರೊಡನೆ ಕಲಹವು ಶೂಲ ರೋಗಾದಿ ಫಲ, 2, 7ರಲ್ಲಿದ್ದರೆ ಮಹಾನ್ ಕ್ಲೇಶ ಭಯ, ದೋಷ ಪರಿಹಾರಕ್ಕೆ ದುರ್ಗಾಸ್ತವ ಪಾಠ ಅಥವಾ ಮಂತ್ರಜಪದಿ ಮಾಡುವುದು.

## ಜೀವಾಂತರ್ದಶಾ ಫಲ

ಕೇತೋರಂತರ್ಗತೇ ಜೀವೆ ಕೇಂದ್ರ ಲಾಭೆ ತ್ರಿಕೋಣ ಗೆ ।
ಸ್ವೋಚ್ಚ ಸ್ವಕ್ಷೇತ್ರಗೆ ವಾಪಿ ಲಗ್ನಾಧಿಪಸಮನ್ವಿತೆ ।೫೧॥

ಕರ್ಮಭಾಗ್ಯ ಧಿಪ್ಯೆಯುಕ್ತೆ ಧನಧಾನ್ಯಾರ್ದಸಂಪರ್ಧಃ ।
ರಾಜಪ್ರೀತಿಸ್ತಥೋತ್ಸಾಹೋ ಹಯದೋಲಾದಿಕಾಗಮಃ ॥೫೨॥

ಗೃಹೆ ಕಲ್ಯಾಣ ಸಂಪತ್ತಿಃ ಪುತ್ರಲಾಭೊ ಮಹೋತ್ಸವಃ ।
ಪುಣ್ಯತೀರ್ಥೆ ಮಹೋತ್ಸಾಹಃ ಸತ್ಕರ್ಮ ಚ ಸುಖಾವಹಮ್ ॥೫೩॥
ಇಷ್ಟದೇವ ಪ್ರಸಾದೇನ ಕಾರ್ಯಲಾಭೋ ಜಯಸ್ತಥಾ ।
ರಾಜಸಂಲಾಪಕಾರ್ಯಾಣಿ ನೂತನ ಪ್ರಭುದರ್ಶನಮ್ ॥೫೪॥

ತನ್ನುಚ್ಚದಲ್ಲಿ ಇಲ್ಲಿದೆ ತನ್ನ ಮನೆಯಲ್ಲಿ ಕೇಂದ್ರ ತ್ರಿಕೋಣ ಲಾಭ ಸ್ಥಾನದಲ್ಲಿ ಗುರು ಲಗ್ನೇಶ ಭಾಗ್ಯೇಶರ ಅಥವಾ ಕರ್ಮೇಶನ ಜತೆಗಿರಲು ಅಥವಾ (ದೃಷ್ಟಿತನಾಗಿದ್ದರೂ) ಕೇತು ಮಹಾದಶಾ ಗುರು ಅಂತರ ದಶಾ ಕಾಲದಲ್ಲಿ ಧನಭಾಗ್ಯ ವೃದ್ಧಿಯನ್ನು ರಾಜಪ್ರೇಮ ಒದಗಿಸಿ ಉತ್ಸಾಹವನ್ನು ಕೊಡುವನು. ಕುದುರೆ ಪಾಲಕಿ ಆದಿ ಪ್ರಾಪ್ತಿ ಮನೆಯಲ್ಲಿ ಕಲ್ಯಾಣ ಕಾರ್ಯ, ಸಂಪತ್ತು ಹೆಚ್ಚಳ ಪುತ್ರಲಾಭ ಮಹಾ ಉತ್ಸಾಹ ಪುಣ್ಯಪ್ರದ ತೀರ್ಥದಲ್ಲಿ ಮಹಾಉತ್ಸಾಹ ಸತ್ಕಾರ್ಯ ಪ್ರವೃತ್ತಿ, ಇಷ್ಟದೇವ ಪ್ರಸಾದದಿಂದ (ಕೃಪೆ) ಕಾರ್ಯ ಲಾಭ ಜಯ ರಾಜರೊಂದಿಗೆ ಸಲ್ಲಾಪ ಹೊಸ ಅಧಿಕಾರಿ (ರಾಜ) ದರ್ಶನಾದಿಗಳು.

ಷಷ್ಟಷ್ಟಮವ್ಯಯೆ ಜೀವೋ ದಾಯೇಶಾನ್ನೀಚಗೇ ಪಿ ವಾ ।
ಚೌರಾಹಿವ್ರಣಭೀತಿಶ್ಚ ಧನಧಾನ್ಯಾದಿ ನಾಶನಮ್ ॥೫೫॥

ಪುತ್ರಾದಾರಾವಿಯೋಗಸ್ಚಾಪ್ಯತೀವ ಕ್ಲೇಶಸಂದವಃ
ಅದೌ ಶುಭ ಫಲಂ ಚೈವಮಂತೆ ಕ್ಲೇಶಃ ಪ್ರಜಾಯತೆ ॥೫೬॥

ದಶಾಪತಿ (ಕೇತು) 6, 8, 12ರಲ್ಲಿ ನೀಚದಲ್ಲಿ ಗುರು ಇದ್ದರೆ ಅಂತರದಶಾ ಕಾಲದಲ್ಲಿ ಕಳ್ಳರು, ಸರ್ಪ ಹಾಗೂ ವ್ರಣ ಭಯವುಂಟಾಗುತ್ತವೆ. ಧನಧಾನ್ಯಕ್ಷಯ ಸ್ತ್ರೀಪುತ್ರ ಹಾಗೂ ವಿಯೋಗ ಅತ್ಯಧಿಕ ದುಃಖ-ಆದಿಯಲ್ಲಿ ಶುಭ ಅಂತ್ಯದಲ್ಲಿ ಹೊಸ ರೀತಿ ಫಲ ಹೇಳುವುದು.

ದಾಯೇಶಾತ್ ಕೇಂದ್ರಕೋಣೆ ವಾ ದುಶ್ಚಿಕ್ಯೇ ಲಾಭಗೇ ಪಿ ವಾ ।
ಶುಭಯುಕ್ತೆ ನೃಪಪ್ರೀತಿರ್ವಿಚಿತ್ರಾಂಬರ ಭೂಪಣಮ್ ॥೫೭॥

ದೂರದೇಶ ಪ್ರಯಾಣಾ ಚ ಸ್ವಬಂಧುಜನ ಪೊಷಣಮ್ ।
ಭೋಜನಾಂಬರ ಪಶ್ವಾದಿ ಭುಕ್ತ್ಯಾದೌ ದೇಹ ಪೀಡನಮ್ ॥೫೮॥

ಅಂತೇ ತು ಸ್ಥಾನ ಚಲನ ಮಕಸ್ಮಾತ್ ಕಲಹೋ ಭವೇತ್ ।
ದ್ವಿತೀಯದ್ಯೂನನಾಥೆ ತು ಹಾಪಮೃತ್ಯುರ್ಭವಿಷ್ಯತಿ ॥೫೯॥

ತದ್ದೋಷ ಪರಿಹಾರಾರ್ಥ ಶಿವಸಹಸ್ರಕಂ ಜಪೇತ
ಮಹಾಮೃತ್ಯುಂಜಯಂ ಜಾಪ್ಯಂ ಸರ್ವೋಪದ್ರವನಾಶನಮ್ ॥೬೦॥

ಗುರು ದಶೇಶನಾದ ಕೇತುವಿನಿಂದ ಕೇಂದ್ರ ತ್ರಿಕೋಣ ಅಥವಾ ತೃತೀಯ ಏಕಾದಶದಲ್ಲಿ ಶುಭ ಗ್ರಹಯುತನಾಗಿ ಸ್ಥಿತನಾದರೆ ಅಂತರದಶಾಕಾಲ ರಾಜರ ಪ್ರೇಮ, ವಿಲಕ್ಷಣವಸ್ತ್ರ ಭೂಷಣ ಪ್ರಾಪ್ತಿ ದೂರದೇಶಯಾತ್ರೆ ಸ್ವಬಂಧುಗಳ ಪಾಲನೆ, ಪೋಷಣೆ, ಭೋಜನ ವಸ್ತ್ರಪಶು ಆದಿ ಪ್ರಾಪ್ತಿ ಅಂತರ ದಶಾರಂಭದಲ್ಲಿ ಶರೀರ ಪೀಡೆ ಅಂತ್ಯದಲ್ಲಿ ಸ್ಥಾನ ಭ್ರಂಶ ಹಾಗೂ ಅಕಸ್ಮಾತ್ ಕಲಹ ಜನ್ಯ, ಅದೆ ಗುರು 2, 7ರ ಅಧಿಪನಾಗಿದ್ದರೆ ಅಪಮೃತ್ಯು ಭಯ, ದೋಷ ಪರಿಹಾರಕ್ಕಾಗಿ ಶಿವಸಹಸ್ರನಾಮ ಪಠಣ ಹಾಗೂ ಮೃತ್ಯುಂಜಯ ಜಪ ಶ್ರೇಯಸ್ಕರ.

## ಶನ್ಯಾಂತರ್ದಶಾ ಫಲ

ಕೇತೋರಂತರ್ಗತೆ ಮಂದೆ ಸ್ವದಶಾಯಾಂ ತು ಪೀಡನಮ್ ।
ಬಂಧೋಃ ಕ್ಲೇಶೋ ಮನಸ್ತಾಪೋ ನಾಶಃ ಸ್ಯಾತ್ತುಚತುಷ್ಪಾದಾಮ್ ।
ರಾಜಕಾರ್ಯಕಲಾಪೇನ ಧನನಾಶೋ ಮಹದ್ ಭಯಮ್ ॥೬೧॥

ಸ್ಥಾನಚ್ಯುತಿಃ ಪ್ರವಾಸಶ್ಚ ಮಾರ್ಗೆ ಚೌರಭಯಂ ಭವೇತ್ ।
ಆಲಸ್ಯಂ ಮನಸೋ ಹಾನಿಶ್ಚಾಷ್ಟಮೆ ವ್ಯವರಾಶಿಗೆ ।

ಶನಿ 8, 12ರಲ್ಲಿ ಇದ್ದು, ಕೇತು ದಶಾ ಶನಿ ಅಂತರದಶಾ ಕಾಲದಲ್ಲಿ ಬಂಧುವಿಗೆ ದೇಹಪೀಡಾ ಮಾನಸಿಕ ಸಂತಾಪ ಪಶುಹಾನಿ ರಾಜಕಾರ್ಯದಿಂದ ಧನಕ್ಷಯ ಮಹಾಭಯ ಸ್ಥಾನ ಭ್ರಂಶ ಪ್ರವಾಸ ಮಾರ್ಗದಲ್ಲಿ ಕಳ್ಳರ ಭಯ, ಆಲಸ್ಯ, ಮನೋಬಲ ಹಾನಿ ಇತ್ಯಾದಿ ಫಲಗಳು

ಮೀನ ತ್ರಿಕೋಣಗೆ ಮಂದೆ ತುಲಾಯಾಂ ಸ್ವಕ್ಷೇಗೇ ಪಿವಾ ॥೬೩॥

ಕೇಂದ್ರ ತ್ರಿಕೋಣ ಲಾಭೆ ವಾ ದುಶ್ಚಿಕ್ಯೆ ವಾ ಶುಭಾಂಶಕೆ
ಶುಭೆಕ್ಷಿತಯುತೆ ಚೈವ ಸರ್ವಕಾರ್ಯಾರ್ಥ ಸಾಧನಮ್ ॥೬೪॥

ಸ್ವಪ್ರಭೋಶ್ಚ ಮಹತ್ಸೌಖ್ಯಂ ಭ್ರಮಣಾ ವಿಜಯೇರಣೆ
ಸ್ವಗ್ರಾಮೇ ಸುಖಸಂಪತ್ತಿಃ ಸ್ವವರ್ಗೆ ರಾಜದರ್ಶನಮ್ ॥೬೫॥

ಮೀನದಿಂದ ತ್ರಿಕೋಣ ತುಲಾ (ಮೀನದಿಂದ ತ್ರಿಕೋಣ ಕರ್ಕ, ವೃಶ್ಚಿಕ ರಾಶಿ) ಸ್ವಭವನ ತ್ರಿಕೋಣ ಅಥವಾ ತೃತೀಯ ಏಕಾದಶ ಸ್ಥಾನ ಶುಭನವಾಂಶದಲ್ಲಿ ಸ್ಥಿತ ಶನಿ ಶುಭಗ್ರಹಯುತ ಅಥವಾ ದೃಷ್ಟನಾಗಿದ್ದರೆ ಅಂತರ ದಶಾಕಾಲದಲ್ಲಿ ಸರ್ವಕಾರ್ಯ ಸಿದ್ಧಿ, ಯಜಮಾನನಿಂದ ಸುಖ, ಭ್ರಮಣ ಯುದ್ಧದಲ್ಲಿ ವಿಜಯ ತನ್ನ ಊರಲ್ಲಿ ಸುಖ ಸಂಪತ್ತಿನಿಂದ ಸುಖ ರಾಜದರ್ಶನ.

ಇಲ್ಲಿ ಶನಿ ಯಾವಾಗಲೂ ದೂರ ಸ್ಥಳ ತೋರಿಸುವುದರಿಂದ ಸ್ವ ಊರಲ್ಲಿ ಎಂದು ಹೇಳಲಾಗಿದೆ.

ದಾಯೇಶಾತ್ ಷಷ್ಠರಿಷ್ಫೆ ವಾ ಚಾಷ್ಟಮೇ ಪಾಪಸಂಯುತೇ ।
ದಹೇತಾಪೋ ಮನಸ್ತಾಪಃ ಕಾರ್ಯ ವಿಘ್ನೋಮಹದ ಭಯಮ್ ॥೬೬॥

ಆಲಸ್ಯಂ ಮಾನ ಹಾನಿಶ್ಚ ಮಾತಾ ಪಿತ್ರೋರ್ವಿನಾಶನಮ್ ।
ದ್ವಿತೀಯ ದ್ಯೂನನಾಥೆ ತು ಕಾಪಮೃತ್ಯುಭಯಂ ಭವೇತ್ ॥೬೭॥

ತದ್ದೋಪಪರಿಹಾರಾರ್ಥ ತಿಲಹೋಮಂ ಚ ಕಾರಯೇತ್ ।
ಕೃಷ್ಣಾ ಗಾಂ ಮಹಿಷೀಂ ದದ್ಯಾದಾಯುರಾರೋಗ್ಯ ವೃದ್ಧಿ ದಾಮ್ ॥೬೮॥

ದಶಾನಾಥನಿಂದ 6, 8. 12ರಲ್ಲಿ ಸಪಾಪಶನಿ ಅಂತರದಶಾಕಾಲದಲ್ಲಿ ಶಾರೀರಿಕ ಹಾಗೂ ಮಾನಸಿಕ ಸಂತಾಪ ಕಾರ್ಯದಲ್ಲಿ ವಿಘ್ನ, ಮಹಾಭಯ, ಆಲಸ್ಯ ಮಾನಹಾನಿ ಮಾತಾಪಿತಾರ ವಿನಾಶ, ಅದೇ ಶನಿ 2,7ರ ಅಧಿಪನಾಗಿದ್ದರೆ ಅಪಮೃತ್ಯು ಭಯ, ಈ ಎಲ್ಲ ದೋಷ ಪರಿಹಾರಾರ್ಥ ತಿಲಹೋಮ ಕಪಿಲೆ (ಕರಿ ಆಕಳು) ಎಮ್ಮೆ ದಾನ ಮಾಡಿದರೆ ಆಯುರಾರೋಗ್ಯದ ವೃದ್ಧಿಯಾಗುತ್ತದೆ.

## ಬುಧಾಂತರ್ದಶಾ ಫಲ

ಕೇತೋರಂತರ್ಗತೆ ಸೌಮ್ಯೆ ಕೇಂದ್ರ ಲಾಭೆ ತ್ರಿಕೋಣ ಗೆ ।
ಸ್ವೋಚ್ಚ ಸ್ವಕ್ಷೇತ್ರಸಂಯುಕ್ತೆ ರಾಜ್ಯಲಾಭೋ ಮಹತ್ಸುಖಮ್ ॥೬೯॥

ಸತ್ಕಥಾಶ್ರವಣಾ ಧಾನಂ ಧರ್ಮಸಿದ್ಧಿಃ ಸುಖಾವಹಾ ।
ಭೂಲಾಭಃ ಪುತ್ರಲಾಭಶ್ಚ ಶುಭಗೋಷ್ಠಿಧನಾಗಮಃ ॥೭೦॥

ಅಯತ್ನಾದ್ಧರ್ಮ ಬ್ಧಿಶ್ಚ ವಿವಾಹಶ್ಚ ಭವಿಷ್ಯತಿ ।
ಗೃಹೆ ಶುಭ ಕರಂ ಕೃತ್ಯಂ ವಸ್ತ್ರಾಭರಣ ಭೂಷಣವ್ ॥೭೦॥

ಭಾಗ್ಯಕರ್ಮಾಧಿಪೈಯುತ್‌ಕ್ತೆ ಭಾಗ್ಯವೃದ್ಧಿ ಸುಖಾವಹಾ।
ವಿದ್ವದ್ ಗೋಷ್ಠಿ ಸಂಗೇನ ಸಂಲಾಪೋ ಭೂಷಣಗಮಃ ॥೭೨॥

ಸ್ವೋಚ್ಚ ಸ್ವಭವನ ಕೇಂದ್ರ ತ್ರಿಕೋಣ ಅಥವಾ ಲಾಭಸ್ಥಾನದಲ್ಲಿ ಬುಧನಿದ್ದು ಕೇತು ದಶಾಂತರ ದಶಾವಿದ್ದಾಗ ರಾಜ್ಯಲಾಭ ಮಹಾಸುಖ ಸತ್ಕಥಾಶ್ರವಣ, ದಾನ ಸುಖಪ್ರದ ಧರ್ಮಸಿದ್ಧಿಂ ಭೂಮಿ, ಪುತ್ರ, ಲಾಭ ಸತ್‌ಸಂಗದಿಂದ ಧನಾಗಮ ಪ್ರಯತ್ನ ವಿಲ್ಲಿದೆ ಧರ್ಮಲಾಭ ವಿವಾಹ ಅಲದೆ. ಮನೆಯಲ್ಲಿ ಇತರ ಶುಭ ಕಾರ್ಯಗಳು ಹಾಗೂ ವಸ್ತ್ರಭೂಷಣದ ಪ್ರಾಪ್ತಿಯಾಗುತ್ತದೆ. ಬುಧ ಭಾಗ್ಯೇಶ(9) ಕರ್ಮೇಶ (1)ರ ಯುತನಾಗಿದ್ದರೆ ಭಾಗ್ಯವೃದ್ಧಿ ವಿದ್ವಾಜನರ ಗೋಷ್ಠಿಯಲ್ಲಿ ಸಂಲಾಪ ಹಾಗೂ ಅಭೂಷಣಾಗಮನ.

'ಷಷ್ಠಾಷ್ಟಮವ್ಯಯೇ ಸೌಮ್ಯೆ ಮಂದಾರಾಹಿಯುತೆಕ್ಷಿತೆ।
ವಿರೋಧೋ, ರಾಜಪುರುಷೈಃ ಪರಗೇಹನಿವಾಸನಮ್ ॥೭೩॥

ವಾಹನಾಂಬರ ಪಶ್ವಾದಿಧನಧಾನ್ಯಾದಿ ನಾಶನಮ್।
ಭುಕ್ತ್ಯಾದೌ ಶೋಧನಂ ಪ್ರೋಕ್ತಂ ಮಧ್ಯೆಸೌಖ್ಯಂ ಧನಾಗಮಃ
ಅಂತೆಕ್ಲೇಶೊ ಭವೇಚ್ಚೈವ ದಾರ ಪುತ್ರಾದಿಪೀಡನಮ್ ॥೭೪॥

ಬುಧ 6, 8, 12ರಲ್ಲಿ ಸ್ಥಿತನಾಗಿ ಶನಿ, ಮಂಗಳ ಅಥವಾ ರಾಹು ಯುತನಾಗಿ ಅಥವಾ ದುಷ್ಟನಾಗಿದ್ದ ಅಂತರ ದಶಾಕಾಲದಲ್ಲಿ ರಾಜಾಧ್ಲಿಕಾರಿಯರೊಡನೆ ವಿರೋಧ ಎರಡನೇಯವರ ಮನೆಯಲ್ಲಿದ್ದಾಗ ವಾಹನ, ವಸ್ತ್ರ ಪಶ್ವಾದಿ ಧನ ಧಾನ್ಯದ ವಿನಾಶ, ಆರಂಭ ಮಧ್ಯದಲ್ಲಿ ಅಂತರ ದಶಾಸುಖ ಪ್ರದವಾದರೆ, ಧನಲಾಭ, ಅಂತ್ಯದಲ್ಲಿ ಕ್ಲೇಶ ಹಾಗೂ ಕಷ್ಟ. ಹೆಂಡತಿ ಮಕ್ಕಳಿಗೆ ಕಷ್ಟ.

ದಾಯೋಶಾತ್ ಕೇಂದ್ರಗೆ ಸೌಮ್ಯೆ ತ್ರಿಕೋಣೆ ಲಾಭಗೆ ಪಿವಾ ॥೭೫॥

ದೇಹಾರೋಗ್ಯಂ ಮಹಾಂಲ್ಲಾಭಃ ಪುತ್ರ ಕಲ್ಯಾಣವೈಭವಮ್।
ಭೋಜನಾಂಬರ ಪಶ್ವಾದಿ ವ್ಯವಸಾಯೇಧಿಕಂ ಫಲಮ್ ॥೭೬॥

ದಶಾಪತಿಯಿಂದ ಕೇಂದ್ರ ತ್ರಿಕೋಣ ಅಥವಾ ಲಾಭ (11ರಲ್ಲಿ) ಬುಧನಿದ್ದರೆ ಅಂತರ ದಶಾದಲ್ಲಿ ಶಾರೀರಿಕ ಆರೋಗ್ಯ ಮಹತ್‌ರ ಲಾಭ ಪುತ್ರಾದಿ ಕಲ್ಯಾಣ ಭೋಜನ ವಸ್ತ್ರ ಪಶು ಆದಿಗಳ ವ್ಯಾಪಾರದಲ್ಲಿ ಲಾಭ( ಅಧಿಕಲಾಭ).

ದಾಯೋಶಾತ್ ಷಷ್ಠರಂಧ್ರೆ ವಾ ವ್ಯಯೇ಼ಽ ವಾ ಬಲವರ್ಜಿತೆ।
ತದ್‌ಭುಕ್ತ್ಯಾ ದೌ ಮಹಾಕ್ಲೇಶೊ ದಾರ ಪುತ್ರಾದಿಪೀಡನಮ್ ॥೭೭॥

**ರಾಜ ಭೀತಿಸ್ತಥಾ ಮಧ್ಯೆ ತೀರ್ಥ ಯಾತ್ರಾ ಶುಭಪ್ರದಾ ।**
**ದ್ವಿತೀಯ ದ್ಯೂನನಾಥೆ ತು ಹಾಪಮೃತ್ಯುರ್ಭವಿಷ್ಯತಿ ॥೭೮॥**
**ದೋಷಪರಿಹಾರಾರ್ಥ ವಿಷ್ಣು ಸಹಸ್ರಕಂ ಜಪೇತ್ ।**

ದಶಾಪತಿಯು 6, 8, 12ರಲ್ಲಿ ನಿರ್ಬಲ ಬುಧನಿದ್ದರೆ ಅಂತರದ ದಶಾಕಾಲದಲ್ಲಿ ಆರಂಭ ಮಹಾಕಷ್ಟ-ಸ್ತ್ರೀಪುತ್ರಾದಿಗಳಿಗೆ ಪೀಡೆ ರಾಜಭಯ ಉಂಟಾಗುತ್ತದೆ. ದಶಾ ಮಧ್ಯದಲ್ಲಿ ಶುಭಪ್ರದ ತೀರ್ಥಯಾತ್ರಾದಿಗಳು ಆದೆ ಬುಧ 2, 7ರ ಅಧೀಶನಾಗಿದ್ದರೆ ಅಪಮೃತ್ಯುಕಾರಕನಾಗಿರುತ್ತಾನೆ. ದೋಷ ಶಾಂತಿಗಾಗಿ ವಿಷ್ಣು ಸಹಸ್ರನಾಮ ಪಾಠ ಶ್ರೇಯಸ್ಕರ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಕೇತು ದಶಾಂತರದಶಾ ಅಧ್ಯಾಯಃ ಸಮಾಪ್ತಃ**

( ೬೧ನೇ ಅಧ್ಯಾಯ )

# ಅಥ ಶುಕ್ರ ದಶಾಂತರ್ದಶಾಧ್ಯಾಯಃ

## ಶುಕ್ರ ಮಹಾದಶಾದಲ್ಲಿ

### ಶುಕ್ರಾಂತರ್ದಶಾಫಲ

ಪರಾಶರ ಉವಾಚ:

ಶುಕ್ರೆ ಶುಕ್ರಾಂತರಗತೆ ಲಗ್ನಾತ್ ಕೇಂದ್ರ ತ್ರಿಕೋಣಗೆ ।
ಲಾಭೆ ವಾ ಬಲಸಂಯುಕ್ತೆ ಯೋಗ ಪ್ರಾಭಲ್ಯ ಮಾದಿಶೇತ್ ॥೧॥

ವಿಪ್ರಮೂಲಾದ್ದಿ ಸ್ವಾಪ್ತಿ ಗೋಮಹಿಷ್ಯಾದಿಕಸ್ಯ ಚ ।
ಪುತ್ರೋತ್ಸವಾದಿಸಂತೋಷೋ ಗೃಹೆ ಕಲ್ಯಾಣ ಸಂಭವಃ ॥೨॥

ಸಮ್ಮಾನಂ ರಾಜಸಮ್ಮಾನಂ ರಾಜ್ಯಲಾಭೊ ಮದಾಸುಖಮ್ ।
ಸ್ವೊಚ್ಚೆ ವಾ ಸ್ವಕ್ಷೇಗೆ ವಾಪಿ ತುಂಗಾಂಶೆ ಸ್ವಾಂಶಗೇಪಿ ವಾ ॥೩॥

ನೂತನಾಲಯ ನಿರ್ಮಾಣಾ ನಿತ್ಯಂ ಮೃಷ್ಟಾನ್ನ ಭೋಜನಮ್ ।
ಕಲತ್ರಪುತ್ರವಿಭವೋ ಮಿತ್ರಸಂಯುಕ್ತ ಭೋಜನಂ ॥೪॥

ಅನ್ನದಾನಂ ಪ್ರಿಯಂ ನಿತ್ಯಂ ದಾನಧರ್ಮಾದಿ ಸಂಗ್ರಹಃ।
ಮಹಾರಾಜ ಪ್ರಸಾದೇನ ವಾಹನಾಂಬರ ಭೂಷಣಮ್ ॥೫॥

ವ್ಯವಸಾಯಾತ್ ಫಲಾಧಿಕ್ಯಂ ಸಂಲಾಭಃ ಸ್ಯಾಚ್ಚತುಷ್ಪದಾಮ್ ।
ಪ್ರಯಾಣಾ ಪಶ್ಚಿಮೇ ಭಾಗೆ ವಾಹನವಾಸಸೋಃ ॥೬॥

ಲಗ್ನಾದ್ವ್ಯಾಪಚಯೆ ಶುಕ್ರೆ ಶುಭ ಖೇಟಸಮಾನ್ವಿತೆ ।
ಮಿತ್ರಾಂಶೆ ತುಂಗಲಾಭೋಶಯೋಗಕಾರ ಸಂಯುತೆ ॥೭॥
ರಾಜ್ಯಲಾಭೊ ಮಹೋತ್ಸಾಹೋ ರಾಜ ಪ್ರೀತಿಃ ಶುಭಾವಹಾ ।
ಗೃಹೆ ಕಲ್ಯಾಣ ಸಂಪತ್ತಿರ್ದಾರಾಪುತ್ರಾದಿವರ್ಧನಮ್ ॥೮॥

ಪರಾಶರರು ಹೇಳಿದರು– (ಹೆ ಮೈತ್ರೇಯ)

ಲಗ್ನದಿಂದ ಕೇಂದ್ರ ತ್ರಿಕೋಣ ಲಾಭಸ್ಥಾನದಲ್ಲಿ ಸಬಲ ಶುಕ್ರನಿದ್ದ ಅವನ

ದಶಾಂತರ್ದಶಾಕಾಲ ಪ್ರಬಲ ಯೋಗವೆಂದು ಕರೆಯಿಸಿಕೊಳ್ಳುತ್ತದೆ. ಈ ಸಮಯದಲ್ಲಿ ಬ್ರಾಹ್ಮಣ ಮುಖಾಂತರ ಧನಪ್ರಾಪ್ತಿ ಆಕಳು ಎಮ್ಮೆ ಲಾಭವೂ ಉಂಟು. ಪುತ್ರೋತ್ಸವ ಮನೆಯಲ್ಲಿ ಇತರ ಕಲ್ಯಾಣ ಕಾರ್ಯಗಳು, ಅದರ ರಾಜಸಮ್ಮಾನ, ರಾಜ ಲಾಭ ಹಾಗೂ ಸುಖಿ ಅದೇ ಶುಕ್ರ ಸ್ವೋಚ್ಚ ಸ್ವಭವನದಲ್ಲಿ ಉಚ್ಚಾಂಶ ಅಥವಾ ಸ್ವನವಾಂಶದಲ್ಲಿ ಅಂತರ ದಶಾಕಾಲದಲ್ಲಿ ಹೊಸ ಮನೆ ನಿರ್ಮಾಣ, ನಿತ್ಯ ಮೃಷ್ಟಾನ್ನ ಭೋಜನ, ಸ್ತ್ರೀಪುತ್ರರಿಗೆ ಐಶ್ವರ್ಯ, ಮಿತ್ರರೊಂದಿಗೆ ಭೋಜನಾವಕಾಶ, ಅನ್ನದಾನ ಹಾಗೂ ಧರ್ಮ, ರಾಜಕೃಪಾದಿಂದ ವಾಹನ, ವಸ್ತ್ರ, ಭೂಷಣ ಆದಿ ಪ್ರಾಪ್ತಿ. ವ್ಯವಸಾಯದಲ್ಲಿ ಫಲಾದಿತ್ಯ, ಪಶುಲಾಭ, ಪಶ್ಚಿಮ ದಿಕ್ಕಿನಲ್ಲಿ ಯಾತ್ರೆ.

ಅದೇ ಶುಕ್ರ ಲಗ್ನದಿಂದ (3, 6, 10, 11)ರಲ್ಲಿ ಶುಭ ಗ್ರಹದ ಜತೆಗಿದ್ದರೆ ಅಥವಾ ದೃಷ್ಟವಾಗಿದ್ದರೆ ಮಿತ್ರ ನವಾಂಶ ಅಥವಾ ಉಚ್ಚದಲ್ಲಿ ಲಾಭೇಶ ಅಥವಾ ಯೋಗ ಕಾರಕ ಗ್ರಹದ ಜತೆಗೆ ಇದ್ದಾಗ ರಾಜ್ಯಲಾಭ, ಮಹೋತ್ಸಾಹ ಸುಖ, ರಾಜಪ್ರೇಮ ಮನೆಯಲ್ಲಿ ಕಲ್ಯಾಣ ವೃದ್ಧಿ ಹಾಗೂ ಸ್ತ್ರೀಪುತ್ರಾದಿಗಳಿಗೆ ಸುಖದಲ್ಲಿ ಕಾರ್ಯವೃದ್ಧಿ.

ಷಷ್ಠಾಷ್ಟಯವ್ಯಯೇ ಶುಕ್ರೇ ಪಾಪಯುಕ್ತೇಥ ವೀಕ್ಷಿತೇ<br>
ಚೌರಾದಿವ್ರಣ ಃಭೀತಿಸ್ತು ಸರ್ವತ್ರ ಜನಪೀಡನಮ್ ॥೯॥

ರಾಜದ್ವಾರೆ ಜನದ್ವೇಷ ಇಷ್ಟಬಂಧುವಿನಾಶನಮ್ ।<br>
ದಾರಪುತ್ರಾದಿ ಪೀಡಾ ಚ ಸರ್ವತ್ರ ಜನಪೀಡನಮ್ ॥೧೦॥

ಶುಕ್ರ 6, 8, 12ರಲ್ಲಿ ಪಾಪಯುತ ದೃಷ್ಟನಾಗಿದ್ದರೆ ಕಳ್ಳರಿಂದ ಹಾಗೂ ವ್ರಣಾದಿ ರೋಗ ಭಯ, ರಾಜದ್ವಾರ (ಕಾರ್ಯಾಲಯ) ಜನರಿಂದ ದ್ವೇಷ, ಇಷ್ಟ ಜನರ ವಿನಾಶ ಸ್ತ್ರೀ ಪುತ್ರಾದಿಗಳಿಗೆ ಕಷ್ಟ, ಜನಪೀಡನ.

ದ್ವಿತೀಯದ್ಯೂನನಾಥೆ ತು ಸ್ಥಿತೆ ಚೇನ್ಮರಣಾ ಭವೇತ್ ।<br>
ದುರ್ಗಾಜಪಂ ಪ್ರಕುರ್ವಿತ ಧೇನು ದಾನಂ ಚ ಕಾದಯೇತ್ ॥೧೧॥

ಅದೇ ಶುಕ್ರ 2, 7ರ ಅಧಿಪನಾಗಿದ್ದರೆ ಮರಣವನ್ನು ತರುತ್ತಾನೆ. ಶಾಂತಿಗಾಗಿ ದುರ್ಗಾಪೂಜೆ ಜಪ ಹಾಗೂ ಗೋದಾನಾದಿ ಶ್ರೇಯಸ್ಕರ.

## ಸೂರ್ಯಾಂತರ್ದಶಾಫಲ

ಶುಕ್ರಸ್ಯಾಂತರ್ಗತೆ ಸೂರ್ಯೇ ಸಂತಾಪೋ ರಾಜಭೀಃ ಕಲಿಃ ।<br>
ದಾಯಾದಾತ ಕಲಹಶ್ಚೈವ ಶುಭಕ್ಷೇತ್ರಾನ್ಯರಾಶಿಗೆ। ।೧೨॥

ಶುಭರಾಶಿಯಿಂದ ಅನ್ಯತ್ರ ಸೂರ್ಯನಿದ್ದರೆ ಶುಕ್ರ ಮಹಾದಶಾ ಸೂರ್ಯ ಅಂತರದಶಾ ಸಂತಾಪದಾಯಕ ದಾಯಾದಿಗಳೊಡನೆ ವಿರೋಧವಾಗುತ್ತದೆ.

ಸ್ವೋಚ್ಚೆ ಸ್ವಕ್ಷೇತ್ರಗೆ ಸೂರ್ಯೆ, ಮಿತ್ರಕ್ಷೇಕೇಂದ್ರಕೋಣಗೆ
ದಾಯಶಾತ್ಕೆಂದ್ರಕೋಣೆ ವಾ ಲಾಭೆ ವಾ ಧನಗೇ ಪಿ ವಾ ॥೧೩॥

ತದ್‌ಭುಕ್ತೌ ಧನಲಾಭಃ ಸ್ಯಾದ್ರಾಜ್ಯಸ್ತ್ರಿ ಧನ ಸಮಪದಃ ।
ಸ್ವಪಭೋಶ್ಚ ಮಹತೌಖ್ಯಮಿಷ್ಟಬಂಧೋಃ ಸಮಾಗಮಃ ॥೧೪॥

ಮಾತಾಪಿ ತ್ರೋಃ ಸುಖವಾಪ್ತಿಂ ಭ್ರಾತೃಲಾಭಂ ಸುಖವಹಮ್ ।
ಸತ್ಕೀರ್ತಿ ಸುಖಸೌಭಾಗ್ಯಂ ಪುತ್ರಲಾಭಂ ಚ ವಿಂದತಿ ॥೧೫॥

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವನ ಅಥವಾ ಮಿತ್ರಗ್ರಹದಲ್ಲಿ, ದಶೇಶನಿಂದ ಕೇಂದ್ರ ತ್ರಿಕೋಣ ಲಾಭಸ್ಥಾನ ಅಥವಾ ಧನಸ್ಥಾನದಲ್ಲಿ ಸ್ಥಿತ ಸೂರ್ಯ ಅಂತರದಶಾಕಾಲದಲ್ಲಿ ಧನಲಾಭ ರಾಜ್ಯಲಾಭ, ಸ್ತ್ರೀ, ಧನ ಸಂಪತ್ತಿನ ಸುಖ, ತನ್ನ ಯಜಮಾನನಿಂದ ಮಹಾಸುಖ, ಇಷ್ಟಮಿತ್ರರ ಸುಭಾಗಮ-ತಂದೆ ತಾಯಿಯ ಸುಖ, ಭ್ರಾತೃಸುಖ, ಸರ್ವರ ಸೌಭಾಗ್ಯೋದಯ ಪುತ್ರಲಾಭಾದಿಯೋಗ.

ಅಷ್ಟಮೇ ಚ ವ್ಯಯೇ ಸೂರ್ಯೇ ಷಷ್ಠಸ್ಥಾನ ಸ್ಥಿತೇಪಿವಾ ।
ನೀಚೆ ವಾ ಪಾಪ ವರ್ಗಸ್ಥೆ ದೇಹ ತಾಪೋ ಮನೋರುಜಾ ॥೧೬॥

ಸ್ವಜನಾತ್ ಪರಿಸಂಕ್ಲೇಶೋ ನಿತ್ಯಂ ಮೃಷ್ಟಾನ್ನ ಭೋಜನಮ್ ।
ಪಿತೃಪೀಡಾ ಬಂಧು ಹಾನಿ ರಾಜದ್ವಾರೆ ವಿರೋಧನಮ್ ॥೧೭॥

ವ್ರಣಪೀಡಾಂ ಬಾಧಾ ಚ ಸ್ವಗೇಹೆ ತು ಭಯಂ ತಥಾ ।
ನಾನಾರೋಗಭಯಂ ಚೈವ ಗ್ರಹಕ್ಷೇತ್ರಾದಿ ನಾಶನಮ್ ॥೧೮॥

ಆದೆ ಸೂರ್ಯ 6, 8, 12ರಲ್ಲಿ ಪಾಪವರ್ಗದಲ್ಲಿದ್ದರೆ ಅಂತರದಶಾದಲ್ಲಿ (6ನೇ ಸ್ಥಾನಪಾಪಗ್ರಹಸೂರ್ಯನಿಗೆ ಬಲಿಷ್ಠಸ್ಥಾನವಾದ್ದರಿಂದ ತುಲಾ ರಾಶಿಯಲ್ಲಿದ್ದರೆ ಎಂದು ಗ್ರಹಿಸುವರು) ಶರೀರಿ ಬಾಧೆ, ಜ್ವರ, ಮಾನಸಿಕ ಕಷ್ಟ, ಸ್ವಜನರಿಂದಲೇ ಕ್ಲೇಶದಾಯಕ, ನಿತ್ಯ ಮೃಷ್ಟಾನ್ನ ಭೋಜನ, ಪಿತಾಗೆ (ತಂದೆಗೆ) ಕಷ್ಟ, ಬಂಧುಗಳಿಗೆ ಹಾನಿ, ರಾಜದ್ವಾರ (ಕಾರ್ಯಾಲಯ)ದಲ್ಲಿ ವಿರೋಧ ವ್ರಣ ಹಾಗೂ ಸರ್ಪದಿಂದ ತೊಂದರೆ, ರೋಗಾದಿ ಭಯ, ಮನೆ ಹಾಗೂ ಹೊಲ ವಿನಾಶದತ್ತ-

ಸಪ್ತಮಾಧಿಪತೌ ತತ್ರ ಗ್ರಹಬಾಧಾ ಭವಿಷ್ಯತಿ ।
ತದ್ದೋಪ ಪರಿಹಾರಾರ್ಥ ಸೂರ್ಯ ಪ್ರೀತಿಂ ಚಕಾರಯೇತ್ ॥೧೯॥

ಸೂರ್ಯ ಸಪ್ತಮೇಶನಾಗಿದ್ದರೆ ಗ್ರಹ ಬಾಧಾವುಂಟಾಗುತ್ತದೆ. ಅದರ ಪರಿಹಾರಕ್ಕೆ ಸೂರ್ಯ ಪ್ರೀತಿ ಅಂದರೆ ಶಾಂತಿ ಸೂರ್ಯ ಹೋಮಾದಿ ಕೈಗೊಳ್ಳುವುದು ಉಪಾಸನೆಯೂ ಸರಿ.

### ಚಂದ್ರಾಂತರ್ದಶಾಫಲ

ಶುಕ್ರಾಸ್ಯಾಂತರ್ಗತೆ ಚಂದ್ರೆ ಕೇಂದ್ರಲಾಭ ತ್ರಿಕೋಣಗೆ ।
ಸೋಚ್ಚೆ ಸ್ವಕ್ಷೇತ್ರಗೆ ಚೈವ ಭಾಗ್ಯೇಶೇನ ಚ ಸಂಯುತೆ ॥೨೦॥

ಶುಭಯುಕ್ತೆ ಪೂರ್ಣಚಂದ್ರೆ ರಾಜ್ಯನಾಥೇನ ಸಂಯುತೆ ।
ತದ್‌ಭುಕ್ತೌ ವಾಹನ ಸುಖಂ ಗೃಹೆ ಲಾಭಃ ಶುಭಾವಹಃ ॥೨೧॥

ಮಹಾರಾಜ ಪ್ರಸಾದೇನ ಗಜಾಂತೈಶ್ವರ್ಯ ಮಾದಿಶೇತ್ ।
ಮಹಾನದಿಸ್ನಾನ ಪುಣ್ಯಂ ದೇವ ಬ್ರಾಹ್ಮಣ ಪೂಜನಮ್ ॥೨೨॥

ಗೀತವಾದ್ಯ ಪ್ರಸಾಂಗಾದಿ ವಿದ್ವಜ್ಜನ ವಿಭೂಷಣಮ್ ।
ಗೋಮಹಿಷ್ಯಾದಿವೃದ್ಧಿಶ್ಚ ವ್ಯವಸಾಯೋಧಿಕಂ ಫಲಮ್ ॥೨೩॥

ಭೋಜನಾಂಬರಸೌಖ್ಯಂ ಚ ಬಂಧುಸಂಯುಕ್ತ ಭೋಜನಮ್ ।

ಕೇಂದ್ರ ತ್ರಿಕೋಣ ಲಾಭಸ್ಥಾನ, ಸ್ವೋಚ್ಚ, ಸ್ವಭವನದಲ್ಲಿದ್ದ ಚಂದ್ರ ಏಕಾದಶೀಶನ, ಕರ್ಮೇಶ(10) ಅಥವಾ ಅನ್ಯಶುಭ ಗ್ರಹದ ಜತೆಗೆಯಿದ್ದರೆ ಶುಕ್ರದಶಾ ಚಂದ್ರ ಅಂತರ ದಶಾಕಾಲ ವಾಹನಸುಖ, ಮನೆಯಲ್ಲಿ ಶುಭ ಲಾಭ, ರಾಜನ ಕೃಪೆಯಿಂದ ಗಜಾಂತ (ಆನೇ ಭಾರದಷ್ಟು) ಐಶ್ವರ್ಯದ ಪ್ರಾಪ್ತಿ, ಮಹಾನದಿಗಳಲ್ಲಿ (ಗಂಗಾ, ಜಮುನಾ) ಸ್ನಾನ ದೇವ ಬ್ರಾಹ್ಮಣರ ಪೂಜೆ, ಸಂಗೀತ ವಾದ್ಯಗಳಲ್ಲಿ, ಭಾಗ್ಯ ವಹಿಸುವ ಪ್ರಸಂಗ, ವಿದ್ವಜನರ ಸಂಗ್ಯಫಲ, ಆಕಳು ಎಮ್ಮೆ ಆದಿ ಪಶು ವೃದ್ಧಿಯಾಗುವಿಕೆ, ವ್ಯಾಪಾರದಲ್ಲಿ ಅಧಿಕಲಾಭ, ಭೋಜನ ವಸ್ತ್ರಸೌಖ್ಯ ದೊರೆಯುವಿಕೆ.

ನೀಚೆ ವಾಸ್ತಂಗತೆ ವಾಪಿ ಷಷ್ಟಾಷ್ಟವ್ಯಾಯರಾಶಿಗೆ ॥೨೪॥

ದಾಯೋಶಾತ್ ಷಷ್ಠಗೆ ವಾಪಿ ರಂಧ್ರೆ ವಾ ವ್ಯಯರಾಶಿಗೆ ।
ತತ್ಕಾಲೆ ಧನನಾಶಃ ಸ್ಯಾದಪಿ ಕಷ್ಟಂ ಮಹದ್ ಭಯಮ್ ॥೨೫॥

ದಹಾಯಾಸೋ ಮನಸ್ತಾಪೋ ರಾಜದ್ವಾರೆ ವಿರೋಧನಮ್ ।
ವಿದೇಶಗಮನಂ ಚೈವ ತೀರ್ಥಯಾತ್ರಾದಿಕಂ ಫಲಮ್ ॥೨೬॥

ದಾರ-ಪುತ್ರಾದಿಪೀಡಾ ಚ ನಿಜಬಂಧುವಿಯೋಜನಮ್ ।

ಅದೆ ಚಂದ್ರ ಲಗ್ನದಿಂದ 6, 8, 12ರಲ್ಲಿ ನೀಚಸ್ಥ ಅಥವಾ ಅಸ್ತಂಗತ (ಚಂದ್ರ ಅಸ್ತನಾಗಿದ್ದರಿಂದ ಅಮಾವಾಸ್ಯೆಯ ಕೋಣನೆಂದು ಪರಿಗ್ರಹಿಸುವುದು) ಅಥವಾ ದಶಾಪತಿಯಿಂದ 6, 8, 12ರಲ್ಲಿದ್ದರೆ ಧನನಾಶ, ಕಷ್ಟ, ಮಹಾಭಯ, ಶಾರೀರಿಕ ಕ್ಲೇಶ, ಮನಸ್ತಾಪ, ರಾಜದ್ವಾರ (ಕಾರ್ಯಾಲಯ)ದಲ್ಲಿ ವಿರೋಧ ಹಾಗೂ ವಿದೇಶಿ ಯಾತ್ರೆ, ತೀರ್ಥಯಾತ್ರೆ, ಸ್ತ್ರೀಪುತ್ರಾದಿಗಳಿಗೆ ಕಷ್ಟ, ಬಂಧುಜನರಿಂದ ವಿರೋಧ.

ದಾಯೇಶಾತ್ ಕೇಂದ್ರಲಾಭೆಸ್ಥೆ ತ್ರಿಕೋಣೆ, ವಿಕ್ರಮೇಪಿ ವಾ ॥೨೭॥

ರಾಜಪ್ರೀತ್ಯಾ ಭವೇತ್ ಸದ್ಯೋ ದೇಶ ಗ್ರಾಮಧಿಪತ್ಯಕಮ್ ।
ಧೈರ್ಯಂ ಚೈವ ಸುಖಂ ಕೀರ್ತಿರ್ವಾಹನಾಂಬರ ಭೂಷಣಮ್ ॥೨೮॥

ಕೂಪಾರಾಮತಡಾಗಾದಿ ನಿರ್ಮಾಣ ಧನಸಂಗ್ರಹಃ ।
ಭುಕ್ತ್ಯಾದೌ ದೇಹಸೌಖ್ಯಂ ಸ್ಯಾದಂತೆ ಕ್ಲೇಶೋ ಮಹಾನ್ ಭವೇತಿ ॥೨೯॥

ಚಂದ್ರನ ದಶಾಪತಿಯಿಂದ ಕೇಂದ್ರ ತ್ರಿಕೋಣ ಲಾಭಸ್ಥಾನ ತೃತೀಯ ಸ್ಥಾನದಲ್ಲಿದ್ದರೆ ಅಂತರದಶಾ ಕಾಲದಲ್ಲಿ ರಾಜಕೃಪೆಯಿಂದ ದೇಶ ಗ್ರಾಮದ ಸ್ವಾಯಿತ್ವ (ಅಧಿಕಾರಾದಿ) ಧೈರ್ಯಯಶ ಸುಖ ವಾಹನಸೌಖ್ಯ-ಆದರೆ ಅಂತ್ಯದಲ್ಲಿ ಮಹಾಕ್ಲೇಶನಕ್ಕೆ ನಿರ್ದೇಶಿಸುವುದು.

## ಕುಜಾಂತರ್ದಶಾ ಫಲ

ಶುಕ್ರಾಸ್ಯಾಂತರ್ಗತೆ ಭೌಮೆ ಲಗ್ನಾತ್ ಕೇಂದ್ರ ತ್ರಿಕೋಣಗೆ ।
ಸ್ವೋಚ್ಚೆ ವಾ ಸ್ವಕ್ಷರ್ಗೆ ಭೌಮೆ ಲಾಭೆ ವಾ ಬಲಸಂಯುತೆ ॥೩೦॥

ಲಗ್ನಾಧಿಪೇನ ಸಂಯುಕ್ತೆ ಕರ್ಮ ಭಾಗ್ಯೇಸಂಯುತೆ ।
ತದ್ ಭುಕ್ತೌ ರಾಜಯೋಗಾದಿ ಸಂಪದಃ ಶೋಭನಾಮತಃ ॥೩೧॥

ವಸ್ತ್ರಾಭರಣ ಭೂಮ್ಯಾದೇರಿಷ್ಟಸಿದ್ಧಿಃ ಸುಖಾವಹಾ ।

ಲಗ್ನದಿಂದ ಕೇಂದ್ರ ತ್ರಿಕೋಣ ಸ್ವೋಚ್ಚ ಸ್ವಭವನ ಹಾಗೂ ಲಾಭಸ್ಥಾನದಲ್ಲಿ ಪ್ರಬಲ ಮಂಗಳ ನಿದ್ಯ ಲಗ್ನೇಶ ತಮೇಶ ಅಥವಾ ಭಾಗ್ಯೇಶರ ಜತೆಗಿದ್ದರೆ ಶುಕ್ರ ದಶಾದಲ್ಲಿ ಮಂಗಳನ ಅಂತರದಶಾ ಬಂದಾಗ ರಾಜಯೋಗ ಯುಕ್ತ ವಿಶಿಷ್ಟ ಸಂಪತ್ತು ದೊರಕುತ್ತದೆ. ವಾಹನ ಭೂಷಣ ಹಾಗೂ ಭೂಮಿಯ ಲಾಭ ಹಾಗೂ ಸುಖ ಪ್ರದ ಅಭಿಷ್ಟಸಿದ್ಧಿಯೋಗವು ಅಹುದು.

ತಥಾಷ್ಟಮೆ ವ್ಯಯೋ ವಾಪಿ ದಾಯೋಶಾದ್ ತಥೈವ ಚ ॥೩೨॥

ಶೀತಜ್ವರಾದಿಪೀಡಾ ಚ ಪಿತೃ ಮಾತೃ ಭಯಾವಹಾ ।
ಜ್ವರಾದ್ಯಧಿಕರೋಗಾಶ್ಚ ಸ್ಥಾನ ಭ್ರಂಶೋ ಮನೋರುಜಾ ॥೩೩॥

ಸ್ವಬಂಧು ಜನದಾನಿಶ್ಚ ಕಲಹೊ ರಾಜಭಿಃ ಸಹ ।
ರಾಜದ್ವಾರ ಜನೈರ್ದ್ವೇಷೊ ಧನಧಾನ್ಯವ್ಯಯೋಧಿಕಃ ॥೩೪॥

ವ್ಯವಸಾಯಾತ್ ಫಲಂ ನೇಷ್ಟಂ ಹಾನಿರ್ಭೂ ಮ್ಯಾದಿಕಸ್ಯ ಚ ।

ಲಗ್ನ ಅಥವಾ ದಶಾಪತಿಯಿಂದ 8, 12ರಲ್ಲಿ ಮಂಗಳನಿದ್ದರೆ ಅಂತರ ದಶಾಕಾಲದಲ್ಲಿ ತಂದೆ ತಾಯಿಗೆ ಭಯಕೊಡುವವನಾಗುತ್ತಾನೆ. ಶೀತಜ್ವರದಿಂದ ಕಷ್ಟ, ಅನ್ಯರೋಗಾಧಿಕ್ಯದಿಂದ ಕಷ್ಟ, ಸ್ಥಾನ ಭ್ರಂಶ ಮನೋರುಜಾ॥33॥

ಸ್ವಬಂಧುಜನಹಾನಿಶ್ಚ ಕಲಹೋ ರಾಜಭಿಃ ಸಹ ಎಂದಿರುವುದರಿಂದ ಸ್ವಬಂಧುಗಳೊಡನೆ ಸದಾ ಕಲಹಕಾರಕ ಹಾಗೂ ಅವರಿಗೆ ಹಾನಿದಾಯಕನಾಗಿ ರಾಜನೊಂದಿಗೆ (ಅಧಿಕಾರಿ) ವಿರೋಧ ರಾಜದ್ವಾರ (ಕಾರ್ಯಾಲಯದಲ್ಲಿ) ಅಧಿಕಾರಿಗಳೊಂದಿಗೆ ವಿರೋಧ, ಧನಧಾನ್ಯವ್ಯಯ ವ್ಯಾಪಾರದಲ್ಲಿ ಹಾನಿ, ಭೂಮಿ ಆದಿಹಾನಿ.

ದ್ವಿತೀಯ ದ್ಯೂನಾಥೆ ತು ದೇಹಬಾಧಾ ಭವಿಷ್ಯತಿ ॥೩೫॥

ತದ್ದೋಷಪರಿಹಾರಾರ್ಥ ಶಾಂತಿಂ ಕುರ್ಯಾದ್ಯಥಾ ವಿಧಿ ।

ಅದೆ ಮಂಗಳ 2, 7ರ ಅಧಿಪನಾಗಿದ್ದರೆ ಶಾರೀರಿಕ ಕಷ್ಟ ಹಾಗೂ ಇತರ ಬಾದೆ ಈ ದೋಷ ನಿವಾರಣೆಗಾಗಿ ಯಥಾ ವಿಧಿ ಶಾಂತಿ ಕಾರ್ಯ ಕೈಕೊಳ್ಳುವುದು ವಿಹಿತ, ಶುಕ್ರ-ಕುಜ ಶಾಂತಿ-

## ರಾಹ್ವಂತರ್ದಶಾ ಫಲ

ಶುಕ್ರಸ್ಯಾಂತರ್ಗತೆ ರಾಹೌ ಕೇಂದ್ರಲಾಭ ತ್ರಿಕೋಣಗೆ ।
ಸ್ವೋಚ್ಚೆ ವಾ ಸುಭಸಂದೃಷ್ಟೆ ಯೋಗಕಾರಕ ಸಂಯತೆ ॥೩೬॥
ತದ್ ಭುಕ್ತೌ ಬಹುಸೌಖ್ಯಂ ಚ ಸಂಲಾಭೋ ಧನಧಾನ್ಯಯೋಃ ।
ಇಷ್ಟಬಂಧುಸಮಾಕೀರ್ಣ ಭೋಜನಂ ಭವನೆ ಭವೆತ್ ॥೩೭॥
ಯಾತುಃ ಕಾರ್ಯಾರ್ಥಸಿದ್ಧಿಃ ಸ್ಯಾತ್ ಪಶುಕ್ಷೇತ್ರಾದಿ ಸಂಭವಃ ।
ಲಗ್ನಾದ್ಯುಪಚಯೆ ರಾಹೌ ತದ್ ಭುಕ್ತಿಃ ಸುಖದಾಭವೇತ್ ॥೩೮॥

ಶತ್ರುನಾಶೋ ಮಹೋತ್ಸಾಹೊ ರಾಜ ಪ್ರೀತಿಃ ಶುಭಾವಹಾ ।
ಭುಕ್ತ್ಯಾದೌ ಶರಮಾಸಾಂಶ್ಚಾಪ್ಯಯಂತೇಜೀರ್ಣ ತಥಾ ಜ್ವರಃ ॥೩೯॥

ಕೇಂದ್ರ ತ್ರಿಕೋಣ, ತನ್ನ ಉಚ್ಚ, ಲಾಭಸ್ಥಾನದಲ್ಲಿ ರಾಹು ಇದ್ದು, ಶುಭ ಗ್ರಹಯುತ ಅಥವಾ ದೃಷ್ಟನಾಗಿದ್ದಾಗ ಹಾಗೂ ಯೋಗಕಾರಕ ಗ್ರಹವು ಅವನ ಜತೆಗಿದ್ದರೆ ಶುಕ್ರದಶಾದಲ್ಲಿ ರಾಹು ಅಂತರದಶಾ ಬಂದಾಗ ಪರಮಸುಖ ಧನ ಧಾನ್ಯದ ಲಾಭ. ಇಷ್ಟ ಬಂಧುಗಳೊಡನೆ ಭೋಜನ, ಯಾತ್ರಾಯಲ್ಲಿ ಕಾರ್ಯಸಿದ್ಧಿ; ಪಶು ಹಾಗೂ ಕ್ಷೇತ್ರಲಾಭ, ಲಗ್ನದಿಂದ ಉಪಚಯ ಸ್ಥಾನ 3, 6, 10, 11ರಲ್ಲಿ ರಾಹು ಇದ್ದರೆ ಅಂತರದಶಾ ಕಾಲ ಶುಭಪ್ರದವಾಗುತ್ತದೆ. ಆಗ ಶತ್ರುನಾಶ, ಉತ್ಸಾಹ ಹೆಚ್ಚುವಿಕೆ, ರಾಜಪ್ರಸನ್ನತಾ ಆದಿ ಶುಭಫಲ, ಅಂತರದಶಾರಂಭದಿಂದ 5 ತಿಂಗಳ ಶುಭಫಲ, ಈ ದಶಾದಲ್ಲಿ ಅಜೀರ್ಣ, ಜ್ವರಕೋಪ ಸಾಮಾನ್ಯವಾಗಿರುತ್ತದೆ.

ಕಾರ್ಯೇ ವಿಘ್ನಮವಾಪ್ನೋತಿ ಸಂಚಾರೆ ಚ ಮನೋವ್ಯಥಾ ।
ಪರಂಸುಖಂ ಚ ಸೌಭಾಗ್ಯಂ ನೃಪತುಲ್ಯಂ ಪ್ರಜಾಯತೆ ॥೪೦॥

ನೈರ್ಋತಿಂ ದಿಶಾಮಾಶ್ರೀತತ್ಯ ಪ್ರಯಾಣು ಪ್ರಭುದರ್ಶನಂ
ಯಾತುಃ ಕಾರ್ಯಾರ್ಥಸಿದ್ಧಿಃ ಸ್ಯಾತ್ ಸ್ವದೇಶೆ ಪುನರೇಷ್ಯತಿ ॥೪೧॥

ಉಪಕಾರೋ ಬ್ರಾಹ್ಮಣಾನಾಂ ತೀರ್ಥಯಾತ್ರಾಫಲಂ ಭವೇತ್ ।

ಕಾರ್ಯವಿಘ್ನ ಯಾತ್ರೆಯಲ್ಲಿ ಮನೋವ್ಯಥಾ ಆದಯರಾಜರಂತೆ ಸೌಭಾಗ್ಯ ಪೂರ್ಣ ಸುಖ ನೈರುತ್ಯ ದಿಕ್ಕಿಗೆ ಯಾತ್ರೆ ಹಾಗೂರಾಜದರ್ಶನ ಯಾತ್ರೆಯಲ್ಲಿ ಕಾರ್ಯಸಿದ್ಧಿ ಸ್ವದೇಶಕ್ಕೆ ಮರಳಿ ಬರುವಿಕೆ, ಬ್ರಾಹ್ಮಣರಿಗೆ ಉಪಕಾರ ಮಾಡುವಿಕೆ ತೀರ್ಥ ಯಾತ್ರಾ ಫಲ ದೊರೆಯುವಿಕೆ.

ದಾಯೇಶಾದ್ರಂಧ್ರರಾಶಿಸ್ಥೆ ವ್ಯಯೋ ವಾ ಪಾಪಸಂಯುತೇ ॥೪೨॥

ಅಶುಭಂ ಲಭೆತೆ ಕರ್ಮ ಪಿತೃಮಾತೃಜನಾವಧಿ ।
ಸರ್ವತ್ರ ಜನವಿದ್ವೇಷೊ ನಾನಾರೂಪೇಣ ಜಾಯತೆ ॥೪೩॥

ದ್ವಿತೀಯೋ ಸಪ್ತಮೆ ವಾಪಿ ದೇಹಲಸ್ಯಂ ವಿನಿರ್ದಿಶೀತ ।
ತದ್ದೋಶ ಪರಿಹಾರಾರ್ಥ ಮೃತ್ಯುಂಜಯ ಜಪಂ ಚರೇತ್

ದಶಾಧೀಶನಿಂದ 8, 12ರಲ್ಲಿ ಪಾಪಯುತ ರಾಹು ಇದ್ದರೆ ತಂದೆ ತಾಯಿಗೆ ಅಶುಭ ಫಲ ಹಾಗೂ ಸರ್ವತ್ರ ಜನದ್ವೇಷವೂ ಅದೇ ರಾಹು 2, 7ರಲ್ಲಿದ್ದರೆ ಶರೀರ

ಆಲಸ್ಯ ಹೇಳುವುದು, ದೋಷ ಪರಿಹಾರಕ್ಕೆ ಮೃತ್ಯುಂಜಯ ಜಪ ಕಲ್ಯಾಣಕಾರಕ ವಾಗುತ್ತದೆ.

## ಗುರ್ವಂತರ್ದಶಾ ಫಲ

ಶುಕ್ರಸ್ಯಾಂತರ್ಗತೆ ಜೀವೆ ಸೋಚ್ಚೆ ಸ್ವಕ್ಷೇತ್ರ ಕೇಂದ್ರಗೆ ।
ದಾಯೇಶಾಚ್ಛುಭರಾಶಿಸ್ಥೆ ಭಾಗ್ಯೆ ವಾ ಪಂಚಮೇ ಥವಾ ॥೪೫॥

ನಷ್ಟರಾಜ್ಯಾದ್ಧನ ಪ್ರಾಪ್ತಿರಿಷ್ಟಾರ್ಥಾಂಭರಸಂಪದಃ ।
ಮಿತ್ರ ಪ್ರಭೋಶ್ಚ ಸಮ್ಮಾನಂ ಧನಧಾನ್ಯ ತಥೈವ ಚ ॥೪೬॥

ರಾಜಸಮ್ಮಾನ ಕೀರ್ತಿ ಚಾಪ್ಯಶ್ವಾಂದೋಲಾದಿಜಂ ಸುಖಮ್ ।
ವಿದ್ವತ್ಪ್ರಭುಸಮಾಯುತಂ ಶಾಸ್ತ್ರಪಾಠಪರಿಶ್ರಮಮ್ ॥೪೭॥

ಪುತ್ರೋತ್ಸವಾದಿ ಸಂತೋಷಮಿಷ್ಟ ಬಂಧು ಸಮಾಗಮಮ್ ।
ಪಿತೃಮಾತೃಸುತಭ್ರಾತೃ ಪ್ರಭೃತೇಃ ಸುಖ ಮಾಪ್ನುಯಾತ್ ॥೪೮॥

ಲಗ್ನ ಅಥವಾ ದಶಾಧಿಪನಿಂದ (ಶುಕ್ರನಿಂದ) ಕೇಂದ್ರ ತ್ರಿಕೋಣ ಉಚ್ಚ ಸ್ವಗ್ರಹ ಅಥವಾ ಶುಭರಾಶಿಯಲ್ಲಿ ಗುರು ಇದ್ದು, ಶುಕ್ರ ದಶಾದಲ್ಲಿ ಅಂತರ ದಶಾಧೀಶನಾಗಿದ್ದಾಗ ನಷ್ಟರಾಜ್ಯದಿಂದ ಧನಪ್ರಾಪ್ತಿ, ಅಭಿಷ್ಟಧನ ವಸ್ತ್ರ ಹಾಗೂ ಇತರ ಸಂಪತ್ತು ಪ್ರಾಪ್ತಿಯಾಗುತ್ತದೆ. ಮಿತ್ರರಾಜರಿಂದ ಸನ್ಮಾನ ಧನಧಾನ್ಯಗಮ ರಾಜ ಸನ್ಮಾನ ಪೂರ್ಣ ಯಶಸ್ಸು ಕುದುರೆ ಪಾಲುಕೆ ಆರೋಹಣ, ಆದಿಸುಖ ವಿದ್ವಾನ್ ಸ್ವಾಮಿಯ ಶುಭಾಗಮ ಶಾಸ್ತ್ರಪಾಠದಲ್ಲಿ ಶ್ರಮ, ಪುತ್ರೋತ್ಸವ ಯುಕ್ತ ಸಂತೋಷ ಇದ್ದ ಬಂಧುಗಳ ಆಗಮನ ಮಾತಾಪಿತೃಪುತ್ರ, ಅಣ್ಣತಮ್ಮರಿಗೆ ಸುಖಪ್ರಾಪ್ತಿಯೂವುಂಟು.

ದಾಯೇಶಾತ್ ಷಷ್ಠರಾಶಿಸ್ಥೆ ವ್ಯಯೇ ವಾ ಪಾಪ ಸಂಯುತೆ ।
ರಾಜಚೌರಾದಿಪೀಡಾ ಚ ದೇಹಪೀಡಾ ತಥೈವ ಚ ॥೪೯॥

ಆತ್ಮರುಗ್ಬಂಧು ಕಷ್ಟಂ ಚ ಕಲಹೇನ ಮನೋವ್ಯಥಾ ।
ಸ್ಥಾನ ಚ್ಯುತಿಃ ಪ್ರವಾಸಶ್ಚ ನಾನಾರೋಗಾ ಭವಂತಿ ಹಿ ॥೫೦॥

ದ್ವಿತೀಯಸಪ್ತಮಾಧೀಶೆ ದೇಹಬಾಧಾ ಭವಿಷ್ಯತಿ ।
ತದ್ದೋಶ ಪರಿಹಾರಾರ್ಥ ಮೃತ್ಯುಂಜಯಜಪಂ ಚರೇತ ॥೫೦॥

ದಶಾಪತಿಯಿಂದ 6, 12ರಲ್ಲಿ ಪಾಪಯುಕ್ತಗುಣ ಇದ್ದರೆ ಅವನ ಅಂತರದಶಾ

ದಲ್ಲಿ ರಾಜ ಕಳ್ಳರಿಂದ ಕಷ್ಟ ಶಾರೀರಿಕ ಪೀಡೆ ಸ್ವಂತಕ್ಕೆ ರೋಗಭಯ ಬಂಧುಗಳಿಗೆ ಕಷ್ಟ ಕಲಹದಿಂದ ಮನೋವ್ಯಥಾ ಸ್ಥಾನಭ್ರಂಶ ಪ್ರವಾಸ ಹಾಗೂ ಅನೇಕ ತರಹದ ರೋಗಭಯ ಅದೇ ಗುರು 2, 7ರಲ್ಲಿದ್ದರೆ ಅದರ ಅಧಿಪನಾದರೆ ದೇಹಬಾಧಾ ಇದರ ಪರಿಹಾರಕ್ಕೆ ಮೃತ್ಯುಂಜಯ ಜಪ ಶ್ರೇಯಸ್ಕರ.

### ಶನ್ಯಾಂತರ್ದಶಾಫಲ

ಶುಕ್ರಸ್ಯಾಂತರ್ಗತೆ ಮಂದೆ ಸ್ವೋಚ್ಚೆ ತು ಪರಮೋಚ್ಚಗೆ ।
ಸ್ವರ್ಕ್ಷೇ ಕೇಂದ್ರ ತ್ರಿಕೋಣಸ್ಥೆ ತುಂಗಾಂಶೆ ಸ್ವಾಂಶಗೇ ಪಿ ವಾ ॥೫೦॥

ತದ್‌ಭುಕ್ತೌ ಬಹುಸೌಖ್ಯಂ ಸ್ಯಾದಿಷ್ಟ ಬಂಧು ಸಮನ್ವಯಃ ।
ಸನ್ಮಾನಂ ರಾಜಭವನೆ ಪುತ್ರಿಕಾ ಜನನಂ ಶುಭಮ್ ॥೫೧॥

ಪುಣ್ಯತೀರ್ಥ ಫಲವಾಪ್ತಿಃ ಪುಣ್ಯಂ ಸ್ಯಾದ್ದಾನಧರ್ಮಯೋಃ।
ಪದೋನ್ನತಿಃ ಪ್ರಭುವರಾತ್ ನೀಚಗೆ ಕ್ಲೇಶಮಾದಿಶೇತ್ ॥೫೨॥

ಸ್ವೋಚ್ಚ ರಾಶಿ ಪರಮೋಚ್ಚ ಸ್ಥಾನ ಸ್ವಭವನ ಕೇಂದ್ರ ತ್ರಿಕೋಣ ಹೆಚ್ಚಿನವಾಂಶ ಅಥವಾ ಸ್ವನವಾಂಶದಲ್ಲಿದ್ದ ಶನಿಯ ಅಂತರದಶಾ ಶುಕ್ರದಲ್ಲಿದ್ದಾಗ ಬಹಳ ಸುಖ (ಎಲ್ಲ ರೀತಿಯಿಂದ ಸುಖ) ಇಷ್ಟ. ಮಿತ್ರ ಬಂಧುಗಳ ಸಮ್ಮಿಲನ ರಾಜಭವನದಲ್ಲಿ ಸನ್ಮಾನ ಶುಭಪ್ರದ, ಕನ್ಯಾಜನ್ಮ ಪುಣ್ಯತೀರ್ಥ ಫಲ ಪ್ರಾಪ್ತಿ, ಧರ್ಮದಿಂದ ಪುಣ್ಯ ಲಾಭ, ಯಜಮಾನನ ಸಹಾಯದಿಂದ ನೌಕರಿಯಲ್ಲಿ ಪದೋನ್ನತಿ ಶನೀ ನೀಚ ನಾಗಿದ್ದರೆ ಅಂತರದಶಾ ಕ್ಲೇಶಕಾರಕವಾಗುತ್ತಿವೆ.

ದೇಹಾಲಸ್ಯಮವಾಪ್ನೋತಿ ಚಾಯಾದಪ್ಯಧಿಕಂ ವ್ಯಯಮ್ ।
ಅಷ್ಟಗೆ ವಾವ್ಯೆಯ ಮಂದೆ ದಾಯಾಧಿಶಾತ್ ತಥೈವ ಚ ॥೫೩॥

ಭುಕ್ತ್ಯಾದೌ ದೇಹಪೀಡಾ ಸ್ಯಾತ್ ಪಿತೃಮಾತೃಜನಾವಧಿ ।
ದಾರಪುತ್ರಾದಿ ಪೀಡಾ ಚ ಭ್ರಮಣಾ ಬಹುಶೋ ಭವೇತ್ ॥೫೪॥

ವ್ಯವಸಾಯಾತ್ ಫಲಂ ನೇಷ್ಟಂ ಗೋಮುಹಿಷ್ಯಾದಿನಾಶನಮ್ ।
ದ್ವಿತೀಯ ಸಪ್ತಮಾಧೀಶೆ ದೇಹಬಾಧಾ ಭವಿಷ್ಯತಿ ॥೫೫॥

ತದ್ದೋಷಪರಿಹಾರಾರ್ಥ ತಿಲಹೋಮಾದಿಕಂ ಚರೇತ್ ।

ದಶೇಶ ಶುಕ್ರನಿಂದ ಅಷ್ಟಮ ದ್ವಾದಶದಲ್ಲಿ ಶನಿ ಇದ್ದರೆ ದೇಹಾಲಸ್ಯ ಆಯಕ್ಕಿಂತ ವ್ಯಯ ಅಧಿಕ ಆರಂಭದಲ್ಲಿ ಶಾರೀರಿಕ ಪೀಡಾ ಪಿತಾ ಮಾತೃವಿಗೆ

ಶಾರೀರಿಕ ಕಷ್ಟ ಸ್ತ್ರೀಪುತ್ರರಿಗೆ ಕೂಡ ಕಷ್ಟ, ಭ್ರಮಣ ವ್ಯವಸಾಯದಲ್ಲಿ ಫಲ ಶೂನ್ಯ, ಆಕಳು, ಎಮ್ಮೆ ಆದಿ ಪಶುನಾಶ ಅದೇ ಶನಿ 2, 7ರ ಅಧಿಪನಾಗಿದ್ದರೆ ದೇಹ ಬಾಧಾ ದೋಷ ನಿವಾರಣಗೆ ತಿಲ ಹೋಮ ಶ್ರೇಯಸ್ಕರವಾದುದು.

## ಬುಧಾಂತರ್ದಶಾ ಫಲ

ಶುಕ್ರಸ್ಯಾಂತರ್ಗತೆ ಸೌಮ್ಯೆ ಕೇಂದ್ರೆ ಲಾಭ ತ್ರಿಕೋಣಗೆ ।
ಸ್ವೋಚ್ಚೆ ವಾ ಸ್ವರ್ಷಗೆ ವಾಪಿ ರಾಜಪ್ರೀತಿ ಶುಭಾವಹಾ ॥೫೮॥

ಸೌಭಾಗ್ಯಂ ಪುತ್ರಲಾಭಶ್ಚ ಧನಲಾಭಃ ಸದಧ್ವನಾ।
ಪುರಾಣ ಧರ್ಮ ಶ್ರವಣಾ ಶೃಂಗಾರಿ ಜನಸಂಗಮಃ ॥೫೯॥

ಇಷ್ಟಬಂಧುಜನಕೀರ್ಣೆ ಗೇಹೆ ನೃಪಸಮಾಗಮಃ ।
ಸ್ವಪ್ರಭೊಶ್ಚ ಮಹಾಸೌಖ್ಯಂ ನಿತ್ಯಂ ಮೃಷ್ಟಾನ್ನ ಭೋಜನಮ್ ॥೬೦॥

ಕೇಂದ್ರ ಸ್ಥಾನಗಳಲ್ಲಿ ತ್ರಿಕೋಣಗಳಲ್ಲಿ ಹಾಗೂ ಲಾಭದಲ್ಲಿ ಸ್ವೋಚ್ಚ ಸ್ವಗ್ರಹ ದಲ್ಲಿ ಬುಧನಿದ್ದಲ್ಲಿ ಶುಕ್ರ ಮಹಾದಶಾದಲ್ಲಿ ಅಂತರದಶಾಧೀಶನಾದಾಗ ಶುಭಪ್ರದ ವಾಗುತ್ತದೆ. ರಾಜಪ್ರಸಾದ, ಸೌಭಾಗ್ಯೋದಯ, ಪುತ್ರಾದಿ ಲಾಭ ಹಾಗೂ ಮಕ್ಕಳಿಗೆ ಸುಖ ಸನ್ಮಾರ್ಗದಿಂದ ಧನಪ್ರಾಪ್ತಿ ಪುರಾಣ ಧರ್ಮೋಪದೇಶದ ಶ್ರವಣ ಶೃಂಗಾರ ರಸ ಪ್ರೇಮಿಗಳೊಡನೆ ಸುಖ ಸಂಗತಿ. ಇಷ್ಟಬಂಧು ಜನರು ಮನೆ ಪೂರ್ಣ ಗೋಕುಲದಂತೆ ಮನೆಯಲ್ಲಿ ರಾಜರ ಆಗಮನ ಮೇಲಧಿಕಾರಿಯಿಂದ ಸುಖ ನಿತ್ಯ ಮೃಷ್ಟಾನ್ನ ಭೋಜನಾದಿ ಫಲ ನಿರ್ದೇಶಿಸುವುದು.

ದಾಯೇಶಾತ್ ಷಷ್ಠರಂಧ್ರೆ ವಾ ವ್ಯಯೇ ಬಲವರ್ಜಿತೆ ।
ಪಾಪೈರ್ದ್ರಷ್ಟೆಥವಾ ಯುಕ್ತೆ ಚತುಷ್ಪಾಜ್ಜೀವನಾಶನಮ್ ॥೬೧॥

ಅನ್ಯಾಲಯನಿವಾಸಶ್ಚ ಮನೋವೈಕಲ್ಯ ಸಂಭವಃ ।
ವ್ಯವಹಾರೆ ತು ಸರ್ವತ್ರ ಧನನಾಶೋ ಭವೇದ್ ಧ್ರುವಮ್ ॥೬೨॥

ಭುಕ್ತ್ಯಾದೌ ಶೋಭನಂ ಪ್ರೋಕ್ತಂ ಮಧ್ಯೆತು ಮಧ್ಯಮಂ ಸುಖಮ್ ।
ಅಂತೆ ಕ್ಲೇಶಸ್ತಥಾ ವಿಪ್ರ! ಶೀತವಾತಜ್ವರಾದಿಕಮ್ ॥೬೩॥

ಸಪ್ತಮಾಧಿಶದೋಷೇಣ ದೇಹ ಪೀಡಾ ಭವಿಷ್ಯತಿ
ತದ್ದೋಷಪರಿಹಾರಾರ್ಥ ವಿಷ್ಣುಸಾಹಸ್ರಕಂ ಜಪೇತ್ ॥೬೪॥

ದಶಾಪತಿಯಿಂದ 6, 8, 12ರಲ್ಲಿ ನಿರ್ಬಲ ಪಾಪಯುಕ್ತ ಅಥವಾ ಪಾಪ ದೃಷ್ಟ

ಬುಧನಾಗಿದ್ದು, ಅವನ ಅಂತರದಶಾಕಾಲದಲ್ಲಿ ಪಶುನಾಶ ಎರಡನೆಯವರ ಮನೆಯಲ್ಲಿ ವಾಸ ಅಂತರದಶಾರಂಭ ಶುಭ ಮಧ್ಯದಲ್ಲಿ ಮಧ್ಯಮ ಅಂತ್ಯಕ್ಲೇಶ ಕಾರಕವಾಗಿರುತ್ತದೆ. ಅಂದರೆ ಶೀತವಾತ ಜ್ವರ ಪೀಡೆ.

ಅದೆ ಬುಧ ಸಪ್ತಮೇಶನಾಗಿದ್ದರೆ ಶಾರೀರಿಕ ಕಷ್ಟದೋಷ ನಿವಾರಣೆಗೆ ವಿಷ್ಣು ಸಹಸ್ರನಾಮ ಪಾಠ ಅತೀ ಅವಶ್ಯಕ.

## ಕೇತ್ವಂತರ್ದಶಾ ಫಲ

ಶುಕ್ರಾಂತರ್ಗತೆ ಕೇತೌ ಸ್ವೋಚ್ಚೆ ವಾ ಸ್ವರ್ಕ್ಷಗೆ ಪಿವಾ ।
ಯೋಗಕಾರಕ ಸಂಬಂಧೆ ಸ್ಥಾನವೀರ್ಯ ಸಮನ್ವಿತೆ ॥೬೫॥

ಭುಕ್ತ್ಯಾದೌ ತು ಶುಭಂ ಪ್ರೋಕ್ತಂ ನಿತ್ಯಂ ಮಿಷ್ಟಾನ್ನ ಭೋಜನಮ್ ।
ವ್ಯವಸಾಯಾತ್ ಫಲಾಧಿಕ್ಯಂ ಗೋಮಹಿಷ್ಯಾದಿ ವರ್ಧನಮ್ ॥೬೬॥

ಧನಧಾನ್ಯಸಮೃದ್ಧಿಶ್ಚ ಸಂಗ್ರಾಮೇ ವಿಜಯೋಭವೇತ್ ।
ಭುಕ್ತ್ಯಾಂತೆ ಹಿ ಸುಖಂ ಚೈವ ಮಧ್ಯೆ ಮಧ್ಯಫಲಂ ಸ್ಮೃತಮ್ ॥೬೭॥

ಮಧ್ಯೆ ಮದ್ಯೆಮಹತ್ಕಷ್ಟಂ ಪಶ್ಚಾದಾರೋಗ್ಯ ಮಾದಿಶೇತ

ಉಚ್ಚ ಸ್ವಭವನನಾದ ಕೇತು ಯೋಗಕಾರಕ ಗ್ರಹದಯುಕ್ತನಾದರೆ ಸ್ಥಾನಬಲ ಪೂರ್ಣವಾಗಿದ್ದರೆ ಶುಕ್ರ ದಶಾ ಕೇತು ಅಂತರದಶಾ ಆರಂಭದಲ್ಲಿ ನಿತ್ಯಮೃಷ್ಟಾನ್ನ ಭೋಜನಕಾರಕ ವ್ಯವಹಾರದಲ್ಲಿ ಮಿತ್ರಲಾಭ ಆಕಳು ಎಮ್ಮೆ ಇತ್ಯಾದಿ ಪಶುವೃದ್ಧಿ ಧನಧಾನ್ಯ ಸಮೃದ್ಧಿ ಸಂಗ್ರಾಮದಲ್ಲಿ ವಿಜಯ ಈ ಎಲ್ಲ ಶುಭ ಫಲಗಳು ಅಂತರ ದಶಾಂತದಲ್ಲಿ ಸುಖ. ಮಧ್ಯದಲ್ಲಿ ಮಧ್ಯಮ ಸುಖ. ಆದರೂ ಮಧ್ಯಮಧ್ಯದಲ್ಲಿ ಮಹಾಕಷ್ಟ ಪ್ರಸಂಗಗಳು ಬರುತ್ತವೆ ನಂತರ ಆರೋಗ್ಯ ಪ್ರಾಪ್ತಿ.

ದಾಯೋಶಾದ್ಂದ್ರಗೃಹಗೆ ವ್ಯಯೋ ವಾಪ ಪ ಸಂಯುತೆ ॥೬೮॥

ಚೌರಾಹಿ ವ್ರಣಪೀಡಾ ಚ ಬುದ್ಧಿನಾಶೋ ವಾಹಾಭಯಮ್ ।
ಶಿರೋರುಜಾ ಮನಸ್ತಾಪಃ ಕಲಹಃ ಕಾರಣು ವಿನಾ ॥೬೯॥

ಪ್ರಮೇಹಾದಿಕರೋಗಶ್ಚ ನಾನಾಮಾರ್ಗೆ ಧನವ್ಯಯಃ ।
ಭಾರ್ಯಾಪುತ್ರ ವಿರೋಧಶ್ಚ ಗಮನಂ ಕಾರ್ಯನಾಶನಮ್ ॥೭೦॥

ದ್ವಿತೀಯ ದ್ಯೂನ್ಯನಾಥೆ ತು ದೇಹಬಾಧಾ ಭವಿಷ್ಯತಿ
ತನ್ನಿವೃತ್ತೈ ಛಾಗದಾನ ಮೃತ್ಯುಂಜಯಜಪಂ ಚರೇತ್ ॥೭೦॥

ದಶಾಧೀಶನಿಂದ 8, 12ರಲ್ಲಿ ಸಪಾಪ ಕೇತು ಇದ್ದು, ಅಂತರ ದಶಾದಲ್ಲಿ ಕಳ್ಳ ಸರ್ಪ ವ್ರಣ ಆದಿ ಭಯ ಬುದ್ಧಿ ಕ್ಷಯ ಮಹಾಭಯ ಶಿರೋವೇದನ ಮಾನಸಿಕ ಸಂತಾಪ ಕಾರಣ ಕಲಹ ಪ್ರಸಂಗ ಪ್ರಮೋಹಾದಿ ರೋಗ ಅನೇಕ ರೂಪದಿಂದ ಧನನಾಶ ಹೆಂಡತಿ ಮಕ್ಕಳ ವಿರೋಧ ಯಾತ್ರೆ ಹಾಗೂ ಕಾರ್ಯದಲ್ಲಿ ಹಾನಿ ದಶೇಶನಿಂದ 2, 7ರಲ್ಲಿ ಕೇತು ಇದ್ದರೆ (ಅಧೀಶನಾಗದಾಗ ವೃಶ್ಚಿಕ ಅಧೀಶನಾದರೂ ಸಾರ್ವತ್ರಿಕ ಮಾನ್ಯತೆಯಲ್ಲಿ) ಶಾರೀರಿಕ ಬಾಧೆ ದೋಷ ಪರಿಹಾರಕ್ಕೆ ಮೃತ್ಯುಂಜಯ ಜಪ ಹೊತಿನ ದಾನ ಶ್ರೇಯಸ್ಕರ.

ಈ ದಶಾ ಅಂತರ ದಶಾ ಸಾರಾಂಶ ಯಾವುದೇ ಗ್ರಹದ ಮಹಾದಶಾದಲ್ಲಿ ಯಾರ ಅಂತರ ದಶಾ ಬರುತ್ತಿದೆಯೋ ಆಗ್ರಹ ಲಗ್ನ ಅಥವಾ ದಶೇಶನಿಂದ ಕೇಂದ್ರ (1, 4, 10) ಅಥವಾ ತ್ರಿಕೋಣ (5, 9) ಲಾಭ (11) ತೃತೀಯ (3) ಗ್ರಹಗಳು ತಮ್ಮುಚ್ಚ, ತಮ್ಮ ಮನೆ, ಮಿತ್ರಗ್ರಹ ಸ್ವನವಾಂಶದಲ್ಲಿ ಶುಭಕಾರಕವಾಗುತ್ತವೆ. ಕೇಂದ್ರದಲ್ಲಿ 7ನ್ನು ಅಷ್ಟಮದಿಂದ ವ್ಯಯವಾಗುವುದರಿಂದ ಮೃತ್ಯುಕಾರಕವೆಂದು ಕೆಲ ಗ್ರಹಗಳಾಗಿ ದೋಷಕಾರಕವಾಗಿದೆ. ಆದರೂ ಶುಭಾಶುಭ ಪರಿಗಣಿಸಿ ಫಲ ಹೇಳುವುದು 6, 8, 12 ಶತ್ರುಗ್ರಹ ನೀಚ ನೀಚ ನವಾಂಶದಲ್ಲಿದ್ದರೆ ಅಶುಭವೇ ಹೆಚ್ಚು. ದಶೇಶನಿಂದ 2, 7ರ ಅಧಿಪ ಅಪಮೃತ್ಯುಕಾರಕನಾದ್ದರಿಂದ ಸ್ಥಾನಾದಿ ನೋಡಿ ಫಲವನ್ನು ವಿವರಿಸುವುದು.

ಇನ್ನು ದಶಾ ಅಂತರದಶಾ ವಿಶೇಷವಾಗಿ ಅಶುಭವಿದ್ದಾಗ ವಿದೇಶಯಾತ್ರೆ ಹೇಳಿದ್ದು ಈ ಮೊದಲೇ ವಿವರಿಸಿದಂತೆ ಹಿಂದೆ 'ಪರ ಊರು ಪ್ರಾಣಸಂಕಟ' ಎಂಬ ಅಂಶ ಹೆಚ್ಚಾಗಿ ನಂಬಿದ್ದರಿಂದ ಪ್ರಾಣ ಸಂಕಟ ಪ್ರಸಂಗ ಅಶುಭ ಗ್ರಹದ ದಶಾ ದಲ್ಲಿಯೇ ಪ್ರಮುಖವಾದ್ದರಿಂದ ಅದಕ್ಕೆ ಮುಖ್ಯವಾಗಿ ಈ ಗಾದೆ ಪ್ರಮುಖವಾಗಿದೆ 'ರೋಮದಲ್ಲಿದ್ದಾಗ ರೋಮನ್ನರಂತೆ' ಎಂಬುದು ತನ್ನತನದ ಸ್ವಾತಂತ್ರ್ಯ ಇಲ್ಲದಿರುವಿಕೆಯೇ ಪ್ರಮುಖ ಕಾರಣವಾಗಿದ್ದ ಆ ರೀತಿಯಾಗಿ ನೋಡುತ್ತಿದ್ದರೂ ಈಗಲೂ ಹಾಗೇ ನೋಡುವುದು ಜಲಗ್ರಹ ಜಲರಾಶಿ ಗ್ರಹ ನವಮೇಶ ಆದಿ ನೋಡಿ ವಿದೇಶ ಯಾತ್ರೆ ಹೇಳುವುದು ವರಾಹಮಿಹಿರರ ನಂತರ ಒಂದು ಪದ್ಧತಿ.

ಈ ದಶಾ ಪದ್ಧತಿಯನ್ನು ಅವರ ಫಲ ವಿವರಿಸುವಾಗ ಸ್ವೋಚ್ಚಾದಿಗಳಂತೆ ದಶಾನಾಥನಿಗೆ, ಅಥವಾ ಅಂತರದಶಾದಿಂದ ಸೂಕ್ಷ್ಮದಶಾನಾಥನವರೆಗೆ ಅಷ್ಟಕ ವರ್ಗದಲ್ಲಿ ಅವನಿಗೆ ಬದ್ಧಬಿಂದು ಅವನ ಗೋಚಾರ, ಸ್ಥಿತಿ ಹಾಗೂ ದಶಾವರ್ಗಾ ದಿನಗಳಲ್ಲಿ ಅವನ (ಕುಸುಮಾಂಶ, ಪಾರಿಜಾತಾಂಶ) ಸ್ಥಿತಿಗತಿ ನೋಡಿ ಫಲ ವಿವರಿಸ

ಬೇಕಾದುದು ಜ್ಯೋತಿಷಿಯ ಕರ್ತವ್ಯ. ಅದರ ಜತೆಗೆ ಗ್ರಹದ ಅವಸ್ಥೆ, ಸಮಯ ದೃಷ್ಟಿ ಆದಿ ವಿವೇಚನೆ ಮಾಡಿ ಸಮಷ್ಟಿ ಪರಿಣಾಮವನ್ನೇ ವಿವರಿಸಬೇಕೇ ವಿನಃ ಫಲ ಪ್ರತಿ ಗ್ರಹದ್ದು ಅಂಶದಲ್ಲಿ ಪ್ರತ್ಯೇಕದಲ್ಲಿ.

ದೋಷದಶಾಂತಿ ವಿವರಿಸಿದ್ದು ಆ ರೀತಿ ಶಾಂತಿ ಕ್ರಿಯಾದಿ ಮಾಡಿಸಿದಾಗ ಮಾನಸಿಕ ನೆಮ್ಮದಿ ದೊರೆಯುತ್ತದೆ ಹಾಗೂ ಫಲದ ಮಟ್ಟ ತಗ್ಗುತ್ತದೆ. ಶಾಂತಿಗಾಗಿ ಈ ಕೆಳಗಿನ ನಕ್ಷೆಯಂತೆಯು ಆಚರಿಸಬಹುದು.

ಅಂತರದಶಾದ ವಿವೇಚನೆ ಮಾಡದೆಯೇ ವಿನಃ ಪ್ರತ್ಯಂತರ ಪ್ರಾಣ ಸೂಕ್ಷ್ಮ ದಶಾದ ಶಾಂತಿಯೂ ಕೂಡ ಅದರಲ್ಲಿ ಒಳಗೊಂಡಿದೆ ಎಂದು ಗ್ರಹಿಸುವುದು ಇಲ್ಲಿ ಶಾಂತಿ ಕರ್ಮಾದಿಗಳನ್ನು ಮಾಡುವಾಗ 'ಅತ್ಯುತ್ಕಟ ಪಾಪಪುಣ್ಯೈಃ ಇಹಮೇವ ಫಲ ಮಾಪ್ನೋತಿ' ಅನ್ನುವುದನ್ನು ಲಕ್ಷದಲ್ಲಿಟ್ಟು ಹಾಗೂ ಶಾಂತಿ ಕಾರ್ಯವಿಧಿಯಲ್ಲಿ ಗ್ರಹ ನೈಸರ್ಗಿಕ ಬದಲಾವಣೆಯಿಂದ ದಾರಿ ಸುಖವೂ ಆಗಿರುತ್ತೆ ಈ ಅಂಶವನ್ನು ನೆನಪಿಡುವುದು ಪ್ರಾರಬ್ಧ ಕರ್ಮವಿದ್ದಾಗ ವಿಶೇಷ ಶಾಂತಿಯಿಂದ ಆತ್ಮ ಮನೋಬಲ ದಿಂದ ಸುಖವಾಗುವುದು.

## ಶಾಂತಿ ವಿವರ

## ವಿಂಶೋತ್ತರಿಯರಿತ ಗ್ರಹ ಜೋಡಣೆ

ರವಿ ದಶಾದಲ್ಲಿ | ಚಂದ್ರ ದಶಾ

| ಅನಂ | ಅಂ. ಗ್ರ | ಶಾಂತಿಕಾರ್ಯ | ಅನಂ | ಅಂತರದಶಾ | ಶಾಂತಿಕಾರ್ಯ |
|---|---|---|---|---|---|
| 1 | ರವಿ | ರುದ್ರಾಭಿಷೇಕ | 1 | ಚಂದ್ರ | ಮಹಿಷಿದಾನ |
| 2 | ಚಂದ್ರ | ದುರ್ಗಾಪೂಜೆ | 2 | ಮಂಗಳ | ಸ್ಕಂದಪೂಜೆ |
| 3 | ಮಂಗಳ | ಸುಬ್ರಹ್ಮಣ್ಯಾರ್ಚನೆ | 3 | ರಾಹು | ಮೃತ್ಯುಂಜಯಜಪ |
| 4 | ರಾಹು | ದುರ್ಗಾಜಪ | 4 | ಗುರು | ಶಿವಪೂಜೆ |
| 5 | ಗುರು | ನಮಕಪುರುಷಸೂಕ್ತ | 5 | ಶನಿ | ಮಹಿಷಿದಾನ ತಿಲಹೋಮ |
| 6 | ಶನಿ | ಈಶ್ವರಪೂಜೆ | 6 | ಬುಧ | ಲಕ್ಷ್ಮೀನಾರಾಯಣ ಜಪ |
| 7 | ಬುಧ | ವಿಷ್ಣುಸಹಸ್ರನಾಮ | 7 | ಕೇತು | ಹೊತುದಾನ |
| 8 | ಕೇತು | ಸೂರ್ಯನಮಸ್ಕಾರ | 8 | ಶುಕ್ರ | ಲಕ್ಷ್ಮೀ ಪೂಜೆ |
| 9 | ಶುಕ್ರ | ಲಕ್ಷ್ಮೀ ಪೂಜೆ | 9 | ರವಿ | ಗೋದಾನ |

ಮಂಗಳ ದಶಾ

| ಅನಂ | ಅಂ. ಗ್ರ | ಶಾಂತಿಕಾರ್ಯ |
|---|---|---|
| 1 | ಮಂಗಳ | ಮೃತ್ಯುಂಜಯ ಸೂರ್ಯ |
| 2 | ರಾಹು | ಮೃತ್ಯುಂಜಯ ಸೂರ್ಯ |
| 3 | ಗುರು | ಶಿವಪೂಜೆ |
| 4 | ಶನಿ | ತಿಲಹೋಮ ಅನ್ನದಾನ |
| 5 | ಬುಧ | ವಿಷ್ಣುಸಹಸ್ರನಾಮ |
| 6 | ಕೇತು | ರುದ್ರಜಪ |
| 7 | ಶುಕ್ರ | ದುರ್ಗಾಪೂಜೆ |
| 8 | ರವಿ | ಗೋದಾನ |
| 9 | ಚಂದ್ರ | ಗೌರಿಪೂಜೆ |

ರಾಹುದಶಾ

| ಅನಂ | ಅಂತರದಶಾ | ಶಾಂತಿಕಾರ್ಯ |
|---|---|---|
| 1 | ರಾಹು | ಸವರ್ಣ ಪ್ರತಿಮಾದಾನ |
| 2 | ಗುರು | ರುದ್ರಜಪ |
| 3 | ಶನಿ | ರುದ್ರಾಭಿಷೇಕ |
| 4 | ಬುಧ | ವಿಷ್ಣು ಸಹಸ್ರನಾಮ |
| 5 | ಕೇತು | ನಾಗಪೂಜೆ |
| 6 | ಶುಕ್ರ | ದುರ್ಗಾಪೂಜೆ |
| 7 | ರವಿ | ಸೂರ್ಯಶಾಂತಿ |
| 8 | ಚಂದ್ರ | ಮೃತ್ಯುಂಜಯ |
| 9 | ರಾಹು | ಸುಬ್ರಹ್ಮಣ್ಯಜಪ |

ಗುರುದಶಾ

| ಅನಂ | ಅಂ. ಗ್ರ | ಶಾಂತಿಕಾರ್ಯ |
|---|---|---|
| 1 | ಗುರು | ರುದ್ರಜಪ |
| 2 | ಶನಿ | ಮೃತ್ಯುಂಜಯ |
| 3 | ಬುಧ | ಗೋದಾನ ವಿಷ್ಣುಪೂಜೆ |
| 4 | ಕೇತು | ಶಿವಲಿಂಗಾರ್ಚನೆ |
| 5 | ಶುಕ್ರ | ಕೃಷ್ಣಮಂತ್ರ |
| 6 | ರವಿ | ಸೂರ್ಯೋಪಾಸನೆ |
| 7 | ಚಂದ್ರ | ಆಡುದಾನ |
| 8 | ಮಂಗಳ | ಕುಜಶಾಂತಿ |
| 9 | ರಾಹು | ತಿಲಹೋಮ |

ಶನಿದಶಾ

| ಅನಂ | ಅಂತರದಶಾ | ಶಾಂತಿಕಾರ್ಯ |
|---|---|---|
| 1 | ಶನಿ | ತಿಲಹೋಮ |
| 2 | ಬುಧ | ವಿಷ್ಣುದೇವಪೂಜೆ |
| 3 | ಕೇತು | ಮೃತ್ಯುಂಜಯ |
| 4 | ಶುಕ್ರ | ದುರ್ಗಾಪೂಜೆ |
| 5 | ರವಿ | ಐದು ಆಡುದಾನ |
| 6 | ಚಂದ್ರ | ಬಿಳಿ ಆಕಳುದಾನ |
| 7 | ಮಂಗಳ | ಎಮ್ಮೆದಾನ |
| 8 | ರಾಹು | ಯಮಸ್ತೋತ್ರ |
| 9 | ಗುರು | ಶಿವಾಷ್ಟಕ |

ಬುಧ ದಶಾ

| ಅನಂ | ಅಂ. ಗ್ರ | ಶಾಂತಿಕಾರ್ಯ |
|---|---|---|
| 1 | ಬುಧ | ವಿಷ್ಣುಸಹಸ್ರನಾಮ |
| 2 | ಕೇತು | ಆಡುದಾನ |
| 3 | ಶುಕ್ರ | ಬಿಳಿಎತ್ತು ದಾನ |
| 4 | ರವಿ | ಸೂರ್ಯೋಪಾಸನೆ |
| 5 | ಚಂದ್ರ | ದುರ್ಗಾಪೂಜೆ ಜಪ |
| 6 | ಮಂಗಳ | ಸರ್ಪ ಪೂಜೆ |
| 7 | ರಾಹು | ಶಿವಸಹಸ್ರನಾಮ |
| 8 | ಗುರು | ಮೃತ್ಯುಂಜಯ |
| 9 | ಶನಿ | ಎಮ್ಮೆ ದಾನ |

ಕೇತುದಶಾ

| ಅನಂ | ಅಂತರದಶಾ | ಶಾಂತಿಕಾರ್ಯ |
|---|---|---|
| 1 | ಕೇತು | ಬ್ರಾಹ್ಮಣಪೂಜೆ ಭೋಜನ |
| 2 | ಶುಕ್ರ | ಗೌರಿಪೂಜೆ |
| 3 | ರವಿ | ಶಿವಪೂಜೆ |
| 4 | ಚಂದ್ರ | ಮೃತ್ಯುಂಜಯ |
| 5 | ಮಂಗಳ | ನವಗೌರಿ ಪೂಜೆ |
| 6 | ರಾಹು | ಎಮ್ಮೆ ದಾನ |
| 7 | ಗುರು | ತಿಲದಾನ |
| 8 | ಶನಿ | ಮೃತ್ಯುಂಜಯ |
| 9 | ಬುಧ | 5 ಆಡು ದಾನ |

ಶುಕ್ರ- ಶುಕ್ರ

| ಅನಂ | ಅಂ ಗ್ರ | ಶಾಂತಿ |
|---|---|---|
| 1 | ಶುಕ್ರ | ಲಕ್ಷ್ಮೀಪೂಜೆ ಪೂರ್ಣಜಲಪಾತ್ರೆ ದಾನ |
| 2 | ರವಿ | ಸೂರ್ಯೋಪಾಸನೆ |
| 3 | ಚಂದ್ರ | ಗೌರಿ ಪೂಜೆ |
| 4 | ಮಂಗಳ | ನಾಗ ಪೂಜೆ |
| 5 | ರಾಹು | ದುರ್ಗಾಗೌರಿ ಪೂಜೆ |
| 6 | ಗುರು | ರುದ್ರಜಪ |
| 7 | ಶನಿ | ಎಮ್ಮೆ ದಾನ |
| 8 | ಬುಧ | ಲಕ್ಷ್ಮೀನಾರಾಯಣ ಜಪ |
| 9 | ಕೇತು | ವಿಶೇಷ ದಾನ |

ಇವು ವಿಶೇಷವಲ್ಲದ ಸಾಮಾನ್ಯ ಶಾಂತಿ ಕಾರ್ಯಗಳು. ಇವುಗಳನ್ನು ಹೊರತು ಪಡಿಸಿ ಪ್ರಾರಬ್ಧ ಕರ್ಮಕ್ಕೆ ಮಕ್ಕಳಿಗೆ ಆ ವಿಭಾಗದಲ್ಲಿ ವಿವರಿಸಿದೆ. ಇದನ್ನು ಬಿಟ್ಟು ಹರಿವಂಶ ಪಾರಾಯಣ ವಿಷ್ಣುಸಹಸ್ರನಾಮ ಹಾಗೂ ಮೃತ್ಯುಂಜಯ ಎಲ್ಲದಕ್ಕು ವಿಶೇಷಗಳು.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಶುಕ್ರದಶಾಂತರ ದಶಾಧ್ಯಾಯ ಸಮಾಪ್ತಃ



## ೭೧ನೇ ಅಧ್ಯಾಯ

# ಅಥ ಪ್ರತ್ಯಂತರ ದಶಾ ಫಲಾಧ್ಯಾಯಃ

**ಪರಾಶರ ಉವಾಚ:**

ಅಂತರ್ದಶಾದಿನಾದ್ಯಂ ಯತ್ ಸ್ವಸ್ವಾಬ್ದೈರ್ನಿಹತಂ ಹೃತಮ್ ।
ವಿಂಶೋತ್ತರಶತೇನಾಪ್ತಂ ಪ್ರತ್ಯಂತರ ದಿನಾದಿಕಮ್ ॥೧॥

**ಪರಾಶರರು ಹೇಳಿದರು—**

ಹೇ ಮೈತ್ರೇಯ,

ದಿನಾಧಿಕ ಅಂತರದಶಾಕ್ಕೆ ಆಯಾ ದಶಾವರ್ಷದಿಂದ ಗುಣಿಸಿ 120ರಿಂದ ಭಾಗಿಸಲು ಬಂದ ಲಬ್ಧ (ವಿಂಶೋತ್ತರೀ) ದಿನಾಧಿಕ ಪ್ರತ್ಯಂತರ ದಶಾ ಆಗುತ್ತದೆ.

ಉದಾಹರಣೆ :- ಸೂರ್ಯನ ಮಹಾದಶಾ ಸೂರ್ಯಾಂತರ ದಶಾ ಸೂರ್ಯ ಪ್ರತ್ಯಂತರ ದಶಾ ಸೂರ್ಯನ ವರ್ಷಾಧಿಕ ಅಂತರದಶಾ 0 ವರ್ಷ 3 ತಿಂಗಳು, 18 ದಿವಸ ದಿನಾತ್ಮಕ ಮಾಡಿ $3 \times 30 + 18 = 108$ ದಿನ $\frac{108 \times 6}{120} = \frac{9 \times 6}{10} = 5$ ದಿವಸ 24 ಘಟಿ ಇದು ಸೂರ್ಯ ದಶಾ ಸೂರ್ಯಾಂತರದಶಾ ಸೂರ್ಯ ಪ್ರತ್ಯಂತರ ದಶಾ ಆಯು.

ಇದೆ ರೀತಿ 138 ಚಂದ್ರ ದಶಾ ವರ್ಷ 10ರಿಂದ ಗುಣಿಸಿ 120ರಿಂದ ಭಾಗಿಸುವುದರಿಂದ ಚಂದ್ರ ಪತ್ಯಂತರ ದಶಾ ಆಗುತ್ತದೆ.

$\frac{108 \times 10}{120} = 9$ದಿನ ಇದೆ ರೀತಿ $\frac{108 \times 7}{120}$

$\frac{9 \times 7}{10} = \frac{63}{10} = 6$ ದಿವಸ 18 ಘಟಿ

ಇದೆ ರೀತಿ ಚಂದ್ರ ಅಂತರ ದಶಾದಲ್ಲಿ ಚಂದ್ರ ಪ್ರತ್ಯಂತರ ದಶಾ ತೆಗೆಯುವುದು.

ಚಂದ್ರ ಅಂತರದಶಾಮಾನ $6 \times 30 = 180$

ಇದಕ್ಕೆ $\frac{180 \times 6}{120} = \frac{3 \times 10}{2} = 15$ ದಿವಸ ಇದೆ

ರೀತಿ ಎಲ್ಲ ಗ್ರಹಗಳ ಪ್ರತ್ಯಂತರ ದಶಾ ತೆಗೆಯುವುದು

## ಸೂರ್ಯ ಅಂತರದಶಾದಲ್ಲಿ ಪ್ರತ್ಯಂತರ ದಶಾ

| ಗ್ರಹ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 0 |
| ದಿನ | 5 | 9 | 6 | 16 | 14 | 17 | 15 | 6 | 18 |
| ಘಟಿ | 24 | 0 | 18 | 12 | 24 | 6 | 18 | 18 | 0 |

## ಚಂದ್ರ ಅಂತರದಶಾ ಚಂದ್ರ ಪ್ರತ್ಯಂತರ ದಶಾ

| ಗ್ರಹ | ಚಂ | ಮ | ರಾ | ಗು | ಶನಿ | ಬು | ಕೇ | ಶು | ರ | ಶರಾ |
|---|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 1 | 0 | - |
| ದಿನ | 15 | 10 | 27 | 24 | 28 | 25 | 10 | 0 | 9 | - |
| ಘಟಿ | 0 | 30 | 0 | 0 | 30 | 30 | 30 | 0 | 0 | - |

## ಮಂಗಳ ಅಂತರದಶಾ ಮಂಗಳ ಪ್ರತ್ಯಂತರ

| ಗ್ರಹ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 0 |
| ದಿವಸ | 7 | 18 | 16 | 19 | 17 | 7 | 21 | 16 | 10 |
| ಘಟಿ | 21 | 54 | 48 | 57 | 51 | 21 | 0 | 18 | 30 |

## ರಾಹು ಅಂತರ ರಾಹು ಪ್ರತ್ಯಂತರ

| ಗ್ರಹ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ |
|---|---|---|---|---|---|---|---|---|---|
| ಮಾಸ | 1 | 1 | 1 | 1 | 0 | 1 | 0 | 0 | 0 |
| ದಿವಸ | 18 | 13 | 21 | 15 | 18 | 24 | 16 | 27 | 18 |
| ಘಟಿ | 36 | 12 | 18 | 54 | 54 | 0 | 12 | 0 | 54 |

## ಗುರು ಅಂತರದಶಾ ಗುರು ಪ್ರತ್ಯಂತರ

| ಗ್ರಹ | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಮಾಸ | 1 | 1 | 1 | 0 | 1 | 0 | 0 | 0 | 1 |
| ದಿವಸ | 8 | 15 | 10 | 16 | 18 | 14 | 24 | 16 | 13 |
| ಘಟಿ | 24 | 36 | 48 | 48 | 0 | 24 | 0 | 48 | 12 |

## ಶನಿ ಅಂತರದಶಾ ಶನಿ ಪ್ರತ್ಯಂತರ

| ಗ್ರಹ | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು |
|---|---|---|---|---|---|---|---|---|---|
| ಮಾಸ | 1 | 1 | 0 | 1 | 0 | 0 | 0 | 1 | 1 |
| ದಿವಸ | 24 | 18 | 19 | 27 | 17 | 28 | 19 | 21 | 15 |
| ಘಟಿ | 9 | 27 | 57 | 0 | 6 | 30 | 57 | 18 | 36 |

## ಬುಧ ಅಂತರದಶಾ ಬುಧ ಪ್ರತ್ಯಂತರ

| ಗ್ರಹ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ |
|---|---|---|---|---|---|---|---|---|---|
| ಮಾಸ | 1 | 0 | 1 | 0 | 0 | 0 | 1 | 1 | 1 |
| ದಿವಸ | 13 | 17 | 21 | 15 | 25 | 17 | 15 | 10 | 18 |
| ಘಟಿ | 21 | 51 | 0 | 18 | 30 | 51 | 54 | 48 | 57 |

## ಕೇತು ಪ್ರತ್ಯಂತರ ದಶಾ ಕೇತು ಅಂತರದಶಾ

| ಗ್ರಹ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 0 |
| ದಿವಸ | 7 | 21 | 6 | 10 | 7 | 18 | 16 | 19 | 17 |
| ಘಟಿ | 21 | 0 | 18 | 30 | 21 | 54 | 48 | 57 | 51 |

## ಶುಕ್ರ ಪ್ರತ್ಯಂತರ ದಶಾ (ಶುಕ್ರ ಅಂತರದಶಾ)

| ಗ್ರಹ | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು |
|---|---|---|---|---|---|---|---|---|---|
| ಮಾಸ | 2 | 0 | 1 | 6 | 1 | 1 | 1 | 1 | 0 |
| ದಿವಸ | 0 | 18 | 6 | 21 | 24 | 18 | 27 | 21 | 21 |
| ಘಟಿ | 0 | 0 | 0 | 0 | 0 | 0 | 0 | 0 | 0 |

ಈ ರೀತಿ ಪ್ರತ್ಯಂತರ ದಶಾ ತೆಗೆದ ಮೇಲೆ ಅದರ ಫಲ ಈ ಕೆಳಗಿನಂತಿದೆ

## ಸೂರ್ಯ ದಶಾ -ಸೂರ್ಯ ಅಂತರದಶಾ ಪ್ರತ್ಯಂತರ ದಶಾ

"ಉದ್ ವೇಗೊ ವಿತ್ತ ನಾಶಶ್ಚ ದಾರಾರ್ತಿಃ ಶಿರಸಿ ವ್ಯಥಾ ।
ಬ್ರಾಹ್ಮಣೇನ ವಿವಾದಶ್ಚ ಸೂರ್ಯೆ ಸ್ವವಿದಶಾಂ ಗತೆ ॥೨॥

ಸೂರ್ಯ ಪ್ರತ್ಯಂತರ ದಶಾದಲ್ಲಿ ಮನೋ ಉದ್ವೇಗ ಹಾಗೂ ಧನಕ್ಷಯ ಸ್ತ್ರೀಗೆ ಪೀಡೆ, ಶಿರಸ್ಸಿನ ತೊಂದರೆ (ತಲೆ ನೋವು ಆದಿ) ಬ್ರಾಹ್ಮಣರ ಜತೆಗೆ ಕಲಹ ಈ ಎಲ್ಲ ಕೆಟ್ಟ ಫಲಗಳು ಹೇಳಿದಾಗಲೂ ಸೂರ್ಯ ಬಾಲ್ಯಾವಸ್ಥೆಯಲ್ಲಿ ಉಚ್ಚದಲ್ಲಿದ್ದರೆ ಅಶುಭ ಫಲ ದೊರೆಯದೆ ಆ ಸಮಯದ ಅಂತರ ದಶಾದಂತೆ ಒಳ್ಳೆಯ ಫಲವೆ ದೊರೆಯುತ್ತದೆ.

### ಸೂರ್ಯದಶಾ- ಅಂತರದಶಾ ಚಂದ್ರ ಪ್ರತ್ಯಂತರ ದಶಾ

ಉದ್ವೇಗಃ ಕಲಹಶ್ಚಾಪಿ ಧನನಾಶೋ ಮನೋರುಜಾ ।
ಮಣಿಮುಕ್ತಾದಿ ನಾಶಶ್ಚ ಶಶಿ ಪ್ರತ್ಯಂತರೆ ರವೌ ॥೩॥

ಮಾನಸಿಕ ಉದ್ವೇಗ ಕಲಹ, ಧನನಾಶ, ಮನೋವ್ಯಾಕುಲತೆ-ವಜ್ರಾದಿ ಮಣಿ ಮತ್ತುಗಳ ವಿನಾಶ ಈ ಫಲಗಳು.

### ಸೂರ್ಯ ಅಂತರ ದಶಾದಲ್ಲಿ ಮಂಗಳ ಪ್ರತ್ಯಂತರ

ರಾಜಭೀತಿಃ ಶಸ್ತ್ರಭೀತಿರ್ಬಂಧನಂ ಬಹುಸಂಕಟಿಮ್ ।
ಶತ್ರುವಹ್ನಿತಾ ಪೀಡಾ ಕುಜಸ್ಯ ವಿದಶಾ ಫಲಮ್ ॥೪॥

ಸೂರ್ಯಂತರ ದಶಾ ಕುಜ ಪ್ರತ್ಯಂತರದಲ್ಲಿ ರಾಜ ಹಾಗೂ ಶತ್ರುಭಯ ಬಂಧನ, ಮಹಾಕಷ್ಟ ಹಾಗೂ ಅಗ್ನಿಯಿಂದ ಭಯ – ಈ ಫಲಗಳು.

### ಸೂರ್ಯಾಂತರದಲ್ಲಿ ರಾಹು ಪತ್ಯಂತರ

ಶ್ಲೇಷ್ಮವ್ಯಾಧಿಃ ಶತ್ರುಭೀತಿರ್ಧನ ಹಾನಿರ್ಮಹದ್ ಭಯಮ್
ರಾಜಭಂಗ ಸ್ತಥಾ ತ್ರಾಸಸ್ತಮಸೋ ವಿದಶಾ ಫಲಮ್ ॥೫॥

ರಾಹುಪ್ರತ್ಯಂತರದಲ್ಲಿ ಕಫ (ಶ್ಲೇಷ್ಮ) ಪ್ರಯುಕ್ತ ರೋಗಾದಿ ಭಯ ಶತ್ರುಭಯ ಧನಕ್ಷಯ ಮಹಾಭಯ ರಾಜ್ಯಭಂಗ ಹಾಗೂ ಮಾನಸಿಕ ತೊಂದರೆಗಳು.

### ಸೂರ್ಯಾಂತರದಲ್ಲಿ ಗುರು ಪ್ರತ್ಯಂತರ

ಶತ್ರುನಾಶೋ ಜಯೋ ವೃದ್ಧಿರ್ವಸ್ತ್ರಹೇಮಾದಿ ಭೂಷಣಮ್ ।
ಅಶ್ವಯಾನಾದಿಕಾವಾಪ್ತಿರ್ಜೀವಸ್ಯ ವಿದಶಾಫಲಮ್ ॥೬॥

ಗುರು ಪ್ರತ್ಯಂತರದಲ್ಲಿ ಶತ್ರುಗಳ ನಾಶ(ಕ್ಷಯ)-ಶತ್ರುತ್ವ ಕಡಿಮೆ, ಎಲ್ಲ ಕಾರ್ಯದಲ್ಲಿ ವಿಜಯ, ಅಭಿವೃದ್ಧಿ ವಸ್ತ್ರ ಬಂಗಾರಾದಿ ಭೂಷಣ ಹಾಗೂ ರಥಾದಿ ವಾಹನ ಪ್ರಾಪ್ತಿ.

## ಸೂರ್ಯಾಂತರದಲ್ಲಿ ಶನಿ ಪ್ರತ್ಯಂತರ

ಧನಹಾನಿಃ ಪಶೋಃ ಪೀಡಾ ಮಹೋದ್‌ವೇಗೋ ಮಹಾರುಜಾ।
ಅಶುಭಂ ಸರ್ವಮಭಿತೋ ವಿದಶಾಯಾಂ ಶನೇಃ ಫಲಮ್ ॥೭॥

ಶನಿಯ ಪ್ರತ್ಯಂತರದಲ್ಲಿ ಧನಕ್ಷಯದೊಂದಿಗೆ ಪಶುನಾಶ ಅಥವಾ ಕಷ್ಟ ಮಾನಸಿಕ ಉದ್ವೇಗ ಮಹಾರೋಗ ಎಲ್ಲ ಕ್ಷೇತ್ರಗಳಲ್ಲಿ ಅಶುಭ ಫಲ.

## ಸೂರ್ಯಾಂತರ ಬುಧ ಪ್ರತ್ಯಂತರ

ವಿದ್ಯಾಲಾಭೋ ಬಂಧುಸಂಗೋ ಭೋಜ್ಯ ಪ್ರಾಪ್ತಿರ್ಧನಾಗಮಃ ।
ಧರ್ಮಲಾಭೊ ನೃಪಾತ್ ಪೂಜಾ ವಿದಶಾಯಾಂ ವಿದಃ ಫಲಮ್ ॥೮॥

ಬುಧ ಪ್ರತ್ಯಂತರದಲ್ಲಿ ವಿದ್ಯಾಪ್ರಾಪ್ತಿ ಬಂಧು ಬಾಂಧವರೊಡನೆ ಸಮಾಗಮ ಭೋಜ್ಯಲಾಭ ಧನಾಗಮ ಧರ್ಮಲಾಭ ರಾಜಸನ್ಮಾನ.

## ಕೇತು ಪ್ರತ್ಯಂತರ

ಪ್ರಾಣಭೀತಿರ್ಮಹಾಹಾನಿ ರಾಜಭೀತಿಶ್ಚ ವಿಗ್ರಹಃ
ಶತ್ರುಣಾ ಚ ಮಹಾವಾದೋ ಕೇತೋಃಸ್ತಂ ವಿದಶಾಫಲಮ್ ॥೯॥

ಕೇತುವಿನ ವಿದಶಾದಲ್ಲಿ (ಪ್ರತ್ಯಂತರ) ಪ್ರಾಣಾ ಭಯ ಮಹಾ ಕಷ್ಟಭೀತಿ ರಾಜಭಯ ಕಲಹ ಶತ್ರುಗಳೊಡನೆ ವಾದವಿವಾದ ಆದಿ.

## ರವಿ ಅಂತರ ಶುಕ್ರ ಪ್ರತ್ಯಂತರದಶಾ

ದಿನಾದಿ ಸಮರೂಪಾಣಿ ಲಾಭೋಽಪ್ಯಲ್ಪೋ ಭವೇದಿಹ।
ಸ್ವಲಾ ಚ ಸುಖಸಂಪತ್ತಿರ್ವಿದಶಾಯಾಂ ಭವೇದ್ ಭೃಗೋಃ ॥೧೦॥

ಸೂರ್ಯ ಅಂತರ ದಶಾ ಶುಕ್ರ ಪ್ರತ್ಯಂತರದಲ್ಲಿ ಮಧ್ಯಮ ರೂಪವಾದ ಸಮಯ (ಸುಖದುಃಖ ಸಮ) ಸ್ವಲ್ಪ ಲಾಭ ಅಲ್ಪಸುಖ ಸಂಪತ್ತು ಈ ಫಲಗಳು.

## ಚಂದ್ರ ಮಹಾದಶಾ

ಚಂದ್ರ ಅಂತರದಶಾ ಚಂದ್ರ ಪತ್ಯಂತರಾದಿ-
ಈ ಮೊದಲೆ ಸೂರ್ಯ ಪ್ರತ್ಯಂತರ ದಶಾದಂತೆ-

# ಚಂದ್ರದಶಾ -ಚಂದ್ರ ಅಂತರದಶಾ ಚಂದ್ರ ಪ್ರತ್ಯಂತರ

## ಚಂದ್ರ

| ಗ್ರಹ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ |
|---|---|---|---|---|---|---|---|---|---|
| ಮಾಸ | 0 | 0 | 1 | 1 | 1 | 1 | 0 | 1 | 0 |
| ದಿವಸ | 25 | 17 | 15 | 10 | 17 | 12 | 17 | 20 | 15 |
| ಘಟಿ | 0 | 30 | 0 | 0 | 30 | 30 | 30 | 0 | 0 |

## ಮಂಗಳ

| ಗ್ರಹ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ |
|---|---|---|---|---|---|---|---|---|---|
| ಮಾಸ | 0 | 1 | 0 | 1 | 0 | 0 | 1 | 0 | 0 |
| ದಿವಸ | 12 | 1 | 28 | 3 | 29 | 12 | 5 | 10 | 17 |
| ಘಟಿ | 15 | 30 | 0 | 15 | 45 | 15 | 0 | 30 | 30 |

## ರಾಹು

| ಗ್ರಹ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ |
|---|---|---|---|---|---|---|---|---|---|
| ಮಾಸ | 2 | 2 | 2 | 1 | 2 | 3 | 0 | 1 | 1 |
| ದಿವಸ | 21 | 12 | 25 | 16 | 1 | 0 | 27 | 15 | 1 |
| ಘಟಿ | 0 | 0 | 30 | 30 | 30 | 0 | 0 | 0 | 30 |

## ಗುರು

| ಗ್ರಹ | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಮಾಸ | 2 | 2 | 2 | 0 | 2 | 0 | 1 | 0 | 2 |
| ದಿವಸ | 4 | 16 | 8 | 28 | 20 | 24 | 10 | 28 | 12 |
| ಘಟಿ | 0 | 0 | 0 | 0 | 0 | 0 | 0 | 0 | 0 |

# ಚಂದ್ರದಶಾ ಶನಿ ಅಂತರ ಶನಿ ಪ್ರತ್ಯಂತರ

| ಗ್ರಹ | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು |
|---|---|---|---|---|---|---|---|---|---|
| ಮಾಸ | 3 | 2 | 1 | 3 | 0 | 1 | 1 | 2 | 2 |
| ದಿವಸ | 0 | 20 | 3 | 5 | 28 | 17 | 3 | 25 | 16 |
| ಘಟಿ | 15 | 45 | 15 | 0 | 20 | 30 | 15 | 30 | 0 |

## ಬುಧ ಪ್ರತ್ಯಂತರ

| ಗ್ರಹ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ |
|---|---|---|---|---|---|---|---|---|---|
| ಮಾಸ | 2 | 0 | 2 | 0 | 1 | 0 | 2 | 2 | 2 |
| ದಿವಸ | 12 | 29 | 25 | 25 | 12 | 29 | 16 | 8 | 20 |
| ಘಟಿ | 15 | 45 | 0 | 30 | 30 | 45 | 30 | 0 | 45 |

## ಕೇತು ಪ್ರತ್ಯಂತರ

| ಗ್ರಹ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ |
|---|---|---|---|---|---|---|---|---|---|
| ಮಾಸ | 0 | 1 | 0 | 0 | 0 | 1 | 0 | 1 | 0 |
| ದಿವಸ | 12 | 5 | 10 | 17 | 12 | 1 | 28 | 3 | 29 |
| ಘಟಿ | 15 | 0 | 30 | 30 | 15 | 30 | 0 | 15 | 45 |

## ಶುಕ್ರ ಪ್ರತ್ಯಂತರ

| ಗ್ರಹ | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು |
|---|---|---|---|---|---|---|---|---|---|
| ಮಾಸ | 3 | 1 | 1 | 1 | 3 | 2 | 3 | 2 | 1 |
| ದಿವಸ | 10 | 0 | 20 | 5 | 0 | 20 | 5 | 25 | 5 |
| ಘಟಿ | 0 | 0 | 0 | 0 | 0 | 0 | 0 | 0 | 0 |

## ರವಿ ಪ್ರತ್ಯಂತರ

| ಗ್ರಹ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 1 |
| ದಿವಸ | 9 | 15 | 10 | 27 | 24 | 28 | 25 | 10 | 0 |
| ಘಟಿ | 0 | 0 | 30 | 0 | 0 | 30 | 30 | 30 | 0 |

**ಚಂದ್ರನ ಅಂತರ ದಶಾದಲ್ಲಿ ಚಂದ್ರ ಪ್ರತ್ಯಂತರ ಫಲ ।**
**ಭೂಭೋಜ್ಯ ಧನಸಂಪ್ರಾಪ್ತಿ ರಾಜಪೂಜಾಮಹತ್ ಸುಖಮ್ ॥೧೧॥**

ಚಂದ್ರ-ದಶಾ-ಚಂದ್ರ ಅಂತರದಶಾ-ಚಂದ್ರ ಪ್ರತ್ಯಂತರದಲ್ಲಿ ಭೂಮಿ ಲಾಭ ಸುಭೋಜನ ಧನಪ್ರಾಪ್ತಿ ರಾಜಸಮ್ಮಾನ ಮಹಾಸುಖ ಹಾಗೂ ಇತರ ಎಲ್ಲ ರೀತಿಯಿಂದ ಮಹಾ ಸುಖ ಸ್ತ್ರೀ ಸಂಭೋಗ ಫಲ.

## ಚಂದ್ರ-ಚಂದ್ರ-ಮಂಗಳ ಪ್ರತ್ಯಂತರ ಫಲ

ಮತಿವೃದ್ಧಿರ್ಮಹಾಪೂಜಾ ಸುಖಂ ಬಂಧುಜನೈಃ ಸಹ ।
ಧನಾಗಮೋರಿಭೀರಿಂದೌ ಕುಜಸ್ಯ ವಿದಶಾ ಫಲಮ್ ॥೧೨॥

ಕುಜ ಪ್ರತ್ಯಂತರದಲ್ಲಿ ಬುದ್ಧಿವೃದ್ಧಿ ಮಹತ್ ಸನ್ಮಾನ ಬಂಧುಗಳೊಡನೆ ಸುಖ, ಧನಾಗಮ ಶತ್ರು ಭಯ-

## ಚಂದ್ರ-ಚಂದ್ರ-ರಾಹು

ಭವೇತ್ ಕಲ್ಯಾಣ ಸಂಪತ್ತ ರಾಜ ವಿತ್ತಸಮಾಗಮಃ ।
ಅಶುಭೈರಪಮೃತ್ಯುಶ್ಚ ತಮಸೋ ವಿದಶಾ ಫಲಮ್ ॥೧೩॥

ರಾಹು ಪ್ರತ್ಯಂತರದಲ್ಲಿ ಕಲ್ಯಾಣಕರ ಹಾಗೂ ಸಂಪತ್ತು, ರಾಜನಿಂದ ಧನಪ್ರಾಪ್ತಿ -ರಾಹು ಅಶುಭನಿದ್ದರೆ ಅಶುಭ ದುಷ್ಟನಿದ್ದರೆ ಅಪಮೃತ್ಯು.

## ಚಂದ್ರ-ಚಂದ್ರ-ಗುರು

ವಸ್ತ್ರಲಾಭೊ ಮಹಾತೇಜೋ ಬ್ರಹ್ಮಜ್ಞಾನಂ ಚ ಸದ್‌ಗುರೋಃ ।
ರಾಜ್ಯಲಿಂಕರಣವಾಪ್ತಿ ರ್ಜೀವಸ್ಯ ವಿದಶಾ ಫಲಮ್ ॥೧೪॥

ಗುರುವಿನ ಪ್ರತ್ಯಂತರದಲ್ಲಿ ವಸ್ತ್ರಲಾಭ ತೇಜಸ್ಸುವೃದ್ಧಿ ಸದ್‌ಗುರುವಿನಿಂದ ಬ್ರಹ್ಮಜ್ಞಾನ ರಾಜ್ಯಭೂಷಣ ಪ್ರಾಪ್ತಿ.

## ಚಂದ್ರ-ಚಂದ್ರ-ಶನಿ

ದುರ್ದಿನೆ ತ್ವದಿಕ ಪೀಡಾ ವಾತಪಿತ್ತಾದ್ ವಿಶೀಪತಃ ।
ಧನಧಾನ್ಯ ಯಶೋಹಾನಿ ವಿದಶಾಯಾಂ ಶನೇಃ ಫಲಮ್ ॥೧೫॥

ಶನಿ ಪ್ರತ್ಯಂತರದಲ್ಲಿ ದುರ್ದಿನಗೌಳಾಗುವುವು ವಾತಪಿತ್ತ ಪ್ರಯುಕ್ತ ವಿಶೇಷ ಕಷ್ಟ ಧನಧಾನ್ಯ ಹಾಗೂ ಯಶದ ಹಾನಿ.

## ಚಂದ್ರ-ಚಂದ್ರ-ಬುಧ

ಪುತ್ರಜನ್ಮ ಹಯಪ್ರಾಪ್ತಿರ್ವಿದ್ಯಾಲೋಭೋ ಮಹೋನ್ನತಿಃ ।
ಶುಕ್ಲವಸ್ತ್ರಾನ್ನ ಲಾಭಶ್ಚ ಬುಧಸ್ಯ ವಿದಶಾಫಲವ್ ॥೧೬॥

ಬುಧನ ಪ್ರತ್ಯಂತರದಲ್ಲಿ ಪುತ್ರೋತ್ಸವ ಅಶ್ವಾದಿ ಲಾಭವಿದ್ಯಾಪ್ರಾಪ್ತಿ ಮಹೋದಯ ಬಿಳಿ ವಸ್ತ್ರಲಾಭ.

## ಚಂದ್ರ-ಚಂದ್ರ-ಕೇತು

**ಬ್ರಾಹ್ಮಣೇನ ಸಮಂ ಯುದ್ಧಮಸಮ್ಮೃತ್ಯುಃ ಸುಖಕ್ಷಯಃ ।**
**ಸರ್ವತ್ರ ಜಾಯತೆಕ್ಲೇಶಃ ಶಿಖಿನೊ ವಿದಶಾ ಫಲಮ್ ॥೧೭॥**

ಕೇತು ಪ್ರತ್ಯಂತರದಲ್ಲಿ ಬ್ರಾಹ್ಮಣರೊಡನೆ ಸಂಘರ್ಷ, ಅಪಮೃತ್ಯು, ಸುಖ ನಾಶ ಎಲ್ಲ ಕ್ಷೇತ್ರಗಳಲ್ಲಿಯೂ, ಕಷ್ಟದಾಯಕ.

## ಚಂದ್ರ-ಚಂದ್ರ-ಶುಕ್ರ

**ಧನಲಾಭೋ ಮಹತ್‌ಸೌಖ್ಯಂ ಕನ್ಯಾಜನ್ಮ ಸುಭೋಜನಮ್ ।**
**ಪ್ರೀತಿಶ್ಚ ಸರ್ವಲೋಕೋಭ್ಯೋ ವಿದಶಾಯಾಂ ಭೃಗೋಃ ಫಲಮ್॥೧೮॥**

ಶುಕ್ರ ಪ್ರತ್ಯಂತರದಲ್ಲಿ - ಧನಾಗಮ ಮಹಾಸುಖ ಕನ್ಯೋತ್ಪತ್ತಿ, ಸುಭೋಜನ, ಎಲ್ಲರೊಡನೆ ಪ್ರೇಮ ಮತ್ತು ಜೀವನ.

## ಚಂದ್ರ-ಚಂದ್ರ-ಸೂರ್ಯ

**ಅನ್ನಾಗಮೋ ವಸ್ತ್ರಲಾಭಃ ಶತ್ರುಹಾನಿಃ ಸುಖಾಗಮಃ ।**
**ಸರ್ವತ್ರ ವಿಜಯ ಪ್ರಾಪ್ತಿರ್ವಿದಶಾಯಾಂ ರವೇಃ ಫಲಮ್॥೧೯॥**

ಚಂದ್ರನ ಅಂತರದಶಾ ವಿದಶಾದಲ್ಲಿ ಅನ್ನಲಾಭ ವಸ್ತ್ರಪ್ರಾಪ್ತಿ ಶತ್ರುಕ್ಷಯ ಸುಖಪ್ರಾಪ್ತಿ ಹಾಗೂ ಸರ್ವತ್ರ ಎಲ್ಲ ಕಾರ್ಯದಲ್ಲಿ ವಿಜಯಾದಿ ಫಲಗಳು.

## ಮಂಗಳ ಮಹಾದಶಾ

## ಮಂಗಳ ಅಂತರದಶಾ ಮಂಗಳರ ಪ್ರತ್ಯಂತರ

## ಮಂಗಳ ಪ್ರತ್ಯಂತರ

| ಗ್ರಹ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ |
|---|---|---|---|---|---|---|---|---|---|
| ದಿವಸ | 8 | 22 | 19 | 23 | 20 | 8 | 24 | 7 | 12 |
| ಘಟಿ | 34 | 3 | 36 | 16 | 49 | 34 | 30 | 21 | 15 |
| ಪಳ | 30 | 0 | 0 | 30 | 30 | 30 | 0 | 0 | 0 |

## ಮಂಗಳ-ರಾಹು-ರಾಹು

| ಗ್ರಹ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ |
|---|---|---|---|---|---|---|---|---|---|
| ದಿವಸ | 1 | 1 | 1 | 1 | 0 | 2 | 0 | 1 | 0 |
| ಫಲ | 26 | 20 | 29 | 23 | 22 | 3 | 18 | 1 | 22 |
| ಘಟಿ | 42 | 24 | 51 | 33 | 3 | 0 | 54 | 30 | 3 |

## ಮಂಗಳ-ಗುರು-ಗುರು

| ಗ್ರಹ | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಮಾಸ | 1 | 1 | 1 | 0 | 1 | 0 | 0 | 0 | 1 |
| ದಿವಸ | 14 | 23 | 17 | 19 | 26 | 16 | 28 | 19 | 20 |
| ಘಟಿ | 48 | 12 | 36 | 36 | 0 | 48 | 0 | 36 | 24 |

## ಮಂಗಳ-ಶನಿ-ಶನಿ

| ಗ್ರಹ | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು |
|---|---|---|---|---|---|---|---|---|---|
| ಮಾಸ | 2 | 1 | 0 | 2 | 0 | 1 | 0 | 1 | 1 |
| ದಿವಸ | 3 | 26 | 23 | 6 | 19 | 6 | 23 | 29 | 23 |
| ಘಟಿ | 10 | 31 | 16 | 30 | 57 | 15 | 16 | 51 | 12 |
| ಫಲ | 30 | 30 | 30 | 0 | 0 | 0 | 30 | 0 | 0 |

## ಮಂಗಳ-ಬುಧ-ಬುಧ

| ಗ್ರಹ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ |
|---|---|---|---|---|---|---|---|---|---|
| ಮಾಸ | 1 | 0 | 1 | 0 | 0 | 0 | 1 | 1 | 1 |
| ದಿವಸ | 20 | 20 | 29 | 17 | 29 | 20 | 23 | 17 | 26 |
| ಘಟಿ | 34 | 49 | 30 | 51 | 45 | 49 | 33 | 36 | 31 |
| ಫಲ | 30 | 30 | 0 | 0 | 0 | 30 | 0 | 0 | 30 |

## ಮಂಗಳ-ಕೇತು-ಕೇತು

| ಗ್ರಹ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ |
|---|---|---|---|---|---|---|---|---|---|
| ದಿವಸ | 8 | 24 | 7 | 12 | 8 | 22 | 19 | 22 | 20 |
| ಘಟಿ | 34 | 30 | 21 | 15 | 34 | 3 | 36 | 16 | 49 |
| ಫಳ | 30 | 0 | 0 | 0 | 30 | 0 | 0 | 30 | 30 |

## ಮಂಗಳ-ಶುಕ್ರ-ಶುಕ್ರಾದಿ

| ಗ್ರಹ | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು |
|---|---|---|---|---|---|---|---|---|---|
| ಮಾಸ | 2 | 0 | 1 | 0 | 2 | 1 | 2 | 1 | 0 |
| ದಿವಸ | 10 | 21 | 5 | 24 | 3 | 26 | 6 | 29 | 24 |
| ಘಟಿ | 0 | 0 | 0 | 30 | 0 | 0 | 30 | 30 | 30 |

## ಮಂಗಳ-ಸೂರ್ಯ-ಸೂರ್ಯ

| ಗ್ರಹ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 0 |
| ದಿವಸ | 6 | 10 | 7 | 18 | 16 | 19 | 17 | 7 | 21 |
| ಘಟಿ | 18 | 30 | 21 | 54 | 48 | 57 | 51 | 21 | 0 |

## ಮಂಗಳ-ಚಂದ್ರ-ಚಂದ್ರ

| ಗ್ರಹ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ |
|---|---|---|---|---|---|---|---|---|---|
| ಮಾಸ | 0 | 0 | 1 | 0 | 1 | 0 | 0 | 1 | 0 |
| ದಿವಸ | 17 | 12 | 1 | 28 | 3 | 29 | 12 | 5 | 10 |
| ಘಟಿ | 30 | 15 | 30 | 0 | 0 | 15 | 45 | 15 | 30 |

## ಮಂಗಳ ಅಂತರ ಮಂಗಳ ಪ್ರತ್ಯಂತರ ದಶಾಫಲ

ಶತ್ರುಭತಿಃ ಕಲಿರ್ಘೋರೋ ರಕ್ತವಸ್ತ್ರಾವೊ ಭಯ ತಥಾ
ಮೃತ್ಯೋರಪಿ ಮಹೀಜಸ್ಯ ವಿದಶಾಯಾಂ ಕುಜಾಂತರೆ ॥೨೦॥

ಮಂಗಳ ಪ್ರತ್ಯಂತರದಲ್ಲಿ ಶತ್ರುಭಯ ಭಯಂಕರ ವಿರೋಧ ರಕ್ತವಸ್ತ್ರ ಹಾಗೂ ಮೃತ್ಯುಭಯ

## ಮಂಗಳ-ರಾಹು

ಬಂಧನಂ ರಾಜಭಂಗಶ್ಚ ಧನಹಾನಿಃ ಕುಭೋಜನಮ್ ।
ಕಲಹಃ ಶತ್ರುಭೀರ್ನಿತ್ಯಂ ತಮಸೋ ವಿದಶಾಫಲಂ ॥೨೧॥

ರಾಹುವಿನ ಪ್ರತ್ಯಂತರದಲ್ಲಿ ಬಂಧನ ರಾಜ ಹಾಗೂ ಧನದ ವಿನಾಶ ಕದನ್ನ ಭೋಜನ ಜಗಳ ಶತ್ರು ಭಯ.

## ಮಂಗಳ-ಗುರು ಪ್ರತ್ಯಂತರ

ಮತಿನಾಶಸ್ತಥಾ ದುಃಖಂ ಸಂತಾಪಃ ಕಲಹೊ ಭವೇತ್ ।
ನಿಷ್ಫಲಂ ಚಿಂತಿತಂ ಸರ್ವಮಿತೀಜ್ಯವಿದಶಾ ಫಲಮ್ ॥೨೨॥

ಮಂಗಳ ಅಂತದಶಾದಲ್ಲಿ ಗುರು ಪ್ರತ್ಯಂತರದಲ್ಲಿ ಬುದ್ದಿ ನಾ ದುಃಖ ಸಂತಾಪ ಕಲಹ ಎಲ್ಲ ವಿಚಾರ, ಕಾರ್ಯದಲ್ಲಿ ವಿಫಲತೆ.

## ಮಂಗಳ-ಶನಿ

ಸ್ವಾಮಿ ನಾಶಸ್ತಥಾ ಪೀಡಾ ಧನಹಾನಿರ್ಮಹಾಭಯಮ್ ।
ವೈಕಲ್ಯಂ ಕಲಹ ಸ್ತ್ರಾಸೋ ವಿದಶಾಯಾಂ ಶನಿಃ ಫಲಮ್ ॥೨೩॥

ಮಂಗಳ ಅಂತರ ದಶಾದಲ್ಲಿ ಶನಿ ವಿದಶಾ ಯಜಮಾನನ ನಾಶ ಕಷ್ಟ ಧನಕ್ಷಯ ಮಹಾಭಯ ವಿಕುಲತಾ ಜಗಳ ತ್ರಾಸು .

## ಮಂಗಳ-ಬುಧ

ಸರ್ವಥಾ ಬುದ್ದಿ ನಾಶಶ್ಚ ಧನಹಾನಿರ್ಜ್ವರಸ್ತನೌ।
ವಸ್ತ್ರಾನ್ನಸುಹೃದಾಂ ನಾಶೋ ವಿದಶಾಯಾಂ ವಿದೋಭವೇತ್ ॥೨೪॥

ಬುಧನ ಪ್ರತ್ಯಂತರ ದಶಾದಲ್ಲಿ ಸರ್ವಥಾ ಬುದ್ದಿ ನಾಶ ಹಾಗೂ ಶರೀರದಲ್ಲಿ (ಅಸ್ತಿ) ಜ್ವರ, ವಸ್ತ್ರ ಅಗ್ನಿ ಮತ್ತಿತರ ವಿನಾಶ.

## ಮಂಗಳ-ಕೇತು

ಆಲಸ್ಯಂ ಚ ಶಿರಃ ಪೀಡಾ ಪಾಪರೋಗೋಪಮೃತ್ಯುಭೀಃ ।
ರಾಜಭೀತಿಃ ಶತ್ರು ಘಾತಃ ಶಿಖಿನೋ ವಿದಶಾಫಲಮ್ ॥೨೫॥

ಕೇತು ಪ್ರತ್ಯಂತರದಲ್ಲಿ ಆಲಸ್ಯ ಶಿರೋವೇದನ ಪಾಪಜನ್ಯರೋಗ ಅಪಮೃತ್ಯು ರಾಜ ಭಯ, ಶಸ್ತ್ರಾಘಾತ.

## ಮಂಗಳ ಅಂತರ-ಶುಕ್ರ ಪ್ರತ್ಯಂತರ

**ಚಾಂಡಾಲಾತ್ ಸಂಕಟಸ್ತ್ರಾಸೋ ರಾಜಶಸ್ತ್ರಭಯಂ ಭವೇತ್ ।**
**ಅತಿಸಾರೋಥ ವಮನಂ ವಿದಶಾಯಾಂ ಭೃಗೋಃ ಫಲಂ ॥೨೬॥**

ಶುಕ್ರ ಪ್ರತ್ಯಂತರದಲ್ಲಿ ಚಾಂಡಾಲರಿಂದ ಸಂಕಟ ತ್ರಾಸು, ರಾಜ ಹಾಗೂ ಶಸ್ತ್ರದ ಭಯ ಅತಿಸಾರರೋಗ ವಾಂತಿ ಇತ್ಯಾದಿ.

## ಮಂಗಳ ಅಂತರದಶಾದಲ್ಲಿ ಸೂರ್ಯ

**ಭೂಮಿಲಾಭೋರ್ಥ ಸಂಪತ್ತಿಃ ಸಂತೋಷೋ ಮಿತ್ರಸಂಗತಿಃ ।**
**ಭವೇತ್ ಸರ್ವತ್ರ ಚ ಸುಖಂ ವಿದಶಾಯಾಂ ರವೇಃ ಸದಾ ॥೨೭॥**

ರವಿಯ ವಿದಶೆಯಲ್ಲಿ ಭೂಮಿಲಾಭ ಧನ ಸಂಪತ್ತಿನ ಆಗಮನ ಮನಸಂತೋಷ ಮಿತ್ರ ಸಂಗತಿ ಹಾಗೂ ಎಲ್ಲ ಕ್ಷೇತ್ರಗಳಲ್ಲಿ ಸುಖ.

## ಮಂಗಳ-ಅಂತರ-ಚಂದ್ರ ಪ್ರತ್ಯಂತರ

**ಯಾಮ್ಯಾಂ ದಿಶಿ ಭವೇಲಾಭಃ ಸಿತವಸ್ತ್ರಾವಿಭೂಷಣಮ್**
**ಸಂಸಿದ್ಧಿಃ ಸರ್ವಕಾರ್ಯಾಣಾಂ ವಿದಶಾಯಾಂ ವಿಧೋರ್ಭವೇತ್ ॥೨೮॥**

ಮಂಗಳ ದಶಾ-ಮಂಗಳ ಅಂತರದಶಾ ಚಂದ್ರನ ಪ್ರತ್ಯಂತರ ದಶಾಕಾಲದಲ್ಲಿ ದಕ್ಷಿಣ ದಿಕ್ಕಿನಿಂದ ಲಾಭವಾಗುತ್ತದೆ. ಬಿಳಿ ವಸ್ತ್ರದ ಅಲಂಕಾರ ಹಾಗೂ ಅಲಂಕಾರ ವಸ್ತುಗಳ ಪ್ರಾಪ್ತಿ ಹಾಗೂ ಎಲ್ಲ ಕಾರ್ಯಗಳಲ್ಲಿ ಸದಾ ಜಯ ಕಾಣುತ್ತಾರೆ. ಅಥವಾ ಸಿದ್ಧಿ ಪಡೆಯುತ್ತಾರೆ.

## ರಾಹುದಶಾ

## ರಾಹುವಿನ ಪ್ರತ್ಯಂತರ ದಶಾದಿಗಳು

## ರಾಹುದಶಾ ರಾಹು ಅಂತರದಶಾ ಪ್ರತ್ಯಂತರ ದಶಾ

## ರಾಹು-ರಾಹು-ರಾಹು

| ಗ್ರಹ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ |
|---|---|---|---|---|---|---|---|---|---|
| ಮಾಸ | 4 | 4 | 5 | 4 | 1 | 5 | 1 | 2 | 1 |
| ದಿವಸ | 25 | 9 | 3 | 17 | 26 | 12 | 18 | 21 | 26 |
| ಘಟಿ | 48 | 36 | 54 | 42 | 42 | 0 | 36 | 0 | 42 |

## ರಾಹು-ರಾಹು-ಗುರು

| ಗ್ರಹ | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಮಾಸ | 3 | 4 | 4 | 1 | 4 | 1 | 2 | 1 | 4 |
| ದಿವಸ | 25 | 16 | 2 | 20 | 24 | 13 | 12 | 20 | 9 |
| ಘಟಿ | 12 | 48 | 24 | 24 | 0 | 12 | 0 | 24 | 36 |

## ರಾಹು-ರಾಹು-ಶನಿ

| ಗ್ರಹ | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು |
|---|---|---|---|---|---|---|---|---|---|
| ಮಾಸ | 5 | 4 | 1 | 5 | 1 | 2 | 1 | 5 | 4 |
| ದಿವಸ | 12 | 25 | 29 | 21 | 21 | 25 | 29 | 3 | 16 |
| ಘಟಿ | 27 | 21 | 51 | 0 | 18 | 30 | 54 | 57 | 48 |

## ರಾಹು-ರಾಹು-ಬುಧ

| ಗ್ರಹ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ |
|---|---|---|---|---|---|---|---|---|---|
| ಮಾಸ | 4 | 1 | 5 | 1 | 2 | 1 | 4 | 4 | 4 |
| ದಿವಸ | 10 | 23 | 3 | 15 | 16 | 23 | 17 | 2 | 25 |
| ಘಟಿ | 3 | 33 | 0 | 54 | 30 | 33 | 42 | 24 | 21 |

## ರಾಹು-ರಾಹು-ಕೇತು

| ಗ್ರಹ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ |
|---|---|---|---|---|---|---|---|---|---|
| ಮಾಸ | 0 | 2 | 0 | 1 | 0 | 1 | 1 | 1 | 1 |
| ದಿವಸ | 22 | 3 | 18 | 1 | 22 | 26 | 20 | 29 | 23 |
| ಘಟಿ | 30 | 0 | 54 | 30 | 3 | 42 | 24 | 51 | 33 |

## ರಾಹು-ಶುಕ್ರ-ಶುಕ್ರ

| ಗ್ರಹ | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು |
|---|---|---|---|---|---|---|---|---|---|
| ಮಾಸ | 6 | 1 | 3 | 2 | 5 | 4 | 5 | 5 | 2 |
| ದಿವಸ | 0 | 24 | 0 | 3 | 12 | 24 | 21 | 3 | 3 |
| ಘಟಿ | 0 | 0 | 0 | 0 | 0 | 0 | 0 | 0 | 0 |

### ರಾಹು-ಸೂರ್ಯ-ರವಿ

| ಗ್ರಹ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 1 | 1 | 1 | 1 | 0 | 1 |
| ದಿವಸ | 16 | 27 | 18 | 18 | 13 | 21 | 15 | 18 | 24 |
| ಘಟಿ | 12 | 0 | 54 | 36 | 12 | 18 | 54 | 54 | 0 |

### ರಾಹು-ಚಂದ್ರ-ಚಂದ್ರ

| ಗ್ರಹ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ |
|---|---|---|---|---|---|---|---|---|---|
| ಮಾಸ | 1 | 1 | 2 | 2 | 2 | 2 | 1 | 3 | 6 |
| ದಿವಸ | 15 | 1 | 21 | 12 | 25 | 16 | 1 | 0 | 27 |
| ಘಟಿ | 0 | 30 | 0 | 0 | 30 | 30 | 30 | 0 | 0 |

### ರಾಹು-ಮಂಗಳ-ಮಂಗಳ

| ಗ್ರಹ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ |
|---|---|---|---|---|---|---|---|---|---|
| ಮಾಸ | 0 | 1 | 1 | 1 | 1 | 0 | 2 | 0 | 1 |
| ದಿವಸ | 22 | 26 | 20 | 29 | 23 | 22 | 3 | 18 | 1 |
| ಘಟಿ | 3 | 42 | 24 | 50 | 33 | 3 | 0 | 54 | 30 |

### ರಾಹು ಅಂತರ-ರಾಹು ಪ್ರತ್ಯಂತರ ಫಲ

ಬಂಧನಂ ಬಹುಧಾ ರೋಗೋ ಬಹುಘಾತಃ ಸುಹೃದ್ ಭಯಮ್ ।
ತಮಸೋಂತರ್ದಶಾಯಾಂ ತು ತಮಂ ಪ್ರತ್ಯಂತರೆ ಫಲಮ್ ॥೨೯॥

ರಾಹುವಿನ ಅಂತರದಶಾ ರಾಹು ಪ್ರತ್ಯಂತರ ದಶಾ ಬಂಧನ ಭಯ ರೋಗ ಭಯ-ಬಹಳ ರೀತಿಯಿಂದ ಸಂಕಟದ ಪ್ರಹಾರಗಳು ಹಾಗೂ ಮಿತ್ರಭಯವೂ ಕಂಡುಬರುತ್ತದೆ.

### ರಾಹು ಅಂತರ-ಗುರು ಪ್ರತ್ಯಂತರ

ಸರ್ವತ್ರ ಲಭತೆ ಮಾನಂ ಗಜಾಶ್ವಂ ಚ ಧನಾಗಮಮ್ ।
ತತ್ರೈದ ತು ಸುರೇಜ್ಯಸ್ಯ ಪ್ರಾಪ್ತೆ ಪ್ರತ್ಯಂತರೆ ನರಃ ॥೩೦॥

ರಾಹು ಅಂತರ ದಶಾ ಗುರು ಪ್ರತ್ಯಂತರದಲ್ಲಿ ಎಲ್ಲ ಕಡೆಯಿಂದಲೂ ಆದರ

ದೊರೆಯುತ್ತದೆ. ಆನೆ, ಕುದುರೆ ಇತ್ಯಾದಿ ಪಶು ಸಂಪತ್ತು ಹಾಗೂ ಧನ ಪ್ರಾಪ್ತಿಯೂ ಆಗುತ್ತದೆ.

## ರಾಹು-ಶನಿ ಪ್ರತ್ಯಂತರ

ಬಂಧನಂ ಜಾಯತೆ ಘೋರಂ ಸುಖಹಾನಿರ್ಮಹದ್ ಭಯಮ್ ।
ಪ್ರತ್ಯಹಂ ವಾತ ಪೀಡಾ ಚ ವಿದಶಾಯಾಂ ಶನೇಃ ಫಲಮ್ ॥೩೧॥

ಶನಿ ಪ್ರತ್ಯಂತರದಲ್ಲಿ ಭಯಂಕರ ಸ್ವರೂಪದಿಂದ ಬಲಧನ, ಸುಖಕ್ಷಯ ಮಹಾಭಯ, ವಾತಪೀಡಾದಿಂದ ತೊಂದರೆ.

## ರಾಹು-ಬುಧ ಪ್ರತ್ಯಂತರ

ಸರ್ವತ್ರ ಬಹ್ವದಾ ಲಾಭಃ ಸ್ತ್ರೀಸಂಗತ್ಯ ವಿಶೇಷತಃ ।
ಪರದೇಶಗತಾ ಸಿದ್ಧಿರ್ವದಶಾಯಾಂ ವಿದಃ ಫಲಮ್ ॥೩೨॥

ಬುಧ ಪ್ರತ್ಯಂತರದಲ್ಲಿ ಎಲ್ಲ ಕಡೆಯಿಂದ ಎಲ್ಲ ರೀತಿಯ ಲಾಭ, ಸ್ತ್ರೀ ಮುಖಾಂತರ ವಿಶೇಷ ರೂಪದಲ್ಲಿ ಲಾಭ, ಪರದೇಶಗಮನದಿಂದ ವಿಶೇಷ ಸಿದ್ಧಿ.

## ರಾಹು-ಕೇತು ಪ್ರತ್ಯಂತರ

ಬುದ್ಧಿನಾಶೋ ಭಯಂ ವಿಘ್ನೋ ಧನಹಾನಿರ್ಮಹದ್ ಭಯಮ್ ।
ಸರ್ವತ್ರ ಕಲಹೋದ್‌ವೇಗೌ ಶಿಖಿನೋ ವಿದಶಾಫಲಮ್ ॥೩೩॥

ಕೇತು ವಿದಶಾದಲ್ಲಿ ಬುದ್ಧಿನಾಶ ಭಯ ಹಾಗೂ ಕಾರ್ಯ ವಿಘ್ನ ಬಹಳ ಧನಹಾನಿ, ಮಹಾಭಯ, ಎಲ್ಲರೊಡನೆ ಕಲಹ ಉದ್ವೇಗಾದಿ ಫಲ.

## ರಾಹು-ಶುಕ್ರ ಪ್ರತ್ಯಂತರ

ಯೋಗಿನೀ ಭ್ಯೋ ಭಯಂ ಚೈವಮಶ್ವಹಾನಿಃ ಕುಭೋಜನಿನಮ್ ।
ಸ್ತ್ರೀನಾಶಃ ಕುಲಜಃ ಶೋಕಃ ಸಿತಸ್ಯ ವಿದಶಾಪಲಮ್ ॥೩೪॥

ಶುಕ್ರ ಪ್ರತ್ಯಂತರದಲ್ಲಿ ಯೋಗಿನಿಯರಿಂದ ಭಯ, ಅಶ್ವಾದಿನಾಶ, ಎರಡನೆಯವರ ಮನೆ ಯಾಟತಾನ್ನ ಭೋಜನ ಸ್ತ್ರೀನಾಶ ವಂಶದಲ್ಲಿ ಶೋಕ.

## ರಾಹು-ಸೂರ್ಯ ಪ್ರತ್ಯಂತರ

ಜ್ವರರೋಗೋ ಮಹಾಭೀತಿಃ ಪುತ್ರಪೌತ್ರಾದಿ ಪೀಡನಮ್ ।
ಅಪಮೃತ್ಯುಃ ಪ್ರಮಾದಶ್ಚ ಸೂರ್ಯಸ್ಯ ವಿದಶಾ ಫಲಮ್ ॥೩೫॥

ಸೂರ್ಯ ಪ್ರತ್ಯಂತರದಲ್ಲಿ ಜ್ವರರೋಗ ಮಹಾಭಯ ಪುತ್ರಪೌತ್ರಾದಿಗಳಿಗೆ ಶೋಕ, ಕ್ಲೇಶ ಅಪಮೃತ್ಯು ಅಸಾವಧಾನಿತಾದಿ ಫಲಗಳು.

### ರಾಹು-ಚಂದ್ರ ಪ್ರತ್ಯಂತರ

**ಉದ್ವೇಗ ಕಲಹೌ ಚಿಂತಾ ಮಾನಹಾನಿರ್ಮಹದ್ ಭಯಮ್ ।**
**ಪಿತುರ್ವಿಕಲತಾ ದೇಹೆ ಶಶಿನೋ ವಿದಶಾಫಲಮ್ ॥೩೬॥**

ಚಂದ್ರ ಪ್ರತ್ಯಂತರದಲ್ಲಿ ಕಲಹ ಚಿಂತೆ ಮನೋ ಉದ್ವೇಗ, ಮಾನಹಾನಿ, ಮಹಾಭಯ, ತಂದೆಗೆ ಶರೀರ ಕಷ್ಟ ಆದಿ ಫಲಗಳು.

### ರಾಹು-ಮಂಗಳ ಪ್ರತ್ಯಂತರ

**ಭಗಂದರ ಕೃತಾ ಪೀಡಾ ರಕ್ತಪಿತ್ತ ಪ್ರಪೀಡನಮ್ ।**
**ಅರ್ಥ ಹಾನಿರ್ಮಹೋದ್‌ವೇಗೋ ಭೌಮಸ್ಯ ವಿದಶಾಫಲಮ್ ॥೩೭॥**

ಮಂಗಳ ಪ್ರತ್ಯಂತರದಲ್ಲಿ ಭಂಗದ ರೋಗ ಭಯ, ರಕ್ತ ಪಿತ್ತರೋಗದಿಂದ ತೊಂದರೆ ಮಹಾನ್ ಮಾನಸಿಕ ಉದ್ವೇಗ ಕಂಡುಬರುತ್ತದೆ.

## ಗುರುದಶಾ

### ಅಂತರ ಪ್ರತ್ಯಂತರ ಚಾರ್ಟ್

### ಗುರು-ಗುರ ಅಂತರ ಗುರು ಪ್ರತ್ಯಂತರ

| ಗ್ರಹ | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಮಾಸ | 3 | 4 | 2 | 1 | 4 | 1 | 2 | 1 | 3 |
| ದಿವಸ | 12 | 1 | 18 | 14 | 8 | 8 | 4 | 14 | 25 |
| ಘಟಿ | 24 | 36 | 48 | 48 | 0 | 24 | 0 | 48 | 12 |

### ಶನಿ-ಶನಿ ಪ್ರತ್ಯಂತರ

| ಗ್ರಹ | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು |
|---|---|---|---|---|---|---|---|---|---|
| ಮಾಸ | 4 | 4 | 1 | 5 | 1 | 2 | 1 | 4 | 4 |
| ದಿವಸ | 24 | 9 | 23 | 2 | 15 | 16 | 23 | 16 | 1 |
| ಘಟಿ | 24 | 2 | 12 | 0 | 36 | 0 | 12 | 48 | 36 |

## ಬುಧ-ಬುಧ ಪ್ರತ್ಯಂತರ

| ಗ್ರಹ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ |
|---|---|---|---|---|---|---|---|---|---|
| ಮಾಸ | 3 | 1 | 4 | 1 | 2 | 1 | 4 | 3 | 4 |
| ದಿವಸ | 25 | 17 | 16 | 10 | 8 | 17 | 2 | 18 | 9 |
| ಘಟಿ | 36 | 36 | 0 | 48 | 0 | 36 | 24 | 48 | 12 |

## ಕೇತು ಅಂತರ-ಕೇತು ಪ್ರತ್ಯಂತರ

| ಗ್ರಹ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ |
|---|---|---|---|---|---|---|---|---|---|
| ಮಾಸ | 0 | 1 | 0 | 0 | 0 | 1 | 1 | 1 | 1 |
| ದಿವಸ | 19 | 26 | 16 | 28 | 19 | 20 | 14 | 23 | 17 |
| ಘಟಿ | 36 | 0 | 48 | 0 | 36 | 24 | 48 | 12 | 36 |

## ಶುಕ್ರ-ಶುಕ್ರ

| ಗ್ರಹ | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು |
|---|---|---|---|---|---|---|---|---|---|
| ಮಾಸ | 5 | 1 | 2 | 1 | 4 | 4 | 5 | 4 | 1 |
| ದಿವಸ | 10 | 18 | 20 | 26 | 24 | 8 | 2 | 16 | 26 |
| ಘಟಿ | 0 | 0 | 0 | 0 | 0 | 0 | 0 | 0 | 0 |

## ಸೂರ್ಯ-ಸೂರ್ಯ

| ಗ್ರಹ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 1 | 1 | 1 | 1 | 0 | 1 |
| ದಿವಸ | 14 | 24 | 16 | 13 | 8 | 15 | 10 | 16 | 18 |
| ಘಟಿ | 24 | 0 | 48 | 12 | 24 | 36 | 48 | 48 | 0 |

## ಚಂದ್ರ-ಚಂದ್ರ

| ಗ್ರಹ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ |
|---|---|---|---|---|---|---|---|---|---|
| ಮಾಸ | 1 | 0 | 2 | 2 | 2 | 2 | 0 | 2 | 0 |
| ದಿವಸ | 10 | 28 | 12 | 4 | 16 | 8 | 28 | 20 | 24 |
| ಘಟಿ | 0 | 0 | 0 | 0 | 0 | 0 | 0 | 0 | 0 |

## ಮಂಗಳ-ಮಂಗಳ

| ಗ್ರಹ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ |
|---|---|---|---|---|---|---|---|---|---|
| ಮಾಸ | 0 | 1 | 1 | 1 | 1 | 0 | 1 | 0 | 0 |
| ದಿವಸ | 19 | 20 | 14 | 23 | 17 | 19 | 16 | 16 | 28 |
| ಘಟಿ | 36 | 24 | 48 | 12 | 36 | 36 | 0 | 48 | 0 |

## ರಾಹು ಅಂತರ-ರಾಹು

| ಗ್ರಹ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ |
|---|---|---|---|---|---|---|---|---|---|
| ಮಾಸ | 4 | 3 | 4 | 4 | 1 | 4 | 1 | 2 | 1 |
| ದಿವಸ | 9 | 25 | 16 | 2 | 20 | 24 | 13 | 12 | 20 |
| ಘಟಿ | 36 | 12 | 48 | 24 | 24 | 0 | 12 | 0 | 24 |

## ರಾಹುವಿನ ಅಂತರದಶಾ ಗುರು ಪ್ರತ್ಯಂತರ

**ಹೇಮಲಾಭೊ ಧಾನ್ಯವೃದ್ಧಿಃ ಕಲ್ಯಾಣು ಸತ್ಫಲೋದಯಃ ।**
**ಅಂತರ್ದಾಯೇ ಸುರೇಜ್ಯಸ್ಯ ತಸ್ಯ ಪ್ರತ್ಯಂತರೆ ಭವೇತ್ ॥೩೮॥**

ಗುರುವಿನ ಅಂತರದಶಾ ಗುರು ಪ್ರತ್ಯಂತರದೇ ಬಂಗಾರ ಲಾಭ ಧನಧಾನ್ಯವೃದ್ಧಿ ಕಲ್ಯಾಣ ಶುಭಫಲ ಉದಯ

## ಗುರು-ಶನಿಪ್ರತ್ಯಂತರ

**ಗೋಭೂಮಿ ಹೇಮಲಾಭಃ ಸ್ಯಾತ್ ಸರ್ವತ್ರ ಸುಖ ಸಾಧನಮ್**
**ಸಂಗ್ರಹೊಹಾನ್ನಪಾನಾದೇಃ ವಿದಶಾಯಾಂ ಶನೇಃ ಫಲಮ್ ॥೩೯॥**

ಶನಿ ಪ್ರತ್ಯಂತರದಲ್ಲಿ ಆಕಳುಗಳು ಭೂಮಿ ಬಂಗಾರದ ಲಾಭ ಸರ್ವತ್ರ ಸುಖಸಾಧನದ ಸಾಮಗ್ರಿ, ಅನ್ನ ಪಾನಾದಿಯ ಸಂಗ್ರಹ ಕಾರ್ಯ ಇತ್ಯಾದಿ ಶುಭ ಫಲ.

## ಗುರು-ಬುಧ ಪ್ರತ್ಯಂತರ

**ವಿದ್ಯಾಲಾಭೊ ವಸ್ತ್ರಲಾಭೋ ಜ್ಞಾನಲಾಭಃ ಸಮೌಕ್ತಿಕಃ**
**ಸುಹೃದಾಂ ಸಂಗಮಾತ್ ಸ್ನೇಹ ವಿದಶಾಯಾಂ ವಿದಃ ಫಲಮ್ ॥೪೦॥**

ಬುಧ ಪ್ರತ್ಯಂತರದಲ್ಲಿ ವಿದ್ಯಾ ವಸ್ತ್ರ ಜ್ಞಾನ ಹಾಗೂ ಮತ್ತು ಆದಿ ಲಾಭ

ಮಿತ್ರರ ಆಗಮನದಿಂದ ಸ್ನೇಹ ವೃದ್ಧಿ ಆದಿಫಲ.

### ಗುರು-ಕೇತು ಪ್ರತ್ಯಂತರ

ಜಲಭೀತಿಸ್ತಥಾ ಚೌರ್ಯ ಬಂಧನಂ ಕಲಹೊ ಭವೇತ್ ।
ಅಪಮೃತ್ಯುಭಯಂ ಘೋರಂ ಧ್ವಜಸ್ಯ ವಿದಶಾಫಲಮ್ ॥೪೧॥

ಜಲಭಯ ಕಳ್ಳತನ, ಬಂಧನ, ಜಗಳ, ಅಪಮೃತ್ಯು ಭಯ ಈ ಎಲ್ಲ ಫಲಗಳು.

### ಗುರು-ಶುಕ್ರ ಪ್ರತ್ಯಂತರ

ನಾನಾವಿದ್ಯಾರ್ಥ ಸಂಪ್ರಾಪ್ತಿ ಹೇಮವಸ್ತ್ರವಿಭೂಷಣಮ್ ।
ಲಭತೆ ಕ್ಷೇಮ ಸಂತೋಷ ವಿದಶಾಯಾಂ ಭೃಗೋರ್ನರಂ ॥೪೨॥

ವಿದ್ಯೆ ಹಾಗೂ ಕರ್ಮ ಸಂಪತ್‌ಪ್ರಾಪ್ತಿ (ಉದ್ಯೋಗ) ಸುವರ್ಣ ವಸ್ತ್ರ ಆಭೂಷಣ ಲಾಭ, ಮನೆಯಲ್ಲಿ ಕಲ್ಯಾಣ ಪ್ರಯುಕ್ತ ಸಂತೋಷ.

### ಗುರು-ಸೂರ್ಯ ಪ್ರತ್ಯಂತರ

ನೃಪಾಲ್ಲಾಭಸ್ತಥಾ ಮಿತ್ರಾತ್ ಪಿತೃತೋಮಾತೃತೋಪಿವಾ।
ಸರ್ವತ್ರ ಲಭತೆ ಪೂಜಾಂ ಉದಶಾಯಾಂ ರವೇರ್ನರಂಃ ॥೪೩॥

ರಾಜ, ಮಿತ್ರ, ತಂದೆ-ತಾಯಿಗಳಿಂದ ಲಾಭ ಎಲ್ಲ ಕಡೆಯಿಂದ ಎಲ್ಲರಿಂದ ಆದರ ಪಡೆದು ಜೀವಿಸುವನು.

### ಗುರು-ಚಂದ್ರ ಪ್ರತ್ಯಂತರ

ಸರ್ವದುಃಖ ವಿಮೋಕ್ಷಶ್ಚ ಮುಕ್ತಾಲಾಭೊ ಹಯಸ್ಯಚ
ಸಿದ್ದಂತಿ ಸರ್ವಕಾರ್ಯಾಣಿ ಚಂದ್ರ ಪತ್ಯಂತರೆ ಧ್ರುವಮ್ ॥೪೪॥

ಎಲ್ಲ ಕೇಶ ನಿವಾರಣೆ ಮತ್ತು ಕುದುರೆ ಆದಿ ಲಾಭ ಹಾಗೂ ಎಲ್ಲ ಕಾರ್ಯಗಳಲ್ಲಿ ಸಿದ್ದಿ ದೊರೆಯುತ್ತದೆ.

### ಗುರು-ಮಂಗಳ ಪ್ರತ್ಯಂತರ

ಶಸ್ತ್ರಭೀರ್ಗುದೆ ಪೀಡಾ ವಹ್ನಿಮಾಂಧ್ಯಮ ಜೀರ್ಣತಾ ।
ಪೀಡಾ ಶತ್ರುಕೃತಾ ಭೂರಿ ಭೌಮಸ್ಯ ವಿದಶಾ ಫಲಮ್ ॥೪೫॥

ಶಸ್ತ್ರಭಯಿ ಗುದದ್ವಾರದಲ್ಲಿ ಪೀಡೆ, ಅಗ್ನಿ ಮಾಂದ್ಯ ಅಜೀರ್ಣರೋಗ ಹಾಗೂ ಶತ್ರುಕೃತ ಪೀಡಾ.

## ಗುರು-ರಾಹು ಪ್ರತ್ಯಂತರ ಫಲ

ಚಾಂಡಾಲೇನ ವಿರೋಧಃ ಸ್ಯಾದ್ ಭಯಂ ತೇಭ್ಯೋರ್ಥ ಸಂಕ್ಷಯಿಃ।
ಕಷ್ಟಂ ಭೀರ್ವ್ಯಾಧಿಶತ್ರು ಭ್ಯಸ್ತಮಸೋ ವಿದಶಾ ಫಲಮ್ ॥೪೬॥

ಚಾಂಡಾಲ ಜನರೊಂದಿಗೆ ವಿರೋಧ, ಅವರಿಂದ ಧನನಾಶ, ಕಷ್ಟ ವ್ಯಾಧಿ, ಶತ್ರುಭಯ ಇತ್ಯಾದಿ ಫಲಗಳು.

## ಶನಿ ಮಹಾ ದಶಾ

### ಶನಿ ಅಂತರ ಪ್ರತ್ಯಂತರ

| ಗ್ರಹ | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು |
|---|---|---|---|---|---|---|---|---|---|
| ಮಾಸ | 5 | 5 | 2 | 6 | 1 | 3 | 2 | 5 | 4 |
| ದಿವಸ | 21 | 3 | 3 | 0 | 24 | 0 | 3 | 12 | 24 |
| ಘಟಿ | 28 | 25 | 10 | 30 | 9 | 15 | 10 | 27 | 24 |
| ಫಲ | 30 | 30 | 30 | 0 | 0 | 0 | 30 | 0 | 0 |

### ಶನಿ-ಬುಧ ಪ್ರತ್ಯಂತರ

| ಗ್ರಹ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ |
|---|---|---|---|---|---|---|---|---|---|
| ಮಾಸ | 4 | 1 | 5 | 1 | 2 | 1 | 4 | 4 | 5 |
| ದಿವಸ | 17 | 26 | 11 | 18 | 20 | 26 | 25 | 9 | 3 |
| ಘಟಿ | 16 | 30 | 31 | 27 | 45 | 31 | 21 | 12 | 25 |
| ಫಲ | 30 | 30 | - | 0 | 0 | 30 | 0 | 0 | 30 |

### ಶನಿ-ಕೇತು-ಅಂತರ-ಕೇತು ಪ್ರತ್ಯಂತರ

| ಗ್ರಹ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ |
|---|---|---|---|---|---|---|---|---|---|
| ಮಾಸ | 0 | 2 | 0 | 1 | 0 | 1 | 1 | 2 | 1 |
| ದಿವಸ | 23 | 6 | 19 | 3 | 23 | 29 | 23 | 3 | 26 |
| ಘಟಿ | 16 | 30 | 57 | 15 | 16 | 51 | 12 | 10 | 31 |
| ಫಲ | 30 | - | - | - | 30 | - | - | 30 | 30 |

## ಶುಕ್ರ ಅಂತರ ದಶಾ ಶುಕ್ರಾದಿ ಪ್ರತ್ಯಂತರ

| ಗ್ರಹ | ಶುಕ್ರ | ರವಿ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು |
|---|---|---|---|---|---|---|---|---|---|
| ಮಾಸ | 6 | 1 | 3 | 2 | 5 | 5 | 6 | 5 | 2 |
| ದಿವಸ | 10 | 27 | 5 | 6 | 21 | 2 | 0 | 11 | 6 |
| ಫಳ | - | - | - | 30 | - | - | 30 | 30 | 30 |

## ಸೂರ್ಯಾಂತರ ಸೂರ್ಯ ಪ್ರತ್ಯಂತರಾದಿ

| ಗ್ರಹ | ಸೂ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ |
|---|---|---|---|---|---|---|---|---|---|
| ಮಾಸ | 0 | 0 | 0 | 1 | 1 | 1 | 1 | 0 | 1 |
| ದಿವಸ | 17 | 28 | 19 | 21 | 15 | 24 | 18 | 19 | 27 |
| ಘಟಿ | 6 | 30 | 57 | 18 | 36 | 9 | 27 | 57 | 0 |
| ಪಳ | - | - | - | - | - | - | - | - | - |

## ಚಂದ್ರ ಅಂತರ ಚಂದ್ರಾದಿ ಪ್ರತ್ಯಂತರ

| ಗ್ರಹ | ಚಂದ್ರ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ |
|---|---|---|---|---|---|---|---|---|---|
| ಮಾಸ | 1 | 1 | 2 | 2 | 3 | 2 | 1 | 3 | 0 |
| ದಿವಸ | 17 | 3 | 25 | 15 | 0 | 20 | 3 | 5 | 28 |
| ಘಟಿ | 30 | 15 | 30 | 0 | 15 | 45 | 15 | 0 | 30 |
| ಫಳ | - | - | - | - | - | - | - | - | - |

## ಮಂಗಳ ಅಂತರ- ಮಂಗಳ ಪ್ರತ್ಯಂತರಾದಿ

| ಗ್ರಹ | ಮಂಗಳ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ |
|---|---|---|---|---|---|---|---|---|---|
| ಮಾಸ | 0 | 1 | 1 | 2 | 1 | 0 | 2 | 0 | 1 |
| ದಿವಸ | 23 | 29 | 23 | 3 | 26 | 23 | 6 | 19 | 3 |
| ಘಟಿ | 16 | 21 | 12 | 10 | 31 | 16 | 30 | 57 | 15 |
| ಫಳ | 30 | 0 | 0 | 30 | 30 | 30 | 0 | 0 | 0 |

## ರಾಹು-ಅಂತರ-ರಾಹು ಪ್ರತ್ಯಂತರಾದಿ

| ಗ್ರಹ | ರಾಹು | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ |
|---|---|---|---|---|---|---|---|---|---|
| ಮಾಸ | 5 | 4 | 5 | 4 | 1 | 5 | 1 | 2 | 1 |
| ದಿವಸ | 3 | 16 | 12 | 25 | 29 | 21 | 21 | 25 | 29 |
| ಘಟಿ | 54 | 48 | 27 | 21 | 51 | 0 | 18 | 30 | 51 |

## ಗುರು ಅಂತರ ಗುರು ಪ್ರತ್ಯಂತರ

| ಗ್ರಹ | ಗುರು | ಶನಿ | ಬುಧ | ಕೇತು | ಶುಕ್ರ | ರವಿ | ಚಂದ್ರ | ಮಂಗಳ | ರಾಹು |
|---|---|---|---|---|---|---|---|---|---|
| ಮಾಸ | 4 | 4 | 4 | 1 | 5 | 1 | 2 | 1 | 4 |
| ದಿವಸ | 11 | 24 | 9 | 23 | 2 | 15 | 16 | 23 | 16 |
| ಘಟಿ | 36 | 24 | 12 | 12 | 0 | 36 | - | 12 | 48 |
| ಫಳ | - | - | - | - | - | - | - | - | - |

## ಶನಿಯ ಅಂತರದಲ್ಲಿ ಶನಿ ಪ್ರತ್ಯಂತರ

ದೇಹಪೀಡಾ ಕಲೆರ್ಭೀತಿ ರ್ಭಯಮ್ ನ್ಯಜಲೋಕತಃ।
ನಾನಾದುಃಖಂ ಭವೇನ್ಮದಾಂತರೆ ಪ್ರತ್ಯೆಂತರೆ ಶನಿಃ ॥೪೭॥

ಶನಿಯ ಅಂತರದಶಾದಲ್ಲಿ ಶನಿಪ್ರತ್ಯಂತರದಲ್ಲಿ ಶಾರೀರಿಕವೇದನೆ ಜಗಳದ ಭಯ ಅನೇಕ ವಿಧ ದುಃಖ.

## ಶನಿ-ಬುಧ ಪ್ರತ್ಯಂತರ

ಬುದ್ಧಿಃನಾಶ ಕಲೆರ್ಭೀತಿರನ್ನಪಾನಾದಿ ನಾಶನವ್ ।
ಧನಹಾನಿರ್ಭಿಯಂ ಶತ್ರೋರ್ವಿದಶಾಯಾಂ ಶನಿರ್ಬುಧೆ ॥೪೮॥

ಶನಿಯ ಅಂತರದಶಾ ಪ್ರತ್ಯಂತರ ಬುಧದಶಾದಲ್ಲಿ ಬುದ್ಧಿನಾಶ ಕಲಹ ಭಯ ಅನ್ನಪಾನಾದಿಗಳ ವಿನಾಶ ಧನಕ್ಷಯ ಶತ್ರು ಭಯ ಈ ಎಲ್ಲ ಫಲಗಳಿವೆ.

## ಶನಿ-ಅಂತರದಲ್ಲಿ -ಕೇತು ಪ್ರತ್ಯಂತರ

ಬಂಧನಂ ಗತ್ರುಗೇಹೆ ಸ್ಯಾದ್ ವರ್ಣಹಾನಿ ರ್ಬಹುಕ್ಷುದಾ।
ಚಿತ್ತೆ ಚಿಂತಾ ಭಯಂ ತ್ರಾಸಃ ವಿದಶಾಯಾಂ ಧ್ವಜಸ್ಯವೈ ॥೪೯॥

ಕೇತು ಪ್ರತ್ಯಂತರದಲ್ಲಿ ಶತ್ರುಗಳ ಮುಖಾಂತರ ಬಂಧನ ಮನೋಮ್ಲಾನತೆ ನೀರಡಿಕೆ, ಚಿಂತೆ ಭಯ ತ್ರಾಸು ಸಂಭವ.

## ಶುಕ್ರ ಪ್ರತ್ಯಂತರ

ಚಿಂತತಂ ಫಲಿತಂ ವಸ್ತ್ರ ಕಲ್ಯಾಣ್ಯಂ ಸ್ವಜನೆ ಭವೇತ್ ।
ಮನುಷ್ಯಕೃತಿತೋ ಲಾಭೋ ವಿದಶಾಯಂ ಭೃಗೋಃ ಫಲಮ್ ॥೫೦॥

ಶುಕ್ರ ಪ್ರತ್ಯಂತರದಲ್ಲಿ ಅಪೇಕ್ಷಿತ ವಸ್ತುಲಾಭ–ಅಂದರೆ ಮನೋರಥಸಿದ್ಧಿ ಸ್ವಜನರ ಕಲ್ಯಾಣ- ಮನೋಭೀಷ್ಟ ಕಾರ್ಯ ಸಿದ್ಧಿ, ಲಾಭ ಹೇಳುವುದು.

## ಸೂರ್ಯ ಪ್ರತ್ಯಂತರ

ರಾಜತೇಜೋಧಿಕಾರಿತ್ವಂ ಸ್ವರ್ಗಹೆ ಜಾಯತೆ ಕಲಿಃ
ಜ್ವರಾದಿವ್ಯಾಧಿಪೀಡಾ ಚ ಸೂರ್ಯಸ್ಯ ವಿದಶಾಫಲಮ್ ।

ಸೂರ್ಯ ಪ್ರತ್ಯಂತರದಲ್ಲಿ ರಾಜಸ ತೇಜಸ್ಸ ಹಾಗೂ ಅಧಿಕಾರ ಮನೆಯಲ್ಲಿ ಕಲಹ ಜ್ವರ ವ್ಯಾಧಿ ಜನ್ಯ ಪೀಡಾ.

## ಚಂದ್ರಾ ಪ್ರತ್ಯಂತರ

ಸ್ಪೀತ ಬುದ್ಧಿ ಮ್‌ಹಾರಂಭೋ ಮುಂದತೇಜಾ ಬಹುವ್ಯಯಃ ।
ಬಹುಸ್ತ್ರೀಭಿಃ ಸಮಂ ಭೋಗಃ ಶಶಿನೋ ವಿದಶಾಫಲಮ್ ॥೫೨॥

ಚಂದ್ರನ ಪ್ರತ್ಯಂತರದಲ್ಲಿ ಬುದ್ಧಿ ವಿಕಾಸ ಮಹಾನ್ ಕಾರ್ಯಗಳು ಜರುಗುತ್ತವೆ ಅಥವಾ ಆರಂಭ ಬಹಳ ಖರ್ಚು ಕೂಡ ಆಗುತ್ತದೆ. ಸ್ತ್ರೀಯರ ಜತೆ ಸಂಭೋಗ ಫಲ.

## ಮಂಗಳ ಪ್ರತ್ಯಂತರ

ತೇಜೋಹಾನಿಃ ಪುತ್ರಘಾತೋ ವಹ್ನಿಭೀತಿರಿಪೋರ್ಭಯಮ್।
ವಾತಪಿತ್ತಸ್ತಕೃತಾ ಪೀಡಾ ವಿದಶಾಯಾಂ ಕುಜಸ್ಯವೈ ॥೫೩॥

ತೇಜೋಹೀನತೆ ಮಕ್ಕಳಿಗೆ ಆಘಾತ ಅಗ್ನಿ ಭಯ, ಶತ್ರು ಭಯ, ವಾತಪಿತ ಜನ್ಯ ರೋಗಭಯ ಇವು ಮಂಗಳನ ಪ್ರತ್ಯಂತರದ ಫಲಗಳು.

## ರಾಹು ಪ್ರತ್ಯಂತರ ದಶಾ

ಧನನಾಶೋ ವಸ್ತ್ರಹಾನಿರ್ಭೂಭಿನಾಶೋ ಭಯಂ ತಥಾ।
ವಿದೇಶಗಮನಂ ಮೃತ್ಯುಃ ತಮಸೇ ವಿದಶಾಫಲಮ್ ॥೫೪॥

ಶನಿ ಅಂತರ ರಾಹು ಪ್ರತ್ಯಂತರದಲ್ಲಿ ಧನ ಕ್ಷಯ ವಸ್ತ್ರಹಾನಿ ಭೂಮಿನಾಶ ಭಯ ವಿದೇಶಯಾತ್ರಾ ಹಾಗೂ ಮರಣಕಾರಕವೂ ಆಗಿದೆ.

## ಗುರು ಪ್ರತ್ಯಂತರ

**ಗ್ರಹೇಷು ಸ್ತ್ರೀಕೃತಂ ಛಿದ್ರಮಸಾಮರ್ಥ್ಯ ನಿರೀಕ್ಷಣೆ।**
**ಅಥವಾ ಕಲಿರುದ್ವೇಗೋ ವಿದಶಾಯಾಂ ಗುರೋಃ ಫಲಮ್ ॥೫೫॥**

ಶನಿಯ ಅಂತರದಶಾದಲ್ಲಿ ಗುರು ಪ್ರತ್ಯಂತರದಲ್ಲಿ ಸ್ತ್ರೀ ಮೂಲಕ ಗೃಹ ಛಿದ್ರವಾಗುವಿಕೆ. ಅವರನ್ನು ನೋಡಿ ಕೆಲಸದಲ್ಲಿ ಅಕ್ಷಮತೆ, ಕಲಹ, ಮಾನಸಿಕ ಉದ್ವೇಗ ಈ ಫಲಗಳು ದೊರೆಯುತ್ತವೆ.

## ಬುಧ ಮಹಾಬುಧ ಅಂತರ ಬುಧ ಪ್ರತ್ಯಂತರ

### ಬುಧ-ಬುಧ-ಬುಧ

| ಗ್ರಹ | ಬು | ಕೇ | ಶು | ರ | ಚ | ಮ | ರಾ | ಗು | ಶನಿ |
|---|---|---|---|---|---|---|---|---|---|
| ಮಾಸ | 4 | 1 | 4 | 1 | 2 | 1 | 4 | 3 | 4 |
| ದಿನ | 2 | 20 | 24 | 13 | 12 | 20 | 10 | 25 | 17 |
| ಘಟಿ | 49 | 34 | 30 | 21 | 15 | 34 | 3 | 36 | 16 |
| ಫಲ | 30 | 30 | - | - | - | 30 | - | - | 30 |

### ಬುಧ-ಕೇತು ಕೇತು

| ಗ್ರಹ | ಕೇ | ಶು | ರ | ಚ | ಮ | ರಾ | ಗು | ಶ | ಬು |
|---|---|---|---|---|---|---|---|---|---|
| ಮಾಸ | 0 | 1 | 0 | 0 | 0 | 1 | 1 | 1 | 1 |
| ದಿನ | 20 | 29 | 17 | 29 | 20 | 23 | 17 | 26 | 20 |
| ಘಟಿ | 49 | 30 | 51 | 45 | 49 | 33 | 36 | 31 | 34 |
| ಪಳ | 30 | 0 | 0 | 0 | 30 | 0 | 0 | 30 | 30 |

## ಬುಧ-ಶುಕ್ರ-ಶುಕ್ರ

| ಗ್ರಹ | ಶು | ಶ | ಚ | ಮ | ರಾ | ಗು | ಶ | ಬು | ಕೇ |
|---|---|---|---|---|---|---|---|---|---|
| ಮಾಸ | 5 | 1 | 2 | 1 | 5 | 4 | 5 | 4 | 1 |
| ದಿನ | 20 | 21 | 25 | 29 | 3 | 16 | 11 | 24 | 29 |
| ಘಟಿ | 0 | 0 | 0 | 30 | 0 | 0 | 30 | 30 | 30 |
| ಪಳ | 0 | 0 | 0 | 0 | 0 | 0 | 0 | 0 | 0 |

## ಬುಧ-ಸೂರ್ಯ-ಸೂರ್ಯ

| ಗ್ರಹ | ರ | ಚಂ | ಮ | ರಾ | ಗು | ಶ | ಬು | ಕೇ | ಶು |
|---|---|---|---|---|---|---|---|---|---|
| ಮಾಸ | 0 | 0 | 0 | 1 | 1 | 1 | 1 | 0 | 1 |
| ದಿನ | 15 | 25 | 17 | 15 | 10 | 18 | 13 | 17 | 21 |
| ಘಟಿ | 28 | 30 | 51 | 54 | 48 | 27 | 21 | 51 | 0 |

## ಬುಧ-ಚಂದ್ರ-ಚಂದ್ರ

| ಗ್ರಹ | ಚ | ಮ | ರಾ | ಗು | ಶ | ಬು | ಕೇ | ಶ | ರ |
|---|---|---|---|---|---|---|---|---|---|
| ಮಾಸ | 1 | 0 | 2 | 2 | 2 | 2 | 0 | 2 | 0 |
| ದಿನ | 12 | 29 | 16 | 8 | 20 | 12 | 29 | 25 | 25 |
| ಘಟಿ | 30 | 45 | 30 | 0 | 45 | 15 | 45 | 6 | 30 |

## ಬುಧ-ಮಂಗಳ-ಮಂಗಳ

| ಗ್ರಹ | ಮ | ರಾ | ಗು | ಶ | ಬು | ಕೇ | ಶ | ರ | ಚ |
|---|---|---|---|---|---|---|---|---|---|
| ಮಾಸ | 0 | 1 | 1 | 1 | 1 | 0 | 1 | 0 | 0 |
| ದಿನ | 20 | 23 | 17 | 26 | 20 | 20 | 29 | 17 | 29 |
| ಘಟಿ | 49 | 33 | 36 | 31 | 34 | 49 | 30 | 51 | 45 |
| ಪಲ | 30 | 0 | 0 | 30 | 30 | 30 | 0 | 0 | 0 |

## ಬುಧ-ರಾಹು-ರಾಹು

| ಗ್ರಹ | ರಾ | ಗು | ಶ | ಬು | ಕೇ | ಶು | ರ | ಚ | ಮ |
|---|---|---|---|---|---|---|---|---|---|
| ಮಾಸ | 4 | 4 | 4 | 4 | 1 | 5 | 1 | 2 | 1 |
| ದಿವಸ | 17 | 2 | 25 | 10 | 23 | 3 | 15 | 16 | 23 |
| ಘಟಿ | 42 | 24 | 21 | 3 | 33 | 0 | 54 | 30 | 33 |
| ಪಳ | - | - | - | - | - | - | - | - | - |

## ಬುಧ-ಗುರು-ಗುರ

| ಗ್ರಹ | ಗು | ಶ | ಬು | ಕೇ | ಶು | ರ | ಚ | ಮ | ರಾ |
|---|---|---|---|---|---|---|---|---|---|
| ಮಾಸ | 3 | 4 | 3 | 1 | 4 | 1 | 2 | 1 | 4 |
| ದಿವಸ | 18 | 9 | 25 | 17 | 16 | 10 | 8 | 17 | 2 |
| ಘಟಿ | 48 | 12 | 36 | 36 | 0 | 48 | 0 | 36 | 24 |
| ಪಳ | - | - | - | - | - | - | - | - | - |

## ಬುಧ-ಶನಿ-ಶನಿ

| ಗ್ರಹ | ಶ | ಬು | ಕೇ | ಶು | ರ | ಚ | ಮ | ರಾ | ಗು |
|---|---|---|---|---|---|---|---|---|---|
| ಮಾಸ | 5 | 4 | 1 | 5 | 1 | 2 | 1 | 4 | 4 |
| ದಿನ | 3 | 17 | 26 | 11 | 18 | 20 | 26 | 25 | 9 |
| ಘಟಿ | 25 | 16 | 31 | 30 | 27 | 45 | 31 | 21 | 12 |
| ಪಳ | 30 | 30 | 30 | 0 | 0 | 0 | 30 | 0 | 0 |

## ಬುಧ ಅಂತರ ಬುಧ ಪ್ರತ್ಯಂತರ

ಬುದ್ಧಿರ್ವಿದ್ಯಾರ್ಥಲಾಭೋ ವಾ ವಸ್ತ್ರಲಾಭೋ ಮಹತ್ಸುಖಮ್ ।
ಸ್ವರ್ಣಾದಿಧನಲಾಭಶ್ಚ ವಿದಶಾಯಾಂ ವಿದಃ ಫಲಮ್ ॥೫೬॥

ಬುಧ ಪ್ರತ್ಯಂತರದಲ್ಲಿ ಬುದ್ಧಿವಿದ್ಯಾಧನ ವಸ್ತ್ರ ಆದಿಲಾಭ ಮಹಾಸುಖ ಬಂಗಾರಾದಿ ರತ್ನಲಾಭ-

## ಬುಧ-ಕೇತು ಪ್ರತ್ಯಂತರ

ಕಠಿನಾನ್ನಸ್ಯ ಸಂಪ್ರಾಪ್ತಿರುದರೆ ರೋಗ ಸಂಬವಃ।
ಕಾಮಲಂ ರಕ್ತಪಿತ್ತಂ ಚ ಶಿಖಿನೋ ವಿದಶಾಫಲಮ್ ॥೫೮॥

ಕೇತು ಪ್ರತ್ಯಂತರದಲ್ಲಿ ಕುತ್ಸಿತ್ತಾನ್ನ ಭೋಜನ ಪ್ರಾಪ್ತಿಯಿಂದ ಉದರ ರೋಗಾದಿಗಳು ಸಂಭವ ಕಾಮಾಲೆ (ನೇತ್ರ-ಹಳದಿಯಾಗುವುದು) ರಕ್ತಪಿತ್ತರೋಗ.

## ಬುಧ-ಅಂತರ ಶುಕ್ರ ಪ್ರತ್ಯಂತರ

ವಿತ್ತರಸ್ಯಾಂ ಭವೆಲ್ಲಾಭೋ। ಹಾನಿಃ ಸ್ಯಾತ್ತು ಚತುಸ್ಪಾದಾಮ್ ।
ಅಧಿಕಾರೋ ರಾಜಗೇ ಹೆ ವಿದಶಾಯಾಂ ಭೃಗೋರ್ಭವೇತ್।

ಶುಕ್ರ ಪ್ರತ್ಯಂತರದಲ್ಲಿ ಉತ್ತರ ದಿಕ್ಕಿನಲ್ಲಿ ಲಾಭ ಪಶುಗಳಿಂದ ಹಾನಿ ರಾಜದ್ವಾರ (ಕಾರ್ಯಾಲಯ)ದಲ್ಲಿ ಅಧಿಕಾರ ಲಾಭ.

## ಬುಧ-ಸೂರ್ಯ ಪ್ರತ್ಯಂತರ-

ತೇಜೋಹಾನಿರ್ಭವೇದ್ ರೋಗಸ್ತನುಪೀಡಾ ತಥೈವಚ ।
ಜಾಯತೆ ಚಿತ್ತವೈಕಲ್ಯಂ ವಿದಶಾಯಾಂ ರವೆ ಬುಧೆ ॥೫೯॥

ಸೂರ್ಯ ಪ್ರತ್ಯಂತರದಲ್ಲಿ ತೇಜೋಹಾನಿ ರೋಗ ಶಾರೀರಿಕ ಕಷ್ಟ, ಮತೋ ವೈಕಲ್ಯ ದೋಷ.

## ಬುಧ-ಚಂದ್ರ ಪ್ರತ್ಯಂತರ

ಸ್ತ್ರೀಲಾಭಶ್ಚರ್ಥ ಸಂಪತ್ತಿಃ ಕನ್ಯಾಲಾಭೊ ಮಹದ್ದನಮ್
ಸರ್ವತಃ ಸೌಖ್ಯಲಾಭಶ್ಚ ವಿದಿಂದುವಿದಶಾಫಲಮ್ ॥೬೦॥

ಚಂದ್ರ ಪ್ರತ್ಯಂತರದಲ್ಲಿ ಸ್ತ್ರೀ ಧನ ಹಾಗೂ ಸಂಪತ್ತಿನ ಲಾಭ-ಕನ್ಯಾ ಉತ್ಪತ್ತಿ ಮಹಾಧನಲಾಭ ಸರ್ವ ವಿಧಸೌಖ್ಯ ಪ್ರಾಪ್ತಿ.

## ಬುಧ-ಮಂಗಳ ಪ್ರತ್ಯಂತರ

ಧರ್ಮಧೀಧನ ಸಂಪ್ರಾಪ್ತಿಶ್ಚೌ ರಾಗ್ನ್ಯಾದಿ ಪ್ರಪೀಡನಮ್ ।
ರಕ್ತ ವಸ್ತ್ರ ಶಸ್ತ್ರಘಾತಃ ಕುಜಸ್ಯ ವಿದಶಾಫಲವ್ ॥೬೧॥

ಮಂಗಳ ಪ್ರತ್ಯಂತರದಲ್ಲಿ ಧರ್ಮವೃದ್ಧಿಯಾಗಿ ಧನ ಪ್ರಾಪ್ತಿ ಆದರೂ ಕಳ್ಳರು ಅಗ್ನಿಯಿಂದ ಪೀಡೆ ರಕ್ತ ವಸ್ತ್ರಪ್ರಾಪ್ತಿ, ಶಸ್ತ್ರದಿಂದ ಆಘಾತ.

### ಬುಧ-ರಾಹು ಪ್ರತ್ಯಂತರ

**ಕಲಹೋಜಾಯತೆ ಸ್ತ್ರೀಭಿರಕಸ್ಮಾದ್ ಭಯಸಂಭವಃ।**
**ರಾಜಶಾಸ್ತ್ರಕೃತಾಧೀತಿಸ್ತಮಸೋ ವಿದಶಾಫಲಮ್ ॥೬೨॥**

ರಾಹು ಪ್ರತ್ಯಂತರದಲ್ಲಿ ಹೆಣ್ಣು ಮಕ್ಕಳೊಡನೆ ಜಗಳ, ವಿನಾಕಾರಣವಾಗಿ ಭಯ ರಾಜಮಿತ ಶಸ್ತ್ರ ಕೃತ ಕಲಹ

### ಬುಧ- ಗುರು ಪ್ರತ್ಯಂತರ

**ರಾಜ್ಯಂ ರಾಜ್ಯಾಧಿಕಾರೋ ವಾ ಪೂಜಾ ರಾಜಸಮುದ್ ಭವಾ।**
**ವಿದ್ಯಾವೃದ್ಧಿ ಶ್ಚಸದ್‌ಬುದ್ಧಿಃ ವಿದಶಾಯಾಂ ಗುರೋ ಫಲಮ್ ॥೬೩॥**

ಗುರು ಪ್ರತ್ಯಂತರದಲ್ಲಿ ರಾಜ್ಯ ಅಥ ರಾಜ್ಯಾಧಿಕಾರ ಪ್ರಾಪ್ತಿ ಅಥವಾ ರಾಜಸಮೂಹದಿಂದ ಪೂಜೆ ಸನ್ಮಾನಾದಿಗಳು ಸದ್‌ಬುದ್ಧಿ ವಿದ್ಯಾವೃದ್ಧಿ ಆದಿಫಲಗಳು.

### ಬುಧ-ಶನಿ ಪ್ರತ್ಯಂತರ

**ವಾತ ಪಿತ್ತಮಹಾಪೀಡಾ ದೇಹಘಾತ ಸಮುದ್‌ಭವಾ ।**
**ಬಹುದಾ ಧನ ನಾಶಶ್ಚ ಮಂದಪ್ರತ್ಯಂತರೆ ಭವೇತ್ ॥೬೪॥**

ಶನಿ ಪ್ರತ್ಯಂತರದಲ್ಲಿ ಶಾರೀರಿಕ ಆಘಾತದ ಕಾರಣ ವಾತ ಪಿತ್ತ ಮೂಲಪೀಡೆ ಅನೇಕ ರೂಪದಿಂದ ಧನನಾಶ ಉಂಟು.

### ಕೇತು ಮಹಾದಶಾ

### ಕೇತು ಅಂತರ ಕೇತು ಪ್ರತ್ಯಂತರ

| ಗ್ರಹ | ಕೇ | ಶು | ರ | ಚ | ಮ | ರಾ | ಗು | ಶ | ಬು |
|---|---|---|---|---|---|---|---|---|---|
| ಮಾಸ | 0 | 1 | 0 | 0 | 0 | 0 | 0 | 0 | 0 |
| ದಿನ | 8 | 24 | 7 | 12 | 8 | 22 | 19 | 63 | 20 |
| ಘಟಿ | 34 | 30 | 21 | 15 | 38 | 3 | 36 | 16 | 49 |
| ಪಳ | 30 | 0 | 0 | 0 | 30 | 0 | 0 | 30 | 30 |

### ಕೇತು-ಶುಕ್ರ-ಶುಕ್ರ

| ಗ್ರಹ | ಶು | ರ | ಚ | ಮ | ರಾ | ಗು | ಶ | ಬು | ಕೇ |
|---|---|---|---|---|---|---|---|---|---|
| ಮಾಸ | 2 | 0 | 1 | 0 | 2 | 1 | 2 | 1 | 0 |
| ದಿನ | 10 | 21 | 5 | 24 | 3 | 26 | 6 | 20 | 24 |
| ಘಟಿ | 0 | 0 | 0 | 30 | 0 | 0 | 30 | 30 | 30 |
| ಪಳ | - | - | 0 | 30 | 0 | 0 | 30 | 30 | 30 |

### ಕೇತು-ಸೂರ್ಯ-ಸೂರ್ಯ

| ಗ್ರಹ | ಸೂ | ಚ | ಮ | ರಾ | ಗು | ಶ | ಬು | ಕೇ | ಶು |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 0 |
| ದಿವಸ | 6 | 10 | 7 | 19 | 16 | 19 | 17 | 0 | 21 |
| ಘಟಿ | 18 | 30 | 21 | 54 | 48 | 57 | 51 | 21 | 0 |
| ಪಳ | - | - | - | - | - | - | - | - | - |

### ಚಂದ್ರ-ಚಂದ್ರ ಪ್ರತ್ಯಂತರಾದಿ

| ಗ್ರಹ | ಚ | ಮ | ರಾ | ಗು | ಶ | ಬು | ಕೇ | ಶು | ರ |
|---|---|---|---|---|---|---|---|---|---|
| ಮಾಸ | 0 | 0 | 1 | 0 | 1 | 0 | 0 | 1 | 0 |
| ದಿವಸ | 17 | 12 | 1 | 28 | 3 | 29 | 12 | 5 | 10 |
| ಘಟಿ | 30 | 15 | 30 | 0 | 15 | 45 | 15 | 0 | 30 |
| ಪಳ | - | - | - | - | - | - | - | - | - |

### ಮಂಗಳ-ಮಂಗಳ

| ಗ್ರಹ | ಮ | ರಾ | ಗು | ಶ | ಬು | ಕೇ | ಶು | ರ | ಚ |
|---|---|---|---|---|---|---|---|---|---|
| ಮಾಸ | 0 | 0 | 0 | 0 | 0 | 0 | 0 | 0 | 0 |
| ದಿವಸ | 8 | 22 | 19 | 23 | 20 | 8 | 24 | 7 | 12 |
| ಘಟಿ | 34 | 3 | 36 | 16 | 49 | 34 | 30 | 21 | 15 |
| ಪಳ | 30 | 0 | 0 | 30 | 30 | 30 | 0 | 0 | 0 |

## ರಾಹು-ರಾಹು ಪ್ರತ್ಯಂತರಾದಿ

| ಗ್ರಹ | ರಾ | ಗು | ಶ | ಬು | ಕೇ | ಶು | ರ | ಚ | ಮ |
|---|---|---|---|---|---|---|---|---|---|
| ಮಾಸ | 1 | 1 | 1 | 1 | 0 | 2 | 0 | 1 | 0 |
| ದಿನ | 26 | 20 | 29 | 23 | 22 | 3 | 18 | 1 | 22 |
| ಘಟಿ | 42 | 24 | 51 | 33 | 3 | 0 | 54 | 30 | 3 |
| ಪಳ | - | - | - | - | - | - | - | - | - |

## ಗುರು-ಗುರು ಪ್ರತ್ಯಂತರ

| ಗ್ರಹ | ಗು | ಶ | ಬು | ಕೇ | ಶು | ರ | ಚ | ಮ | ರಾ |
|---|---|---|---|---|---|---|---|---|---|
| ಮಾಸ | 1 | 1 | 1 | 0 | 1 | 0 | 0 | 0 | 1 |
| ದಿವಸ | 14 | 23 | 17 | 19 | 26 | 16 | 28 | 19 | 20 |
| ಘಟಿ | 48 | 12 | 36 | 36 | 0 | 48 | 0 | 36 | 24 |
| ಪಳ | - | - | - | - | - | - | - | - | - |

## ಶನಿ-ಶನಿ ಪ್ರತ್ಯಂತರ

| ಗ್ರಹ | ಶ | ಬು | ಕೇ | ಶು | ರ | ಚ | ಮ | ರಾ | ಗು |
|---|---|---|---|---|---|---|---|---|---|
| ಮಾಸ | 2 | 1 | 0 | 2 | 0 | 1 | 0 | 1 | 1 |
| ದಿವಸ | 3 | 26 | 23 | 6 | 19 | 3 | 33 | 29 | 23 |
| ಘಟಿ | 10 | 31 | 16 | 30 | 57 | 15 | 16 | 51 | 12 |
| ಪಳ | 30 | 30 | 30 | 0 | 0 | 0 | 30 | 0 | 0 |

## ಬುಧ ಪ್ರತ್ಯಂತರ ಬುಧ

| ಗ್ರಹ | ಬು | ಕೇ | ಶು | ರ | ಚ | ಮ | ರಾ | ಗು | ಶ |
|---|---|---|---|---|---|---|---|---|---|
| ಮಾಸ | 1 | 0 | 1 | 0 | 0 | 0 | 1 | 1 | 1 |
| ದಿವಸ | 20 | 20 | 29 | 17 | 29 | 20 | 23 | 17 | 26 |
| ಘಟಿ | 34 | 49 | 30 | 51 | 45 | 49 | 33 | 36 | 31 |
| ಪಳ | 30 | 30 | 0 | 0 | 0 | 30 | 0 | 0 | 30 |

## ಕೇತು-ಪ್ರತ್ಯಂತರ ಕೇತು

ಆಪತ್ಸುಮುದ್ ಭವೋಕಸ್ಮಾದ್ ದೇಶಾಂತರ ಸಮಾಗಮಃ ।
ಧ್ವಜಾಂತರೆ ದ್ರವ್ಯನಾಶೋ ಧ್ವಜ ಪ್ರತ್ಯಂತರೆ ಫಲಮ್ ॥೬೫॥

ಕೇತು ಅಂತರ ಕೇತು ಪ್ರತ್ಯಂತರದಲ್ಲಿ ಒಮ್ಮಿಂದೊಮ್ಮೆಲೆ ಆಪತ್ತುಗಳ ಆಗಮನ ದೇಶಾಂತರ ಗಮನ, ದ್ರವ್ಯನಾಶಾದಿ ಫಲಗಳು.

## ಕೇತು-ಶುಕ್ರಾಪ್ರತ್ಯಾಂತರ

ಮ್ಲೇಂಚ್ಛಭೀತ್ಯರ್ಥನಾಶೋವಾ ನೇತ್ರರೋಗಃ ಶಿರೋವ್ಯಥಾ।
ಕೇತ್ವಾಂತರೆ ಪಶೋರ್ಹಾನಿಃ ಸಿತಪ್ರತ್ಯಂತರೆ ಫಲಮ್ ॥೬೬॥

ಶುಕ್ರಪ್ರತ್ಯಂತರದಲ್ಲಿ ಮ್ಲೇಚ್ಛ ಜನರ ಭಯ ಅಥವಾ ಅವರಿಂದ ಧನಕ್ಷಯ ನೇತ್ರರೋಗ ಶಿರೋವೇದನಾ ಪಶುಹಾನಿ ಇತ್ಯಾದಿ ಫಲ.

## ಕೇತು-ಸೂರ್ಯ ಪ್ರತ್ಯಂತರ

ಮಿತ್ರೈಃ ಸಹ ವಿರೋಧಶ್ಚಾಪ ಮೃತ್ಯುರಪಿ ನಿರ್ಜಯಃ ।
ಮತಿಭ್ರಂಶೋ ವಿವಾದಶ್ಚ ಸೂರ್ಯ ಪ್ರತ್ಯಾಂತರೆ ಫಲಮ್ ॥೬೭॥

ಸೂರ್ಯ ಪ್ರತ್ಯಂತರದಲ್ಲಿ ಮಿತ್ರರೊಡನೆ ವಿರೋಧ ಅಪಮೃತ್ಯು ಪರಾಜಯ ಬುದ್ಧಿಭ್ರಂಶ ವಿವಾಹ.

## ಕೇತು-ಚಂದ್ರ ಪ್ರತ್ಯಂತರ

ಅನ್ನನಾಶೋ ಯಶೋಹಾನಿರ್ದೇಹಪೀಡಾ ಮತಭ್ರಮಃ ।
ಆಮವಾತಾದಿ ವೃದ್ಧಿಶ್ಚ ಶಶಿನೊ ವಿದಶಾಫಲಮ್ ॥೬೮॥

ಚಂದ್ರ ಪ್ರತ್ಯಂತರದಲ್ಲಿ ಅನ್ನನಾಶ ಯಶಕ್ಷಯ, ಶಾರೀರಿಕ ಪೀಡಾ ಬುದ್ಧಿಭ್ರಮ ಆಮ ವಾತಾದಿವೃದ್ಧಿ.

## ಕೇತು-ಮಂಗಳ ಪ್ರತ್ಯಂತರ

ಶಸ್ತ್ರಘಾತೇನ ಪಪಾನೇ ವಹ್ನಿನಾ ಚ ಪ್ರಪೀಡನಮ್ ।
ನೀಚಾದ್ ಭೀತೀರಿ ಪೊಃ ಶಂಕಾ ಭೌಮಸ್ಯ ವಿದಶಾಫಲಮ್ ॥೬೯॥

ಭೌಮ ಪ್ರತ್ಯಂತರದಲ್ಲಿ ಶಸ್ತ್ರದಿಂದ ಘಾತ ಬೀಳುವಿಕೆ ಭಯ, ಅಗ್ನಿ ಭಯ ನೀಚರಿಂದ ಶತ್ರುಗಳಿಂದ ಪೀಡೆ.

## ಕೇತು-ರಾಹು ಪ್ರತ್ಯಂತರ

ಕಾಮಿ ನೀಚ್ಯೋಭವೇದ್ ಭೀತಿಸ್ತಥಾ ವೈರಿಸಮದ್ ಭವಃ ।
ಕ್ಷುಧ್ರಾದಪಿ ಭವೇದ್ ಭೀತಿಸ್ತಮಸೋ ವಿದಶಾಫಲಮ್ ॥೭೦॥

ರಾಹು ಪ್ರತ್ಯಂತರದಲ್ಲಿ ಸ್ತ್ರೀಯರಿಂದ ಭಯ ಶತ್ರು ಪ್ರಾದುರ್ಭಾವ ಕ್ಷುದ್ರರಿಂದ ಭಯ ಆದಿ.

## ಕೇತು-ಪ್ರತ್ಯಂತರ ಗುರು

ಧನದಾನಿರ್ಮ ಹೋತ್ಪಾತೋ ವಸ್ತ್ರಮಿತ್ರ ವಿನಾಶಕಮ್ ।
ಸರ್ವತ್ರ ಕ್ಲೇಶಸಂಪ್ರಾಪ್ತಿರ್ಜೀವ ಪ್ರತ್ಯಂತರೆ ಭವೇತ್ ॥೭೦॥

ಗುರು ಪ್ರತ್ಯಂತರದಲ್ಲಿ ಧನಕ್ಷಯ ವಸ್ತ್ರ ಹಾಗೂ ಸ್ನೇಹಿತರ ವಿನಾಶ ಸರ್ವತ್ರ ಕ್ಲೇಶ.

## ಕೇತು-ಪ್ರತ್ಯಂತರ ಶನಿ

ಗೋಮಹಿಷ್ಯಾದಿ ಮರಣಾ ದೇಹ ಪೀಡಾ ಸುಹೃದ್‌ವಧಃ
ಸ್ವಲ್ಪಾಲ್ಪ ಲಾಭ ಕರಣಾ ಮಂದಸ್ಯ ವಿಧಶಾಫಲಮ್ ॥೭೨॥

ಶನಿ ಪ್ರತ್ಯಂತರದಲ್ಲಿ ಶಾರೀರಿಕ ಪೀಡೇ ಮಿತ್ರರವಧೆ ಹಾಗೂ ಅತ್ಯಲ್ಪ ಲಾಭ.

## ಕೇತು-ಪ್ರತ್ಯಂತರ ಬುಧ

ಬುದ್ಧಿನಾಶೋ ಮಹೋದ್‌ವೇಗೋ ವಿದ್ಯಾಹಾನಿರ್ಮಹದ್ ಭಯಸು।
ಕಾರ್ಯಸಿದ್ಧಿಃ ಸದಾಕೇತೌ ವಿದಸ್ತು ವಿದಶಾಫಲಮ್ ॥೭೩॥

ಬುಧ ಪ್ರತ್ಯಂತರದಲ್ಲಿ ಬುದ್ಧಿನಾಶ ಮಹಾ ಉದ್ವೇಗ ವಿದ್ಯಾಕ್ಷಯ (ಹಾನಿ) ಮಹಾಭಯ ಸತತ ಕಾರ್ಯ ಸಿದ್ಧಿಯಲ್ಲಿ ವಿಕಲತಾ.

# ಶುಕ್ರ ದಶಾದಲ್ಲಿ

## ಶುಕ್ರ-ಅಂತರ ಶುಕ್ರ ಪ್ರತ್ಯಂತರ

| ಗ್ರಹ | ಶು | ರ | ಚ | ಮ | ರಾ | ಗು | ಶ | ಬು | ಕೇ |
|---|---|---|---|---|---|---|---|---|---|
| ಮಾಸ | 6 | 2 | 3 | 2 | 6 | 5 | 6 | 5 | 2 |
| ದಿವಸ | 20 | 0 | 10 | 10 | 0 | 10 | 10 | 20 | 10 |
| ಘಟಿ | 0 | 0 | 0 | 0 | 0 | 0 | 0 | 0 | 0 |
| ಪಳ | 0 | 0 | 0 | 0 | 0 | 0 | 0 | 0 | 0 |

## ಶುಕ್ರ-ಸೂರ್ಯ ಪ್ರತ್ಯಂತರ ಸೂರ್ಯ

| ಗ್ರಹ | ರ | ಚ | ಮ | ರಾ | ಗು | ಶ | ಬು | ಕೇ | ಶು |
|---|---|---|---|---|---|---|---|---|---|
| ಮಾಸ | 0 | 1 | 0 | 1 | 1 | 1 | 1 | 0 | 2 |
| ದವಸ | 18 | 0 | 21 | 24 | 18 | 27 | 21 | 21 | 10 |
| ಘಟಿ | 0 | 0 | 0 | 0 | 0 | 0 | 0 | 0 | 0 |
| ವಳ | - | - | - | - | - | - | - | - | - |

## ಶುಕ್ರ-ಚಂದ್ರ ಪ್ರತ್ಯಂತರ ಚಂದ್ರ

| ಗ್ರಹ | ಚ | ಮ | ರಾ | ಗು | ಶ | ಬು | ಕೇ | ಶು | ರ |
|---|---|---|---|---|---|---|---|---|---|
| ಮಾಸ | 1 | 1 | 3 | 2 | 3 | 2 | 1 | 3 | 1 |
| ದಿವಸ | 20 | 5 | 0 | 20 | 5 | 25 | 5 | 10 | 0 |
| ಘಟಿ | 0 | 0 | 0 | 0 | 0 | 0 | 0 | 0 | 0 |
| ವಳ | - | - | - | - | - | - | - | - | - |

## ಶುಕ್ರ ಮಂಗಳ-ಪ್ರತ್ಯಂತರ

| ಗ್ರಹ | ಮ | ರಾ | ಗು | ಶ | ಬು | ಕೇ | ಶು | ರ | ಚ |
|---|---|---|---|---|---|---|---|---|---|
| ಮಾಸ | 0 | 2 | 1 | 2 | 1 | 0 | 2 | 0 | 1 |
| ದಿವಸ | 24 | 3 | 26 | 6 | 29 | 24 | 10 | 21 | 5 |
| ಘಟಿ | 30 | 0 | 0 | 30 | 30 | 30 | 0 | 0 | 0 |

## ಶುಕ್ರ-ರಾಹು-ರಾಹು

| ಗ್ರಹ | ರಾ | ಗು | ಶ | ಬು | ಕೇ | ಶು | ರ | ಚ | ಮ |
|---|---|---|---|---|---|---|---|---|---|
| ಮಾಸ | 5 | 4 | 5 | 5 | 2 | 6 | 1 | 3 | 2 |
| ದಿವಸ | 12 | 24 | 21 | 3 | 3 | 0 | 24 | 0 | 3 |
| ಘಟಿ | 0 | 0 | 0 | 0 | 0 | 0 | 0 | 0 | 0 |
| ವಳ | - | - | - | - | - | - | - | - | - |

## ಶುಕ್ರ-ಗುರು-ಗುರು

| ಗ್ರಹ | ಗು | ಶ | ಬು | ಕೇ | ಶು | ರ | ಚ | ಮ | ರಾ |
|---|---|---|---|---|---|---|---|---|---|
| ಮಾಸ | 4 | 5 | 4 | 1 | 5 | 1 | 2 | 1 | 4 |
| ದಿವಸ | 8 | 2 | 16 | 26 | 10 | 18 | 20 | 26 | 24 |
| ಘಟಿ | 0 | 0 | 0 | 0 | 0 | 0 | 0 | 0 | 0 |
| ಪಳ | - | - | - | - | - | - | - | - | - |

## ಶುಕ್ರ-ಶನಿ-ಶನಿ ಪ್ರತ್ಯಂತರ

| ಗ್ರಹ | ಶ | ಬು | ಕೇ | ಶು | ರ | ಚ | ಮ | ರಾ | ಗು |
|---|---|---|---|---|---|---|---|---|---|
| ದಿವಸ | 6 | 5 | 2 | 6 | 1 | 3 | 2 | 5 | 5 |
| ದಿವಸ | 0 | 11 | 6 | 10 | 27 | 5 | 6 | 21 | 2 |
| ಘಟಿ | 30 | 30 | 30 | 0 | 0 | 0 | 30 | 0 | 0 |

## ಶುಕ್ರ-ಬುಧ-ಬುಧ ಪ್ರತ್ಯಂತರ

| ಗ್ರಹ | ಬು | ಕೇ | ಶು | ರ | ಚ | ಮ | ರಾ | ಗು | ಶ |
|---|---|---|---|---|---|---|---|---|---|
| ಮಾಸ | 4 | 1 | 5 | 1 | 2 | 1 | 5 | 4 | 5 |
| ದಿವಸ | 24 | 29 | 20 | 21 | 25 | 29 | 3 | 16 | 11 |
| ಘಟಿ | 30 | 30 | 0 | 0 | 0 | 30 | 0 | 0 | 30 |

## ಶುಕ್ರ-ಕೇತು-ಕೇತು

| ಗ್ರಹ | ಕೇ | ಶು | ರ | ಚ | ಮ | ರಾ | ಗು | ಶ | ಬು |
|---|---|---|---|---|---|---|---|---|---|
| ಮಾಸ | 0 | 2 | 0 | 1 | 0 | 2 | 1 | 2 | 1 |
| ದಿವಸ | 24 | 10 | 21 | 5 | 24 | 3 | 25 | 6 | 29 |
| ಘಟಿ | 30 | 0 | 0 | 0 | 30 | 0 | 0 | 30 | 30 |
| ಪಳ | - | - | - | - | - | - | - | - | - |

## ಶುಕ್ರದಶಾ ಅಂತರ ಹಾಗೂ ಶುಕ್ರ ಪ್ರತ್ಯಂತರ ಫಲ

ಶ್ವೇತಾಶ್ವವಸ್ತ್ರಮುಕ್ತಾದಿ ಸ್ವರ್ಣಮಾಣಿಕ್ಯಜಂ ಸುಖಮ್ ।
ಲಭತೆ ಸುಂದರಿ ನಾರಿಂ ಸಿತಪ್ರತ್ಯಂತರೆ ನರಃ ॥೭೪॥

ಶುಕ್ರ-ಅಂತರ ಪ್ರತ್ಯಂತರದಲ್ಲಿ ಬಿಳಿ ಕುದುರೆ ವಸ್ತ್ರ ಮುತ್ತು ಬಂಗಾರಾದಿ ಮಾಣಿಕ್ಯ ಲಾಭ ಸೌಖ್ಯ ಸುಂದರರ ಸ್ತ್ರೀ ಪ್ರಾಪ್ತಿ.

## ಶುಕ್ರ-ಸೂರ್ಯ ಪ್ರತ್ಯಂತರ

ವಾತಜ್ವರಃ ಶಿರಃಪೀಡಾ ರಾಜ್ಞಃ ಪೀಡಾ ರಿಪೋರಪಿ।
ಜಾಯತೆ ಸ್ವಲ್ಪಲಾಭೋಪಿ ಸೂರ್ಯ ಪ್ರತ್ಯಂತರೆ ಧ್ರುವಮ್ ॥೭೫॥

ಸೂರ್ಯ ಪ್ರತ್ಯಂತರದಲ್ಲಿ ವಾತಜ್ವರ ತಲೆ ಬೇನೆ ರಾಜ ಹಾಗೂ ಶತ್ರುಗಳ ಮೂಲಕ ಕ್ಲೇಶ ಹಾಗೂ ಅಲ್ಪಲಾಭ.

## ಶುಕ್ರ-ಚಂದ್ರಾ ಪ್ರತ್ಯಂತರ

ಕನ್ಯಾಜನ್ಮ ನೃಪಾಲ್ಲಾಭೋ ವಸ್ತ್ರಾಭರಣ ಸಂಯುತಿಃ
ರಾಜ್ಯಧಿಕಾರ ಸಂಪ್ರಾಪ್ತಿರಿಂದು ಪ್ರತ್ಯಂತರೆ ಫಲಮ್ ॥೭೬॥

ಶುಕ್ರ ಅಂತರ ಚಂದ್ರ ಪ್ರತ್ಯಂತರದಲ್ಲಿ ಕನ್ಯಾ ಜನ್ಮ ರಾಜನಿಂದ ಲಾಭ ವಸ್ತ್ರ ಆಭೂಪಣ ಪ್ರಾಪ್ತಿ ರಾಜಾಧಿಕಾರ.

## ಶುಕ್ರ-ಅಂತರ ಮಂಗಳ ಪ್ರತ್ಯಂತರ

ರಕ್ತಪಿತ್ತಾದಿರೋಗಶ್ಚ ಕಲಡಸ್ತ್ಯಾಹನಂ ಭವತೆ ।
ಸಿತಾಂತರೆ ಮಹಾನ್ ಕ್ಲೇಶೋ ಭೌಮ ಪ್ರತ್ಯಂತರೆ ಫಲಮ್ ॥೭೭॥

ಕುಜ ಪ್ರತ್ಯಂತರದಲ್ಲಿ ರಕ್ತಪಿತ್ತ ಸಂಬಂಧ ರೋಗ ಉಲ್ಬಣಗೊಳ್ಳುವುದು, ಕಲಹ-ಕುತೂಹಲ ಕ್ಲೆಶ ವಾಣಿ ಭಯ ರಾಜ ಹಾಗೂ ಶತ್ರುಗಳಿಂದ ಕಷ್ಟ.

## ಶುಕ್ರ-ಅಂತರ ರಾಹು ಪ್ರತ್ಯಂತರ

ಕಲಹೊ ಜಾಯತೆ ಸ್ತ್ರಿಭಿರಕಸ್ಮಾದ್ ಭಯಸಂಭವಃ ।
ರಾಜತಃ ಶತ್ರುತಃ ಪೀಡಾ ತಮಸೋ ವಿದಶಾಫಲಮ್ ॥೭೮॥

ರಾಹು ಪ್ರತ್ಯಂತರದಲ್ಲಿ ಸ್ತ್ರೀಯೊಡನೆ ಕಹಲ, ಭಯ (ಏಕಾಏಕಿ) ರಾಜ, ಶತ್ರುಗಳಿಂದ ಕಷ್ಟ.

## ಶುಕ್ರ ಅಂತರ-ಗುರು ಪ್ರತ್ಯಂತರ

ಮಹಾದ್ರವ್ಯಂ ಮಹಾದ್ರಾಜ್ಯಂ ವಸ್ತ್ರಮುಕ್ತಾದಿ ಭೂಷಣಮ್ ।
ಗಜಾಶ್ವಾದಿ ಪದಪ್ರಾಪ್ತಿರಿಜ್ಯ ಪ್ರತ್ಯಂತರೆ ಫಲಮ್ ॥೭೯॥

ಗುರುವಿನ ಪ್ರತ್ಯಂತರದಲ್ಲಿ ಸಾಕಷ್ಟು ದ್ರವ್ಯ ರಾಜ್ಯ ವಸ್ತ್ರ ಮುತ್ತು ಮುತ್ತುರಾದಿ ಆಭೂಣ ಆನೆ, ಕುದುರೆ ಹಾಗೂ ಸ್ಥಾನಲಾಭ.

### ಶುಕ್ರಾಂತರದಲ್ಲಿ ಶನಿ ಪ್ರತ್ಯಂತರ

**ಖರೋಷ್ಟ್ರಗಜ್ಞಾಸಂಪ್ರಾಪ್ತಿಲೋಹ ಮಾಷತಿಲಾದಿಕಮ್ ।**
**ಸ್ವಲ್ಪ ಪೀಡಾಗಮ ಶ್ಚಾಪಿ ಮಂದ ಪ್ರತ್ಯಂತರೆ ಧ್ರುವಮ್ ॥೮೦॥**

ಶನಿಪ್ರತ್ಯಂತರದಲ್ಲಿ ಕತ್ತೆ ಒಂಟೆ ಹಾಗೂ ಆಡುಗಳ ಪ್ರಾಪ್ತಿ ಕಬ್ಬಿಣ, ಉದ್ದು ತಿಲಾದಿಗಳು ಲಾಭ, ಶರೀರದಲ್ಲಿ ಸ್ವಲ್ಪ ಕಷ್ಟ.

### ಶುಕ್ರಾಂತರದಲ್ಲಿ ಬುಧ ಪ್ರತ್ಯಂತರ

**ಧನಜ್ಞಾನಮಹಾಲಾಭೋ ರಾಜರಾಜ್ಯಧಿಕಾರಿತಾ।**
**ನಿಕ್ಷೇಪಾದ್‌ನಂಭಶ್ಚ ವಿದಃ ಪ್ರತ್ಯಂತರೆ ಫಲಮ್ ॥೮೧॥**

ಬುಧ ಪ್ರತ್ಯಂತರದಲ್ಲಿ ಜ್ಞಾಲಾಭ ರಾಜನಿಂದ ಅಧಿಕಾರ ಪ್ರಾಪ್ತಿ ಭೂಗತ ನಿಕ್ಷೇಪದಿಂದಲೂ ಪ್ರಾಪ್ತಿ.

### ಶುಕ್ರ ಅಂತರ ಕೇತು ಪ್ರತ್ಯಂತರ

**ಅಪಮೃತ್ಯುಮಹಾಘೋರೋ ದೇಶಾದ್ ದೇಶಾಂತರಗಮಃ।**
**ಲಾಭೋಪಿಜಾಯತೆ ಮಧ್ಯೆ ಶಿಖಿನೋ ವಿದಶಾಫಲಮ್ ॥೮೨॥**

ಕೇತು ಪ್ರತ್ಯಂತರದಲ್ಲಿ ಭಯಂಕರ ಅಪಮೃತ್ಯು ದೇಶದಿಂದ ದೇಶಕ್ಕೆ ಭ್ರಮಣದ ಸ್ಥಿತಿ ನಡುನಡುವೆ ಅಲ್ಪ ಸ್ವಲ್ಪ ಲಾಭವೂ ಇದೆ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಪ್ರತ್ಯಂತರ ದಶಾಧ್ಯಾಯಃ ಸಮಾಪ್ತ**

( ೬೩ನೇ ಅಧ್ಯಾಯ )

# ಅಥ ಸೂಕ್ಷ್ಮದಶಾಫಲಾಧ್ಯಾಯಃ

## ಸೂಕ್ಷ್ಮಾಂತರ್ದಶಾ ಸಾಧನ

**ಪರಾಶರ ಉವಾಚ:**

ಪ್ರತ್ಯಂತರದಶಾ ಘಟ್ಯೋ ಹತಾಃ ಸ್ವಸ್ವದಶಾಬ್ದಿತಃ।
ವಿಂಶೋತ್ತರ ಶತೇನಾಪ್ತಾ ಲಬ್ಧಿಃ ಸೂಕ್ಷ್ಮದಶಾಮಿತಿಃ ॥೧॥

**ಪರಾಶರರು ಹೇಳಿದರು—**

ಉದಾಹರಣೆ-ಸೂರ್ಯ ಮಹಾದಶಾದಲ್ಲಿ ಸೂರ್ಯ ಅಂತರ ಪ್ರತ್ಯಂತರ ದಿನಾದಿ 6 ದಿನ 24 ಘಟ್ಯಾದಿ ಮಾಡಲು 60 × 5 = 300-24 = 324 ಇದಕ್ಕೆ ಆರರಿಂದ ಗುಣಿಸಿದರೆ 1944 ÷ 120 ಮಹಾದಶಾವರ್ಷ, ಲಬ್ದ 16 ಘಟಿ 12 ಪಳ ಸೂರ್ಯದಶಾದಲ್ಲಿ ಸೂರ್ಯ ಅಂತರ ಸೂರ್ಯ ಪ್ರತ್ಯಂತರ-ಸೂರ್ಯ ಸೂಕ್ಷ್ಮದಶಾ ಆಗುತ್ತದೆ, ಇದೇ ರೀತಿ ಇದೇ ತರಹ ಚಂದ್ರ ದಶಾದಿ ಗ್ರಹಗಳ ಸೂಕ್ಷ್ಮದಶಾಕ್ಕೆ 324 × 10 = 3240 ÷ 120 = 27 ಘಟಿ. ಸೂರ್ಯದಶಾ ಸೂರ್ಯ ಅಂತರ ಸೂರ್ಯ ಪ್ರತ್ಯಂತರದ ಚಂದ್ರಸೂಕ್ಷ್ಮ ಆಗುತ್ತದೆ. ಇದೆ ರೀತಿ ಸಾರಂಶದಿಂದ ಚಾರ್ಟ್ ತಯಾರಿಸಬಹುದು.

ವಿಶದ ಗ್ರಹಗಳದು ಇದೆ ರೀತಿ ತೆಗೆಯುವುದು ಹಾಗೂ ಫಲ ಅವಲೋಕಿಸು ವುದು.

**ಸೂರ್ಯದಶಾ-ಅಂತರದಶಾ-ಪ್ರತ್ಯಂತರ-ಸೂರ್ಯ ಸೂಕ್ಷ್ಮ**

| ಗ್ರಹ | ಸೂ | ಚ | ಮ | ರಾ | ಗು | ಶ | ಬು | ಕೇ | ಶು | ಕೇ |
|---|---|---|---|---|---|---|---|---|---|---|
| ದಿನ | 0 | 0 | 0 | 0 | .0 | 0 | 0 | 0 | 0 | 5 |
| ಘಟಿ | 16 | 27 | 18 | 48 | 43 | 51 | 45 | 18 | 54 | 24 |
| ಪಳ | 12 | 0 | 54 | 36 | 12 | 18 | 54 | 54 | 0 | 0 |

**ಸೂರ್ಯ ಪ್ರತ್ಯಂತರದಲ್ಲಿ ಸೂರ್ಯ ಸೂಕ್ಷ್ಮ ಫಲ**

ಸ್ವೀಯಭೂಮಿಪರಿತ್ಯಾಗಃ ಪ್ರಾಣನಾಶೋ ಭವೇನ್ನೃಣಾಮ್ ।
ಸ್ಥಾನಭ್ರಂಶೋ ಮಹಾಹಾನಿಃ ಸೂರ್ಯ ಸೂಕ್ಷ್ಮದಶಾಫಲಮ್ ॥೨॥

ಸೂರ್ಯಸೂಕ್ಷ್ಮದಶಾಕಾಲದಲ್ಲಿ ತನ್ನ ಸ್ವಭೂಮಿಯ ಪರಿತ್ಯಾಗ ಪ್ರಾಣನಾಶ ಸ್ಥಾನಭಂಶ ಮಾನಹಾನಿ ಆದಿ ಫಲಗಳು.

## ಚಂದ್ರ ಸೂಕ್ಷ್ಮ

ದೇವಬ್ರಾಹ್ಮಣ ಭಕ್ತಿಶ್ಚ ನಿತ್ಯಕರ್ಮರತಸ್ತಥಾ।
ಸುಪ್ರೀತಿಃ ಸರ್ವ ಮಿತ್ರೈಶ್ಚ ರವೇಃ ಸೂಕ್ಷ್ಮಗತೆ ವಿಧೌ ॥೩॥

ಚಂದ್ರಸೂಕ್ಷ್ಮದಲ್ಲಿ ದೇವತೆ ಬ್ರಾಹ್ಮಣರಲ್ಲಿ ಭಕ್ತಿ ನಿತ್ಯ ಕೃತ್ಯದಲ್ಲಿ ಆಸಕ್ತಿ ಮಿತ್ರರೊಡನೆ ಸ್ನೇಹ.

## ಮಂಗಳ ಸೂಕ್ಷ್ಮ

ಕ್ರೂರಕರ್ಮರತಿಸ್ತಗ್ರ ಶತ್ರುಭಿಃ ಪರಿಪೀಡನಮ್ ।
ರಕ್ತಸ್ರಾವಾದಿರೋಗಶ್ಚ ರವೇಃ ಸೂಕ್ಷ್ಮಗತೆ ಕುಜೆ ॥೪॥

ಮಂಗಳನ ಸೂಕ್ಷ್ಮದಶಾದಲ್ಲಿ ನಿಷ್ಠುರ ಕಾರ್ಯದಲ್ಲಿ ಪ್ರವೃತ್ತಿ ಪ್ರಬಲ ಶತ್ರುಯುಕ್ತಪೀಡೆ ರಕ್ತಸ್ರಾವಾದಿ ರೋಗ.

## ರಾಹು ಸೂಕ್ಷ್ಮ ದಶಾ

ಚೌರಾಗ್ನಿಲಭೀತಶ್ಚ ರಣೆ ಭಂಗಃ ಪರಾಜಯಂ।
ದಾನಧರ್ಮದಿವಿರತಿ ರವೇಃ ಸೂಕ್ಷ್ಮ ಭಂಗಃ ಸೂಕ್ಷ್ಮಗ್ರತೆ ಹ್ಯಗೌ ॥೫॥

ರಾಹುವಿನ ಸೂಕ್ಷ್ಮದಶಾದಲ್ಲಿ ಕಳ್ಳರು ಅಗ್ನಿ ವಿಷಭಯ ಯುದ್ಧದಲ್ಲಿ ಅಪಜಯ ದಾನಧರ್ಮದಲ್ಲಿ ವಿಮುಖತೆ.

## ಗುರು ಸೂಕ್ಷ್ಮ

ನೃಪಸತ್ಕಾರರಾಜಾರ್ಹಃ ಸೇವಕೈಃ ಪರಿಪೂಜಿತಃ।
ರಾಜಚಕ್ಷುರ್ಗತಃ ಶಾಂತಃ ಸೂರ್ಯಸೂಕ್ಷ್ಮಗತೆ ಗುರೌ ॥೬॥

ಗುರು ಸೂಕ್ಷ್ಮದಲ್ಲಿ ರಾಜರ ಸತ್ಕಾರ ಕಾರ್ಯ ಸೇವಕರ ಪೂಜೆಗೊಳ್ಳುವಿಕೆ ರಾಜ ಕೃಪಾದೃಷ್ಟಿ ಹಾಗೂ ಶಾಂತಿ ಪ್ರಾಪ್ತಿ.

## ಶನಿ ಸೂಕ್ಷ್ಮ

ಚೌರ್ಯಸಾಹಸಕರ್ಮ ಭ್ಯಾಂ ದೇವಬ್ರಾಹಣ ಪೀಡನಮ್ ।
ಸ್ಥಾನಚ್ಯುತಿರ್ಮನೋ ದುಃಖಂ ರವೇಃ ಸೂಕ್ಷ್ಮಗತೆ ಶಾನೌ ॥೭॥

ಸೂರ್ಯಪ್ರತ್ಯಂತರ ಶನಿ ಸೂಕ್ಷ್ಮದಲ್ಲಿ ಕಳ್ಳತನ ಸಾಹಸ ಪೂರ್ಣಕೆಲಸ ದೇವತಾ ಬ್ರಾಹಣರಿಗೆ ಪೀಡೆ ಕೊಡುವಿಕೆ ಸ್ಥಾನ ಭ್ರಂಶ ಮನೋದುಃಖ.

## ಬುಧಸೂಕ್ಷ್ಮ

ದಿವ್ಯಾಂಬರಾದಿಲಬ್ಧಶ್ಚ ದಿವ್ಯಸ್ತ್ರೀಪರಿಭೋಗಿತಾ।
ಅಚಿಂತತಾರ್ಥ ಸಿದ್ಧಿಶ್ಚ ರವೇಃ ಸೂಕ್ಷ್ಮಗತೆ ಬುಧೆ ॥೮॥

ಬುಧಸೂಕ್ಷ್ಮದಲ್ಲಿ ದಿವ್ಯ ವಸ್ತ್ರಪಾಪ್ತಿ ಪರಮಸುಂದರಿ ಸ್ತ್ರೀ ಉಪಭೋಗ ಅಚಿಂತಿತ ಕಾರ್ಯ ಸಿದ್ಧಿ.

## ಕೇತು ಸೂಕ್ಷ್ಮ

ಗೌರವಾರ್ಥವಿನಾಶಚ್ಚ ಭೃತ್ಯದಾರ ಭವಸ್ತಥಾ।
ಕಿಂಚಿತ್ ಸೇವಕಸಂಭಂಧೋ ರವೇಃ ಸೂಕ್ಷ್ಮಗತೆ ಧ್ವಜೇ ॥೯॥

ಕೇತು ಸೂಕ್ಷ್ಮದಲ್ಲಿ ನೌಕರ ಸ್ತ್ರೀ ದ್ವಾರಾ ಪ್ರತಿಷ್ಠೆ ಹಾಗೂ ಧನಹಾನಿ-ಕೆಲ ಸಲ ವಿನಾಶನೌಕರರ ಸಂಬಂಧವೂ ಉತ್ತಮ.

## ಶುಕ್ರ ಸೂಕ್ಷ್ಮ

ಪುತ್ರಮಿತ್ರಕಲೇತ್ರಾದಿ ಸೌಖ್ಯ ಸಂಪನ್ನ ಎವ ಚ।
ನಾನಾ ವಿಧಾ ಚ ಸಂಪತ್ತ ರವೇಃ ಸೂಕ್ಷ್ಮಗತೆ ಭೃಗೌ ॥೧೦॥

ಶುಕ್ರ ಸೂಕ್ಷ್ಮದಶಾದಲ್ಲಿ ಪುತ್ರಮಿತ್ರ ಸ್ತ್ರೀ ಆದಿ ಸೌಖ್ಯ ಅನೇಕ ವಿಧ ಸಂಪತ್ತು ಧನ ಪ್ರಾಪ್ತಿ.

## ಚಂದ್ರ ಪ್ರತ್ಯಂತರದಲ್ಲಿ ಚಂದ್ರ ಸೂಕ್ಷ್ಮ

ಭೂಷಣಾ ಭೂಮಿಲಾಭಶ್ಚ ಸಮ್ಮಾನಂ ನೃಪಪೂಜನಂ।
ತಾಮಸತ್ವಂ ಗುರುತ್ವಂ ಚ ಚಂದ್ರಸೂಕ್ಷ್ಮದಶಾ ಫಲಮ್ ॥೧೧॥

ಚಂದ್ರ ಪ್ರತ್ಯಂತರದಲ್ಲಿ ಚಂದ್ರ ಸೂಕ್ಷ್ಮ ಭೂಷಣ ಹಾಗೂ ಭೂಮಿ ಪ್ರಾಪ್ತಿ ರಾಜನಿಂದ ಪೂಜೆ ಸನ್ಮಾನ ತಾಮಸ ಪ್ರವೃತ್ತಿ(ಕ್ಲೇಶಾದಿ) ಹಾಗೂ ಗೌರವ ಈ ಫಲಗಳು.

## ಚಂದ್ರ ಪ್ರತ್ಯಂತರ ಕುಜ ಸೂಕ್ಷ್ಮ

ದುಃಖಂ ಶತ್ರುವಿರೋದಶ್ಚ ಕುಕ್ಷಿರೋಗಃ ಪಿತುರ್ಮೃತಿಃ।
ವಾತಪಿತ್ತಕಫೋದ್ರೇಕಃ ಶಶಿಸೂಕ್ಷ್ಮಗತೆ ಕುಜೆ ॥೧೨॥

ಮಂಗಳ ಸೂಕ್ಷ್ಮದಲ್ಲಿ ದುಃಖ ಶತ್ರುಗಳ ವಿರೋಧ ಉದರ ರೋಗ

ಪಿತೃಮರಣ ವಾತಪಿತ್ತಕಫಗಳ ಆಧಿಕ್ಯ ರೋಗ.

### ಚಂದ್ರ ಪ್ರತ್ಯಂತರ ರಾಹು ಸೂಕ್ಷ್ಮ

ಕ್ರೋಧನಂ ಮಿತ್ರ ಬಂಧೂಣಾ ದೇಶತ್ಯಾಗೋ ಧನಕ್ಷಯಃ ।
ವಿದೇಶೆ ನಿಗಡಪ್ರಾಪ್ತಿಂದೋಃ ಸೂಕ್ಷ್ಮಗತೇಽಪ್ಯತನೌ ॥೧೩॥

ರಾಹು ಸೂಕ್ಷ್ಮದಲ್ಲಿ ಮಿತ್ರರಿಗೆ ಬಂಧುಗಳಿಗೆ ಜಾತಕನ ಮೇಲೆ ಕ್ರೋಧ ದೇಶತ್ಯಾಗ ಧನನಾಶ ವಿದೇಶದಲ್ಲಿ ಜೈಲು ವಾಸ.

### ಗುರು ಸೂಕ್ಷ್ಮ ಚಂದ್ರಪ್ರತ್ಯಂತರ

ಛತ್ರಚಾಮರಸಂಯುಕ್ತಂ ವೈಭವಂ ಪುತ್ರಸಂಪದಃ।
ಸರ್ವತ್ರ ಸುಖಿಸಂಪತ್ತಿಶ್ಚೆಂದ್ರೆ ಸೂಕ್ಷ್ಮಗತೆ ಗುರೌ ॥೧೪॥

ಗುರು ಸೂಕ್ಷ್ಮದಲ್ಲಿ ಚಾಮರ ಛತ್ರ ಯುಕ್ತ ಐಶ್ವರ್ಯ (ರಾಜಭೋಗ) ಪುತ್ರಸಂಪತ್ತು ಸರ್ವತ್ರ ಸುಖಪ್ರಾಪ್ತಿ.

### ಚಂದ್ರ ಪ್ರತ್ಯಂತರ ಶನಿ ಸೂಕ್ಷ್ಮ

ರಾಜೋಪದ್ರವತೋ ಭೀತಿರ್ವ್ಯಾಹವಹಾರೆ ಧನಕ್ಷಯಃ।
ಚೌರತ್ವಂ ವಿಪ್ರಭೀತಿಶ್ಚ ಚಂದ್ರೆ ಸೂಕ್ಷ್ಮಗತೆ ಶನೌ ॥೧೫॥

ಶನಿಸೂಕ್ಷ್ಮದಲ್ಲಿ ರಾಜರ ಉಪದ್ರವದ ಭಯ, ವ್ಯಾಪಾರದಲ್ಲಿ ಧನನಾಶ-ಕಳ್ಳತನ ಬ್ರಾಹ್ಮಣರ ಭಯ.

### ಚಂದ್ರ-ಪ್ರತ್ಯಂತರ-ಬುಧ ಸೂಕ್ಷ್ಮ

ರಾಜಮಾನಂ ವಸ್ತ್ರಲಾಭೊ ವಿದೇಶಾದ್ವಾಹನಾಧಿಕವ್ ।
ಪುತ್ರಪೌತ್ರಸಮೃದ್ಧಿಶ್ಚ ಚಂದ್ರೆ ಸೂಕ್ಷ್ಮತಗೆ ಬುದೆ ॥೧೬॥

ಬುಧಸೂಕ್ಷ್ಮದಲ್ಲಿ ರಾಜನಿಂದ ಸನ್ಮಾನ ವಸ್ತ್ರಲಾಭ ಪ್ರಾಪ್ತಿ ವಿದೇಶದಿಂದ ವಾಹನ ಪ್ರಾಪ್ತಿ ಪುತ್ರಪೌತ್ರಾದಿ ಸಮೃದ್ಧಿ.

### ಚಂದ್ರ-ಪ್ರತ್ಯಂತರ-ಕೇತು ಸೂಕ್ಷ್ಮ

ಆತ್ಮನೋವೃತ್ತಿಹನನಂ ಸಸ್ಯಶೃಂಗವೃಷಾದಿ ಭಿಃ।
ಅಗ್ನಿಸೂರ್ಯಾದಿ ಭೀತಿಶ್ಚ ಚಂದ್ರೆ ಸೂಕ್ಷ್ಮಗತೆ ಧ್ವಜೆ ॥೧೭॥

ಕೇತು ಸೂಕ್ಷ್ಮದಶಾದಲ್ಲಿ ಅನ್ನ ಶೃಂಗ ಎತ್ತು ಆದಿಗಳಿಂದ ಜೀವನಾಶಭಯ, ಅಗ್ನಿ ಸೂರ್ಯಾದಿಗಳಿಂದ ರೋಗಭಯ.

### ಚಂದ್ರ-ಪ್ರತ್ಯಂತರ-ಶುಕ್ರ ಸೂಕ್ಷ್ಮ

ವಿವಾಹೊ ಭೂಮಿಲಾಭಶ್ಚ ವಸ್ತ್ರಾಭರಣ ವೈಭವಮ್।
ರಾಜ್ಯಲಾಭಶ್ಚ ಕೀರ್ತಿಶ್ಚ ಚಂದ್ರೆ ಸೂಕ್ಷ್ಮಗತೆ ಭೃಗೌ ॥೧೮॥

ಶುಕ್ರ ಸೂಕ್ಷ್ಮದಲ್ಲಿ ವಿವಾಹ (ಸ್ವಂತ ಪರಿವಾರದಲ್ಲಿ) ಭೂಮಿಲಾಭ ವಸ್ತ್ರ ಭೂಷಣ ಕೀರ್ತಿ ಪ್ರಾಪ್ತಿ ರಾಜ್ಯಲಾಭ ಯಶಪ್ರಾಪ್ತಿ.

### ಚಂದ್ರ ಪ್ರತ್ಯಂತರ ಸೂರ್ಯ ಸೂಕ್ಷ್ಮ

ಕ್ಲೇಶಾತ್ಕ್ಲೇಶಃ ಕಾರ್ಯನಾಶಃ ಪಶುಧಾನ್ಯದನ ಕ್ಷಯಃ।
ಗಾತ್ರ ವೈಷಮ್ಯಭೂಮಿಶ್ಚ ಚಂದ್ರೆ ಸೂಕ್ಷ್ಮಗತೆ ರವೌ ॥೧೯॥

### ಪ್ರತ್ಯಂತರ ಚಂದ್ರ-ಸೂಕ್ಷ್ಮ ಸೂರ್ಯಸೂಕ್ಷ್ಮ

ಚಂದ್ರ ಪ್ರತ್ಯಂತರದಲ್ಲಿ ಸೂರ್ಯ ಸೂಕ್ಷ್ಮ ದಶಾಕಾಲದಲ್ಲಿ ದಾರುಣ ಕ್ಲೇಶ(ಪರಮ) ಕಾರ್ಯನಾಶ ಪಶುಧನ ಧಾನ್ಯಗಳ ವಿನಾಶ ಶರೀರದಲ್ಲಿ ವಿಷಮತೆ.

### ಮಂಗಳ ಪ್ರತ್ಯಂತರದಲ್ಲಿ

### ಮಂಗಳ ಸೂಕ್ಷ್ಮದಶಾ

ಭೂಮಿಹಾನಿರ್ಜಂಧುಕಷ್ಟಂ ಹಾಪಸ್ಮಾರಶ್ಚ ಬಂದುಯುಕ್
ಪುರಕ್ಷಭೊ ಮನಸ್ತಾಪೋ ಭೌಮಸೂಕ್ಷ್ಮದಶಾಫಲಂ ॥೨೦॥

ಮಂಗಳ ಪ್ರತ್ಯಂತರ ಮಂಗಳರ ಸೂಕ್ಷ್ಮ ಭೂಮಿಯ ಹಾನಿ ಬಂಧುಕಷ್ಟ ಬಂಧನ ಹಾಗೂ ಅಪಸ್ಮಾರ(ಮೂರ್ಛೆ) ರೋಗ ನಗರದ ಜನರ ಪ್ರತಿಶೋಚಿ ಮಾನಸಿಕ ಸಂತಾಪ.

### ಮಂಗಳ-ರಾಹು ಸೂಕ್ಷ್ಮ

ಅಂಗದೋಷೋ ಜನಾದ್ ಭೀತಿಃ ಪ್ರಮದಾವಂಶನಾಶನಮ್ ।
ವಹ್ನಿಸರ್ಪಭಯಂ ಘೋರಂ ಭೌಮೇ ಸೂಕ್ಷ್ಮಗತೇ ಪ್ಯಹೌ ॥೨೧॥

ಕುಜಪ್ರತ್ಯಂತರ ರಾಹೂಸೂಕ್ಷ್ಮದಲ್ಲಿ ಶರೀರದ ಅಂಗಾಂಗಗಳಲ್ಲಿ ದೋಷ. ಜನರಿಂದ ಭಯ, ಹೆಂಡತಿ ಹಾಗೂ ಸಂತತಿಯ ವಿನಾಶ, ಅಗ್ನಿ, ಸರ್ಪ ಹಾಗೂ ಘೋರ ಭಯ ಸಂಭವ.

### ಮಂಗಳ-ಗುರು ಸೂಕ್ಷ್ಮ

ದೇವ ಪೂಜಾರತಿ ಶ್ಚಾತ್ರ ಮಂತ್ರಾಭ್ಯುತ್ಥಾನಶಕ್ತತಾ
ಲೋಕೇ ಪೂಜಾ ಪ್ರಮೋದ ಶ್ಚ ಭೌಮೆ ಸೂಕ್ಷ್ಮಗತೆ ಗುರೌ ॥೨೨॥

ಗುರು ಸೂಕ್ಷ್ಮದಲ್ಲಿ ದೇವತಾ ಪೂಜನದಲ್ಲಿ ಭಕ್ತಿ, ಮಂತ್ರಸಿದ್ಧಿ ಮಾಡಿಕೊಳ್ಳುವ ಶಕ್ತಿ ಜನರಲ್ಲಿ ಸನ್ಮಾನ ಹಾಗೂ ಪ್ರಸನ್ನತಾ ಪ್ರಾಪ್ತವಾಗುತ್ತದೆ.

### ಮಂಗಳ-ಶನಿ ಸೂಕ್ಷ್ಮ

ಬಂಧನಾನ್ಮುಚ್ಯತೆ ಬದ್ಧೊ ಧನಧಾನ್ಯಪರಿಚ್ಛದಃ।
ಭೃತ್ಯಾರ್ಥ ಬಹುಲಃ ಶ್ರಿಮಾನ್ ಭೌಮೇ ಸೂಕ್ಷ್ಮಗತೆ ಶಾನೌ ॥೨೩॥

ಶನಿ ಸೂಕ್ಷ್ಮದಲ್ಲಿ ಬಂಧನದಿಂದ ಮುಕ್ತಿ ಧನಧಾನ್ಯಗಳ ವಿಸ್ತಾರ ನೌಕರರ ಮುಖಾಂತರ ಅರ್ಥಪ್ರಾಪ್ತಿ ಹಾಗೂ ಲಕ್ಷ್ಮಿಪಾಪ್ತಿ ಫಲ.

### ಮಂಗಳ-ಪ್ರತ್ಯಂತರ-ಬುಧ ಸೂಕ್ಷ್ಮ

ವಾಹನಂ ಛತ್ರ ಸಂಯುಕ್ತ ರಾಜ್ಯಭೋಗಪರಂ ಸುಖಮ್।
ಕಾಸಶ್ವಾಸಾಧಿಕಾ ಪೀಡಾ ಭೌಮೇ ಸೂಕ್ಷ್ಮಬುಧೆಗತೆ ॥೨೪॥

ಬುಧನ ಸೂಕ್ಷ್ಮದಲ್ಲಿ ಛತ್ರಯುಕ್ತ ವಾಹನಾದಿ ಸುಖ ರಾಜ್ಯಭೋಗ ಯುಕ್ತ ಬಹುಬಧ ಸುಖ ಹಾಗೂ ಕೆಮ್ಮುದಮ್ಮು (ಕಫ) ಜನ್ಯ ಪೀಡೆ.

### ಮಂಗಳ ಪ್ರತ್ಯಂತರ ಕೇತು ಸೂಕ್ಷ್ಮ

ಪರಪ್ರೇರಿತ ಬುದ್ಧಿ ಶ್ಚ ಸರ್ವತ್ರಾಪಿ ಚ ಗರ್ಹಿತಾ।
ಅಶುಚಃ ಸರ್ವಕಾಲೇಷು ಭೌಮೇ ಸೂಕ್ಷ್ಮಗತೆ ಧ್ವಜೆ ॥೨೫॥

ಕೇತೂ ಸೂಕ್ಷ್ಮದಶಾದಲ್ಲಿ ಎರಡನೆಯವರ ನಿರ್ದೇಶನದಲ್ಲಿಯೇ ಚಲಿಸುವವ ಎಲ್ಲರಿಂದ ನಿಂದಿತ ಬುದ್ಧಿ ಸದಾ ಕಾಲ ಅಪವಿತ್ರನಾಗಿಯೇ ಇರುತ್ತಾನೆ.

### ಮಂಗಳ ಪ್ರತ್ಯಂತರ ಶುಕ್ರ ಸೂಕ್ಷ್ಮ

ಇಷ್ಟಸ್ತ್ರಿಭೋಗಸಂಪತ್ತಿರಿಷ್ಟ ಭೋಜನ ಸಗ್ರಹಃ
ಇಷ್ಟಾರ್ಥ ಸ್ಥಾಯಿಲಾಭಶ್ಚ ಭೌಮೇ ಸೂಕ್ಷ್ಮಗತೆ ಭೃಗೌ ॥೨೬॥

ಮಂಗಳ ಪ್ರತ್ಯಂತರ ಶುಕ್ರ ಸೂಕ್ಷ್ಮದಲ್ಲಿ ಅಭೀಷ್ಟ ಸ್ತ್ರೀ ಜತೆಗೆ ಉಪಭೋಗ, ಅಭಿಲಾಷಿತ ಸಂಪತ್ತಿನ, ಅಭಿಭೋಜನ ಸಿದ್ಧಿ.

### ಮಂಗಳ-ಸೂರ್ಯ ಸೂಕ್ಷ್ಮ

ರಾಜದ್ವೇಷೊ ದ್ವಿಜಾತ್ಕ್ಲೇಶಃ ಕಾರ್ಯಭಿಪ್ರಾಯವಚ್ಛಕಃ।
ಲೋಕೇಪಿ ನಿಂದ್ಯಿತಾಮೇತ ಭೌಮೇ ಸೂಕ್ಷ್ಮಗತೇರಪೌ ॥೨೭॥

ರವಿ ಸೂಕ್ಷ್ಮ ಮಂಗಳ ಪ್ರತ್ಯಂತರದಲ್ಲಿ ರಾಜದ್ವೇಷ ಬ್ರಾಹ್ಮಣರಿಂದ ಕಷ್ಟ ಕಾರ್ಯ ಚಂಚಲತೆ ಲೋಕದಲ್ಲಿ ಜನರಿಂದ ನಿಂದೆ.

### ಮಂಗಳ-ಚಂದ್ರ ಸೂಕ್ಷ್ಮ

ಶುದ್ಧತ್ವಂ ಧನಸಂಪ್ರಾಪ್ತಿರ್ದೇವ ಬ್ರಾಹ್ಮಣವತ್ಸಲಃ।
ವ್ಯಾಧಿನಾ ಪರಿಭೂಯತೆ ಭೌಮೇ ಸೂಕ್ಷ್ಮಗತೆ ವಿಧೌ ॥೨೮॥

ಚಂದ್ರಸೂಕ್ಷ್ಮದಲ್ಲಿ ಪವಿತ್ರತೆ, ಧನಪ್ರಾಪ್ತಿ, ದೇವ ಬ್ರಾಹ್ಮಣದಲ್ಲಿ ಭಕ್ತಿ ರೋಗಪರಾಭವ.

### ರಾಹು ಪ್ರತ್ಯಂತರ

### ರಾಹುಪ್ರತ್ಯಂತರ-ರಾಹುಸೂಕ್ಷ್ಮ

ಲೋಕೋಪದ್ರಬುದ್ಧಿಶ್ಚ ಸ್ವಕಾರ್ಯೆಮತವಿಭ್ರಮಃ।
ಶೂನ್ಯಾತ್ ಚಿತ್ತಿದೋಷಃ ಸ್ಯಾದ್ರಾಹೋಃ ಸೂಕ್ಷ್ಮದಶಾಫಲಮ್ ॥೨೯॥

ರಾಹು ಪ್ರತ್ಯಂತರ ರಾಹುಸೂಕ್ಷ್ಮದಲ್ಲಿ ಜನರಿಗೆ ಅಪಕಾರ ಬುದ್ಧಿ ಅಥವಾ ವಿರುದ್ಧ ಬುದ್ಧಿ ಚಿತ್ತಶೂನ್ಯತೆ.

### ರಾಹು-ಗುರು ಸೂಕ್ಷ್ಮ

ದೀರ್ಘರೋಗಿ ದರಿದ್ರುಶ್ಚ ಸರ್ವೆಷಾಂ ಪ್ರಿಯದರ್ಶನಃ
ದಾನಧರ್ಮರತಃ ಶಸ್ತೊ। ರಾಹೋಃ ಸೂಕ್ಷ್ಮಗತೆ ಗುರೌ ॥೩೦॥

ಗುರು ಸೂಕ್ಷ್ಮದಲ್ಲಿ ದೀರ್ಘ ಕಾಲಿಕ ರೋಗ ಹಾಗೂ ದಾರಿದ್ರ್ಯ ಆದರೂ ಮನುಷ್ಯ ಲೋಕಪ್ರಿಯ ದಾನ ಧರ್ಮರತ ಹಾಗೂ ವಿಖ್ಯಾತನಾಗುವನು.

### ರಾಹು-ಶನಿ ಸೂಕ್ಷ್ಮ

ಕುಮಾರ್ಗಾತ್ ಕುತ್ಸಿತೋರ್ಥಶ್ಚ ದುಷ್ಟಶ್ಚ ಪರಸೇವಕಃ।
ಅಸತ್ಯಂಗಮತಿ ಮೂಢೊ ರಾಹೋಃ ಸೂಕ್ಷ್ಮಗತೆ ಶನೌ ॥೩೧॥

ಶನಿ ಸೂಕ್ಷ್ಮದಲ್ಲಿ ಕುಮಾರ್ಗದಿಂದ ಧನ ಗಳಿಸುವಿಕೆ ದುಷ್ಟ ಮನೋಭಾವನೆ ಸೇವಾವೃತ್ತಿ ದುಷ್ಟರ ಜತೆ ಸೇರಿ ದುಷ್ಟವಿಚಾರ.

## ರಾಹು-ಬುಧ ಸೂಕ್ಷ್ಮ

ಸ್ತ್ರೀಸಂಭೋಗಮತಿರ್ವಾಗ್ಮಿ ಲೋಕ ಸಂಭಾವನಾವೃತಃ।
ಅನ್ನಮಿಚ್ಛಂಸ್ತನುಲಗ್ನಾನಿ ರಾಹೋಃ ಸೂಕ್ಷ್ಮಗತೆ ಬುಧೆ ॥೩೨॥

ಬುಧಸೂಕ್ಷ್ಮದಲ್ಲಿ ಸ್ತ್ರೀಯರೊಡನೆ ಸಂಭೋಗದಲ್ಲಿ ಅಭಿಲಾಷಾ ಗಂಭೀರ-ಜನರನ್ನ ತನ್ನ ಅನುಕೂಲಕ್ಕೆ ತಿರುಗಿಸುವ ಶಕ್ತಿ ಅನ್ನ ಇಚ್ಛೆಯಲ್ಲ ಶಾರೀರಿಕ ಕ್ಲೇಶ.

## ರಾಹು-ಕೇತು ಸೂಕ್ಷ್ಮ

ಮಾಧುರ್ಯ ಮಾನಹಾನಿಶ್ಚ ಬಂಧನಃ ಚಾಪ್ತಿಮಾರಕಮ್ ।
ದಾರುಪ್ಯಂ ಜೀವಹಾನಿಶ್ಚ ರಾಹೋಃ ಸೂಕ್ಷ್ಮಗತೆ ಧ್ವಜೆ ॥೩೩॥

ಮಾಧುರ್ಯಯುತ ವಾಣಿಯಿದ್ದರೂ ಮಾನಹಾನಿ ಮೃತ್ಯುಕರ ಬಂಧನ ಕಠೋರತಾ ಜನಹಾನಿ.

## ರಾಹು-ಶುಕ್ರ ಸೂಕ್ಷ್ಮ

ಬಂಧನಾನ್ಮುಚ್ಯತೆ ಬದ್ಧಃ ಸ್ಥಾನಮಾನಾರ್ಥಸಂಚಯಃ।
ಕಾರಣಾದ್ ದ್ರವ್ಯಲಾಭಶ್ಚ ರಾಹೋಃ ಸೂಕ್ಷ್ಮಗತೆ ಭೃಗೌ ॥೩೪॥

ಶುಕ್ರಸೂಕ್ಷ್ಮದಲ್ಲಿ ಬಂಧನದಿಂದ ಮುಕ್ತಿ ಸ್ಥಾನ ಮಾನ ಧನ ಸಂಚಯ ಹಾಗೂ ದ್ರವ್ಯಲಾಭ.

## ರಾಹು-ಸೂರ್ಯ ಸೂಕ್ಷ್ಮ

ವ್ಯಕ್ತಾಶೇಂ ಗುಲ್ಮರೋಗಶ್ಚ ಕ್ರೋಧಹಾನಿಸ್ತಥೈವ ಚ।
ವಾಹನಾದಿ ಸುಖಂ ಸರ್ವ ರಾಹೋಃ ಸೂಕ್ಷ್ಮಗತೆ ರವೌ ॥೩೫॥

ಸೂರ್ಯಸೂಕ್ಷ್ಮದಲ್ಲಿ ಅರ್ಶಿರೋಗ ಪ್ರಕೋಪ ಗುಲ್ಮರೋಗ, ಕ್ರೋಧದಿಂದ ಹಾನಿ ವಾಹನಾದಿಗಳ ಸುಖ.

## ರಾಹು-ಚಂದ್ರ ಸೂಕ್ಷ್ಮ

ಮಣಿರತ್ನ ಧನಾವಾಪ್ತಿರ್ವಿದ್ಯೋಪಾಸನಶೀಲವಾನ್।
ದೇವಾರ್ಚನಪರೋ ಭಕ್ತ್ಯಾರಾಹೋಃ ಸೂಕ್ಷ್ಮಗತೆ ವಿಧೌ ॥೩೬॥

ರಾಹು ಪ್ರತ್ಯಂತರ ಚಂದ್ರ ಸೂಕ್ಷ್ಮದಲ್ಲಿ ಮಣಿರತ್ನ ಹಾಗೂ ಇತರ ರೂಪದಿಂದ ಧನಪ್ರಾಪ್ತಿ ವಿದ್ಯೆಯಲ್ಲಿ ರತ ದೇವೋಪಾಸನೆಯಲ್ಲಿ ಭಕ್ತಿ ಸುಖೀಲತೆ ದೇವಪೂಜೆಯಲ್ಲಿ ನಿಷ್ಠೆ.

### ರಾಹು-ಮಂಗಳ ಸೂಕ್ಷ್ಮ

ನಿರ್ಜಯೋ ಜನವಿದ್ರಾವೋ ಜನೆ ಕ್ರೋದಶ್ಚ ಬಂಧನಮ್ ।
ಚೌರ್ಯಶೀಲರತರ್ನಿತ್ಯಂ ರಾಹೇಃ ಸೂಕ್ಷ್ಮಗತೆ ಕುಜೆ ॥೩೭॥

ರಾಹು ಪ್ರತ್ಯಂತರ ಮಂಗಳ ಸೂಕ್ಷ್ಮದಲ್ಲಿ ಎಲ್ಲ ಕಾರ್ಯ ಪರಾಜಯ ಜನರ ಚೀತ್ಕಾರ ಕ್ರೋಧ ಬಂಧನ ನಿತ್ಯವೂ ಕಳ್ಳತನದ ಪ್ರವೃತ್ತಿ.

### ಗುರು ಪ್ರತ್ಯಂತರ

### ಗುರು-ಗುರು ಸೂಕ್ಷ್ಮ

ಶೋಕನಾಶೋ ಧನಾಧಿಕ್ಯ ಮುಗ್ನಿಹೊತ್ರಂ ಶಿವಾರ್ಚನಮ್ ।
ವಾಹನಂ ಛತ್ರಸಂಯುಕ್ತಂ ಜೀವಸೂಕ್ಷ್ಮ ದಶಾಫಲಮ್ ॥೩೮॥

ಗುರು-ಗುರುಸೂಕ್ಷ್ಮದಲ್ಲಿ ಶೋಭನಾಂಶ ಅಧಿಕ ಧನಪ್ರಾಪ್ತಿ ಅಗ್ನಿಹೋತ್ರಾದಿ ಕಾರ್ಯ ಶಿವಪೂಜನ ಛತ್ರಯುಕ್ತ ವಾಹನ (ರಾಜ ವೈಭವ) ಪ್ರಾಪ್ತಿ

### ಗುರು-ಶನಿ ಸೂಕ್ಷ್ಮ

ವ್ರತಹಾನಿಶ್ಚ ಹುಚಾಪೋ ವಿದೇಶೆ ವಸುನಾಶನಮ್ ।
ವಿರೋಧೊ ಬಾಂಧವೈರ್ನಿತ್ಯಂ ಗುರೋಃ ಸೂಕ್ಮಗತೆ ಶನೌ ॥೩೯॥

ಶನಿಸೂಕ್ಷ್ಮದಲ್ಲಿ ವ್ರತಾದಿ ಭಂಗ ಸಂತಾಪ ಅದು ಮಾನಸಿಕ ವಿದೇಶದಲ್ಲಿ ಧನಕ್ಷಯ ಬಂಧುಗಳೊಡನೆ ಸತತ ವಿರೋಧ.

### ಗುರು-ಬುಧ ಸೂಕ್ಷ್ಮ

ವಿದ್ಯಾಬುದ್ಧಿವಿವೃದ್ದಿಶ್ಚ ಸಸಮ್ಮಾನಂ ಧನಾಗಮಃ।
ಗ್ರಹೆ ಸರ್ವವಿಧಂ ಸೌಖ್ಯಂ ಗುರೋಃ ಸೂಕ್ಷ್ಮಗತ ಬಂಧೆ ॥೪೦॥

ಗುರು ಪ್ರತ್ಯಂತರ ಬುಧ ಸೂಕ್ಷ್ಮದಲ್ಲಿ ವಿದ್ಯಾಬುದ್ದಿ ವೃದ್ದಿ, ಸನ್ಮಾನದ ಜತೆಗೆ ಧನಾಗಮ ಮನೆಯಲ್ಲಿ ಸರ್ವವಿಧ ಸೌಖ್ಯ

## ಗುರು-ಕೇತು ಸೂಕ್ಷ್ಮ

ಜ್ಞಾನಂ ವಿಭವ ಪಾಂಡಿತ್ಯೆ ಶಾಸ್ತ್ರಶ್ರುತಿ ಶಿವಾರ್ಚನೆ।
ಅಗ್ನಿ ಹೋತ್ರಂ ಗುರೋರ್ಭಕ್ತಿರ್ಗುರೋಃ ಸೂಕ್ಷ್ಮಗತೆಧ್ವಜೆ ॥೪೧॥

ಕೇತುಸೂಕ್ಷ್ಮದಲ್ಲಿ ಜ್ಞಾನ ಐಶ್ವರ್ಯ ಪಾಂಡಿತ್ಯ ಶ್ರವಣ, ಶಿವಪೂಜೆ, ಅಗ್ನಿಹೋತ್ರ ಹಾಗೂ ಗುರುಭಕ್ತಿಫಲಗಳು.

## ಗುರು-ಶುಕ್ರ ಸೂಕ್ಷ್ಮ

ರೋಗಾನ್ಮುಕ್ತಿಃ ಸುಖಂ ಭೋಗೊ ಧನಧಾನ್ಯಸಮಾಗಮಃ।
ಪುತ್ರದಾರಾದಿಜಂ ಸೌಖ್ಯಂ ಗುರೋಃ ಸೂಕ್ಷ್ಮಗತೆ ಭೃಗೌ ॥೪೨॥

ಶುಕ್ರ ಸೂಕ್ಷ್ಮದಲ್ಲಿ ರೋಗ ಮುಕ್ತಿ ಸುಖ ಭೋಗ ಧನಧಾನ್ಯ ಸಮೃದ್ಧಿ ಪುತ್ರ ಸ್ತ್ರೀ ಸುಖಾದಿ ಫಲ.

## ಗುರು-ಸೂರ್ಯ ಸೂಕ್ಷ್ಮ

ವಾತಪಿತ್ತಪ್ರಕೋಪಶ್ಚ ಶ್ಲೇಷ್ಮೊದ್ರೆಕಸ್ತು ದಾರುಣಃ
ರಸವ್ಯಾಧಿಕೃತಂ ಶೂಲಂ ಗುರೋಃ ಸೂರ್ಯಗತೆ ರವೌ ॥೪೩॥

ಸೂರ್ಯ ಸೂಕ್ಷ್ಮದಲ್ಲಿ ವಾತಪಿತ್ತ ಪ್ರಕೋಪ ಕಫದ ಭಯ, ಕಫ ಪ್ರಕೋಪ-ರವ್ಯಾದಿಗಳಿಂದ ಶುಲ ರೋಗ.(ರಸಔಷಧ)

## ಗುರು-ಚಂದ್ರ ಸೂಕ್ಷ್ಮ

ಛತ್ರಚಾಮರ ಸಂಯುಕ್ತಂ ವೈಭವಂ ಪುತ್ರಸಂಭವಃ।
ನೇತ್ರಕುಕ್ಷಿಗತಾ ಪೀಡಾ ಗುರೋಃ ಸೂಕ್ಷ್ಮಗತೆ ವಿಧೌ ॥೪೪॥

ಚಂದ್ರಸೂಕ್ಷ್ಮದಲ್ಲಿ ಛತ್ರ ಚಾಮರ ಯುಕ್ತವಾದ ಐಶ್ವರ್ಯ (ರಾಜಭೋಗ) ಪುತ್ರಾದಿ ಸಂಭವ ನೇತ್ರ ಹಾಗೂ ಉದರದಲ್ಲಿ ಪೀಡೆ.

## ಗುರು-ಮಂಗಳ ಸೂಕ್ಷ್ಮ

ಸ್ತ್ರೀಜನಾಶ್ಚ ವಿಷೋತ್ಪತ್ತಿರ್ಬಂಧನಂ ಚಾತಿ ವಿಗ್ರಹಃ।
ದೇಶಾಂತರಗಮೊ ಭ್ರಾಂತರ್ಗುರೋಃ ಸೂಕ್ಷ್ಮಗತೆಪ್ಯಗೌ ॥೪೫॥

ಮಂಗಳ ಸೂಕ್ಷ್ಮದಲ್ಲಿ ಸ್ತ್ರೀ ಮೂಲಕ ವಿಷ ಪ್ರಯೋಗ ಬಂಧನ-ಕಲಹ ದೇಶಾಂತರ ಗಮನ ಭ್ರಮ ಈ ಎಲ್ಲ ಫಲಗಳು.

## ಗುರು-ರಾಹುಸೂಕ್ಷ್ಮ

ವ್ಯಾಧಿಭಿಃ ಪರಿಭೂತಃ ಸ್ಯಾಚ್ಚೌರ್ಯೈರಪಹೃತಂ ವಸು
ಸರ್ಪವೃಶ್ಚಿಕಯೋರ್ದಂಶೋ ಗುರೋಃ ಸೂಕ್ಷ್ಮಗತೆಪ್ಯಗೌ ॥೪೬॥

ರಾಹು ಸೂಕ್ಷ್ಮದಲ್ಲಿ ರೋಗ ಎಲ್ಲ ಕೆಲಸದಲ್ಲಿ ಪರಾಭವ-ಕಳ್ಳನ ಮುಖಾಂತರ ಧನಾಪಹರಣ (ಅಪಹಣ) ಸರ್ಪಚೇಳು ಆದಿ ವಿಷಜಂತು ಕಚ್ಚುವಿಕೆ.

## ಶನಿ ಪ್ರತ್ಯಂತರ

## ಶನಿ-ಶನಿಸೂಕ್ಷ್ಮ

ಧನಹಾನಿರ್ಮಹಾವ್ಯಾಧಿರ್ಮರುತ್ಪೀಡಾ ಕುಲಕ್ಷಯಃ।
ಮಿತಾಹಾರಿ ಮಹಾದುಃಖಿ ಶನಿ ಸೂಕ್ಷ್ಮದಶಾಫಲಮ್ ॥೪೭॥

ಶನಿ-ಶನಿ ಸೂಕ್ಷ್ಮದಲ್ಲಿ ಧನಕ್ಷಯ ಮಹಾರೋಗ ವಾತಪೀಡಾ ವಂಶಕ್ಷಯ ಅಲ್ಪಭೋಜನ (ಮಿತಾಹಾರಿ) ಹಾಗೂ ವಿಷಮತೆ ದುಃಖ.

## ಶನಿ-ಬುಧ ಸೂಕ್ಷ್ಮ

ವಾಣಿಜ್ಯೋವೃತ್ತಿರ್ಲಾಭಶ್ಚ ವಿದ್ಯಾವಿಭವ ಏವಚ।
ಸ್ತ್ರೀಲಾಭಶ್ಚಮಹಿ ಪ್ರಾಪ್ತಿಃ ಶನೇಃ ಸೂಕ್ಷ್ಮಕ್ಷಗತೆ ಬುಧೆ ॥೪೮॥

ಬುಧ ಸೂಕ್ಷ್ಮದಲ್ಲಿ ವ್ಯವಸಾಯ ವ್ಯಾಪಾರದಿಂದ ಲಾಭ, ವಿದ್ಯಾ ಐಶ್ವರ್ಯ, ಸ್ತ್ರೀ, ಭೂಮಿ ಆದಿ ಪ್ರಾಪ್ತಿ.

## ಶನಿ-ಕೇತು ಸೂಕ್ಷ್ಮ

ಚೌರೋಪದ್ರವಕುಷ್ಠಾದಿ ವೃತ್ತಿಕ್ಷಯ ವಿಗುಪ್ಸನಮ್ ।
ಸರ್ವಾಂಗ ಪೀಡನಮ್ ವ್ಯಾಧಿಃ ಶನೇಃ ಸೂಕ್ಷ್ಮಗತೆ ಧ್ವಜೆ ॥೪೯॥

ಶನಿಯ ಪ್ರತ್ಯಂತರದಲ್ಲಿ ಕೇತು ಸೂಕ್ಷ್ಮದಶಾವಲ್ಲಿ ಕಳ್ಳತನ, ಕುಷ್ಠಾದಿ ಉಪದ್ರವ ಜೀವಕ್ಷಯ (ವೃತ್ತಿಯಲ್ಲಿ ಹಾನಿ) ಸರ್ವಾಂಗದಲ್ಲಿ ಪೀಡೆ ಕೊಡುವ ರೋಗಾದಿಗಳು.

### ಶನಿ-ಶುಕ್ರ ಸೂಕ್ಷ್ಮ

ಐಶ್ವರ್ಯಮಾಯುಧಾಭ್ಯಾಸಃ ಪುತ್ರಲಾಭೋಭಿಷೇಚನಮ್ ।
ಆರೋಗ್ಯಂ ಧನಕಾಯೌ ಚ ಶನಿಸೂಕ್ಷ್ಮಗತೆ ಭೃಸೌ ॥೫೦॥

ಶುಕ್ರ ಸೂಕ್ಷ್ಮದಲ್ಲಿ ಐಶ್ವರ್ಯ ಶಾಸ್ತ್ರಾಭ್ಯಾಸ ಪುತ್ರ ಜನ್ಮ ಅಭಿಷೇಕ, ನೈಋತ್ಯ (ಆರೋಗ್ಯ) ಧನ ಹಾಗೂ ಅಭೀಷ್ಟಸಿದ್ಧಿ.

### ಶನಿ-ಸೂರ್ಯ ಸೂಕ್ಷ್ಮ

ರಾಜ ತೇಜೋಽಧಿಕಾರಿತ್ವಂ ಸ್ವಗೃಹೆ ಜಾಯತೆ ಕಲಿಃ।
ಕಿಂಚಿತ್ ಪೀಡಾ ಸ್ವದೇಹೊತ್ಥಾ ಶನಿಸೂಕ್ಷ್ಮಗತೆ ರವೌ ॥೫೦॥

ಸೂರ್ಯ ಸೂಕ್ಷ್ಮದಲ್ಲಿ ರಾಜನ ಸಮಾನ ತೇಜಸ್ಸು, ಅಧಿಕಾರ, ಮನೆಯಲ್ಲಿ ಮಾತ್ರ ಕಲಹ ಶರೀರದಲ್ಲಿ ಸಾಧಾರಣ ಕ್ಲೇಶ.

### ಶನಿ-ಚಂದ್ರ ಸೂಕ್ಷ್ಮ

ಸ್ಥಿರ್ಥೇಬುದ್ಧಿರ್ಮಹಾರಂಭೋ ಮಹಾತೇಜೋ ಬಹುವ್ಯಯಃ
ಸ್ತ್ರೀಪುತ್ರೈಶ್ಚ ಸಮಂ ಸೌಖ್ಯಂ ಶನಿಸೂಕ್ಷ್ಮಗತೆ ವಿದೌ ॥೫೨॥

ಚಂದ್ರಸೂಕ್ಷ್ಮದಲ್ಲಿ ನಿರ್ಮಲ ಬುದ್ಧಿ ದೊಡ್ಡ ದೊಡ್ಡ ಕಾರ್ಯಗಳ ಆರಂಭ ತೇಜಸ್ಸು ವ್ಯಯವುಂಟು ಸ್ತ್ರೀಪುತ್ರರಿಗೆ ಸುಖ.

### ಶನಿ-ಮಂಗಳ ಸೂಕ್ಷ್ಮ

ತೇಜೋ ಹಾನಿರ್ಮಹೊದ್ವೇಗೋಪ್ಯಗ್ನಿಮಾಂದ್ಯಂ ಭ್ರಮಃ ಕಲಿಃ।
ವಾತಪಿತ್ತಕೃತ ಪೀಡಾ ಶನೇಃ ಸೂಕ್ಷ್ಮಗತೆ ಕುಜೇಃ ॥೫೩॥

ಮಂಗಳ ಸೂಕ್ಷ್ಮಕಾಲದಲ್ಲಿ ಶಾಂತಿಹೀನತೆ ಮಹಾ ಉದ್ವೇಗ, ಅಗ್ನಿಮಾಂದ್ಯ (ಅಪಚನ) ಹಾಗೂ ಭ್ರಮೇ ಕಲಹ ವಾತಪಿತ್ತದಿಂದ ತೊಂದರೆ.

### ಶನಿ-ರಾಹು ಸೂಕ್ಷ್ಮ

ಪಿತೃಮಾತೃವಿನಾಶಶ್ಚ ಮನೋದುಃಖಂ ಗುರುವ್ಯಯಃ
ಸರ್ವತ್ರ ವಿಫಲಂ ಕಾರ್ಯ ಶನೇಃ ಸೂಕ್ಷ್ಮಗತೆ ಪ್ಯಹೌ ॥೫೪॥

ರಾಹು ಸೂಕ್ಷ್ಮದಲ್ಲಿ ತಂದೆ, ತಾಯಿಗಳ ನಾಶ(ಮೃತ್ಯು ಆದಿ) ಮಾನಸಿಕ ದುಃಖ ಅಧಿಕ ವ್ಯಯ ಎಲ್ಲ ಕಾರ್ಯಗಳಲ್ಲಿ ವಿಫಲತೆ.

### ಶನಿ-ಗುರು ಸೂಕ್ಷ್ಮ

ಸನ್ಮುದ್ರಾಭೋಗಸಮ್ಮಾನಂ ಧನಧಾನ್ಯಾವಿವರ್ಧನಮ್ ।
ಛತ್ರ ಚಾಮರ ಸಂಪ್ರಾಪ್ತಿಃ ಶನೇಃ ಸೂಕ್ಷ್ಮಗತೆ ಗುರೌ ॥೫೫॥

ಶನಿ ಪ್ರತ್ಯಂತರ ಗುರು ಸೂಕ್ಷ್ಮದಲ್ಲಿ ಸನ್ಮುದ್ರಾ(ಬಂಗಾರ ಆದಿ)ಗಳ ಉಪಭೋಗ ಸನ್ಮಾನ ಧನಧಾನ್ಯವೃದ್ಧಿ ಛತ್ರ ಚಾಮರ ಪ್ರಾಪ್ತಿ (ರಾಜ ವೈಭವ)

## ಬುಧ ಪ್ರತ್ಯಂತರ ದಶಾ

### ಬುಧ ಸೂಕ್ಷ್ಮ

ಸೌಭಾಗ್ಯಂ ರಾಜ ಸಮ್ಮಾನಂ ಧನಧಾನ್ಯದಿಸಂಪದಃ।
ಸರ್ವೇಶಾಂ ಪ್ರೀಯದರ್ಶಿ ಚ ಬುಧಸೂಕ್ಷ್ಮ ದಶಾಫಲವಮ್ ॥೫೬॥

ಬುಧ ಪ್ರತ್ಯಂತರ ಬುಧ ಸೂಕ್ಷ್ಮದಲ್ಲಿ ಸೌಭಾಗ್ಯ ರಾಜನಿಂದ ಸನ್ಮಾನ ಧನ ಧಾನ್ಯವೃದ್ಧಿ ವಿವಿಧ ರೀತಿ ಸಂಪದ ಸರ್ವರಿಂದ ಪ್ರೀತಿ (ಪ್ರಿಯದರ್ಶಿನಿ)

### ಬುಧ-ಕೇತು ಸೂಕ್ಷ್ಮ

ಬಾಲಗ್ರಹೋಗ್ನಿಭಿಸ್ತಾಪಃ ಸ್ತ್ರಿಗದೋದ್ ಭವದೋಷಭಾಕ್ ।
ಕುಮಾರ್ಗಿಕುತ್ಸಿತಾಶೀ ಚ ವಿದಿ ಸೂಕ್ಷ್ಮಗತೆ ಧ್ವಜೆ ॥೫೭॥

ಕೇತುವಿನ ಸೂಕ್ಷ್ಮದಲ್ಲಿ ಬಾಲಗ್ರಹ ಪ್ರಕೋಪ, ಅಗ್ನಿಭಯ ಸಂತಾಪ ಶಿರೋರೋಗ ಸ್ತ್ರೀರೋಗ ದೋಷ ಕುತ್ಸಿತಾನ್ನಭೋಜನ.

### ಬುಧ-ಶುಕ್ರ ಸೂಕ್ಷ್ಮ

ವಾಹನಂ ಧನಸಂಪತ್ತಿರ್ಜಲ ಜಾನ್ನರ್ಥಸಂಭವಃ।
ಶುಭಕೀರ್ತಿಮಹಾಭೋಗೋ ವಿದಿ ಸೂಕ್ಷ್ಮಗತೆ ಭೃಗೌ ॥೫೮॥

ಬುಧ ಪ್ರತ್ಯಂತರ ಶುಕ್ರ ಸೂಕ್ಷ್ಮದಲ್ಲಿ ವಾಹನ ಧನಸಂಪತ್ತು ಮನೆ ಆದಿ ಕಟ್ಟಿಸುವಿಕೆ, ಅನ್ನ ಅರ್ಥಾಪ್ತಿ ಶುಭ ಮೂಲಯಶ ಮಹಾಭೋಗ (ರಾಜಭೋಗ).

### ಬುಧ-ಸೂರ್ಯ ಸೂಕ್ಷ್ಮ

ತಾಡನಂ ನೃಪವೈಷಮ್ಯಂ ಬುದ್ಧಿಸ್ಖಲನರೋಗ ಭಾಕ್।
ಹಾನಿರ್ಜನಾಪವಾದ ಶ್ಚ ವಿದಿ ಸೂಕ್ಷ್ಮಗತೆ ರವೌ ॥೫೯॥

ಸೂರ್ಯ ಸೂಕ್ಷ್ಮದಲ್ಲಿ ಹೊಡೆತ, ರಾಜನ ವಿಷಮ ದೃಷ್ಟಿ(ಕ್ರೋಧ), ಬುದ್ಧಿ ಭ್ರಂಶ (ಭ್ರಮ), ರೋಗ ಹಾನಿ ಲೋಕಾಪವಾದವು ಬರುತ್ತದೆ.

## ಬುಧ-ಚಂದ್ರ ಸೂಕ್ಷ್ಮ

ಸುಭಗಃ ಸ್ಥಿರಬುದ್ಧಿಶ್ಚ ರಾಜಸಮ್ಮಾನ ಸಂಪದಃ।
ಸುಹೃದ್ದೇಶಿಕನಿಂಚಾರೋ ವಿದಿ ಸೂಕ್ಷ್ಮಗತೆ ವಿದೌ ॥೬೦॥

ಚಂದ್ರಸೂಕ್ಷ್ಮದಲ್ಲಿ ಸುಂದರಿಗಾಗಿ ಸಬುದ್ಧಿ ಅಥವಾ ಸ್ಥಿರ ಬುದ್ಧಿಯವನಾಗಿರುತ್ತಾನೆ. ರಾಜನಿಂದ ಸನ್ಮಾನ ಹಾಗೂ ಸಂಪತ್ತು, ಮಿತ್ರ, ಗುರುಗಳ ಆಗಮನ, ಸುಖ ಪ್ರಾಪ್ತಿಯಾಗುತ್ತದೆ.

## ಬುಧ-ಮಂಗಳ ಸೂಕ್ಷ್ಮ

ಅಗ್ನಿದಾಹೋ ವಿಷೋತ್ಪತ್ತಿರ್ಜಡತ್ವಂ ಚ ದರಿದ್ರ ತಾ।
ವಿಭ್ರವಾಶ್ಚ ಮಹದ್‌ವೇಗೋ ವಿದಿ ಸೂಕ್ಷ್ಮಗತೆ ಕುಜೆ ॥೬೦॥

ಮಂಗಳ ಸೂಕ್ಷ್ಮದಲ್ಲಿ ಅಗ್ನಿದಾಹ ವಿಷಪ್ರಕೋಪ, ಜಡತೆ, ದಾರಿದ್ರ್ಯ ಭ್ರಾಂತಿ ಹಾಗೂ ಮನೋದ್ವೇಗ.

## ಬುಧ-ರಾಹು ಸೂಕ್ಷ್ಮ

ಅಗ್ನಿಸರ್ಪನೃಪಾದ್ ಭೀತಿಃ ಕೃಚ್ಛ್ರಾದರಿಪಾರಾ ಭವಃ।
ಭೂತಾವೇಶಭ್ರಮಾದ್ ಭ್ರಾಂತಿರ್ವಿದಿ ಸೂಕ್ಷ್ಮಗತೆ ಪ್ಯಹೌ ॥೬೨॥

ರಾಹು ಸೂಕ್ಷ್ಮದಲ್ಲಿ, ಅಗ್ನಿ, ಸರ್ಪ ಹಾಗೂ ರಾಜನಿಂದ ಭಯ ಬಹಳ ತೊಂದರೆಯಿಂದ ಶತ್ರುಗಳ ಮೇಲೆ ಜಯ, ಭೂತಪ್ರೇತ ಉಪದ್ರವವಾದಿ ಫಲಗಳು.

## ಬುಧ-ಗುರು ಸೂಕ್ಷ್ಮ

ಗೃಹೋಪಕರಣಾ ಭವ್ಯಂ ತ್ಯಾಗೋ ಭೋಗಾದಿ ವಸ್ತುನಾಮ್ ।
ರಾಜಪ್ರಸಾದ ಸಂಪತ್ತಿರ್ವಿದಿ ಸೂಕ್ಷ್ಮತಗೆ ಗುರೌ ॥೬೩॥

ಗುರು ಸೂಕ್ಷ್ಮದಲ್ಲಿ ಗ್ರಹ ನಿರ್ಮಾಣದ ಭವ್ಯಸಾಧನಗಳು, ಭೋಗ ವಸ್ತು ಪರಿತ್ಯಾಗ ರಾಜರ ಕೃಪೆಯಿಂದ ಸಂಪತ್ತು.

### ಬುಧ-ಶನಿ ಸೂಕ್ಷ್ಮ

ವಾಣಿಜ್ಯವೃತ್ತಿಲಾಭಶ್ಚ ವಿದ್ಯಾವಿಭವಮೇವ ಚ ।
ಸ್ತ್ರೀಲಾಭಶ್ಚ ಮಹಾವ್ಯಾಪ್ತಿರ್ವಿದಿ ಸೂಕ್ಷ್ಮಗತೆ ಶನೌ ॥೬೪॥

ಕೇತು ಸೂಕ್ಷ್ಮದಲ್ಲಿ ವಾಣಿಜ್ಯವೃತ್ತಿಯಿಂದ ಲಾಭ. ವಿದ್ಯಾ ಹಾಗೂ ಐಶ್ವರ್ಯ ಪ್ರಾಪ್ತಿ, ಸ್ತ್ರೀಲಾಭ ಹಾಗೂ ವ್ಯವಹಾರ ವ್ಯಾಪಕತೆ.

### ಕೇತು ಪ್ರತ್ಯಂತರ - ಕೇತು ಸೂಕ್ಷ್ಮ

### ಕೇತು-ಕೇತು ಸೂಕ್ಷ್ಮ

ಪುತ್ರದಾರಾದಿಜಂ ದುಃಖಂ ಗಾತ್ರವೈಷಮ್ಯೆ ವ ಚ।
ದಾರಿದ್ರ್ಯಾಡ್ಯ್ ಭಿಕ್ಷುವೃತ್ತಿಶ್ಚ ಸ್ವಿಯೇಸೂಕ್ಷ್ಮಗತೆ ಧ್ವಜೆ ॥೬೫॥

ಕೇತು ಪ್ರತ್ಯಂತರದಲ್ಲಿ ಕೇತು ಸೂಕ್ಷ್ಮ ಸ್ತ್ರೀಪುತ್ರಾದಿ ಸುಖ ಶರೀರದಲ್ಲಿ ವಿಷಮತಾ, ದರಿದ್ರತೆಯ ಕಾರಣ ಭಿಕ್ಷುವೃತ್ತಿ ಈ ಫಲಗಳು.

### ಕೇತು-ಶುಕ್ರ ಸೂಕ್ಷ್ಮ

ರೋಗನಾಶೋರ್ಥಲಾಭಶ್ಚ ಗುರುನುವಿಪ್ರಾನು ವತ್ಸಲಃ
ಸಂಗಮಃ ಸ್ವಜನೈಃ ಸಾರ್ಧಕೇತೋಃ ಸೂಕ್ಷ್ಮಗತೆ ಭೃಗೌ

ರೋಗ ಮುಕ್ತಿ ಧನಲಾಭ ಗುರುಜನ ಬ್ರಾಹ್ಮಣರ ಮೇಲೆ ಶ್ರದ್ದೆ ಸ್ವಜನರೊಡನೆ ಸಂಪರ್ಕ ಆದಿ ಫಲಗಳ ಶುಕ್ರ ಸೂಕ್ಷ್ಮದಲ್ಲಿ.

### ಕೇತು-ಸೂರ್ಯ

ಯುದ್ಧಂ ಭೂಮಿ ವಿನಾಶಶ್ಚ ವಿಪ್ರವಾಸಃ ಸ್ವದೇಶತಃ।
ಸುಹೃದ್ ವಿಪತ್ತರಾರ್ತಿಶ್ಚ ಕೇತೋಃ ಸೂಕ್ಷ್ಮಗತೆ ರವೌ ॥೬೭॥

ಸೂರ್ಯ ಸೂಕ್ಷ್ಮದಲ್ಲಿ ಯುದ್ದ ಸಂಭವ (ಕಲಹ) ಭೂಮಿನಾಶ ಸ್ವದೇಶದ ಅನ್ಯಥಾ ಅಂದರೆ ಪರದೇಶವಾಸಿ ಮಿತ್ರರಲ್ಲಿಯೂ ವಿಪತ್ತು ಹಾಗೂ ಸ್ವಯಂ ಪೀಡೆ.

### ಕೇತು-ಚಂದ್ರ ಸೂಕ್ಷ್ಮ

ದಾಸಿದಾಸಸಮೃದ್ಧಿಶ್ಚ ಯದೇ ಲಬ್ಧಿರ್ಜಯಸ್ತಥಾ
ಲಲಿತಾ ಕೀರ್ತಿರುಚ್ಚೈನ್ನಾ ಕೇತೋಃ ಸೂಕ್ಷ್ಮಗತೆ ವಿಧೌ ॥೬೮॥

ಚಂದ್ರಸೂಕ್ಷ್ಮದಲ್ಲಿ ಸೇವಕ, ಸೇವಕಿಯರ ವೃದ್ಧಿ ಯುದ್ಧದಲ್ಲಿ ಲಾಭ ಹಾಗೂ ವಿಜಯ ಶುಭ ಯಶ.

### ಕೇತು-ಮಂಗಳ ಸೂಕ್ಷ್ಮ

**ಆಸನೆ ಭಯಮಶ್ವಾದೇಶ್ಚೈರದುಷ್ಟಾದಿ ಪೀಡನಮ್ ।**
**ಗುಲ್ಮಪೀಡಾ ಶಿರೋ ರೋಗಃ ಕೇತೋಃ ಸೂಕ್ಷ್ಮಗತೆ ಕುಜೊ ॥೬೯॥**

ಮಂಗಳ ಸೂಕ್ಷ್ಮದಲ್ಲಿ ಅಶ್ವಾರೋಹಣದಿಂದ ಬೀಳುವ ಭಯ, ಕಳ್ಳರು ದುರ್ಜನರಿಂದ ಕಷ್ಟ ಗುಲ್ಮರೋಗ ಹಾಗೂ ಶಿರೋವೇದನಾ ಈ ಫಲಗಳು.

### ಕೇತು-ರಾಹು ಸೂಕ್ಷ್ಮ

**ವಿನಾಶಃ ಸ್ತ್ರೀಗುರುಣಾಂ ಚ ದುಷ್ಟಸ್ತ್ರೀ ಸಂಗಮಾಲ್ಲಿಘುः।**
**ವಮನಂ ರುಧಿರಂ ಪಿತ್ತಂ ಕೇತೋಃ ಸೂಕ್ಷ್ಮಗತೇ ಪ್ಯಗೌ ॥೭೦॥**

ರಾಹು ಸೂಕ್ಷ್ಮದಲ್ಲಿ ಸ್ತ್ರೀ, ಗುರುಗಳ ವಿನಾಶ ದುಷ್ಟ ಸ್ತ್ರೀ ಸಂಪರ್ಕದಿಂದ ಅಲ್ಪತೆ ರಕ್ತವಾಂತಿ ಹಾಗೂ ಪಿತ್ತ ವಿಕಾರಾದಿ ದೋಷಗಳು.

### ಕೇತು-ಗುರು ಸೂಕ್ಷ್ಮ

**ಶತ್ರೋರ್ವಿರೋಧಃ ಸಂಪತ್ತಿಃ ಸಹಸಾ ರಾಜವೈಭವಮ್ ।**
**ಪಶುಕ್ಷೇತ್ರವಿನಾಶಾರ್ತ್ತಿಃ ಕೇತೋಃ ಸೂಕ್ಷ್ಮಗತೆ ಗುರೌ ॥೭೧॥**

ಗುರು ಸೂಕ್ಷ್ಮದಲ್ಲಿ ಶತ್ರುಗಳ ಜತೆ ವಿರೋಧ ಸಂಪತ್ತು ಅರಿವಿಗೆ ಬರದಂತೆ ರಾಜತುಲ್ಯ ಐಶ್ವರ್ಯ ಪಶು ಹಾಗೂ ಹೊಲ ವಿನಾಶದಿಂದ ಕಷ್ಟ.

### ಕೇತು-ಶನಿ ಸೂಕ್ಷ್ಮ

**ಮೃಷಾಪೀಡಾ ಭವೇತ್ ಕ್ಷುದ್ರಸುಖೋತ್ಪತ್ತಿಶ್ಚ ಲಂಘನಮ್ ।**
**ಸ್ತ್ರೀವಿರೋಧಃ ಸತ್ಯಹಾನಿಃ ಕೇತೋಃ ಸೂಕ್ಷ್ಮಗತೆ ಶನೌ ॥೭೨॥**

ಶನಿ ಸೂಕ್ಷ್ಮ ಮಿಥ್ಯಾಕಷ್ಟ ಅತ್ಯಲ್ಪ ಸುಖ ಉಪವಾಸ, ಸ್ತ್ರೀಯೊಡನೆ ವಿರೋಧ ಸತ್ಯಹಾನಿ.

### ಕೇತು-ಬುಧ ಸೂಕ್ಷ್ಮ

**ನಾನಾವಿಧಜನಾಪ್ತಿಶ್ಚ ವಿಪ್ರಯೋಗೋರಿ ಪೀಡನಮ್ ।**
**ಅರ್ಥ ಸಂಪತ್ಸಮೃದ್ಧಿಶ್ಚ ಕೇತೋಃ ಸೂಕ್ಷ್ಮಗತೆ ಬುಧೆ ॥೭೩॥**

ಬುಧ ಸೂಕ್ಷ್ಮದಲ್ಲಿ ಅನೇಕ ವಿಧ ವ್ಯಕ್ತಿಗಳಿಂದ ಲಾಭ ಹಾಗೂ ಅವರಿಂದ ವಿಯೋಗ ಅತಿ ಕಷ್ಟ ಧನಸಂಪತ್ತು ಸಮೃದ್ಧಿ.

## ಶುಕ್ರ ಪ್ರತ್ಯಂತರ

### ಶುಕ್ರ-ಶುಕ್ರ ಸೂಕ್ಷ್ಮ

**ಶತ್ರುಹಾನಿ ಮುಹೇತ್ ಸೌಖ್ಯಂ ಶಂಕರಾಲಯಪೂರ್ವಕಮ್ ।**
**ತಡಾಗ ಕೂಪನಿರ್ಮಾಣಾ ಶುಕ್ರ ಸೂಕ್ಷ್ಮ ಧಶಾಫಲಂ ॥೭೪॥**

ಶುಕ್ರ-ಶುಕ್ರ ಪ್ರತ್ಯಂತರದಲ್ಲಿ ಶತ್ರು ಕ್ಷಯ ಹಾಗೂ ಮಹಾಸುಖ ಶಿವ ದೇವಸ್ಥಾನ, ಕೆರೆ, ಭಾವಿ ನಿರ್ಮಾಣ.

### ಶುಕ್ರ-ಸೂರ್ಯ

**ಉರಸ್ತಾಪೋ ಭ್ರಮಶ್ಚೈವ ಗತಾಗತವಿಚೇಷ್ಟಿತಮ್ ।**
**ಕಂಚಿಲ್ಲಾಭಃ ಕಿಂಚಿದ್ಧಾನಿ ಭೃಗೋಃ ಸೂಕ್ಷ್ಮಗತೇ ರವೌ ॥೭೫॥**

ಸೂರ್ಯಸೂಕ್ಷ್ಮದಲ್ಲಿ ಹೃದಯತಾಪ ಬುದ್ಧಿ ಭ್ರಾಂತಿ-ಅತ್ತ ಇತ್ತ ಖಾಲಿ ತಿರುಗಾಟ ಕೆಲ ಸಲ ಲಾಭ, ಕೆಲ ಸಲ ಹಾನಿ.

### ಶುಕ್ರ-ಚಂದ್ರ ಸೂಕ್ಷ್ಮ

**ಆರೋಗ್ಯಂ ಧನಸಂಪತ್ತಿಃ ಕಾರ್ಯಲಾಭೋ ಗತಾಗತ್ಯೈಃ।**
**ಪ್ರಜ್ಞಾಜ್ಞಾನ ಸಮೃದ್ಧಿಃ ಸ್ಯಾದ್ ಭೃಗೋಃ ಸೂಕ್ಷ್ಮಗತೇ ವಿದೌ ॥೭೬॥**

ಚಂದ್ರ ಸೂಕ್ಷ್ಮದಲ್ಲಿ ಆರೋಗ್ಯ ಧನಸಂಪತ್ತು, ಕ್ರಯ ವಿಕ್ರಯದಲ್ಲಿ ಲಾಭ ಬುದ್ಧಿ ಹಾಗೂ ಜ್ಞಾನದ ವೃದ್ಧಿ.

### ಶುಕ್ರ-ಮಂಗಳ ಸೂಕ್ಷ್ಮ

**ಜಡತ್ವಂ ರಿಪುವೈಮ್ಯಂ ದೇಶಭ್ರಂಶೋ ಮಹದ್ ಭಯವಮ್ ।**
**ವ್ಯಾಧಿದುಃಖ ಸಮಂತ್ಪತ್ತಿ ಭೃಗೋಃ ಸೂಕ್ಷ್ಮಗತೇ ಕುಜೆ ॥೭೭॥**

ಮಂಗಳ ಸೂಕ್ಷ್ಮದಲ್ಲಿ ಜಡತೆ ಶತ್ರುಗಳೊಂದಿಗೆ ಮತ್ತಷ್ಟು ವೈಮನಸ್ಸು ದೇಹತ್ಯಾಗ ಮಹಾಭಯ ಹಾಗೂ ರೋಗ ದುಃಖೋತ್ಪತ್ತಿ.

## ಶುಕ್ರ-ರಾಹು ಸೂಕ್ಷ್ಮ

ರಾಜ್ಯಾಗ್ನಿಸರ್ಪಜ ಭೀತಿರ್ಬಂಧುನಾಶೋ ಗುರುವ್ಯಥಾ।
ಸ್ಥಾನಚ್ಯುತಿರ್ಮಹಾಭೀತಿರ್ಭೃಗೋಃ ಸೂಕ್ಷ್ಮಗತೆಪ್ಯಹೌ ॥೭೮॥

ರಾಹುಸೂಕ್ಷ್ಮದಲ್ಲಿ ರಾಜ, ಅಗ್ನಿ ಹಾಗೂ ಸರ್ಪ ಭಯ, ಬಂಧುಗಳ ನಾಶ, ಮಹಾನ್ ಕ್ಲೇಶ ಸ್ಥಾನ ಭ್ರಂಶ ಹಾಗೂ ಮಹಾಭಯ.

## ಶುಕ್ರ-ಗುರು ಸೂಕ್ಷ್ಮ

ಸರ್ವತ್ರ ಕಾರ್ಯಲಾಭಶ್ಚ ಕ್ಷೇತಾರ್ಥವಿಭವೋನ್ನತಿಃ।
ವಣಿಗ್‌ವೃತ್ತೆರ್ಮಹಾಲಬ್ಧಿರ್ಭೃಗೋಃ ಸೂಕ್ಷ್ಮಗತೆ ಗುರೌ ॥೭೯॥

ಗುರು ಸೂಕ್ಷ್ಮದಲ್ಲಿ ಎಲ್ಲ ಕಾರ್ಯ ಸಿದ್ದಿ (ಎಲ್ಲ ಕ್ಷೇತ್ರ) ಹೊಲ, ಧನ, ಅನ್ಯ ಐಶ್ವರ್ಯದ ಉತ್ಪತ್ತಿ ವಾಣಿಜ್ಯದಲ್ಲಿ ಮಹಾ ಲಾಭ.

## ಶುಕ್ರ-ಶನಿ ಸೂಕ್ಷ್ಮ

ಶತ್ರುಪೀಡಾ ಮಹದ್ ದುಃಖಂ ಚತುಷ್ಪಾದ ವಿನಾಶನಮ್ ।
ಸ್ವಗೋತ್ರ ಗುರುಹಾನಿಃ ಸ್ಯಾದ್ ಭೃಗೋಃ ಸೂಕ್ಷ್ಮಗತೆ ಶನೌ ॥೮೦॥

ಶನಿ ಸೂಕ್ಷ್ಮದಲ್ಲಿ ಶತ್ರು ಮುಖಾಂತರ ತೊಂದರೆ, ಮಹಾನ್ ದುಃಖ ಪಶುನಾಶ ವಂಶದಲ್ಲಿ ವಿಶಿಷ್ಟ ವ್ಯಕ್ತಿಯ ಮೃತ್ಯು-ಕಾರಣ ದುಃಖ.

## ಶುಕ್ರ-ಬುಧ ಸೂಕ್ಷ್ಮ

ಬಾಂಧವಾದಿಷು ಸಂಪತ್ತಿರ್ವ್ಯವಹಾರೆ ಧನೋನ್ನತಿಃ।
ಪುತ್ರದಾರಾದಿತಃ ಸೌಖ್ಯಂ ಭೃಗೋಃ ಸೂಕ್ಷ್ಮಗತ ಬುಧೆ ॥೮೧॥

ಬುಧ ಸೂಕ್ಷ್ಮದಲ್ಲಿ ಬಂಧು ಬಾಂಧವರಲ್ಲಿ ಸಂಪತ್ತಿನ ಅಭಿವೃದ್ಧಿ ವ್ಯಾಪಾರ ಲಾಭ, ಸ್ತ್ರೀಪುತ್ರರಿಂದ ಸುಖ.

## ಶುಕ್ರ-ಕೇತು ಸೂಕ್ಷ್ಮ

ಅಗ್ನಿರೋಗೋ ಮಹತ್ಪಿಡಾ ಮುಖನೇತ್ರ ಶಿರೋವ್ಯಥಾ।
ಸಂಚಿತಾರ್ಥಾತ್ಮನಃ ಪೀಡಾ ಭೃಗೋಃ ಸೂಕ್ಷ್ಮಗತೆ ಧ್ವಜೆ ॥೮೨॥

ಕೇತು ಸೂಕ್ಷ್ಮದಲ್ಲಿ ಅಗ್ನಿಮಾಂದ್ಯ, ಮಹಾಕಷ್ಟಮುಖ, ನೇತ್ರ ತಲೆಯಲ್ಲಿ

ವೇದನೆ ಸಂಚಿತ ಹಣದ ವ್ಯಯ.

ವಿ.ಸೂ.: ಇಲ್ಲಿ ಶುಭ ಗ್ರಹದ ಪ್ರತ್ಯಂತರದಲ್ಲಿ ಪಾಪಗ್ರಹ ಸೂಕ್ಷ್ಮ ಅಶುಭ ಹಾಗೂ ಪಾಪಗ್ರಹ ಪ್ರತ್ಯಂತರ ಶುಭಗ್ರಹ ಸೂಕ್ಷ್ಮ-ಶುಭ-ಪ್ರತ್ಯಂತರ ಹಾಗೂ ಸೂಕ್ಷ್ಮ ಶುಭಗ್ರಹವಾದರೆ ಶುಭ ಪಾಪಗ್ರಹಗಳಾದರೆ ಅಶುಭ

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರ ಸೂಕ್ಷ್ಮ ದಶಾಫಲಾಧ್ಯಾಯ ಸಮಾಪ್ತಿ**

# ಅಥ ಪ್ರಾಣದಶಾಫಲಾಧ್ಯಾಯಃ

## ಪ್ರಾಣದಶಾ ಸಾಧನ

ಸ್ವದಶಾಬ್ದ ಹತಾ ಸೂಕ್ಷ್ಮದಶಾಪಲಬುತಿಸ್ತಥಾ।
ವಿಂಶೋತ್ತರಶತೇನಾಪ್ತಾ ಲಬ್ಧಿಃ ಪ್ರಾಣದಶಾ ಭವೇತ್ ॥೧॥

ಫಲಾತ್ಮಕ ಸೂಕ್ಷ್ಮದಶಾವನ್ನು ಅವರವರ ದಶಾವರ್ಷದಿಂದ ಗುಣಿಸಿ 120ರಿಂದ ಭಾಗಿಸಲು ಲಬ್ಧ ಪ್ರಾಣದಶಾ ಆಗುತ್ತದೆ.

ಉದಾಹರಣೆ ಸೂರ್ಯ ಸೂಕ್ಷ್ಮ ದಶಾ ಪ್ರಮಾಣ ॥6ಘಟಿ 12ವನ್ನ ಪಳವನ್ನಾಗಿ ಮಾಡಿ $12 \times 60 + 12 = 972 \times 6 \div 120 = 5832 \div 120 = 48$ ಪಳ 36 ಓಪಳ ಇದು ಸೂರ್ಯ ದಶಾ ಅಂತರ ದಶಾ-ಪ್ರತ್ಯಂತರ ದಶಾ ಸೂಕ್ಷ್ಮದಶಾ ಪ್ರಾಣದಶಾ ಆಗುತ್ತದೆ. ಇದೆ ರೀತಿ ಎಲ್ಲ ಗ್ರಹಗಳ ಪ್ರಾಣದಶಾ ತೆಗೆಯುವುದು.

### ಸೂರ್ಯ-ಅಂತರದಶಾ-ಪ್ರತ್ಯಂತರ-ಸೂಕ್ಷ್ಮ-ಸೂರ್ಯ ಪ್ರಾಣ

| ಗ್ರಹ | ಸೂ | ಚಂ | ಮ | ರಾ | ಗು | ಶ | ಬು | ಕೇ | ಶು | ಯೋಗ |
|---|---|---|---|---|---|---|---|---|---|---|
| ಘಟಿ | 0 | 1 | 0 | 2 | 2 | 2 | 2 | 0 | 2 | 16 |
| ಪಳ | 48 | 21 | 56 | 25 | 9 | 33 | 17 | 56 | 42 | 12 |
| ವಿಪಳ | 36 | 0 | 42 | 48 | 36 | 54 | 42 | 42 | 0 | 0 |

### ಸೂರ್ಯ ಸೂಕ್ಷ್ಮ ಸೂರ್ಯ ಪ್ರಾಣದಶಾ

ಪೌಂಶ್ಚಲ್ಯಂ ವಿಷಜಾ ಬಾಧಾ ತಸ್ಕರಾನಲಜಾ ತಥಾ।
ಸೂರ್ಯಪ್ರಾಣದಶಾಯಾಂ ತು-ಮರಣಂ ಕೃಚ್ಛ್ರ ಮಾದಿಶೇತ್ ॥೧೨॥

ಸೂರ್ಯಸೂಕ್ಷ್ಮ ಪ್ರಾಣದಶಾದಲ್ಲಿ ಪುಂಮ್ಯೆಥುನ (ಸಲಿಂಗ ಮೈಥುನ) ವಿಷ, ಕಳ್ಳ ಹಾಗೂ ಅಗ್ನಿ ಭಯ ಕಷ್ಟದಿಂದ ಮರಣ.

### ಸೂರ್ಯ ಸೂಕ್ಷ್ಮ ಚಂದ್ರ ಪ್ರಾಣ

ಸುಖಂ ಭೋಜನ ಸಂಪತ್ತಿಃ ಸಂಸ್ಕಾರೋ ನೃಪ ವೈಭವಮ್।
ಉದಾರಾದ್ಯನುಕಂಪಾಭೀ ರವೇಃ ಪ್ರಾಣಗತೆ ವಿಧೌ ॥೩॥

ಚಂದ್ರನ ಪ್ರಾಣ ದಶೆಯಲ್ಲಿ ಸುಖ ಭೋಜನ ಸಂಪತ್ತ ಸಂಸ್ಕಾರ ಉದಾರ

ವ್ಯಕ್ತಿಗಳ ಅನುಕಂಪದಿಂದ ರಾಜ ಸಮಾನ ಐಶ್ವರ್ಯ ಪ್ರಾಪ್ತಿ.

### ಸೂರ್ಯ-ಪ್ರಾಣದಶಾ ಮಂಗಳ

ಭೂಪೋಪದ್ರುತಿರನ್ಯಾರ್ಥೆ ದ್ರವ್ಯನಾಶೋ ಮಹದ್ ಭಯಮ್।
ಮಹತ್ಕಾಪಚಯ ಪ್ರಾಪ್ತಿ ರವೇಃ ಪ್ರಾಣಗತೆ ಕುಜೆ ॥೩॥

ಮಂಗಳನ ಪ್ರಾಣ ದಶಾದಲ್ಲಿ ಎರಡನೆಯ ವರ ಸಲುವಾಗಿ ರಾಜಕೃತ ಉಪದ್ರವ, ದ್ರವ್ಯ ಕ್ಷಯ ಮಹಾಭಯ ಮಹತ್ತಮ ಚ್ಯುತಿ.

### ಸೂರ್ಯ-ರಾಹು ಪ್ರಾಣದಶಾ

ಅನ್ನೋದ್‌ಭವಾ ಮಹಾಪೀಡಾ ವಿಪೊತ್ವತ್ತವಿಶೇಷತಃ
ಅರ್ಥಾಗ್ನಿರಾಜಭಿಃ ಕ್ಲೇಶೊ ರವೇಃ ಪ್ರಾಣಗತೆ ಪಹೌ ॥೫॥

ರಾಹು ಪ್ರಾಣದಶಾದಲ್ಲಿ ಅನ್ನಜನ್ಯ ಮಹಾಕ್ಲೇಶ ವಿಶೇಷ ರೂಪದಿಂದ ವಿಷಯಭಯ ಧನ, ಅಗ್ನಿ ಹಾಗೂ ರಾಜರಿಂದ ಕಷ್ಟ.

### ಸೂರ್ಯ-ಗುರು ಪ್ರಾಣದಶಾ

ನಾನಾವಿದ್ಯಾರ್ಥಸಂಪತ್ತಿಃ ಕಾರ್ಯಲಾಭೊ ಗತಾಗತೈಃ।
ರಾಜದ್ವಿಜಾಶ್ರಮೇ ಸ್ಯಾದ್ದಿ ರವೇಃ ಪ್ರಾಣಗತೆ ಗುರೌ ॥೬॥

ಗುರು ಪ್ರಾಣದಶಾದಲ್ಲಿ ಅನೇಕ ವಿದ್ಯೆಗಳು ಕೈಗತ ಸಂಪತ್ತು ಹೆಚ್ಚಿನ ರಾಜ ಹಾಗೂ ಬ್ರಾಹ್ಮಣರ ಗಮನಾಗಮನದಿಂದ ಕಾರ್ಯ ಸಿದ್ಧಿ.

### ಸೂರ್ಯ-ಶನಿ ಪ್ರಾಣದಶಾ

ಬಂಧನಂ ಪ್ರಾಣನಾಶಶ್ಚ ವಿತ್ತೋದ್‌ವೆಘಸ್ತಥೈವ ಚ।
ಬಹುದಾ ಮಹಾಹಾನಿ ರವೇಃ ಪ್ರಾಣಗತೆ ಶನೌ ॥೭॥

ಶನಿ ಪ್ರಾಣದಶಾದಲ್ಲಿ ತುರಂಗವಾಸ ಮರಣ. ಚಿತ್ತದಲ್ಲಿ ಉದ್ವಿಗ್ನತಾ ಅನೇಕ ವಿಧ ಬಾಧೆ ಅಪಾರ ಚ್ಯುತಿ.

### ಸೂರ್ಯ-ಬುಧ ಪ್ರಾಣ ದಶಾ

ರಾಜಾಗ್ನ ಭೋಗಃ ಸತತಂ ರಾಜಲಾಂಛನ ತತ್ವದಮ್।
ಆತ್ಮಾನಾಂ ತರ್ಪಯೋದೇವಂ ರವೇಃ ಪ್ರಾಣಗತೆ ಬುಧೆ ॥೮॥

ಸೂರ್ಯ-ಬುಧ ಪ್ರಾಣದಶಾದಲ್ಲಿ ಸತತ ರಾಜಾನ್ನಭೋಜ ರಾಜಚಿಹ್ನ ರಾಜ

ಪದದಿಂದ ಆತ್ಮ ಸಂತೋಷವಾಗುತ್ತದೆ.

### ಸೂರ್ಯ-ಕೇತು ಪ್ರಾಣದಶಾ

ಅನ್ಯೋನ್ಯಂ ಕಲಹಶ್ಚೈವ ವಸುಹಾನಿಃ ಪರಾಜಯಃ।
ಗುರು ಸ್ತ್ರೀ ಬಂಧುಭಿಃ ಸಾರ್ಧ ರವೇಃ ಪ್ರಾಣಗತೇ ಧ್ವಜೆ ॥೯॥

ಕೇತು ಪ್ರಾಣ ದಶಾದಲ್ಲಿ ಗುರು ಸ್ತ್ರೀ ಹಾಗೂ ಬಂಧುಗಳ ಜತೆಗೆ ಪಾರಸ್ಪರಿಕ ಕಲಹ ಧನಕ್ಷಯ ಎಲ್ಲ ಕಾರ್ಯ ಪರಾಜಯ ಈ ಎಲ್ಲ ಅಂಶಗಳು.

### ಸೂರ್ಯ-ಶುಕ್ರ ಪ್ರಾಣದಶಾ

ರಾಜಪೂಜಾ ಧನಾಧಿಕ್ಯಂ ಸ್ತ್ರೀಪುತ್ರಾದಿ ಭವಂ ಸುಖಮ್।
ಅನ್ನಪಾನಾದಿ ಭೋಗಾಪ್ತಿಃ ಸೂರ್ಯ ಪ್ರಾಣಗತೆ ಸಿತೆ ॥೧೦॥

ಶುಕ್ರ ಪ್ರಾಣದಶಾದಲ್ಲಿ ರಾಜಸನ್ಮಾನ ಧನ ಕೀರ್ತಿಯ ಹೆಚ್ಚಳ, ಸ್ತ್ರೀಪುತ್ರಜನ್ಯ ಸುಖ, ಅನ್ನ ಪಾನಾದಿ ಭೋಗ್ಯ ಪದಾರ್ಥ ಪ್ರಾಪ್ತಿ.

### ಚಂದ್ರ ಸೂಕ್ಷ್ಮ ಚಂದ್ರ ಪ್ರಾಣ ದಶಾ

ಯೋಗ ಸಿದ್ಧಿ ಸಮಾಧಿಶ್ಚ ಜಾಯಾಸೂನ್ವಾದಿಜಂ ಸುಖಮ್।
ಸ್ಯಾದ್ ವಾಸೋವಸುಲಾಭಶ್ಚ ಚಂದ್ರಪ್ರಾಣಗತೆ ವಿದೌ ॥೧೧॥

ಚಂದ್ರ ಪ್ರಾಣದಶಾದಲ್ಲಿ ಯೋಗಸಿದ್ಧಿ ಸಮಾಧಿ ಸ್ತ್ರೀಪುತ್ರ ಜನ್ಯಸುಖ ವಸ್ತ್ರ ಧನಲಾಭಾದಿ ಫಲಗಳು.

### ಚಂದ್ರ-ಮಂಗಳ ಪ್ರಾಣದಶಾ

ಕ್ಷಯಃ ಕಷ್ಟಂ ಬಂಧುನಾಶೋ ರಕ್ತಸ್ರಾವಾನ್ಮಹದ್ ಭಯಮ್।
ಭೂತವೇಶಾದಿ ಜಾಯೆತ ಚಂದ್ರಪ್ರಾಣಗತೆ ಕುಜೆ ॥೧೨॥

ಚಂದ್ರ ಸೂಕ್ಷ್ಮದಶಾದಲ್ಲಿ ಮಂಗಳ ಪ್ರಾಣದಶಾದಲ್ಲಿ ರಾಜಯಕ್ಷ್ಮ (ಕ್ಷಯ) ಕಷ್ಟ, ಬಂಧುನಾಶ ರಕ್ತ ಶ್ರಾವದಿಂದ ಮಹಾಭಯ, ಪ್ರೇತೋಪದ್ರವ

### ಚಂ-ರಾಹು ಪ್ರಾಣ

ಸರ್ಪಾಭೀತಿರ್ವಿಶೇಷಣ ಭೂತಾನಾಮುತ್ಸುಪದ್ರವಃ।
ಧೃಷ್ಟಿಕ್ಕೋಭೋ ಮತಭ್ರಂಶಶ್ಚಂದ್ರ ಪ್ರಾಣಗತೇಪ್ಯಹೌ ॥೧೩॥

ರಾಹು ಪ್ರಾಣ ದಶಾದಲ್ಲಿ ಸರ್ಪಭಯ ವಿಶೇಷ ಹಾಗೂ ಭೂತಾದಿಗಳ

ಉಪದ್ರವ, ಕಣ್ಣಿನ ದೋಷ ಹಾಗೂ ಬುದ್ಧಿ ಭ್ರಂಶ ಆದಿಫಲಗಳು.

### ಚಂದ್ರ - ಗುರು ಪ್ರಾಣದಶಾ

ಧರ್ಮ ಬುದ್ಧಿಃ ಭೂಮ್ಯವಾಪ್ತಿರ್ದೇವ ಬ್ರಾಹ್ಮಣ ಪೂಜನಮ್।
ಸೌಭಾಗ್ಯಂ ಪ್ರಿಯ ದೃಷ್ಟಿಶ್ಚ ಚಂದ್ರ ಪ್ರಾಣಗತೆ ಗು ರೌ ॥೧೪॥

ಧರ್ಮಾಬುದ್ಧಿ ಭೂಲಾಭ ದೇವತಾ ಹಾಗೂ ಬ್ರಾಹ್ಮಣಪೂಜನ ಸೌಭಾಗ್ಯೋದಯ ಪ್ರೀಯ ವ್ಯಕ್ತಿ ದರ್ಶನ.

### ಚಂದ್ರ-ಶನಿ ಪ್ರಾಣ ದಶಾ

ಸಹಸಾ ದೇಹಪತನಂ ಶತ್ರೂಪದ್ರವ ವೇದನಾ।
ಅಂಧತಾ ಚ ಧನ ಪ್ರಾಪ್ತಿಶ್ಚಂದ್ರ ಪ್ರಾಣಗತೆ ಶನೌ ॥೧೫॥

ಶನಿ ಪ್ರಾಣದಶಾದಲ್ಲಿ ಏಕಾಏಕಿ ಶರೀರಪಾತ, ಅಂದರೆ ಸೊರಗುವಿಕೆ (ಕ್ಷೀಣವಾಗು) ಶತ್ರುಗಳಿಂದಲೂ ಉಪದ್ರವದಿಂದ ಕಷ್ಟ-ಅಂಧತ್ವ ಪ್ರಾಪ್ತಿ ಧನಪ್ರಾಪ್ತಿಯು ಇದೆ.

### ಚಂದ್ರ-ಬುಧ ಪ್ರಾಣದಶಾ

ಚಾಮರಚ್ಛತ್ರಸಂ ಪ್ರಾಪ್ತಿ ರಾಜ್ಯಲಾಭೋ ನೃಪಾಲತಃ।
ಸಮತ್ವಂ ಸರ್ವಭೂತೇಷು ಚಂದ್ರಪ್ರಾಣಗತೆ ಬುಧೆ ॥೧೬॥

ಬುಧ ಪ್ರಾಣದಶಾದಲ್ಲಿ ಛತ್ರ-ಚಾಮರ(ರಾಜ ಚಿಹ್ನೆಗಳು)ದ ಪ್ರಾಪ್ತಿ ರಾಜ್ಯಪ್ರಾಪ್ತಿ ಎಲ್ಲ ಪ್ರಾಣಿಗಳೊಂದಿಗೆ ಸಮತ್ವ ಭಾವನೆ.

### ಚಂದ್ರ-ಕೇತು ಪ್ರಾಣದಶಾ

ಶಸ್ತ್ರಾಗ್ನಿರಿಪುಜಾ ಪೀಡಾ ವಿಷಭಿಃ ಕುಷೆ ರೋಗಿತಾ।
ಪುತ್ರ ಸ್ತ್ರೀ ವಿರಹಃ ಕೇತೌ ಚಂದ್ರಪ್ರಾಣಗತೆ ಸತಿ ॥೧೭॥

ಕೇತು ಪ್ರಾಣದಶಾದ ಅವಧಿಯಲ್ಲಿ ಶಸ್ತ್ರ, ಅಗ್ನಿ ಹಾಗೂ ಶತ್ರುಗಳಿಂದ ಪೀಡೆ ವಿಷಭಯ ಉದರರೋಗ ಹಾಗೂ ಪುತ್ರ ಸ್ತ್ರೀ ವಿಯೋಗ.

### ಚಂದ್ರ-ಶುಕ್ರ ಪ್ರಾಣಪದದಶಾ

ಪುತ್ರಮಿತ್ರಕಲಪ್ರಾಪ್ತಿ ವಿದೇಶಾಚ್ಚ ಧನಾಗಮಃ।
ಸುಖಿಸಂಪತ್ತ ರರ್ಥಶ್ಚ ಚಂಧ್ರ ಪ್ರಾಣಗತೆ ಭೃಗೌ ॥೧೮॥

ಶುಕ್ರ ಪ್ರಾಣದಶಾದಲ್ಲಿ ಸ್ತ್ರೀಪುತ್ರ ಮಿತ್ರ ಜನ್ಯ ಸುಖ ವಿದೇಶದಿಂದ ಧನಪ್ರಾಪ್ತಿ ಸರ್ವವಿಧ ಸೌಖ್ಯ, ಧನಾಗಮ.

### ಚಂದ್ರ - ಸೂರ್ಯ ಪ್ರಾಣದಶಾ

ನೈಷ್ಠುರ್ಯ ಕ್ರೋಧಸಂವೃದ್ಧಿಃ ಪ್ರಾಣಹಾನಿರ್ಮನೇರುಜಾ।
ದೇಶ ತ್ಯಾಗೋ ಮಹಾಭೀತಿಶ್ಚಂದ್ರ ಪ್ರಾಣಗತೆ ರಪೌ ॥೧೯॥

ರವಿ ಪ್ರಾಣದಶಾದಲ್ಲಿ ನಿಷ್ಠುರತಾ ಕ್ರೋಧ ವೃದ್ಧಿ ಪ್ರಾಣ ಭಯವುಂಟು- ಮನೋ ವ್ಯಥಾ- ದೇಶ ತ್ಯಾಗ ಪ್ರಸಂಗ ಆದರಿಂದ ಮಹಾ ಭಯ.

## ಮಂಗಳ ಸೂಕ್ತ

### ಮಂಗಳ- ಮಂಗಳ ಪ್ರಾಣದಶಾ

ಭವೇತ್ ಪರಜನಾಥ ಬಂಧಃ ಪರಕೀಯಾಸ್ತ್ರತೋ ಥವಾ।
ನಿಶ್ಚತಂ ಮರಣಾ ಯಾತಿ ಭೌಮ ಪ್ರಾಣಗತೆ ಕುಜೆ ॥೨೦॥

ಮಂಗಲ ಪ್ರಾಣದಶಾದಲ್ಲಿ ಶತ್ರುಗಳ ಮುಖಾಂತರ ಬಂಧನ- ಅಥವಾ ಶತ್ರು ಕೃತ ಅಸ್ತ್ರದಿಂದ ಮರಣವೂ ಸಂಭವ.

### ಮಂಗಳ-ರಾಹು ಪ್ರಾಣದಶಾ

ವಿಚ್ಯುತಿಃ ಸುತ್ಯದಾಶಿ ಭ್ಯೋ ಬಂಧುಪದ್ರವ ಪೀಡನಮ್।
ಪ್ರಾಣತ್ಯಾಗೋ ವಿಷೇಣೈವ ಭೌ ಮಪ್ರಾಣಗತೆ ಪ್ಯಹೌ ॥೨೧॥

ರಾಹು ಪ್ರಾಣ ದಶಾದಲ್ಲಿ ಪುತ್ರ-ಸ್ತ್ರೀಯರಿಂದ ವಿಯೋಗ ಬಂಧುಗಳ ಉಪದ್ರವದಿಂದ ಕಷ್ಟ ವಿಷದ್ವಾರಾ ಪ್ರಾಣ ತ್ಯಾಗ ಆದಿ ಫಲಗಳು.

### ಮಂಗಳ-ಗುರು ಪ್ರಾಣದಶಾ

ದೇವಾರ್ಚನಾರತಿಃ ಸಂಪದ್, ಮಂತ್ರಾನಂಷ್ಠಾನಲೀನತಾ।
ಪುತ್ರಪೌತ್ರ ಸುಖಾವಾಪ್ತಿರ್ಭೌಮ ಪ್ರಾಣಗತೆ ಗುರೌ ॥೨೨॥

ಗುರುವಿನ ಪ್ರಾಣದಶಾ ಕಾಲದಲ್ಲಿ ದೇವ ಪೂಜನದಲ್ಲಿ ಮನಸ್ಸು, ಧನಲಾಭ, ಮಂತ್ರಾನುಷ್ಠಾನದಲ್ಲಿ ತಲ್ಲಿನತೆ ಪುತ್ರ ಪೌತ್ರಾದಿ ಸುಖ.

## ಮಂಗಳ-ಶನಿ ಪ್ರಾಣದಶಾ

ಅಗ್ನಿದಾಹಾದ್ ಭವೇನ್ಮೃತ್ಯುರರ್ಥನಾಶಃ ಪದಚ್ಯುತಿ।
ಬಂಧುಭಿರ್ಭಾಂಧವತ್ವಾತ್ತಿರ್ಭೌಮಪ್ರಾಣಗತೇ ಶನೌ ॥೨೩॥

ಶನಿ ಪ್ರಾಣದಶಾದಲ್ಲಿ ಅಗ್ನಿದಾಹದಿಂದ ಅಪಮೃತ್ಯು ಧನಕ್ಷಯ ಸ್ಥಾನ ಕಸಿದು ಕೊಳ್ಳುವಿಕೆ ಬಂಧುಗಳಿಂದ ಬಂಧುಗಳಲ್ಲಿ ಪರಸ್ಪರ ಪ್ರೇಮ.

## ಮಂಗಳ-ಬುಧ ಪ್ರಾಣದಶಾ

ದಿವ್ಯಾಂಬರ ಸಮುತ್ಪತ್ತಿರ್ದಿ ವ್ಯಾಭರಣ ಭೂಷಿತಾ।
ದಿವ್ಯಾಂ ನಾನಾಯಾಃ ಸಂಪ್ರಾಪ್ತಿರ್ಭೌಮ ಪ್ರಾಣಗತೇ ಬುಧೆ ॥೨೪॥

ಬುಧ ಪ್ರಾಣದಶಾದಲ್ಲಿ ದಿವ್ಯವಸ್ತ್ರ ವಿದ್ಯಭೂಷಣ ದಿವ್ಯಸ್ತ್ರೀ ಲಾಭಾದಿಗಳು ಪ್ರಾಪ್ತಿ

## ಮಂಗಳ-ಕೇತು ಪ್ರಾಣದಶಾ

ಪತನೋತ್ಪಾತಪೀಡಾ ಚ ನೇತ್ರ ಕ್ಪೋಭೋಮಹದ್ ಭಯಮ್।
ಭುಜಂಗಾದ್ ದ್ರವ್ಯ ಹಾನಿಶ್ಚ ಭೌಮ ಪ್ರಾಣಗತೇ ಧ್ವಜೆ ॥೨೫॥

ಕೇತು ಪ್ರಾಣದಶಾದಲ್ಲಿ ವಿಪವಿಕೆ ಬೀಳುವುದರಿಂದ ಕಷ್ಟ ನೇತ್ರ ರೋಗದಿಂದ ಮಹಾಭಯ, ದ್ರವ್ಯಹಾನಿ.

## ಮಂಗಳ-ಶುಕ್ರ ಪ್ರಾಣದಶಾ

ಧನಧಾನ್ಯಾದಿ ಸಂಪತ್ತಲ್ರೋಕ ಪೂಜಾ ಸುಖಾಗಮಃ।
ನಾನಾಭೋಗೈರ್ಭವೇದ್ ರೋಗೋ ಭೌಮ ಪ್ರಾಣಗತೇ ಭೃಗೌ ॥೨೬॥

ಶುಕ್ರ ಪ್ರಾಣದಶಾದಲ್ಲಿ ಧನಧಾನ್ಯ ಸಂಪತ್ತ ಅನ್ಯ ವಿಧ ಸಂಪಾದನೆ, ಜನರಿಂದ ಪೂಜೆ ಕಾರಣ ಸುಖ ವಿವಿಧಭೋಗ ಪ್ರಾಪ್ತಿಯಿಂದ ರೋಗಾದಿ ಭಯ.

## ಮಂಗಳ-ಸೂರ್ಯ ಪ್ರಾಣದಶಾ

ಜ್ವರೋನ್ಮಾದಃ ಕ್ಷಯೋರ್ಥಸ್ಯ ರಾಜನಿಸ್ನೆಹಸಂಭವಃ
ದೀರ್ಘ ರೋಗಶ್ಚ ದಾರಿದ್ರಷ್ಯಾಂ ಭೌಮ ಪ್ರಾಣಗತೇ ರವೌ ॥೨೭॥

ಸೂರ್ಯ ಪ್ರಾಣದಶಾದಲ್ಲಿ ಜ್ವರ ಉನ್ಮಾದ ಧನಕ್ಷಯ, ರಾಜ ವಿರೋಧ,

## ಮಂಗಳ-ಚಂದ್ರ ಪ್ರಾಣದಶಾ

**ಭೋಜನಾದಿ ಸುಖಾವಾಪ್ತಿರ್ವಸ್ತ್ರಾಭರಣತಃ ಸುಖಮ್।**
**ಶೀತೋಷ್ಣ ವ್ಯಾಧಿಪೀಡ ಚ ಭೌಮ ಪ್ರಾಣಗತೆ ವಿದೌ ॥೨೮॥**

ಚಂದ್ರ ಪ್ರಾಣದಶಾದಲ್ಲಿ ಅನ್ನಾದಿಸುಖ ಪ್ರಾಪ್ತಿ ಹಾಗೂ ಅಭೂಷಣದ ಸುಖ ಶೀತ, ಉಷ್ಣ ಪ್ರಯುಕ್ತ ರೋಗದಿಂದ ಕಷ್ಟ – ಈ ಫಲಗಳು.

## ರಾಹು ಸೂಕ್ಷ್ಮದಲ್ಲಿ ರಾಹು ಆದಿ ಪ್ರಾಣದಶಾ

**ಅನ್ನಾಶನೆ ವಿರಕ್ತಿಶ್ಚ ವಿಷ ಭೀತಿಸ್ತಥೈವ ಚ।**
**ಸಹಸಾಧನಾನಾಶಶ್ಚ ರಾಹೋಃ ಪ್ರಾಣತಗೇಪ್ಯಹೌ ॥೨೯॥**

ರಾಹೂ ಸೂಕ್ಷ್ಮ-ರಾಹು ಪ್ರಾಣದಶಾದಲ್ಲಿ ಭೋಜನದಲ್ಲಿ ಅರುಚಿ ವಿಷಭಯ ಹಾಗೂ ಏಕಾಏಕಿ ಧನನಾಶ.

## ರಾಹು-ಗುರು ಪ್ರಾಣದಶಾ

**ಅಂಗಸೌಖ್ಯಂ ವಿನಾರ್ಭಿತಿ ರ್ವಾಹನಾದೇಶ್ಚ ಸಂಗತಿಃ।**
**ನೀಚೈಃ ಕಲಹಸಂಪ್ರಾಪ್ತಿ ರಾಹೋಃ ಪ್ರಾಣಗತೆ ಗುರೌ ॥೩೦॥**

ಗುರು ಪ್ರಾಣ ದಶಾದಲ್ಲಿ- ಶರೀರ ಸುಖ ನಿರ್ಭಯತಾ ವಾಹನ ಪ್ರಾಪ್ತಿ ಹಾಗೂ ನೀಚರೊಡನೆ ಜಗಳ.

## ರಾಹು-ಶನಿ ಪ್ರಾಣದಶಾ

**ಗೃಹದಾಹಃ ಶರೀರೆ ಚ ರೋಗಬಂಧನ ಜಾ ವಿಪತ್।**
**ನೀಚೈರ ಪಹೃತಾ ಸಂಪದ್ ರಾಹೋಃ ಪ್ರಾಣಗತೆ ಶನೌ ॥೩೧॥**

ಶನಿ-ಪ್ರಾಣದಶಾದಲ್ಲಿ ಗೃಹದಾಹ ಶರೀರದಲ್ಲಿ ರೋಗ ಹಾಗೂ ಬಂಧನ ಜನೀತ ಕ್ಲೇಶ ನೀಚರಿಂದ ಸಂಪತ್ತು ಅಪಹರಣ.

## ರಾಹು-ಬುಧ ಪ್ರಾಣದಶಾ

**ಗುರೂಪದೇಶ ವಿಭವೊ ಗುರುಸತ್ಕಾರವರ್ಧನಮ್।**
**ಗುಣಶೀಲಯತಿಶ್ಚಾಪಿ ರಾಹೋಃ ಪ್ರಾಣಗತೆ ಬುಧೆ ॥೩೨॥**

ಬುಧ ಪ್ರಾಣದಶಾದಲ್ಲಿ ಗುರೂಪದೇಶರ್ಜ್ಯಾಣಶ್ವರ್ಯ ಗುರುಗಳ ಸತ್ಕಾರ ಗುಣಶೀಲ ಸಂಯೋಗ.

## ರಾಹು- ಕೇತು ಪ್ರಾಣದಶಾ

ಸ್ತ್ರೀಪುತ್ರಾದಿ ವಿರೋಧಶ್ಚ ಗೃಹಾನ್ನಿಷ್ಕ್ರಮಣಾ ತಥಾ।
ಸಾಹಸಾತ್ ಕಾರ್ಯಹಾನಿಶ್ಚ ರಾಹೋಃ ಪ್ರಾಣಗತೇ ಧ್ವಜೆ ॥೩೩॥

ಕೇತು ಪ್ರಾಣದಶಾ ಬಂದಾಗ ಸ್ತ್ರೀಪುತ್ರರ ವಿರೋಧ ಮನೆ ಬಿಟ್ಟು ಓಡಿ ಹೋಗುವಿಕೆ (ಗೃಹತ್ಯಾಗ) ಸಾಹಸ ಕಾರ್ಯದಲ್ಲಿ ಕಾರ್ಯ ಹಾನಿ.

## ರಾಹು-ಶುಕ್ರ ಪ್ರಾಣದಶಾ

ಛತ್ರವಾಹನ ಸಂಪತ್ತಿಃ ಸರ್ವಾರ್ಥ ಫಲಸಂಚಯಃ।
ಶಿವಾರ್ಚನ ಗೃಹಾರಂಭೊ ಪ್ರಾಣಗತೆ ಭೃಗೌ ॥೩೪॥

ಶುಕ್ರ ಪ್ರಾಣದಶಾದಲ್ಲಿ ಛತ್ರ ವಾಹನ ಯುಕ್ತ ಸಂಪತ್ತಿನಲ್ಲಿ ಕಾರ್ಯದಲ್ಲಿ ಸಫಲತೆ ಶಿವಪೂಜೆ ಗೃಹ ನಿರ್ಮಾಣಾ ದಿ ಕಾರ್ಯಗಳು.

## ರಾಹು-ಸೂರ್ಯ ಪ್ರಾಣದಶಾ

ಅರ್ಶಃ ಪ್ರಭೃತಿತೋ ಭೀತಿಃ ರಾಜ್ಯೋಪದ್ರವ ಸಂಭವಃ
ಚತುಷ್ಪಾದಾದಿ ಹಾನಿಶ್ಚ ರಾಹೋಃ ಪ್ರಾಣಗತೆ ರವೌ ॥೩೫॥

ಸೂರ್ಯ ಪ್ರಾಣದಶಾದಲ್ಲಿ ಅರ್ಶ ಆದಿ ರೋಗಗಳು ಹಾಗೂ ಅದರ ಭಯ ರಾಜರ ಮುಖಾಂತರ ಕಷ್ಟ ಪಶು ಹಾನಿ ಇತ್ಯಾದಿ ಫಲ.

## ರಾಹು-ಚಂದ್ರ ಪ್ರಾಣದಶಾ

ಸೌಮನಸ್ಯಂ ಚ ಸದ್ ಬುದ್ಧಿಃ ಸತ್ಕಾರೋ ಗುರುದರ್ಶನಮ್।
ಪಾಪಭೀತಿಮೌನಃ ಸೌಖ್ಯಂ ರಾಹೋಃ ಪ್ರಾಣಗತೆ ವಿಧೌ ॥೩೬॥

ಚಂದ್ರ ಪ್ರಾಣದಶಾದಲ್ಲಿ- ವಶಕ್ಕೆ ಮನಸ್ಸು ಹಾಗೂ ಬುದ್ಧಿ ಸನ್ಮಾನ ರಾಜದರ್ಶನ ಪಾಪದಿಂದ ಭಯ ಮಾನಸಿಕ ಸುಖ.

## ರಾಹು-ಮಂಗಳ ಪ್ರಾಣದಶಾ

ಚಾಂಡಾಲಾಗ್ನಿವಶಾದ್ ಭೀತಿಃ ಸ್ವಪದಚ್ಯುತಿರಾಪದಃ।
ಮಾಲಿನ್ಯಂ ಶ್ವಾದಿವೃತ್ತಿಶ್ಚ ರಾಹೋಃ ಪ್ರಾಣಗತೆ ಕುಜೆ ॥೩೭॥

ಮಂಗಳ ಪ್ರಾಣದಶಾದಲ್ಲಿ ಚಾಂಡಾಲರಿಂದ ಹಾಗೂ ಅಗ್ನಿಯಿಂದ ಭಯ ಅವನತಿ, ಆಪತ್ತು, ಮಾಲಿನ್ಯ ಹಾಗೂ ನಾಯಿಯ ತರಹ ನೀಚವೃತ್ತಿ- ಗುರು

ಸೂಕ್ಷ್ಮದಲ್ಲಿ ಗುರು ಪ್ರಾಣದಶಾದಿಗಳು.

### ಗುರು-ಗುರು ಪ್ರಾಣದಶಾ

ಮೊದವೃದ್ಧಿರ್ಧನಾಧಿಕ್ಯಯಗ್ನಿಹೊತ್ರಂ ಶಿವಾರ್ಚನಮ್।
ವಾಹನಂ ಛತ್ರಸಂಯುಕ್ತಂ ಜೀವಪ್ರಾಣಗತೆ ಗುರೌ ॥೩೮॥

ಗುರು ಪ್ರಾಣದಶಾದಲ್ಲಿ ಹರ್ಷ ವೃದ್ಧಿ ಧನಾಧಿಕತಾ ಅಗ್ನಿಹೋತ್ರ ಶಿವಪೂಜನ ಛತ್ರಯುಕ್ತ ವಾಹನ (ರಾಜ ವೈಭವ) ಪ್ರಾಪ್ತಿ.

### ಗುರು-ಶನಿ ಪ್ರಾಣದಶಾ

ವ್ರತಭಂಗೋ ಮನಃಕ್ಲೇಶೋ ವಿದೇಶೆ ವಸುನಾಶನಮ್।
ವಿರೋಧೋ ಬಾಂಧವೈಃ ಸಾರ್ಧ ಗುರೋಃ ಪ್ರಾಣಗತೆ ಶನೌ

ಶನಿ ಪ್ರಾಣದಶಾದಲ್ಲಿ ವ್ರತ ಭಂಗ ಮಾನಸಿಕ ಕಷ್ಟ, ವಿದೇಶದಲ್ಲಿ ಧನಕ್ಷಯ ಬಂಧುಗಳ ಜತೆ ವಿರೋಧ ಆದಿ ಫಳಗಳು.

### ಗುರು-ಬುಧ ಪ್ರಾಣದಶಾ

ಸದ್ ವಿದ್ಯಾಮತವೃದ್ಧಿಶ್ಚ ಸಮ್ಮಾನಮತ ಲೋಕತಃ।
ಧನಸ್ತ್ರೀಸುತಸೌಖ್ಯಾಪ್ತಿರ್ಜೀವ ಪ್ರಾಣಗತೆ ವಿದಿ ॥೪೦॥

ಬುಧ ಪ್ರಾಣದಶಾದಲ್ಲಿ ಸದ್‌ವಿದ್ಯೆ ಹಾಗೂ ಬುದ್ಧಿಯ ವೃದ್ಧಿ ಸಮಾಜದಿಂದ ಸನ್ಮಾನಾದಿ ಧನಸ್ತ್ರೀಪುತ್ರ ಸುಖ.

### ಗುರು-ಕೇತು ಪ್ರಾಣದಶಾ

ಜ್ಞಾನಂ ವಿಭವ ಪಾಂಡಿತ್ಯಂ ಶಸ್ತ್ರಬೋಧಃ ಶಿವಾರ್ಚನಮ್।
ಅಗ್ನಿಹೊತ್ರಂ ಗುರೋರ್ಭಕ್ತಿರ್ಗುರೋಃ ಪ್ರಾಣಗತೆ ಧ್ವಜೆ ॥೪೧॥

ಕೇತುವಿನ ಪ್ರಾಣದಶಾದಲ್ಲಿ ಜ್ಞಾನ, ಐಶ್ವರ್ಯ, ಪಾಂಡಿತ್ಯ ಶಾಸ್ತ್ರ ಬೋಧನೆ, ಶಿವಾರ್ಚನೆ ಅಗ್ನಿ ಹೋತ್ರಾದಿಗಳೊಂದಿಗೆ ಗುರು ಭಕ್ತಿ ವೃದ್ಧಿಸುತ್ತದೆ.

### ಗುರು-ಶುಕ್ರ ಪ್ರಾಣದಶಾ

ರೋಗಾನ್ಮುಕ್ತಿಃ ಸುಖಂ ಭೋಗೊ ಧನಧಾನ್ಯಸಮಾನಮಃ।
ಪುತ್ರದಾರಾದಿಜಂ ಸೌಖ್ಯಂ ಗುರೋಃ ಪ್ರಾಣಗತೆ ಭೃಗೌ ॥೪೨॥

ಶುಕ್ರ ಪ್ರಾಣದಶಾದಲ್ಲಿ ರೋಗದಿಂದ ವಿಮುಕ್ತಿ ಸುಖ ಭೋಗ ಧನಧಾನ್ಯ

ಸಮೃದ್ಧಿ ಹಾಗೂ ಪುತ್ರ ಸ್ತ್ರೀಸೌಖ್ಯಪ್ರಾಪ್ತಿ

### ಗುರು-ಸೂರ್ಯ ಪ್ರಾಣದಶಾ

**ವಾತಪಿತ್ತಾಪ್ರಕೋಪಶ್ಚ ಶ್ಲೆಷ್ಮೋದ್ರೇಕಸ್ತಂ ದಾರುಣಃ।**
**ರಸವ್ಯಾಧಿಕೃತಂ ಶೂಲಂ ಗುರೋಃ ಪ್ರಾಣಗತೆ ರವೌ ॥೪೩॥**

ಸೂರ್ಯ ಪ್ರಾಣದಶಾದಲ್ಲಿ ವಾತಪಿತ್ತ ಕಫಾದಿಕ್ಯ ಹಾಗೂ ದಾರುಣತೆ (ಭಯಂಕರ) ಶ್ಲೇಷ್ಮ ಅತ್ಯಧಿಕ ರಸವ್ಯಾದಿ ಜನ್ಯ ಶೂಲ ರೋಗ-

### ಗುರು-ಚಂದ್ರ ಪ್ರಾಣದಶಾ-

**ಛತ್ರಚಾಮರ ಸಂಯುಕ್ತಂ ವೈಭವಂ ಪುತ್ರಸಂಪದಃ।**
**ನೇತ್ರಕುಕ್ಷಿಗತಾ ಪೀಡಾ ಗುರೋಃ ಪ್ರಾಣಗತೆ ವಿಧೌ ॥೪೪॥**

ಚಂದ್ರ ಪ್ರಾಣ ದಶಾದಲ್ಲಿ ರಾಜ ಚಿಹ್ನೆಗಳಾದ ಛತ್ರ, ಚಾಮರಾದಿಯುಕ್ತ ಐಶ್ವರ್ಯ ಪ್ರಾಪ್ತಿ, ಪುತ್ರ ಹಾಗೂ ಸಂಪತ್ತಿನ ಲಾಭ, ನೇತ್ರ ಹಾಗೂ ಉದರ ರೋಗ.

### ಗುರು-ಮಂಗಳ ಪ್ರಾಣದಶಾ

**ಸ್ತ್ರೀಜನ್ಮಾಚ್ಚ ವಿಷವಾಪ್ತಿರ್ಬಂಧನಂ ಚಾತಿನಿಗ್ರಹಃ।**
**ದೇಶಾಂತರಗಮೇ ಭ್ರಾಂತಿರ್ಗುರೋಃ ಪ್ರಾಣಗತೆ ಕುಜೆ ॥೪೫॥**

ಮಂಗಳ ಪ್ರಾಣದಶಾದಲ್ಲಿ ಸ್ತ್ರೀ ವರ್ಗದಿಂದ ವಿಷ ಪ್ರಾಶನ ಭಯ (ವಿಷ ಹಾಕುವ ಭಯ) ಬಂಧನ, ಜೈಲು ವಾಸ, ಕಠೋರಶಿಕ್ಷೆ ದೇಶಾಂತರಗಮನ, ಮತಿಭ್ರಾಂತಿ ಆದಿ ಫಲ.

### ಗುರು-ರಾಹು ಪ್ರಾಣದಶಾ

**ವ್ಯಾಧಿಭಿಃ ಪರಿಭೂತಿಃ ಸ್ಯಾಚ್ಚೌರೈರಪಹೃತಂ ವಸು।**
**ಸರ್ಪವೃಶ್ಚಕದಂಶಶ್ಚ ಗುರೋಃ ಪ್ರಾಣಗತೆಪ್ಯಹೌ ॥೪೬॥**

ರಾಹು ಪ್ರಾಣದಶಾದಲ್ಲಿ ವ್ಯಾಧಿಯಿಂದ ಪರಾಭವ, ಕಳ್ಳರಿಂದ ಧನಾಪಹರಣ, ಸರ್ಪ, ವೃಶ್ಚಿಕ (ಚೇಳು) ಆದಿ ವಿಷ ಜಂತುಗಳಿಂದ ಕಚ್ಚುವಿಕೆ ಆದಿ ಫಲ.

### ಶನಿ-ಸೂಕ್ಷ್ಮ-ಶನಿ ಪ್ರಾಣದಶಾ

**ಜ್ವರೇಣ ಜ್ವಲಿತಾ ಕಾಂತಿಃ ಕುಷ್ಟರೋಗೋದ ರಾದಿರುಕ್।**
**ಜಲಾಗ್ನಿಕೃತಮೃತ್ಯುಃ ಸ್ಯಾಚ್ಛನಿ ಪ್ರಾಣಗತೆ ಶನೌ ॥೪೭॥**

ಶನಿ ಸೂಕ್ಷ್ಮ-ಶನಿ ಪ್ರಾಣಗತವಾದಾಗ ಜ್ವರದಿಂದ ವಿವರ್ಣತೆ (ಕಾಂತಿಹೀನತ್ವ) ವಿಷಣ್ಣತೆ ಕುಷ್ಠ ಅಥವಾ ಉದರ ರೋಗದ ಪ್ರಕೋಪ ಜಲ ಅಗ್ನಿಗಳಿಂದ ಮರಣ.

### ಶನಿ-ಬುಧ ಪ್ರಾಣದಶಾ

ಧನಂ ಧಾನ್ಯಂ ಚ ಮಾಂಗಲ್ಯಂ ವ್ಯವಹಾರಾಭ ಪೂಜನಮ್।
ದೇವ ಬ್ರಾಹ್ಮಣ ಶಕ್ತಿಶ್ಚ ಶನೇಃ ಪ್ರಾಣಗತೇ ಬುಧೇ ॥೪೮॥

ಬುಧ ಪ್ರಾಣದಶಾದಲ್ಲಿ ಧನಧಾನ್ಯ ವೃದ್ದಿ ಕಲ್ಯಾಣ ವೃದ್ದಿ ವ್ಯಾಪಾರದಲ್ಲಿ ಲಾಭ, ದೇವ ಬ್ರಾಹ್ಮಣರಲ್ಲಿ ಭಕ್ತಿ ಆದಿ ಫಲ.

### ಶನಿ- ಕೇತು ಪ್ರಾಣದಶಾ

ಮೃತ್ಯುವೇದನವದ್ ದುಃಖಂ ಭೂತೋಪದ್ರವ ಸಂಭವಃ।
ಪರದಾರಾಭಿಭೂತತ್ವಂ ಶನೇಃ ಪ್ರಾಣಗತೇ ಧ್ವಜೆ ॥೪೯॥

ಕೇತು ಪ್ರಾಣದಶಾದಲ್ಲಿ ಮರಣ ಸದೃಶ್ಯ ವೇದನೆ ದುಃಖ, ಭೂತ ಪ್ರೇತೋಪದ್ರವ ಪರಸ್ತ್ರೀಕೃತ-ಮಾಟಮಂತ್ರಾದಿಗಳ ತೊಂದರೆ.

### ಶನಿ-ಶುಕ್ರ ಪ್ರಾಣದಶಾ

ಪುತ್ರಾರ್ಥವಿಭವೈಃ ಸೌಖ್ಯಂ ಕ್ಷೇತಿಪಾನ್ಮಾನಜಂ ಸುಖಮ್।
ಅಗ್ನಿ ಹೊತ್ರಂ ವಿವಾಹಶ್ಚ ಶನೇಃ ಪ್ರಾಣಗತೇ ಭೃಗೌ ॥೫೦॥

ಶುಕ್ರಪ್ರಾಣದಶಾದಲ್ಲಿ ಪುತ್ರ ಧನ ಹಾಗೂ ಐಶ್ವರ್ಯ ಸುಖ ರಾಜಸನ್ಮಾನ ಜನ್ಯಸುಖ, ಅಗ್ನಿಹೋತ್ರ, ವಿವಾಹ ಈ ಫಲಗಳು.

### ಶನಿ- ಸೂರ್ಯ ಪ್ರಾಣದಶಾ

ಅಕ್ಷೀಡಾ ಶಿರೋವ್ಯಾಧಿಃ ಸರ್ಪ ಶತ್ರುಭಯಂ ಭವೇತ್।
ಅರ್ಥಹಾನಿರ್ಮಹಾಕ್ಲೇಶಃ ಶನೇಃ ಪ್ರಾಣಗತೇ ರವೌ ॥೫೦॥

ರವಿ ಪ್ರಾಣದಶಾದಲ್ಲಿ ನೇತ್ರ ರೋಗ ಶಿರೋವೇದನೆ, ಕ್ಲೇಶ ಸರ್ಪ ಹಾಗೂ ಶತ್ರುಭಯ, ಧನಕ್ಷಯ ಹಾಗೂ ಮಹಾ ಕಷ್ಟ ಈ ಫಲಗಳು.

### ಶನಿ-ಚಂದ್ರ ಪ್ರಾಣದಶಾ

ಆರೋಗ್ಯಂ ಪುತ್ರಲಾಭಶ್ಚ ಶಾಂತಿಪೌಷ್ಟಿಕವರ್ಧನಮ್।
ದೇವ ಬ್ರಾಹ್ಮಣ ಭಕ್ತಿಶ್ಚ ಶನೇಃ ಪ್ರಾಣಗತೇ ವಿಧೌ ॥೫೨॥

ಚಂದ್ರ ಪ್ರಾಣದಶಾವಲ್ಲಿ ಆರೋಗ್ಯ ಸುಖ ಪುತ್ರ ಸುಖ, ಮನಶಾಂತಿ ಹಾಗೂ ಪುಷ್ಟಿ, ತುಷ್ಟಿಯ ವೃದ್ಧಿ ದೇವತೆ ಬ್ರಾಹ್ಮಣರಲ್ಲಿ ಭಕ್ತಿ.

### ಶನಿ-ಮಂಗಳ ಪ್ರಾಣದಶಾ

**ಗುಲ್ಮರೋಗಃ ಶತ್ರುಭೀತಿರ್ಮೃಗಯಾ ಪ್ರಾಣನಾಶನಮ್।**
**ಭಂಜಗಾನಲತೋ ಭೀತಿಃ ಶನೇಃ ಪ್ರಾಣಗತೆ ಕುಜೆ ॥೫೩॥**

ಮಂಗಳ ಪ್ರಾಣದಶಾ ಗುಲ್ಮರೋಗ ಶತ್ರುಭಯ, ಬೇಟೆಯಲ್ಲಿ ಮೃತ್ಯುಭಯ ಸರ್ಪ ಅಗ್ನಿ ಭಯಾದಿಗಳು.

### ಶನಿ-ರಾಹು ಪ್ರಾಣದಶಾ

**ದೇಶತ್ಯಾಗೋ ನೃಪಾದ್ ಭೀತಿರ್ಮೋಹನಂ ವಿಷಭಕ್ಷಣಮ್।**
**ವಾತಪಿತ್ತಕೃತಾ ಪೀಡಾ ಶನೇಃ ಪ್ರಾಣಗತೆಽಹೌ ॥೫೪॥**

ರಾಹು ಪ್ರಾಣದಶಾದಲ್ಲಿ ದೇಶತ್ಯಾಗ ರಾಜಭಯ ಮೋಹನಕ್ಕೊಳಗಾಗುವುದು ವಿಷ ಭಕ್ಷಣ, ವಾತ ಪಿತ್ತಜನ್ಯ ಕಷ್ಟ.

### ಶನಿ-ಗುರು ಪ್ರಾಣದಶಾ

**ಸೇನಾಪತ್ಯಂ ಭೂಮಿಲಾಭಃ ಸಂಗಮಃ ಸ್ವಜನೈಃ ಸಹ**
**ಗೌರವಂ ನೃಪಸಮ್ಮಾನಂ ಶನ್ಯೆ ಪ್ರಾಣಗತೆ ಗುರೌ ॥೫೫॥**

ಗುರು ಪ್ರಾಣದಶಾದಲ್ಲಿ ಸೇನಾಪತಿತ್ವ ಲಭ್ಯ ಭೂಮಿಯ ಆರ್ಜನೆ, ಸ್ವಜನರ ಸಂಗ, ಗೌರವ ರಾಜ ಸನ್ಮಾನಾದಿಗಳು.

### ಬುಧ ಸೂಕ್ಷ್ಮ- ಬುಧ ಪ್ರಾಣದಶಾ

**ಆರೋಗ್ಯಂ ಸುಖಸಂಪತ್ತಿರ್ಧರ್ಮ ಕರ್ಮಾದಿಸಾಧನಮ್।**
**ಸಮತ್ವಂ ಸರ್ವ ಭೂತೇಷು ವಿದಃ ಪ್ರಾಣಗತೆ ಬುಧೆ ॥೫೬॥**

ಬುಧ- ಬುಧ ಪ್ರಾಣದಶಾದಲ್ಲಿ ಶಾರೀರಿಕ ಆರೋಗ್ಯ, ಸುಖ, ಸಂಪತ್ತು, ಧರ್ಮಕರ್ಮದಲ್ಲಿ ಸದಾ ಪ್ರವೃತ್ತಿ ಎಲ್ಲ ಜೀವರಲ್ಲಿ ಸಮತ್ವ ಭಾವನೆ ಕಾಣುವಿಕೆ.

### ಬುಧ-ಕೇತು ಪ್ರಾಣದಶಾ

**ದಹನಂ ಚೌರವಿದ್ಯಾಂಗ ಪರಮಾಧಿರ್ವಿಷಾಶನಮ್।**
**ದೇಹಾಂತಕರಣಾ ದುಃಖಂ ಬುಧ ಪ್ರಾಣಗತೆ ಧ್ವಜೆ ॥೫೭॥**

## ಮಕರಾಂಶೀಯ ಮಿಥುನದಶಾ 9 ಬುಧಾದಿ ಅಂತರ್ದಶಾ

| ರಾಶಿ | ಮಿಥುನ | ಮಕರ | ಕುಂಭ | ಮೀನ | ವೃಶ್ಚಿಕ | ತುಲಾ | ಕನ್ಯಾ | ಕರ್ಕ | ಸಿಂಹ | ಯೋಗ |
|---|---|---|---|---|---|---|---|---|---|---|
| ದಶೇಶ | ಬು | ಶ | ಶ | ಗು | ಮ | ಶು | ಬು | ಚಂ | ಸಿಂಹ | ಯೋಗ |
| ವರ್ಷ | 0 | 0 | 0 | 1 | 0 | 1 | 0 | 2 | 0 | 9 |
| ಮಾಸ | 11 | 5 | 5 | 0 | 8 | 8 | 11 | 2 | 6 | |
| ದಿವಸ | 13 | 2 | 2 | 21 | 26 | 9 | 13 | 20 | 10 | |
| ಘಟಿ | 3 | 28 | 28 | 10 | 49 | 52 | 3 | 28 | 35 | |
| ಪಳ | 32 | 14 | 14 | 35 | 25 | 56 | 32 | 14 | 18 | |

## ಕುಂಭಾಂಶೀಯ ವೃಷಭದಶಾ 16ವ ಶುಕ್ರಾದಿ ಅಂತರ್ದಶಾ

| ರಾಶಿ | ವೃಷಭ | ಮೇಷ | ಮಿಥುನ | ಕುಂಭ | ಮಕರ | ಧನು | ಮೇಷ | ವೃಷಭ | ಮಿಥುನ | ಯೋಗ |
|---|---|---|---|---|---|---|---|---|---|---|
| ವರ್ಷ | 3 | 1 | 1 | 0 | 0 | 1 | 1 | 3 | 11 | 16 |
| ಮಾಸ | 1 | 4 | 11 | 9 | 9 | 11 | 4 | 1 | 8 | - |
| ದಿವಸ | 0 | 5 | 3 | 7 | 7 | 3 | 5 | 0 | 24 | - |
| ಘಟಿ | 21 | 47 | 58 | 35 | 35 | 58 | 47 | 21 | 34 | - |
| ಪಳ | 4 | 0 | 3 | 25 | 25 | 33 | 0 | 41 | 42 | - |

## ಕುಂಭಾಂಶೀಯ ಮೇಷದಶಾ 7 ಭೌಮಾದಿ ಅಂತರ್ದಶಾ

| ರಾಶಿ | ಮೇಷ | ಮೀನ | ಕುಂಭ | ಮಕರ | ಧನು | ಮೇಷ | ವೃಷಭ | ಮಿಥುನ | ವೃಷಭ | ಯೋಗ |
|---|---|---|---|---|---|---|---|---|---|---|
| ದಶೇಶ | ಮಂ | ಗುರು | ಶ | ಶ | ಗು | ಮ | ಶು | ಬು | ಶು | – |
| ವರ್ಷ | 0 | 0 | 0 | 0 | 0 | 0 | 1 | 0 | 1 | 7 |
| ತಿಂಗಳು | 7 | 10 | 4 | 4 | 10 | 7 | 4 | 9 | 4 | – |
| ದಿವಸ | 2 | 3 | 1 | 1 | 3 | 2 | 5 | 3 | 5 | – |
| ಘಟಿ | 31 | 36 | 26 | 26 | 36 | 31 | 47 | 15 | 47 | – |
| ಪಳಾ | 48 | 52 | 45 | 45 | 52 | 48 | 0 | 10 | 0 | – |

## ಕುಂಭಾಂಶೀಯ ಮೀನದಶಾ 10 ಗುರು ಆದಿ ಅಂತರ್ದಶಾ

| ರಾಶಿ | ಮೀನ | ಕುಂಭ | ಮಕರ | ಧನು | ಮೇಷ | ವೃಷಭ | ಮಿಥುನ | ವೃಷಭ | ಮೇಷ | ಯೋಗ |
|---|---|---|---|---|---|---|---|---|---|---|
| ದಶೇಶ | ಮಂ | ಶ | ಶ | ಗು | ಮ | ಶು | ಬು | ಶು | ಮ | |
| ವರ್ಷ | 1 | 0 | 0 | 1 | 0 | 1 | 1 | 1 | 0 | 10 |
| ತಿಂಗಳು | 2 | 5 | 5 | 2 | 10 | 11 | 1 | 11 | 10 | |
| ದಿವಸ | 13 | 23 | 23 | 13 | 3 | 3 | 0 | 3 | 3 | |
| ಘಟಿ | 44 | 29 | 29 | 44 | 36 | 5 | 1 | 5 | 36 | |
| ಪಳಾ | 6 | 38 | 38 | 6 | 52 | 33 | 42 | 33 | 52 | |

## ಕುಂಭಾಂಶೀಯ ಕುಂಭ ದಶಾ 4 ಶನ್ಯಾದಿ ಅಂತರ್ದಶಾ

| ರಾಶಿ | ಕುಂಭ | ಮಕರ | ಧನು | ಮೇಷ | ವೃಷಭ | ಮಿಥುನ | ವೃಷಭ | ಮೇಷ | ಮೀನ | ಯೋಗ |
|---|---|---|---|---|---|---|---|---|---|---|
| ದಶೇಶ | ಶ | ಶ | ಗು | ಮ | ಶು | ಬು | ಶು | ಮ | ಗು | |
| ವರ್ಷ | 0 | 0 | 0 | 0 | 0 | 0 | 0 | 0 | 0 | 4 |
| ತಿಂಗಳು | 2 | 2 | 5 | 4 | 9 | 5 | 9 | 4 | 5 | – |
| ದಿವಸ | 9 | 9 | 23 | 1 | 7 | 6 | 7 | 1 | 23 | – |
| ಘಟಿ | 23 | 23 | 29 | 26 | 35 | 8 | 35 | 20 | 29 | – |
| ಪಳಾ | 52 | 52 | 38 | 45 | 25 | 40 | 25 | 45 | 38 | – |

## ಕುಂಭಾಂಶೀಯ ಮಕರ ದಶಾ 4 ಶನ್ಯಾದಿ ಅಂತರ್ದಶಾ

| ರಾಶಿ | ಮಕರ | ಮೇಷ | ವೃಷಭ | ಮಿಥುನ | ವೃಷಭ | ಮೇಷ | ಮೀನ | ಕುಂಭ | ಯೋಗ | |
|---|---|---|---|---|---|---|---|---|---|---|
| ದಶೇಶ | ಶ | ಗು | ಮ | ಶು | ಬು | ಶು | ಮಂ | ಗು | ಶನಿ | |
| ವರ್ಷ | 0 | 0 | 0 | 0 | 0 | 0 | 0 | 0 | 0 | 4 |
| ಮಾಸ | 2 | 5 | 4 | 9 | 5 | 9 | 4 | 5 | 2 | - |
| ದಿವಸ | 9 | 23 | 1 | 37 | 6 | 37 | 1 | 23 | 9 | – |
| ಘಟಿ | 23 | 29 | 26 | 35 | 8 | 35 | 26 | 29 | 23 | – |
| ಪಳ | 52 | 38 | 45 | 25 | 40 | 25 | 45 | 38 | 52 | – |

## ಕುಂಭಾಂಶೀಯ ಧನುದಶಾ 10 ಗುರು ಆದಿ ಅಂತರ್ದಶಾ

| ರಾಶಿ | ಧನು | ಮೇಷ | ವೃಷಭ | ಮಿಥುನ | ವೃಷಭ | ಮೇಷ | ಮೀನ | ಕುಂಭ | ಮಕರ | ಯೋಗ |
|---|---|---|---|---|---|---|---|---|---|---|
| ದಶೇಶ | ಗು | ಮ | ಶು | ಬು | ಶು | ಮ | ಗು | ಶ | ಶ | |
| ವರ್ಷ | 1 | 0 | 1 | 1 | 1 | 0 | 1 | 0 | 0 | 10 |
| ತಿಂಗಳು | 2 | 10 | 11 | 1 | 11 | 10 | 2 | 5 | 5 | – |
| ದಿವಸ | 13 | 3 | 3 | 0 | 3 | 3 | 13 | 23 | 23 | – |
| ಘಟಿ | 44 | 36 | 58 | 21 | 58 | 36 | 44 | 29 | 29 | – |
| ಪಳ | 6 | 52 | 33 | 42 | 33 | 52 | 6 | 38 | 38 | – |

## ಕುಂಭಾಂಶೀಯ ಮೇಷದಶಾ 7 ಭೌಮಾದಿ ಅಂತರ್ದಶಾ

| ರಾಶಿ | ಮೇಷ | ವೃಷಭ | ಮಿಥುನ | ವೃಷಭ | ಮೇಷ | ಮೀನ | ಕುಂಭ | ಮಕರ | ಧನು | ಯೋಗ |
|---|---|---|---|---|---|---|---|---|---|---|
| ದಶೇಶ | ಮಂ | ಶು | ಬು | ಶು | ಮಂ | ಗುರು | ಶ | ಶ | ಗು | |
| ವರ್ಷ | 0 | 1 | 0 | 1 | 0 | 0 | 0 | 0 | 0 | 7 |
| ತಿಂಗಳು | 7 | 4 | 9 | 4 | 7 | 10 | 4 | 4 | 10 | – |
| ದಿವಸ | 2 | 5 | 3 | 5 | 2 | 3 | 1 | 1 | 3 | – |
| ಘಟಿ | 31 | 47 | 16 | 47 | 31 | 36 | 26 | 26 | 36 | – |
| ಪಳ | 48 | 0 | 10 | 0 | 48 | 52 | 45 | 45 | 52 | – |

## ಕುಂಭಾಂಶೀಯ ವೃಷಭ ದಶಾ 16 ಶುಕ್ರಾದಿ ಅಂತರ್ದಶಾ

| ರಾಶಿ | ವೃಷಭ | ಮಿಥುನ | ವೃಷಭ | ಮೇಷ | ಮೀನ | ಕುಂಭ | ಮಕರ | ಧನು | ಮೇಷ | ಯೋಗ |
|---|---|---|---|---|---|---|---|---|---|---|
| ದಶೇಶ | ಶು | ಬು | ಶು | ಮ | ಗು | ಶ | ಶ | ಗು | ಮ | |
| ವರ್ಷ | 3 | 1 | 3 | 1 | 1 | 0 | 0 | 1 | 1 | 16 |
| ತಿಂಗಳು | 1 | 8 | 1 | 4 | 11 | 9 | 9 | 11 | 4 | – |
| ದಿವಸ | 0 | 24 | 0 | 5 | 3 | 7 | 7 | 3 | 5 | – |
| ಘಟಿ | 21 | 34 | 21 | 47 | 58 | 35 | 35 | 58 | 47 | – |
| ಪಳ | 41 | 42 | 41 | 0 | 33 | 25 | 25 | 33 | 0 | – |

## ಕುಂಭಾಂಶೀಯ ಮಿಥುನ ದಶಾ 9 ಬುಧಾದಿ ಅಂತರ್ದಶಾ

| ರಾಶಿ | ಮಿಥುನ | ವೃಷಭ | ಮೀನ | ಕುಂಭ | ಮಕರ | ಧನು | ಮೇಷ | ವೃಷಭ | ಯೋಗ | |
|---|---|---|---|---|---|---|---|---|---|---|
| ದಶೇಶ | ಬು | ಶು | ಮಂ | ಗು | ಶ | ಶ | ಗು | ಮ | ಶು | |
| ವರ್ಷ | 0 | 1 | 0 | 1 | 0 | 0 | 1 | 0 | 1 | 9 |
| ತಿಂಗಳು | 11 | 8 | 9 | 1 | 5 | 5 | 1 | 9 | 8 | |
| ದಿವಸ | 21 | 24 | 3 | 0 | 6 | 6 | 0 | 3 | 24 | |
| ಘಟಿ | 19 | 34 | 15 | 21 | 8 | 8 | 21 | 15 | 34 | |
| ಪಳ | 32 | 42 | 10 | 42 | 40 | 40 | 42 | 10 | 42 | |

## ಮೀನಾಂಶೀಯ ಕರ್ಕದಶಾ 21 ಚಂದ್ರಾದಿ ಅಂತರ್ದಶಾ

| ರಾಶಿ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ | ಯೋಗ |
|---|---|---|---|---|---|---|---|---|---|---|
| ದಶೇಶ | ಚ | ರ | ಬು | ಶು | ಮ | ಗು | ಶ | ಶ | ಗು | |
| ವರ್ಷ | 5 | 1 | 2 | 3 | 1 | 2 | 0 | 0 | 2 | 21 |
| ತಿಂಗಳು | 1 | 2 | 2 | 10 | 8 | 5 | 11 | 11 | 5 | – |
| ದಿವಸ | 16 | 19 | 11 | 26 | 15 | 9 | 21 | 21 | 9 | – |
| ಘಟಿ | 2 | 32 | 9 | 30 | 20 | 4 | 37 | 37 | 4 | – |
| ಪಳ | 47 | 5 | 47 | 42 | 56 | 11 | 41 | 41 | 11 | – |

## ಮೀನಾಂಶೀಯ ಸಿಂಹದಶಾ 5 ಸೂರ್ಯಾದಿ ಅಂತರ್ದಶಾ

| ರಾಶಿ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನ | ಮಕರ | ಕುಂಭ | ಮೀನ | ಕರ್ಕ | ಯೋಗ |
|---|---|---|---|---|---|---|---|---|---|---|
| ದಶೇಶ | ರ | ಬು | ಶು | ಮ | ಗು | ಶ | ಶ | ಗು | ಚಂ | |
| ವರ್ಷ | 0 | 0 | 0 | 0 | 0 | 0 | 0 | 0 | 1 | 5 |
| ತಿಂಗಳು | 3 | 6 | 11 | 4 | 6 | 2 | 2 | 6 | 2 | – |
| ದಿವಸ | 14 | 8 | 4 | 26 | 29 | 23 | 23 | 29 | 19 | – |
| ಘಟಿ | 19 | 22 | 53 | 30 | 18 | 43 | 43 | 18 | 32 | – |
| ಪಳ | 4 | 20 | 1 | 42 | 9 | 15 | 15 | 9 | 5 | – |

## ಮೀನಾಂಶೀಯ ಕನ್ಯಾದಶಾ 9 ಬುಧಾದಿ ಅಂತರ್ದಶಾ

| ರಾಶಿ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ | ಕರ್ಕ | ಸಿಂಹ | ಯೋಗ |
|---|---|---|---|---|---|---|---|---|---|---|
| ದಶೇಶ | ಬು | ಶು | ಮ | ಗು | ಶ | ಶ | ಗು | ಚ | ರವಿ | |
| ವರ್ಷ | 0 | 1 | 0 | 1 | 0 | 0 | 1 | 2 | 0 | 9 |
| ತಿಂಗಳು | 11 | 8 | 8 | 0 | 5 | 5 | 0 | 2 | 6 | – |
| ದಿವಸ | 9 | 2 | 23 | 16 | 0 | 0 | 16 | 11 | 8 | – |
| ಘಟಿ | 4 | 47 | 43 | 44 | 41 | 41 | 44 | 9 | 22 | – |
| ಪಳ | 11 | 26 | 15 | 40 | 51 | 51 | 40 | 46 | 20 | – |

## ಮೀನಾಂಶೀಯ ತುಲಾದಶಾ 16 ಶುಕ್ರಾದಿ ಅಂತರ್ದಶಾ

| ರಾಶಿ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ | ಕರ್ಕ | ಸಿಂಹ | ಕನ್ಯಾ | ಯೋಗ |
|---|---|---|---|---|---|---|---|---|---|---|
| ದಶೇಶ | ಶು | ಮ | ಗು | ಶ | ಶ | ಗುರು | ಚ | ರ | ಬು | – |
| ವರ್ಷ | 2 | 1 | 0 | 0 | 0 | 0 | 3 | 0 | 1 | 16 |
| ತಿಂಗಳು | 11 | 3 | 17 | 8 | 8 | 17 | 10 | 11 | 8 | – |
| ದಿವಸ | 21 | 18 | 9 | 27 | 27 | 9 | 26 | 4 | 2 | – |
| ಘಟಿ | 37 | 50 | 46 | 54 | 54 | 46 | 30 | 53 | 47 | – |
| ಪಳ | 41 | 14 | 2 | 26 | 26 | 2 | 42 | 1 | 26 | – |

## ಮೀನಾಂಶೀಯ ವೃಶ್ಚಿಕ ದಶಾ 7 ಭೌಮಾದಿ ಅಂತರ್ದಶಾ

| ರಾಶಿ | ವೃಶ್ಚಿಕ | ಧನು | ಮಕರ | ಕುಂಭ | ಮೀನ | ಕರ್ಕ | ಸಿಂಹ | ಕನ್ಯಾ | ತುಲಾ | ಯೋಗ |
|---|---|---|---|---|---|---|---|---|---|---|
| ದಶೇಶ | ಮ | ಗು | ಶ | ಶ | ಗು | ಚ | ರ | ಬು | ಶು | |
| ವರ್ಷ | 0 | 0 | 0 | 0 | 0 | 1 | 0 | 0 | 1 | 7 |
| ತಿಂಗಳು | 6 | 9 | 3 | 3 | 9 | 8 | 4 | 8 | 3 | – |
| ದಿವಸ | 25 | 23 | 27 | 27 | 23 | 15 | 26 | 23 | 18 | – |
| ಘಟಿ | 6 | 1 | 12 | 12 | 1 | 20 | 30 | 43 | 50 | – |
| ಪಳಾ | 59 | 24 | 33 | 33 | 24 | 56 | 42 | 15 | 14 | |

## ಮಿನಾಂಶೀಯ ಧನುದಶಾ 10 ಗುರು ಆದಿ ಅಂತರ್ದಶಾ

| ರಾಶಿ | ಧನು | ಮಕರ | ಕುಂಭ | ಮೀನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಯೋಗ |
|---|---|---|---|---|---|---|---|---|---|---|
| ದಶೇಶ | ಗು | ಶ | ಶ | ಗು | ಚಂ | ರ | ಬು | ಶು | ಮ– | |
| ವರ್ಷ | 1 | 0 | 0 | 1 | 2 | 0 | 1 | 1 | 0 | 10 |
| ತಿಂಗಳು | 1 | 5 | 5 | 1 | 5 | 6 | 0 | 10 | 9 | – |
| ದಿವಸ | 28 | 17 | 17 | 28 | 9 | 29 | 16 | 9 | 23 | – |
| ಘಟಿ | 36 | 23 | 26 | 36 | 4 | 18 | 44 | 43 | 1 | – |
| ಪಳಾ | 16 | 30 | 30 | 16 | 13 | 9 | 40 | 9 | 24 | – |

## ಮೀನಾಂಶೀಯ ಮಕರ ದಶಾ 4 ಶನ್ಯಾದಿ ಅಂತರ್ದಶಾ

| ರಾಶಿ | ಮಕರ | ಕುಂಭ | ಮೀನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಯೋಗ |
|---|---|---|---|---|---|---|---|---|---|---|
| ದಶೇಶ | ಶ | ಶ | ಗು | ಚ | ರ | ಬು | ಶು | ಮ | ಗು | |
| ವರ್ಷ | 0 | 0 | 0 | 0 | 0 | 0 | 0 | 0 | 0 | 4 |
| ತಿಂಗಳು | 2 | 2 | 5 | 1 | 2 | 5 | 8 | 3 | 5 | – |
| ದಿವಸ | 6 | 6 | 17 | 21 | 13 | 0 | 27 | 27 | 17 | – |
| ಘಟಿ | 58 | 58 | 26 | 37 | 43 | 41 | 54 | 12 | 26 | – |
| ಪಳಾ | 37 | 37 | 30 | 41 | 15 | 51 | 26 | 33 | 30 | – |

## ಮೀನಾಂಶೀಯ ಕುಂಭ ದಶಾ ವರ್ಷ 4 ಶನ್ಯಾದಿ ಅಂತರ್ದಶಾ

| ರಾಶಿ | ಕುಂಭ | ಮೀನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಯೋಗ |
|---|---|---|---|---|---|---|---|---|---|---|
| ದಶೇಶ | ಶ | ಗು | ಚಂ | ರ | ಬು | ಶು | ಮ | ಗು | ಶನಿ | |
| ವರ್ಷ | 0 | 0 | 0 | 0 | 0 | 0 | 0 | 0 | 0* | 4 |
| ತಿಂಗಳು | 2 | 5 | 11 | 2 | 5 | 8 | 3 | 5 | 2 | – |
| ದಿನ | 6 | 17 | 21 | 23 | 0 | 27 | 27 | 17 | 6 | |
| ಘಟಿ | 58 | 26 | 37 | 43 | 41 | 54 | 12 | 26 | 58 | |
| ಪಳಾ | 37 | 30 | 41 | 15 | 51 | 26 | 23 | 30 | 37 | |

## ಮೀನಾಂಶೀಯ ಮೀನದಶಾ 10 ಗುರು ಆದಿ ಅಂತರ್ದಶಾ

| ರಾಶಿ | ಮೀನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಯೋಗ |
|---|---|---|---|---|---|---|---|---|---|---|
| ದಶೇಶ | ಗು | ಚ | ರ | ಬು | ಶು | ಮ | ಗು | ಶ | ಶ | |
| ವರ್ಷ | 1 | 2 | 0 | 1 | 1 | 0 | 1 | 0 | 0 | 10 |
| ತಿಂಗಳು | 1 | 5 | 6 | 0 | 10 | 9 | 1 | 5 | 5 | – |
| ದಿನ | 28 | 9 | 29 | 16 | 9 | 23 | 28 | 17 | 17 | – |
| ಘಟಿ | 36 | 4 | 18 | 44 | 46 | 1 | 36 | 26 | 26 | – |
| ಪಳ | 16 | 13 | 9 | 40 | 2 | 24 | 16 | 30 | 30 | – |

### ಅಂತರ ದಶಾ ಫಲ

ಅಜಾಂಶೆ ಜಾಂತರೆ ಭೌಮೇ ಜ್ವರಶ್ಚ ವೃಣ ಸಂಭವಃ ।
ಬುಧ ಶುಕ್ರೇಂದುಜೀವೇಷು ವಸ್ತ್ರಾಭರಣ ಮಾದಿಶೇತ್ ॥೨॥

ಮೇಷ ದಶಾದಲ್ಲಿ ಮಂಗಳ (ಮೇಷ, ವೃಶ್ಚಿಕ)ದ ಅಂತರದಶಾದಲ್ಲಿ ವ್ರಣಜನ್ಯಜ್ವರ. ಬುಧ, ಶುಕ್ರ, ಚಂದ್ರ, ಗುರು ಅಂತರದಶಾದಲ್ಲಿ ವಸ್ತ್ರ ಅಲಂಕಾರ (ಶುಭ ಫಲ)ಗಳ ಆದೇಶ ಶನಿ ಅಂತರ ದಶಾದಲ್ಲಿ ಶತ್ರುಕೃತ ಕ್ಷೋಭೆ ಸೂರ್ಯಾಂತರ ದಶಾದಲ್ಲಿ ಮಹಾನ್ ಭಯ ಸಂಭವ.

"ಶನೌ ಶತ್ರುಭವಃ ಕ್ಷೋಭ ಆದಿತ್ಯೆತು ಮಹದ್ ಭಯಮ್ ।
ವೃಷಾಂಶಕೇಂತರೆ ಸ್ತ್ರಿಯೇ ಶನೌ ರೋಗಸ್ತಥಾ ಕಲಿಃ ॥೩॥

ಶಾರೀರಿಕಂ ಸುಖಂ ವಿದ್ಯಾಲಾಭಸ್ತತ್ರ ಗತೆ ಗುರೌ ।
ದೇಶ ತ್ಯಾಗಶ್ಚ ಮರಣಾ ಜ್ವರಃ ಶಸ್ತ್ರಕ್ಷಿತಿಸ್ತಥಾ ॥೪॥

ವೃಷಭಸ್ವಾಂಶಕೆ ಬ್ರಹ್ಮಾನ್ ಕುಜೆ ತತ್ರಗತೆ ಫಲಮ್ ।
ವಸ್ತ್ರಾಭರಣಲಾಭಶ್ಚ ಸ್ತ್ರೀಯೋ ಯೋಗಃ ಸುಖಂಭವೇತ್ ॥೫॥

ಶುಕ್ರೇಂದು ಸುತ ಚಂದ್ರೇಷು ವೃಷಭ ಸ್ವಾಂಶಕೆ ಫಲಮ್ ।
ನೃಪಾದ್ ಭಯಂ ಪಿತೃಮೃತಿ ರ್ಮೃಗಾದಿಭ್ಯೋ ರವೌ ಭಯಮ್ ॥೬॥

ವೃಷಭ ದಶಾ ಶನಿ ಅಂತರದಶಾ ರೋಗ ಕಲಹ, ಗುರು ಅಂತರದಶಾ ಶಾರೀರಿಕ ಸೌಖ್ಯ, ವಿದ್ಯಾಲಾಭಾದಿಗಳು, ಭೌಮ ಅಂತರದಶಾದಲ್ಲಿ ದೇಶತ್ಯಾಗ ಅಥವಾ ಮರಣ ಜ್ವರ ಶಸ್ತ್ರಗಳಿಂದ ಪ್ರಹಾರ. ಶುಕ್ರ, ಬುಧ, ಚಂದ್ರರ ಅಂತರದಶಾದಲ್ಲಿ

ವಸ್ತ್ರ ಆಭೂಷಣಗಳ ಪ್ರಾಪ್ತಿ, ಸ್ತ್ರೀ ಲಾಭವು ಉಂಟು. ರವಿ ಅಂತರದಶಾದಲ್ಲಿ ರಾಜ್ಯ ಭಯ, ಪಿತೃ-ಮಾತೃ ನಿಧಾನ ಹಾಗೂ ಹಿಂಸಕ ಜಂತುಗಳಿಂದ ಭಯ ಹೇಳುವುದು.

ಮುಕ್ತಾ ವಸ್ತ್ರಾದಿ ಸಂಲಾಭೋ ಮಿಥುನ ಸ್ವಾಂಶಕೆ ಭೃಗೌ ।
ಮಾತಾ ಪಿತ್ರೋರ್ಮೃತ್ಯು ಭೀತಿ ಜ್ವರಶ್ಚ ವ್ರಣ ಸಂಭವಃ ॥೭॥

ದೇಶಾಂತರೆ ಪ್ರಯಾಣಾ ಚ ಮಿಥುನ ಸ್ವಾಂಶಕೆ ಕುಜೆ ।
ವಿದ್ಯಾದ್ರವ್ಯಾದಿ ಸಂಲಾಭೋ ಮಹಾವಿಭವಸಂಭವಃ ॥೮॥

ಜನ ಪ್ರೀತಿಶ್ಚ ಸಮ್ಮಾನಂ ಮಿಥುನ ಸ್ವಾಂಶಕೆ ಗುರೌ ।
ಪ್ರಯಾಣಾ ಚ ಮಹಾವ್ಯಾಧಿರ್ಮರಣಾ ಚಾರ್ಥನಾಶನಮ್ ॥೯॥

ಬಂಧುನಾಶೋ ಭವೇದೇವ ಮಿಥುನ ಸ್ವಾಂಶಕೆ ಶನೌ ।
ವಿದ್ಯಾಂಬರಾದಿ ಲಾಭಃ ಸ್ಯಾತ್ ಸೂನುದಾರಸುಖಂ ತಥಾ ॥೧೦॥

ಜನತಾಪ್ರಿಯತಮೇತಿ ಮಿಥುನ ಸ್ವಾಂಶಕೆ ಬುಧೆ ।

ಮಿಥುನ ದಶಾದಲ್ಲಿ ಶುಕ್ರ (ತುಲಾ, ವೃಷಭ) ಅಂತರದಲ್ಲಿ ಮುಕ್ತಾವಸ್ತ್ರ ಲಾಭ, ಕುಜ ಅಂತರದಲ್ಲಿ ಮಾತಾ ಪಿತಾರ ಮರಣ ಸಂಭವ. ವ್ರಣಜನ್ಯಜ್ವರ ದೇಶಾಂತರ ಯಾತ್ರೆ. ಗುರು ಅಂತರದಲ್ಲಿ ವಿದ್ಯಾ ದ್ರವ್ಯ ಆದಿ ಲಾಭ ಹಾಗೂ ಮಹಾನ್ ಐಶ್ವರ್ಯ, ಜನಪ್ರಿಯತೆ, ಸನ್ಮಾನ ಆದಿಗಳ ಶನಿಯ (ಕುಂಭ, ಮಕರ)ಗಳ ಅಂತರದಲ್ಲಿ ಯಾತ್ರೆ, ಮಹಾರೋಗ ಮರಣ, ಧನನಾಶ, ಬಂಧುನಾಶ. ಬುಧನ (ಮಿಥುನ, ಕನ್ಯಾ)ದಲ್ಲಿ ವಿದ್ಯೆಲಾಭ, ಯಾತ್ರಾ ಪ್ರಸಂಗ, ವಸ್ತ್ರ ಲಾಭ, ಪುತ್ರ ಸ್ತ್ರೀ ಸುಖ ಹಾಗೂ ಜನಪ್ರಿಯತೆ.

ಐಶ್ವರ್ಯ ಧನಲಾಭಶ್ಚ ಪುತ್ರಪತ್ನಿ ಸಮಾಗಮಃ ॥೧೧॥

ಮಾನಿಃ ಪ್ರೀತಿಸ್ತಥಾ ಮಾನಂ ಕುಲೀರಸ್ವಾಂಶಕೆ ವಿಧೌ ।
ನೃಪಾದ್ ಭಯಂ ಶತ್ರುಭಯಂ ಮೃಗೇಭ್ಯಶ್ಚ ಮಹದ್ ಭಯಮ್ ॥೧೨॥

ಜ್ವರವ್ಯಾಧೆ ರಪಿ ಭಯಂ ಕುಲೀರಸ್ವಾಂಶರೆ ರವೌ ।
ವಿದ್ಯಾಪುತ್ರ ರತ್ನ ಬಂಧು ಸೌಖ್ಯಂ ಮಾನಂ ತಥಾಯಶಃ ॥೧೩॥

ಕುಲೀರಸ್ವಾಂಶಕೆ ಶುಕ್ರ ಬುಧಯೋ ಸಂಸ್ಥಿತೌ ಭವೇತ್ ।

ಕರ್ಕದಶಾದಲ್ಲಿ ಚಂದ್ರ (ಕರ್ಕ) ಅಂತರ ಐಶ್ವರ್ಯ ಧನ ಲಾಭ, ಪುತ್ರ, ಸ್ತ್ರೀ

ಸುಖ, ಮಾನಸಿಕ ಪ್ರಸನ್ನತಾ, ಸೂರ್ಯಾಂತರದಲ್ಲಿ ರಾಜಭಯ, ಶತ್ರುಭಯ, ಜ್ವರ ವ್ಯಾದಿ ಭಯ, ಕರ್ಕದಲ್ಲಿ ಬುಧ, ಶುಕ್ರ (ರಾಶಿ) ಅಂತರದಲ್ಲಿ ವಿದ್ಯಾ, ಪುತ್ರ, ಸ್ತ್ರೀ, ಬಂಧುಗಳ ಸುಖ, ಸನ್ಮಾನ ಯಶ ಆದಿ ಫಲಗಳನ್ನು.

ವಿಷಶಸ್ತ್ರಮೃತಿರ್ಘೋರಾ ಜ್ವರದಾಹಸಮುದ್‌ಭವಾ ।
ಅಪಿ ನಾನಾವಿಧಂ ದುಃಖಂ ಕುಲೀರಸ್ವಾಂಶಕೇ ಕುಜೇ ॥೧೪॥

ವಿಭವಸ್ಯಾತಿಲಾಭಶ್ಚ ತಥೈವ ಚ ಸುಖಂ ತನೌ ।
ಮಹಾರಾಜ ಪ್ರಸಾದಶ್ಚ ಕುಲಿರಸ್ವಾಂಶಕೇ ಗುರೌ ॥೧೫॥

ವಾತವ್ಯಾದಿ ಭವಂ ದುಃಖ ಮಹಿವೃಶ್ಚಿಕ ದಂಶಜಮ್ ।
ನಾನಾ ಕ್ಲೇಶಭವಾಪ್ನೋತಿ ಕುಲಿರಸ್ವಾಂಶಗೇ ಶನೌ ॥೧೬॥

ಕರ್ಕದಶಾ --- ಮಂಗಳನ (ವೃಶ್ಚಿಕ, ಮೇಷ) ಅಂತರದಶಾದಲ್ಲಿ ವಿಷಶಸ್ತ್ರ ಜ್ವರ ದಾಹ ಆದಿ ಭಯ. ಮರಣ ಹಾಗೂ ಅನೇಕ ವಿಧಿ ಕಷ್ಟ ಪ್ರಸಂಗಗಳು. ಅದೇ ಕರ್ಕದಶಾದಲ್ಲಿ ಗುರುವಿನ ರಾಶಿ ದಶಾಗಳಲ್ಲಿ (ಅಂತರದಶಾ) ಐಶ್ವರ್ಯ ಲಾಭ, ಶಾರೀರಿಕ ಸೌಖ್ಯ, ಮಹಾರಾಜರ ಕೃಪೆ ಆದಿ ಫಲಗಳು ಶನಿಯ (ಮಕರ, ಕುಂಭ) ಅಂತರ ದಶಾದಲ್ಲಿ ವಾತವ್ಯಾಧಿಜನ್ಯ ಕಷ್ಟ. ಸರ್ಪ, ಚೇಳು ಆದಿ ಹಿಂಸ್ರ ಜಂತುಗಳು ಕಚ್ಚುವ ಹಾಗೂ ಅನೇಕ ವಿಧ ತೊಂದರೆಗಳು.

ಜ್ವರಪಿತ್ತಭವೋ ರೋಗಃ ಶಸ್ತ್ರಕ್ಷತಿ ವಿಸೂಚಿಕಾಃ ।
ಮುಖರೋಗಸ್ಯ ವಾ ವಾಪ್ತಿರ್ಮೃಗೇಂದ್ರ ಸ್ವಾಂಶಗೇ ಕುಜೇ ॥೧೭॥

ಲಾಭೋ ದಾರಸುತದೇಶ್ಚ ವಿದ್ಯಾಭರಣವಾಸಸಾಮ್ ।
ಮೃಗೇಂದ್ರಸ್ವಾಂಶಕೇ ಶುಕ್ರ ಬುಧಯೋಃ ಸಂಸ್ಥಿತೌ ದ್ವಿಜ ॥೧೮॥

ವೃಕ್ಷಾದೇಃ ಪತನಂ ದ್ರವ್ಯನಾಶೋ ಭೀತಿಸ್ತಥೈವಚ ।
ಭವೇದ್ದೇಶ ಪರಿತ್ಯಾಗೋ ಮೃಗೇಂದ್ರೋ ಸ್ವಾಂಶಗೇ ವಿಧೌ ॥೧೯॥

ಮಹಾಶತ್ರುಭಯಂ ಚೈವಜ್ವರಶ್ಚ ವ್ಯಾಧಿರೇವ ಚ ।
ಅಜ್ಞಾನಂ ಮೃತ್ಯುಭೀರ್ಭಾನೌ ಮೃಗೇಂದ್ರಸ್ವಾಂಶಗೇ ಸತಿ ॥೨೦॥

ಧನ ಧಾನ್ಯ ಮಹಾಲಾಭಃಪ್ರಸಾದೋ ದ್ವಿಜದೇವಯೋಃ ।
ವಿದ್ಯಾವಿವೃದ್ಧಿರ್ವಿಪುಲಾ ಮೃಗೇಂದ್ರ ಸ್ವಾಂಶಗೇ ಗುರೌ ॥೨೧॥

ಸಿಂಹಾಂಶ ದಶಾ ಮಂಗಳ (ಮೇಷ, ವೃಶ್ಚಿಕ) ಅಂತರ ದಶಾದಲ್ಲಿ ಜ್ವರಜನ್ಯ

ಪಿತ್ತರೋಗ ಶಸ್ತ್ರದಿಂದ ಆಘಾತ ವಿಷಸೂಚಕ ಅಥವಾ ಮುಖರೋಗ ಉತ್ಪತ್ತಿ. ಅದರಲ್ಲಿಯೇ ಶುಕ್ರನ (ತುಲಾ, ವೃಷಭ, ಕನ್ಯಾ, ಮಿಥುನ) ಅಂತರ ದಶಾಗಳಲ್ಲಿ ಸ್ತ್ರೀ ಪುತ್ರ ಸೌಖ್ಯದ ಲಾಭ, ವಿದ್ಯಾ ವಸ್ತ್ರ ಭೂಷಣದ ಪ್ರಾಪ್ತಿ ಆದಿ ಫಲವಾದರೆ ಚಂದ್ರ (ಕರ್ಕ) ಅಂತರದಶಾದಲ್ಲಿ ಉಚ್ಚಸ್ಥಾನ ಅಥವಾ ಗಿಡಗಳಿಂದ ಬಿದ್ದು –ಆಘಾತ ಮೇಲಿನಿಂದದ್ರವ್ಯ, ಕ್ಷಯ ಭಯ ಹಾಗೂ ದೇಶಾಂತರ ಹೋಗುವರು. ಸೂರ್ಯಾಂತರದಲ್ಲಿ ಅಜ್ಞಾನ, ಮರಣ ಭಯ, ಶತ್ರುಭಯ, ಜ್ವರ, ವ್ಯಾಧಿ ಆದಿ ತೊಂದರೆಗಳು. ಅದೇ ಸಿಂಹ ದಶಾದಲ್ಲಿ ಗುರುವಿನ (ರಾಶಿ) ಅಂತರ ದಶಾದಲ್ಲಿ ಧನ, ಧಾನ್ಯ ವೃದ್ಧಿ, ದೇವ-ಬ್ರಾಹ್ಮಣರ ಪ್ರಸಾದ, ವಿದ್ಯೆಯ ವಿಪುಲ ವೃದ್ಧಿಯಾಗುತ್ತದೆ.

ಪ್ರಯಾಣಂ ಚ ಜ್ವರಂ ಚೈವ ಕ್ಷುದ್ರ ಭಯಂ ವೈಕಲ್ಯಂ ತಥಾ ।
ವ್ಯಾಧಿ ದುಃಖಮವಪ್ನೋತಿ ಕನ್ಯಾಯಾಂ ಸ್ವಾಂಶಗೆ ಶನೌ ॥೨೨॥

ನೃಪ ಪ್ರಸಾದತೋ ಲಾಭ ಐಶ್ವರ್ಯ ಬಂಧುಸಂಭವಮ್ ।
ಸದ್‌ವಿದ್ಯಾಯಾ ವಿವೃದ್ಧಿಶ್ಚ ಕನ್ಯಾಸ್ವಾಂಶಗತೆ ಗುರೌ ॥೨೩॥

ಕನ್ಯಾದ ದಶಾದಲ್ಲಿ ಮಕರ, ಕುಂಭ (ಶನಿ)ಯ ಅಂತರ ದಶಾ ಬಂದಾಗ ಯಾತ್ರೆ, ಜ್ವರ, ಹಸಿವು, ವಿಫಲಾ, ವ್ಯಾದಿ ಹಾಗೂ ಕಷ್ಟ. ಗುರು (ರಾಶಿ) ಅಂತರದಶಾದಲ್ಲಿ ರಾಜ ಪ್ರಸಾದದಿಂದ ಲಾಭ, ಬಂಧುವಿನ ಮುಖಾಂತರ ಐಶ್ವರ್ಯ ಪ್ರಾಪ್ತಿ ಹಾಗೂ ಸದ್‌ವಿದ್ಯಾದಿ ವೃದ್ಧಿಯಾಗುತ್ತದೆ.

ಪ್ರಯಾಣಂ ಚ ಜ್ವರಶ್ಚೈವ ಮಸೂರಿ ವಹ್ನಿತೋ ಭಯಮ್ ।
ಶಸ್ತ್ರಘಾತಾದ್ ಭವೇನ್ಮೃತ್ಯುಃ ಕನ್ಯಾಸ್ವಾಂಶಗತೆ ಕುಜೆ ॥೨೪॥

ಭೃತ್ಯು ಪುತ್ರಾರ್ಥ ಲಾಭಶ್ಚ ವಸ್ತ್ರಾಭರಣಮೇವ ಚ ।
ಬುಧ ಭಾಗ್ವಿಚಂದ್ರಾಣಾಂ ಕನ್ಯಾಸ್ವಾಂಶಗತೌ ಫಲಮ್ ॥೨೫॥

ಪ್ರಯಾಣಂ ಚ ಜ್ವರಶ್ಚವ ಪುತ್ರ ಹಾನಿಶ್ಚ ವಿಗ್ರಹಃ ।
ಶಸ್ತ್ರಘಾತಾದ್ ಭವೇಮ್ಮೃತ್ಯುಃ ಕನ್ಯಾಸ್ವಾಂಶಗತೆ ರವೌ ॥೨೬॥

ದಾರ ಪುತ್ರಾರ್ಥಸಂಲಾಭೋ ಲಾಭೋ ಭೂಷಣವಾಸಸೋಃ ।
ಸುಬುದ್ಧಿಃ ಸುಖ ವೃದ್ಧಿಶ್ಚ ತುಲಾಸ್ವಾಂಶಗತೆ ಭೃಗೌ ॥೨೭॥

ಪಿತುಃಕ್ಲೇಶಃಕಲಿರ್ಮಿತ್ರೈಃ ಶಿರೊರೋಗೋ ಜ್ವರಸ್ತಥಾ ।
ಶಸ್ತ್ರಾನಲಭವೊ ಘಾತಸ್ತುರಾಸ್ವಾಂಶಗತೆ ಕುಜೆ ॥೨೮॥

ಕನ್ಯಾ ದಶಾದಲ್ಲಿ ಮಂಗಳ (ರಾಶಿ) ಅಂತರ ದಶಾದಲ್ಲಿ ಯಾತ್ರೆ, ಜ್ವರ ರೋಗ ಹಾಗೂ ಅಗ್ನಿ ಭಯಾದಿಗಳು ಹಾಗೂ ಶಸ್ತ್ರದಿಂದ ಆಘಾತ, ಮರಣ ಹೇಳುವುದು. ಕನ್ಯಾ ದಶಾದಲ್ಲಿ ಬುಧ, ಶುಕ್ರ (ರಾಶಿ) ಚಂದ್ರ ಅಂತರದಶಾದಲ್ಲಿ ಭೃತ್ಯ (ಸೇವಕ) ಮಗ, ಅರ್ಥಪ್ರಾಪ್ತಿ ಹಾಗೂ ವಸ್ತ್ರ ಆಭೂಷಣ ಲಾಭ ರವಿ (ರಾಶಿ ಸಿಂಹ) ಅಂತರದಲ್ಲಿ ಯಾತ್ರೆ, ಜ್ವರ, ಪುತ್ರಹಾನಿ, ಕಲಹಾದಿ ಹಾಗೂ ಶಸ್ತ್ರಘಾತದಿಂದ ಮೃತ್ಯು ಹೇಳುವುದು.

ತುಲಾ ದಶಾದಲ್ಲಿ ಶುಕ್ರ ಅಂತರದಲ್ಲಿ ಸ್ತ್ರೀ ಪುತ್ರ ಧನ ಸೌಖ್ಯ, ಆಭೂಷಣ, ವಸ್ತ್ರ ಆದಿ ಲಾಭಗಳು ಸದ್ಬುದ್ಧಿಯ ಸುಖದ ವೃದ್ಧಿಯೂ ಆಗುತ್ತದೆ. ಅದೇ ತುಲಾದಲ್ಲಿ ಮಂಗಳ (ರಾಶಿ) ಅಂತರ ದಶಾ ಬಂದಾಗ ಪಿತೃವಿಗೆ ಕಷ್ಟ, ಮಿತ್ರರೊಡನೆ ವೈರತ್ವ ಪ್ರಾಪ್ತಿ. ಸ್ವತಃ ಶಿರೋರೋಗ ಅದರಂತೆ ಜ್ವರದಿಂದ ತಾಪ ಹಾಗೂ ಶಸ್ತ್ರ ಅಗ್ನಿಯಿಂದ ಆಘಾತ, ಭಯ ಹೇಳುವುದು.

ಧನರತ್ನ ಮಹಾಲಾಭೋ ಧರ್ಮಚೇಷ್ಟಾ ಸುಖಂ ನೃಪಾತ್ ।
ಸರ್ವಸಂಪತ್ಸಮೃದ್ಧಿಶ್ಚ ತುಲಾಸ್ವಾಂಶಗತೇ ಗುರೌ ॥೨೯॥

ಪ್ರಯಾಣು ಚ ಮಹಾವ್ಯಾಧಿಃ ಕ್ಷೇತ್ರಹಾನಿಸ್ತಥೈವ ಚ ।
ಶತ್ರುಬಾಧಾಮಹದ್ ದುಃಖಂ ತುಲಾಸ್ವಾಂಶಗತೇ ಶನೌ ॥೩೦॥

ಪುತ್ರದಾರಾರ್ಥಸಂಲಾಭೋ ಬಂಧು ಲಾಭಸ್ತಥೈವ ಚ ।
ಸೌಭಾಗ್ಯಂ ಮನಸಃ ಪ್ರೀಸಿಸ್ತುಲಾಸ್ವಾಂಶಗತೇ ಬುಧೆ ॥೩೦॥

ತುಲಾರಾಶಿಯ ದಶಾದ ಗುರ್ವಂತರದಶಾ (ರಾಶಿ)ದಲ್ಲಿ ವಿವಿಧ ರೀತಿ ಲಾಭ, ಧನ ಲಾಭ, ಧಾರ್ಮಿಕ ಪ್ರವೃತ್ತಿ, ರಾಜನಿಂದ ಸೌಖ್ಯ, ಸರ್ವವಿಧ ಸಂಪತ್ತುಗಳ ಸಮೃದ್ಧಿ. ಅದೇ ರಾಶಿಯಲ್ಲಿ ಶನಿ (ರಾಶಿ)ಯ ಅಂತರ ದಶಾದಲ್ಲಿ ಯಾತ್ರೆ, ಮಹಾ ಕಷ್ಟ, ಹೊಲದ ನಾಶ, ಶತ್ರುತ್ವದ ಬಾಧೆ ಇತ್ಯಾದಿ ಫಲಗಳು ತುಲಾರಾಶಿ ದಶಾದಲ್ಲಿ ಬುಧ ರಾಶಿ ಅಂತರದಶಾ (ಮಿಥುನ, ಕನ್ಯಾ)ದಲ್ಲಿ ಪುತ್ರ, ಸ್ತ್ರೀ ಧನದ ಲಾಭ, ಬಂಧು-ಬಾಂಧವರಿಗೆ ಸುಖ, ಸೌಭಗ್ಯೋದಯ ಮಾನಸಿಕ ಪ್ರಸನ್ನತಾ.

ವ್ಯಾಧಿನಾಶೋ ಮಹತ್‌ಸೌಖ್ಯಂ ನಾನಾರ್ಥಸುಖಸಂಪದಾ ।
ಭೃಗುಸೌಮ್ಯ ಶಶಾಂಕಾನಾಮಲಿಸ್ವಾಂಶಗತೌ ಫಲಮ್ ॥೩೨॥

ಶತ್ರುಕ್ಷೋಭೋ ಭಯಂ ವ್ಯಾದೆರರ್ಥನಾಶಃ ಪಿತುರ್ಭಯಮ್ ।
ಹಿಂಸ್ರಜೀವಾದಪಿ ಭಯಂ ವೃಶ್ಚಿಕಸ್ವಾಂಶಗೆ ರವೌ ॥೩೩॥

ವಾತ ಪಿತ್ತಭಯಂ ಚೈವ ಮಸೂರಿವ್ಯಾಧಿರೇವ ಚ ।
ಅಗ್ನಿಶಸ್ತ್ರಾದಿತೋ ಭೀತಿರ್ವೃಶ್ಚಿಕ ಸ್ವಾಂಶಗೇ ಕುಜೇ ॥೩೪॥

ಧನಂ ರತ್ನಂ ಚಾ ಧಾನ್ಯಂ ಚ ದೇವಬ್ರಾಹ್ಮಣ ಪೂಜನಮ್ ।
ರಾಜಪ್ರಸಾದತೋ ಲಾಭೋ ವೃಶ್ಚಿಕಸ್ವಾಂಶಗೇ ಗುರೌ ॥೩೫॥

ಧನ ಬಂಧು ವಿನಾಶಶ್ಚ ವ್ಯಾಕುಲತ್ವಂ ಮನೋವ್ಯಥಾ ।
ಶತ್ರುಬಾಧಾ ಮಹಾವ್ಯಾಧಿ ರ್ವೃಶ್ಚಿಕ ಸ್ವಾಂಶಗೇ ಶನೌ ॥೩೬॥

ವೃಶ್ಚಿಕ ದಶಾದಲ್ಲಿ ಶುಕ್ರ, ಬುಧ, ಚಂದ್ರರ ರಾಶ್ಯಾಂತರ ದಶಾ ಬಂದಾಗ ಮಹಾಸೌಖ್ಯ, ಅನೇಕ ವಿಧ ಸಂಪತ್ತು ಆದಿ ಸತ್ಫಲ. ಅದರಲ್ಲಿಯೇ ರವ್ಯಾಂತರ (ಸಿಂಹ) ದಶಾದಲ್ಲಿ ಶತ್ರುಕ್ಷೋಭೆ, ರೋಗಭಯ, ಪಿತ್ತಪ್ರಕೋಪ ಭಯ ಹಾಗೂ ಹಿಂಸ್ರಜಂತುಗಳಿಂದ ಭಯ. ಪಿತ್ತಪ್ರಕೋಪ ಭಯ ಹಾಗೂ ಹಿಂಸ್ರ ಜಂತುಗಳಿಂದ ಭಯ. ವೃಶ್ಚಿಕ ದಶಾದಲ್ಲಿ ಮಂಗಳ (ರಾಶಿ) ಅಂತರದಶಾದಲ್ಲಿ ವಾತಪಿತ್ತ ಭಯ, ಚಳಿಜ್ವರ ಭಯ (ಸೊಳ್ಳೆಯಿಂದ ಉಂಟಾಗುವ ರೋಗ) ಅಗ್ನಿ ಹಾಗೂ ಶಸ್ತ್ರಗಳಿಂದ ಭಯ. ಗುರುವಿನ ಅಂತರದಶಾ (ರಾಶಿ)ದಲ್ಲಿ ಧನ ಧಾನ್ಯ ರತ್ನಗಳ ಸಮೃದ್ಧಿ, ದೇವ-ಬ್ರಾಹ್ಮಣ ಪೂಜೆ, ರಾಜ ಕೃಪಾದಿಂದ ಲಾಭ, ಶನಿ (ಮಕರ, ಕುಂಭ) ಅಂತರದಶಾದಲ್ಲಿ ಧನ, ಬಂಧುನಾಶ, ಮಾನಸಿಕೆ ಪೀಡೆ, ವ್ಯಾಕುಲತೆ ಶತ್ರುಕೃತ ಬಾಧಾ ಹಾಗೂ ಮಹಾರೋಗಾದಿಗಳು ಸಂಭವ.

ಅತಿದಾಹೋ ಜ್ವರಃ ಛಿರ್ಧಿರ್ಮುಖರೋಗೋ ತಿಕಷ್ಟದಃ ।
ಕ್ಲೇಶಹ ಶರೀರೆಪ್ಯಾಧಿಕಶ್ಚಾಪ ಸ್ವಾಂಶಗತೆ ಕುಜೆ ॥೩೭॥

ಶ್ರೀ ವಿದ್ಯಯೋಸ್ತು ಸೌಭಾಗ್ಯಂ ಶತ್ರುನಾಶಃ ಸುಖಂ ನೃಣಾಮ್ ।
ಭಾರ್ಗವೇಂದುಜ ಚಂದ್ರಾಣಾಂ ಚಾಪಸ್ವಾಂಶಗತೌ ಫಲಮ್ ॥೩೮॥

ಧನು ರಾಶಿ ದಶಾದಲ್ಲಿ ಭೌಮಾಂತರ (ರಾಶಿ) ದಶಾದಲ್ಲಿ ಅತಿ ದಾಹ ಪ್ರಸಂಗಗಳು,ಜ್ವರ ಅತಿ ಕಷ್ಟಕರ ಮುಖರೋಗ ಅನೇಕ ವಿಧ ಶಾರೀರಿಕ ಕಷ್ಟ – ಅದೇ ಧನು ದಶಾ ಶುಕ್ರ, ಬುಧ, ಚಂದ್ರ (ರಾಶಿ)ರ ದಶಾದಲ್ಲಿ – ಲಕ್ಷ್ಮಿ ಹಾಗೂ ವಿದ್ಯೆಯ ಸೌಭಾಗ್ಯ ಹಾಗೂ ಶತ್ರುಕ್ಷಯ ರಾಜನಿಂದ ಸುಖಪ್ರಾಪ್ತಿ ಆದಿ ಫಲಗಳು.

ಜಾಯಾವಿತ್ತವಿನಾಶಶ್ಚ ಕಲಹಶ್ಚ ನೃಪಾದ್ ಭಯಮ್ ।
ದೇಶಾಂತರೆ ಚ ಗಮನಂ ಚಾಪ ಸ್ವಾಂಶಗತೆ ರವೌ ॥೩೯॥

ದಾನ ಧರ್ಮತಪೋಲಾಭೋ ರಾಜಪೂಜನಮೇವ ಚ ।
ಜಾಯಾರ್ಥಯೋಶ್ಚ ಸಂಲಾಭಃ ಚಾಪಸ್ವಾಂಶಗತೆ ಗುರೌ ॥೪೦॥

ಧನು ರಾಶಿ ದಶಾದಲ್ಲಿ ರವಿ ಅಂತರ ದಶಾ ಕಾಲ ವಿತ್ತವಿನಾಶ, ಕಲಹ, ರಾಜಭಯ ಹಾಗೂ ದೇಶಾಂತರ ಯಾತ್ರೆ ಆದಿ ಫಲಗಳು. ಅದೇ ಧನುದಶಾ ಗುರು ಅಂತರ ದಶಾದಲ್ಲಿ (ರಾಶಿ) ದಾನಧರ್ಮ, ತಪಸ್ಸುಗಳ ವೃದ್ಧಿ, ರಾಜದ್ವಾರ ಪೂಜೆ (ಸನ್ಮಾನ) ಧನಸೌಖ್ಯ ಈ ಫಲಗಳು.

ದ್ವಿಜದೇವ ನೃಪಕ್ರೋಧೋ ಬಂಧೂನಾಂ ಚ ವಿನಾಶನವಮ್ ।
ಸ್ವದೇಶಸ್ಯ ಪರಿತ್ಯಾಗೋ ಮೃಗಸ್ವಾಂಶಗತೆ ಶನೌ ॥೪೧॥

ದೇವಾರ್ಚನಂ ತಪೋಧ್ಯಾನ್ಯಂ ರಾಜಸಮ್ಮಾನಮೇವ ಚ ।
ಭಾರ್ಗವಜ್ಞೇಂದುಜೀವಾನಾಂ ಮೃಗಸ್ವಾಂಶಗತೌ ಫಲವ್ ॥೪೨॥

ಶಿರೋರೋಗೊ ಜ್ವರಶ್ಚೈವ ಕರಪಾದಗತಂ ಕ್ಷತವ್ ।
ರಕ್ತಪಿತ್ತಾತಿಸಾರಶ್ಚ ಮೃಗಸ್ವಾಂಶಗತೆ ಕುಜೆ ॥೪೩॥

ಬಂಧು ಪುತ್ರಪಿತೃಣಾಂ ಚ ನಾಶೋ ಜ್ವರ ಸಮಾಶ್ರಯಃ ।
ನೃಪಶತ್ರುಭಯಂ ಚೈವ ಮೃಗಸ್ವಾಂಶಿಗತೆ ಶನೌ ॥೪೪॥

ಮಕರ ದಶಾದಲ್ಲಿ ಶನಿಯ (ಮಕರ, ಕುಂಭ) ಸ್ವಅಂತರ ದಶಾದಲ್ಲಿ ದೇವರು-ಬ್ರಾಹ್ಮಣರು ಹಾಗೂ ರಾಜಾದಿಗಳ ಕೋಪ, ಬಂಧುನಾಶ, ಸ್ವದೇಶ ತ್ಯಾಗಾದಿಗಳು ಅದೇ ದಶಾದಲ್ಲಿ ಬುಧ, ಶುಕ್ರ, ಗುರು, ಚಂದ್ರ ಅಂತರದಶಾ(ರಾಶಿ)ದಲ್ಲಿ ದೇವಪೂಜೆ, ತಪಸ್ಸು, ಧ್ಯಾನ ಹಾಗೂ ಇತರ ಪುಣ್ಯಕಾರ್ಯಗಳು ರಾಜನಿಂದ ಸನ್ಮಾನ. ಆದರೆ ಭೌಮಾಂತರ ದಶಾದಲ್ಲಿ (ಮೇಷ, ವೃಶ್ಚಿಕ) ಶಿರೋವೇದನ ಜ್ವರ, ಕಾಲು ಹಾಗೂ ಕೈಗಳ (ಶಸ್ತ್ರಘಾತ ರಕ್ತಪಿತ್ತ ಅತಿಸಾರ – ಶನ್ಯಾಂತರ(ಕುಂಭಕ್ಕೆ - -- ಮಕರ) ತಂದೆ, ಬಂಧು ಹಾಗೂ ಪುತ್ರರಿಗೆ ಸಂಕಷ್ಟ, ಜ್ವರ ಪ್ರಕೋಪ ಶತ್ರು ಹಾಗೂ ರಾಜರಿಂದ ಭಯ.

ನಾನಾವಿದ್ಯಾರ್ಥ ಲಾಭಶ್ಚ ಪುತ್ರ ಸ್ತ್ರೀ ಮಿತ್ರಸಂಭವವ್ ।
ಐಶ್ವರ್ಯ ಧನಲಾಭಶ್ಚ ಘಟಸ್ವಾಂಶಗತೆ ಭೃಗೌ ॥೪೫॥

ಜ್ವರಾಗ್ನಿ ಚೌರಶತ್ರುಭ್ಯೋ ಭೀತಿಃ ಸ್ಯಾದತಿದುಃಖಿದಾ ।
ಮನೋದುಃಖ ಸಮುದ್ ಭೂತಿರ್ಘಟಸ್ವಾಂಶಗತೆ ಕುಜೇ ॥೪೬॥

ದುಃಖವ್ಯಾಧಿಹರಂ ಚೈವ ದೇವಬ್ರಾಹ್ಮಣಪೂಜನಮ್ ।
ಮನಃ ಪ್ರೀತಿರ್ನೃಪತಿತೋ ಘಟಿಸ್ವಾಂಶಗತೆ ಗುರೌ ॥೪೭॥

ತ್ರಿದೋಷಕೋಪಃ ಕಲಹಸ್ತಥಾ ದೇಶಪರಿಭ್ರಮಃ ।
ಕ್ಷಯವ್ಯಾದಿಸಮುತ್ಪತ್ತಿರ್ಘಟಿಸ್ವಾಂಶಗತೆ ಶನೌ ॥೪೮॥

ಪುತ್ರಮಿತ್ರ ಧನ ಸ್ತ್ರೀಣಾಂ ಲಾಭಶ್ಚೈತಃ ಪ್ರಸನ್ನತಾ ।
ಸೌಭಾಗ್ಯಂ ವಸ್ತ್ರಲಾಭಶ್ಚ ಘಟಿಸ್ವಾಂಸಗತೆ ಬುಧೆ ॥೪೯॥

ಕುಂಭ ದಶಾದಲ್ಲಿ ಶುಕ್ರಾಂತರ (ರಾಶಿಗಳು) ಬಂದಾಗ ಅನೇಕ ವಿದ್ಯೆಗಳ ಹಾಗೂ ಧನ ಪ್ರಾಪ್ತಿ. ಪುತ್ರ, ಸ್ತ್ರೀ, ಮಿತ್ರರಿಂದ ಐಶ್ವರ್ಯ ಪ್ರಾಪ್ತಿ ಹಾಗೂ ಧನಲಾಭ – ಅದೇ ಕುಂಭ ದಶಾ ಮಂಗಳ ಅಂತರದಶಾದಲ್ಲಿ ಜ್ವರ, ಅಗ್ನಿ, ಶತ್ರು ಹಾಗೂ ಕಳ್ಳರಿಂದ ಭಯ. ಅತೀದುಃಖದಾಯಕ ಪ್ರಸಂಗಗಳು ಹಾಗೂ ಮಾನಸಿಕ ಕ್ಷೋಭೆ – ಅದೇ ಗುರು ಅಂತರ ದಶಾದಲ್ಲಿ ದುಃಖ ರೋಗಗಳ ನಾಶ. ದೇವ ಬ್ರಾಹ್ಮಣರ ಪೂಜಿನ ಮುಖಾಂತರ ಮಾನಸಿಕ ಪ್ರಸನ್ನತಾ – ಅಲ್ಲಿಯೇ ಶನಿ ಅಂತರ ದಶಾದೇ ತ್ರಿದೋಷ (ವಾತ ಪಿತ್ರ ಕಫ) ಪ್ರಕೋಪ ಕಲಹ ದೇಶಾಟನ ಕ್ಷಯ ರೋಗೋತ್ಪತ್ತಿ – ಬುಧ ಅಂತರ ದಶಾದಲ್ಲಿ ಪುತ್ರ ಮಿತ್ರ ಧನ ಸ್ತ್ರೀ ಜನ್ಯ ಸೌಖ್ಯ ಮಾನಸಿಕ ಪ್ರಸನ್ನತೆ ಸೌಭಾಗ್ಯೋದಯ ಹಾಗೂ ವಸ್ತ್ರ ಲಾಭಾದಿಗಳು.

ಜಾಯಾಸುಖಂ ತಥಾ ವಿದ್ಯಾಲಾಭೋ ವ್ಯಾಧಿವಿನಾಶನಮ್ ।
ಮನಃ ಪ್ರಸಾದೋ ಮಿತ್ರಾಪ್ತಿರಿಂದೌ ಮೀನಾಂಶಗೆ ಸತಿ ॥೫೦॥

ಬಾಂಧವೈಃ ಕಲಹಶ್ಚರಾದ್ ಭೀತಿಶ್ಚೆತೋವ್ಯಥಾ ತಥಾ ।
ಸ್ಥಾನಭ್ರಂಶೋ ವಿಭಿತಿಶ್ಚ ಮೀನ ಸ್ವಾಂಶಗತೆ ರವೌ ॥೫೦॥

ಶತ್ರುನಾಶಶ್ಚ ವಿಜಯೋ ಧೇನು ಭೂಮಿ ಸುತಾಗಮಃ ।
ರತ್ನಲಾಭೋ ಇಷೆ ಸ್ವಾಂಶಗತಗೋರ್ಬುಧ ಶುಕ್ರಯೋಃ ॥೫೨॥

ಮೀನ ದಶಾದಲ್ಲಿ ಚಂದ್ರಾಂತರ ದಶಾ (ಕರ್ಕ)ದಲ್ಲಿ ಸ್ತ್ರೀ ಸುಖ, ವಿದ್ಯಾಲಾಭ, ರೋಗಕ್ಷಯ (ರೋಗವಿಲ್ಲದಿರುವಿಕೆ) ಮಾನಸಿಕ ಪ್ರಸನ್ನತಾ, ಮಿತ್ರಪ್ರೀತಿ ಅದೇ ಸೂರ್ಯಾಂತರದಲ್ಲಿ ಬಂಧುಗಳೊಡನೆ ಕಲಹ, ಕಳ್ಳರಿಂದ ಭಯ, ಮನೋವ್ಯಥಾ, ಸ್ಥಾನಭ್ರಂಶ, ಭಯ ಅದೇ ಮೀನದಲ್ಲಿ ಬುಧ, ಶುಕ್ರ ರಾಶಿ ದಶಾಂತರ ದಶಾದಲ್ಲಿ ಶತ್ರು ನಾಶ ಎಲ್ಲೆಡೆ ವಿಜಯ. ಆಕಳು, ಭೂಮಿ, ರತ್ನ ಆದಿ ಲಾಭ, ಪುತ್ರೋತ್ಸವ ಆದಿಫಲಗಳು.

ಆಭೂಷಣ. ಮೀನ ದಶಾ ಶನ್ಯಂತರದಲ್ಲಿ ವೇಶ್ಯಯರ ಸಂಸರ್ಗದಿಂದ ಐಶ್ವರ್ಯ ವಿನಾಶ, ದೇಶ ತ್ಯಾಗ ದರಿದ್ರತಾ.

ಪರಾಶರ ಉವಾಚ:

> ಏವಂ ಯಥಾಕ್ರಮೇಣೈವ ವಿಜ್ಞೇಯಂ ಸ್ವಾಂಶಗೆ ಫಲಮ್ ।
> ವಾಮಕ್ಷೇಪ್ಯೆವಮೇವ ಸ್ಯಾದಂತರ್ಭುಕ್ತಿಫಲಂ ಬುಧೈಃ ॥೫೮॥
>
> ದಶಾಫಲಂ ನಿಗದಿತಂ ಪುಣ್ಯಪಾಪಕೃತಂ ಪುರಾ ।
> ತತ್ಸರ್ವಪ್ರಾಣಿಭಿರ್ನಿತ್ಯಂ ಪ್ರಾಪ್ಯತೆ ನಾತ್ರ ಸಂಶಯಃ ॥೫೭॥
>
> ಸುಹೃದಂತರ್ದಶಾ ಭವ್ಯಾ ವಿರುದ್ಧಾ ಶತ್ರುಸಂಭವಾ ।
> ಮಧ್ಯಮಾ ಮಧ್ಯ ಖೇಟಸ್ಯ ದಶಾದಿನಾಮಯಂ ಕ್ರಮಃ ॥೫೮॥
>
> ವಿರುದ್ಧ ಫಲದಾನಾಂ ತು ಖೇಟಾನಾಂ ಶಾಂತಿಮಾಚರೇತ್ ।

ಪರಾಶರರು ಹೇಳಿದರು—

ಇದೇ ಪ್ರಕಾರ ಕಾಲಚಕ್ರ ದಶಾದಲ್ಲಿ ಸವ್ಯಚಕ್ರವನ್ನು ಅಂತರದಶಾದಲ್ಲಿ ಪರಿಗ್ರಹಿಸುವುದು. ರಾಶಿಗಳ ದಶಾದಲ್ಲಿ ಹಾಗೂ ಅಂತರದಶಾ ರಾಶಿ ಸ್ವಭಾವದಂತೆ ಶುಭಾಶುಭ ಫಲದಾಯಿಗಳಾಗಿವೆ. ಈ ಶುಭಾಶುಭಫಲ ಪೂರ್ವಜನ್ಮಕೃತ ಕರ್ಮಜನ್ಯವಾಗಿರುತ್ತದೆ. ಯಾವ ಪ್ರಾಣಿ ಫಲ ಅನುಭವಿಸುತ್ತಿದ್ದಾರೋ ಅವರಿಗೆ ಪಾಪಗ್ರಹ ಫಲ ಅಶುಭ ಪುಣ್ಯಗ್ರಹ ಫಲ ಶುಭವಾಗುತ್ತದೆ. ದಶಾಧೀಶನ ಮಿತ್ರ ನಾಗಿದ್ದರೆ ಅಂತರದಶಾ ಶುಭದಾಯಕವಾಗುತ್ತದೆ. ಶತ್ರುವಾಗಿದ್ದರೆ ವಿರುದ್ಧ ಫಲ,

ಸಮವಾಗಿದ್ದರೆ ಮಧ್ಯಮ ಫಲ – ವಿರುದ್ಧ ಫಲದ ಗ್ರಹ ಶಾಂತಿ ಮಾಡುವುದು ವಿಹಿತ.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಕಾಲಚಕ್ರ ದಶಾಂತರ ದಶಾಧ್ಯಾಯಃ ಸಮಾಪ್ತಃ

ಬೃಹತ್ ಪರಾಶರ ಶಾಸ್ತ್ರೇ ಪೂರ್ವಾರ್ಧೋಯಂ ವಿಶೇಷತಃ
ಸವಿಮರ್ಶಾರ್ಸ ಸುಧಾಧ್ಯಾಯಾವ್ಯಾಯುಕ್ತಿ ಪೂರ್ತಿಮಾಗಾದಿತಿ ।

ಒ೬ನೇ ಅಧ್ಯಾಯ

# ಅಥ ಅಷ್ಟಕ ವರ್ಗಾಧ್ಯಾಯಃ

## ಮೈತ್ರೇಯ ಉವಾಚ:

ಭಗವನ್ । ಸರ್ವಮಾಖ್ಯಾತ ಮನೇಕಾಚಾರ್ಯ ಸಮ್ಮತಮ್ ।
ಖೇಟ ಭಾವಾದಿಜನಿತಂ ಫಲಂ ತದ್‌ಗತಿಸಂಕರಾತ್ ॥೧॥

ಗ್ರಹಾಣಾಂ ತತ್ಫಲಾನಂ ಚ ನಿಶ್ಚಯೋಽಪ್ಯತಿದುಸ್ತರಃ ।
ಕಲೌ ವಿಶೇಷತೋಽಲ್ಪಜ್ಞ ಜನಾನಾಂ ಪಾಪಿನಾಂ ಕೃತೆ ॥೨॥

ಯದಲ್ಪಮತಿ ವಿಜ್ಞೇಯಂ ಶಾಸ್ತ್ರಂ ತದ್ ಭ್ರೂಹಿಮೇತ್ವತಃ ।
ಲೋಕಯಾತ್ರಾ ಪರಿಜ್ಞಾನಮಾಯುಷೆ ನಿರ್ಣಯಂ ಯತಃ ॥೩॥

## ಮೈತ್ರೇಯರು ಕೇಳಿದರು–

ಹೇ ಭಗವನ್ ಸ್ವರೂಪನೆ, ತಾವು ಅನೇಕ ಆಚಾರ್ಯರಿಗೆ ಸಮ್ಮತವಾದ ಗ್ರಹ ಹಾಗೂ ಭಾವದ ಫಲ ಹೇಳಿದ್ದಿರಿ. ಆದರೆ ಗ್ರಹಗಳ ಗತಿವೈವಿಧ್ಯದಿಂದ ಫಲದ ಸಂಕರತಾ ಸ್ವಾಭಾವಿಕವಾಗಿದೆ. ಆದಕ್ಕಾಗಿ ಫಲದ ನಿಶ್ಚಯ ಹೇಳುವುದು. ಅತ್ಯಧಿಕ ಕಠಿಣವೇ ಆದಾಗ್ಯೂ ಕಲಿಯುಗದಲ್ಲಿ ಅಲ್ಪಬುದ್ಧಿ ಪಾಪಿಗಳಿವೆ. ಅದಕ್ಕೂ ದುಸ್ತರವೆ – ಈ ಕಾರಣ ಅಲ್ಪಬುದ್ಧಿಗಳಿಗೂ ನಿರ್ಣಯ ಹೇಳುವಂತೆ ಹೇಳಿರಿ. ಯಾವುದರಿಂದ ಲೋಕಯಾತ್ರಾ (ಸುಖ ದುಃಖ)ದ ಪರಿಜ್ಞಾನ ಹಾಗೂ ಆಯುಷ್ಯದ ನಿರ್ಣಯ ಹೇಳಲು ಸಾಧ್ಯವಾಗುತ್ತದೆ.

## ಪರಾಶರ ಉವಾಚ:

ಸಾಧು ಪೃಷ್ಟಂತ್ವಯಾ ಬ್ರಹ್ಮನ್ ನಿಖಿಲಂ ತದ್ ಬ್ರವಿಮಿತೆ ।
ಲೋಕಾನಾಮುಪಪಕಾರಾಯ ಶೃಣು ತ್ವಂ ಸುಸಮಾಹಿತಃ ॥೪॥

ಲಗ್ನಾದಿ ವ್ಯಯ ಭಾವಾಂತಾ, ಭಾವಾಃ ಸಂಜ್ಞಾನುರೂಪತಃ ।
ಫಲದಾಃ ಶುಭ ಸಂದೃಷ್ಟಾಃ ಸದ್ಯುಕ್ತಾವತಿಶೋಭನಾಃ ॥೫॥

ಸ್ವೋಚ್ಚಾದಿಸ್ಥಾನಗೈಃ ಖೇಟೈರಪಿ ನೀಚಾಂ ಭಸ್ಥಿತೈಃ ।
ಪಾಪೈ ದೃಷ್ಟಯುತಾ ಭಾವಾಃ ಕಲ್ಯಾಣೋತರದಾಯಕಃ ॥೬॥

ಏವಂ ಸಾಮಾನ್ಯತಃ ಪ್ರೋಕ್ತಂ ಹೋರಾವಿದ್ಭಿಸ್ತು ಸೂರಿಭಿಃ ।
ಮಯ್ಯೈತತ್ಸಕಲಂ ಪ್ರೋಕ್ತಂ ಪೂರ್ವಾಚಾರ್ಯಾನುವರ್ತಿನಾ ॥೭॥

ಆಯುಶ್ಚ ಲೋಕಯಾತ್ರಾಂ ಚ ಪ್ರಯೋಜನಮಪಿ ದ್ವಿಜ ।
ಶಾಸ್ತ್ರಸ್ಯಾಸ್ಯ ವಿನಿಶ್ಚೇತುಂ ವಶಿಷ್ಠೋವಾ ಬೃಹಸ್ಪತಿಃ ॥೮॥

ನಶಕ್ನೋತಿ ಪುನಃ ಕಿಂ ವಾ ಮನುಜಾ ಮಂದ ಬುದ್ಧಯಃ ।
ವಿಶೇಷತಃ ಕಲಿಯುಗೆ ಸರಲೋಯಂ ನ ನಿಶ್ಚಯಃ ॥೯॥

## ಪರಾಶರರು ಹೇಳಿದರು–

ಹೇ ಬ್ರಹ್ಮನ್ – ನೀವು ಉತ್ತಮ ಪ್ರಶ್ನೆ ಮಾಡಿದ್ದಿರಿ. ಲೋಕೋಪಕಾರಕ್ಕಾಗಿ ಎಲ್ಲವನ್ನು ತಮಗೆ ನಾನು ಹೇಳುತ್ತೇನೆ. ಸಾವಧಾನ ಪೂರ್ವಕವಾಗಿ ಕೇಳಿರಿ.

ಲಗ್ನದಿಂದ ಆರಂಭಿಸಿ ವ್ಯಯದವರೆಗೆ 12 ಭಾವಗಳು ಸಂಜ್ಞಾರುಪ (ಶರೀರ, ಧನ, ಸಾಹಸ, ಮಾತೃ, ಪುತ್ರ, ಶತ್ರು ರೋಗ, ಜಾಯಾ,ರಂಧ್ರ, ಭಾಗ್ಯ, ಕರ್ಮ, ಲಾಭ ಹಾಗೂ ವ್ಯಯ) ಸ್ಥಾನಗಳು ಶುಭಗ್ರಹಯು ದೃಷ್ಟವಾಗಿದ್ದರೆ – ಅದರಲ್ಲಿಯೂ ಉಚ್ಚಾದಿಯಾಗಿದ್ದರೆ ಅತಿಶುಭದಾಯಕವಾಗಿರುತ್ತವೆ. ಅದೇ ಭಾವ, ನೀಚಶತ್ರುಭವನ ಇತ್ಯಾದಿಯಲ್ಲಿ ಸ್ಥಿತ ಪಾಪಗ್ರಹಯುತ ದೃಷ್ಟವಾಗಿದ್ದರೆ ಅಶುಭ ಫಲದಾಯಕವಿದ್ದು ಇದು ಅತಿ ಸಾಮಾನ್ಯ ನಿಯಮವಾಗಿದೆ. ಇದು ಎಲ್ಲ ಜಾತಕ ಗ್ರಂಥಗಳಲ್ಲಿ ಜ್ಯೋತಿಷಿಗಳಿಂದ ತಿಳಿಯಲ್ಪಟ್ಟಿದೆ. ನಾನು ಕೂಡ ಪೂರ್ವಾಚಾರ್ಯರ ಅನುಕರುಣೆಯಂತೆ ಎಲ್ಲವನ್ನು ಹೇಳಿದ್ದೇನೆ. ಆಯುಷ್ಯ, ಸುಖ-ದಃಖದ ವಿಚಾರ ಶಾಸ್ತ್ರದ ಪ್ರಯೋಜನ ಆದಿಯನ್ನು ನಿಶ್ಚಿತ ಹೇಳಿಸಲು ವಶಿಷ್ಟ ಬೃಹಸ್ಪತಿಯ ಅಸಮರ್ಥರಾದ್ದರಿಂದ ಮಂದ ಬುದ್ಧಿಯ ಮನುಷ್ಯರ ಮಾತು ಬೇರೆಯೇ ಆಯಿತು. ಆದಾಗ್ಯೂ ಕಲಿಯುಗದಲ್ಲಿ ನಿರ್ಣಯಿಸುವವರಲ್ಲಿ

ಹೋರಾಶಾಸ್ತ್ರಂ ದ್ವಿಧಾ ಪ್ರೋಕ್ತಂ ಸಾಮಾನ್ಯಂ ನಿಶ್ಚಯಾತ್ಮಕಮ್ ।
ಸಾಮಾನ್ಯಂ ಶಸ್ತು ಸಂಪ್ರೋಕ್ತೋ ನಿಶ್ಚಯಾಂಶೋಥ ಕಥ್ಯತೆ ॥೧೦॥

ಸಾಮಾನ್ಯ ಹಾಗೂ ನಿಶ್ಚಯಾತ್ಮಕ (ವಿಶೇಷ) ಎಂಬ ಎರಡು ಭೇದಗಳು ಹೋರಾಶಾಸ್ತ್ರದಲ್ಲಿವೆ. ಸಾಮಾನ್ಯಾಂಶ ಮೊದಲನೇ ಭಾಗದಲ್ಲಿ ಹೇಳಲಾಗಿದೆ. ಈಗ ನಿಶ್ಚಯಾಂಶ (ವಿಶೇಷ) ಫಲ ಹೇಳುತ್ತೇನೆ.

ಜ್ಞಾತ್ವಾದೌಕರಣಾ ಸ್ಥಾನಂ ಬಿಂದುರೇಖಾತ್ಮಕಂ ಕ್ರಮಾತ್ ।
ಏವಮಷ್ಟಕವರ್ಗಸ್ಯ ಫಲಂ ಜ್ಞೇಯಂ ವಿಚಕ್ಷಣೈಃ ॥೧೧॥

ತನೋಶ್ಚಂದ್ರಮಸೋ ವಾಪಿ ಯಥಾ ದ್ವಾದಶಭಾವಜಮ್ ।
ಶುಭಾಶುಭಫಲಂ ಪ್ರೋಕ್ತಂ ತಥಾನ್ಯೇಭ್ಯೋಽಪಿ ಚಿಂತಯೇತ್ ॥೧೨॥

ಸೂರ್ಯಾದೀನಾಂ ಸಲಗ್ನಾನಾಮಷ್ಟಾನಾಂ ಸರ್ವಭಾವಜಮ್ ।
ಅಶುಭಂ ವಾ ಶುಭಂ ವಿಜ್ಞೈರ್ವೇದ್ಯಮೇವ ಮನುಕ್ರಮಾತ್ ॥೧೩॥

ಯಾವ ರೀತಿಯಾಗಿ ಲಗ್ನ ಅಥವಾ ಚಂದ್ರನಿಂದ ಗ್ರಹಗಳ ದ್ವಾದಶ ಭಾವ ಜನ್ಮ ಶುಭಾಶುಭ ಫಲ ಹೇಳಲ್ಪಟ್ಟಿದೆಯೋ ಅದೇ ರೀತಿ ಅನ್ಯಗ್ರಹಗಳಿಂದಲೂ ಭಾವ ಶುಭಾಶುಭಫಲವಿರುತ್ತದೆ. ಲಗ್ನ ಸಹಿತ ಸೂರ್ಯಾದಿ ಎಂಟು ಗ್ರಹ (ಏಳು ಗ್ರಹ ರಾಹು, ಕೇತುಗಳನ್ನು ಹೊರತುಪಡಿಸಿ ರ,ಚ,ಮ, ಶನಿ ಹಾಗೂ ಲಗ್ನ – ಒಟ್ಟು 8) ಎಲ್ಲ ಭಾವಸ್ಥ ಬಿಂದು ರೇಖಾತ್ಮಕ ಅಶುಭ ಶುಭ ಚಿಹ್ನೆ – ಇಲ್ಲಿ ಬಿಂದು ರೇಖೆಗಳು ಕರಣಸ್ಥಾನ ಸಂಜ್ಞಾಂತರ ಶಬ್ದಗಳಾಗಿವೆ. ಇವುಗಳನ್ನು ತಿಳಿದು ಅಷ್ಟಕ ವರ್ಗ ಫಲಾದೇಶ ಮಾಡುವುದು. ಇಲ್ಲಿ ಆಶಯ ಲಗ್ನ ಸಹಿತ ಸೂರ್ಯಾದಿ ಮುಂದಿನ ಭಾವೋತ್ಥ ಅಶುಭ ಸೂಚಕ ಚಿಹ್ನಕರಣಕ್ಕೆ ಬಿಂದು ಎಂದು ಹಾಗೂ ಶುಭ ಸೂಚಕ ಸ್ಥಾನಕ್ಕೆ ರೇಖೆ ಎಂದು ಫಲಾ ದೇಶ ಹೇಳುವುದು.

ಈಗ – ಕರಣಕ್ಕೆ ರೇಖೆ ಎಂದು, ಸ್ಥಾನಕ್ಕೆ ಬಿಂದು ಎಂದು ಪ್ರಯೋಗಿಸುತ್ತಾರೆ ಬಿಂದು ಶುಭ ರೇಖೆ ಅಶುಭವಾಗಿದೆ. ಏಕೆ ಬದಲಾಯಿತೋ ತಿಳಿಯುತ್ತಿಲ್ಲ. ಈ ಬದಲಾವಣೆ ಉತ್ತರ ದಕ್ಷಿಣದಿಂದಾಗಿದೆಯೋ ಅಥವಾ ಜ್ಯೋತಿಷ್ಯದ ಪರ್ವ ಕಾಲದಲ್ಲಾಗಿದೆಯೋ ತಿಳಿದಿಲ್ಲ. ಇಲ್ಲಿ ಬದಲಾದುದು ಹೆಸರು ಮಾತ್ರ – ಸಾಮಾನ್ಯ.

ಕರಣಕ್ಕೆ – ರೇಖೆ

ಸ್ಥಾನಕ್ಕೆ – ಬಿಂದು ಎಂದಾಗಿದೆ. ಇಲ್ಲಿ ಪರಾಶರರಂತೆ ವಿವರಿಸಿದೆ.

### ಕರಣ ಹಾಗೂ ರೇಖಾ ಪರಿಚಯ

ಕರಣಾ ಬಿಂದುವತ್ಪ್ರೋಕ್ತಂ ಸ್ಥಾನಂ ರೇಖಾ ತಥೋಚ್ಯತೇ ।
ಸದಸತ್ಫಲದಂ ಜ್ಞೇಯಂ ಸ್ಥಾನಂ ಚ ಕರಣಾ ಬುಧೈಃ ॥೧೪॥

ಕರಣದ ಎರಡನೇ ಹೆಸರೆ (ಸಂಜ್ಞೆ) ಬಿಂದು ಸ್ಥಾನ ರೇಖಾ ಎಂದು ಕರೆಯಲ್ಪಟ್ಟು ಸ್ಥಾನ – ಶುಭಸೂಚಕ (ರೇಖಾ) ಕರಣ-ಬಿಂದು ಅಶುಭಫಲದ್ದಾಗಿದೆ.

## ಅಷ್ಟಕ ವರ್ಗೀಯ ಚಕ್ರನ್ಯಾಸ ವಿಧಿ

ರೇಖಾಯಾಮ್ಯೋತ್ತರಾಃ ಶಕ್ರಮಿತಾಃ ಪೂರ್ವಾಪರಾ ದಶಾ ।
ವಿಲಖ್ಯಃ ರಚಯೇಚ್ಚಕ್ರಮಗೆಶಯಿತ ಕೋಷ್ಟಕಮ್ ॥೧೫॥

ಪೂರ್ವಾಪರೇಷು ಕೋಷ್ಟೆಷು ಭಾವನಾದ್ಯೆಷು ವಿನ್ಯಸೇತ್ ।
ಸಲಗ್ನಖೇಟಾನ್ ವಿಲಿಖೇತ ತಿರ್ಯನಷ್ಟಸುತೇಷು ವೈ ॥೧೬॥

ಶುಭಾಶುಭಪ್ರದಂ ತತ್ರಸ್ಥಾನಂ ಕರಣಮೇವ ವಾ ।

ಯಥೊದಿತಮಭಿಜ್ಞಾಯ ಫಲಂ ವಿಜ್ಞಸ್ತತೋ ದಿಶೇತ್ ॥೧೭॥

ಅಷ್ಟವರ್ಗದಲ್ಲಿ ಶುಭಾಶುಭ ತಿಳಿಯಲು 14 ಯಾಮ್ಯೋತ್ತರ ರೇಖೆಗಳನ್ನು ಹಾಗೂ 10 ಪೂರ್ವೋತ್ತರ ರೇಖೆಗಳನ್ನು ಬರೆದು 117 ಕೋಷ್ಟಗಳ ಒಂದು ಚಕ್ರವ ರಚನೆ ಮಾಡುವುದು. ಮೊದಲು ಪೂರ್ವಾಪರ ಕೋಷ್ಟದ 12 ಭಾವದಲ್ಲಿ ಹಾಗೂ ಪೂರ್ವಾಪರದಲ್ಲಿ ಲಗ್ನಸಹಿತ ಗ್ರಹಗಳ ನ್ಯಾಸ ಮಾಡಿ ಆ ಚಕ್ರಗಳಲ್ಲಿ ಕೆಳಗೆ ವಿವರಿಸಿದಂತೆ ಕರಣ (ಬಿಂದು), ರೇಖಾ (ಸ್ಥಾನ) ತುಂಬಿ ಅಶುಭ ಶುಭ ಫಲ ತಿಳಿಯುವುದು. (ಇಲ್ಲಿ ಮೊದಲು ಪೂರ್ಣಚಕ್ರ ಹಾಕಿದೆ ಬಿಡಿಬಿಡಿಯಾಗಿ ವಿವರಿಸಿದೆ)

ಈ ಪ್ರಕಾರ ಯಾವ ಯಾವ ಗ್ರಹದ ಕೆಳಗೆ ಯಾವ ಯಾವ ಭಾವದಲ್ಲಿ ಬಿಂದು ಬಿದ್ದಿವೆ – ಆ ಭಾವದಲ್ಲಿ ಯಾವಾಗ ಗ್ರಹ ಬರುತ್ತದೆಯೋ ಆಸಮಯ ಅಶುಭ ಫಲ. ಉದಾಹರಣೆಗೆ ಸೂರ್ಯಾಷ್ಟ ವರ್ಗದಲ್ಲಿ ಸೂರ್ಯನ ಕೆಳಗೆ 3-5-6-12ರಲ್ಲಿ ಬಿಂದುಗಳು ಬೀಳುತ್ತವೆ. ಅದರಿಂದ ಸೂರ್ಯನ ಜನ್ಮಕಾಲದಲ್ಲಿಯ ಸ್ಥಾನ ಎಣಿಸಿ ಉಪರ್ಯುಕ್ತ ಭಾವದಲ್ಲಿ ಯಾವಗಾಗೋ ಚರ ಸೂರ್ಯ ಬರುವನೋ ಆಗ ಅಶುಭಕಾರಕ ಅನ್ಯಭಾವವಾದ 1, 2, 4, 7, 8, 9, 10, 11ರಲ್ಲಿ ಸೂರ್ಯನು ಶುಭದಾಯಕನು.

ಇದಕ್ಕೂ ಸ್ಪಷ್ಟವಾಗಿ ಹೇಳುವುದಾದರೆ ಕಲ್ಪಿತ ಕುಂಡಲಿಯಲ್ಲಿ ಕರ್ಕಲಗ್ನ ತುಲಾದಲ್ಲಿ ಸೂರ್ಯನಿದ್ದು ಕೆಂಪು ಶಾಯಿಯಿಂದ ಲಗ್ನಸ್ಥಾನ ತೋರಿಸಿ ಕರಿ ಶಾಯಿಯಿಂದ ರೇಖೆ ಬಿಂದು ಹೇಳಿದೆ.

## ಕರ್ಕಲಗ್ನ ತುಲಾದಲ್ಲಿ ಸೂರ್ಯ

5 1 3 1
4
1
6 2 1
•
7 1
ಸೂ 1
1 1
10
8 12
1 •
1
9 • •11

| • | 1 | 1 | 1 |
|---|---|---|---|
| • | | | 1 |
| 1 | | | 1 |
| • | | 1 ಸೂ | • |

ಈ ಉದಾಹರಿತ ಕುಂಡಲಿಯಲ್ಲಿ ಸೂರ್ಯ ರೇಖಾಯುಕ್ತನಾಗಿರುವುದು ತುಲಾ ರಾಶಿಯಾದರೂ ಸ್ವಲ್ಪ ಶುಭಕಾರಕನೆ. ಅಂದರೆ ಸೂರ್ಯನು ಗೋಚಾರದಿಂದ ಕರ್ಕ, ಸಿಂಹ, ತುಲಾ, ವೃಶ್ಚಿಕ, ಮಕರ, ಮೇಷ, ವೃಷಭ ಹಾಗೂ ಮಿಥುನದಲ್ಲಿ ಬಂದಾಗ ಶುಭನು ಹಾಗೂ ಕನ್ಯಾ, ಧನು, ಕುಂಭ ಹಾಗೂ ಮೀನದಲ್ಲಿ ಅಶುಭನು --- ಇದೇ ರೀತಿ ಇತರ ಗ್ರಹ ಬಿಂದು ರೇಖೆಗಳನ್ನು ಹಾಕಿ (ಲಗ್ನಸಹಿತ) ಹೆಚ್ಚು ರೇಖೆಗಳಿದ್ದ ಸ್ಥಾನ ಶುಭ ಬಿಂದುಗಳಿದ್ದ ಸ್ಥಾನ ಅಶುಭ) ಎಲ್ಲ ಗ್ರಹಗಳಿಗೂ ಪ್ರತ್ಯೇಕ ಹಾಕಬಹುದು (ಇದು ಪ್ರಥಮ ಹೆಜ್ಜೆ).

## ಸೂರ್ಯನ ಬಿಂದು ಸಂಖ್ಯೆ

ತನುಸ್ವಾಯುಸ್ತ್ರೀರಿಪ್ಫೇಷು ಪಂಚಕಾಮೇ ಸುಖೇರ್ಣವಃ ।
ಅರೌಭಾಗ್ಯೆ ತ್ರಯಃ ಪುತ್ರೇಷಟ್ ಕರೌಖೇ ಭವೆ ಚ ಭೂಃ ॥೧೮॥

ಸೂರ್ಯನಿಂದ 1, 2, 8, 3, 12 ಸ್ಥಾನಗಳಲ್ಲಿ ಐದು ಗ್ರಹ ಚತುರ್ಥ ಹಾಗೂ ಸಪ್ತಮದಲ್ಲಿ 4 ಗ್ರಹ ಷಷ್ಠ ಹಾಗೂ ನವಮಭಾವದಲ್ಲಿ 3 ಗ್ರಹ, ಪಂಚಮದಲ್ಲಿ 6 ಗ್ರಹ, ದಶಮದಲ್ಲಿ 2 ಗ್ರಹ, ಏಕಾದಶದಲ್ಲಿ ಒಂದು ಗ್ರಹ – ಕರಣ (ಬಿಂದು) ಪ್ರದವಾಗಿರುತ್ತದೆ.

## ಸೂರ್ಯನ ಬಿಂದು ಪ್ರದ ಗ್ರಹ

ಲಗ್ನೇಂದು ಜೀವಶುಕ್ರಜ್ಞಾಸ್ತನೌ ಸ್ವೆ ಮರಣೆಪಿ ಚ ।
ರವಿಭೌಮಾಕಿ ಚಂದ್ರಾರ್ಯಾ ವ್ಯಯೇ ಜ್ಞೇಂದುಸಿತಾರ್ಯಕಾಃ ॥೧೯॥

ಸುಖೆ ಹೋರೆಂದು ಶುಕ್ರಾಪ್ತ ಧರ್ಮೇರ್ಕಾರ್ಕಿ ಕುಜಾ ಅರೌ ।
ಹೋರಾಜ್ಞೇರ್ಯೇಂದವಃ ಕಾಮೇ ಭವೆ ದೈತ್ಯೇಂದ್ರಪಜಿತಃ ॥೨೦॥

**ಸಹಜೇರ್ಕಾರ್ಕಿಶುಕ್ರಾರ್ಯ ಭೌಮಾಃ ಖೆ ಗುರು ಭಾರ್ಗವೌ ।**
**ಸುತೇರ್ಕಾರ್ಕೀಂದುಲಗ್ನಾರ ಶುಕ್ರಾಃ ಸ್ಯುಃ ಕರಣಾ ರವೇಃ ॥೨೧॥**

## ಸೂರ್ಯಾಷ್ಟಕ ವರ್ಗದಲ್ಲಿ

ಲಗ್ನ
ಚಂದ್ರ
ಗುರು
ಶುಕ್ರ
ಬುಧ
} ತಾವಿದ್ದ ಸ್ಥಾನದಿಂದ 1, 2, 8 ರಲ್ಲಿ ಬಿಂದುಗಳನ್ನು ಕೊಡುವರು

ಸೂರ್ಯ
ಭೌಮ
ಶನಿ
ಚಂದ್ರ
ಗುರು
} ಈ ಐದು ಗ್ರಹಗಳು ವ್ಯಯದಲ್ಲಿ ಬಿಂದು ಧಾತುಗಳು (ತಮ್ಮ ಸ್ಥಾನದಿಂದ)

ಬುಧ
ಚಂದ್ರ
ಶುಕ್ರ
ಗುರು
} ಈ ನಾಲ್ಕು ಗ್ರಹಗಳು ನವಮದಲ್ಲಿ (ತಮ್ಮ ಸ್ಥಾನದಿಂದ)ಬಿಂದು ದಾತರು.

ಲಗ್ನ, ಚಂದ್ರ, ಶುಕ್ರ ಈ ಮೂರು ಗ್ರಹ ಷಷ್ಠಭಾವದಲ್ಲಿ ಶನಿ, ಭೌಮ, ಸೂರ್ಯರು ಸಪ್ತಮದಲ್ಲಿ ಬಿಂದು ಪ್ರದರು. ಲಗ್ನ, ಬುಧ, ಚಂದ್ರ ಈ ನಾಲ್ಕು ಗ್ರಹಗಳು ಏಕಾದಶಲ್ಲಿ, ಶುಕ್ರ ಮಾತ್ರ ಸಹಜದಲ್ಲಿ.

ಸೂರ್ಯ, ಶನಿ, ಶುಕ್ರ, ಗುರು, ಮಂಗಳ ಈ ಐದು ಗ್ರಹಗಳು ದಶಮದಲ್ಲಿ ಬಿಂದು ಪ್ರದರು.

ಗುರು, ಶುಕ್ರ ಈ ಗ್ರಹಗಳು ಪಂಚಮದಲ್ಲಿ ಬಿಂದು ಪ್ರದ. ಸೂರ್ಯ, ಶನಿ, ಚಂದ್ರ, ಲಗ್ನ, ಮಂಗಳ, ಶುಕ್ರ ಈ ಆರು ಗ್ರಹಗಳು ಪಂಚಮ ಭಾವದಲ್ಲಿ ಬಿಂದುಪ್ರದವಾಗುತ್ತವೆ. ಬಿಂದು ನಕ್ಷೆ ಹೀಗಿದೆ.

## ಸೂರ್ಯ-ಬಿಂದು ಸಂಖ್ಯೆ

| ಗ್ರಹ ಭಾವ | ಸೂ | ಚಂ | ಮಂ | ಬು | ಗು | ಶು | ಶ | ಲಗ್ನ | ಅಂಶ |
|---|---|---|---|---|---|---|---|---|---|
| 1 | | 0 | | 0 | 0 | 0 | | 0 | 5 |
| 2 | | 0 | | 0 | 0 | 0 | | 0 | 5 |
| 3 | 0 | | 0 | | 0 | 0 | 0 | | 5 |
| 4 | | 0 | | 0 | 0 | 0 | | | 4 |
| 5 | 0 | 0 | 0 | | | 0 | 0 | 0 | 6 |
| 6 | 0 | | 0 | | | | 0 | | 3 |
| 7 | | 0 | | 0 | 0 | | | 0 | 4 |
| 8 | | 0 | | 0 | 0 | 0 | | 0 | 5 |
| 9 | | 0 | | | | 0 | | 0 | 3 |
| 10 | | | | | 0 | 0 | | | 2 |
| 11 | | | | | | | 0 | | 1 |
| 12 | 0 | 0 | 0 | | 0 | | 0 | | 5 |
| | 4 | 8 | 4 | 5 | 8 | 9 | 4 | 6 | 48 |

ವಿಮರ್ಶೆ : ಪ್ರತ್ಯೇಕ ಗ್ರಹ ಹಾಗೂ ಲಗ್ನ ಜನ್ಮಕಾಲಿಕ ಸ್ಥಿತಿಯಿಂದ ರಾಶಿಗಳ ಮೇಲೆ ಶುಭಾಶುಭ ಪ್ರಭಾವ ಬೀರುತ್ತವೆ. ಅರ್ಥಾತ್ ಜನ್ಮಸಮಯದಲ್ಲಿಯ ಏಳು ಗ್ರಹಗಳ ಸ್ಥಾನ ಲಗ್ನಸ್ಥಾನ ಈ ಎಂಟು ಅಂಶಗಳಲ್ಲಿ ವಿಶೇಷತೆ ಇದೆ. ಈ ಎಂಟು ಭಾಗಗಳಿಂದ ಗೋಚಾರ ಫಲದ ವಿಚಾರ ಮಾಡಿದಾಗ ಆ ಫಲ ಸೂಕ್ಷ್ಮ ಹಗೂ ವಿಶ್ವಾಸನೀಯವಾಗುತ್ತದೆ. ಈ ದೃಷ್ಟಿಯಿಂದಲೇ ಈ ಎಂಟು ಭಾಗಗಳಿಂದ ವಿಚಾರ ಮಾಡಲಾಗಿದೆ. ಅಷ್ಟವರ್ಗದಲ್ಲಿ ಪ್ರತ್ಯೇಕ ಗ್ರಹ ತಮ್ಮ ತಮ್ಮ ಸ್ಥಾನದಿಂದ ಯಾವ ಯಾವ ಸ್ಥಾನದಲ್ಲಿ ಬಲ ಪ್ರದಾನ ಮಾಡುತ್ತವೆಯೋ ಅದನ್ನು ಅದರ ಶುಭ ಫಲದಾತೃತ್ವದಿಂದ ರೇಖಾ ಬಿಂದುಗಳಿಂದ ವ್ಯಕ್ತ ಮಾಡುವ ಸಂಕೇತವಾಗಿದೆ. ಇದು ವೇದಾಂಗದಲ್ಲಿ ಸ್ಪಷ್ಟ ನಿರ್ದೇಶಿಸಲ್ಪಟ್ಟಿದೆ. (ಕೇವಲ ಚಂದ್ರನಿಂದ ಗೋಚಾರ ನೋಡುವುದು ಅಷ್ಟು ಸೂಕ್ಷ್ಮವಲ್ಲ) ಪರಾಶರರು ತಮ್ಮ ಗ್ರಂಥದಲ್ಲಿ ರೇಖೆಯಿಂದ ಶುಭಸೂಚಕ ಸ್ಥಾನವನ್ನು ನಿರ್ದೇಶಿಸಿದ್ದಾರೆ ವಸ್ತುತಃ – ರೇಖೆ ಬಿಂದುಗಳಲ್ಲಿ ವಿಶೇಷವಿಲ್ಲ. ಕೆಲವು ಗ್ರಂಥಗಳಲ್ಲಿ – ಶುಭ ಸೂಚಕ ಬಿಂದು – ಅಶುಭ ರೇಖೆ ಎಂದು ಉಲ್ಲೇಖಿಸಿದ್ದಾರೆ. ಆದರೆ ಶುಭ ಸೂಚಕ ಹೆಸರು ರೇಖೆ ಎಂದುಈ ಗ್ರಂಥದಲ್ಲಿ ಪರಾಶರರ ಅಭಿಪ್ರಾಯದಂತೆ ನೀಡಲಾಗಿದೆ. (ಬದಲಾವಣೆ ಹೆಸರು ಮಾತ್ರ)

## ಚಂದ್ರನ ಬಿಂದು ಸಂಖ್ಯಾ ಹಾಗೂ ಬಿಂದುಗ್ರಹ

ಭಾಗ್ಯಸ್ವಯೋಶ್ಚ ಷಡ್ ವೇಶ್ಮಮೃತಿಹೋರಾಸು ಪಂಚ ಚ ।
ಮಾನುದಾಶ್ಚಿಕ್ಯಯೋರೇಕಃ ಸುತೇ ವೇದಾ ಅರಿಸ್ತ್ರೀಯೋಃ ॥೨೨॥

ತ್ರಯೋ ವ್ಯಯೇಷ್ಟಾವಾಯೇ ಚ ಶೂನ್ಯಂ ಶೀತಕಾಸ್ಯತು ।
ಹೋರಾರ್ಕಾರಾರ್ಶಿಭೃಗವೋಂಗಜ್ಞಾ ಕೇಂದ್ರಾರ್ಕಿ ಭಾರ್ಗವಾಃ ॥೨೩॥

ಜೀವೋರ್ಕಾರ್ಕಿಂದುಲಗ್ನಾರಾ ಹೋರೆಂದು ಭಾಸ್ಕರಾಃ ।
ಸಿತಜ್ಞಾರ್ಯಾಃ ಕುಜತನುಮಂದಸ್ತೇ ಸಿತಶೀತಗ್ ॥೨೪॥

ಚಂದ್ರಾಷ್ಟಕ ವರ್ಗದ 9,2 ಭಾವದಲ್ಲಿ 6 ಗ್ರಹ, 4, 8, 1 ಭಾವದಲ್ಲಿ 5 ಗ್ರಹ, 10, 3 ಭಾಗದಲ್ಲಿ 1 ಗ್ರಹ, ಪಂಚಮ ಭಾವದಲ್ಲಿ 4 ಗ್ರಹ, 6,7 ಭಾವದಲ್ಲಿ 3 ಗ್ರಹ, 12ನೇ ಭಾವದಲ್ಲಿ 8 ಗ್ರಹ (ಎಲ್ಲ) – 11ರಲ್ಲಿ ಯಾವುದೇ ಗ್ರಹ ಬಿಂದುವನ್ನಿಡುವರೇ ಅಂದರೆ ಬಿಂದುಪ್ರದವಾಗಲಾರದು.

ಪ್ರಥಮ ಭಾವದಲ್ಲಿ ಲಗ್ನ, ಸೂರ್ಯ, ಮಂಗಳ, ಶನಿ ಹಾಗೂ ಶುಕ್ರ ಈ ಐದು ಗ್ರಹಗಳು ಬಿಂದುಪ್ರದರು. ದ್ವಿತೀಯ ಭಾವದಲ್ಲಿ ಲಗ್ನ, ಬುಧ, ಸೂರ್ಯ, ಚಂದ್ರ, ಶನಿ ಹಾಗೂ ಶುಕ್ರ ಈ ಆರು ಗ್ರಹಗಳು ಬಿಂದು ಪ್ರದರು. 3ನೇ ಭಾವದಲ್ಲಿ ಗುರು ಒಬ್ಬನೇ ಬಿಂದು ಪ್ರದನು. ನಾಲ್ಕರಲ್ಲಿ ಸೂರ್ಯ, ಶನಿ, ಚಂದ್ರ, ಲಗ್ನ ಹಾಗು ಮಂಗಳ ಈ ಐದು ಗ್ರಹಗಳು ಬಿಂದು ಪ್ರದರು. ಪಂಚಮದಲ್ಲಿ ಲಗ್ನ, ಚಂದ್ರ, ಗುರು ಹಾಗೂ ರವಿ ಈ ನಾಲ್ಕು ಗ್ರಹಗಳು ಬಿಂದು ಪ್ರದರು. ಆರನೇ ಮನೆಯಲ್ಲಿ ಶುಕ್ರ, ಬುಧ ಹಾಗೂ ಗುರು ಈ ಮೂರು ಗ್ರಹಗಳು, ಅಷ್ಟಮದಲ್ಲಿ ಮಂಗಳ, ಲಗ್ನ, ಶನಿ, ಶುಕ್ರ ಹಾಗೂ ಚಂದ್ರ ಈ ಐದು ಗ್ರಹಗಳು ನವಮಸ್ಥಾನದಲ್ಲಿ ಲಗ್ನ, ರವಿ, ಮಂಗಳ, ಶನಿ, ಬುಧ ಹಾಗೂ ಗುರು ಈ ಗ್ರಹಗಳು ದಶಮದಲ್ಲಿ ಶನಿ ಮಾತ್ರ ಬಿಂದು ಪ್ರದವಾದರೆ, ಏಕಾದಶದಲ್ಲಿ ಯಾವುದೇ ಗ್ರಹ ಬಿಂದು ಪ್ರದವಾಗಲಾರದು. ದ್ವಾದಶದಲ್ಲಿ ಎಲ್ಲ ಎಂಟು ಗ್ರಹಗಳು ಬಿಂದುಪ್ರದರು.

ಈ ಪ್ರಕಾರ ಕೆಳಗಿನ ಚಕ್ರದಿಂದ ಈ ಅಂಶ ಸ್ಪಷ್ಟ ಜನ್ಮಸಮಯ ಸೂರ್ಯ ಎಲ್ಲಿರುವನೋ ಅಲ್ಲಿಂದ 1, 2, 4, 5, 9, 12 ಈ ಭಾವದಲ್ಲಿ ಚಂದ್ರ ಯಾವಾಗ ಬರುವನೋ ಆಗ ಅಶುಭ ಫಲ ಶೇಷ ಭಾವದಲ್ಲಿ ಶುಭ ಫಲವಾಗುತ್ತದೆ. ಇದೇ ರೀತಿ ಎಲ್ಲ ಗ್ರಹಗಳಿಂದ ನೋಡುವುದು ಹಾಗೂ ಗೋಚಾರಫಲ ಹೇಳುವುದು. ಗೋಚಾರ ಕೇವಲ ಚಂದ್ರನಿಂದ ನೋಡದೆ ಎಲ್ಲ ಗ್ರಹದಿಂದ ನೋಡುವುದೇ ಅಷ್ಟಕ ವರ್ಗದ ಉದ್ದೇಶ.

## ಚಂದ್ರಾಷ್ಟಕದಲ್ಲಿ ಚಂದ್ರನಿಂದ ಬಿಂದುಗಳು

| ಗ್ರಹ ಭಾವ | ಸೂ | ಚಂ | ಮಂ | ಬು | ಗು | ಶು | ಶ | ಲಗ್ನ | ಅಂಶ |
|---|---|---|---|---|---|---|---|---|---|
| 1 | 0 | | 0 | | | 0 | 0 | 0 | 5 |
| 2 | 0 | 0 | | 0 | | 0 | 0 | 0 | 6 |
| 3 | | | | | 0 | | | | 1 |
| 4 | 0 | 0 | 0 | | | | 0 | 0 | 5 |
| 5 | 0 | 0 | | | 0 | | | 0 | 4 |
| 6 | | | | 0 | 0 | 0 | | | 3 |
| 7 | | | 0 | | | | 0 | 0 | 3 |
| 8 | | 0 | 0 | | | 0 | 0 | 0 | 5 |
| 9 | 0 | | 0 | 0 | 0 | | 0 | 0 | 6 |
| 10 | | | | | | | 0 | | 1 |
| 11 | | | | | | | | | |
| 12 | 0 | 0 | 0 | 0 | 0 | 0 | 0 | 0 | 8 |
| | 6 | 5 | 6 | 4 | 5 | 5 | 8 | 8 | 47 |

### ಮಂಗಳನ ಬಿಂದು ಸಂಖ್ಯಾ ಬಿಂದು ಪ್ರದಗ್ರಹ

ಹೋರಾರ್ಕಾರಾರ್ಕಿವಿಜ್ಞ್ವಾಃ ಶನಿಃಸಂಸಕಲಾಂ ಕ್ರಮಾತ್ ।
ವ್ಯಯವೇಶ್ಮಸುತಸ್ತ್ರೀಷು ಷಟ ಸಪ್ತ ಧನಧರ್ಮಯೋಃ ॥೨೫॥

ಹೋರಾಮೃತ್ಯುವ್ಯೋಃ ಶರಾ ವೇದಾ ವಿಕ್ರಮೇ ಖೆ ತ್ರಯಕ್ಷತೆ ।
ದ್ವೌ ಭಾವೆ ಶೂನ್ಯಮೇವಂ ಸ್ಯಾತ್ ಕರಣಾ ಭೂಮಿಜಸ್ಯತು ॥೨೬॥

ಕುಜಸ್ಯಾರ್ಕೇಂದುವಿಜ್ಞ್ವಸಿತಾ ಲಗ್ನಶನೀಚ ತು ।
ಸಿತಾರಗುರು ಮಂದಾಃ ಸ್ಯುಧರ್ಮಮೇಕ್ತೈಷುಕುಜಂ ವಿನಾ ॥೨೭॥

ಚಂದ್ರಾದ ಗುರುತುಕ್ರಾರ್ಕಿ ಲಗ್ನಾನಿ ಕುಜ ಭಾಸ್ಕರಿ ।
ಜ್ಞೇಂದುರ್ಕಸಿತ ಲಗ್ನಾರ್ಯಾ ವಿಷು ಶುಕ್ರಂ ವಿನಾ ತತಃ ॥೨೮॥

ವಿನಾ ಶನಿಂ ಸಪ್ತಧರ್ಮೇ ಸಿತೇಂದುಜ್ಞಾ ವಿಯತ್ತತಃ ।
ಅರ್ಕಾರ್ಕಿಜ್ಞೇಂದು ಲಗ್ನಾರಾಃ ಕರಣಾ ಪ್ರೋಚ್ಯತೆ ಕ್ರಮಾತ್ ॥೨೯॥

ಭೌಮಾಷ್ಟಕ ವರ್ಗದಲ್ಲಿ 12, 4, 5, 7 ಭಾವದಲ್ಲಿ 6 ಗ್ರಹಗಳು, 2, 9 ಭಾವದಲ್ಲಿ 7 ಗ್ರಹಗಳು, 1, 8 ಭಾವದಲ್ಲಿ 5 ಗ್ರಹಗಳು, 3ರಲ್ಲಿ 4 ಗ್ರಹಗಳು, ದಶಮದಲ್ಲಿ 3 ಗ್ರಹ, ಷಷ್ಠದಲ್ಲಿ 2 ಗ್ರಹ ಹಾಗೂ ಏಕಾದಶದಲ್ಲಿ ಯಾವುದೇ ಗ್ರಹ ಬಿಂದು ಪ್ರದವಾಗುವುದಿಲ್ಲ.

ಪ್ರಥಮ ಭಾವ:– ರವಿ, ಚಂದ್ರ, ಬುಧ, ಗುರು, ಶುಕ್ರ 5 ಗ್ರಹಗಳು.

ದ್ವಿತೀಯ ಭಾವ:– ಲಗ್ನ ಹಾಗೂ ಶನಿ ಸಹಿತ ರವಿ, ಚಂದ್ರ, ಬುಧ, ಗುರು, ಶುಕ್ರರು – ಬಿಂದು ಪ್ರದಾತರು.

ತೃತೀಯ ಭಾವ:– ಶುಕ್ರ, ಗುರು, ಮಂಗಳ, ಶನಿ ನಾಲ್ಕು ಗ್ರಹಗಳು.

ಚತುರ್ಥ ಭಾವ:– ಸೂರ್ಯ, ಚಂದ್ರ, ಗುರು, ಶುಕ್ರ ಹಾಗೂ ಲಗ್ನ ಬುಧ 6 ಗ್ರಹಗಳು.

ಪಂಚಮ ಭಾವ:– ಚಂದ್ರ, ಮಂಗಳ, ಗುರು, ಶುಕ್ರ, ಶನಿ ಲಗ್ನ ಈ ಆರು ಗ್ರಹಗಳು.

ಷಷ್ಠ ಭಾವದಲ್ಲಿ ಮಂಗಳ, ಶನಿ ಈ ಎರಡು ಗ್ರಹಗಳ ಬಿಂದು ಪ್ರದಾತರು.

ಸಪ್ತಮ ಭಾವದಲ್ಲಿ ಬುಧ, ಚಂದ್ರ, ಸೂರ್ಯ, ಶುಕ್ರ, ಲಗ್ನ ಹಾಗೂ ಗುರು ಆರು ಗ್ರಹಗಳು.

ಅಷ್ಟಮ ಭಾವಕ್ಕೆ – ಬುಧ, ಚಂದ್ರ, ಸೂರ್ಯ, ಲಗ್ನ, ಗುರು 5 ಗ್ರಹಗಳೂ.

ನವಮಕ್ಕೆ – ಶನಿ ಅತಿರಿಕ್ತ ಎಲ್ಲಿ ಏಳು ಲಗ್ನ – ಶುಕ್ರನವರೆಗೆ ದಶಮಕ್ಕೆ ಶುಕ್ರ, ಚಂದ್ರ, ಬುಧ ಈ ಮೂರು ಗ್ರಹಗಳು ಬಿಂದು ಪ್ರದಾತರು.

ಏಕಾದಶಕ್ಕೆ – ಯಾವ ಗ್ರಹವು ಬಿಂದು ಪ್ರದಾತರಲ್ಲ.

ದ್ವಾದಶದಲ್ಲಿ ಶನಿ, ಬುಧ, ಚಂದ್ರ, ಲಗ್ನ ಹಾಗೂ ಮಂಗಳ 6 ಗ್ರಹಗಳು.

ಲಗ್ನ ಕುಂಡಲಿ ಸ್ಥಾನದಿಂದ 1, 2, 4, 7, 8, 9, 12 ಈ ಭಾವದಲ್ಲಿ ಮಂಗಳ ಬಂದಾಗ ಅಶುಭ, ಶೇಷ ಶುಭ.

ಮಂಗಳ

| ಗ್ರಹ ಭಾವ | ಸೂ | ಚಂ | ಮಂ | ಬು | ಗು | ಶು | ಶ | ಲಗ್ನ | ಅಂಕ |
|---|---|---|---|---|---|---|---|---|---|
| 1 | 0 | 0 |  | 0 | 0 | 0 |  |  | 5 |
| 2 | 0 | 0 |  | 0 | 0 | 0 | 0 | 0 | 7 |
| 3 |  |  | 0 |  | 0 | 0 | 0 |  | 4 |
| 4 | 0 | 0 |  | 0 | 0 | 0 |  | 0 | 6 |
| 5 |  | 0 | 0 |  | 0 | 0 | 0 | 0 | 6 |
| 6 |  |  | 0 |  |  |  | 0 | - | 2 |
| 7 | 0 | 0 |  | 0 | 0 | 0 |  | 0 | 6 |
| 8 | 0 | 0 |  | 0 | 0 |  |  | 0 | 5 |
| 9 | 0 | 0 | 0 | 0 | 0 |  |  | 0 | 7 |
| 10 |  | 0 |  | 0 |  | 0 |  |  | 3 |
| 11 | - | - | - | - | - | - | - | - | 0 |
| 12 | 0 | 0 | 0 | 0 |  |  | 0 | 0 | 6 |
|  | 7 | 9 | 5 | 8 | 8 | 8 | 5 | 7 | 57 |

## ಬುಧನ ಬಿಂದು ಸಂಖ್ಯೆ ಹಾಗೂ ಬಿಂದು ಪ್ರದ ಗ್ರಹ

ತನುಸ್ವಗೃಹಕರ್ಮಾರಿಧರ್ಮೆಷ್ಟಗ್ನಿರ್ಮೃತೌ ಕರೌ ।
ಭ್ರಾತೃಸ್ತ್ರೀಯೋಃ ರಸಾ ಲಾಭೆ ಶೂನ್ಯಂ ಪುತ್ರೆ ವ್ಯಯೋಃ ಶರಾಃ ॥೩೦॥

ಬುಧಸ್ಯಾರ್ಕೇಂದು ಗುರುವೊ ಗುರುಸೂರ್ಯಬುಧಾಃ ಕ್ರಮಾತ್ ।
ಲಗ್ನಾರ್ಕಾರಾರ್ಕಿ ಚಂದ್ರಾರ್ಯಾ ಜ್ಞಾರ್ಕಾರ್ಯಹಿ ಬುಧಸ್ಯತು ॥೩೦॥

ಜೀವಾರೇಂದುರ್ಕಿಲಗ್ನಾನಿ ಶುಕ್ರಮಂದರಾಸುತಾಃ।
ಜ್ಞೇಂದುಲಗ್ನಾರ್ಕಶುಕ್ರಾರ್ಯಾ ಜ್ಞಾರ್ಕೋಃ ಜೀವೇಂದು ಲಗ್ನಕಾಃ ॥೩೨॥

ಅರ್ಕಾರ್ಯಾ ಶುಕ್ರಾಃ ಶೂನ್ಯಂ ಚ ಹೋರೇಂದಾರಾರ್ಕಿ ಭಾರ್ಗವಾಃ ।

ಬುಧಾಷ್ಟಕ ವರ್ಗದಲ್ಲಿ 1, 2, 4, 10, 6, 9 ಈ ಭಾವಗಳಲ್ಲಿ 3 ಗ್ರಹ ಅಷ್ಟಮದಲ್ಲಿ, 2 ಗ್ರಹ ತೃತೀಯದಲ್ಲಿ ಹಾಗೂ ಸಪ್ತಮದಲ್ಲಿ 6 ಗ್ರಹ ಬಿಂದು ಪ್ರದಾತಾರಾದರೆ ಏಕಾದಶದಲ್ಲಿ ಯಾವುದೇ ಗ್ರಹ ಬಿಂದು ಪ್ರದಾತಾವಾಗುವುದಿಲ್ಲ. ಪಂಚಮ ಹಾಗೂ ವ್ಯಯಭಾವದಲ್ಲಿ 5 ಗ್ರಹಗಳು ಬಿಂದು ಪ್ರದಾತಾರಾಗುತ್ತಾರೆ. ಬುಧನ ಪ್ರಥಮ ಭಾವದಲ್ಲಿ ಸೂರ್ಯ, ಚಂದ್ರ, ಗುರು ಈ ಮೂರು ಗ್ರಹ ದ್ವಿತೀಯದಲ್ಲಿ, ಗುರು, ರವಿ, ಬುಧ ಈ ಮೂರು ಗ್ರಹ ತೃತೀಯ ಭಾವದಲ್ಲಿ ಲಗ್ನ ಮಂಗಳ, ಶನಿ, ಚಂದ್ರ ಹಾಗೂ ಗುರು ಈ ಆರು ಗ್ರಹಗಳು ನಾಲ್ಕರಲ್ಲಿ ಬುಧ, ಸೂರ್ಯ, ಗುರು ಈ ಮೂರು ಗ್ರಹ. ಪಂಚಮದಲ್ಲಿ ಗುರು, ಮಂಗಳ, ಚಂದ್ರ, ಶನಿ ಹಾಗೂ ಲಗ್ನ ಈ ಐದು ಗ್ರಹಗಳು. ಷಷ್ಠಭಾವದಲ್ಲಿ ಶುಕ್ರ, ಶನಿ, ಭೌಮ ಈ ಮೂರು ಗ್ರಹಗಳು. ಸಪ್ತಮದಲ್ಲಿ ಬುಧ, ಚಂದ್ರ, ಲಗ್ನ, ಸೂರ್ಯ, ಶುಕ್ರ, ಗುರು ಈ ಆರು ಗ್ರಹಗಳು. ಅಷ್ಟಮದಲ್ಲಿ ಬುಧ, ಸೂರ್ಯ ಈ ಗ್ರಹಗಳು. ದ್ವಾದಶದಲ್ಲಿ ಲಗ್ನ, ಚಂದ್ರ, ಮಂಗಳ, ಶನಿ, ಶುಕ್ರ ಈ ಐದು ಗ್ರಹಗಳು ಬಿಂದು ಪ್ರದಾತರಾಗಿದ್ದಾರೆ. ಸೂರ್ಯ ಸ್ಥಾನದಿಂದ 1, 2, 3, 4, 7, 8, 10ರಲ್ಲಿ ಗೋಚಾರದಿಂದ ಬುಧ ಬಂದಾಗ ಆಗ ಅಶುಭ ಫಲ, ಶೇಷ ಸ್ಥಾನಗಳು ಶುಭ.

### ಬುಧ ಬಿಂದು ಭೇದಾಷ್ಟಕ

| ಗ್ರಹ ಭಾವ | ಸೂ | ಚಂ | ಮಂ | ಬು | ಗು | ಶು | ಶ | ಲಗ್ನ | ಅಂಶ |
|---|---|---|---|---|---|---|---|---|---|
| 1 | 0 | 0 | | | 0 | | | | 3 |
| 2 | 0 | | | 0 | 0 | | | | 3 |
| 3 | 0 | 0 | 0 | | 0 | | 0 | 0 | 6 |
| 4 | 0 | | | 0 | 0 | | | | 3 |

| ಗ್ರಹ ಭಾವ | ಸೂ | ಚಂ | ಮಂ | ಬು | ಗು | ಶು | ಶ | ಲಗ್ನ | ಅಂಶ |
|---|---|---|---|---|---|---|---|---|---|
| 5 | | 0 | 0 | | 0 | | 0 | 0 | 5 |
| 6 | | | 0 | | | 0 | 0 | | 3 |
| 7 | 0 | 0 | | 0 | 0 | 0 | | 0 | 6 |
| 8 | 0 | | | 0 | | | | | 2 |
| 9 | | 0 | | | 0 | | | 0 | 3 |
| 10 | 0 | | | | 0 | 0 | | | 3 |
| 11 | | | | | | | | | – |
| 12 | | 0 | 0 | | | 0 | 0 | 0 | 5 |
| | 7 | 6 | 4 | 4 | 8 | 4 | 4 | 5 | 42 |

## ಗುರು ಬಿಂದು ಸಂಖ್ಯಾ ಹಾಗೂ ಬಿಂದು ಪ್ರದಗ್ರಹ

ರೂಪಂ ಧಾನಾಯಯೋಃ ಖೇ ದ್ವೌ ವ್ಯಯೋ ಸಪ್ತಕ್ಷತೇರ್ಣವಾಃ ॥೩೩॥

ಮೃತಿವಿಕ್ರಮಯೋಃ ಪಂಚ ಗುರೋಃ ಶೇಷೇಷು ವಿಷ್ಣಯಃ ।
ಲಗ್ನೆ ಶುಕ್ರೇಂದುಮಂದಾಃ ಸ್ವೇ ಆಯೋ ಮಂದಶ್ಚ ವಿಕ್ರಮೇ ॥೩೪॥

ಲಗ್ನಾರೇಂದುಜ್ಞಭೃಗವಃ ಸುತೇರ್ಕಾರ್ಯಕುಜಾ ಗೃಹೆ ।
ಶುಕ್ರ ಮಂದೇಂದವೊ ದ್ಯೂನೆ ಬುಧ ಶುಕ್ರ ಶನೌಶ್ಚರಾಃ ॥೩೫॥

ಜೀವಾಕಾರ್ಕೆಂದವಃ ಶತ್ರೌಸರ್ವೆ ಮಂಚಂ ವಿನಾ ವ್ಯಯೇ ।
ಕರ್ಮಾಣೇಂದು ಶನಿ ಧರ್ಮೆ ಮಂದಾರಗುರವೊ ಮೃತೌ ॥೩೬॥

ಲಗ್ನಾರ್ಕಿಸಿತಚಂದ್ರಜ್ಞಾಃ ಕರಣಾ ಚ ಗುರೋರಿದಮ್ ।

ಗುರುವಿನ ಅಷ್ಟಕ ವರ್ಗದಲ್ಲಿ ಧನ ಹಾಗೂ ಆಯ ಭಾವಕ್ಕೆ ಒಂದು ಗ್ರಹ ದಶಮಕ್ಕೆ, 2 ಗರಹ ದ್ವಾದಶಕ್ಕೆ, 7 ಗ್ರಹ ಷಷ್ಠಕ್ಕೆ, 4 ಗ್ರಹ ಅಷ್ಟಮ ಹಾಗೂ ತೃತೀಯಕ್ಕೆ 5 ಗ್ರಹ, ಶೇಷ 5 ಭಾವಕ್ಕೆ (1, 4, 5, 7, 9) 1ಕ್ಕೆ 3ಗ್ರಹ ಬಿಂದು ಪ್ರದರಾಗುತ್ತಾರೆ.

ಪ್ರಥಮ ಭಾವಕ್ಕೆ ಶುಕ್ರ, ಚಂದ್ರ, ಶನಿ, ಈ ಮೂರು ಗ್ರಹ ದ್ವಿತೀಯಕ್ಕೆ ಹಾಗೂ 11ಕ್ಕೆ ಶನಿ ಮಾತ್ರ. ತೃತೀಯಕ್ಕೆ ಲಗ್ನ, ಭೌಮ, ಚಂದ್ರ, ಬುಧ, ಶುಕ್ರ ಈ ಐದು ಗ್ರಹ. ಪಂಚಮಕ್ಕೆ ರವಿ, ಗುರು, ಮಂಗಳ ಈ ಮೂರು ಗ್ರಹ, ಸಪ್ತಮಕ್ಕೆ ಬುಧ, ಶುಕ್ರ, ಶನಿ ಈ ಮೂರು ಗ್ರಹ. ಷಷ್ಟಕ್ಕೆ ಗುರು, ಮಂಗಳ, ಸೂರ್ಯ, ಚಂದ್ರ ಈ ನಾಲ್ಕು ಗ್ರಹ. ದ್ವಾದಶಕ್ಕೆ ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ ಈ

ಏಳು ಗ್ರಹ. ನವಮಕ್ಕೆ ಶನಿ, ಮಂಗಳ, ಗುರು ಈ ಮೂರು ಗ್ರಹ. ದಶಮಕ್ಕೆ ಚಂದ್ರ, ಶನಿ ಈ ಎರಡು ಗ್ರಹ. ಅಷ್ಟಮಕ್ಕೆ ಲಗ್ನ, ಶನಿ, ಶುಕ್ರ, ಚಂದ್ರ ಹಾಗೂ ಬುಧ ಈ ಐದು ಗ್ರಹ ಬಿಂದು ಪ್ರದರು.

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | 0 | | | | 0 | 0 | | 3 |
| 2 | | | | | | | 0 | | 1 |
| 3 | | 0 | 0 | 0 | | 0 | | 0 | 5 |
| 4 | | 0 | | | | 0 | 0 | | 3 |
| 5 | 0 | | 0 | | 0 | | | | 3 |
| 6 | 0 | 0 | 0 | | 0 | | | | 4 |
| 7 | | | | ·0 | | 0 | 0 | | 3 |
| 8 | | 0 | | 0 | | 0 | 0 | 0 | 5 |
| 9 | | | 0 | | 0 | . | 0 | | 3 |
| 10 | | 0 | | | | 0 | | | 2 |
| 11 | | | | | | | 0 | | 1 |
| 12 | 0 | 0 | 0 | 0 | 0 | 0 | | 0 | 7 |
| | 3 | 7 | 5 | 4 | 4 | 6 | 8 | 3 | 40 |

ಸುತಾಯುರ್ವಿಕ್ರವೇಷ್ವಕ್ಷಿ ತನುಸ್ವವ್ಯಯಖೇಷ್ವಿಷುಃ ॥೩೭॥

ಅಷ್ಟೌಸ್ತ್ರೀಯಾಮರೌ ಷಡಂ ಭೂರ್ಧರ್ಮೇ ಮಿತ್ರೇಕ್ಷ್ಣಿ ಖಂ ಭವೆ ।
ಲಗ್ನೆಸ್ವೇರ್ಕಾರವಿಜವ ಮಂದಾಃ ಸರ್ವೆ ಚ ಕಾಮಭೆ ॥೩೮॥

ಅರ್ಕಾಯಾರ್ಯೌ ವಿಕ್ರಮಸ್ಥಾನೆ ಸುತೇರ್ಕಾರೌ ಶುಭೆರವಿಃ ।
ಸುಖೇರ್ಕ ಬುಧಜೀವಾಃ ಸ್ಯುರ್ಭೌಮಜ್ಞಾ ಮೃತಭೆ ದ್ವಿಜ ॥೩೯॥

ಶುಕ್ರಾರ್ಕೆಂದ್ರಾಕಿಂ ಲಗ್ನಾರ್ಯಾಃ ಶತ್ರೌ ತೂನ್ಯಂ ಭವೆ ವ್ಯಯೇ ।
ಹೋರಾಕಿಂಬುಧ ಶುಕ್ರಾರ್ಯಾಸ್ತನ್ವಾರಜ್ಞೇಂದು ನಾಶ್ತಖೆ ॥೪೦॥

ಶುಕ್ರಾಷ್ಟಕ ವರ್ಗದಲ್ಲಿ ಪುತ್ರ, ಆಯು ಹಾಗೂ ತ್ರಿತಿಶು ಭಾವದಲ್ಲಿ 2 ಗ್ರಹ, ಲಗ್ನ, ಧನ, ವ್ಯಯ ಹಾಗೂ ದಶಮದಲ್ಲಿ 5 ಗ್ರಹ, ಸಪ್ತಮದಲ್ಲಿ 8 ಗ್ರಹ (ಲಗ್ನ ಸಹಿತ) ಷಷ್ಠದಲ್ಲಿ 6 ಗ್ರಹ, ನವಮದಲ್ಲಿ 1 ಗ್ರಹ, ಚತುರ್ಥ 3 ಗ್ರಹ ಬಿಂದು ಪ್ರದವಾದರೆ ಏಕಾದಶದಲ್ಲಿ ಯಾವ ಗ್ರಹವು ಬಿಂದು ಪ್ರದವಿಲ್ಲ.

ಶುಕ್ರನಿಂದ ಪ್ರಥಮ, ದ್ವಿತೀಯದಲ್ಲಿ ಸೂರ್ಯ, ಮಂಗಳ, ಬುಧ, ಗುರು, ಶನಿ – ಈ ಐದು ಗ್ರಹಗಳು, ಸಪ್ತಮದಲ್ಲಿ ಎಲ್ಲ ಗ್ರಹಗಳು, ತೃತೀಯದಲ್ಲಿ

ಸೂರ್ಯ, ಗುರು ಎರಡು ಗ್ರಹಗಳು, ಪಂಚಮದಲ್ಲಿ ಸೂರ್ಯ, ಮಂಗಳ 2 ಗ್ರಹಗಳು. ನವಮದಲ್ಲಿ ಸೂರ್ಯ ಮಾತ್ರ. ಚತುರ್ಥದಲ್ಲಿ ಸೂರ್ಯ, ಬುಧ, ಗುರು ಮೂರು ಗ್ರಹ. ಅಷ್ಟಮದಲ್ಲಿ ಭೌಮ, ಬುಧ 2 ಗ್ರಹಗಳು, ಷಷ್ಠದಲ್ಲಿ ಶುಕ್ರ, ಸೂರ್ಯ, ಚಂದ್ರ, ಶನಿ, ಲಗ್ನ, ಗುರು 6 ಗ್ರಹಗಳು. ದ್ವಾದಶದಲ್ಲಿ ಲಗ್ನ, ಶನಿ, ಬುಧ, ಶುಕ್ರ, ಗುರು ಈ ಐದು ಗ್ರಹಗಳು. ದಶಮದಲ್ಲಿ ಲಗ್ನ, ಮಂಗಳ, ಬುಧ, ಚಂದ್ರ, ಸೂರ್ಯ ಈ ಐದು ಗ್ರಹ ಬಿಂದುಪ್ರದಗಳು. ಏಕಾದಶದಲ್ಲಿ ಯಾವ ಗ್ರಹವು ಬಿಂದುಪ್ರದವಲ್ಲ.

## ಶುಕ್ರಾಷ್ಟಕ ವರ್ಗೀಯ ಬಿಂದು ಭೋದಕ ಚಕ್ರ

| ಗ್ರಹ ಸ್ಥಾನ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | 0 | | 0 | 0 | 0 | | 0 | | 5 |
| 2 | 0 | | 0 | 0 | 0 | | 0 | | 5 |
| 3 | 0 | | | | 0 | | | | 2 |
| 4 | 0 | | | 0 | 0 | | | | 3 |
| 5 | 0 | | 0 | | | | | | 2 |
| 6 | 0 | 0 | | | 0 | 0 | 0 | 0 | 6 |
| 7 | 0 | 0 | 0 | 0 | 0 | 0 | 0 | 0 | 8 |
| 8 | | | 0 | 0 | | | | | 2 |
| 9 | 0 | | | | | | | | 1 |
| 10 | 0 | 0 | 0 | 0 | | | | 0 | 5 |
| 11 | | | | | | | | | |
| 12 | | | | 0 | 0 | 0 | 0 | 0 | 5 |
| | 9 | 3 | 6 | 7 | 7 | 3 | 5 | 4 | 44 |

## ಶನಿ ಒಂದು ಸಂಖ್ಯಾ ಬಿಂದುಪ್ರದ ಗ್ರಹ

ಸ್ವಸ್ತ್ರೀಧರ್ಮೇಷು ಸಪ್ತಾಂಗಂ ಮೃತಹೋರಾಗ್ರಹೇಷು ಚ ।
ಆಜ್ಞಾಭ್ರಾತೃವ್ಯಯೇ ವೇದಾ ರೂಪಂ ಶತ್ರೌ ಸುತೆ ಶರಾಃ ॥೪೧॥

ಆಯೇ ಶೂನ್ಯಂ ಶನರೇವಂ ಕರಣಾ ಪ್ರೋಚ್ಯತೆ ಬುಧೈಃ ।
ಗೃಹೆ ತನೌ ಚ ಲಗ್ನಾರ್ಕೌ ಸ್ವಸ್ತ್ರೀಯೋಶ್ಚ ರವಿಂ ವಿನಾ ॥೪೨॥

ಹಿತ್ವಾಧರ್ಮೇ ಬುಧಂ ಮಾನೆ ಲಗ್ನಾರರವಿಚಂದ್ರಜಾನ್ ।
ತತೋ ಭ್ರಾತರಿ ಜೀವಾರ್ಕಬುಧಾಶುಕ್ರಾಃ ಕ್ಷತೆರವಿಃ ॥೪೩॥

ವ್ಯಯೋ ಲಗ್ನೇಂದು ಮಂದಾರ್ಕಾಃ ಸಿತಾರ್ಕೇಂದುಜ್ಞಲಗ್ನಕಾಃ ।
ಸುತೆ ಮೃತೌ ಬುಧಾರ್ಕೋಚ ಹಿತ್ವಾಯೇಖಿಂಶನೇರ್ವಿದಃ ॥೪೪॥

ಶನ್ಯಾಷ್ಟಕ ವರ್ಗದ ದ್ವಿತೀಯ, ಸಪ್ತಮ, ನವಮದಲ್ಲಿ 7 ಗ್ರಹ. ಅಷ್ಟಮ ಲಗ್ನ ಚತುರ್ಥದಲ್ಲಿ 6 ಗ್ರಹ. ದಶಮ, ತೃತೀಯ ಹಾಗೂ ವ್ಯಯದಲ್ಲಿ 4 ಗ್ರಹ. ಷಷ್ಠದಲ್ಲಿ ಒಂದು ಗ್ರಹ, ಪಂಚಮದಲ್ಲಿ 5 ಬಿಂದು ಪ್ರ, ಏಕಾದಶದಲ್ಲಿ ಯಾವುದೇ ಗ್ರಹ ಬಿಂದು ಪ್ರದವಲ್ಲ. ಶನ್ಯಾಷ್ಟಕದಲ್ಲಿ 4,1 ಭಾವದಲ್ಲಿ ಲಗ್ನ, ಸೂರ್ಯ, ರವಿನಃ ಎಲ್ಲ ಗ್ರಹಗಳ (6) 2,7ರಲ್ಲಿ ಸೂರ್ಯಾತಿರಿಕ್ತ 7 ಗ್ರಹ. ನವಮಗಲ್ಲಿ ಬುಧಾದಿರಿಕ್ತ ಎಲ್ಲ ಗ್ರಹ, ದಶಮದಲ್ಲಿ ಲಗ್ನ, ಮಂಗಳ, ಸೂರ್ಯ, ಬುಧಗಳನ್ನು ಬಿಟ್ಟು ಎಲ್ಲ ಗ್ರಹ ತೃತೀಯದಲ್ಲಿ ಗುರು, ಸೂರ್ಯ, ಬುಧ, ಶುಕ್ರ 4 ಗ್ರಹ, ಷಷ್ಠದಲ್ಲಿ ಸೂರ್ಯ ಮಾತ್ರ. ದ್ವಾದಶದಲ್ಲಿ ಲಗ್ನ, ಚಂದ್ರ, ಶನಿ, ರವಿ ನಾಲ್ಕು ಗ್ರಹಗಳು. ಪಂಚಮದಲ್ಲಿ ಶುಕ್ರ, ಸೂರ್ಯ, ಚಂದ್ರ, ಬುಧ, ಲಗ್ನ 5 ಗ್ರಹಗಳು. ಅಷ್ಟಮದ ಬುಧ ಸೂರ್ಯಾತರಿಕ್ತ ಎಲ್ಲ 6 ಗ್ರಹ, ಏಕಾದಶದಲ್ಲಿ ಯಾವುದು ಬಿಂದು ಪ್ರದವಲ್ಲ. ಬಿಂದುವಿಲ್ಲದಲ್ಲಿ ರೇಖೆಗಳಿವೆ (ಅಥವಾ ರೇಖಾಪ್ರದ)

## ಶನ್ಯಾಷ್ಟಕ ವರ್ಗ ಬಿಂದು ಭೋದಕ ಚಕ್ರ

| ಗ್ರಹ ಸ್ಥಾನ | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | 0 | 0 | 0 | 0 | 0 | 0 | | 6 |
| 2 | | 0 | 0 | 0 | 0 | 0 | 0 | 0 | 7 |
| 3 | 0 | | | 0 | 0 | 0 | | | 4 |
| 4 | | 0 | 0 | 0 | 0 | 0 | 0 | | 6 |
| 5 | 0 | 0 | | 0 | | 0 | | 0 | 5 |
| 6 | 0 | | | | | | | | 1 |
| 7 | | 0 | 0 | 0 | 0 | 0 | 0 | 0 | 7 |
| 8 | | 0 | 0 | | 0 | 0 | 0 | 0 | 6 |
| 9 | 0 | 0 | 0 | | 0 | 0 | 0 | 0 | 7 |
| 10 | | 0 | | | 0 | 0 | 0 | | 4 |
| 11 | | | | | | | | | |
| 12 | 0 | 0 | | | | | 0 | 0 | 4 |
| | 5 | 9 | 6 | 6 | 8 | 9 | 8 | 6 | 57 |

ಪರಾಶರರು – ಬಿಂದು ಪ್ರದ ಗ್ರಹಗಳನ್ನು ಎಲ್ಲ ಗ್ರಹಗಳ ಅಷ್ಟಕ ವರ್ಗದಲ್ಲಿ ಹೇಳಿದ ನಂತರ ಬಿಂದುರಹಿತ ಸ್ಥಾನದಲ್ಲಿ ರೇಖೆ ಎಂದು ಹೇಳಿ ರೇಖೆಯನ್ನು ಪ್ರತ್ಯೇಕವಾಗಿ ವಿವರಿಸಿದ್ದು ವರಾಹಮಿಹಿರಾಚಾರ್ಯರು ತಮ್ಮ ಬೃಹದ್ ಜಾತಕ ದಲ್ಲಿ 8 ಶ್ಲೋಕದಲ್ಲಿ ಅಷ್ಟವರ್ಗಾಂಕ ಹೇಳಿದ್ದಾರೆ. ಪರಾಶರರು ಉಕ್ತಾನ್ಯೈಸ್ಥಾನ ದಾತಾರಃ ಎಂದು ಹೇಳಿ ದೃಢೀಕರಣಕ್ಕೆ ರೇಖಾಪ್ರದವನ್ನು ಹೇಳಿದ್ದಾರೆ.

## ಸೂರ್ಯಾಷ್ಟಕ ವರ್ಗೀಯ ರೇಖಾಪ್ರದಗ್ರಹ

ಉಕ್ತಾನ್ಯೈ ಸ್ಥಾನದಾತಾರ ಇತಿ ಸ್ಥಾನಂ ವಿದುರ್ಮಿಧಾಹ ।
ಅಥಸ್ಥಾನ ಗ್ರಹಾನ್ ವಕ್ಷ್ಯೇ ಸುಖಬೋಧಾಯ ಸೂರಿಣಾಮ್ ॥೪೫॥

ಸ್ವಾಯುಸ್ತನುಷು ಮಂದಾರಸೂರ್ಯಾ ಜೀವಬುಧೌ ಸುತೆ ।
ವಿಕ್ರಮೆ ಜ್ಞೇಂದು ಲಗ್ನಾನಿ ಲಗ್ನಾರ್ಕಾರ್ಕಿಕುಜಾ ಗೃಹೆ ॥೪೬॥

ತೆ ಚ ಜ್ಞೇಂದು ಖಿಭೆ ಬಾನ್ಯೇ ಸರ್ವೆ ಶುಕ್ರಂ ವಿನಾ ವ್ಯಯೇ ।
ಲಗ್ನ ಶುಕ್ರ ಬುಧಾಃ ಶತ್ರೌ ತೇಚ ಜೀವಸುಧಾಕರೌ ॥೪೭॥

ದ್ಯೂನೇರ್ಕಾರಾರ್ಕಿ ಶುಕ್ರಶ್ಚ ಧರ್ಮೇರ್ಕಾರಾರ್ಕಿಜ್ಞೇಜ್ಯಕಾಃ ।

ಈ ಮೊದಲೇ ವಿಮರ್ಶೆಯಲ್ಲಿ ವಿವರಿಸಿದಂತೆ ಎಲ್ಲ ಗ್ರಹಗಳ ಅಷ್ಟಕ ವರ್ಗ ಚಕ್ರದಲ್ಲಿ ಗ್ರಹಗಳ (ಕಿರಣ) ಬಿಂದುಪ್ರದ ಭಾವವನ್ನು ಹೊರತುಪಡಿಸಿ ಇತರ ಭಾವದಲ್ಲಿ ರೇಖಾ(ಸ್ಥಾನ)ಪ್ರದವಾಗಿ ಶುಭಪ್ರದವಾಗುತ್ತದೆ. ರೇಖೆಗಳೇ ಪರ್ಯಾಯ ಸ್ಥಾನಗಳೆಂದು ಕರೆಯಲ್ಪಟ್ಟಿವೆ. ಆದ್ದರಿಂದ ಸ್ಥಾನಗ್ರಹ (ರೇಖಾಪ್ರದ) ವನ್ನು ವಿದ್ವಾಂಸರಿಗೆ ಸರಳ ರೀತಿಯಲ್ಲಿ ಹೇಳುತ್ತಿದ್ದೇನೆ.

ಸರ್ವಾಷ್ಟಕ ವರ್ಗದ ದ್ವಿತೀಯ, ಅಷ್ಟಮ, ಪ್ರಥಮ ಭಾವದಲ್ಲಿ ಶನಿ, ಮಂಗಳ, ಸೂರ್ಯ ರೇಖಾ(ಶುಭ)ಪ್ರದರಾಗುತ್ತಾರೆ. ಪಂಚಮ ಭಾವದಲ್ಲಿ ಗುರು, ಬುಧ, ತೃತೀಯದಲ್ಲಿ ಬುಧ, ಚಂದ್ರ, ಲಗ್ನ, ಸೂರ್ಯ, ಶನಿ, ಮಂಗಳ ಹಾಗೂ ಬುಧ, ಚಂದ್ರ, ಏಕಾದಶ ಭಾವದಲ್ಲಿ ಶುಕ್ರಾತಿರಿಕ್ತ ಎಲ್ಲ ಗ್ರಹ (ರವಿ, ಚಂದ್ರ, ಮಂಗಳ, ಬುಧ, ಗುರು, ಶನಿ, ಲಗ್ನ) ದ್ವಾದಶ ಭಾವದಲ್ಲಿ ಲಗ್ನ, ಶುಕ್ರ, ಬುಧ. ಷಷ್ಠ ಭಾವದಲ್ಲಿ ಲಗ್ನ, ಶುಕ್ರ, ಬುಧ ಹಾಗೂ ಗುರು, ಚಂದ್ರ. ಸಪ್ತಮ ಭಾವಲದಲಿ ಸೂರ್ಯ, ಭೌಮ, ಶನಿ ಹಾಗೂ ಶುಕ್ರ ಅದರಂತೆ ನವಮದಲ್ಲಿ ಸೂರ್ಯ, ಮಂಗಳ,

ಶನಿ, ಬುಧ, ಗುರುಗಳು ರೇಖಾಪ್ರದರಾಗಿ ಆ ಸ್ಥಾನಗಳು ಶುಭಪ್ರದವಾಗಿರುತ್ತವೆ.

## ಸೂರ್ಯಾಷ್ಟಕ ವರ್ಗ ರೇಖಾ ಬೋಧ ಚಕ್ರ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | 1 | | 1 | | | | 1 | | 3 |
| 2 | 1 | | 1 | | | | 1 | | 3 |
| 3 | | 1 | | 1 | | | | 1 | 3 |
| 4 | 1 | | 1 | | | | 1 | 1 | 4 |
| 5 | | | | 1 | 1 | | | | 2 |
| 6 | | 1 | | 1 | 1 | 1 | | 1 | 5 |
| 7 | 1 | | 1 | | | 1 | 1 | 1 | 4 |
| 8 | 1 | | 1 | | | | 1 | | 3 |
| 9 | 1 | | 1 | 1 | 1 | | 1 | | 5 |
| 10 | 1 | 1 | 1 | 1 | | | 1 | 1 | 6 |
| 11 | 1 | 1 | 1 | 1 | 1 | | 1 | 1 | 7 |
| 12 | | | | 1 | | 1 | | 1 | 3 |
| | 8 | 4 | 8 | 7 | 4 | 3 | 8 | 6 | 48 |

## ಚಂದ್ರಾಷ್ಟಕ ವರ್ಗೀಯ ರೇಖಾಪ್ರದಗ್ರಹ

ಜ್ಞೇಂದುಜೀವಃ ಕುಜಾರ್ಯೌ ಜ್ಞಾರ್ಕೇಂದಾರಾರ್ಕಿ ತನೂಶನಾಃ ॥೪೮॥

ಜೀವಶುಕ್ರಬುಧಾ ಭೌಮ ಬುಧ ಶುಕ್ರಶನೈಶ್ಚರಾಃ ।
ರವೀಂದಾರಾರ್ಕಿಲಗ್ನಾನಿ ರವೀಂದಾರ್ಯಜ್ಞಭಾರ್ಗವಾಃ ॥೪೯॥

ಅರ್ಕಜ್ಞ ಜೀವಾಃ ಶುಕ್ರೇಂದೂ ತೇ ಚ ತವ ಲಗ್ನಭೂಸತೌ ।
ಸರ್ವೇ ಶೂನ್ಯಂ ಕ್ರಮಾತ್ ಪ್ರೋಕ್ತಂ ಸ್ಥಾನಂ ಶೀತಕರಸ್ಯಚ ॥೫೦॥

ಪ್ರಥಮ ಭಾವದಲ್ಲಿ ಬುಧ, ಚಂದ್ರ, ಗುರು, ರೇಖಾಪ್ರದರಾದರೆ ದ್ವಿತೀಯದಲ್ಲಿ ಮಂಗಳ ಹಾಗೂ ಗುರು, ತೃತೀಯದಲ್ಲಿ ಬುಧ, ಸೂರ್ಯ, ಚಂದ್ರ, ಮಂಗಳ, ಶನಿ, ಲಗ್ನ ಹಾಗೂ ಶುಕ್ರ ರೇಖಾಪ್ರದರಾಗಿ ಶುಭಸ್ಥಾನಗಳು, ಚತುರ್ಥ ಭಾವದಲ್ಲಿ ಗುರು, ಶುಕ್ರ ಹಾಗೂ ಬುಧ ರೇಖಾಪ್ರದರು ಅದರಂತೆ ಪಂಚಮ ಭಾವದಲ್ಲಿ ಮಂಗಳ, ಬುಧ, ಶುಕ್ರ ಹಾಗೂ ಶನಿ ರೇಖಾಪ್ರದರು, ಷಷ್ಠಭಾವದಲ್ಲಿ ಸೂರ್ಯ, ಚಂದ್ರ, ಮಂಗಳ, ಶನಿ ಹಾಗೂ ಲಗ್ನ ರೇಖಾಪ್ರದರು, ಸಪ್ತಮಭಾವಕ್ಕೆ ಸೂರ್ಯ, ಚಂದ್ರ, ಗುರು, ಬುಧ, ಶುಕ್ರ ಈ ಐದು ಗ್ರಹಗಳು ರೇಖಾಪ್ರದರು.

ಅಷ್ಟಮ ಭಾವಕ್ಕೆ ಸೂರ್ಯ, ಬುಧ, ಗುರು, ಈ ಮೂರು ಗ್ರಹಗಳು ಹಾಗೂ ನವಮಭಾವಕ್ಕೆ ಶುಕ್ರ, ಚಂದ್ರರು ( ಈ ಎರಡು ಗ್ರಹಗಳು) ದಶಮ ಭಾವಕ್ಕೆ ಸೂರ್ಯ, ಬುಧ, ಗುರು, ಶುಕ್ರ, ಚಂದ್ರ ಹಾಗೂ ಲಗ್ನ, ಮಂಗಳ, ಏಕಾದಶಕ್ಕೆ ಎಲ್ಲ ಗ್ರಹಗಳು ರೇಖಾಪ್ರದರು. ದ್ವಾದಶಕ್ಕೆ ಯಾರು ಇಲ್ಲ.

## ಚಂದ್ರಾಷ್ಟಕ ರೇಖಾಬೋಧಕ ಚಕ್ರ

| ಗ್ರಹ<br>ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | 1 | | 1 | 1 | | | | 3 |
| 2 | | | 1 | | 1 | | | | 2 |
| 3 | 1 | 1 | 1 | 1 | | 1 | 1 | 1 | 7 |
| 4 | | | | 1 | 1 | 1 | | | 3 |
| 5 | | | 1 | 1 | | 1 | 1 | | 4 |
| 6 | 1 | 1 | 1 | | | | 1 | 1 | 5 |
| 7 | 1 | 1 | | 1 | 1 | 1 | | | 5 |
| 8 | 1 | | | 1 | 1 | | | | 3 |
| 9 | | 1 | | | | 1 | | | 2 |
| 10 | 1 | 1 | 1 | 1 | 1 | 1 | 1 | | 7 |
| 11 | 1 | 1 | 1 | 1 | 1 | 1 | 1 | 1 | 8 |
| 12 | | | | | | | | | |
| | 6 | 7 | 6 | 8 | 7 | 7 | 4 | 3 | 49 |

## ಭೌಮಾಷ್ಟಕ ವರ್ಗೀಯ ರೇಖಾಪ್ರದ ಗ್ರಹ

ಲಗ್ನಮಂದಕುಜಾ ಭೌಮೋ ಹೋರಾಜ್ಞೇಂದುದಿನಾಧಿಪಾಃ ।
ಮಂದಾರೌಜ್ಞರವಿ ಜ್ಞೇಂದು ಜೀವಾರ್ಕ ತನುಭಾರ್ಗವಃ ॥೫೧॥

ಮಂದಾರೌ ತವ ಸಿತಶ್ಚಾರ್ಕಿಃಕುಜಾರ್ಕಾರ್ಯಾರ್ಕೀಗ್ರಕಾಃ ।
ಸರ್ವೆ ಗುರು ಸಿತೌ ಸ್ಥಾನಂ ಭೌಮಸ್ಯೈವಂ ವಿದುರ್ಬುಧಾಃ ॥೫೨॥

ಭೌಮಾಷ್ಟಕ (ಮಂಗಳ)ದ ಪ್ರಥಮ ಭಾವದಲ್ಲಿ ಲಗ್ನ, ಶನಿ, ಮಂಗಳ ರೇಖಾಪ್ರದತರಾದರೆ, ದ್ವಿತೀಯ ಭಾವಕ್ಕೆ ಮಂಗಳ ಮಾತ್ರ ರೇಖಾಪ್ರದಾತಗ್ರಹ, ತೃತೀಯಭಾವಕ್ಕೆ ಲಗ್ನ, ಬುಧ, ಚಂದ್ರ, ಸೂರ್ಯ ಈ ನಾಲ್ಕು ಗ್ರಹಗಳು ರೇಖಾಪ್ರದಾತರು. ಹೀಗಾಗಿ ಶುಭ ಚತುರ್ಥ ಭಾವಕ್ಕೆ ಶನಿ, ಮಂಗಳರು ರೇಖಪ್ರದಾತರು. ಪಂಚಮಭಾವಕ್ಕೆ ಬುಧ, ಸೂರ್ಯ 2 ಗ್ರಹಗಳು

ರೇಖಪ್ರದಾತರಾದರೆ ಷಷ್ಠಭಾವಕ್ಕೆ ಬುಧ, ಚಂದ್ರ, ಗುರು, ಸೂರ್ಯ, ಲಗ್ನ ಹಾಗೂ ಶುಕ್ರ ಈ 6 ಗ್ರಹಗಳು. ಸಪ್ತಮ ಭಾವಕ್ಕೆ ಶನಿ, ಮಂಗಳರು ರೇಖಪ್ರದಾತರು. ಅಷ್ಟಮ ಭಾವಕ್ಕೆ ಶನಿ, ಮಂಗಳ ಹಾಗೂ ಶುಕ್ರ ಈ ಮೂರು ಗ್ರಹಗಳು. ನವಮ ಭಾವಕ್ಕೆ ಶನಿ ಮಾತ್ರ ರೇಖ ಪ್ರದಾತ. ದಶಮಕ್ಕೆ ಮಂಗಳ, ಸೂರ್ಯ, ಗುರು, ಶನಿ ಹಾಗೂ ಲಗ್ನಗಳು. ಏಕಾದಶಕ್ಕೆ ಎಲ್ಲ 8 ಗ್ರಹಗಳು. ದ್ವಾದಶಕ್ಕೆ ಗುರು, ಶುಕ್ರರು ರೇಖ ಪ್ರದಾತರು.

## ಮಂಗಳಾಷ್ಟಕ ವರ್ಗೀಯ ರೇಖಾಬೋಧಕ ಚಕ್ರ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | | 1 | | | | 1 | | 2 |
| 2 | | | 1 | | | | | | 1 |
| 3 | 1 | 1 | | 1 | | | | 1 | 4 |
| 4 | | | 1 | | | | 1 | | 2 |
| 5 | 1 | | | 1 | | | | | 2 |
| 6 | 1 | 1 | | 1 | 1 | 1 | | 1 | 6 |
| 7 | | | 1 | | | | 1 | | 2 |
| 8 | | | 1 | | | 1 | 1 | | 3 |
| 9 | | | | | | | 1 | | 1 |
| 10 | 1 | | 1 | | 1 | | 1 | 1 | 5 |
| 11 | 1 | 1 | 1 | 1 | 1 | 1 | 1 | 1 | 8 |
| 12 | | | | | 1 | 1 | | | 2 |
| | 5 | 3 | 7 | 4 | 4 | 4 | 7 | 4 | 38 |

## ಬುಧಾಷ್ಟಕ ವರ್ಗೀಯ ರೇಖಾಪ್ರದ ಗ್ರಹ

ಲಗ್ನಮಂದಾರಕ ಶುಕ್ರಕುಜಾ ಲಗ್ನಾರೇಂದು ಸೀತಾರ್ಕಜಾಃ ।
ಶುಕ್ರಜ್ಞೌ ಲಗ್ನ ಚಂದ್ರಾರ್ಕಿಸಿತಾರಾ ಜ್ಞಾರ್ಕಭಾರ್ಗವಾಃ ॥೫೩॥

ಜೀವಜ್ಞಾರ್ಕೇಂದು ಲಗ್ನಾನಿ ಭೂಮಿಪುತ್ರಶನೈಶ್ವರೌ ।
ತೌ ಚ ಲಗ್ನೇಂದು ಶುಕ್ರಾರ್ಯಾ ಮಂದಾರಾರ್ಕಜ್ಞಭಾರ್ಗವಾಃ ॥೫೪॥

ಲಗ್ನ ಮಂದಾರವಿಚ್ಚಂದ್ರಾಃ ಸರ್ವೇ ಜೀವಜ್ಞಭಾಸ್ಕರಾಃ ।

ಬುಧಾಷ್ಟಕ ವರ್ಗದಲ್ಲಿ ಪ್ರಥಮ ಭಾವದಲ್ಲಿ ಲಗ್ನ, ಶನಿ, ಮಂಗಳ, ಶುಕ್ರ, ಬುಧ. ದ್ವಿತೀಯದಲ್ಲಿ ಲಗ್ನ, ಮಂಗಳ, ಚಂದ್ರ, ಶುಕ್ರ ಹಾಗೂ ಶನಿ 5 ಗ್ರಹ, ತೃತೀಯ

ಭಾವಕ್ಕೆ ಶುಕ್ರ, ಬುಧರು ರೇಖಾಪ್ರದರಾದರೆ ಚತುರ್ಥ ಭಾವಕ್ಕೆ ಲಗ್ನ, ಚಂದ್ರ, ಶನಿ, ಶುಕ್ರ ಹಾಗೂ ಮಂಗಳ 5 ಗ್ರಹಗಳು ರೇಖಾಪ್ರದಾತರು. ಪಂಚಮಕ್ಕೆ ಬುಧ, ಸೂರ್ಯ, ಶುಕರ 3 ಗ್ರಹ, ಷಷ್ಠ ಭಾವಕ್ಕೆ ಗುರು, ಬುಧ, ಸೂರ್ಯ, ಚಂದ್ರ ಹಾಗೂ ಲಗ್ನಗಳು ರೇಖಾಪ್ರದಾತರು. ಸಪ್ತಮ ಭಾವಕ್ಕೆ ಮಂಗಳ, ಶನಿಗಳು ರೇಖಾಪ್ರದ ರಾದರೆ, ಅಷ್ಟಮ ಭಾವಕ್ಕೆ ಮಂಗಳ, ಶನಿ, ಲಗ್ನ, ಚಂದ್ರ, ಶುಕ್ರ, ಗುರು ಈ ಆರು ಗ್ರಹಗಳು. ನವಮಕ್ಕೆ ಶನಿ, ಮಂಗಳ, ಸೂರ್ಯ, ಬುಧ, ಶುಕ್ರರು. ದಶಮಕ್ಕೆ ಲಗ್ನ, ಶನಿ, ಮಂಗಳ, ಬುಧ ಹಾಗು ಚಂದ್ರರು. ಏಕಾದಶಕ್ಕೆ ಎಲ್ಲ ಗ್ರಹಗಳು ರೇಖಾ ಪ್ರದರಾದರೆ, ದ್ವಾದಶ ಭಾವಕ್ಕೆ ಗುರು, ಬುಧ, ಸೂರ್ಯ ರೇಖಾಪ್ರದರು.

## ಬುಧ ರೇಖಾಬೋಧಕ ಚಕ್ರ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | | 1 | 1 | | 1 | 1 | 1 | 5 |
| 2 | | 1 | 1 | | | 1 | 1 | 1 | 5 |
| 3 | | | | 1 | | 1 | | | 2 |
| 4 | | 1 | 1 | | | 1 | 1 | 1 | 5 |
| 5 | 1 | | | 1 | | 1 | | | 3 |
| 6 | 1 | 1 | | 1 | 1 | | | 1 | 5 |
| 7 | | | 1 | | | | 1 | | 2 |
| 8 | | 1 | 1 | | 1 | 1 | 1 | 1 | 6 |
| 9 | 1 | | 1 | 1 | | 1 | 1 | | 5 |
| 10 | | 1 | 1 | 1 | | | 1 | 1 | 5 |
| 11 | 1 | 1 | 1 | 1 | 1 | 1 | 1 | 1 | 8 |
| 12 | 1 | | | 1 | 1 | | | | 3 |
| | 5 | 6 | 8 | 8 | 4 | 8 | 8 | 7 | 54 |

## ಗುರು ಅಷ್ಟಕ ವರ್ಗೀಯ ರೇಖಾಪ್ರದ ಗ್ರಹ

ಗುರೋರ್ಲಗ್ನೆ ಸುಖೆ ಜೀವಲಗ್ನಾರಾರ್ಕ ಬುಧಾ ಧನೆ ॥೫೫॥

ಚಂದ್ರಶುಕ್ರೌ ಚ ದುಶ್ಚಿಕ್ಯೆ ಮಂದಾರ್ಯಾರ್ಕಾಃ ಶನಿರ್ವ್ಯಯೋ ।
ಸುತೆ ಶುಕ್ರೇಂದುಲಗ್ನಜ್ಞ ಮಂದಶ್ಚಂದ್ರಂ ಬಿನೌ ತ್ವರೌ ॥೫೬॥

ಲಗ್ನಾರಾಯಾರಾರ್ಕೇಂದವೊಸ್ತೆ ಮೃತೌ ಜೀವಾರ್ಕ ಭೂಸುತಃ ।
ಧರ್ಮೇ ಶುಕ್ರಾರ್ಕಾ ಲಗ್ನೇಂದು ಬುಧಾ ಮಂದಂ ವಿನಾಯಮೇ ॥೫೭॥

**ಮಾನೆ ಗುರು ಬುಧಾರಾರ್ಕಶುಕ್ರಹೋರಾಸ್ತಥಾ ವಿದುಃ ।**

ಗುರು ಅಷ್ಟಕ ವರ್ಗದಲ್ಲಿ ಪ್ರಥಮ, ಚತುರ್ಥ ಭಾವದಲ್ಲಿ ಗುರು, ಲಗ್ನ, ಮಂಗಳ, ಸೂರ್ಯ, ಬುಧ, ಚಂದ್ರ ಹಾಗೂ ಶುಕ್ರರು 7 ಗ್ರಹಗಳು ರೇಖಾಪ್ರದರು. ತೃತೀಯ ಭಾವದಲ್ಲಿ ಶನಿ, ಗುರು, ಸೂರ್ಯ. ದ್ವಾದಶದಲ್ಲಿ ಶನಿ ಮಾತ್ರ ರೇಖಾಪ್ರದನಾದರೆ, ಪಂಚಮಕ್ಕೆ ಶುಕ್ರ, ಚಂದ್ರ, ಲಗ್ನ, ಬುಧ ಹಾಗೂ ಶನಿ ರೇಖಾಪ್ರದರು. ಷಷ್ಠ ಭಾವಕ್ಕೆ ಚಂದ್ರಾತಿರಿಕ್ತ ಪಂಚಮೋಕ್ತ (ಶುಕ್ರ, ಲಗ್ನ, ಬುಧ, ಶನಿ) ಸಪ್ತಮ ಭಾವಕ್ಕೆ ಲಗ್ನ, ಮಂಗಳ, ಗುರು, ಸೂರ್ಯ ಹಾಗೂ ಚಂದ್ರ. ಅಷ್ಟಮಕ್ಕೆ ಗುರು, ಸೂರ್ಯ, ಮಂಗಳ ಹಾಗೂ ನವಮಕ್ಕೆ ಶುಕ್ರ, ಸೂರ್ಯ, ಲಗ್ನ, ಬುಧ. ಏಕಾದಶಕ್ಕೆ ಶನ್ಯಾತಿರಿಕ್ತ ಎಲ್ಲ ಗ್ರಹಗಳು. ದಶಮಕ್ಕೆ ಗುರು, ಬುಧ, ಮಂಗಳ, ಸೂರ್ಯ, ಶುಕ್ರ, ಲಗ್ನ ರೇಖಾ(ಶುಭ)ಪ್ರದರಾಗಿದ್ದಾರೆ.

## ಗುರುವಾಷ್ಟಕ ವರ್ಗೀಯ ರೇಖಾಪ್ರದ ಚಕ್ರ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | 1 | | 1 | 1 | 1 | | | 1 | 5 |
| 2 | 1 | 1 | 1 | 1 | 1 | 1 | 1 | | 7 |
| 3 | 1 | | | | 1 | | 1 | | 3 |
| 4 | 1 | | 1 | 1 | 1 | | | 1 | 5 |
| 5 | | 1 | | 1 | | 1 | 1 | 1 | 5 |
| 6 | | | | 1 | | 1 | 1 | 1 | 4 |
| 7 | 1 | 1 | 1 | | 1 | | | 1 | 5 |
| 8 | 1 | | 1 | | 1 | | | | 3 |
| 9 | 1 | 1 | | 1 | | 1 | | 1 | 5 |
| 10 | L | | 1 | 1 | 1 | 1 | | 1 | 6 |
| 11 | 1 | 1 | 1 | 1 | 1 | 1 | 1 | | 7 |
| 12 | | | | | | | 1 | | 1 |
| | 9 | 5 | 7 | 8 | 8 | 6 | 4 | 9 | 56 |

## ಶುಕ್ರಾಷ್ಟಕ ವರ್ಗೀಯ ರೇಖಾಪ್ರದ ಗ್ರಹ

**ಲಗ್ನಶುಕ್ರೇಂದವಸ್ತೈತೆ ಜ್ಞಾರ್ಕ್ಯಾರಸ್ತೆ ಜ್ಞವರ್ಜಾತಃ ॥೫೮॥**

**ಸುತಭೆ ಲಗ್ನಶಶಿಜಶಶಾಂಕಾರ್ಯಾರ್ಕಿ ಭಾರ್ಗವಃ ।**

**ಜ್ಞಾರೌ ಶೂನ್ಯಂ ಸಿತಾರ್ಕೇಂದುಗುರುಲಗ್ನ ಶನೈಶ್ವರಾಃ ॥೫೯॥**

**ಸರ್ವೆ ಕುಜೇಂದು ರವಯಃಕ್ರಮಾದ್ ಭೃಗುಸುತಸ್ಯ ಚ ॥೬೦॥**

ಶುಕ್ರಾಷ್ಟಕ ವರ್ಗದಲ್ಲಿ – ಪ್ರಥಮ ಭಾವದಲ್ಲಿ ಲಗ್ನ, ಶುಕ್ರ, ಚಂದ್ರ. ದ್ವಿತೀಯದಲ್ಲಿ ಅದೇ ಲಗ್ನ ಶುಕ್ರ, ಚಂದ್ರ. ತೃತೀಯ ಭಾವದಲ್ಲಿ ಲಗ್ನ, ಶುಕ್ರ, ಚಂದ್ರ ಹಾಗೂ ಬುಧ, ಶನಿ, ಮಂಗಳ 6 ಗ್ರಹಗಳು. ಚತುರ್ಥದಲ್ಲಿ ಬುಧಾರಿಕ್ತ ಮೊದಲು ಹೇಳಿದ ಎಲ್ಲ ಗ್ರಹ (ಲಗ್ನ, ಶುಕ್ರ, ಚಂದ್ರ, ಶನಿ, ಮಂಗಳ) ಪಂಚಮದಲ್ಲಿ ಲಗ್ನ, ಬುಧ, ಚಂದ್ರ, ಗುರು, ಶನಿ ಶುಕ್ರ. ಷಷ್ಠ ಭಾವದಲ್ಲಿ ಬುಧ, ಮಂಗಳ 2 ಗ್ರಹಗಳು ಮಾತ್ರ. ಸಪ್ತಮದಲ್ಲಿ ಯಾವುದೇ ಗ್ರಹ ಬಿಂದುಪ್ರದವಲ್ಲ. ಅಷ್ಟಮ ಭಾವದಲ್ಲಿ ಶುಕ್ರ, ಸೂರ್ಯ, ಚಂದ್ರ, ಗುರು, ಲಗ್ನ, ಶನಿ. ನವಮದಲ್ಲಿ ಸೂರ್ಯಾತಿರಿಕ್ತ ಎಲ್ಲ ಗ್ರಹಗಳು. ದಶಮದಲ್ಲಿ ಶುಕ್ರ, ಗುರು, ಶನಿ. ಏಕಾದಶದಲ್ಲಿ ಎಲ್ಲ ಗ್ರಹಗಳು. ದ್ವಾದಶದಲ್ಲಿ ಮಂಗಳ, ಚಂದ್ರ, ಸೂರ್ಯ ಈ ಎಲ್ಲ ಗ್ರಹಗಳು ರೇಖಾ(ಶುಭ)ಪ್ರದರು.

ಶುಕ್ರ – ರೇಖಾ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | 1 | | | | 1 | | 1 | 3 |
| 2 | | 1 | | | | 1 | | 1 | 3 |
| 3 | | 1 | 1 | 1 | | 1 | 1 | 1 | 6 |
| 4 | | | 1 | | | 1 | 1 | 1 | 4 |
| 5 | | 1 | | 1 | 1 | 1 | 1 | 1 | 6 |
| 6 | | | 1 | 1 | | | | | 2 |
| 7 | | | | | | | | | 0 |
| 8 | 1 | 1 | | | 1 | 1 | 1 | 1 | 6 |
| 9 | | 1 | 1 | 1 | 1 | 1 | 1 | 1 | 7 |
| 10 | | | | | 1 | 1 | 1 | | 3 |
| 11 | 1 | 1 | 1 | 1 | 1 | 1 | 1 | 1 | 8 |
| 12 | 1 | 1 | 1 | | | | | | 3 |
| | 3 | 8 | 6 | 5 | 5 | 9 | 7 | 8 | 51 |

ಶನ್ಯಾಷ್ಟಕ ವರ್ಗ ರೇಖಾ ಬೋಧ

ಶನೇ ರವಿತನ ಸೂರ್ಯೋ ಲಗ್ನೇಂದು ಕುಜಸೂರ್ಯಜಾಃ ।
ಲಗ್ನಾರ್ಕೋ ಜೀವಮಂದಾರಾಃ ಸರ್ವೇ ಸೂರ್ಯ ವಿನಾ ಕ್ಷತೇ ॥೬೧॥

ಅರ್ಕೋರ್ಕಜೌ ಬುಧೋರ್ಕಾರತನುಜ್ಞಾಃ ಸಕಲಾಸ್ತತಃ ।
ಕುಜಜ್ಞಗುರು ಶುಕ್ರಾಶ್ಚ ಕ್ರಮಾತ್ ಸ್ಥಾನಮಿದಂ ವಿದುಃ ॥೬೨॥

ಶನ್ಯಾಷ್ಟಕ ವರ್ಗದಲ್ಲಿ – ಪ್ರಥಮ ಭಾವದಲ್ಲಿ ಸೂರ್ಯ, ಲಗ್ನ. ದ್ವಿತೀಯ

ಭಾವದಲ್ಲಿ ಸೂರ್ಯ ಮಾತ್ರ. ತೃತೀಯ ಭಾವದಲ್ಲಿ ಲಗ್ನ, ಚಂದ್ರ, ಮಂಗಳ ಹಾಗೂ ಶನಿ 4 ಗ್ರಹಗಳು ರೇಖಾಪ್ರದಾತರಾದರೆ, ಚತುರ್ಥದಲ್ಲಿ ಲಗ್ನ, ಸೂರ್ಯರು. ಪಂಚಮದಲ್ಲಿ ಗುರು, ಶನಿ ಹಾಗೂ ಮಂಗಳರು. ಷಷ್ಠ ಸ್ಥಾನದಲ್ಲಿ ಸೂರ್ಯಾತಿರಿಕ್ತ ಎಲ್ಲ ಗ್ರಹಗಳು (ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ಲಗ್ನ) ರೇಖಾಪ್ರದಾತರು. ಸಪ್ತಮದಲ್ಲಿ ಸೂರ್ಯ ಮಾತ್ರ ರೇಖಾಪ್ರದಾತ. ಅಷ್ಟಮದಲ್ಲಿ ಸೂರ್ಯ, ಬುಧರು. ನವಮದಲ್ಲಿ ಬುಧ ಮಾತ್ರ ರೇಖಾಪ್ರದರು. ದಶಮ ಭಾವದಲ್ಲಿ ಸೂರ್ಯ, ಮಂಗಳ, ಲಗ್ನ, ಬುಧರು ರೇಖಾ(ಶುಭ) ಪ್ರದಾಗರು. ಏಕಾದಶದಲ್ಲಿ ಎಲ್ಲ ಗ್ರಹಗಳು (ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ಲಗ್ನ) ರೇಖಾಪ್ರದಾತರು. ದ್ವಾದಶ ಭಾವದಲ್ಲಿ ಮಂಗಳ, ಬುಧ, ಗುರು, ಶುಕ್ರ ಈ ನಾಲ್ಕು ಗ್ರಹಗಳು ರೇಖಾಪ್ರದಾತರಾಗಿ ಶುಭರಾಗಿದ್ದಾರೆ.

## ತನ್ಯಾಷ್ಟಕ ವರ್ಗ ರೇಖಾ ಬೋಧಕ ಚಕ್ರ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | 1 | | | | | | | 1 | 2 |
| 2 | 1 | | | | | | | | 1 |
| 3 | | 1 | 1 | | | | 1 | 1 | 4 |
| 4 | 1 | | | | | | | 1 | 2 |
| 5 | | | 1 | | 1 | | 1 | | 3 |
| 6 | | 1 | 1 | 1 | 1 | 1 | 1 | 1 | 7 |
| 7 | 1 | | | | | | | | 1 |
| 8 | 1 | | | 1 | | | | | 2 |
| 9 | | | | 1 | | | | | 1 |
| 10 | 1 | | 1 | 1 | | | | 1 | 4 |
| 11 | 1 | 1 | 1 | 1 | 1 | 1 | 1 | 1 | 8 |
| 12 | | | 1 | 1 | 1 | 1 | | | 4 |
| | 7 | 3 | 6 | 6 | 4 | 3 | 4 | 6 | 39 |

ಲಗ್ನವನ್ನು ವಿಶೇಷ ಬಿಂದು (ಕರಣದಲ್ಲಿ) ಎಂದು ಪರಿಗಣಿಸಿರುವುದರಿಂದ ಅದರ ಪ್ರಭಾವವು ಪರಿಗಣಿಸಲ್ಪಡುತ್ತದೆ.

## ಲಗ್ನದ ಒಂದು ಸಂಖ್ಯೆ ಬಿಂದು ಪ್ರದಗ್ರಹ

ತನೌತುರ್ಯೋಃಚ ವಹ್ನಿಃ ಸ್ಯಾದ್ ದುಶ್ಚಿಕ್ಯೇ ದ್ವಾ ಧನೆ ಶರಾಃ ।
ಬುದ್ಧಿ ಮೃತ್ಯಂ ಕರಿಷ್ಫೆಷು ಷಟ್ ಖೇಶಕ್ಷತರಾಶಿಕ್ಷು ॥೬೩॥

ರೂಪಂ ಸ್ತ್ರೀಯಾಂಗುರುಂ ತ್ಯಕ್ತ್ವಾ ಲಗ್ನಸ್ಯಕರಣಾ ತ್ವದವಮ್ ।
ಹೋರಾಸೂರ್ಯೇಂದವೋ ಲಗ್ನೇ ಲಗ್ನಾರೇಂದಿನ ಸೂರ್ಯಜಾಃ ॥೬೪॥
ಗುರು ಜ್ಞಾ ಲಗ್ನ ಚಂದ್ರಾರಾ ಲಗ್ನ, ಸೂರ್ಯ, ಚಂದ್ರ, ಮಂಗಳ, ಬುಧ, ಸೌರಯಃ ।
ಕ್ಷತೆ ಶುಕ್ರಸ್ತಥಾ ಚೈಕಃ ಕಾಮೋ ಸರ್ವೇ ಗುರುಂ ವಿನಾ ॥೬೫॥
ಮೃತೌ ಭೃಗುಬುಧೌ ತ್ಯಕ್ತ್ವಾಧರ್ಮೆಗುರುಸಿತೌ ವಿನಾ ।
ಕರ್ಮಣ್ಯಾಯೇ ತಥಾ ಶುಕ್ರೋ ವ್ಯಯೇ ಸೂರ್ಯೇಂದುರ್ಜಿತಾಃ ॥೬೬॥

ಲಗ್ನದಿಂದ ಪ್ರಥಮ ಹಾಗೂ ಚತುರ್ಥ ಭಾವದಲ್ಲಿ 3 ಗ್ರಹ. ಧನ ಭಾವದಲ್ಲಿ 5 ಗ್ರಹ. ಪಂಚಮ, ಷಷ್ಠ, ನವಮ ಹಾಗೂ ದ್ವಾದಶದಲ್ಲಿ 6 ಗ್ರಹ. ದಶಮ, ಏಕಾದಶ ಹಾಗೂ ಷಷ್ಠದಲ್ಲಿ ಒಂದು ಗ್ರಹ ಮಾತ್ರ. ಸಪ್ತಮದಲ್ಲಿ ಗುರು ಅತಿರಿಕ್ತ ಎಲ್ಲ ಗ್ರಹ ಬಿಂದು(ಕರಣ)ಪ್ರದರಾಗುತ್ತಾರೆ.

ಪ್ರಥಮ ಭಾವದಲ್ಲಿ ಸೂರ್ಯ, ಚಂದ್ರ. ದ್ವಿತೀಯ ಭಾವದಲ್ಲಿ ಲಗ್ನ, ಭೌಮ, ಚಂದ್ರ, ಸೂರ್ಯ ಹಾಗೂ ಶನಿ. ತೃತೀಯ ಭಾವದಲ್ಲಿ ಗುರು ಹಾಗೂ ಬುಧ. ಚತುರ್ಥ ಭಾವದಲ್ಲಿ ಲಗ್ನ, ಚಂದ್ರ, ಮಂಗಳ. ಪಂಚಮ ಭಾವದಲ್ಲಿ ಲಗ್ನ, ಸೂರ್ಯ, ಚಂದ್ರ, ಮಂಗಳ, ಬುಧ ಹಾಗೂ ಶನಿ. ಷಷ್ಠ ಭಾವದಲ್ಲಿ ಶುಕ್ರ ಮಾತ್ರ. ಸಪ್ತಮದಲ್ಲಿ ಗುರುವನ್ನು ಬಿಟ್ಟು ಎಲ್ಲ ಗ್ರಹಗಳು ಅಷ್ಟಮಕ್ಕೆ ಬುಧ, ಶುಕ್ರರನ್ನು ಹೊರತುಪಡಿಸಿ ಉಳಿದೆಲ್ಲ ಗ್ರಹಗಳು ಬಿಂದು ಪ್ರದರು ನವಮಕ್ಕೆ – ಗುರು, ಶುಕ್ರರನ್ನು ಬಿಟ್ಟು ಎಲ್ಲ ಗ್ರಹಗಳು. ದಶಮ, ಏಕಾದಶ ಭಾವಕ್ಕೆ ಶುಕ್ರ ಮಾತ್ರ. ದ್ವಾದಶಕ್ಕೆ ಸೂರ್ಯ, ಚಂದ್ರಾತಿರಿಕ್ತ ಎಲ್ಲ ಗ್ರಹಗಳು ಬಿಂದುಪ್ರದರಾಗುತ್ತಾರೆ.

ಲಗ್ನ ಒಂದು

| ಗ್ರಹ ಭಾವ | ರ | ಚಂ | ಮಂ | ಬು | ಗು | ಶು | ಶ | ಲಗ್ನ | ಅಂಶ |
|---|---|---|---|---|---|---|---|---|---|
| 1 | 0 | 0 | | | | | | 0 | 3 |
| 2 | 0 | 0 | 0 | | | | 0 | 0 | 5 |
| 3 | | | | 0 | 0 | | | | 2 |
| 4 | | 0 | 0 | | | | | 0 | 3 |
| 5 | 0 | 0 | 0 | 0 | | | 0 | 0 | 6 |
| 6 | | | | | | 0 | | | 1 |
| 7 | 0 | 0 | 0 | 0 | | 0 | 0 | 0 | 7 |
| 8 | 0 | 0 | 0 | | 0 | | 0 | 0 | 6 |
| 9 | 0 | 0 | 0 | 0 | | | 0 | 0 | 6 |
| 10 | | | | | | 0 | | | 1 |
| 11 | | | | | | 0 | | | 1 |
| 12 | | | 0 | 0 | 0 | 0 | 0 | 0 | 6 |
| | 6 | 7 | 7 | 5 | 3 | 5 | 6 | 8 | 47 |

## ಲಗ್ನಾಷ್ಟಕ ವರ್ಗೀಯ ರೇಖಾಪ್ರದಗ್ರಹ

ಲಗ್ನಸ್ಯೇದಂ ತಂ ಸಂಪ್ರೋಕ್ತಂ ಕರಣಾ ದ್ವಿಜಪುಂಗವ ।
ಅಥಸ್ಥಾನಂ ಪ್ರವಕ್ಷಾಮಿ ಲಗ್ನಸ್ಯ ದ್ವಿಜಪುಂಗವ ॥೬೭॥

ಆಕಿಂಜ್ಞಶುಕ್ರಗುರ್ವಾರಾಃ ಸೌಮ್ಯ ದೇವೇಜ್ಯ ಭಾರ್ಗವಾಃ ।
ಹಿತ್ವಾ ಸೌಮ್ಯಗುರು ಶೇಷಾಃ ಸೂಜ್ಞೇಜ್ಯ ಭೃಗುಸೂರ್ಯಜಾಃ ॥೬೮॥

ತಥಾ ಜೀವಭೃಗು ಬುಧೌಸರ್ವೆ ಶುಕ್ರಖಿಂ ವಿನಾಕ್ಷತೆ ।
ಜೀವ ಏಕಸ್ತಥಾದ್ಯೂನೆ ಮೃತೌ ಸೌಮ್ಯಭೃಗು ತಥಾ ॥೬೯॥

ಧರ್ಮೇ ಗುರುಸಿತಾಮೇವಖೇ ಭವೆ ಶುಕ್ರಮಂತರಾ ।
ಸೂರ್ಯ ಚಂದ್ರೌ ತಥಾ ರಿಪ್ಫೆಸ್ಥಾನಂ ಲಗ್ನಸ್ಯ ಕೀರ್ತಿತಮ್ ॥೭೦॥

**ಹೇ ದ್ವಿಜ ಪುಂಗವನೆ,**

ಲಗ್ನಾಷ್ಟಕ ವರ್ಗದಲ್ಲಿ ಬಿಂದು ವಿಚಾರ ನೋಡಲಾಗಿದ್ದು ರೇಖೆಗಳನ್ನು (ಸ್ಥಾನ–ಶುಭ) ಸ್ಥಾನ ನೋಡುವ ಲಗ್ನಾಷ್ಟಕ ವರ್ಗದಲ್ಲಿ ಪ್ರಥಮದಲ್ಲಿ ಶನಿ, ಬುಧ, ಶುಕ್ರ, ಗುರು ಹಾಗೂ ಮಂಗಳ. ದ್ವಿತೀಯ ಭಾವದಲ್ಲಿ ಬುಧ, ಗುರು, ಶುಕ್ರ. ತೃತೀಯ ಭಾವದಲ್ಲಿ ಬುಧ, ಗುರು ಅತಿರಿಕ್ತ ಎಲ್ಲ ಗ್ರಹಗಳು. ಚತುರ್ಥದಲ್ಲಿ ಸೂರ್ಯ, ಬುಧ, ಗುರು, ಶುಕ್ರ ಹಾಗೂ ಶನಿ. ಪಂಚಮದಲ್ಲಿ ಗುರು, ಶುಕ್ರ. ಷಷ್ಠದಲ್ಲಿ ಶುಕ್ರಾತಿರಿಕ್ತ ಎಲ್ಲ ಗ್ರಹಗಳು. ಸಪ್ತಮದಲ್ಲಿ ಗುರು ಮಾತ್ರ. ಅಷ್ಟಮದಲ್ಲಿ ಬುಧ, ಶುಕ್ರ. ನವಮದಲ್ಲಿ ಗುರು, ಶುಕ್ರ. ದಶಮ ಹಾಗೂ ಏಕಾದಶದಲ್ಲಿ ಶುಕ್ರಾತಿರಿಕ್ತ ಎಲ್ಲ ಗ್ರಹಗಳ ದ್ವಾದಶಕ್ಕೆ ಸೂರ್ಯ, ಚಂದ್ರರು ರೇಖಾ(ಶುಭ)ಪ್ರದರಾಗಿದ್ದಾರೆ.

ಇಲ್ಲಿ ದ್ವಿಜ ಪುಂಗವ ದ್ವಿರುಕ್ತಿಯಿದ್ದು ಜ್ಯೋತಿಷಿಯಾದ ದ್ವಿಜ ಸರ್ವ ಶ್ರೇಷ್ಠವೆನ್ನುವುದು ಪರಾಶರರ ಆಶಯ.

### ಲಗ್ನಾಷ್ಟಕ – ರೇಖಾಪ್ರದ ಗ್ರಹ ಚಕ್ರ

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 1 | | | 1 | 1 | 1 | 1 | 1 | | 5 |
| 2 | | | | | 1 | 1 | 1 | | 3 |
| 3 | 1 | 1 | 1 | | 1 | 1 | 1 | | 6 |
| 4 | 1 | | | 1 | 1 | 1 | 1 | | 5 |
| 5 | | | | | 1 | 1 | | | 2 |
| 6 | 1 | 1 | 1 | 1 | 1 | | 1 | 1 | 7 |

| ಗ್ರಹ ಭಾವ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಲಗ್ನ | ಅಂಶ |
|---|---|---|---|---|---|---|---|---|---|
| 7 | | | | | 1 | | | | 1 |
| 8 | | | | 1 | | 1 | | | 2 |
| 9 | | | | | 1 | 1 | | | 2 |
| 10 | 1 | 1 | 1 | 1 | 1 | | 1 | 1 | 7 |
| 11 | 1 | 1 | 1 | 1 | 1 | | 1 | 1 | 7 |
| 12 | 1 | 1 | | | | | | | 2 |
| | 6 | 5 | 5 | 7 | 9 | 7 | 6 | 4 | 49 |

ಅಷ್ಟಕ ವರ್ಗದಲ್ಲಿ ಗ್ರಹಗಳ ಶುಭಾಶುಭ ಜ್ಞಾನ ಪಡೆದುಕೊಳ್ಳಲು ಜನ್ಮಕುಂಡಲಿಯಲ್ಲಿಯ ಗ್ರಹಗಳ ಸ್ಥಾನದಿಂದ ರೇಖಾ (1) (ಶುಭ) ಹಾಗೂ ಬಿಂದು ಅಶುಭವನ್ನು ಅಷ್ಟಕ ವರ್ಗ ಚಕ್ರದಿಂದ ಹಾಕಿದಾಗ ಪೂರ್ಣಜ್ಞಾನ ಅರಿವಾಗುತ್ತದೆ. ಅದಕ್ಕೆ ಜನ್ಮಾಂಶ ಕುಂಡಲಿ ಅವಶ್ಯ.

ಉದಾಹರಿತ ಕುಂಡಲಿ ಈ ರೀತಿ ಇದೆ.

5; 3; 6 ಶುಕ್ರ; 4; 2 ಕೆ; 7 ರ. ಬು. ಚಂ; 1; 8 ರಾ; 10 ಗು. ಮ; 12 ಶ; 9; 11

| ಶ | | ಕೆ | |
|---|---|---|---|
| | | | |
| ಗು ಮ | | | |
| | ರಾ | ರ ಬು ಚ | ಶು |

ಅಷ್ಟಕ ವರ್ಗದಲ್ಲಿ ಕರಣ (ಬಿಂದು) ರೇಖಾ (ಸ್ಥಾನ) ವಿವರ

ಸೂರ್ಯಾಷ್ಟಕ ವರ್ಗ

5 ||||| ooo; 3 ||||| ooo; 6 |||| ooo; 4 |||| oooo; 2 ||| ooooo; 7 |||| oooo; 1 |||| oooo; 8 |||| oooo; 10 ||| ooooo; 12 ||||| ooo; 9 |||| oooo; 11 ||| ooooo

48 ರೇಖೆ 48 ಬಿಂದು

| |||| oooo | |||| oooo | ||| ooooo | ||||| ooo |
|---|---|---|---|
| ||| ooooo | | | |||| oooo |
| ||| ooooo | | | ||||| ooo |
| |||| oooo | ||| ooooo | |||| oooo | ||||| ooo |

ಚಂದ್ರಾಷ್ಟಕ





49 ರೇಖೆ 47 ಬಿಂದು

ಮಂಗಳಾಷ್ಟಕ





ರೇಖೆ 39 ಬಿಂದು 57

ಬುಧಾಷ್ಟಕ





ರೇಖೆ 54 ಬಿಂದು 42

ಗುರುವಾಷ್ಟಕ ರೇಖೆ ಬಿಂದು




ರೇಖೆ 40 ಬಿಂದು 56

ಶುಕ್ರಾಷ್ಟಕ ರೇಖೆ ಬಿಂದು




ರೇಖೆ 52 ಬಿಂದು 47

ಶನಿ ಅಷ್ಟಕ ವರ್ಗ




ರೇಖೆ 39 ಬಿಂದು 57

ಲಗ್ನಾಷ್ಟಕ

| ಭಾವ | ರೇಖೆ | ಬಿಂದು |
|---|---|---|
| 1 | ||| | ooooo |
| 2 | ||||| | ooo |
| 3 | ||| | ooooo |
| 4 | |||| | oooo |
| 5 | |||| | oooo |
| 6 | ||||| | ooo |
| 7 | |||| | oooo |
| 8 | |||| | oooo |
| 9 | ||||| | ooo |
| 10 | |||||| | oo |
| 11 | | | ooooooo o |
| 12 | ||||| | ooo |

ರೇಖೆ 49 ಬಿಂದು 47

| | | | |
|---|---|---|---|
| ||||| ooo | ||| ooooo | ||||| ooo | ||| ooooo |
| | oooooo o | | | |||| oooo |
| ||||| oo | | | |||| oooo |
| ||||| ooo | |||| oooo | |||| oooo | ||||| ooo |

ರೇಖೆ ಶುಭದಾಯಕ ಬಿಂದು ಅಶುಭದಾಯಕವೆಂದು ಪರಿಗಣಿಸುವುದು. ನವ್ಯದಂತೆ ರೇಖೆಗಳನ್ನೇ ಬಿಂದು ಎಂದು ಶುಭವೆಂದು ಬಿಂದು ರೇಖೆ ಎಂದು. ಅಶುಭವೆಂದು ಪರಿಗಣಿಸುವುದು. (ಇಲ್ಲಿ ಒಟ್ಟು ರೇಖೆ ಬಿಂದು ಸೇರಿಸಿ ಒಂದು ಮನೆಗೆ ಎಂಟು ಎಂಬುದನ್ನು ಲಕ್ಷ್ಯದಲ್ಲಿಡುವರು ಒಟ್ಟು 96.)

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅಷ್ಟಕ ವರ್ಗಾಧ್ಯಾಯಃ ಸಮಾಪ್ತಿ



೭೭ನೇ ಅಧ್ಯಾಯ

# ಅಥ ತ್ರಿಕೋನಶೋಧನಾಧ್ಯಾಯಃ

## ಪರಾಶರ ಉವಾಚ:

ಇತ್ಥಂ ಲಗ್ನ ಗ್ರಹಾಣಾಂ ತುವಿರಚಯ್ಯಾಷ್ಟವರ್ಗಕಮ್ ।
ತ್ರಿಕೋಣಶೋಧನಂ ಕುರ್ಯಾದಾದೌ ಸರ್ವೇಷು ರಾಶಿಷು ॥೧॥

ತ್ರಿಕೋನ ಮುಚ್ಯತೆ ಚಾಪಸಿಂಹಮೇಷಸ್ತಥಾ ದ್ವಿಜ ।
ವೃಷಕನ್ಯಾಮೃಗಾಸ್ಯಾಶ್ಚ ಕರ್ಕವೃಶ್ಚಿಕಮೀನಶ್ಚ ।
ಕುಂಭಯುಗ್ಮತುಲಾಲಿಪ್ತ ತ್ರಿಕೋನಃ ಸ್ಯುಃ ಪರಸ್ಪರಮ್ ॥೨॥

## ಪರಾಶರರು ಹೇಳಿದುದು–

ಈ ಪ್ರಕಾರ ಲಗ್ನ ಹಾಗೂ ಏಳು ಗ್ರಹಗಳ ಅಷ್ಟಕ ವರ್ಗ ಪ್ರತ್ಯೇಕ ರಾಶಿ ತ್ರಿಕೋನ ಶೋಧನ ಮಾಡುವುದು. ಸಮಾನಾಂತರವಿದ್ದ 3, 3 ರಾಶಿಗಳು ತ್ರಿಕೋನವಾಗುತ್ತವೆ.

| ರಾಶಿ | 1 | 2 | 3 | 4 | | 5 | 6 |
|---|---|---|---|---|---|---|---|
| ರಾಶಿ | ಮೇಷ | ವೃಷಭ | ಮಿಥುನ | ಕರ್ಕ | ಈ ನಾಲ್ಕು ತ್ರಿಕೋಣ ರಾಶಿಗಳು | | |
| | | | ತುಲಾ | ವೃಶ್ಚಿಕ | | | |
| ತ್ರಿಕೋಣ | ಸಿಂಹ | ಕನ್ಯಾ | ಕುಂಭ | ಮೀನ | | | |
| | | ಧನು | ಮಕರ | | | | |

ಈ ರಾಶಿಗಳು ಒಂದಕ್ಕೊಂದು ಪಂಚಮ, ನವಮ ತ್ರಿಕೋನ ರಾಶಿಗಳಾಗುತ್ತವೆ. ಮೇಲಿನ ಚಾರ್ಟ್‌ನಂತೆ ಮೇಷ-ಸಿಂಹ-ಧನು, ವೃಷಭ-ಕನ್ಯಾ-ಮಕರ, ಮಿಥುನ-ತುಲಾ-ಕುಂಭ, ಕರ್ಕ-ವೃಶ್ಚಿಕ-ಮೀನಗಳು ಪರಸ್ಪರ ತ್ರಿಕೋನ ರಾಶಿಗಳು.

### ತ್ರಿಕೋನ ಶೋಧನ ವಿಧಿ

ಅಥಃ ಸಮಸ್ತ ರಾಶೀನಾಂ ಫಲಮಷ್ಟಕಜಂ ಲಿಖೇತ್ ॥೩॥

ತ್ರಿಕೋಣೇಷು ಚ ಯನ್ನ್ಯೂನಂ ತತ್ತುಲ್ಯಂ ತ್ರಿಷು ಶೋಧಯೇತ್ ।
ಏಕಸ್ಮಿನ್ ಭವನೇ ಶೂನ್ಯಂ ತತ್ತ್ರಿಕೋಣಂ ನ ಶೋಧಯೇತ್ ॥೪॥

**ಪಮತ್ತೆ ಸರ್ವಗೇಹೆಷುಸರ್ವಂ ಶೋಧ್ಯಂ ವಿಜಾನಿತಾ ।**
**ತತ್ ಏಕಾಧಿಪತ್ಯಸ್ಯ ವಿಧೆಯಂಶೋಧನಂ ಬುಧೈಃ ॥೫॥**

ಗ್ರಹ ಕ್ರಮವತ್ ಮೇಷಾದಿ ರಾಶಿಗಳ ಕೆಳಗೆ ಗ್ರಹಗಳ ಅಷ್ಟಕವರ್ಗದ ರೇಖಾಂಕ ಬರೆದು ನಂತರ ತ್ರಿಕೋನ ಶೋಧನ ಮಾಡುವುದು. ತ್ರಿಕೋನ ರಾಶಿಯಲ್ಲಿ (ಮೇಷ, ಸಿಂಹ, ಧನು... ಹೀಗೆ) ಯಾವ ರಾಶಿಯ ಕೆಳಗೆ ಅಲ್ಪ ರೇಖೆಗಳಿವೆಯೋ ಆ ರೇಖೆಗಳನ್ನು ಉಳಿದೆರಡು ರಾಶಿಯಲ್ಲಿ ಕಳೆಯುವುದು ಸ್ವತಃ ಆ ರಾಶಿ ರೇಖಾ ಶೋಧನ '0' ಆಗುತ್ತದೆ. ಕೆಳಗೆ ಶೋಧನ ಸಂಖ್ಯೆ ಬರೆದುಕೊಳ್ಳುವುದು. ಈ ತ್ರಿಕೋನ ರಾಸಿಗಳಲ್ಲಿ ಯಾವುದೇ ಒಂದು ರಾಶಿಗೆ '0' (ಶೂನ್ಯ) ಅಂಕವಿದ್ದರೆ ತ್ರಿಕೋನ ಶೋಧನ ಮಾಡಕೂಡದು. ಒಂದು ವೇಳೆಯಲ್ಲಿ ಎಲ್ಲ ತ್ರಿಕೋನ ರಾಶಿಗಳಲ್ಲಿ ಸಮಾನ ಅಂಕಿಗಳಿದ್ದರೆ ರೇಖಾ ಸಂಖ್ಯೆ '0'ವಾಗುತ್ತದೆ. ಈ ತ್ರಿಕೋನ ಶೋಧನದ ನಂತರ ಏಕಾಧಿಪತ್ಯ ಶೋಧನೆ ಮಾಡುವುದು. ಯಾವ ಗ್ರಹದ ತ್ರಿಕೋನ ಶೋಧನವಿದೆಯೋ ಅದು ಇದ್ದ ರಾಶಿಯಿಂದಲೇ ಆರಂಭಿಸುವುದು.

## ಸೂರ್ಯಾಷ್ಟಕ ವರ್ಗೀಯ ತ್ರಿಕೋನ ಶೋಧನ

ಸೂರ್ಯ ತುಲಾದಲ್ಲಿ 4 ರೇಖೆ ಅದರ ತ್ರಿಕೋಣ ರಾಶಿ ಕುಂಭಕ್ಕೆ – 3 ರೇಖೆ, ಮಿಥುನಕ್ಕೆ 4 ರೇಖೆಗೆ 3ನ್ನು (ಅಲ್ಪ ಸಂಖ್ಯೆ ಕಡಿಮೆ ಮಾಡಿದಾಗ ತುಲಾ-1, ಕುಂಭ-0, ಮಿಥುನ-2 ರೇಖೆಗಳು ಬರುವುವು ಅದರಂತೆ ಕೆಳಗಿನ ಎಲ್ಲ ಗ್ರಹಗಳ ತ್ರಿಕೋನ ಶೋಧನ ಕೊಡಲಾಗಿದೆ.

### ಸೂರ್ಯ ತ್ರಿಕೋನ ಶೋಧನ

| ಗ್ರಹ | ರ, ಚ, ಬು | ರಾ | | ಗು, ಮ | | ಶನಿ | | ಕೇ | | | ಶು | |
|---|---|---|---|---|---|---|---|---|---|---|---|---|
| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 |
| ರೇಖೆ | 4 | 4 | 4 | 3 | 3 | 4 | 4 | 3 | 5 | 4 | 5 | 5 |
| ಶೋಧ್ಯಾಂಕ | 1 | 0 | 0 | 0 | 0 | 0 | 0 | 0 | 2 | 0 | 1 | 2 |

### ಚಂದ್ರ ತ್ರಿಕೋನ ಶೋಧನ

| ಗ್ರಹ | ರ, ಚ, ಬು | ರಾ | | ಗು, ಮ | | ಶನಿ | | ಕೇ | | | | ಶುಕ್ರ |
|---|---|---|---|---|---|---|---|---|---|---|---|---|
| ರಾಶಿ | 7 | | 9 | 10 | 11 | 12 | 1 | 2 | 3 | 4 | 5 | 6 |
| ರೇಖೆ | 4 | 3 | 5 | 4 | 3 | 4 | 5 | 6 | 3 | 6 | 5 | 1 |
| ಶೋಧ್ಯಾಂಕ | 1 | 0 | 0 | 3 | 0 | 1 | 0 | 5 | 0 | 2 | 0 | 0 |

## ಮಂಗಳ ತ್ರಿಕೋನ ಶೋಧನ

| ಗ್ರಹ | ಮ,ಗು | | ಶ | | ಕೇ | | | ಶು | ರ,ಬು,ಚ | | ರಾ | |
|---|---|---|---|---|---|---|---|---|---|---|---|---|
| ರಾಶಿ | 10 | 11 | 12 | 1 | 2 | 3 | 4 | 5 | 6 | 7 | 8 | 9 |
| ರೇಖೆ | 2 | 5 | 3 | 3 | 1 | 2 | 4 | 5 | 2 | 3 | 3 | 6 |
| ಶೋಧ್ಯಾಂಕ | 2 | 3 | 0 | 0 | 0 | 0 | 1 | 2 | 1 | 1 | 0 | 3 |

## ಬುಧ ತ್ರಿಕೋನ ಶೋಧ

| ಗ್ರಹ | ಬು,ರ,ಚ | ರಾ | | ಗು,ಮ | | ಶ | | ಕೇ | | | ಶು | |
|---|---|---|---|---|---|---|---|---|---|---|---|---|
| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 |
| ರೇಖೆ | 5 | 5 | 5 | 4 | 4 | 4 | 4 | 3 | 4 | 5 | 6 | 5 |
| ಶೋಧ್ಯಾಂಕ | 1 | 1 | 1 | 1 | 0 | 0 | 0 | 0 | 0 | 1 | 2 | 2 |

## ಗುರು ಶೋಧ್ಯಾಂಕ

| ಗ್ರಹ | ಗು,ಮ | | ಶನಿ | | ಕೇ | | | ಶು | ರ,ಬು,ಚ | | ರಾ | |
|---|---|---|---|---|---|---|---|---|---|---|---|---|
| ರಾಶಿ | 10 | 11 | 12 | 1 | 2 | 3 | 4 | 5 | 6 | 7 | 8 | 9 |
| ರೇಖೆ | 6 | 6 | 3 | 5 | 4 | 4 | 7 | 7 | 0 | 6 | 6 | 2 |
| ಶೋಧ್ಯಾಂಕ | 6 | 2 | 0 | 3 | 4 | 0 | 4 | 5 | 0 | 2 | 3 | 0 |

## ಶುಕ್ರ ಶೋಧ್ಯಾಂಕ

| ಗ್ರಹ | ಶು | ರ,ಬು,ಚ | ರಾ | ಗು,ಮ | | ಶನಿ | | ಕೇ | | | | |
|---|---|---|---|---|---|---|---|---|---|---|---|---|
| ರಾಶಿ | 6 | 7 | 8 | 9 | 10 | 11 | 12 | 1 | 2 | 3 | 4 | 5 |
| ರೇಖೆ | 6 | 5 | 6 | 5 | 3 | 3 | 3 | 2 | 8 | 5 | 3 | 5 |
| ಶೋಧ್ಯಾಂಕ | 3 | 2 | 3 | 3 | 0 | 0 | 0 | 0 | 5 | 2 | 0 | 3 |

## ಶನಿ ಶೋಧ್ಯಾಂಕ

| ಗ್ರಹ | ಶನಿ | | ಕೇ | | | | | ಶುರ,ಬು,ಚರಾ | | | ಗು,ಮ | |
|---|---|---|---|---|---|---|---|---|---|---|---|---|
| ರಾಶಿ | 12 | 1 | 2 | 3 | 4 | 5 | 6 | 7 | 8 | 9 | 10 | 11 |
| ರೇಖೆ | 3 | 2 | 6 | 3 | 6 | 5 | 2 | 3 | 3 | 4 | 2 | 1 |
| ಶೋಧ್ಯಾಂಕ | 0 | 0 | 4 | 2 | 3 | 3 | 0 | 2 | 0 | 1 | 0 | 0 |

ಈ ರೀತಿ ತ್ರಿಕೋನ ಶೋಧನ ಮಾಡಿ ಒಂದು ಸಂಖ್ಯೆ ತೆಗೆದ ನಂತರ ಏಕಾಧಿಪತ್ಯ ಶೋಧನ ಮಾಡುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ತ್ರಿಕೋನ ಶೋಧನಾಧ್ಯಾಯಃ ಸಮಾಪ್ತಿಃ**

( ೭೮ನೇ ಅಧ್ಯಾಯ )

# ಅಥ ಏಕಾಧಿಪತ್ಯ ಶೋಧನಾಧ್ಯಾಯಃ

ತ್ರಿಕೋನಮೇವಂ ಸಂಶೋದ್ಯ ಫಲಂ ಭಾನಾಂ ಲಿಖೇದ್ ಬುಧಃ ।
ಶೋಧನಂ ದ್ವಿಜ । ಕುರ್ವೀತ ಪಶ್ಚಾದೇವಾದಿ ಪತ್ಯಜವ್ ॥೧॥

ಕ್ಷೇತ್ರದ್ವಯೇ ಫಲಾನಿಸ್ಯುಸ್ತದೈವಂ ಶೋಧಯೇತ್ ಸುಧೀಃ ।
ಕ್ಷೀಣೇನ ಸಹ ಚಾನ್ಯಸ್ಮಿನ್ ಶೋಧಯೇದ್ ಗ್ರಹವರ್ಜಿತೆ ॥೨॥

ಉಭಯೋರ್ಗ್ರಹಸಂಯುಕ್ತ ನ ಸಂಶೋಧ್ಯಃ ಕದಾಚಿನ್ ।
ಗ್ರಹಯುಕ್ತೆ ಫಲರ್ಹೀನೆ ಗ್ರಹಾಭಾವೆ ಫಲಾಧಿಕೆ ॥೩॥

ಊನೇನ ಸಹ ಚಾನ್ಯಸ್ಮಿನ್ ಶೋಧಯೇದ್ ಗ್ರಹವರ್ಜಿತೆ ।
ಫಲಾಧಿಕೆ ಗ್ರಹೈರ್ಯುಕ್ತೆ ಚಾನ್ಯಸ್ಮಿನ್ ಸರ್ವಮುಸ್ತ್ಯಜೇತ್ ॥೪॥

ಉಭಯೋರ್ಗ್ರಹಹೀನತ್ವೆ ಸಮತ್ವೆ ಚ ಫಲೆ ತ್ಯಜೇತ್ ।
ಸಗ್ರಹಾಗ್ರಹಯೋಸ್ತುತುಲ್ಯೆ ಸರ್ವ ಸಂಶೋಧ್ಯಮಗ್ರಹೆ ॥೫॥

ಕಲೀರ ಸಿಂಹಯೋ ರಾಶಯೋಃ ಪಥಕ್ ಕ್ಷೇತ್ರಂ ಪ್ರಥಕ್ ಫಲಮ್ ।

ಈ ಮೇಲೆ ವಿವರಿಸಿದಂತೆ ತ್ರಿಕೋನ ಶೋಧನ ಮಾಡಿಟ್ಟ ನಂತರ ಏಕಾಧಿಪತ್ಯ ಶೋಧನ ಕ್ರಮ ಕೈಗೊಳ್ಳುವುದು. ಇಲ್ಲಿ ಎರಡೂ ರಾಶಿಗಳಲ್ಲಿ ಫಲ(ಸಂಖ್ಯಾ) ಇದ್ದರೆ ಶೋಧನ ಕೈಗೊಳ್ಳುವುದು. ಅರ್ಥಾತ್ ಏಕಸ್ವಾಮಿಕ ಎರಡೂ ರಾಶಿಗಳಲ್ಲಿ ತ್ರಿಕೋನ ಶೋಧಾಂಕ ಭಿನ್ನ ಭಿನ್ನವಿದ್ದರೆ ಅಂದರೆ ಒಂದರಲ್ಲಿ ಸಂಖ್ಯೆ, ಎರಡನೆಯದರಲ್ಲಿ ಶೂನ್ಯವಿರದಿದ್ದರೆ ಆಗ ಏಕಾಧಿಪತ್ಯ ಶೋಧನವಾಗುತ್ತದೆ. ಒಂದು ವೇಳೆ ಎರಡೂ ರಾಶಿಗಳು ಗ್ರಹ ರಹಿತವಾಗಿದ್ದರೆ ಹಾಗೂ ಎರಡರಲ್ಲಿ ಸಂಖ್ಯೆ ನ್ಯೂನಾಧಿಕವಾಗಿದ್ದರೆ ನ್ಯೂನತುಲ್ಯ ಎರಡರಲ್ಲಿ ಶೋಧನ ಕ್ರಮ ತೆಗೆದುಕೊಳ್ಳುವುದು. ಒಂದರಲ್ಲಿ ಶೇಷಾಂಕ, ಎರಡನೆಯದರಲ್ಲಿ (ನ್ಯೂನ ಅಂಕಿಯ) ಶೂನ್ಯ ಇಡುವುದು. ಎರಡು ರಾಶಿಗಳಲ್ಲಿ ಒಂದು ವೇಳೆ ಸಗ್ರಹ(ಗ್ರಹಸಹಿತ)ವಾಗಿದ್ದರೆ ಏಕಾಧಿಪತ್ಯ ಮಾಡಲಾಗುತ್ತದೆ(ಶೋಧನ). ಒಂದು ವೇಳೆ ಸಗ್ರಹ ರಾಶಿ ಅಂಕಿ (ತ್ರಿಕೋನ ಶೋಧನ ನಂತರ – ನಿರ್ಗ್ರಹ ರಾಶಿ ಅಂಕಿಗಿಂತ ಅಲ್ಪ(ಚಿಕ್ಕ)ವಾಗಿದ್ದರೆ ಸಗ್ರಹದ ರಾಶಿಯ ಅಂಕಿಯನ್ನು ನಿರ್ಗ್ರಹ ರಾಶಿ ಅಂಕಿಯಲ್ಲಿ ಕಳೆಯುವುದು. ಒಂದು ವೇಳೆ

ಸಗ್ರಹ ರಾಶಿ ನ್ಯೂನಾಂಕವಾಗಿದ್ದರೆ ಯಥಾವತ್ (ಇದ್ದಂತೆ) ಇಡುವುದು (ಇದರ ವಿಪರೀತ) ಸಗ್ರಹ ರಾಶಿಯಲ್ಲಿ ತ್ರಿಕೋನ ಶೋಧ್ಯಾಂಕ ಅಧಿಕವಾಗಿದ್ದರೆ ಹಾಗೂ ನಿರ್ಗ್ರಹ ರಾಶಿಯಲ್ಲಿ ಫಲಾಲ್ಪತಾವಾಗಿದ್ದರೆ ನಿರ್ಗ್ರಹ ರಾಶಿಯನ್ನು ಸಮಸ್ತ ಅಂಕಿಯನ್ನು ಶೋಧನೆ ಮಾಡುವುದು ಹಾಗೂ ಸಗ್ರಹ ರಾಶಿಯ ಅಂಕಿಯನ್ನು ಇದ್ದಂತೆ ಇಡುವುದು. ಎರಡೂ ರಾಶಿಯಲ್ಲಿ ಗ್ರಹಗಳಿಲ್ಲದಿದ್ದರೆ ಎರಡರಲ್ಲಿ ಸಮಾನ ಅಂಕಿಯಿದ್ದರೆ ಎರಡರಲ್ಲಿಯೂ ಶೂನ್ಯ ಫಲ ಇಡುವುದು ಹಾಗೂ ಒಂದು ರಾಶಿ ಗ್ರಹಸಹಿತವಾಗಿದ್ದು ಎರಡನೇ ರಾಶಿ ನಿರ್ಗ್ರಹವಾಗಿದ್ದರೆ ಅಂಕಿ ತುಲ್ಯತಾ ಇದ್ದರೆ (ಒಂದೇ) ನಿರ್ಗ್ರಹದ ಫಲ ಶೋಧನೆ (ಶೂನ್ಯ) ಮಾಡುವುದು. ಕರ್ಕ – ಸಿಂಹ ರಾಶಿಗಳಿಗೆ ಏಕಸ್ವಾಮಿತ್ವ ವಿದೆಯಾದ್ದರಿಂದ ಅಂಕಿಯನ್ನು ಯಥಾವತ್ ಇಡುವುದು.

ಇಲ್ಲಿ ತಿಳಿದುಕೊಳ್ಳುವ ಮುಖ್ಯ ವಿಷಯ ಸಮಗ್ರ ರಾಶಿಗಳು ಸಬಲವಾಗಿ ಇರುತ್ತದೆ (ಕರ್ಕ-ಸಿಂಹ) ಅದಕ್ಕಾಗಿ ಅದರ ತ್ರಿಕೋನ ಶೋಧ್ಯಾಂಕದ ಶೋಧನ (ಹ್ರಾಸ ಕಳೆಯುವಿಕೆಯಲ್ಲಿ) ರಾಶಿ ಸಬಲವಾಗಿದೆ ಹಾಗೂ ಯಾವುದೇ ರಾಶಿಗಳಲ್ಲಿ ಎರಡೂ ರಾಶಿಗಳಲ್ಲಿ ಸಗ್ರಹವಿದ್ದ ಸಬಲವಾಗುವುದರಿಂದ ಹ್ರಾಸ ಕ್ರಮವಿಲ್ಲ. ಅದಕ್ಕಾಗಿಯೇ "ಉಭಯೋರ್ಗ್ರಹ ಸಂಯುಕ್ತಾ ನ ಸಂಶೋಧ್ಯಃ ಕದಾಚನ" ಎಂದು ಹೇಳಲಾಗಿದೆ. ಎರಡು (ಏಕಸ್ವಾಮಿತ್ವ) ರಾಶಿಗಳಲ್ಲಿ ಒಂದು ಗ್ರಹಸಹಿತವಾಗಿದ್ದು – ಎರಡನೆಯದರಲ್ಲಿ ಗ್ರಹವಿರದಿದ್ದರೆ ಸಗ್ರಹದ ಅಂಕಿಯಷ್ಟು ಆ ಗ್ರಹದ ರಾಶಿಯಲ್ಲಿನ ಅಂಕಿಯಲ್ಲಿ ಕಳೆಯುವುದು. ಒಂದು ವೇಳೆ ಸಗ್ರಹ ರಾಶಿ ಅಂಕಿ ನಿರ್ಗ್ರಹ ರಾಶಿಗಿಂತ ಅಧಿಕವಾಗಿದ್ದರೆ ಅಥವಾ ಅದರಷ್ಟೇ ಇದ್ದರೆ ಆ ಗ್ರಹ ರಾಶಿಯಲ್ಲಿಯ ಎಲ್ಲ ರೇಖೆಗಳ ಅಂಕೆ ಕಡಿಮೆ ಮಾಡುವುದು. ಸಗ್ರಹ ರಾಶಿ ಬಲಿಷ್ಠವಾದ್ದರಿಂದ ಯಥಾವತ್ ಇಡುವುದು. ಎರಡು ರಾಶಿಗಳಲ್ಲಿ ಗ್ರಹಗಳಿಲ್ಲದಿದ್ದರೆ ಅಲ್ಪ ಸಂಖ್ಯೆ ಕಳೆಯುವುದು. ಒಂದು ಕಳೆದು ಉಳಿದ ಅಂಕಿ ಇನ್ನೊಂದು ಶೂನ್ಯವಾಗುತ್ತದೆ. ಎರಡು ರಾಶಿಗಳಲ್ಲಿ ಒಂದೇ ಸಮ ಅಂಕಿ ಬಂದರೆ ಫಲ ಶೂನ್ಯವಾಗುತ್ತದೆ(ಅಂಕಿ).

ಉದಾಹರಣೆ – ತ್ರಿಕೋನ ಶೋಧನಾಂತರದ ಸೂರ್ಯ ಗ್ರಹದ ಚಕ್ರ ನೋಡಿರಿ. (ಇಲ್ಲಿ ರಾಹು, ಕೇತುಗಳಿಗೆ ಸ್ಥಾನವಿಲ್ಲ. ಉಳಿದ ಗ್ರಹಗಳಿಗೆ ಮಾತ್ರ ಅನ್ವಯ)

## ಸೂರ್ಯ ಗ್ರಹ ತ್ರಿಕೋನ ಶೋಧನದ ಏಕಾಧಿಪತ್ಯ

### ಏಕಾಧಿಪತ್ಯ

| ಗ್ರಹ | ರ,ಬು,ಚ | | ಗು,ಮ | | ಶನಿ | | | | | | ಶು | |
|---|---|---|---|---|---|---|---|---|---|---|---|---|
| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 |
| ರೇಖಾ | 4 | 3 | 5 | 4 | 3 | 4 | 5 | 6 | 3 | 6 | 5 | 1 |
| ತ್ರಿ.ಶೋ | 1 | 0 | 0 | 3 | 0 | 1 | 0 | 5 | 0 | 2 | 0 | 0 |
| ಏ.ಶೋ | 1 | 0 | 0 | 3 | 0 | 1 | 0 | 4 | 0 | 2 | 0 | 0 |

ಇಲ್ಲಿ ರವಿ ತುಲಾದಲ್ಲಿ ಸಗ್ರಹನಾಗಿದ್ದು ವೃಷಭ ನಿರ್ಗ್ರಹವಾಗಿ 5 ರೇಕಾಯುಕ್ತವಾದ್ದರಿಂದ ತುಲಾದ 1 ಕಳೆದ – ತುಲಾ – 1 ವೃಷಭ 4 ವೃಶ್ಚಿಕ, ಮೇಷ ಎರಡು ನಿರ್ಗ್ರಹ ರಾಶಿಗಳಾಗಿ ಶೂನ್ಯವಾಗಿ ಶೂನ್ಯವೇ ಆಗುತ್ತದೆ. ಧನು ನಿರ್ಗ್ರಹ ಮೀನ ಸಗ್ರಹವಾಗಿ – ಗ್ರಹವಿದ್ದ ಮೀನದಲ್ಲಿ 1 ಹಾಗೇ ಉಳಿದು ಧನು ಶೂನ್ಯವಾಗುತ್ತದೆ. ಮಕರ ಸಗ್ರಹ 3 ರೇಖಾ ಸಂಖ್ಯೆ ಕುಂಭ ನಿರ್ಗ್ರಹ ಶೂನ್ಯ ಹೀಗಾಗಿ ಮಕರ-3, ಕುಂಭ-0, ಮಿಥುನ-0 ನಿರ್ಗ್ರಹ ಕನ್ಯಾ-0 ಸಗ್ರಹ ಆದರೂ ಶೂನ್ಯವಾಗಿದ್ದರಿಂದ ಶೂನ್ಯವೇಇದ್ದರೆ ಕರ್ಕ-2, ಸಿಂಹ-0.

ಈ ಚಕ್ರ ನೋಡುವುದರಿಂದ ಎಲ್ಲ ಅಂಶ ಸ್ಪಷ್ಟವಾಗುತ್ತದೆ. ಇದೇ ರೀತಿ ಸಾವಧಾನ ಪೂರ್ವಕ ಎಲ್ಲ ಗ್ರಹಗಳ ಏಕಾಧಿಪತ್ಯ ಶೋಧನೆ ಮಾಡುವುದು.

ಪಿಂಡಾನಯನ ಅಧ್ಯಾಯದಲ್ಲಿ ಉಳಿದ ಗ್ರಹಗಳ ಏಕಾಧಿಪತ್ಯ ವಿವರಿಸಲಾಗುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಏಕಾಧಿಪತ್ಯ ಶೋಧನಾಧ್ಯಾಯಃ ಸಮಾಪ್ತಃ

೬೯ನೇ ಅಧ್ಯಾಯ

## ಅಥ ಪಿಂಡಾನಯನಾಧ್ಯಾಯಃ

**ಪರಾಶರ ಉವಾಚ:**

ಇತ್ಥಂ ಶೋಧಿತಮಂಕಂ ತು ರಾಶಿಮಾನೇನ ವರ್ಧಯೇತ್ ।
ಗ್ರಹಯುಕ್ತೇಽಪಿ ತದ್ರಾಶೌ ಗ್ರಹಮಾನೇನ ವರ್ಧಯೇತ್ ॥೧॥

ವಧ್ದಿ ತಾಂಕೆಯುತವಿಜ್ಞೈಃ ಪಿಂಡನಾಮ್ನಾಭಿಧೀಯತೆ ।
ಗೋಸಿಂಹೌ ಚೆಂದುಭಿರ್ಗುಣ್ಯೌ ಯುಗ್ಮಾಲೀ ವಸುಭಿಸ್ತಥಾ ॥೨॥

ವಾಣಿಗ್ ಮೇಷೌ ತು ಮುನಿಭಿಃ ಶರೈಸ್ಚ ಮಕರಾಂಗನೆ ।
ಸ್ವಸ್ವಸಂಖ್ಯಾಭಿರಿತರೆ ಗುಣಕಾ ಅಥ ಖೇಟಜಾಃ ॥೩॥

ಜೀವಾರ ಶುಕ್ರಸೌಮ್ಯಾನಾಂ ದಿಗ್ಗಜಾದ್ರಿಶರಃ ಕ್ರಮತ್ ।
ವಾಣಾಸ್ತಥಾನ್ಯ ಖೇಟಾನಾಂ ವಿಬುಧೈಃ ಸಮುದೀರಿತಾಃ ॥೪॥

**ಪರಾಶರರು ಹೇಳಿದರು—**

ಈ ಪ್ರಕಾರ ಅಷ್ಟಕ ವರ್ಗದಲ್ಲಿ ಶೋಧಿತಾಂಕ (ತ್ರಿಕೋಣ ಹಾಗೂ ಏಕಾಧಿಪತ್ಯ)ಕ್ಕೆ ರಾಶಿಮಾನ(ರಾಶಿ ಗುಣಕಾಂಕ)ದಿಂದ ಒಂದು ವೇಳೆ ರಾಶಿಯಲ್ಲಿ ಗ್ರಹವಿದ್ದರೆ ಗ್ರಹಮಾನ ಗ್ರಹ ಗುಣಕಾಂಕದಿಂದಲೂ ಗುಣಿಸಿ ಎಲ್ಲಿ ಗುಣನ ಫಲದ ಸಂಯುಕ್ತವು ಪಿಂಡಸಂಜ್ಞಕವಾಗುತ್ತದೆ. ವೃಷಭ, ಸಿಂಹ-10, ಮಿಥುನ, ವೃಶ್ಚಿಕಕ್ಕೆ-8, ತುಲಾ ದೋಷಕ್ಕೆ-7, ಮಕರ ಕನ್ಯಾಕ್ಕೆ-5, ಉಳಿದ ರಾಶಿಗಳಿಗೆ ರಾಶಿ ಸಂಖ್ಯೆ ತುಲ್ಯ ಗುಣಾಂಕವಿರುತ್ತದೆ.

ಇದೆ ಪ್ರಕಾರ ಗ್ರಹಗುಣಾಂಕಗಳಿವೆ. ಗುರು-10, ಮಂಗಳ-8, ಶುಕ್ರ-7, ಹಾಗೂ ಬುಧ-5, ಶೇಷ ಸೂರ್ಯ ಚಂದ್ರ, ಶನಿಗಳಿಗೆ-5, ಗುಣಾಂಕವಿದೆ.

### ಸ್ವಷ್ಪಾರ್ಥ ಗುಣಕ ಚಕ್ರ-ರಾಶಿ

| ಮೇ | ವೃ | ಮಿ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧ | ಮ | ಕು | ಮಿ |
|---|---|---|---|---|---|---|---|---|---|---|---|
| 7 | 10 | 8 | 4 | 10 | 5 | 7 | 8 | 9 | 5 | 11 | 12 |

ಈ ರೀತಿ ಗುಣಕಾಂಕಗಳು ಗ್ರಹ ಗುಣಕಾಂಕಗಳು.

| ಗ್ರಹ | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಗುಣಕಾಂಕ | 5 | 5 | 8 | 5 | 10 | 7 | 5 |

ಉದಾಹರಿತ ಕುಂಡಲಿ ಸೂರ್ಯಾಷ್ಟ ಏಕಾಧಿಪತ್ಯ ಶೋಧಿತ- ಸಂಖ್ಯೆ

| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 |
|---|---|---|---|---|---|---|---|---|---|---|---|---|
| ಏಕಾಧಿಪತ್ಯ | 1 | 0 | 0 | 3 | 0 | 1 | 0 | 4 | 0 | 2 | 0 | 0 |
| ಗಪಾಕ | 7 | 8 | 9 | 5 | 11 | 12 | 7 | 10 | 8 | 4 | 10 | 5 |
| ಗಣಾಂಶ | 7 | 0 | 0 | 15 | 0 | 12 | 0 | 40 | 0 | 8 | 0 | 0 |

ರಾಶಿ ಪಿಂಡದಲ್ಲಿ ತುಲಾ-7, ಮಕರ-15, ಮೀನ-12, ವೃಷಭ-40, ಕರ್ಕ-8, ಗುಣಾಕಗಳದ್ದು –

ರಾಶಿಪಿಂಡ- 7+15+12+40+8=82

ಗ್ರಹಪಿಂಡ-ಕ್ಕೆ

ತುಲಾದಲ್ಲಿ ರ. ಚ. ಮ ರಿದ್ದ - ಏಕಾಧಿಪತ್ಯ।

ರ ಚಂ ಬುಧ = ರವಿ+ಚಂದ್ರ+ಬುಧಾ

1×5 1×5 1×5 5 + 5 + 5

ಮಕರದಲ್ಲಿ ಗುರು ಮಂಗಳದಿಂದ ಸಂಖ್ಯೆ 3

ಗುರು ಮಂಗಳ = ಗುರು+ಮಂಗಳ

10×3 8×3 30+24

ಮೀನದಲ್ಲಿ ಶನಿ. ಮೀನದ ಸಂಖ್ಯೆ 1

ಶನಿ 1×5-5

ಕನ್ಯಾದಲ್ಲಿ ಶುಕ್ರನಿದ್ದಾಗಲೂ ಅಲ್ಲಿ 0 ಇರುವುದರಿಂದ ಶೂನ್ಯ.

ಗ್ರಹಪಿಂಡ 5+5+5+24+5+10+0+0+5=44

ರಾಶಿಪಿಂಡ+ಗ್ರಹಪಿಂಡ 82+44=126

ಸೂರ್ಯ ಗ್ರಹ ಅಷ್ಟಕ ವರ್ಗ ಪಿಂಡ 126

ಇದೆ ರೀತಿಯಲ್ಲಿ ಗ್ರಹಗಳ ಪಿಂಡ ತೆಗೆಯುವುದು.

**ಇತಿ ಬೃಹತ್ ದಶಾಶರ ಹೋರಾಶಾಸ್ತ್ರೆ ಪಿಂಡನಾಯನ ಅಧ್ಯಾಯಃ ಸಮಾಪ್ತಃ**

## ೨೦ನೇ ಅಧ್ಯಾಯ

# ಅಥ ಅಷ್ಟಕ ವರ್ಗ ಫಲಾಧ್ಯಾಯ

### ಅಷ್ಟಕ ವರ್ಗ ವಿಚಾರಣೇಯ ವಿಷಯಃ

ಪರಾಶರ ಉವಾಚಃ

ಅಷ್ಟವರ್ಗ ಫಲಂ ವಿಪ್ರ ಸಮಾಹಿತಮಾನಾಃ ಶ್ರುಣು।
ಆತ್ಮಾಸ್ವಭಾವಶಕ್ತಿಶ್ಚ ಪಿತ್ಕುಚಿಂತಾ ರವೇಃ ಫಲಂ ॥೧॥

ಮನೋಬುದ್ದಿ ಪ್ರಸಾದಶ್ಚ ಮಾತೃ ಚಿಂತಾ ಮೃಗಾಂಕತಃ।
ಭ್ರಾತೃಸತ್ವಂ ಗುಣು ಭೂಮಿಂ ಭೌಮೇನ ತು ವಿಚಂತಯೇತ್ ॥೨॥

ವಾಣಿ ಜ್ಯಕರ್ಮವೃತ್ತಶ್ಚ ಮಿತ್ರಂ ಚಾಪಿ ಬುಧೆನತು।
ಗುರುಣಾ ದೇಹ ಪುಷ್ಟಿಂ ಚ ಬುದ್ದಿ ಪುತ್ರಾರ್ಥ ಸಂಪದಃ ॥೩॥

ಭೃಗೋರ್ವಿವಾಹಕರ್ಮಾಣಿ ಭೋಗಸ್ಥಾನಂ ಚ ವಾಹನಮ್।
ವೇಶ್ಯಾಸ್ತ್ರೀಜನ ಸಂಸರ್ಗ ಶುಕ್ರೇಣ ಚ ನೀರಿ ಕ್ಷಯೇತ್ ॥೪॥

ಆಯುಶ್ಚ ಜೀವನೋಪಾಯಂ ದುಃಖ ಶೋಕೌ ಮಹದ್ ಭಯಮ್।
ಸರ್ವಕ್ಷಯಂ ಚ ಮರಣು ಮಂದೇನ್ಯೆವ ನೀರಿಕ್ಷಯೇತ್ ॥೫॥

ತದ್ ಭಾವಫಲರೇಖಾಭಿರ್ಯೋಗ ಪಿಂಡಂ ವಿವರ್ಧಯೇತ್।
ಉದ್ದರೇತ್ ಸಪ್ತವಿಂಶತ್ಯಾ ಶೀಷರ್ಕ್ಷ ರವಿಜೆ ಗತೆ ॥೬॥

ಧ್ರುವಂ ತದ್ ಭಾವಜನಿತೆ ಫಲಂ ಹ್ರಾಸಂ ಸಮಾದಿಶೀತ್।

ಪರಾಶರರು ಹೇಳಿದುದು–

ಹೇ ಮೈತ್ರೇಯ,

ಅಷ್ಟವರ್ಗ ಫಲ ಸಾವಧಾನ ಚಿತ್ತನಾಗಿ ಆಲಿಸು- ರವಿಯ ಫಲ ಆತ್ಮಾ, ಸ್ವಭಾವ, ಶಕ್ತಿ, ಪತ್ಕುಕ್ಲೇಶ ಸುಖಾದಿ, ಆದರೆ, ಚಂದ್ರನಿಂದ ಮನಸ್ಸು ಬುದ್ದಿ ಪ್ರಸಾದ ಹಾಗೂ ತಾಯಿ ಸುಖ ದುಃಖಾದಿ ವಿಚಾರಿಸುವುದು. ಮಂಗಳನಿಂದ ಅಣ್ಣತಮ್ಮರ ವಿಚಾರ ಹಾಗೂ ಭೂಮಿ ಆದಿ ವಿಚಾರ ಮಾಡುವುದು. ವ್ಯಾಪಾರ, ಜೀವನೋಪಾಯ ಮಿತ್ರರ ವಿಚಾರ ಬುಧನಿಂದ. ಗುರುವಿನಿಂದ ಶಾರೀರಿಕ ಪುಷ್ಟಿ, ಬುದ್ದಿ ಸಂತಾನ,

ಧನಸಂಪತ್ತಿನ ವಿಚಾರ ಮಾಡುವುದು. ಅದರಂತೆ ಶುಕ್ರನಿಂದ ವಿವಾಹ ಕಾರ್ಯ, ಭೋಗ, ವಾಹನ, ಹಾಗೂ ಅನ್ಯಸ್ತ್ರೀ ಸಂಪರ್ಕ ವಿಚಾರ ಮಾಡುವುದು. ಆಯುಸ್ಸ ಜೀವನೋಪಾಯ ಉದ್ಯೋಗ ದುಃಖ ಶೋಕಾದಿಗಳನ್ನು ಹಾಗೂ ಜೀವನದಲ್ಲಿ ಮಹಾಭಯವನ್ನು ಎಲ್ಲ ವಸ್ತುನಾಶವನ್ನು ಹಾಗೂ ಮರಣವನ್ನು ಶನಿಯಿಂದ ನಿರ್ದೇಶಿಸುವುದು. ಆದರೆ ವಿಚಾರಣೆಯ ಭಾವ ಸಂಖ್ಯೆಯಿಂದ ಯೋಗಪಿಂಡಕ್ಕೆ ಗುಣಿಸಿ 27(ನಕ್ಷತ್ರ ಸಂಖ್ಯೆ)ಯಿಂದ ಭಾಗಿಸಿ ಶೇಷ ಸಂಖ್ಯೆಯ ನಕ್ಷತ್ರದಲ್ಲಿ ಚರದಶ (ಗೋಚಾರ ವಶ) ಶನಿ ಬಂದಾಗ ಆ ಭಾವದ ಹ್ರಾಸ (ಹಾನಿ) ಹೇಳುವುದು. ಶುಭ ಗ್ರಹಗಳು ಬಂದಾಗ ಶುಭ.

ವಿಮರ್ಶೆ : ಇಲ್ಲಿ ಶನಿ ಯೋಗಕಾರಕನಾಗಿದ್ದರೆ (ವೃಷಭ ಲಗ್ನದಲ್ಲಿ) ಅಥವಾ ಆತ್ಮ ಅಮಾತ್ಯಕಾರಕನಾಗಿದ್ದರೆ ನಾಶವೆಂದೇನು ಅಲ್ಲಿ - ಎಲ್ಲಿ ಅಂಶಗೆ ನೋಡಿ ಫಲ ಹೇಳುವುದು.

## ಸರ್ವಾಷ್ಟಕವರ್ಗ ಫಲಾನೆಯನ

**ಸೂರ್ಯಾಕ್ರಾರ್ದಂಕ ಮಿತಭಂ ಪಿತುರ್ಗೇಹ ಮುದೀರಿತಮ್ ॥೭॥**

**ಉದ್‌ಗೆಹರೆಖಾಸಂಖ್ಯಾಭಿರ್ಗುಣಿತಂ ಪಿಂಡಕಂ ಹೃತಮ್।**
**ನಕ್ಷತ್ರಸಂಖ್ಯಾಯಾ ಶೇಷ ಮಿತಭಂ ರವಿಜೆ ಗತೆ ॥೮॥**

**ಅಸಂಶಯಂ ತು ವಿಪ್ರೇಂದ್ರ ಪಿತುಃ ಕ್ಲೇಶಂ ಸಮಾದಿಶೇತ್।**
**ತತ್ರಕೋಣಗತೆ ವಾ ಪಿ ಪಿತಾ ಪಿತೃಸಮೊಪಿ ವಾ ॥೯॥**

**ಮರಣು ತಸ್ಯ ಜಾನೀಯಾತ್ ಕ್ಲೇಶಾಧಿಕ್ಯ ಮಥಾಪಿ ವಾ।**

ಜನ್ಮ ಕಾಲಿಕ ಸೂರ್ಯನಿದ್ದ ರಾಶಿಯಿಂದ ನವಮ ತಂದೆಯ ಮನೆಯಾಗುತ್ತದೆ. ಸೂರ್ಯಾಷ್ಟಕ ವರ್ಗದಿಂದ ಆ ಸ್ಥಾನದ ರೇಖಾ ಸಂಖ್ಯೆಯಿಂದ ಸೂರ್ಯಾಷ್ಟಕ ವರ್ಗ ಯೋಗಪಿಂಡದಿಂದ ಗುಣಿಸಿ- 27(ನಕ್ಷತ್ರಸಂಖ್ಯೆ)ಯಿಂದ ಭಾಗಿಸಿ ಶೇಷಾಂಕ ಅಶ್ವಿನಿಯಿಂದ ಎಣಿಸಿ ಆ ನಕ್ಷತ್ರದಲ್ಲಿ ಶನಿಯ ಕಾಲಗತ ಸಂಚಾರ ವಿದ್ಯಾ ನ ಪಿತೃ ಕಷ್ಟ ಹೇಳುವುದು. ಆ ನಕ್ಷತ್ರದ ತ್ರಿಕೋಣ ನಕ್ಷತ್ರ(ಅದನ್ನು ಹಿಡಿದು 10, 19)ದಲ್ಲಿ ಶನಿ ಬಂದಾಗ ತಂದೆ ತಂದೆ ಸಮಾನರು (ಮಾವ, ಅಕ್ಕಂದಿರು) ಮರಣ ಹೊಂದುವುದು ನಿಶ್ಚಿತ (ಯಾರೊಬ್ಬರು) ಅಥವಾ ಗುರುವಿನ ಮೃತ್ಯುವು ಸಂಭವನೀಯ.

ಇಲ್ಲಿ ವಿಚಾರಣೀಯ ಅಂಶ ಕೇವಲ ರವಿಯಿಂದಲೋ ಅಥವಾ ಪಿತೃಕಾರಕ

ಗ್ರಹದಿಂದಲೋ ಎಂದಾಗ ಎರಡನ್ನೂ ಸಮಾಲೋಚಿಸಿ ಫಲ ಹೇಳುವುದು. ನೈಸರ್ಗಿಕ ಪಿತೃಕಾರಕ ರವಿಯಾದರೆ ವೈಯಕ್ತಿಕ ಪಿತೃಕಾರಕ ಬೇರೆ ಗ್ರಹವಿರಲು ಸಾಧ್ಯ ಅದರಲ್ಲಿ ಬಲಿಷ್ಠ ಗ್ರಹದಂತೆ ಫಲ ಹೇಳುವುದು.

ಸೂರ್ಯನಿಂದಲೇ ವಿಚಾರಿಸುವಾಗ ಉದಾಹರಿತ ಕುಂಡಲಿಯಲ್ಲಿ ರವಿ ತುಲಾದಲ್ಲಿದ್ದು ಮಿಥುನ ನವಮ ರಾಶಿಯಾಗಿ ಬುಧ ದೈತ್ಯಗ್ರಹವಾಗಿದ್ದರೂ ಅಸ್ತನಾಗಿರುವುದದರಿಂದ (ಸೂರ್ಯನಿಗೆ ದೈತ್ಯಕಾರಕ) ಆದರೂ ಯುದ್ಧದಲ್ಲಿ ಜಯಿಸಿರುವುದರಿಂದ ಎಲ್ಲ ವಿಚಾರ ಮಾಡಿ ಮಿಥುನದ ಸೂರ್ಯಾಷ್ಟಕ ವರ್ಗ ರೇಖಾ ಸಂಖ್ಯೆ (ಶೋಧನಪೂರ್ವ) 5 ಇದ್ದ ಸೂರ್ಯಸ್ಫುಟ ಪಿಂಡ 126 ಇದೆ. ನಿಯಮದಂತೆ $126 \times 5 = 630 \div 27$ ಶೇಷ 9 ಉಳಿದು ಆಶ್ಲೇಷಾ ನಕ್ಷತ್ರ, ವಾಗುವುದು. ಅದರಿಂದ ತ್ರಿಕೋಣ ನಕ್ಷತ್ರಗಳು ಅನುರಾಧ ರೇವತಿ ನಕ್ಷತ್ರಗಳಾಗಿ ಅವುಗಳಲ್ಲಿ ಕಾಲ ಶನಿಯ ಸಂಚಾರ ತಂದೆಗೆ ಕಷ್ಟಸೂಚಕ 1960ರಿಂದ ತೊಂದರೆ ಶಾರೀರಿಕ ಕಷ್ಟ. ಈ ಮರಣ ಅಂಶದಲ್ಲಿ ಅವರ ಕುಂಡಲಿ ಅವಲೋಕಿಸುವುದು ಅಷ್ಟೇ ಮಹತ್ವದ ಅಂಶವೇ. ಅವರ ಮೃತ್ಯುಕಾರಕ ಗ್ರಹ ಮನೆಯಲ್ಲಿಯ ಇತರ ಅಣ್ಣ ತಮ್ಮಂದಿರ ಕುಂಡಲಿಯೂ ಅಷ್ಟೇ ಮಹತ್ವದ್ದಾಗಿರುತ್ತವೆ. ವೈಯಕ್ತಿಕ ಹೆಚ್ಚು ನಿರ್ದಿಷ್ಟ ಆದರೂ ಆಶ್ಲೇಷಾ, ಅನುರಾಧಾ, ರೇವತಿ ನಕ್ಷತ್ರಗಳು ಪಿತೃಕಷ್ಟಕಾರಕವೆ. ಜಾತಕನ ಪಿತೃಕಾರಕ ಗ್ರಹವೂ ರವಿಯೇ (ಸ್ವಂತ) ಆದ್ದರಿಂದ ಮೃತ್ಯುವಿಲ್ಲದಿದ್ದರೂ ಮೃತ್ಯುಸಮಾನ ಕಷ್ಟವೇ.

## ಪ್ರಕಾರಾಂತದಲ್ಲಿ

ಪಿತುರ್ಗೆಹಾಷ್ಟವರ್ಗಿಯರೇಖಾಭಿಃ ಪಿಂಡಕೆ ಹತೆ ॥೧೦॥

ದ್ವಾದಶಾಪಹೃತೆ ಶೇಷಭಂ ಗತೆ ರವಿಜೆ ಥವಾ।
ತತ್ಕೋಣ ಭವನಂ ಯಾತೆ ಪಿತುಃ ಕ್ಲೇಶಂ ಸಮಾದಿಶೇತ್ ॥೧೦॥

ಅರಿಷ್ಟದದಶಾಕಾಲೆ ಮೃತ್ಯುರ್ದೇವ ನ ಸಂಶಯಃ।

ಇಲ್ಲಿವೆ ಈ ಮೇಲೆ ಹೇಳಿದ ಸ್ಫುಟ ಪಿಂಡಕ್ಕೆ ಪಿತೃಕಾರಕ (ಪಿತೃಗ್ರಹವಿದ್ದ ರಾಶಿಯ) ಅಷ್ಟವರ್ಗೀಯ ಸಂಖ್ಯೆಯಿಂದ ಗುಣಿಸಿ 12ರಿಂದ ಭಾಗಿಸಿ ಶೇಷ ರಾಶಿ (ಮೇಷದಿಂದ) ಅಥವಾ ಅದರಿಂದ 5, 9ರಲ್ಲಿ ಶನಿ ಬಂದಾಗ ಪಿತೃಮರಣ ಅಥವಾ ಕಷ್ಟ ಹೇಳುವುದು.

ಇಲ್ಲಿ -ಪಿತೃಕಾರಕ- ಹಾಗೂ ನೈಸರ್ಗಿಕ ರವಿ ತುಲಾ ರಾಶಿಯಲ್ಲಿದ್ದ ಶೋಧನ ಪೂರ್ವ ರೇಖೆಗಳು 4 ಇದ್ದ ಪಿಂಡ $126 \times 4 = 504 \div 12$ ಶೇಷ-0 ಉಳಿದು ಮೇಷ

ಆದರ ತ್ರಿಕೋಣ ರಾಶಿಗಳಾದ ಸಿಂಹ, ಧನುವಿನಲ್ಲಿ ಶನಿ ಸಂಚಾರ ಹಾಗೂ ತಂದೆಯ ಅರಿಷ್ಟದಾಯಕ ದಶಾದಲ್ಲಿ ಮೃತ್ಯು ಸಂಭವ ಇಲ್ಲಿ ಜಾತಕನ ತಂದೆಯು ಚಂದ್ರ ದಶಾ (ಮಕರಲಗ್ನ) ಚಂದ್ರನಿಂದ ಷಷ್ಠಾಧಿಪ (ವ್ಯಯ) ಷಷ್ಠಾಸ್ಥಾನ ಗತನಾದಾಗ ಶನಿಯ ದೃಷ್ಟಿ ಚಂದ್ರನ ಮೇಲಿದ್ದಾಗ ಮೃತ್ಯು ಸಂಭವಿಸಿದೆ. (ಜಾತಕನ ಸಪ್ತಮದಲ್ಲಿ ಶನಿ ಜನ್ಮಸ್ಥ ರವಿಯನ್ನು ನೋಡುತ್ತಿದ್ದಾಗ ಜಾತಕನಿಗೆ ಶನಿ ದಶಾದಲ್ಲಿಯೇ ಮೃತ್ಯು ಸಂಭವಿಸಿದೆ. ಶನಿಯ ದೃಷ್ಟಿ ಆಶ್ಲೇಷಾದ ಮೇಲಿದ್ದಾಗ-

## ಪುನಃ ಪಿತ್ರುರಿಷ್ಟಕಾಲ

ಅರ್ಕಾತ್ತು ತುರ್ಯಗೇ ರಾಹೌ ಮುಂದೆ ವಾ ಭೂಮಿನಂದನೆ ॥೧೨॥

ಗುರು ಶುಕ್ರೇಕ್ಷಣ ಮೃತೆ ಪಿತೃಹಾ ಜಾಯತೆ ನರಃ।
ಲಗ್ನಾಚ್ಚಂದ್ರಾದ್ ಗುರು ಸ್ಥಾನಂ ಯಾತೆ ಸೂರ್ಯ ಸುತೆ ತಥಾ ॥೧೩॥

ಪಾಪಗ್ರಹೇ ಕ್ಷೇತಯತೆ ಪಿತರ್ಮರಣ ಮಾದಿಶೇತ್।
ಲಗ್ನಾತ್ ಸುಖಾಧಿಪಾರಿಷ್ಟದಾಯೇ ಪಿತೃಮೃತಿರ್ಭವೇತ್ ॥೧೪॥

(ಮೇಲೆ ಹೇಳಿದ ತ್ರಿಕೋಣ ರಾಶಿಯಲ್ಲಿ ಶನಿಯಿದ್ದಾಗ) ಸೂರ್ಯನಿಂದ ಚತುರ್ಥದಲ್ಲಿ ರಾಹು. ಶನಿ ಅಥವಾ ಮಂಗಳರಿದ್ದರೆ ಗುರು ಶುಕ್ರ ದೃಷ್ಟಿ ವಂಚಿತ ರಾಗಿದ್ದರೆ ಮನುಷ್ಯ ಪಿತೃಹೀನ ಲಗ್ನ ಅಥವಾ ಚಂದ್ರನಿಂದ ಶನಿ ಗುರು (ನವಮ) ಸ್ಥಾನ ಪ್ರಾಪ್ತನಾದರೆ ಸೂರ್ಯಾಧಿಪನ ಅನಿಷ್ಟದಶಾದಲ್ಲಿ ತಂದೆಯ ಮರಣ ಹೇಳುವುದು. ಇಲ್ಲಿಯೂ ಶನಿ,ರವಿಯಿಂದ ರಾಹು 4ನೇ ಸ್ಥಾನದಲ್ಲಿ ಶನಿ ಮಂಗಳನ ದೃಷ್ಟಿಯಲ್ಲಿ (ಅಸ್ತ) ಚಂದ್ರ ರವಿ ಶನಿಯಿಂದ ನವಮದಲ್ಲಿ ಇದ್ದ ಸ್ಥಿತಿಯಲ್ಲಿ ಫೆಬ್ರುವರಿಯಲ್ಲಿ 65ರಲ್ಲಿ ಪಿತೃಮೃತ್ಯು ಸಂಭವಿಸಿದೆ.

## ಪಿತೃನಿಧನ ಯೋಗಃ

ಪಿತೃಜನ್ಮಾಷ್ಟಮೇ ಜಾತಸ್ತದೀಶೆ ಲಗ್ನಗೇಪಿವಾ।
ಸ ಏವ ಕುರುತೆ ತಾತಕೃತ್ಯಾನಿ ದ್ವಿಜಸತ್ತಮ ॥೧೫॥

ತಂದೆಯ ಜನ್ಮಲಗ್ನದಿಂದ ಅಷ್ಟಮಾಧಿಪ ಜಾತಕನ ಲಗ್ನಗತವಾಗಿದ್ದರೆ ಅಥವಾ ಅಷ್ಟದೋಷ (ಪಿತನ ಅಷ್ಟಯೋಗ) ಜಾತಕನ ಲಗ್ನಗತನಾದ ಎರಡೂ ಸ್ಥಿತಿಯಲ್ಲಿ ಪಿತೃ ಮರಣ ಹಾಗೂ ಆಗ ಜಾತಕ ಸ್ವಯಂ ತಂದೆಯ ಕಾರ್ಯ ನಿರ್ವಹಿಸುತ್ತಾರೆ (ದಾಹಾದಿ)

## ಪಿತೃಸುಖಯೋಗ

ಸುಖೇಶೆ ಲಾಭಲಗ್ನಸ್ಥೆ ಚಂದ್ರಾದಪಿ ವಿಶೇಷತಃ।
ಪಿತೃಸದ್ಮಗತೆ ವಾಪಿ ಜಾತಃ ಪಿತೃವಶಾನುಗಃ ॥೧೬॥

ಪಿತೃಜನ್ಮತೃತೀಯ ಕ್ಷ್ರೇ ಜಾತಃ ಪಿತೃದನಾಶ್ರೀತಃ।
ಪಿತೃಕರ್ಮಗ್ರಹೆ ಜಾತಃ ಪಿತೃತುಲ್ಯ ಗುಣಾನ್ವಿತಃ ॥೧೭॥

ತದೀಶೆ ಲಗ್ನ ಸಂಸ್ಥೆ ಪಿ ಪಿತೃಶೇಷ್ಠೋ ಭವೆಜ್ಜನಃ।
ಸಾಧಾರಣ ಫಲಂ ಸರ್ವ ಮಾತ್ರಾಪಿ ವಿಮೃಶೇಸೇಷದ್ ಬುಧಃ ॥೧೮॥

ಸುಖೇಶ ಜನ್ಮ ಲಗ್ನಗತಃ ಚಂದ್ರ ಲಗ್ನದಿಂದ ಏಕಾದಶ ಸ್ಥಾನದಲ್ಲಿ ಅಥವಾ ಪಿತೃಸದನ(ದಶಮ)ಗಳನಾಗಿರಲಿ ಇದ್ದರೆ ಪುತ್ರ ತಂದೆಯ ಆಜ್ಞಾಧಾರಕನಾಗಿ ಇರುತ್ತಾನೆ. ತಂದೆಯ ಜನ್ಮ ಲಗ್ನ ಅಥವಾ ಜನ್ಮರಾಶಿಯಿಂದ ತೃತೀಯದಲ್ಲಿ (ಲಗ್ನ) ಜನನವಾಗಿದ್ದರೆ ಜಾತಕ ಪಿತೃವಿನ ಧನ ಉಪಭೋಕ್ತನಾಗುತ್ತಾನೆ.

ತಂದೆಯ ಜನ್ಮಲಗ್ನ ಅಥವಾ ಜನ್ಮರಾಶಿಯಿಂದ 10ನೇ ಮನೆ(ರಾಶಿ)ಯಲ್ಲಿ ಜನ್ಮವಾಗಿದ್ದರೆ ಜಾತಕ ತಂದೆಗಿಂತ ಎಲ್ಲದರಲ್ಲೂ ಶ್ರೇಷ್ಠನೆನ್ನಿಸಿಕೊಳ್ಳುತ್ತಾನೆ.

## ವಿಶೇಷ ಫಲ

ಸೂರ್ಯಾಷ್ಟವರ್ಗೆಯಚ್ಛೂನ್ಯಂ ತನ್ಮಾಸೆ ವತ್ಸರೇಥವಾ।
ವಿವಾಹವ್ರತ ಬಂಧಾದಿ ಸತ್ಕಾರ್ಯ ಗರ್ಹಿತಂ ಬುಧೈಃ ॥೧೯॥

ತಥಾ ರೇಖಾಧಿಕ ಮಾಸೆ ವತ್ಸರ ವಾ ದ್ವಿ ಜೋತ್ತಮ।
ಅಸಥ್ಫಲ ಪ್ರದೆ ಸೂರ್ಯೆ ಗುರೌ ವಾ ಸಿಪಿತಂ ಹಿತತ್ ॥೨೦॥

ಸೂರ್ಯಾಷ್ಟಕ ವರ್ಗದಿಂದ ಯಾವ ರಾಶಿಯಲ್ಲಿ ಅಧಿಕ ಶೂನ್ಯಗಳಿವೆಯೋ ಆ ಮಾಸ (ರಾಶಿಯಲ್ಲಿ ಸೂರ್ಯ ಬಂದಾಗ) ಅಥವಾ ಆ ವರ್ಷ (ಮಧ್ಯಮ ಗುರು) ಬಂದಾಗ ವಿವಾಹಾದಿ ಕಾರ್ಯಗಳು ನಿರ್ಬಂಧವಿದೆ (ಆಗಲಾರದು) ಹಾಗೂ ಯಾವ ರಾಶಿಯಲ್ಲಿ ಅಧಿಕಕೋನಗಳಿವೆಯೋ ಆ ಮಾಸ ಅಥವಾ ವರ್ಷದಲ್ಲಿ (ಮಧ್ಯಮ ಗುರು) ಸೂರ್ಯ ನೀಚನಾಗಿದ್ದರೂ ವಿವಾಹ ಶುಭವಾಗುತ್ತದೆ. ಹಾಗೂ ಎಲ್ಲ ಶುಭ ಕೃತ್ಯಕ್ಕೂ ಶುಭವಿದೆ.

## ಚಂದ್ರಾಷ್ಟಕ ವರ್ಗ ಫಲ

ಇತ್ಥ ಮಿಂದಷ್ಟಕೆ ಯಸ್ಮಿನ್ ರಾಶೌ ಶೂನ್ಯಂ ವಿಶೇಷತಃ
ತದ್ರಾಶಿಗೆ ವಿದೌ ನೈವ ಶುಭಕಾರ್ಯ ಸ ಮಾಚರೇತ್ ॥೨೧॥

ಚಂದ್ರಾಚ್ಚತುರ್ಥತೋ ಮಾತ್ರು ಪ್ರಸಾದಗ್ರಾಮ ಚಿಂತನಮ್।
ಚಂದ್ರಾತ್ ಸುಖ ಫಲಾತ್‌ಪಿಂಡಂ ವರ್ಧಯೇತ್ ವಿಹರೇಚ್ಚ ಭೈಃ ॥೨೨॥

ಶೇಷರ್ಕ್ಷತತ್ ತ್ರಿಕೋಣರ್ಕ್ಷೇ ವಾ ಗತೇರ್ಕ ಸುತೆ ದಿಶೇತ್।
ಭ್ರಾರ್ತಿ ಜನನ್ಯಾಃ ಕಷ್ಟಂ ವಾತರ್ಕಾಪ್ಯಚ್ಛೈಷ ಕ್ಷರ್ಷಗೆ ಪಿ ಚ ॥೨೩॥

ಈ ತರಹ ಚಂದ್ರಾಷ್ಟಕ ವರ್ಗದಲ್ಲಿ ಯಾವ ರಾಶಿಯಲ್ಲಿ ಶೂನ್ಯಾಧಿಕ್ಯವಿವೆಯೋ (ರೇಖೆ) ಆ ರಾಶಿಯಲ್ಲಿ ಚಂದ್ರನಿದ್ದಾಗ ವಿವಾಹ ಶುಭಕರ್ಮ ವರ್ಜನೀಯ ಚಂದ್ರನಿಂದ 4ನೇ ಸ್ಥಾನದಿಂದ ತಾಯಿ ಗ್ರಾಮ ಆದಿ ವಿಷಯ ವಿವೇಚಿಸುವುದು. ಆದ್ದರಿಂದ ಚಂದ್ರಾಷ್ಟಕದಿಂದ ಚತುರ್ಥದಲ್ಲಿಯ ರೇಖಾ ಸಂಖ್ಯೆಯಿಂದ ಚಂದ್ರಾಷ್ಟಕ ವರ್ಗ ಪಿಂಡಕ್ಕೆ ಗುಣಿಸಿ ನಕ್ಷತ್ರ ಸಂಖ್ಯೆ(27)ರಿಂದ ಭಾಗಿಸಿ. ಶೇಷನಕ್ಷತ್ರ (ಅಶ್ವಿನಿಯಿಂದ) ಅಥವಾ ಅದರ ತ್ರಿಕೋಣ ನಕ್ಷತ್ರ (10, 19) ರಲ್ಲಿ ಶನಿಯ ಸಂಚಾರದಲ್ಲಿ ಆಗ ಮಾತೃವಿಗೆ ಕಷ್ಟ ಮರಣ ಹೇಳುವುದು. ರೇಖಾ ಸಂಖ್ಯೆ ಹಾಗೂ ಪಿಂಡದ ಗುಣನ ಫಲಕ್ಕೆ 12ರಿಂದ ಭಾಗಿಸಿ ಶೇಷ ಸಂಖ್ಯೆಯ ರಾಶಿ ಹಾಗೂ ಆದರ ಪಂಚಮ ನವಮದಲ್ಲಿ ಶನಿ ಸಂಚಾರವಿದ್ದಾಗ ಮಾತೃಮೃತ್ಯು ಮಾತೃ ಸಮಾನರಿಗೆ ಕಷ್ಟ ಹೇಳುವುದು ಈ ಅಂಶಕ್ಕೆ ತ್ರಿಕೋಣ ಶೋಧನ ಏಕಾಧಿಪತ್ಯ ಶೋಧನ ಮಾಡಿ ಸ್ಫುಟ ಪಿಂಡ ತೆಗೆಯಬೇಕು. ಇಲ್ಲಿ ಲಕ್ನ ಪೂರ್ವಕ ತ್ರಿಕೋಣ ಏಕಾಧಿಪತ್ಯ ತೆಗೆದು ಪಿಂಡವನ್ನು ರಾಶಿ ಗ್ರಹ ಸಂಖ್ಯೆಯಿಂದ ಗುಣಿಸಿ ತೆಗೆಯಬೇಕು. ಉದಾಹರಣೆದತ್ತ ಕುಂಡಲಿ.

| ಗ್ರಹ | ಚರ | | | .ಗುಮ | | ಶನಿ | | | | | | ಶು |
|---|---|---|---|---|---|---|---|---|---|---|---|---|
| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 |
| ರೇಖಾ | 4 | 3 | 5 | 4 | 3 | 4 | 5 | 6 | 3 | 6 | 5 | 1 |
| ತ್ರೀ | 1 | 0 | 0 | 3 | 0 | 1 | 0 | 5 | 0 | 2 | 0 | 0 |
| ಏ.ಶೋ | 1 | 0 | 0 | 3 | 0 | 1 | 0 | 4 | 0 | 2 | 0 | 0 |

ಏಕಾಧಿಪತ್ಯದ ನಂತರ ರಾಶಿ ಪಿಂಡ

ತುಲಾ - 1 × 7 = 7 ಮಕರ - 3 × 5 = 15 ಮೀನ -1 × 12 = 12

ಕರ್ಕ 4 × 4 = 16 ಇವು ಗ್ರಹ ಗುಣಾಂಕಗಳ 7+15+12+16 = 50 ರಾಶಿ ಪಿಂಡ ಗ್ರಹ ಗುಣಾಂಕ

ರ - 1 × 5 = 5, ಚಂ 1 × 5 = 5, ಮ 3 × 5 = 14 ಬುಧ 1 × 5 = 5, ಗುರು 3 × 10 = 30 ಶುಕ್ರ 0 × 7 = 0 ಶನಿ 1 × 5 = 5

5+5+24+5+30+5=74

74 ಗ್ರಹಪಿಂಡ+50 ರಾಶಿಪಿಂಡ = 124

124- ಚಂದ್ರಪಿಂಡ

ಚಂದ್ರನಿಂದ ನಾಲ್ಕನೇ ಸ್ಥಾನ ಮಕರ - ಅದರ ಶೋಧ್ಯಪೂರ್ವ ರೇಖೆಗಳು 4 124×4= 496÷27 ಶೇಷ ನಕ್ಷತ್ರ 10- ಅಂದರೆ ಮಘಾ - ಹತ್ತನೆ ನಕ್ಷತ್ರ ಮೂಲಾ, 19ನೇ ನಕ್ಷತ್ರ ಅಶ್ವಿನಿ.

ಮಘಾ, ಮೂಲಾ ಅಶ್ವಿನಿಯಲ್ಲಿ ಶನಿಯ ಸಂಚಾರ ತಾಯಿಗೆ ತೊಂದರೆ.

ಅದೆ 496ನ್ನು ÷12 (ಭಾಗಿಸಿದಾಗ) ಶೇಷ ನಾಲ್ಕು ಉಳಿಯುವುದು. ಕರ್ಕ ರಾಶಿಯಲ್ಲಿ ಅದರ ತ್ರಿಕೋನಗಳಾದ ವೃಶ್ಚಿಕ, ಮೀನದಲ್ಲಿ ಶನಿ ಸಂಚಾರ ತಾಯಿಗೆ ತೊಂದರೆ ಇಲ್ಲಿ ಗಮನಿಸಬೇಕಾದ ಅಂಶ ವೃಶ್ಚಿಕದಲ್ಲಿ ಶನಿ ಸಂಚಾರವಿದ್ದಾಗ (25.5.85) ತಾಯಿಯ ಮೃತ್ಯುವಾದದ್ದು.

## ಭೌಮಾಷ್ಟಕ ವರ್ಗಫಲ

ಭೌಮಾಷ್ಟವರ್ಗೆ ಸಂಚಿತ್ಯಂ ಭ್ರಾತೃ ವಿಕ್ರಮ ಧೈರ್ಯಕಮ್
ಭೌಮಾಶ್ರೀತಸ್ಥ ಸಹಜೋ ರಾಶಿಭ್ರಾತೃಗೃಹಂ ಸ್ಮೃತಮ್ ॥೨೪॥

ತ್ರಿಕೋಣೆ ಶೋಧಿತೆ ಯತ್ರ ರಾಶೌ ಭೂರಿಫಲಂ ಭವೆತ್
ತತ್ರ ಯಾತೆ ಕುಜೆ ಭೂಮಿ ಸ್ತ್ರೀ ಭ್ರಾತೃಸುಖಮದ್ ಭುತಮ್ ॥೨೫॥

ಭೌಮೋ ಬಲ ವಿ ಹೀನ ಶ್ಚೆ ದಿಕ್ಷೀರ್ಘಾಯುಃ ಸಹಜೋಭವೆತ್
ಫಲಾನಿ ಯತ್ರಕ್ಷಯಂತೆ ತತ್ರಾರೆ ಕಷ್ಟಮಾದಿಶೇತ್ ॥೨೬॥

ಪಿಂಡಂ ಕುಜತ್ತೀ ಯಕ್ಷ್ಣರೇಖಾಭಿರ್ಗುಣಯೇದ್ ಭಜೇತ್।
ಭೈಸ್ತಥಾಕ್ಕೆಂಸ್ತು ಶೀರ್ಕ್ಷ್ಣ ಮಾಗತೆ ರವಿಜೇಥವಾ ॥೨೭॥

ತತ್ರೀಕೋಣಗತೆ ಭ್ರಾತುಃ ಕಷ್ಟಂ ಸ್ವಷ್ಟಂ ವದೇದ್ ಬುಧಃ ॥೨೮॥

ಭೌಮಾಷ್ಟಕ ವರ್ಗದಿಂದ ಅಣ್ಣತಮ್ಮರು ಪರಾಕ್ರಮ ಹಾಗೂ ಧೈರ್ಯದ ವಿಚಾರ ಮಾಡುವುದು. ಭೌಮಾಶ್ರೀತ ರಾಶಿಯಿಂದ ತೃತೀಯ ಭ್ರಾತೃಗ್ರಹವಾಗುತ್ತದೆ. ತ್ರಿಕೋಣ ಶೋಧನ ಮಾಡಿದ ನಂತರ ಯಾವ ರಾಶಿಯಲ್ಲಿ ಅಧಿಕ ರೇಖೆ ಯಿರುವ ಸ್ಥಾನದಲ್ಲಿ ಮಂಗಳನ ಸಂಚಾರ, ಭೂಮಿ, ಸ್ತ್ರೀ ಹಾಗೂ ಅಣ್ಣ ತಮ್ಮರ

ಸೌಖ್ಯ ಹೇಳುವುದು. ಮಂಗಳ ನಿರ್ಬಲನಾಗಿದ್ದರೆ ಸಹಜ ದೀರ್ಘಾಯು ಆಗುತ್ತಾನೆ. ಯಾವ ರಾಶಿಯಲ್ಲಿ ಶೋಧಿತಾಂಕ ಶೂನ್ಯವಾಗಿಯೇವೋ ಆ ರಾಶಿಯಲ್ಲಿ ಮಂಗಳನು ಹೋದಾಗ ಅಣ್ಣ ತಮ್ಮರಿಗೆ ಕಷ್ಟ.

ಮಂಗಳ ಪಿಂಡ ತೆಗೆದು ತೃತೀಯ (ಮಂಗಳನಿಂದ) ರೇಖಾ ಸಂಖ್ಯೆಯಿಂದ ಗುಣಿಸಿ ಗುಣನ ಫಲ 27 ರಿಂದ ಭಾಗಿಸಿ ಶೇಷಾಂಕ ತುಲ್ಯ (ಅಶ್ವಿನಿ ಆದಿಯಿಂದ) ನಕ್ಷತ್ರ ಹಾಗೂ ಅದರಿಂದ ತ್ರಿಕೋಣ ನಕ್ಷತ್ರ (10, 19) ಅದರಂತೆ ಪಿಂಡಕ್ಕೆ ಗುಣಿಸಿದ ಸಂಖ್ಯೆಯಗೆ 12 ರಿಂದ ಭಾಗಿಸಿ ಶೇಷ ರಾಶಿಯಲ್ಲಿ ಅದರ ತ್ರಿಕೋಣ ರಾಶಿಯಲ್ಲಿ ಮಂಗಳ ಸಂಚಾರ ಶನಿ ಬಂದಾಗ ಕಷ್ಟ.

## ಭೌಮಾಷ್ಟಕ ತ್ರಿ ಏ ಶೋಧನ -ನಕ್ಷೆ

| ಗ್ರಹ | ಗುಮ | | ಶ | | | | | | ಶು | ರಬುಚ | | |
|---|---|---|---|---|---|---|---|---|---|---|---|---|
| ರೇಖೆ | 10 | 11 | 12 | 1 | 2 | 3 | 4 | 5 | 6 | 7 | 8 | 9 |
| ರೇಖೆ | 2 | 5 | 3 | 3 | 1 | 2 | 4 | 5 | 2 | 3 | 3 | 6 |
| ತ್ರಿಕೋ | 2 | 3 | 0 | 0 | 0 | 0 | 1 | 2 | 1 | 1 | 0 | 3 |
| ಏಕಾಂತ | 2 | 1 | 0 | 0 | 0 | 0 | 1 | 2 | 1 | 1 | 0 | 3 |

ರಾಶಿ ಪಿಂಡ ಮಕರ $2 \times 5 = 10$, ಕುಂಭ $1 = 11 = 11$

ಕರ್ಕ $1 = 4 = 4$, ಸಿಂಹ $2 \times 10 = 20$, ಕನ್ಯಾ $1 \times 5 = 5$, ತುಲಾ $1 \times 7 = 7$, ಧನು $3 \times 9 = 27$.

$10+11+4+20+5+7+27 = 84$

ಗ್ರಹಪಿಂಡ - ರವಿ- $1 \times 5 = 5$, ಚಂದ್ರ $1 \times 5 = 5$ ಮಂಗಳ $2 \times 8 = 16$ ಬುಧ $1 \times 5 = 5$, ಗುರು $2 \times 10 = 20$, ಶುಕ್ರ $1 \times 7 = 7$, ಶನಿ $= 0$

$5+5+16+5+20+7 = 58$

$84+58 = 142$- ಮಂಗಳ ಸ್ಫುಟ ಪಿಂಡ

ಇದಕ್ಕೆ ಮಂಗಳನಿಂದ 3ನೇ ರಾಶಿಯ ರೇಖಾ ಸಂಖ್ಯೆ 3ರಿಂದ ಗುಣಿಸಲು $142 \times 3 = 426 \div 27$ ಶೇಷ 21

ಉತ್ತರಾಷಾಡ ತ್ರಿಕೋಣ ನಕ್ಷತ್ರ ರೋಹಿಣಿ ಹಸ್ತಾ ನಕ್ಷತ್ರಗಳಲ್ಲಿ ಶನಿ ಸಂಚಾರ.

ಅಂತೆ $426 \div 12 = 6$ ಶೇಷ ಕನ್ಯಾ ರಾಶಿ ಮಕರ ರಾಶಿಯಲ್ಲಿ ಶನಿಯ ಸಂಚಾರ

ಸಹೋದದರಿಗೆ ಕಷ್ಟದಾಯಕ ಹಾಗೂ ಕುಂಭ ಧನುವಿನಲ್ಲಿ ಮಂಗಳ ಸಂಚಾರ ಶುಭ.

## ಬುಧಾಷ್ಟಕ ವರ್ಗ ಫಲ

ಬುಧಾತ್ ತುರ್ಯೇ ಕುಟುಂಬೆ ಚ ಚಿಂತಯೇನ್ಮಿತ್ರವಮಾತುತೌ।
ಗೃಹೆ ರೇಖಾಧಿಕೆ ಯಾತೆ ಜ್ಞೆ ತೀಷಾಮುತ್ತಮಂ ಸುಖಮ್ ॥೨೯॥

ಬುಧಾಷ್ಟಕ ವರ್ಗ ಸಂಶೋಧ್ಯ ಶೇಷಮೃಕ್ಷಂ ತ ಗತೆ ಶನೌ।
ಕ್ಲೇಶಂ ಮಾತುಲಸನ್ಮಿತ್ರಕುಟುಂಬಾನಾಂ ತದಾ ವದೇತ್ ॥೩೦॥

ಬುಧನಿಂದ ಚತುರ್ಥ ರಾಶಿಯಿಂದ ಕುಟುಂಬ ಮಿತ್ರ ವರ್ಗ ಹಾಗೂ ವರಾಮಾ ಆದಿಗಳ ಶುಭ ಶುಭ ವಿಚಾರ ಮಾಡುವುದು. ಬುಧಾಷ್ಟಕ ವರ್ಗದಲ್ಲಿ ಯಾವ ರಾಶಿಯಲ್ಲಿ ಅಧಿಕ ರೇಖೆಗಳಿವೆಯೋ ಅಲ್ಲಿ ಬುಧ ಬಂದಾಗ ಶುಭದಾಯಕನು ಮಿಥುನ ಸಿಂಹ ಕನ್ಯಾದಲ್ಲಿ (ದತ್ತ ಕುಂಡಲಿಗೆ) ಬಂದಾಗ ಶುಭಕನು ಬುಧಾಷ್ಟಕ ವರ್ಗದಲ್ಲಿ ತ್ರಿಕೋನ ಏಕಾಧಿಪತ್ಯದ ನಂತರ ಪಿಂಡ ತಯಾರಿಸಿ ನಾಲ್ಕನೇ ಮನೆ ಸಂಖ್ಯೆಯಿಂದ (ರೇಖಾ) ಗುಣಿಸಿ 27ರಿಂದ ಭಾಗಿಸಿ ಶೇಷ ನಕ್ಷತ್ರದಲ್ಲಿ ಹಾಗೂ ತ್ರಿಕೋಣ (10, 19) ನಕ್ಷತ್ರಗಳ ಶನಿ ಬಂದಾಗ ಕಷ್ಟದಾಯಕ ಅದು ಕುಟುಂಬದ ವರ್ಗದವರಿಗೆ 12 ರಿಂದ ಭಾಗಿಸಿದಾಗ ಶೇಷ ರಾಶಿಯಲ್ಲಿ ಅದರ ತ್ರಿಕೋಣ ರಾಶಿಯಲ್ಲಿ ಬಂದಾಗ ಕುಟುಂಬ ವರ್ಗಕ್ಕೆ ತೊಂದರೆ.

## ಬುಧಾಷ್ಟಕ ಏಕಾಧಿಪತ್ಯ ಶೋಧನ

| ಗ್ರಹ | ರಬುಚ | | | ಗುಮ | | ಶನಿ | | | | | | ಶು |
|---|---|---|---|---|---|---|---|---|---|---|---|---|
| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 |
| ರೇಖೆ | 5 | 5 | 5 | 4 | 4 | 4 | 4 | 3 | 4 | 5 | 6 | 5 |
| ತ್ರಿ.ಶೋ | 1 | 1 | 1 | 1 | 0 | 0 | 0 | 0 | 0 | 1 | 2 | 2 |
| ಏ.ಶ | 1 | 1 | 0 | 1 | 0 | 0 | 0 | 0 | 0 | 1 | 2 | 2 |

## ಬುಧನ ಗ್ರಹ ಪಿಂಡ

ರ - 1 × 5 = 5, ಚಂ 1 × 5 = 5, ಮಂಗಳ = 1 × 8 = 8 ಗುರು 1 × 10 = 10, ಶನಿ 2 × 7 = 14, ಬುಧ 1 × 5 = 5

5+5+8+5+10+14 = 47 ಗ್ರಹಪಿಂಡ

## ರಾಶಿ ಪಿಂಡ

ತುಲಾ - 1 × 7 = 7, ವೃಶ್ಚಿಕ 1 × 8 = 8, ಮಕರ 1 × 5 = 5, ಕರ್ಕ 1 × 4 = 4,

ಸಿಂಹ $2 \times 10 = 20$, ಕನ್ಯಾ $2 \times 5 = 10$

$7+8+5+4+20+10=54$

$54+47=101$ ಬುಧ ಸ್ಫುಟ ಪಿಂಡ

$101 \div 27 = 20$ ಶೇಷ ಅನುರಾಧಾ-ತ್ರಿಕೋಣ ನಕ್ಷತ್ರಗಳಾದ ಉತ್ತರ, ಭಾದ್ರಪದ, ಪುಷ್ಯಾ ನಕ್ಷತ್ರಗಳಲ್ಲಿ ಶನಿಯ ಸಂಚಾರ ಹಾಗೂ

ಶೇಷ $101 \div 12 = 5$, ಸಿಂಹ ಹಾಗೂ ಧನು, ಮೇಷಗಳಲ್ಲಿ ಶನಿ ಸಂಚಾರ ಅಣ್ಣಾ ತಮ್ಮಂದಿರಿಗೆ ಕಷ್ಟದಾಯಕ ಹಾಗೂ ಮಾಮಾ, ಮಾಮಿ ಆದಿ ಕುಟುಂಬ ವರ್ಗದವರಿಗೆ ಕಷ್ಟ ಮೃತ್ಯುಪ್ರದ.

## ಗುರ್ವಾಷ್ಟಕ ವರ್ಗ ಫಲ

ಜೀವಾತ್ ಪಂಚಮತೋ ಜ್ಞಾನ ಪುತ್ರ ಧರ್ಮಾದಿ ಚಿಂತನಮ್।
ಫಲಾಧಿಕೆ ಮೃಗೆ ತತ್ರ ಜ್ಞೇಯಂ ಪುತ್ರಾದಿಜಂ ಸುಖಮ್ ॥೩೦॥

ಗುರೋಃ ಪಂಚಮಗೇಹೆ ತು ರೇಖಾ ಭವತಿ ಯನ್ಮಿತಾ।
ಸಂತತಿಸ್ತನ್ಮಿತಾ ಶತ್ರುನೀಚಗೇಹೆ ಗುರುರ್ನ ಚೇತ್ ॥೩೧॥

ಪಂಚಮೇಶನವಾಂಶಸ್ತ ಸಮಾನಾ ವಾಪಿ ಸಾ ಸ್ಮೃತಾ।
ಪಂಚಮ ಸ್ಥಾನರೇಖಾಭಿಃ ಪಿಂಡಂ ಸಂದರ್ಧ್ಯ ಭೈಸ್ತಥಾ ॥೩೨॥

ರವಿಭಿರ್ವಿ ಭಜೇತ್ ಶೇಷ ಭಾಗಃ ಪುತ್ರಾರ್ತ್ರಿದಃ ಶನಿಃ।
ಇತ್ಥಂ ತದೃಕ್ಷಗೋ ವಿದ್ಯಾಧರ್ಮಯೋರಪಿ ಹಾನಿಕೃತ್ ॥೩೪॥

ಗುರುವಿನಿಂದ ಪಂಚಮ ಸ್ಥಾನದಿಂದ ಜ್ಞಾನ ಪುತ್ರ ಧರ್ಮ ಆದಿ ವಿಚಾರ ಮಾಡುವುದು. ಆ ಸ್ಥಾನದಲ್ಲಿ ಗುರುವಷ್ಟ ಕವರ್ಗದಲ್ಲಿ ಅಧಿಕ ರೇಖೆಗಳಿದ್ದರೆ ವಿದ್ಯಾಪುತ್ರ ಧರ್ಮ ಆದಿ ಸೌಖ್ಯ ಪ್ರಾಪ್ತಿ ಗುರು ನೀಚಸ್ಥನಾಗಿರದೆ ಶತ್ರುಕ್ಷೇತ್ರದಲ್ಲಿರದಿದ್ದರೆ ಪಂಚಮೇಶನ ನವಾಂಶ ಸಂಖ್ಯೆಯ ಯಥಾ ಸಂತಾನ ಸಂಖ್ಯೆಯಿರುತ್ತದೆ. ಗುರುವಿನ ಪಂಚಮ ಭಾವದ ರೇಖೆಗೊಂದು ಗುರು ಪಿಂಡಕ್ಕೆ ಗುಣಿಸಿ 27ರಿಂದ ಭಾಗಿಸಿ ಶೇಷ ಸಂಖ್ಯೆಯ ನಕ್ಷತ್ರ ಆದರಿಂದ (10, 19) ತ್ರಿಕೋಣ ನಕ್ಷತ್ರದಲ್ಲಿ ಹಾಗೂ ಆ ಗುಣಾಕಾರಕ್ಕೆ 12 ರಿಂದ ಭಾಗಿಸಿ ಶೇಷ ಸಂಖ್ಯೆಯ ರಾಶಿ ಆದರ ತ್ರಿಕೋಣ ರಾಶಿಗಳಲ್ಲಿ ಶನಿ ಬಂದಾಗ ಪುತ್ರ ಕಷ್ಟವಾಗುತ್ತದೆ ಹಾಗೂ ಧರ್ಮ ಹಾನಿಯಾಗುತ್ತದೆ.

## ಗುರುವಾಷ್ಟಕ ವರ್ಗಾದಿ ವಿವರ

| ಗ್ರಹ | ಗು,ಮ | | ಶನಿ | | | | | | ಶು | ರ,ಬು,ಚ | | |
|---|---|---|---|---|---|---|---|---|---|---|---|---|
| ರಾಶಿ | 10 | 11 | 12 | 1 | 2 | 3 | 4 | 5 | 6 | 7 | 8 | 9 |
| ರೇ | 6 | 6 | 3 | 5 | 4 | 4 | 7 | 7 | 0 | 6 | 6 | 2 |
| ತ್ರೀ | 6 | 2 | 0 | 3 | 4 | 0 | 4 | 5 | 0 | 2 | 3 | 0 |
| ಏ.ಶ್ರೇ | 6 | 0 | 0 | 0 | 0 | 0 | 4 | 5 | 0 | 0 | 0 | 0 |

### ರಾಶಿಪಿಂಡ

ಮಕರ $6 \times 5 = 30$ ಕರ್ಕ $4 \times 4 = 16$ ಸಿಂಹ $5 \times 10 = 50$
$30+16+50=96$ ರಾಶಿ ಪಿಂಡ

### ಗ್ರಹಪಿಂಡ

ಗುರು $6 \times 10 = 60$ ಮಂಗಳ $6 \times 8 = 48 = 108 = 96+108 = 204$
ಸ್ಪಷ್ಟ ಗುರುಪಿಂಡ

$204 \div 27 =$ 15ಶೇಷ =ಸ್ವಾತಿನಕ್ಷತ್ರ ಶತತಾರ ಮೃಗಶಿರಾ (ತ್ರಿಕೋನ ನಕ್ಷತ್ರಗಳಲ್ಲಿ ಶನಿ ಸಂಚಾರ ಪುತ್ರಕಷ್ಟ ಧರ್ಮಹಾನಿ)

$204 \div 12 = 0$ ಶೇಷ ಮೇಷ, ಸಿಂಹ, ಧನುವಿನಲ್ಲಿ ಶನಿ ಸಂಚಾರ ಪುತ್ರಕಷ್ಟ ಹಾಗೂ ಧರ್ಮಹಾನಿ.

ಶುಕ್ರಾಷ್ಟಕವರ್ಗ ಚ ನಿಕ್ಷಿಪ್ಯಾಕಾಶಚಾರಿಷು ।
ಯದ್ಯದ್ರಾಶೌ ಫಲಾನಿ ಸ್ಯುರ್ಭೂಯಾಂಸಿ ಕಿಲತತ್ರತು ॥೩೫॥

ಭಲಾಯಿಂ ವಿತ್ತಂ ಕಲತ್ರಂ ಚ ತತ್ತದೀಶಿ ದಿಶೇದ್ಬುಧಃ
ಶುಕ್ರಾಜ್ಜಾಮಿತ್ರತೋ ಜಾಯಾಲಬ್ಧಿರ್ಜ್ಞೇಯಾ ವಿದಾಂವರೈಃ ॥೩೬॥

ದಿಶಿ ದೇಶೆ ಚ ಜಾಯಾಯಾಸ್ತ ತ್ರಿಕೋನ ಗೃಹಸ್ಯ ವಾ ।
ಪಿಂಡವರ್ಧನ ತಸ್ತಸ್ಯಾಃ ಕಷ್ಟಂ ಜ್ಞೇಯಂ ಯಥಾ ಪುರಾ ॥೩೭॥

ಶುಕ್ರನಿಂದ ರಾಶಿಯಲ್ಲಿ ರೇಖೆಗಳನ್ನು ಲಭಿಸಿದಾಗ ಯಾವ ಯಾವ ರಾಶಿಯಲ್ಲಿ ಅಧಿಕ ರೇಖೆಗಳು ಬಂದಿವೆಯೋ ಆ ರಾಶಿಯಲ್ಲಿ ಶುಕ್ರನು ಬಂದಾಗ ಭೂಮಿ, ಧನ ಹಾಗೂ ಕಲತ್ರ ಲಾಭ - ಆ ರಾಶಿಯ ದಿಕ್ಕಿನಲ್ಲಿ ಹೇಳುವುದು. ಶುಕ್ರನ ಸಪ್ತಮದಿಂದ ಸ್ತ್ರೀ ಪ್ರಾಪ್ತಿ ವಿಚಾರ ಮಾಡಲು ಬರುವುದು. ಸಪ್ತಮ ಭಾವ ಅಥವಾ ಅದರ ಪಂಚಮ, ನವಮ ಭಾವದಿಂದ ಅವುಗಳ ರಾಶಿ ದಿಶೆಯಲ್ಲಿ ಸ್ತ್ರೀ ಪ್ರಾಪ್ತಿ

ಹೇಳುವುದು (ಸ್ತ್ರೀ ಕುಂಡಲಿಯಲ್ಲಿ ರವಿ) ಪಿಂಡನ ವರ್ಧನಾದಿ ಕ್ರಿಯಾದಿಂದ ಸ್ತ್ರೀಯ ಕಷ್ಟವಿಚಾರ ಪೂರ್ವವಿತ ಮಾಡುವುದು. ಅರ್ಥಾತ್ ಶುಕ್ರನಿದ್ದ ರಾಶಿಯಿಂದ ಸಪ್ತಮ ರಾಶಿಯಲ್ಲಿಯ ರೇಖಾ ಸಂಖ್ಯೆಗಳಿಂದ ಪಿಂಡಕ್ಕೆ ಗುಣಿಸಿ 27ರಿಂದ ಭಾಗಿಸಿ ಶೇಷ ನಕ್ಷತ್ರ ಹಾಗೂ ಅದರ ತ್ರಿಕೋನ ನಕ್ಷತ್ರ (10,9) ಶನಿಯ ಸಂಚಾರದಲ್ಲಿ ಸ್ತ್ರೀ ಕಷ್ಟ ಹೇಳುವುದು. ಅದೇ ಪಿಂಡವನ್ನು 12ರಿಂದ ಭಾಗಿಸಿ ಶೇಷ ರಾಶಿ ಹಾಗೂ ಅದರ ತ್ರಿಕೋನಗಳಲ್ಲಿಯೂ ಸ್ತ್ರೀ ಕಷ್ಟ ಮರಣ ಹೇಳುವುದು.

## ಶುಕ್ರಾಷ್ಟಕ ವರ್ಗೀಯ ಶೋಧನ

| ಗ್ರಹ | ಶು | ರ,ಬು,ಚ | | | ಗುಮ | | ಶ | | | | | |
|---|---|---|---|---|---|---|---|---|---|---|---|---|
| ರಾಶಿ | 6 | 7 | 8 | 9 | 10 | 11 | 12 | 1 | 2 | 3 | 4 | 5 |
| ರೇಖೆ | 6 | 5 | 6 | 5 | 3 | 3 | 3 | 2 | 8 | 5 | 3 | 5 |
| ತ್ರಿ | 3 | 2 | 3 | 3 | 0 | 0 | 0 | 0 | 5 | 2 | 0 | 3 |
| ಏಕಾಂಶ | 3 | 2 | 0 | 0 | 0 | 0 | 0 | 0 | 3 | 0 | 0 | 3 |

ರಾಶಿಪಿಂಡ – ಕನ್ಯಾ $3 \times 5 = 15$, ತುಲಾ $2 \times 7 = 14$, ವೃಷಭ $3 \times 10 = 30$, ಸಿಂಹ $3 \times 10 = 30$

$15+14+30+30 = 89$ ರಾಶಿಪಿಂಡ

ಗ್ರಹಪಿಂಡ – ಶುಕ್ರ – $3 \times 7 = 21$, ರವಿ $2 \times 5 = 10$, ಚಂದ್ರ $2 \times 5 = 10$, ಬುಧ $2 \times 5 = 10$

$21+10+10+10 = 51$ ಗ್ರಹ ಪಿಂಡ

$89+51 = 140$ ಶುಕ್ರ ಸ್ಪಷ್ಟ ಪಿಂಡ

$140 \times 0 = 0$ ಅಂದರೆ ಅಶ್ವಿನಿ, ಮಖಾ, ಮೂಲಗಳಲ್ಲಿ ಶನಿ ಸಂಚಾರ ಸ್ತ್ರೀ ತೊಂದರೆದಾಯಕ ($0 \div 27 = 0$).

$140 \div 12 = 8$ ಶೇಷ. ವೃಶ್ಚಿಕ, ಮೀನ, ಕರ್ಕ ರಾಶಿಯಲ್ಲಿ ಶನಿ ಸಂಚಾರ ಸ್ತ್ರೀಗೆ ಮಾರಕವಾಗುತ್ತದೆ. ಅದೇ ಶುಕ್ರ, ವೃಷಭದಲ್ಲಿದ್ದಾಗ ಸರ್ವ ಶ್ರೇಷ್ಠ ಫಲ. ನಂತರ ತುಲಾ, ವೃಶ್ಚಿಕದಲ್ಲಿ ಸಂಚಾರವೂ ಅತಿಶುಭವೆ. ಮೇಷ ಸಂಚಾರ ಹೀನಾಯ.

## ಶನ್ಯಾಷ್ಟಕ ವರ್ಗ ಪಿಂಡಾ ನಯನ ಫಲ

ಶನೈಶ್ಚರಾಶೀತಸ್ಥಾನಾದಷ್ಟಮಂ ಮೃತಿಭಂ ಮತವ್ ।
ತದಾಯುಷೊ ಗ್ರಹಮಪಿ ಚಿಂತ್ಯಾಮಾಯುಸ್ತತೋ ಬುಧೈಃ ॥೩೭॥

ಲಗ್ನಾತ್ ಪ್ರಭೃತಿ ಮಂದಾಂತಂ ಫಲಾನ್ಯೈಕತ್ರ ಯೋಜಯೇತ್ ।
ಫಲಯೋಗಸಮೇಬ್ದೇ ತು ವ್ಯಾಧಿ ವೈರಂ ಸಮಾದಿಶೇತ್ ॥೩೯॥

ಇತ್ಥಂ ಮಂದಾದಿ ಲಗ್ನಾಂತ ಫಲಾನ್ಯೇಕತ್ರ ಕಾರಯೇತ್ ।
ಏತದ್ಯೋಗಸಮೇ ವರ್ಷೆ ಜಾತಸ್ಯ ವ್ಯಾಧಿಮಾದಿಶೇತ್ ॥೪೦॥

ಯೋಗದ್ವಯ ಸಮೇಬ್ದೇ ತು ಕ್ಲೇಶೋ ಮೃತಿಸಮೂಭವೇತ್ ।
ತತ್ರಾರಿಷ್ಟದಶಾಯೋಗೇ ಸಂಶಯಂ ಮೃತ್ಯುಮಾದಿಶೇತ್ ॥೪೦॥

ಶನಿಯ ಸ್ಥಾನದಿಂದ ಅಷ್ಟಮಸ್ಥಾನ, ಮೃತ್ಯು ಸ್ಥಾನ ಹಾಗೂ ಆಯುಸ್ಥಾನವೆಂದು ಕರೆಯಲಾಗಿದೆ. ಹೀಗಾಗಿ ಅದರಿಂದ ಆಯುವಿನ ವಿಚಾರ ಮಾಡುವುದು. ಲಗ್ನದಿಂದ ಶನಿಪರ್ಯಂತ ರೇಖೆಗಳನ್ನು ಕೂಡಿಸಿ ಆ ವರ್ಷದಲ್ಲಿ ವ್ಯಾದಿಯೆಂದು ಪರಿಗಣಿಸುವುದು ಹಾಗೂ ಜನರೊಡನೆ ಶತ್ರುತ್ವ. ಇದೇ ಪ್ರಕಾರ ಶನಿಯಿಂದ ಲಗ್ನದವರೆಗೆ ಕೂಡಿಸಿ ಆ ವರ್ಷದಲ್ಲಿಯೂ ಕಷ್ಟ ಹೇಳುವುದು. ಎರಡೂ ಅಂಕಿ ತುಲ್ಯ ವರ್ಷದಲ್ಲಿ ಮೃತ್ಯು ತುಲ್ಯ ಕಷ್ಟ ಹೇಳುವುದು. ಆಗ ಅರಿಷ್ಟದಶಾ ಇದ್ದರೆ ನಿಜವಾಯಿಯೂ ಮೃತ್ಯುವೆ.

ಇಲ್ಲಿ ಉದಾಹರಿತ ಕುಂಡಲಿಯಲ್ಲಿ ಕರ್ಕ ಲಗ್ನ ಶನಿ ಮೀನದಲ್ಲಿ 6+5+2+3+3+4+2+1+3= 29ನೇ ವರ್ಷ. ಅದರಂತೆ ಕಷ್ಟದಾಯಕ ವರ್ಷ.

3+2+6+3+6= 20ನೇ ವರ್ಷ ಕಷ್ಟದಾಯಕ. 49ನೇ ವರ್ಷ ಯೋಗದಲ್ಲಿ ಕಷ್ಟ.

ಈ ಕುಂಡಲಿಗೆ ಶನಿ ಆತ್ಮಕಾರಕನಾದ್ದರಿಂದ ಅರಿಷ್ಟ ಫಲದಲ್ಲಿ ಸ್ವಲ್ಪ ವಿನಾಯಿತಿ. ಆದರೂ ಮಾತೃ, ಪಿತೃ ಮೃತ್ಯು ಸಂಭವಿಸಿದೆ.

## ಶನಿ ಶೋಧನ

| ಗ್ರಹ | ಶನಿ | | | | | | ಶು | ರ,ಬು,ಚ | | | ಗ,ಮ | |
|---|---|---|---|---|---|---|---|---|---|---|---|---|
| ರಾಶಿ | 12 | 1 | 2 | 3 | 4 | 5 | 6 | 7 | 8 | 9 | 10 | 11 |
| ರೇಖೆ | 3 | 2 | 6 | 3 | 6 | 5 | 2 | 3 | 3 | 4 | 2 | 1 |
| ತ್ರಿ | 0 | 0 | 4 | 2 | 3 | 3 | 0 | 2 | 0 | 1 | 0 | 0 |
| ದ್ವಿರಾದಿ | 0 | 0 | 2 | 2 | 3 | 3 | 0 | 2 | 0 | 1 | 0 | 0 |

## ರಾಶಿಪಿಂಡ

ವೃಷಭ 2 × 10 = 20; ಮಿಥುನ 3 × 8 = 24; ಕರ್ಕ3 × 4 = 12;ಸಿಂಹ 3 × 10 = 30; ತುಲಾ 2 × 7 = 14; ಧನು 1 × 9 = 9

20+24+12+30+14+9= 119 ರಾಶಿಪಿಂಡ, ಗ್ರಹಪಿಂಡ

ರವಿ 2 × 5= 10, ಚಂದ್ರ 2 × 5= 10, ಬುಧ 2 × 5= 10, ಅಂತೂ ಶನಿ ಪಿಂಡ 119+30= 149 ಶನಿಪಿಂಡ ಚಿತ್ತಾ ನಕ್ಷತ್ರ ಅದರ ತ್ರಿಕೋಣ ನಕ್ಷತ್ರ ಶನಿ ಸಂಚಾರ ಶುಭ

## ಮೃತ್ಯು ಸಮಯ

ಮಂದಾದಷ್ಟಮರಾಶಿಸ್ಥ ಫಲೈಃ ಪಿಂಡಂ ವಿವರ್ಧಯೇತ್ ।
ಪೂರ್ವವತ್ ಸಪ್ತವಿಂಶತ್ಯಾ ಹರೇಚ್ಛೇಷಕ್ಷರ ಮಾಗತೆ ॥೪೨॥

ಕಿಂ ವಾ ತಸ್ಯ ತ್ರಿಕೋನರ್ಕ್ಷ ಗತೆ ಮಂದೆ ಮೃತಿರ್ಭವೇತ ।
ಸೂರ್ಯಾಸ್ತಪ್ಪಿತಭೆ ತದ್ವತ್ ತ್ರಿಕೋನೇಪಿ ಗತೆ ಮೃತಿಃ ॥೪೩॥

ಶನಿಯ ಅಷ್ಟಮಸ್ತ ರೇಖೆಗಳಿಂದ ಪಿಂಡಕ್ಕೆ ಗುಣಿಸಿ 27ರಿಂದ ಭಾಗಿಸಿ ಶೇಷ ನಕ್ಷತ್ರ ತ್ರಿಕೋನ ನಕ್ಷತ್ರದಲ್ಲಿ (10, 9) ಶನಿ ಬಂದಾಗ ಮೃತ್ಯು ಹೇಳುವುದು.

ಅದರಂತೆ ಪಿಂಡಕ್ಕೆ ಅಷ್ಟಮದಿಂದ (ರೇಖೆ)ಗಳಿಂದ ಗುಣಿಸಿ 12ರಿಂದ ಭಾಗಿಸಿದರೆ ಶೇಷ ರಾಶಿಯಲ್ಲಿ ಹಾಗೂ ತ್ರಿಕೋನ ರಾಶಿಯಲ್ಲಿ ಶನಿ ಸಂಚಾರ ಮೃತ್ಯುಪದ ಇಲ್ಲಿ ಉದಾಹರಣೆಯಲ್ಲಿ 149 × 3= 447 ÷ 27= 9 ಶೇಷ ನಕ್ಷತ್ರ ಆಶ್ಲೇಷ, ಜೇಷ್ಠ ಹಾಗೂ ರೇವತಿಯಲ್ಲಿ ಶನಿ ಸಂಚಾರ ಮೃತ್ಯುಪದ ಹಾಗೂ 447 ÷ 12= 3 ಶೇಷ ಮಿಥುನ ರಾಶಿ ಹಾಗೂ ತುಲಾ ರಾಶಿ, ಕುಂಭ ರಾಶಿಯಲ್ಲಿ ಶನಿ ಸಂಚಾರ ಮೃತ್ಯುಪ್ರದ ವಾಗುತ್ತದೆ.

## ವಿಶೇಷ

ಫಲಹೀನಗೃಹಂ ಯಾತೆ ಮಂದೆ ನೈವ ಶುಭಂ ಭವೇತ್ ।
ಫಲಾಧಿಕಂ ಗತೆ ತಸ್ಮಿನ್ ನಿಯತಂ ಶುಭಮಾದಿಶೇತ್ ॥೪೪॥

ಶನಿ ರೇಖಾ ಹೀನರಾಶಿಯಲ್ಲಿದ್ದಾಗ ಅಶುಭ ಫಲ ಹಾಗೂ ರೇಖಾಯುಕ್ತ ನೀಚದಲ್ಲಿದ್ದರೂ ಶುಭಫಲ ಕೊಡುತ್ತಾನೆ. ರೇಖಾನುಸಾರ ಫಲದಾಯಕನಾಗುತ್ತಾನೆ. ಇಲ್ಲಿ ವೈಯಕ್ತಿಕ ಕಾರಕತ್ವ ಮಾರಕತ್ವವನ್ನು ಪರಿಗಣಿಸಿ ಫಲ ಹೇಳುವುದು.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅಷ್ಟಕವರ್ಗ ಫಲಾಧ್ಯಾಯಃ ಸಮಾಪ್ತಿಃ

# ಅಥಾಷ್ಟವರ್ಗಾಯುರ್ದಾಯಾಧ್ಯಾಯಃ

## ಪರಾಶರ ಉವಾಚ:

ಅಥಾಯುರಷ್ಟ ವರ್ಗೋತ್ಥಂ ವಚ್ಮಿ ತೇ ಶೃಣುತನ್ಮುನೇ ।
ರೇಖಾಭಾವೇ ದಿನಂ ಯುಗ್ಮಂ ಸಾರ್ಧೈಕಂ ರೇಖಾಯಾ ಸ್ಮೃತವಮ್ ॥೧॥

ರೇಖಾಭ್ಯಾಂ ದಿನಮೇಕಂಖ ತು ದಿನಾರ್ಧ ತಿಸೃಭಿರ್ಮತವಮ್ ।
ಅಹ್ನಾಂ ಸಪ್ತದಿನಾರ್ಧ ಚ ವೇದರೇಖಾಭಿರಾದಿಶೇತ್ ॥೨॥

ಪಂಚಭಿರ್ಯುಗ್ಮವರ್ಷ ಚ ಷಡ್‌ಭಿರಬ್ದಿ ಚತುಷ್ಟಯಮ್ ।
ಸಪ್ತಭಿ ರಸವರ್ಷ ಚಾಷ್ಟಾಭಿರಷ್ಟಾಬ್ದಕಂ ಸ್ಮೃತವಮ್ ॥೩॥

ಇತ್ಥಂ ಸಮಸ್ತ ಗ್ರಹಜಂಮುನೇ ಯಾಚ್ಚಾಯುರಾಗತವಮ್ ।
ತಸ್ಯಾರ್ಧ ವಿಧಿತಂ ಸ್ಪಷ್ಟಮಾಯುರಷ್ಟಕ ವರ್ಗಜವಮ್ ॥೪॥

## ಪರಾಶರರು ಹೇಳಿದರು–

## ಹೇ ಮೈತ್ರೇಯ,

ಅಷ್ಟಕ ವರ್ಗದ ಆಯುರ್ದಾಯ ಹೇಳುತ್ತೇನೆ ಕೇಳು. ಯಾವ ರಾಶಿಯಲ್ಲಿ ರೇಖೆ ಇಲ್ಲವೋ ಅದಕ್ಕೆ 2 ದಿನ ಯಾವುದರಲ್ಲಿ 1 ರೇಖೆಯಿದೆಯೋ ಅಲ್ಲಿ $1\frac{1}{2}$ ದಿನ, ಎರಡು ರೇಖೆಯಿದ್ದಲ್ಲಿ 1 ದಿನ, 3 ರೇಖೆ ರಾಶಿಗೆ $\frac{1}{2}$ ದಿನ, 4 ರೇಖಾ ರಾಶಿಗೆ $7\frac{1}{2}$ ದಿನ, 5 ರೇಖೆ ರಾಶಿಗೆ 2 ವರ್ಷ, 6 ರೇಖೆಯ ರಾಶಿಗೆ 4 ವರ್ಷ, 7 ರೇಖೆಯ ರಾಶಿಗೆ 6 ವರ್ಷ, 8 ರೇಖೆಯ ರಾಶಿಗೆ 8 ವರ್ಷವಿರುತ್ತದೆ. ಈ ಪ್ರಕಾರ ಎಲ್ಲ ರಾಶಿಯ ಆಯುವನ್ನು ಕೂಡಿಸಿ ಯೋಗಾರ್ಧ ಸ್ಫುಟ ಆಯುಸ್ಸು ಎಂದು ಗಣಿಸುವುದು.

### ಸೂರ್ಯಾಷ್ಟಕ ವರ್ಗೀಯ ಆಯುಸ್ಸು

| ಗ್ರಹ | ರ,ಬು,ಚ | | | ಗು,ಮ | | ಶ | | | | | | ಶು | ಅಂತ |
|---|---|---|---|---|---|---|---|---|---|---|---|---|---|
| ರಾಶಿ | 7 | 8 | 9 | 10 | 11 | 12 | 1 | 2 | 3 | 4 | 5 | 6 | |
| ರೇಖಾ | 4 | 4 | 4 | 3 | 3 | 4 | 4 | 3 | 5 | 4 | 5 | 5 | 48 |
| ವರ್ಷ | – | – | – | – | – | – | – | – | 2 | | 2 | 2 | 6 |
| ತಿಂಗಳು | – | – | – | – | – | – | – | – | – | – | – | – | 1 |
| ದಿವಸ | 7 | 7 | 7 | – | – | 7 | 7 | – | – | 7 | – | – | 16 |
| ಘಟಿ | 30 | 30 | 30 | 30 | 30 | 30 | 30 | 30 | – | 30 | – | – | 30 |

ರವಿ ಆಯು 6-1-16-30 ಘಟಿಗಳು – ಚಂದ್ರ-ದಿನಗಳು-ಆಯು ಈ ರೀತಿ ಪ್ರತ್ಯೇಕ ತೆಗೆದು ಒಟ್ಟು ಅಂಕಿ ಕೊಡಲಾಗಿದೆ.

| | ವ | ತಿ | ದಿ | ಘಟಿ |
|---|---|---|---|---|
| ರವಿ | 6 | 1 | 16 | 30 |
| ಚಂದ್ರ | 14 | 0 | 25 | 30 |
| ಮಂಗಳ | 8 | 0 | 14 | 0 |
| ಬುಧ | 14 | 1 | 8 | 0 |
| ಗುರು | 30 | 0 | 9 | 0 |
| ಶುಕ್ರ | 24 | 0 | 3 | 0 |
| ಶನಿ | 10 | 0 | 14 | 0 |
| ಒಂತೂ | 106 | 5 | .10 | 00 ಪರಮಾವಧಿ |

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ
ಅಷ್ಟವರ್ಗಾಯುರ್ದಾಯಾಧ್ಯಾಯಃ ಸಮಾಪ್ತಿಃ

೭೨ನೇ ಅಧ್ಯಾಯ

# ಅಥ ಸಮುದಾಯಷ್ಟಕ ವರ್ಗಾಧ್ಯಾಯಃ

## ಪರಾಶರ ಉವಾಚ:

ಜನ್ಮಾಂಗಚಕ್ರೆ ಪ್ರತಿಭಂ ಸರ್ವಾಷ್ಟಕ ಫಲಂ ನ್ಯಾಸೇತ್ ।
ಗ್ರಹಾನಪಿ ಯಥಾಪೂರ್ವ ಸಮುದಾಯಾಷ್ಟಕಂಖ ಹಿತತ್ ॥೧॥

ಶುಭಾಶುಭ ಫಲಂ ಜ್ಞೇಯಂ ಜಾತಕಸ್ಯ ತು ತದ್ದಶಾತ್ ।

## ಪರಾಶರರು ಹೇಳಿದರು–

ಜನ್ಮಾಂಗ ಚಕ್ರದಲ್ಲಿ ಲಗ್ನಾದಿ ಭಾವಗ್ರಹ ಯಥಾಪೂರ್ವದಂತೆ ಲಭಿಸಿ – ಎಲ್ಲ ಗ್ರಹ, ರಾಶಿಗಳ ಅಷ್ಟಕವರ್ಗ ಬಿಂದುಗಳ ಒಟ್ಟು ಅಂಕಿ ಬರೆಯುವುದು. ಎಲ್ಲ ಗ್ರಹಗಳಿಂದ ಆಯಾ ಭಾವದಲ್ಲಿ ಬಿದ್ದ ಒಟ್ಟು ಸಂಖ್ಯೆಗಳನ್ನು ಬರೆಯುವುದು. ಈ ಪ್ರಕಾರ ಸಿದ್ಧ ಚಕ್ರ ಸಮುದಾಯಷ್ಟಕ ವರ್ಗವಾಗುತ್ತದೆ. ಅದರ ಮೇಲಿಂದ ಜಾತಕ ಶುಭಾಶುಭ ಫಲ ಹೇಳುವುದು.

### ಸರ್ವಾಷ್ಟಕ ವರ್ಗ

1 25 +3
2 ಕೇ 29+5
3 26+3
4 (35) +4
5 (38) + 4
6 ಶು(ಉ) 21+5
7 ರ.ಬು.ಚ ಅಸ್ತ 30+4
8 ರಾ 30+4
9 31+5
10 ಗು. ಮಂ 24+6
11 25+1
12 ಶನಿ 23+5

| | | | |
|---|---|---|---|
| ಶನಿ 23+5 | 25+3 | ಕೆ 29+5 | 25+3 |
| 25+1 | | | 35+4 |
| ಗು ಮ 24+6 | | | 38+4 |
| 31+5 | ರಾ 30+4 | ರ ಚ ಬು 30+4 | ಶು 21+5 |

ಕೆಂಪು ಮಸಿಯಿಂದ ಸರ್ವಾಷ್ಟಕ ರೇಖೆ ಸಂಖ್ಯೆ + ಹಾಕಿದುದು ಲಗ್ನಾಷ್ಟಕ ಸಂಖ್ಯೆ

ಒಟ್ಟು 337 + 49

## ಸಮುದಾಯ ರೇಖಾಫಲ

ತ್ರಿಂಶಾಧಿಕ ಫಲಯೇಸ್ಸ್ಯೂ ರಾಶಯಸ್ತೆ ಶುಭಪ್ರದಾಃ ॥೨॥

ಪಂಚ ವಿಂಶಾದಿಖಾಗ್ನ್ಯಯಂತ ಫಲಾಸ್ತೆ ಮಧ್ಯಮಃ ಮತಾಃ ।
ಅತಃ ಕ್ಷೀಣಫಲಾಯೇ ಚ ರಾಶಯಃ ಕಷ್ಟ ದುಃಖಿದಾಃ ॥೩॥

ಶುಭಕೃತ್ಯೆ ಶುಭಫಲಾನ್ ರಾಶಿನ್ ಸಂಯೋಜಯೇದ್ ಬುಧಾಃ ।
ತ್ಯಜತೆ ಕಷ್ಟ ಪ್ರದಾಂಸ್ತ್ರಾಂಸ್ತು ಮುನೆ ಕಲ್ಯಾಣ ಹೇತವೆ ॥೪॥

ರಾಶೌ ಫಲಾಧಿಕೆ ಖೇಟಃ ಶುಭದೋಪ್ಯನ್ಯಥಾ ಶುಭಃ ।

ಸಮುದಾಯ ಅಷ್ಟಕ ವರ್ಗೀಯ ಚಕ್ರದಲ್ಲಿ ಯಾವ ರಾಶಿಯಲ್ಲಿ 3/4ಕ್ಕಿಂತ ಹೆಚ್ಚು ರೇಖೆಗಳಿರುವುವೋ ಅದರ ಫಲ ಶುಭ ಯಾವುದರಲ್ಲಿ (ರಾಶಿ) 25-30 ರೇಖೆಗಳಿದ್ದರೆ ಫಲ ಮಧ್ಯ, 25ಕ್ಕಿಂತ ಅಲ್ಪ ರೇಖೆಗಳಿದ್ದ ರಾಶಿ ಫಲ ಅಶುಭ (ಅಧಮ) ಶುಕಾರ್ಯದಲ್ಲಿ ಶುಭ ಫಲದ ರಾಶಿಯನ್ನೇ ತೆಗೆದುಕೊಳ್ಳುವುದು. ಅಲ್ಪ ರೇಖೆಯಿದ್ದ ರಾಶಿಯನ್ನು ಗ್ರಹಣ ಮಾಡಬಾರದು. ಅಧಿಕ ರೇಖೆಯ ರಾಶಿಯಲ್ಲಿ ಗ್ರಹಶುಭ ಫಲದವಾದರೆ ಅಲ್ಪ ರೇಖೆಯ ರಾಶಿಯಲ್ಲಿ ಅಶುಭಪ್ರದ.

## ರೇಖಾನುಸಾರ ಭಾವ ಫಲ

ಏವಂ ಸಮಸ್ತ ಭಾವಾನಾಂ ಫಲಾನಿವಿಮೃಶೇದ್ ಬುಧಾಃ ॥೫॥

ಅಧಿಕ್ಯೆಃ ಶೋಭನಂ ವಿದ್ಯಾದ್ಧಿನೆ ಕ್ಷತಿಮುದಿರಯೇತ್ ।
ಮಧ್ಯಮೇ ಮಧ್ಯಫಲಂ ವಿದ್ಧ್ಯಿಯಂ ಭಾವಜಂ ಸದಾ ॥೬॥

ಈ ಪ್ರಕಾರ ಸಮಸ್ತ ಭಾವಶ ಫಲ ರೇಖಾನುಸಾರವೆಂದು ತಿಳಿಯುವುದು. ಅಧಿಕ ರೇಖೆ ಬುಧ ಅಲ್ಪ ರೇಖೆ ಹೀನ ಮಧ್ಯಮ ರೇಖೆ ಮಧ್ಯಮ ಫಲ.

## ವಿಶೇಷ

ಲಾಭೆ ಫಲಾಧಿಕೆ ಮಧ್ಯಾಲ್ಲಾ ಬಾದಲ್ಪೆವ್ಯಯೋ ತಥಾ ।
ಲಗ್ನೇಪಿ ಬಾಧಿಕಫಲೆ ಜಾತೋ ಭೋಗಧನಾನ್ವಿತಃ ॥೭॥

ವೈಪರಿತ್ಯೆತು ದಾರಿದ್ರ್ಯಂ ವೇದ್ಯಮೇವಮ ಸಂಶಯವಮ್ ।

ದಶಮದಲ್ಲಿ ಅಧಿಕ ರೇಖೆಯಿದ್ದು ಏಕಾದಶದಲ್ಲಿ ಅದಕ್ಕೂ ಹೆಚ್ಚಾಗಿ ದ್ವಾದಶ ಭಾವದಲ್ಲಿ ಅಲ್ಪ ಸಂಖ್ಯೆಯಾಗಿ, ಲಗ್ನದಲ್ಲಿ ಅಧಿಕ ಸಂಖ್ಯೆಯಾದರೆ ಜಾತಕ ಧನ

ಭೋಗದಿಂದ ಪರಿಪೂರ್ಣನಾಗುತ್ತಾನೆ. ಆದರ ವಿಪರೀತ ವ್ಯಯದಲ್ಲಿ ಹೆಚ್ಚು ದಶಮ ಹೆಚ್ಚು ಏಕಾದಶ ಲಗ್ನ ಕಡಿಮೆಯಿದ್ದರೆ ದುಃಖದಾಯಕವೇ ಸರಿ. ಲಗ್ನದಲ್ಲಿ ಕಡಿಮೆಯಿದ್ದರೆ ನಿಃಸಂಶಯ ದರಿದ್ರನಾಗುವನು ಭಾಗ್ಯ ಅಧಿಕ ಅಧಿಕ ಭಾಗ್ಯ.

## ಅವಸ್ಥಾ ತ್ರಯ

ದಶಾಷಮಂ ತು ಭಾವಾನಾಂ ವಿದದ್ಯಾಚ್ಚಕಲತ್ರಯಮ್ ॥೮॥

ಪಾಪಗ್ರಹ ಸಮಾರೂಢಂ ಖಂಡಂ ಕ್ಲೇಶಕರಂ ಸ್ಮೃತಮ್ ।
ಸೌಮ್ಯೈರ್ಯುತಂ ಶುಭಂ ಜ್ಞೇಯಂ ಮಿಶ್ರೈಮಿಶ್ರ ಫಲಂ ವದೇತ್ ॥೯॥

ಫಲಂ ಖಂಡತ್ರಯೋದ್ ಭೂತಮವಸ್ಥಾ ತ್ರಿತಯೇ ಭವೇತ್ ।

ದಶಾ ಫಲ ಸಮಾನವಾಗಿ ಭಾವಗಳ ಫಲ ಖಂಡ ಗ್ರಹದಲ್ಲಿ ತಿಳಿಯುವುದು. ಯಾವ ರೀತಿ ಲಗ್ನಾದಿ ಚತುರ್ ಭಾವಾಂತ ಪ್ರಥಮ, ಪಂಚಮದಿಂದ ಅಷ್ಟಮಾಂತ ದವರೆಗೆ ದ್ವಿತೀಯ, ನವಮದಿಂದ ದ್ವಾದಶ ಭಾವದವರೆಗೆ ತೃತೀಯ – ಬಾಲ್ಯ, ಯೌವನ, ವೃದ್ಧಾವಸ್ಥೆಯೆಂದು ಗ್ರಹಿಸುವುದು. ಯಾವ ಭಾವದಲ್ಲಿ ಪಾಪಗ್ರಹ ಅಧಿಕತೆಯಿರುವುದೋ ಆ ಅವಸ್ಥೆಯಲ್ಲಿ ಅಧಿಕ ಕಷ್ಟ. ಯಾವ ಖಂಡದಲ್ಲಿ ಶುಭಗ್ರಹ ಅಧಿಕವಾಗಿಯೋ ಅಲ್ಲಿ ಸುಖದ ಫಲ, ಮಿಶ್ರದಲ್ಲಿ ಮಿಶ್ರಿತ ಫಲ.

ಉದಾಹರಣೆಯಲ್ಲಿ (ಸರ್ವಾಷ್ಟಕ ವರ್ಗದಂತೆ ತೃತೀಯದಲ್ಲಿ 21 ರೇಖೆಗಳು (+5) ಸಹೋದರ ಸೌಖ್ಯ ಅಲ್ಪ ಹಾಗೂ ಸಹೋದರ, ಸಹೋದರಿಯರಿಗೆ ತೊಂದರೆ, ಸಾಹಸ ಕೆಲಸದಲ್ಲಿ ಅಧೈರ್ಯ ಆದರಂತೆ – ಅಷ್ಟಮಕ್ಕೂ ಕಡಿಮೆಯಿರು ವುದರಿಂದ ರೋಗರುಜನಗಳು, ಅವಮಾನ ಪ್ರಸಂಗಗಳು ಸಂಭವನೀಯ. ಆದರಂತೆ ಭಾಗ್ಯ ದಶಮದಲ್ಲಿಯೂ – ಅಲ್ಪ ರೇಖೆಗಳಿಂದ ನೌಕರಿಗಾಗಿ ಪರದಾಟ. ಮೇಲಿನವ ರೊಡನೆ ಕಲಹ, ಭಾಗ್ಯದಯಲ್ಲಿ ವಿದ್ಯೆ ಆದಿ – ಇದ್ದರೂ ಭಾಗ್ಯೋದಯದಲ್ಲಿ ಅನೇಕ ತೊಂದರೆ ಆಗಿ – ಕುಟುಂಬ ಸುಖಾದಿ ಉತ್ತಮ – ಉಳಿದ ಭಾವಗಳು ಮಾತುಲ ಸ್ತ್ರೀ ವಿದ್ಯೆಯಿಂದ – ಗೌರವಾದಿ ಫಲಗಳು.

## ಸಶಾಂತಿ ರೇಖಾ ಫಲ

ರೇಖಾಭಿಃ ಸಪ್ತಭಿರ್ಯುಕ್ತೇ ಮಾಸೆ ಮೃತ್ಯುರ್ನೃಣಾಂ ಭವೇತ್ ॥೧೦॥

ಸುವರ್ಣಂ ವಿಂಶತಿ ಫಲಂ ದದ್ಯಾದ್ ದೌತಿಲಪರ್ವತಾ ।
ವಸುರೇಖಾಯುತೆ ಮಾಸೆ ಯಾತೆ ಮೃತ್ಯುವಶಂ ನರಃ ॥೧೧॥

ಅಸತ್ಫಲ ವೋನಾಶಾಯ ದದ್ಯಾತ್ ಕರ್ಪೂರಜಾಂ ತುಲಾವಮ್ ।
ರೇಖಾಭಿರ್ನವಭಿಃ ಸರ್ದಾದ್ ಮ್ರಿಯತೆ ಮನುಜೋ ಧ್ರುವಮ್ ॥೧೨॥

ಅಶ್ವೈಶ್ಚತುರ್ಭಿಃ ಸಂಯುಕ್ತಂ ರಥಂ ದದ್ಯಾಚ್ಛುಭಾಪ್ತಯೇ ।
ರೇಖಾಭಿರ್ದ ಶಾಭಿಃ ಶಸ್ತ್ರಾತ್ ಪ್ರಾಣಾಂಸ್ತ್ಯಜತಿ ಮಾನವಃ ॥೧೩॥

ದದ್ಯಾಚ್ಛುಭಫಲಾವಾಪ್ತ್ಯೈ ಕವಚಂ ವಜ್ರಸಂಯುತವಮ್ ।
ರುದ್ರ ಪ್ರಮಿತರೆ ಖಾಭಿರಭಿಶಾಪಸ್ಮೃತೆ ರ್ಭಯವಮ್ ॥೧೪॥

ದಿಕ್‌ಫಲ ಸ್ವರ್ಣ ಘಟಿತಾಂ ಪ್ರದದ್ಯಾತ್ ಪ್ರತಿಮಾಂ ವಿಧೋಃ ।
ಆದಿತ್ಯ ಪ್ರಮಿತಾಭಿಸ್ತು ಮರಣು ಜಲದೋಷತಃ ॥೧೫॥

ಭೂಮಿ ದದ್ಯಾದ್ ಬ್ರಾಹ್ಮಣಾಯ ತತಃ ಶುಭಫಲಂ ವದೇತ್ ।
ತ್ರಯೋದಶಮಿತಾಭಿಸ್ತು ವ್ಯಘ್ರಾನ್ಮೃತಿಮವಾಪ್ನುಯಾತ್ ॥೧೬॥

ವಿಷ್ಣೋ ಹಿರಣ್ಯಗರ್ಭಸ್ಯ ದಾನಂ ಕುರ್ಯಾಚ್ಛುಭಾಪ್ತಯೇ ।
ಚತುರ್ದರ್ಶಭಿರೇವಂ ಸ್ಯಾನ್ಮೃತೆ ರ್ಭೀತಿ ರಸಂಶಯವಮ್ ॥೧೭॥

ವರಾಹ ಪ್ರತಿಮಾಂ ದದ್ಯಾತ್ ಕನಕೇನ ವಿನಿರ್ಮಿತಾವಮ್ ।
ರಾಜಭೀಸ್ತಿಥಿಭಿಸ್ತದ್ ವದ್ದಸ್ತಿದಾನಂ ವಿಶಿಷ್ಯತೆ ॥೧೮॥

ರಿಷ್ಟಂ ಷೋಡಶಭಿಃ ಕಲ್ಪಿತರೋರ್ಮೃತಿ ದದೀ ತವ್ಯೆ ।
ನಗೇಂದುಭಿರ್ವ್ಯಾಧಿ ಭಯಂ ಗುಡಂ ದೇನುಂ ನಿವೇದಯೇತ್ ॥೧೯॥

(ಈ ಮೇಲಿನ ಫಲಗಳು – ರವಿಯ ರಾಶಿಗತ ಸಂಚಾರದ ಮೇಲಿಂದ ಹೇಳಲ್ಪಟ್ಟಿದ್ದು ನೈಸರ್ಗಿಕ ಆತ್ಮಕಾರಕ ರವಿಯನ್ನು ಪಾಶ್ಚಾತ್ಯ ಪೂರ್ವದಲ್ಲೇ ಪ್ರಮುಖವೆಂದು ಗಣಿಸಲ್ಪಟ್ಟಿದೆ.)

ಸಮುದಾಯಾಷ್ಟಕ ವರ್ಗದಲ್ಲಿ 7 ಅಥವಾ ಅದಕ್ಕೂ ಕಡಿಮೆ ರೇಖೆಗಳಿದ್ದಾಗ ಅಲ್ಲಿ ಗೋಚರದಿಂದ ರವಿ ಭ್ರಮಣವಿದ್ದಾಗ ಆ ಮಾಸದಲ್ಲಿ ಮೃತ್ಯು ಸಂಭವಿಸುತ್ತದೆ. ಅದಕ್ಕಾಗಿ 20 ಫಲ ಸುವರ್ಣದಾನ, ಎರಡು ಎಳ್ಳು ಪರ್ವತ ದಾನ ಮಾಡುವುದು. (ಬಡವರು ಎರಡು ಎಳ್ಳಿನ ಉಂಡೆ ದಾನ ಮಾಡಬಹುದು).

8 ರೇಖೆಗಳಿದ್ದ ರಾಶಿಯಲ್ಲಿ ರವಿ ಸಂಚಾರ – ಬೇಗ ಮೃತ್ಯು ವಶವಾಗುವ ಭಯ ನಿವಾರಣೆಗೆ ಕರ್ಪೂರ ತಕ್ಕಡಿ ದಾನ ಮಾಡುವುದು.

9 ರೇಖೆಗಳಿದ್ದ ರಾಶಿಯಲ್ಲಿ ಸರ್ಪದಿಂದ ಮೃತ್ಯು, ಶಾಂತಿಗಾಗಿ ನಾಲ್ಕು ಕುದುರೆ ರಥದಾನ.

10 ರೇಖೆಗಳ ರಾಸಿ ಸಂಚಾರ ಶಸ್ತ್ರದಿಂದ ಪ್ರಾಣತ್ಯಾಗ – ನಿವಾರಣೆಗೆ ವಜ್ರ ಸಂಹಿತ ಕವಚ ದಾನ (ದೇವರಿಗೆ ಆಗಬಹುದು)

11 ರೇಖೆಗಳಿದ್ದ ರಾಶಿಯಲ್ಲಿ ಪೂರ್ವ ಶಾಪದಿಂದ ಮೃತ್ಯು ಭಯ ನಿವಾರಣೆಗೆ 8 ಫಲ ಸುವರ್ಣದ ಚಂದ್ರ ಪ್ರತಿಮೆ ದಾನ.

12 ರೇಖೆಗಳಲ್ಲಿ ರವಿ ಚಲನೆ, ಜಲ ದೋಷದಿಂದ ಮೃತ್ಯು, ಬ್ರಾಹ್ಮಣನಿಗೆ ಭೂಮಿ ದಾನ.

13 ರೇಖೆಗಳ ರಾಶಿಯಲ್ಲಿ ರವಿಯ ಸಂಚಾರ ಮಾಸ - ಹುಲಿಯಿಂದ ಮೃತ್ಯು (ಈಗ ಹುಲಿಗಳಲ್ಲಿ ಇದ್ದರೂ ವರಾಹ ಮಿಹಿರರ ಜ್ಯೋತಿಷ್ಯದಂತೆ ಆ ಪ್ರತಿಮೆ ಯಿಂದಾಗಲೂಬಹುದು) ದೋಷ ನಿವಾರಣೆಗೆ ಹಿರಣ್ಯಗರ್ಭ ಪ್ರತಿಮೆ ದಾನ.

14 ರೇಖೆಗಳಿದ್ದ ರಾಶಿ ಸಂಚಾರವು ಮೃತ್ಯು ಭೀತಿ ಚಕ್ರದಿಂದ ಬಂಗಾರದ ವರಾಹ ಮೂರ್ತಿ ದಾನ.

15 ರೇಖೆಗಳಿದ್ದ ರಾಶಿ ಸಂಚಾರ ರಾಜ(ಸರ್ಕಾರದಿಂದ) ಭಯ, ಆನೆ ದಾನ ಪ್ರಶಸ್ತ (ಬೆಳ್ಳಿ ಪ್ರತಿಮೆಯಾಗಬಹುದು).

16 ರೇಖೆಯ ರಾಶಿ ಸಂಚಾರ – ಅರಿಷ್ಟ – ಕಲ್ಪವೃಕ್ಷ ಪ್ರತಿಮೆ ದಾನ.

17 ರೇಖೆಯ ರಾಶಿ ಸಂಚಾರ – ರೋಗಭಯ, ಆಕಳ ದಾನ.

ಕಲಹೋಷ್ಟೆಂದುಭಿರ್ದ್ಯಾದ್ ರತ್ನಗೋ ಭೂ ಹಿರಣ್ಯಕಮ್ ।
ದೇಶತ್ಯಾಗೋಂಕ ಚಂದ್ರೈಃ ಸ್ಯಾತ್ ಶಾಂತಿ ಕುರ್ಯಾದ್ ವಿಧಾನತಃ ॥೨೦॥

ವಿಂಶತ್ಯಾ ಬುದ್ಧಿ ನಾಶಃ ಸ್ಯಾತ್ ಕುರ್ಯಾಲ್ಲಕ್ಷಮಿತಂ ಜಪಮ್ ।
ಚಂದ್ರಾಶ್ವಿಭಿ ರೋಗಪೀಡಾ ದದ್ಯಾದ್ಧಾನ್ಯಸ್ಯ ಪರ್ವತಮ್ ॥೨೧॥

ಯುಗಾಶ್ವಿಭಿ ರ್ಬಂಧುಪೀಡಾ ದದ್ಯಾದಾದರ್ಶಕಂ ಬುಧಃ ।
ರಾಮಾಶ್ವಿಭಿಸ್ತು ತನ್ಮಾಸೆ ನಾನಾಕ್ಲೇಶಮವಾಪ್ನುಯಾತ್ ॥೨೨॥

ಸೌವರ್ಣೀ ಪ್ರತಿಮಾಂ ದದ್ಯಾದ್ರವೇಃ ಸಪ್ತಫಲೈರ್ದ್ವಿಜ ।
ವೇದಾಶ್ವಿಭಿ ರ್ಬಂಧುಹೀನೋ ದಶಗೋದಾನ ಮಾಚರೇತ್ ॥೨೩॥

ಸರ್ವರೋಗ ವಿನಾಶಾಯ ಜಪಹೋಮಾದಿ ಕಾರಯೇತ್ ।
ಶರಾಶ್ವಿಭಿರ್ಬುದ್ಧಿ ಹೀನಃ ಪೂಜ್ಯಾ ವಾಗೀಶ್ವರಿ ತದಾ ॥೨೪॥

ಅಂಕಾಶ್ವಿಭಿರ್ವಿತ್ತಹಾನಿ ಕಾಂಚನಂ ತತ್ರ ದೀಯತೆ ।
ನಗಾಶ್ವಿ ಭಿಸ್ತದವದೇವಂ ಶ್ರೀ ಸೂಕ್ತಂಖ ತತ್ರ ಸಂಜಪೇತ್ ॥೨೫॥

ನಾಗಾಶ್ವಿಭಿರ್ಯುತೆ ಮಾಸೆ ಜಾಯತೆ ವಿವಿಧಾ ಕ್ಷತಿಃ ।
ಸೂರ್ಯ ಹೋಮಶ್ಚ ವಿಧಿನಾ ಕರ್ತವ್ಯಃ ಶುಭಕಾಂಚಕ್ಷಭಿ ॥೨೬॥
ಏಕೋನ ತ್ರಿಂಶತಾ ಚಾಪಿ ಚಿಂತಾ ವ್ಯಾಕುಲಿತೋ ಭವತ್ ।
ಘೃತ ವಸ್ತ್ರಸುವರ್ಣಾನಿ ತತ್ರ ದದ್ಯಾದ್ ವಿಚಕ್ಷಣಃ ।
ತ್ರಿಂ ಶತಾಧನಧಾನ್ಯಾಪ್ತಿರಿತಿ ಜಾತಕ ನಿರ್ಣಯಃ ।

ಸಮುದಾಯಾಷ್ಟಕ ವರ್ಗದಲ್ಲಿ ಕಲಹ, ರತ್ನ ಹಿರಣ್ಯ ಗೋ-ಭೂಮಿ ದಾನ.

19 ರೇಖಾ ಭಾವ ಸಂಚಾರ – ದೇಶತ್ಯಾಗ, ವಿಧಿವತ್ ಶಾಂತಿ ಮಾಡಿಸುವುದು.

20 ರೇಖಾ ಭಾವದಲ್ಲಿ ರವಿ ಸಂಚಾರ - ಬುದ್ಧಿಭ್ರಂಶ (ಕ್ಷಯ) ಇಷ್ಟ ದೇವರ ಲಕ್ಷ ಜಪ.

21 ರೇಖೆಗಳ ಭಾವ ಸಂಚಾರ (ರವಿ) ರೋಗಪೀಡೆ, ಧ್ಯಾನ ರಾಶಿ ದಾನ.

22 ರೇಖೆ ಇದ್ದ ಭಾವ ಸಂಚಾರ – ಬಂಧುಗಳಿಗೆ ಪೀಡೆ, ಕನ್ನಡಿ ದಾನ – ಉಪಯುಕ್ತ.

23 ರೇಖೆಗಳಿದ್ದ ಭಾವ ಸಂಚಾರ – ಕಷ್ಟ, ಮನಃಕ್ಲೇಶ, 7 ಪಲ ಬಂಗಾರ ರವಿ ಪ್ರತಿಮೆ ದಾನ.

24 ರೇಖೆಗಳಿರುವ ಸ್ಥಾನ ರವಿ ಸಂಚಾರ – ಬಂಧು ಹೀನತ್ವ, ಗೋದಾನ.

25 ರೇಖೆ ಭಾವ ಸಂಚಾರ – ಬುದ್ಧಿ ಹೀನತೆ – ಸರಸ್ವತಿ ಪೂಜೆ.

26 ರೇಖೆಗಳಿದ್ದ ಸ್ಥಾನ – ಧನಹಾನಿ – ಬಂಗಾರ ದಾನ.

27 ರೇಖೆಗಳಿದ್ದ ಭಾವ ರವಿ ಸಂಚಾರ – ಧನಕ್ಷಯ – ಶ್ರೀಸೂಕ್ತ ಪಠಣ.

28 ರೇಖೆಗಳಿದ್ದ ಭಾವ ಸಂಚಾರ – ಅನೇಕ ವಿಧ ಹಾನಿ – ಸೂರ್ಯ ಹೋಮ.

29 ರೇಖೆಗಳಿದ್ದ ಸ್ಥಾನ ಸಂಚಾರ ಚಿಂತೆಯಿಂದ ವ್ಯಾಕುಲ – ತುಪ್ಪ ವಸ್ತ್ರ

ದಾನ.

30 ರೇಖೆಗಳಿದ್ದ ಭಾವ ಧನ-ಧಾನ್ಯ ಸಂಗ್ರಹ.

ಈ ಮೇಲಿನ ಫಲಗಳು ಆಯಾ ರಾಶಿಯಲ್ಲಿ ಸೂರ್ಯ ಗೋಚರದಿಂದ ಬಂದಾಗ – ದಾನ ಮಾಡಲು ಸಮರ್ಥರಿಲ್ಲದವರು – ಸಂಕಲ್ಪದಿಂದ ಧನ ದಾನ ಮಾಡುವುದು (ಕೈಲಾದಷ್ಟು).

## ತ್ರಿಶದಧಿಕ ರೇಖಾ ಸ್ಥಾನ ಫಲ

ಖಾಗ್ನಿತೋಧಿಕ ರೇಖಾಭಿ ರತ್ನ ದ್ರವ್ಯಾದಿ ಸಂಪದಃ ॥೨೮॥

ಖವೇದತೋಧಿಕಾಭಿಸ್ತು ಪುಣ್ಯ ಶ್ರೀ ರೂಪಚೀಯತೆ ।

ಯಾವ ರಾಶಿಯಲ್ಲಿ 30ಕ್ಕಿಂತ ಅಧಿಕ ರೇಖೆಗಳಿವಿಯೋ ಅಲ್ಲಿ ರವಿ ಸಂಚಾರದಲ್ಲಿ ರತ್ನ ದ್ರವ್ಯಾಧಿ ಹಾಗೂ ಅನ್ಯ ಸಂಪದ ಪ್ರಾಪ್ತಿ. 40ಕ್ಕಿಂತ ಹೆಚ್ಚು ರೇಖೆಗಳಿದ್ದ ರಾಶಿ ಸಂಚಾರ. ಎಲ್ಲ ರೀತಿಯ ಸುಖ, ಪುಣ್ಯಕಾರ್ಯ, ಲಕ್ಷ್ಮಿ (ಸಂಪತ್ತು) ವೃದ್ಧಿ.

## ಅಷ್ಟವರ್ಗ ಪ್ರಶಂಸಾ

ಅಷ್ಟವರ್ಗೆ ವಿಶುದ್ಧಾಯೇ ಶುದ್ಧಾಃ ಸರ್ವತೆ ಮತಾಃ ॥೨೯॥

ಶುಭ ಕರ್ಮಸು ತೇನ್ನೈವ ಶೋಧನಂ ವಿದುಷಾಂ ಮತವಮ್ ।

ತಾವದಂತ್ರಿಷ್ಯತೆ ವಿಜ್ಞೈಃ ಶುದ್ಧಿ ಗೋಚರಿಜಾ ಪುನಾಃ ॥೩೦॥

ಶುದ್ಧೇಷ್ಟವರ್ಗೇ ಸಕಲ ಗೋಚರಂ ನಿಷ್ಫಲಂ ಸ್ಮೃತವಮ್ ।

ಅಷ್ಟಕ ವರ್ಗ – ವಿಶುದ್ಧ ಯಾವ ರಾಶಿಯಿದೆಯೋ ಅಲ್ಲಿ ಎಲ್ಲ ಕಾರ್ಯ ಶುದ್ಧವೆಂದು ಪರಿಗಣಿಸಲ್ಪಡುತ್ತವೆ. ಇದಕ್ಕಾಗಿಯೇ ಎಲ್ಲ ಶುಭ ಕಾರ್ಯದಲ್ಲಿ ಅಷ್ಟಕ ವರ್ಗ ಶೋಧನ ಎಲ್ಲ ವಿದ್ವಾಂಸರಿಗೆ ಸಮ್ಮತವಿದೆ. ಅಷ್ಟಕ ವರ್ಗ ಶುದ್ಧಿ ನಂತರ ಗೋಚರ ಶುದ್ಧಿ ನಿರರ್ಥಕವೆ ಗೋಚರ ಶುದ್ಧಿಗಿಂತ ಅಷ್ಟಕ ವರ್ಗ ಶುದ್ಧಿ ಅಧಿಕ ಮಹತ್ವದ್ದಾಗಿದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಸಮುದಾಯಷ್ಟಕ ವರ್ಗಾಧ್ಯಾಯಃ ಸಮಾಪ್ತಃ

# ಅಥ ರಶ್ಮಿಫಲಂ ವರ್ಣನಾಧ್ಯಾಯಃ

## ಪರಾಶರ ಉವಾಚ:

ಶೃಣುವಚ್ಮಿ ನಭೋಗಾನಂ ರಶ್ಮಿನೇಕಾಗ್ರಮಾನಸಃ ।
ದಿಂಗನವೇಷ್ಟಿಷು ಸಪ್ತಾಷ್ಟಶರಃ ಸೋಚ್ಚೇ ಕರಾರವೇಃ ॥೧॥

ನೀಚೆ ಖಂ ಚಾಂತರೆ ಪ್ರೋಕ್ತಾ ರಶ್ಮಯಸತ್ವನುಪಾತತಃ ।
ನೀಚೋನಂ ತು ಗ್ರಹಂ ಭಾರ್ಧಾಧಿಕಂ ಚಕ್ರಾದ್ ವಿಶೋಧಯತೆ ॥೨॥

ಸ್ವಿಯರಶ್ಮಿಹತಂ ಷಡ್‌ಭಿರ್ಭಜೇತ್ ಸ್ಯೂ ರಶ್ಮಿಯಃ ಸ್ವಕಾಃ ।

## ಪರಾಶರರು ಹೇಳಿದರು–

ಕೇಳು ಮೈತ್ರೇಯ,

ಪರಮೋಚ್ಚ ಸ್ಥಾನದಲ್ಲಿ ಸೂರ್ಯಾದಿ ಗ್ರಹಗಳಿಗೆ ಕ್ರಮಶಃ ಅಂದರೆ ರವಿಗೆ – 10, ಚಂದ್ರ – 9, ಮಂಗಳ – 5, ಬುಧ – 5, ಗುರು – 7, ಶುಕ್ರ – 8, ಶನಿ – 5ಗಳುಳ್ಳವರಾಗಿದ್ದಾರೆ. ಮಧ್ಯದಲ್ಲಿ ಅನುಪಾತದಿಂದ ರಶ್ಮಿಯುಳ್ಳವರಾಗಿರುತ್ತಾರೆ. ಮಧ್ಯದಲ್ಲಿ ಅನುಪಾತದಿಂದ ರಶ್ಮಿಜ್ಞಾನ ಮಾಡಿಕೊಳ್ಳುವುದು. ರಶ್ಮಿಜ್ಞಾನವಾದ ಮೇಲೆ ರಾಶ್ಯಾದಿ ಆ ಗ್ರಹದ ನೀಚದಲ್ಲಿ (ರಾಶ್ಯಾದಿಯಲ್ಲಿ) ಕಳೆದು ಉಳಿದ ರಶ್ಮಿಗಳಿಗೆ (6 ರಾಶಿಗಿಂತ ಕಡಿಮೆ ಸ್ಥಿತಿಯಲ್ಲಿ) ಅದರ ರಶ್ಮಿಗಳಿಂದ ಗುಣಿಸಿ 6ರಿಂದ ಭಾಗಿಸಿ ಉಳಿದ 'ಲಬ್ಧ' (ಶೇಷದಲ್ಲಿ) ಆ ಗ್ರಹದ ರಶ್ಮಿಯಾಗುತ್ತದೆ.

### ಸಂಸ್ಕಾರ ವಿಶೇಷ

ಆಚಾರ್ಯೈರ್ಬಹುಭಿಶ್ಚಾತ್ರ ಸಂಸ್ಕಾರೋ ವಿಹಿತೋ ಯಥಾ ॥೩॥

ಉಚ್ಚೆ ಚ ತ್ರಿಗುಣಾಃ ಪ್ರೋಕ್ತಾಃ ಸ್ವತ್ರಿಕೋಣೆ ದ್ವಿಸಂಗುಣಾಃ ।
ಸ್ವರ್ಕ್ಷೆ ತ್ರಿಂಘ್ನಾ ದವಿಸಂಭುಕ್ತಾ ಅಧಿಮಿತ್ರ ಗ್ರಹೇಪಿ ಚ ॥೪॥

ವೇಧಘ್ನಾ ರಾಮಸಂಭುಕ್ತಾ ಮಿತ್ರಭೆ ಷಡ್‌ಗುಣಾಸ್ತತಹ ।
ಪಂಚಭಕ್ತಾಸ್ತಥಾ ಶತ್ರು ಗೃಹೆ ಯದಿ ದಲೀಕೃತಾಃ ॥೫॥

ಅಧಿಶತ್ರೋ ಗೃಹೆ ದ್ವಿಘ್ನಾ ಪಚಭಕ್ತಾಃ ಸಮೇ ನಹಿ ।
ಸಿತಮಂದೌ ವಿನಾ ತಾರಾಗ್ರಹಾ ಅಸ್ತಂಗತಾ ಯದಿ ॥೬॥

ವಿರಶ್ಮಯೋ ಭವನ್ತ್ಯೇವಂ ಫಲಂ ರಶ್ಮಿವಶಾನ್ಮತಮ್ ।

ಬಹಳ ಜನ ಜ್ಯೋತಿಷ್ಯಾಚಾರ್ಯರು ಈ ರಶ್ಮಿಗಳ ಸಂಸ್ಕಾರವನ್ನು ಮಾಡಿದ್ದಾರೆ. ಉಚ್ಚದಲ್ಲಿ ಗ್ರಹವಿದ್ದರೆ ಸಾಧಿತ ರಶ್ಮಿಗಳನ್ನು ತ್ರಿಗುಣಿತ ಮಾಡುವುದು. ಸ್ವತ್ರಿಕೋನದಲ್ಲಿದ್ದರೆ ದ್ವಿಗುಣಿತ, ಸ್ವಭವನದಲ್ಲಿದ್ದರೆ ತ್ರಿಗುಣಿತ ಮಾಡುವುದು ಹಾಗೂ ಅದಕ್ಕೆ 2ರಿಂದ ಭಾಗಿಸುವುದು. ಅಧಿಮಿತ್ರ ಕ್ಷೇತ್ರದಲ್ಲಿದ್ದರೆ 4ರಿಂದ ಗುಣಿಸಿ 3ರಿಂದ ಭಾಗಿಸುವುದು. ಮಿತ್ರಗ್ರಹದಲ್ಲಿರಲು 6ರಿಂದ ಗುಣಿಸಿ 5ರಿಂದ ಭಾಗಿಸುವುದು. ಶತ್ರು ಗ್ರಹದಲ್ಲಿ ಗ್ರಹವಿದ್ದರೆ ಸಾಧಿತ ರಶ್ಮಿಗಳನ್ನು ಅರ್ಧ ಮಾಡುವುದು. ಅಧಿ ಶತ್ರುಗ್ರಹದಲ್ಲಿದ್ದರೆ 2ರಿಂದ ಗುಣಿಸಿ 5ರಿಂದ ಭಾಗಿಸಿ ರಶ್ಮಿ ತೆಗೆಯುವುದು. ಅದೇ ಸಮಕ್ಷೇತ್ರದಲ್ಲಿದ್ದರೆ ಯಥಾವತ್ ರಶ್ಮಿಗಳನ್ನಿಡುವುದು. ಬುಧ, ಶುಕ್ರರನ್ನುಳಿದು ಉಳಿದ ಗ್ರಹಗಳೂ ಅಸ್ತಂಗತವಾಗಿದ್ದರೆ ರಶ್ಮಿ ರಹಿತ ವಾಗುತ್ತದೆ. ಫಲಾದೇಶ ರಶ್ಮಿ ಆಧಾರದ ಮೇಲೆಯೇ ಮಾಡುವುದು.

ಉದಾಹರಣೆ- ದತ್ತ ಕುಂಡಲಿ ಯಸ್ಪಷ್ಟಗ್ರಹಗಳು

| ಗ್ರಹ | ರ | ಚ | ಬು | ಗು | ಶು | ಶ | ಮ |
|---|---|---|---|---|---|---|---|
| ರಾ | 6 | 6 | 6 | 9 | 5 | 11 | 9 |
| ಅ | 17 | 24 | 19 | 1 | 26 | 2 | 4 |
| ಕ | 35 | 0 | 01 | 44 | 31 | 47 | 44 |

ಗ್ರಹಗಳ ನೀಚತ್ವ

| ರಾ | 6 | 7 | 11 | 9 | 5 | 0 | 3 |
|---|---|---|---|---|---|---|---|
| ಅ | 10 | 3 | 15 | 5 | 27 | 20 | 28 |

ಇಲ್ಲಿ ರವಿ ಶುಭತ್ವದ ಕಡೆಗೆ ನಡೆದಿರುವುದರಿಂದ, ಹಾಗೂ ಗುರು-ಮಂಗಳ ಜತೆ ಯುತ ಮಾಡಿರುವುದರಿಂದ ಅವನ ನೀಚತ್ವ ಭಂಗವಾದ್ದರಿಂದ ರಶ್ಮಿ ಕೊಡಲಾಗಿದೆ. ಶುಕ್ರ ರಶ್ಮಿ ಶೂನ್ಯ ಬುಧನಿಗೆ ಅಸ್ತ ನಿಯಮ ಅನ್ವಯವಾಗಲಾರದು

ರವಿಯ ಉದಾಹರಣೆ

ಸ್ಪಷ್ಟ ರವಿ 6, 17, 35 ರವಿ ನೀಚತ 6, 10, 0 ನೀಚದಲ್ಲಿ ಸ್ಪಷ್ಟ ಕಳೆದಾಗ 11,

22, 25 ಆ ರಾಶಿಗಳಗಿಂತ ಹೆಚ್ಚಾಗಿರುವುದರಿಂದ 12 ರಾಶಿಯಲ್ಲಿ ಕಳೆಯಲಾಗಿ - 0, 7, 35 ಇದಕ್ಕೆ ರವಿ ರಶ್ಮಿಯಿಂದ ಅಂದರೆ 10 ರಿಂದ ಗುಣಿಸಿದಾಗ 1-15-50 ಬರುತ್ತದೆ. ಇದಕ್ಕೆ 6 ರಿಂದ ಭಾಗಿಸಲು 0/17- ರವಿ ಅಧಿ ಶತ್ರು ಗ್ರಹದಲ್ಲಿ ಹೀಗಾಗಿ ಎರಡರಿಂದ ಗುಣಿಸಿ 5 ರಿಂದ ಭಾಗಿಸಿದ 0/0/3 ರಶ್ಮಿಯಾಗುತ್ತದೆ. ಇದರಂತೆ ಉಳಿದ ಗ್ರಹ ರಶ್ಮಿಗಳು ಕೆಳಗಿನಂತೆಯೇ ಅವುಗಳನ್ನು ಮೇಲಿನ ಆಧಾರದ ಮೇಲೆ ತೆಗೆಯಲಾಗಿದಲ್ಲಿ ಪ್ರತ್ಯೇಕ ಲೆಕ್ಕ ತೋರಿಸಿಲ್ಲ. ಮೇಲೆ ವಿವರಿಸಿದಂತೆ ಶುಕ್ರನಿಗೆ ಮಾತ್ರ ಶೂನ್ಯ.

ರವಿ - 0/0/3

ಚಂದ್ರ 0/6

ಮಂಗಳ 7/3

ಬುಧ 0/0/3

ಗುರು 0/4

ಶುಕ್ರ 0/0

ಶನಿ 13/0

ಇಲ್ಲಿ ರವಿ ಚಲನೆ ಉಚ್ಚದ ಕಡೆಗೆ ಮಂಗಳನ ಚಲನೆ ಉಚ್ಚದ ಕಡೆಗೆ ಶನಿ ನೀಚತ್ವದ ಕಡೆಗೆ ಗುರುವಿಗೆ ನೀಚ ಭಂಗವಾದರೂ ನೀಚತ್ವದ ಕಡೆಗೆ. ಶುಕ್ರ ಪರಮ ನೀಚತ್ವ ಅದಕ್ಕಾಗಿ ಶೂನ್ಯರಶ್ಮಿ

## ರಶ್ಮಿಫಲ

1 ರಿಂದ 5ರ ... ಹೀಗೆ ರಶ್ಮಿ ಫಲ ಹೇಳುತ್ತಾರೆ.

ಏಕಾದಿಪಂಚಕ ಯಾವದ್ ರಶ್ಮ್ಯಂಕೋ ಯದಿ ಜಾಯತೆ ॥೭॥

ದರಿದ್ರಾ ದುಃಖಿತಾ ದಾಸಾ ಅಪಿ ಜಾತಾಃ ಕುಲೋತ್ತಮೆ।
ಪರತೋ ದಶಕಂ ಯಾವದ್ ಭಾರವಾಹಾ ಅಂಕಿಚ್ಚನಾಃ ॥೮॥

ಸ್ತ್ರೀಪುತ್ರಗೃಹಹೀನಾಶ್ಚ ಭವಂತಿ ಕಿಲ ಮಾನವಾಃ।

1 ರಿಂದ 5ರವರೆಗೆ ರಶ್ಮಿಗಳಿದ್ದರೆ ಉಚ್ಚವಂಶದವನಿದ್ದರೂ ಜಾತಕ ದರಿದ್ರ ದುಃಖಪೂರ್ಣನಾಗಿರುವನು. 5 ರಿಂದ 10ರವರೆಗೆ ಇದ್ದರೂ ಭಾರವಾಹಕ (ಹಮಾಲ) ಹಾಗೂ ದರಿದ್ರನೂ ಆಗಬಹುದು ಹಾಗೂ ಮನೆ ಪುತ್ರ-ಸ್ತ್ರೀಹೀನ ನಾಗುವನು.

ರಶ್ಮಾವೇಕಾದಶಮಿತೆ ಸ್ತೋಕಪುತ್ರಧನಾ ಜನಾಃ ॥೯॥

ಕರೇಂದುಭಿಶ್ರಲಾಧನಾ ಧೂರ್ತಾ ಮೂರ್ಖಾಶ್ಚ ದುರ್ಬಲಾಃ।
ರಶ್ಮೌತ್ರಯೋದಶಮಿತೆ ಚೌರಾ ನಿಃಸ್ವಾಃ ಕುಲಾಧಮಾಃ ॥೧೦॥

ವೇದೇಂದುಭಿರ್ಧಮನನಿಷ್ಠಾಃ ಸ್ವಬಂದಂಜನಪಾಲಕಃ।
ವಂಶಾಗತ ಕ್ರಿಯೋ ಪೇತಃ ಪ್ರಾಜ್ಞೋ ಭೂರಿಧನೋ ಮತಃ ॥೧೧॥

ಸ್ವವಂಶ ಮುಖ್ಯೋ ಧನವಾನಿತ್ಯಾಹ ಕಮಲೋದ್ಭವಃ ॥೧೨॥

ತತೋಧಿಕೋ ಕುಲೇಶಾನ್ ಬಹುಭೃತ್ಯಾಃಕುಟುಂಬಿನಃ।
ಕೀರ್ತಿ ಮಂತೋಜನ ಕೀರ್ಣಾಃ ಸುಖಪೂರ್ಣೋ ಯಥಾಕ್ರಮಮ್ ॥೧೩॥

ರಶ್ಮಿ ಸಂಖ್ಯೆ 11 ಇದ್ದರೆ ಅಲಧನ 12 ರಶ್ಮಿ ಸ್ವಲ್ಪಧನ ಧೂರ್ತ ಮೂರ್ಖ, 13 ರಶ್ಮಿ ಕಳ್ಳನಿರ್ಧನ ಹಾಗೂ ಕುಲಾಧಮನಾಗುತ್ತಾನೆ. 14 ರಶ್ಮಿ ಸಂಖ್ಯೆಯಲ್ಲಿ ಧರ್ಮನಿಷ್ಠ ಆತ್ಮೀಯ ಬಂಧು ಜನರ ಪಾಲಕ ವಂಶಾಗತ ಕರ್ಮ ಮಾಡುವವ ಧನವಂತ, ವಿದ್ವಾನನಾಗುತ್ತಾನೆ ಹಾಗೂ ಧನಪೂರ್ಣ 15 ರಶ್ಮಿಗಳಿದ್ದರೆ ಜ್ಞಾನ ಗುಣ ಸಂಪನ ವಂಶದಲ್ಲಿ ಪ್ರಮುಖ ಧನಿ 16 ರಶ್ಮಿಗಳಿದ್ದರೆ ಕುಲ ಶ್ರೇಷ್ಠ 17 ರಶ್ಮಿ ಅನೇಕ ಭೃತ್ಯ ಲಾಭ ತಿಂದರೆ 18 ರಶ್ಮಿ ಸಂಖ್ಯೆ ಕುಟುಂಬ ಪೂರ್ಣ 19 ರಶ್ಮಿ ಯಶಸ್ವಿ ಯನ್ನಾಗಿ ಮಾಡುತ್ತದೆ. 20 ರಶ್ಮಿಗಳಿದ್ದರೆ ಸಾವಿರಾರು ಜನರು ಅವರ ಸುತ್ತಲೂ ಇರುವವನಾಗುತ್ತಾನೆ.

ಅಥೈಕವಿಂಶತರ್ಯೆಃ ಪಂಚಶಜ್ಜನಪೊಷಕಃ।
ನೇತ್ರಾಶ್ವಿಪ್ರಮುತೈಸ್ತೈಸ್ತು ಜಾತೋ ದಾನಿ ಕೃಪಾನ್ವಿತಃ ॥೧೪॥

ತ್ರಯೋವಿಂಶತಿತುಲ್ಯೈಸ್ತೈಃ ಸುಖಿಸಂಪತ್ತಿಶೀಗುವಾನ್।

ರಶ್ಮಿ 21 ಇದ್ದರೆ 50. ಜನರ ಪಾಲನ ಕರ್ತನಾಗುವವನು 22 ರಶ್ಮಿ ದಾನಿ ಹಾಗೂ ಕೃಪಾಳು 23 ರಶ್ಮಿ ಬಹಳ ಸುಖ ಸಂಪತ್ತಿಶಿಲು ಸುಶೀಲ.

ಆತ್ರಿಂಶತ ಪರತಃ ಶ್ರೀಮನ್ ಸರ್ವಸತ್ವ ಸಮಾನ್ವಿತಃ ॥೧೫॥

ರಾಜ ಪ್ರೀಯಸ್ತೀವ್ರ ಬುದ್ಧಿರ್ಜನ್ಯೆಶ್ಚ ಬಹುಭರ್ವೃತಃ।

24 ರಿಂದ 30 ರಶ್ಮಿಗಳಿದ್ದರೆ ಮನುಷ್ಯ ಲಕ್ಷ್ಮಿವಾನ್ ಬಲವಾನ್ ರಾಜ್ಯವಲ್ಲಭ ತೀವ್ರ ಬುದ್ಧಿಯವನಾಗುವನು. ಅನೇಕ ಜನರಿಂದ (ವಂದಿ ಮಾಗಧರು) ಕೂಡಿರುವನು.

ಆತ ಊರ್ಧ್ವಾ ಪ್ರಾಂತಪಾಃ ಸ್ಯುಃ ಖವೇದ ಕಿರಣಾವಧಿ ॥೧೬॥

ಶತ ಮೇಕಂ ಸಮಾರಭ್ಯ ಸಹಸ್ರಾವಧಿ ಪೋಷಕಾಃ।
ಆತ ಊರ್ಧ್ವಾ ನೃಪಃ ಪಂಚಾಶತಕರಾವಧಿ ಕೀರ್ತಿತಃ ॥೧೭॥

ತತೋಧಿಕೈ ರಶ್ಮಿಭಿಸ್ತುಂ ಸಾರ್ವಭೌಮೋ ಮುಹಿಪತಃ।

30ರಿಂದ 40ರವರೆಗೆ ರಶ್ಮಿ ಸಂಖ್ಯೆಗಳಿದ್ದರೆ 100 ರಿಂದ 1000 ವ್ಯಕ್ತಿಗಳ ಪೋಷಕನಾಗುವನು. ಪ್ರಾಂತಪತಯಾಗುವನು. 40ರಿಂದ 50 ರಶ್ಮಿಗಳಿದ್ದರೆ ರಾಜನ್ಯ 50ರಿಂದ ಹೆಚ್ಚಾಗಿದ್ದರೆ ಸಾರ್ವಭೌಮನಾಗುವನು.

ಜನ್ಮಕಾಲಿಕ ಖೇಟೋತ್ಥ ರಶ್ಮೀನಾಂ ವಶತಸ್ತಥಾ ॥೧೮॥

ಜಾತವಂಶಾನುಂ ರೋಧೆನ ರಶ್ಮಿನಾಂ ಫಲಮಾ ದಿಶೀತ್।
ಬ್ರಾಹ್ಮಣೋಯಜ್ಞನಿರತಃ ಕ್ಷತ್ರಿಯಂ ಸಾರ್ವಭೌಮಕಂ ॥೧೯॥

ವೈಶ್ಯಸ್ತು ನೃಪತಿಜ್ಞೇಯಃ ಶೂದ್ರೋ ಧಾನ್ಯಧ್ಸಾನ್ವಿತಃ।

ಜನ್ಮಕಾಲಿಕ ರಶ್ಮಿ ಹಾಗೂ ಜಾತಿವಂಶದ ಅನುಸಾರ ಜಾತಕನ ಫಲಾದೇಶ ಮಾಡುವುದು ಅಧಿಕ ರಶ್ಮಿಪೂರ್ಣ ಬ್ರಾಹ್ಮಣ ಯಜ್ಞ ಕರ್ಮನಿರತ, ಕ್ಷತ್ರೀಯ, ಚಕ್ರವರ್ತಿ, ರಾಜ ಹಾಗೂ ವೈಶ್ಯರಿಗೂ ರಾಜ ಶೂದ್ರರಿಗೆ, ಧನಧಾನ್ಯ ಪೂರ್ಣನೆಂದು ಹೇಳುವುದು.

## ವಿಶೇಷ

ತುಂಗಾಭಿಲಾಷಿ ದ್ಯುಂಷದೋ ರಶ್ಮಿಯೋಧಿಕಸ ತ್ಪಲಾಃ ॥೨೦॥

ನೀಚಾಭಿಲಾಷಿಣಸ್ತೆ ತು ತತೋ ಲ್ಪಿ ಪಲದಾಃ ಸ್ಮೃತಾಃ

ಈ ಮೊದಲೆ ವಿವರಿಸಿದಂತೆ ಉಚ್ಚಾಭಿಮುಖ ಚಲಿಸುವ ಗ್ರಹ ರಶ್ಮಿಗಳು ಅಧಿಕ ಶುಭ ಫಲವನ್ನು ನೀಚಾಭಿಮುಖ ಚಲಿಸುವ ಗ್ರಹದ ಫಲ ಅಲ್ಪವಾಗಿರುತ್ತದೆ ಎಂಬುದನ್ನು ಗಮನಿಸುವುದು.

ವಾಚ್ಯಂ ಫಲಂ ವಿಬುಧ್ಯೆ ರಶ್ಮೀನಾಂ ಜ್ಞಾನಮಂತರಾ ॥೨೧॥

ಖಗಾಣು ರಶ್ಮಿವಶತೋ ಜ್ಞಾತುಂತತ್ಶಕ್ಯತೆ ಯತಃ।
ಅತಃ ಪ್ರಸಾಧ್ಯ ಖೇಟಾನಾಂ ಕರಾನ್ ಫಲ ಮುದೀರಯೇತ್ ॥೨೨॥

ರಶ್ಮಿಜ್ಞಾನ ಎಲ್ಲಿದೆ ಪಲಾಧೇಶ ಮಾಡಕೂಡದು. ಏಕೆಂದರೆ ರಶ್ಮಿಜ್ಞಾನ

·ದಿಂದಲೆ ಫಲಜ್ಞಾನ ವುಂಟಾಗುತ್ತದೆ. ರಶ್ಮಿ ಸಾಧನಾ ನಂತರ ಫಲ ಹೇಳುವುದು ಯೋಗ್ಯ.

ವಿಶೇಷ ವಿಮರ್ಶೆ: ಪರಾಶರರು ಅನೇಕರ ಅಭಿಮತ ಒಪ್ಪಿಕೊಂಡು ಸಂಸ್ಕಾರ ವಿಶೇಷ ಹೇಳಿದರೂ ನಂತರದ ಅವಧಿಯಲ್ಲಿ ಅನೇಕ ಬದಲಾವಣೆಗಳು ಕಂಡು ಬಂದುದು ಗೋಚರವಾಗುತ್ತದೆ ಹಾಗೂ ಫಲ ನಿರ್ದೇಶನದಲ್ಲಿ ವ್ಯತ್ಯಾಸ ಕಂಡು ಬರುತ್ತದೆ. ಮಣಿಬಂಧ ಆಚಾರ್ಯರು ಹಾಗೂ ಅವರ ವಿಚಾರ ವಿಂಗಡಿಸಿ ·ವಿಶ್ಲೇಷಿದಾಗ 'ಸಾರಾವಲೀ' ಕರ್ತೃ ಶ್ರೀಮತ್ ಕಲ್ಯಾಣವರ್ಮ ಸಾರಾದಲ್ಲಿ (ಪುಟ 329) ಅಥವಾ ಮಂಗಬಂಧಾಚಾರ್ಯರ ಗ್ರಂಥ ಅವಲೋಕಿಸಬಹುದು.

ರಶ್ಮಿಗಳು ರ 10 ಚಂ-9, ಮಂ-5, ಬು-5, ಗುರು-7, ಶುಕ್ರ-8 ಹಾಗೂ ಶನಿ - 5 ಇದ್ದರೂ ಮಹೇಂದ್ರ ಶಾಸ್ತ್ರದಲ್ಲಿ ಮಯ, ಬಾದರಾಯಣ ಹೇಳಿರುವ ಮಹೇಂದ್ರ ಶಾಸ್ತ್ರ ಗ್ರಂಥದಲ್ಲಿ ಪ್ರತ್ಯೇಕ ಗ್ರಹಗಳು ರಶ್ಮಿ 7, 7 ಎಂದು ವರ್ಣಿತವಿದೆ. ಈ ಎರಡು ಮತಗಳ ಪ್ರಮಾಣವಿದೆಯಾದರೂ ಬಹಳ ಆಚಾರ್ಯರ ಮತ 7, 9, ರಶ್ಮಿಗಳೆಂದು ಹೇಳಿದ್ದಾರೆ. ನೀಚ ಗ್ರಹ ರಶ್ಮಿ ಶೂನ್ಯವೆಂದು ಹೇಳಿದ್ದಾರೆ. ಉಳಿದ ಅಂಶ ಅನುಪಾತ ದಂತೆ ತೆಗೆಯುವುದನ್ನು ಪರಾಶರ ಹಾಗೂ ಎಲ್ಲ ಆಚಾರ್ಯರು ಒಪ್ಪುತ್ತಾರೆ. ಪರಾಶರರಂತೆ ಗ್ರಹ ಸ್ಪಷ್ಟರಾಶಾದಿಗಳನ್ನ ನೀಚದಲ್ಲಿ ಕಳೆದು 6 ರಾಶಿಗಿಂತ ಅಧಿಕವಾದರೆ 12 ರಾಶಿಯಲ್ಲಿ ಕಳೆದು ಶೇಷಕ್ಕೆ ರಶ್ಮಿ (ಗ್ರಹ) ಸಂಖ್ಯೆಯಿಂದ ಗುಣಿಸಿ 6 ರಿಂದ ಭಾಗಿಸಲು ಹೇಳಿದ್ದಾರೆ. ಇದು ಎಲ್ಲರ ಅಭಿಪ್ರಾಯ ಒಂದೆ ಆದರೂ

ಸಂಸ್ಕಾರ ವಿಷಯದಲ್ಲಿ ಭಿನ್ನಾಭಿಪ್ರಾಯ ಎದ್ದು ಕಾಣುತ್ತದೆ. ಪರಾಶರರು ಉಚ್ಚೆ ಚ ತ್ರಿಗುಣಾಃ....

' ಬುಕ್ತಭೆ ಷಡ್ ಗುಣ...' ಎಂದು ಅದೆ ಲಗ್ನ ಕುಂಡಲಿಯಿಂದಲೇ ವಿವರಿಸಿವರೆ ಇಲ್ಲಿ,

ಮಿತ್ರ ದ್ವಾದಶಭಾಗೆ ದ್ವಿಗುಣಾ ಸ್ತ್ರಿಗುಣಾಃ ಸ್ವರೆ ಚ ದೀಧೀತಯಃ।
ವಕ್ರೆ ಪುನಿಸ್ತಥೋಚ್ಚೆ ಸ್ವರಾಶಿಗೆ ತದ್ವವತ್ಯೇವ ॥೭॥

ದ್ವಿಗುಣಾಃ ಸ್ಯುರ್ದೀರ್ಘತಯೋ ವಕ್ರಸ್ಯೈತ್ತೈವಮೇವ ಸ್ಯುಃ।
ವೈರಿದ್ವಾದಶಭಾಗೆ ನೀಚೆ ಚ ಭವಂತು ಷೋಡಶಿಲೀನಾಃ ॥೮॥

ಇಲ್ಲಿ ಗ್ರಹ ಮಿತ್ರನ ದ್ವಾದಶಾಂಶದಲ್ಲಿದ್ದರೆ ರಶ್ಮಿ ಸಂಖ್ಯೆಯನ್ನ 2ರಿಂದ ಗುಣಿಸಿದರೆ ಸ್ಪಷ್ಟರಶ್ಮಿ ಸಂಖ್ಯೆ ಎಂದಿದ್ದಾರೆ. ಸ್ವದ್ವಾದಶಾಂಶದಲ್ಲಿ ಇದ್ದರೆ ರಶ್ಮಿ ಸಂಖ್ಯಾಕ್ಕೆ 3ರಿಂದ ಗುಣಿಸಿದರೆ ಸ್ಪಷ್ಟರಶ್ಮಿ ವಕ್ರಿ ಗ್ರಹ ಮಿತ್ರನ ದ್ವಾದಶಾದಲ್ಲಿದ್ದರೆ

20ರಿಂದ ಗುಣಿಸಿ ಸ್ಪಷ್ಟ ರಶ್ಮಿ ಸಂಖ್ಯಾ ಎಂದು ಉಚ್ಚದಲ್ಲಿದ್ದರೆ ಅಥವಾ ಸ್ವರಾಶಿಯಲ್ಲಿದ್ದರೆ 3ರಿಂದ ಗುಣಿಸಿದರೆ ಹಾಗೂ ಮಾರ್ಗಿಗ್ರಹ ಮಿತ್ರ ದ್ವಾದಶಾಂಶದಲ್ಲಿದ್ದರೂ 2ರಿಂದ ಗುಣಿಸಿದ ಸ್ಪಷ್ಟರಶ್ಮಿ ಎಂದು ಒಂದು ವೇಳೆ ಶತ್ರುವಿನ ದ್ವಾದಶಾದಲ್ಲಿ, ನೀಚದಲ್ಲಿದ್ದರೆ $^{1}/_{16}$ನೇ ಭಾಗ ಕಳೆದರೆ ಸ್ಪಷ್ಟರಶ್ಮಿ ಎಂದಿದ್ದಾರೆ.

## ಪುನಃ ಸಂಸ್ಕಾರ ವಿಶೇಷದಲ್ಲಿ

ಅಸ್ತಂಗತೋವಿರಶ್ಮಿಃ ಶನಿಪೀತವಜ್ಞ ಗ್ರಹೆಜ್ಞೇಯ।
ವಕ್ರಾಂತಸ್ಥೆ ದ್ವಿಗುಣಾ ವಕ್ರತ್ಯಾಗೇಷ್ಟಭಾಗದಿನಶ್ಚ।
ಏವಂ ರಶ್ಮಿ ವಿಧಾನಂ ಪೂಣರ್ವಾಚಾರ್ಯೈ ಸಮುಶ್ಪಷ್ಟವಮೆ

ಎಂದು ಬುಧನ ಬುದಾಗಿ ಶನಿಯನ್ನ ಅಸ್ತದಲ್ಲಿಧರಿಸಿದ್ದ ಬುಧ ಶುಕ್ರರಿಗೆ ಅನೇಕಾನೇಕ ಉದಯಸ್ತಗಳಿರುವುದರಿಂದ ಬುಧ, ಶುಕ್ರರನ್ನೊ ಅಥವಾ ಶನಿ ದೂರ ಗ್ರಹವೆಂಬುದಾಗಿರುವುದರಿಂದ ಶನಿಯನ್ನ ಗ್ರಹಿಸುವುದೋ ಎಂಬುದು ಒಂದು ಅಂಶ. ಶುಕ್ರ ಮೌಢ್ಯದಲ್ಲಿ ರಶ್ಮಿರಹಿತನಾಗಿರುವುದರಿಂದ ಯಾವ ಶುಭ ಕರ್ಮಕ್ಕೂ ಆ ಕಾಲ ವರ್ಜಿತವಾದ್ದರಿಂದ ಶುಕ್ರನನ್ನ ಪರಿಗ್ರಹಿಸಬೇಕೋ ಬೇಡವೋ ಅನ್ನುವುದು ಒಂದಂಶ. ಪಂಡಿತರು ಸಾರಾಸಾರ ವಿಚಾರನಂತರ ನಿರ್ಣಯಿಸುವುದು.

ಇಲ್ಲಿ ಫಲದಲ್ಲಿ 1-10ರವರೆಗೆ ಸಾಮಾನ್ಯವಾಗಿದ್ದರೂ 11-15ರಲ್ಲಿ ರಶ್ಮಿಯಿದ್ದರೆ ಅಧಿಕ ಶಾಸ್ತ್ರದ ಜ್ಞಾತಾ ಸಜ್ಜನ ಧರ್ಮಾತ್ಮಾ ಸುಂದರ ತನ್ನ ವಂಶ ಸಮಾನವೆಂದು ಫಲಹೇಳದೆ ಪರಾಶರರು 13ರವರೆಗೆ ಅನಿಷ್ಟ ಫಲ ಹೇಳಿದ್ದಾರೆ. 6-10ರಲ್ಲಿ ವಿದೇಶಗಮನ ತತ್ಪರವೆಂದು ಹೇಳಿದ್ದಾರೆ. ಮುಂದೆ ವಿಶದವಾಗಿ ಫಲ ಹೇಳುತ್ತಲೂ 49 ಸಂಖ್ಯೆಯವರೆಗೆ ವಿಶದವಾಗಿ ವಿವರಿಸಿದ್ದಾರೆ.

ಈ ಎಲ್ಲ ಅಂಶ ಗಮನಿಸಿ ಸತ್ಯಾಸತ್ಯತೆಯನ್ನು ನಿಮ್ಮ ಮೇಧಾಶಕ್ತಿಯಿಂದ ವರೆಗಲ್ಲಿಗೆ ಉಜ್ಜಿನೋಡಿಯೋ ಫಲ ಹೇಳುವುದು. ಪ್ರತಿಯೊಬ್ಬ ಜ್ಯೋತಿಷಿಯ ಕರ್ತವ್ಯವಾಗಿದೆ. ಭೇದವೆಣಿಸದೆ ಗ್ರಹ ಉಚ್ಚವಿದೆ ಎಂದು ಜ್ಯೋತಿಷ್ಯ ಹೇಳುವುದು ನಿಲ್ಲಿಸಬೇಕು.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ರಶ್ಮಿ ಫಲ ವರ್ಣನಾಧ್ಯಾಯಃ ಸಮಾಪ್ತಿಃ

# ಅಥ ಸುದರ್ಶನ ಚಕ್ರ ಫಲಾಧ್ಯಾಯಃ

## ಪರಾಶರ ಉವಾಚ:

ಅಥ ಬ್ರವೀಮಿ ತೆ ವಿಪ್ರ। ಯತ್ಪುರಾ ವಿಧಿನೋದಿತಮ್।-
ಹಿತಾಯ ಜಗತಾಂ ಚಕ್ರಂ ಯಚ್ಚ ಖ್ಯಾತಂ ಸುದರ್ಶನಮ್।೧॥

ಯತಃಸಮಾಸ್ತಭಾವನಾಮಬ್ದಾದೀನಾಂ ಚ ಪ್ರಸ್ಫುಟಿಮ್।
ದೈವಜ್ಞೋ ಹಿ ಫಲಂ ವಕ್ತುಂ ಕ್ಷಮಸ್ತಚ್ಛೃಣು ಸಂಯತಃ।೨॥

## ಪರಾಶರರು ಹೇಳಿದರು—

ಹೇ ಮೈತ್ರೇಯ,

ಈಗ ನಾನು ಬ್ರಹ್ಮದೇವರು ಸ್ವಯಂ ಸಂಸಾರ ಕಲ್ಯಾಣಗೋಸುಗ ಹೇಳಿದ ಸುದರ್ಶನ ಚಕ್ರ ಕುಂಡಲಿಯ ಬಗ್ಗೆ ಹೇಳುತ್ತೇನೆ. ಈ ಸುದರ್ಶನ ಚಕ್ರ ಕುಂಡಲಿಯಿಂದ ಎಲ್ಲ ಭಾವಗಳ ಹಾಗೂ ವರ್ಷಾದಿಗಳ ಸ್ಫುಟಫಲ ಹೇಳಲು ಸಾಧ್ಯವಾಗುತ್ತದೆ. ಆದಕ್ಕಾಗಿ ಧೃಡಚಿತ್ತನಾಗಿ ಕೇಳು

### ಚಕ್ರ ಸ್ವರೂಪ ವಿನ್ಯಾಸ

ಕೇಂದ್ರೈಕ ಬಿಂದುತೋ ವೃತ್ತಿತ್ರಯಂ ಸಮ್ಯಾಗ್ ವಿನಿರ್ಮಿತಮ್।
ದ್ವಾದಶಾರಂ ಚ ಗದಿತಂ ಮುನೇ ಚಕ್ರಂ ಸುದರ್ಶನಮ್ ॥೩॥

ವೃತ್ತೆ ತು ಪ್ರಥಮೆ ಭಾವಾ ಲೇಖನೀಯಾಃ ಖಗಾನ್ವಿತಾಃ।
ತದ್ ಧ್ರ್ವಾವೃತ್ತೆ ಚಂದ್ರಾಚ್ಚಭಾವಾಃ ಖೇಟಸಮನ್ವಿತಾಃ ॥೪॥

ತದ್‌ಧ್ರ್ವಾವೃತ್ತೆ ಸೂರ್ಯಾಚ್ಚಸಗ್ರಾಹಾಸ್ತೆ ಯಥಾ ಕ್ರಮುಮ್।
ರಾಶೀನಾಂ ತ್ರಿತಯಂ ಚೈವಂ ಪ್ರತಿಭಂ ಪ್ರತಿಪದ್ಯತೆ ॥೫॥

ಒಂದು ಕೇಂದ್ರ ಬಿಂದುವಿನಿಂದ 3 ವೃತ್ತಗಳನ್ನೆಳೆದು 52 ಕೋಷ್ಟಕ (ಮನೆ ಮಾಡಿದರೆ ಅದಕ್ಕೆ ಸುದರ್ಶನ ಚಕ್ರವೆನ್ನುವರು. ಪ್ರಥಮ ವೃತ್ತದಲ್ಲಿ ಎಲ್ಲ ಮನೆಗಳಲ್ಲಿ ಲಗ್ನಾದಿ 12 ರಾಶಿ ಹಾಗೂ ಗ್ರಹಗಳನ್ನ ಸ್ಥಾಪಿಸುವುದು. ಎರಡನೇ ವೃತ್ತದ 12 ಮನೆಗಳಲ್ಲಿ ಚಂದ್ರಾದಿ 12 ರಾಶಿ ವ. ಗ್ರಹ ಹಾಕುವುದು 3 ವೃತ್ತದ

12 ಮನೆಯಲ್ಲಿ ರವಿ(ಸೂರ್ಯ) ರಾಶ್ಯಾದಿ 12 ರಾಶಿ ಗ್ರಹ ಹಾಕುವುದು ಈ ರೀತಿ ಚಕ್ರದಲ್ಲಿ ಒಂದೊಂದು (3 ವೃತ್ತದ) ಭಾವದಲ್ಲಿ 3 ರಾಶಿಗಳು ಬರುತ್ತದೆ.

ಉದಾಹರಣೆ - ದತ್ತ ಕುಂಡಲಿ

## ಸುದರ್ಶನ ಚಕ್ರ ಕುಂಡಲಿ



ಬು-ಅಸ್ತ ಶನಿ- ವಕ್ರಿ

## ಈ ಚಕ್ರ ವಿಶೇಷತೆ

ರವೀಂದು ತನುಭಿರ್ಯಕ್ತೋ ಲಗ್ನಭಾವೊತ್ರ ಜಾಯತೆ।
ಲಗ್ನಂ ತಂ ಪರಿಕಲ್ಪ್ಯೈವಂ ಭಾವಾನನ್ಯಾಂಶ್ಚ ಸಗ್ರಹಾನ್ ॥೬॥

ಗ್ರಹಸ್ಥಿತಿತವಶಾತ್ ತೀಷಾಂ ಭಾವನಾವರಾದಿಶೇತ್ ಫಲಮ್।
ತನೌ ಶುಭೋ ರವಿಃ ಪ್ರೋಕ್ತೋಶುಭೋನ್ಯತ್ರ ಪ್ರಕೀರ್ತಿ ತಃ ॥೭॥

ಪಾಪಸ್ತುಂಗ ಸ್ವರಾಶಿಸ್ಥೋಪ್ಯಶುಭೋ ನೈವಸ ಮ್ಮತಃ।
ಇತ್ಥಂ ವಿಲೋಕ್ಯ ಭಾವಾನಾಂ ಶುಭಾಶುಭ ಫಲಂ ದಿಶೇತ್ ॥೮॥

ಈ ಚಕ್ರದಲ್ಲಿ ಲಗ್ನ ಚಂದ್ರ, ಸೂರ್ಯ(ಶರೀರ, ಮನ ಆತ್ಮ)ಯುಕ್ತವಾಗಿದೆ. ಲಗ್ನ ಭಾವವನ್ನು ಲಗ್ನವೆಂದು ಗ್ರಹಿಸಿ ಕ್ರಮಶಃ ಎಲ್ಲಿ ಭಾವ ಹಾಗೂ ಗ್ರಹಗಳ ವಿನ್ಯಾಸ ಮಾಡಲಾಗಿದೆ. ಗ್ರಹ ಸ್ಥಿತವಶದಲ್ಲಿ ಭಾವಗಳ ಫಲಾದೇಶ ಮಾಡುವುದು.

ಲಗ್ನದಲ್ಲಿ ಸೂರ್ಯ ಶುಭಪ್ರದ ಅನ್ಯತ್ರ ಅಶುಭಪ್ರದನಾಗಿದ್ದು, ಪಾಪ ಗ್ರಹಗಳು ಉಚ್ಚ ಅಥವಾ ಸ್ವರಾಶಿಸ್ಥವಾಗಿದ್ದರೆ ಅಶುಭವಾಗಲಾರವು. ಶುಭಪ್ರದರೆ ಆಗುತ್ತಾರೆ. ಈ ಪ್ರಕಾರ ಗ್ರಹಗಳ ಶುಭಾಶುಭತ್ವ ನೋಡಿ ಫಲ ಹೇಳುವುದು. ಇಲ್ಲಿ ಆತ್ಮ ಮನಸ್ಸು ಶರೀರ ಏಕತ್ರ ಸಂಭವಿಸುವುದರಿಂದ ತೀವ್ರ ಶುಭ.

ಭಾವೋಧಿಪಶುಭೈರ್ಯುಕ್ತೋ ದೃಷ್ಟೋ ವಾ ವರ್ಧತೆ ಹಿಸಃ।
ಪಾಪಗ್ರಹೆಕ್ಷಿತಯು ತೋ ವಶ್ಯಂ ಹೀನಃ ಪ್ರಜಾಯತೆ ॥೯॥

ಯಾವ ಭಾವ ತನ್ನ ಅಧಿಪ ಅಥವಾ ಶುಭಗ್ರಹದಿಂದ ಯುತ ಅಥವಾ ದೃಷ್ಟವಾಗಿದೆಯೋ ಅದು ಅವಶ್ಯ ಪ್ರಬಲವಾಗಿರುತ್ತದೆ. ಅದೇ ಯಾವುದರಲ್ಲಿ ಪಾಪ ಗ್ರಹದ ಯೋಗ ಅಥವಾ ದೃಷ್ಟಿತವಾದರೆ ಆ ಭಾವ ದುರ್ಬಲವಾಗುತ್ತದೆ.

ಸಖೇಟ ಭಾವಸ್ಯ ಫಲಂ ಯುಕ್ತಬೇಟಿಸಮಂ ಸ್ಮೃತಮ್।
ಖೇಟದೃಷ್ಟಿಸಮಂ ಪ್ರೋಕ್ತಂ ನಿರ್ಗ್ರಹಸ್ಯ ತು ತನ್ಮನೆ ॥೧೦॥

ಶುಭಾಶುಭಂ ಫಲಂ ವಾಚ್ಯಂ ಸದಸದ್ ಗ್ರಹಯೋಗ ತಃ।
ಶುಭ ಗ್ರಹೆಧಿಕೆ ಸೌಮ್ಯಮಶುಭೆಂ ತದ್ವಿ ಪರ್ಯಯೋ ॥೧೧॥

ತತ್ರ ದೃಷ್ಟಿ ಗ್ರಹಾಣಾಂ ವೈಯುತಿರಿ ಚಾಲೋಕ್ಯ ನಿರ್ದೇಶೇತ್।
ತಾರತಮ್ಯವಶೆನೈವ ಮುನೆ! ಭಾವ ಫಲಂ ಸದಾ ॥೧೨॥

ಯೋಗದೃಷ್ಟಿವಿಹಿನೋ ಯೋ ಭಾವಃ ಕಶ್ಚಿದ್ ಭವೆದ್ ದ್ವಿಜ।
ತಸ್ಯಾಧಿಪವಶಾದೇವ ಫಲಂ ವಾಚ್ಯಂ ವಿಪಶ್ಚಿತಾ ॥೧೩॥

ಸಮಗ್ರ ಭಾವಗಳ ಫಲವನ್ನು ಸ್ಥಿತ ಗ್ರಹಾನುಸಾರ ತಿಳಿಯುವುದು. ಒಂದು ವೇಳೆ ಭಾಗ ನಿರ್ಗ್ರಹವಾದರೆ ಯಾವ ಗ್ರಹದ ದೃಷ್ಟಿಯಿದೆಯೋ ಆ ಗ್ರಹಾನುಸಾರ ಫಲ ಹೇಳುವುದು. ಅನೇಕ ಗ್ರಹ ಯುತಿ ದೃಷ್ಟಿಯಲ್ಲಿ ಪ್ರಬಲ ಗ್ರಹದ ಅನುಸಾರ ಫಲ ತಿಳಿಯುವಿರಿ. ಯಾವ ಭಾವದಲ್ಲಿ ಶುಭ ಗ್ರಹದ ಸಂಯೋಗವಿದೆಯೋ ಆ ಭಾವದ ಫಲ ಶುಭದ ಹಾಗೂ ಕೇವಲ ಪಾಪಗ್ರಹದ ಯೋಗ ಆಧಾರದಲ್ಲಿದ್ದರೆ ಅಶುಭ ಫಲ (ತಾರಕ ಮಾರಕಗಳನ್ನ ಗ್ರಹಿಸುವುದು) ಯಾವ ಭಾವದ ಮೇಲೆ ಶುಭಗ್ರಹದ (ತಾರಕ) ದೃಷ್ಟಿ ಇದ್ದರೆ ಆ ಭಾವ ಫಲ ಶುಭ ಅಶುಭ ಗ್ರಹ (ತಾರಕವೋ ಮಾರಕವೋ) ದೃಷ್ಟಿಯಿದ್ದರೆ ಆ ಭಾವದ ಫಲ ಅಶುಭವೆ ಶುಭಾಶುಭ ಎರಡೂ ದೃಷ್ಟಿಯೋಗವಿದ್ದರೆ ಆಭಾವ ಫಲ ಮಿತ್ರ ಅಲ್ಲಿಯೂ ಶುಭಾಕ್ಯ (ಬಲವಂತ) ವಾದರೆ ಶುಭ ಅಶುನ್ನಧಿಕ್ಯ ಅಶುಭ-ಫಲದಾಯಕ.

ಎರಡೂ ಶುಭ ಅಶುಭ ಸಾಮ್ಯಾವಸ್ಥಾದಲ್ಲಿ ಪ್ರಬಲ ಗ್ರಹದ ಅನುಸಾರ ಫಲ ನಿರ್ದೇಶಿಸುವುದು. ಸಮತೆಯಿದ್ದರೆ ಮಿಶ್ರಫಲ ದೃಷ್ಟಿಯಲ್ಲಿಯೂ ಅಧಿಕ ದೃಷ್ಟಿ ಗ್ರಹದಂತೆ ಫಲ (ಗಣಿತ ದೃಷ್ಟಿ) ಯೋಗ ದೃಷ್ಟಿವಿಹೀನ ಭಾವವಿದ್ದರೆ ಆ ಭಾಗದ ಸ್ವಾಲುಯ ಶುಭ ಶುಭದ ಮೇಲಿಂದ ಫಲ ಹೇಳುವುದು.

**ಅಸದ್ ಗ್ರಹೋಪಿ ಸದ್‌ವರ್ಗವಧಿಕ್ಯೆ ಸತ್ಫಲದಃ ಸ್ಮೃತಃ।**
**ಸದ್ ಗ್ರಹೋ ವಾಪ್ಯಸದ್‌ಗಾರ್ಧಿಕ್ಯೆ ಶುಭ ಫಲ ಪ್ರದಃ ॥೧೪॥**

**ವರ್ಗಾ ಅಸತ್ ಶತ್ರುನೀಚ ಸ್ಥಿತಾನಾಮಶುಭಾ ಮತಾಃ।**
**ಸ್ವಗೇಹ ತುಂಗಸ ತ್ವೆಟ ವರ್ಗಾಃ ಶುಭಫಲ ಪ್ರದಾಃ ॥೧೫॥**

ಪಾಪಗ್ರಹಗಳು ಶುಭ ವರ್ಗ (ಲಗ್ನ ಹೊರಾ ದ್ರೇಷ್ಕಾಣದಿ) ಅಧಿಕತೆಯಲ್ಲಿ ಶುಭಫಲದವಾಗುತ್ತವೆ ಹಾಗೂ ಶಭುಗ್ರಹ ಪಾಪ ವರ್ಗದಲ್ಲಿ (ಅಧಿಕತೆಯಿಂದ ಅಶುಭ ಫಲಪ್ರದವೇ ಆಗುತ್ತದೆ. ಪಾಪಗ್ರಹ ಶತ್ರುರಾಶಿ ಹಾಗೂ ನೀಚದಲ್ಲಿ ಸ್ಥಿತ ಗ್ರಹದ ವರ್ಗ ಅಶುಭ ಹಾಗೂ ಸ್ವಗ್ರಹ ಸ್ವೋಚ್ಚದಲ್ಲಿ ಸ್ಥಿತ ಗ್ರಹ ಶುಭಪ್ರದ (ಶುಭ ವರ್ಗದಲ್ಲಿದ್ದರೆ ಮಾತ್ರ)

**ಇತ್ಥಂ ಸಮಸ್ತಭಾವಾನಾಂ ಖೇಟಾನಾಮಪಿ ತತ್ವತಃ।**
**ವಿಮೃಶ್ಯಸದಸತ್ವಂ ತು ತತಃ ಫಲಮುದೀರಯೇತ್।**

ಈ ಪ್ರಕಾರ ಎಲ್ಲ ಗ್ರಹ ಹಾಗೂ ಭಾವಗಳ ಶುಭತ್ವ ಅಶುಭತ್ವ ವಿಮರ್ಶೆ ಮಾಡಿದ ನಂತರವೇ ಫಲಾದೇಶ ಹೇಳುವುದು.

ಉದಾಹರಿತ ಕುಂಡಲಿಯ ಸ. ಭಾವ ಸ್ಪಷ್ಟಗ್ರಹಗಳು

| ಗ್ರಹ | ರವಿ | ಚಂದ್ರ | ಮಂ | ಬುಧ | ಗುರು | ಶುಕ್ರ | ಶನಿ | ರಾ | ಕೆ | ಹ | ನೆ |
|---|---|---|---|---|---|---|---|---|---|---|---|
| ರಾಶಿ | 6 | 6 | 9 | 6 | 9 | 5 | 11 | 7 | 1 | 0 | 4 |
| ಅಂಶ | 17 | 24 | 4 | 19 | 1 | 26 | 2 | 14 | 14 | 18 | 26 |
| ಕಲಾ | 35 | 0 | 44 | 01 | 44 | 31 | 47 | 18 | 18 | 8 | 05 |
| ಅವಸ್ಥೆ | | | | ಅಸ್ತ | | | ಉದಬವಕ್ರ | | | | |

| ಗ್ರಹ | ಗುಳಿಕ | ಪ್ರಾಣಪದ |
|---|---|---|
| ರಾ | 5 | 3 |
| ಅಂ | 11 | 21 |
| ಕ | 36 | 31 |

## ಸ್ಪಷ್ಟಭಾವ

| ಲಗ್ನ ಭಾವ | 1 | 2 | 3 | 4 | 5 | 6 | 7 | 8 | 9 | 10 | !1 | 12 |
|---|---|---|---|---|---|---|---|---|---|---|---|---|
| ರಾ | 3 | 4 | 5 | 6 | 7 | 8 | 9 | 10 | 11 | 0 | 1 | 2 |
| ಅಂ | 2 | 2 | 2 | 2 | 2 | 2 | 2 | 2 | 2 | 2 | 2 | 2 |
| ಕ | 31 | 34 | 38 | 35 | 33 | 32 | 31 | 34 | 38 | 35 | 33 | 38 |
| ವಿ | 47 | 58 | 9 | 22 | 55 | 18 | 47 | 58 | 9 | 22 | 55 | 18 |

ಮುಖ್ಯವಾಗಿ ಗ್ರಹಗಳ ಹಾಗೂ ಭಾವಗಳ ಶುಭಾ ಫಲವನ್ನು ಸಪ್ತವರ್ಗಗಳ ಮೇಲೆ ತೆಗೆದು ನಂತರ ಫಲಾದೇಶ ಮಾಡುವುದು. ಸಪ್ತವರ್ಗ ಲಗ್ನ, ಹೋರಾ ದ್ರೇಷ್ಕಾಣ, ನವಾಂಶ ದ್ವಾದಶಾಂಶ ತ್ರಿಶಾಂಶ ಸಪ್ತಮಾಂಶ ಈ ಸಪ್ತ ಅಂಶಗಳ ಮೇಲಿಂದ ತೆಗೆದು ನಂತರ ಫಲ ನಿರ್ದೇಶಿಸುವುದು (ಪ್ರಚಲಿತ ಸಪ್ತವರ್ಗದಂತೆ)

## ಗ್ರಹಗಳ ಸಪ್ತವರ್ಗ ಚಕ್ರ (9 ಗ್ರಹಗಳು ಮಾತ್ರ)

| ಗ್ರಹ | ರ | ಚ | ಮ | ಬು | ಗು | ಶು | ಶ | ರಾ | ಕೆ |
|---|---|---|---|---|---|---|---|---|---|
| ಲಗ್ನ | ಶು | ಶು | ಶ | ಶು | ಶ | ಬು | ಗು | ಮ | ಶು |
| ಹೋರಾ | ಚ | ಚ | ಚ | ಚ | ಚ | ರ | ಚ | ಚ | ಚಂ |
| ದ್ರೋಪ್ಕಾಣ | ಶ | ಬು | ಶ | ಶ | ಶ | ಶು | ಗು | ಗು | ಬು |
| ನವಾಂಶ | ಗು | ಶು | ಶ | ಗು | ಶ | ರ | ಚ | ಮ | ಶು |
| ದ್ವಾದಾಂಶ | ಶು | ಚ | ಶ | ಶು | ಶ | ಚ | ಮ | ಮ | ಶು |
| ತ್ರಿಶಾಂಶ | ಬು | ಬು | ಶು | ಬು | ಶು | ಮ | ಶು | ಶ | ಶ |
| ಸಪ್ತಮ | ಶ | ಗು | ರ | ಶ | ಚ | ಬು | ಬು | ರ | ಶ |
| ಶುಭಾಂಶ | 5 | 7 | 2 | 5 | 3 | 4 | 6 | 2 | 5 |
| ಅಶುಭ | 2 | 0 | 5 | 2 | 4 | 3 | 1 | 5 | 2 |

## ತನ್ವಾದಿ ಭಾವ ಶುಭ ಶುಭ ಸಪ್ತಮ

| ಭಾವ | 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|---|
| ಲಗ್ನ | ಚ | ರ | ಬು | ಶು | ಮ | ಗು | ಶ | ಶ | ಗು | ಮ | ಶು | ಬು |
| ಹೋ | ಚ | ರ | ಬು | ಶು | ಮ | ಗು | ಶ | ಶ | ಗು | ಮ | ಶು | ಬು |
| ದ್ರೇ | ಶ | ರ | ಬು | ಶು | ಮ | ಗು | ಶ | ಶ | ಗು | ಮ | ಶು | ಬು |
| ನವಾ | ಚ | ರ | ಬು | ಶು | ಮ | ಗು | ಶ | ಶ | ಗು | ಮ | ಶು | ಬು |
| ದ್ವಾದ | ಚ | ರ | ಬು | ಶು | ಮ | ಗು | ಶ | ಶ | ಗು | ಮ | ಶು | ಬು |
| ತ್ರಿಶಾ | ಶು | ಬು | ಚ | ರ | ಬು | ಶು | ಮ | ಗು | ಶ | ಶ | ಗು | ಮ |
| ಸಪ್ತ | ಶ | ಶ | ಗು | ಮ | ಶು | ಬು | ಚ | ರ | ಬು | ಶು | ಮ | ಗು |
| ಶುಭ | 5 | 2 | 7 | 4 | 3 | 6 | 1 | 2 | 5 | 3 | 6 | 6 |
| ಅಶುಭ | 2 | 5 | 0 | 3 | 4 | 1 | 6 | 5 | 2 | 4 | 1 | 1 |

## ಗ್ರಹಗಳ ಶುಭಾಶುಭ ವಿಚಾರ

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶ ಸ್ವಭಾವತಃ ರವಿ ಪಾಪಗ್ರಹ ಈ ಕುಂಡಲಿಯಲ್ಲಿ ನೀಚರಾಶಿಯಲ್ಲಿ ಬೇರೆ ಆದರೆ ಸಪ್ತವರ್ಗದಲ್ಲಿ 5 ಶುಭಾಂಶಗಳಿಂದ ಕೂಡಿ 2 ಮಾತ್ರ ಪಾಪಂಕಗಳಿದ್ದು ಸೂರ್ಯ ಜಾತಕನಿಗೆ ಉದಾಸೀನನೆ (ಮಧ್ಯಮ) ಹೊರತು ಪೂರ್ಣ ಅನಿಷ್ಟ ಗ್ರಹವಲ್ಲ. ಚಂದ್ರ ಈ ಜಾತಕಕ್ಕೆ ಕ್ಷೀಣ ಚಂದ್ರನಿದ್ದು ಪಾಪಗ್ರಹದಲ್ಲಿ ಸೇರಿದ್ರೂ ಮೂಲತಃ ಶುಭ ಗ್ರಹದಲ್ಲಿ ಗಣಿಸಲ್ಪಟ್ಟಿದ್ದು ಇಲ್ಲಿ ಏಳು ಶುಭಾಂಶಗಳೊಂದಿಗೆ ಇದ್ದು (ಲಗ್ನೇಶನಾಗಿದ್ದು ಶುಭದಾಯಕನೆ ಆಗಿದ್ದಾನೆ. ಮಂಗಳ ಸ್ವಯಂ ಕ್ರೂರನಿದ್ದರೂ ರಾಜಸ ಕ್ರೂರತ್ವ (ಕ್ಷತ್ರಿಯ)ವಿದ್ದು ಈ ಲಗ್ನಕ್ಕೆ ಕಾರಕನಾಗಿ ನವವೇಶನೊಂದಿಗೆ ಯುತಿ ಮಾಡಿ ಉಚ್ಚದಲ್ಲಿದ್ದರೂ, ಶುಭಾಂಶಗಳು ಎರಡು ಇರುವುದರಿಂದ ಕ್ರೂರನೆ ಎಂಬುದು ನಿರ್ವಿವಾದ. ಆದರೆ ಮೇಲಿನ ಅಂಶಗಳಿಂದ ಕಾರಕತ್ವಾದಿ ಪರಿಗಣಿಸಿ ಉದಾಸೀನನಾಗಿ ಸ್ವಿಕರಿಸುವುದು ರಾಜಯೋಗ ದಲ್ಲಿ ಹಿಂಜರಿತ ಬುಧ ಸ್ವಯಂ ಶುಭ ಗ್ರಹವಿದ್ದು ಅಸ್ತನಾಗಿರುವುದರಿಂದ (ಸಪ್ತಸಕ ಗ್ರಹವೂ ಹೌದು) ಅಸ್ತನಾಗಿದ್ದರೂ ಯುದ್ದದಲ್ಲಿ ಜಯಿಸಿರುವುದರಿಂದ ರಾಶ್ಯಾಂತರ ಯೋಗದಿಂದ ಸಪ್ತವರ್ಗದಲ್ಲಿ 5 ಶುಭಾಂಶದಿಂದ ಶುಭನೆ ಆಗಿದ್ದಾನೆ. ಬುದ್ಧಿ ಗ್ರಹ (ತೃತೀಯದ ಅಧಿಪನು ಅಹುದು) ಗುರು ಸ್ವಯಂ ಶುಭಗ್ರಹ, ಅಶುಭನಾದರೂ ಕ್ರೂರದಲ್ಲಿ ಧನಯುತಿಯಿಂದ (ಮಕರದಲ್ಲಿ) ನೀಚತ್ವ ಕಳೆದು ರಾಜಯೋಗಕಾರಕನಾದರೂ 3 ಶುಭಾಂಶಗಳಿರುವುದರಿಂದ ರಾಜ ಯೋಗಕ್ಕೆ ಭಂಗತೆ ಬಂದು ಉದಾಸೀನನೆ- ಶುಕ್ರ ಸ್ವಭಾವತಃ ಶುಭಗ್ರಹ ಲಗ್ನಕ್ಕೆ ಕಾರಕನಲ್ಲಿ ಪರಮ

ನೀಚಾಂಶದಲ್ಲಿ ಆದರೆ ಜಾತಕನಿಗೆ ಅಮಾತ್ಯಕಾರಕನಾಗಿ ಪರಿವರ್ತನೆ ಯೋಗ ದೊಂದಿಗೆ 4 ಶುಭಾಂಶದೊಂದಿಗೆ ಆತ್ಮಕಾರಕ ಗ್ರಹ (ಶನಿ) ದೃಷ್ಟಿಯಲ್ಲಿದ್ದು ಶುಭಾಶುಭ ಮಧ್ಯಸ್ಥನಾಗಿದ್ದಾನೆ. ಶನಿ ಜನ್ಮತಃ ಕ್ರೂರ (ತಾಮಸಿ) ಗ್ರಹವಾಗಿದ್ದು, ನವಮದಲ್ಲಿದ್ದು ದೈವದ ವೀಣೆ ಅವನೇ ನುಡಿಸುವವನಾಗಿದ್ದು ಮಿತ್ರನ ಮನೆಯಲ್ಲಿ 6 ಶುಭಾಂಶದಲ್ಲಿ ಶುಭಕಾರಕನಾಗುವನು. ರಾಹು ವೃಶ್ಚಿಕದಲ್ಲಿ 2 ಶುಭಾಂಶ ಗಳೊಂದಿಗೆ ಕ್ರೂರನಾದರೆ ಕೇತು ಮಾತ್ರ ಶುಭ ಗ್ರಹಗಳ ಸಾಲಿನಲ್ಲಿ (5 ಶುಭಾಂಶಗಳೊಂದಿಗೆ) ಬರುವನು.

ಇಲ್ಲಿ ಜಾತಕನಿಗೆ ಚಂದ್ರ, ಶನಿ, ಶುಭದಾಯಕವಾಗಿ ರಾಶ್ಯಾಂತರದಿಂದ ಬುಧ, ಶುಕ್ರರು ರಾಶ್ಯಾಂತದಿಂದ ಶುಭರು ಕೇತು ಶುಭದಾಯಕನಾಗಿ-ರಾಹುವನ್ನುಳಿದು ಉಳಿದ ಗ್ರಹಗಳು ಉದಾಸೀನರಾಗಿ ರಾಹು ಮಾತ್ರ ಕ್ರೂರನಾಗಿದ್ದಾನೆ.

## ಸುದರ್ಶನ ಚಕ್ರಾನುಸಾರ ಭಾವ ವಿಚಾರ

ತನು ಭಾವ 13 ಶುಭಾಂಶ 8 ಅಶುಭಾಂಶಗಳೊಂದಿಗೆ ರ, ಬು, ಚ. ರ ಸಂಯೋಗ ಲಗ್ನಾಧಿಪಲಗ್ನದಲ್ಲಿ ಹಾಗೂ ರವಿ ಲಗ್ನದಲ್ಲಿ, 'ತನೌ ಶುಭೋರವಿಃ ಪ್ರೋಕ್ತೊಶು ಭೋನ್ಯತ್ರಪ್ರಕೀರ್ತಿತಃ'ದ ಅನುಸಾರ ಲಗ್ನಸ್ಥ ಸೂರ್ಯ ಶುಭಪ್ರದ(ನಾಲ್ಕು ವರ್ಗೋತ್ತಮತ್ವದಿಂದ ಲಗ್ನವೂ ಶುಭವಿದ್ದು) ಲಗ್ನೇಶ ರವಿ ಮಿತ್ರ ಬುಧನೊಂದಿಗೆ ಕೂಡಿರುವುದರಿಂದ ಎಲ್ಲ ಗ್ರಹಗಳು ಶುಭತ್ವಕಾರಣವೆ ಆದ್ದರಿಂದ ಶಾರೀರಿಕ ಸೌಖ್ಯ ವಿನಯಶೀಲತೆಯಲ್ಲಿ ಭಾವಕ್ಕು ಶುಭತ್ವವೆ ವಿರುವದರಿಂದ ಸತ್ಯಕಾರ್ಯ ಪ್ರವೃತ್ತಿ ಅಗತ್ಯ ಕಾರ್ಯದಲ್ಲಿ ಎಂದು ತಲೆ ಬಾಗದ ಕ್ಷತ್ರಿಯ ಹಠ ಪ್ರವೃತ್ತಿ ಕಾಣುತ್ತದೆ. ಆದರೆ ಮೃದು ಹೃದಯದಿಂದ ತೀವ್ರ ಕರಗುವ ಸ್ವಭಾವ.

ಧನಭಾವದಲ್ಲಿ ರಾಹು ಏಕಾಕಿ ಕ್ರೂರ ಗ್ರಹವಿದ್ದು, ಧನಾಭಾವ ಕುಟುಂಬ ಸದಸ್ಯರೊಡನೆ (ದೂರದ) ವೈಪರೀತ್ಯ ಧನದ ಬಗ್ಗೆ ಚಿಂತೆ ತೋರಿಸುತ್ತದೆ. ಒಮ್ಮೆ ಶುಭವರ್ಗಾಂಕ 8 ಹಾಗೂ 11 ಇರುವುದರಿಂದ ಆರ್ಥಿಕ ಸ್ಥಿತಿ ಸಾಮಾನ್ಯ.

ತೃತೀಯದಲ್ಲಿ ಅಮಾತ್ಯಕಾರಕ ಗ್ರಹ ಬುಧದ ಶುಕ್ರ ಹಾಗೂ ಆತ್ಮಕಾರಕ 6 ಶುಭಾಂಶದ ಶನಿಯ ದೃಷ್ಟಿಯಿಂದ ಭ್ರಾತೃಸೌಖ್ಯವಿದೆ. ಸಾಹಸ ಕಾರ್ಯದಲ್ಲಿ ಮಾತ್ರ ಸ್ವಲ್ಪ ಹಿಂಜರಿಕೆ. ಲೇಖನಾದಿ ಕಾರ್ಯ ಉತ್ತಮ (ರಾಶ್ಯಾಂತರ) ಭೃತ್ಯಾದಿಸುಖ ಅಲ್ಪ.

ಸುಖ ಭಾವದಲ್ಲಿ ರವಿ, ಬುಧ ಹಾಗೂ ಚಂದ್ರ, ಗುರು ಮಂಗಳ ಬಲಿಷ್ಠ ಐದು ಗ್ರಹಗಳ ಸಂಯೋಜನೆಯಿಂದ ಹಾಗೂ ಲಗ್ನಾಧಿಪ ಚಂದ್ರನೊಂದಿಗಿರುವುದರಿಂದ ಭಾವಪೂರ್ಣ ಬಲಿಷ್ಠವಾದರೂ ಪಾಪಾಂಕ ಹೆಚ್ಚಿರುವುದರಿಂದ ಸುಖ, ಸಂಪನ್ನ

ಮಾತ್ರ ಸುಖ ಭೂಮಿ ಮನೆ ಆದಿಯಲ್ಲಿ ಸ್ವಲ್ಪ ತೊಂದರೆ ಸ್ವಂತ ವಾಹನ ಸೌಖ್ಯವೂ ಅಷ್ಟಕ್ಕಷ್ಟೆ. ಸಂಪನ್ನತೆಯಿಂದ ಸುಖ, ವೃದ್ಧಾಪ್ಯ ಸುಖಕಾಲ.

ಪುತ್ರ ವಿದ್ಯಾಭಾವ ರಾಹುವಿನಿಂದ ಕೂಡಿದ್ದು ಕೇತುವಿನ ವಿನಃ ಯಾವ ಗ್ರಹದೃಷ್ಟಿಯಿರದ್ದರಿಂದ ಭಾವವೂ ಕೇವಲ ಕೇವಲ 3 ಶುಭಾಂಕ ರಾಹೂ ಎರಡು ಶುಭಾಂಕ ಕೂಡಿದ್ದು ಆದರೆ ರಾಶಿ, ಸೂರ್ಯ, ಎಲ್ಲಿ ಭಾವ ಗಣಿಸಿದಾ 15 ಶುಭಾಂಕ 6 ಅಶುಭಾಂಕ ಕೂಡಿರುವುದರಿಂದ ವಿದ್ಯೆಗೆ ಪ್ರಾರಂಭದಲ್ಲಿ ಅನೇಕ ಎಡರೆರೂ ತೊಡರಿದ್ದರೂ ವಿದ್ಯೆ ಪೂರ್ಣವಿದೆ. ಆದರೆ ಕಲಿತ ವಿದ್ಯೆಗೂ ಉದ್ಯೋಗಕ್ಕೂ ಯಾವ ಸಂಬಂಧವಿಲ್ಲ. ಅದರಿಂದ ಹಣ ಲಾಭವೂ ಇಲ್ಲ. 30ರ ನಂತರ ಮಕ್ಕಳ ಯೋಗ ಸುತಕಾರಕ ಗ್ರಹ ಮಂಗಳನೊಡನೆ ಯುತಿ ಮಾಡಿರುವುದರಿಂದ ಶುಭವೇ ಸಗ್ರಹ ಭಾವವಾದ್ದರಿಂದ ಪ್ರಬಲವೆ.

ಪ್ರಭಾವ ಯಾವ ಗ್ರಹಗಳಲ್ಲಿ-ಆದರೆ ರಾಶಿ ಹಾಗೂ ರವಿಯಿಂದ ಅಂದರೆ ಸುದರ್ಶನ ಚಕ್ರದಲ್ಲಿ ಆತ್ಮಕಾರಕ ಶನಿ ಷಷ್ಠದಲ್ಲಿ 6 ಶುಭಾಂಕದೊಂದಿಗೆ ಷಷ್ಠಭಾವವೂ ಶುಭಾಂಕಯುತವಾದ್ದರಿಂದ ಶತ್ರು ಭಯವಿಲ್ಲ. ಶತ್ರುಗಳ ಮೇಲೆ ಸದಾ ವಿಜಯ-ಶತ್ರುಗಳು ಆಟ ನಡೆಯದೆ ವಿನಾಶರಾಗುವರು. ಯಾವುದೆ ಮಾರ್ಗದಿಂದ ಶತ್ರುಗಳನ್ನು ಹಿಡಿತಕ್ಕೆ ತರುವನು ರೋಗ ಭಯವೂ ಅಲ್ಲದೆ ತಾನು ಸುಖ ಪೂರ್ಣ.

ಜಾಯಾ ಭಾವದಲ್ಲಿ- ಕಾರಕ ಗ್ರಹಗಳಾದ ಗುರು, ಮಂಗಳರು ರಾಜಯೋಗ ಕಾರಕರಾಗಿದ್ದರೂ ಅಶುಭಯೋಗವೆಂದರೆ ಅಶುಭಾಂಕ ಹೆಚ್ಚಿದ್ದು, ಮಧ್ಯಮ ಫಲವೆ- ಗುರುವಿನ ನೀಚತ್ವವೂ ಭಂಗವಾಗಿ ಉದಾಸೀನ ತಡವಾಗಿ ಮದುವೆ, ಆದರೂ ಸಾಂಸಾರಿಕದಲ್ಲಿ ದ್ವಿತೀಯ ಚತುರ್ಥಕಾರಕನಾಗಿ ಭಾಗ್ಯದಲ್ಲಿರುವುದು. ಒಂದು ಶುಭಯೋಗನೆ ಆದರೂ ಮಧ್ಯಮ ಕ್ಷತ್ರಿಯ ತಾಮಸಿ ಗ್ರಹ ಉಚ್ಚದಲ್ಲಿ (ಮಂಗಳ)ನಿರುವುದರಿಂದ ಯೋಗಕಾರಕನು ಆದ್ದರಿಂದ ತನ್ನದೆ ಹಠ ನಡೆಯಬೇಕೆಂಬ ಸ್ವಭಾವ.

ಅಷ್ಟಮ ಭಾವದಲ್ಲಿ ಕೇತು ಗ್ರಹವಿದ್ದು ಅದು 5 ಶುಭ ಬಂಧುಸಹಿತ ನಾಗಿರುವುದು ಪುರಾತತ್ವ ಭಾವದಿಂದ ಲಾಭ, ಪೂರ್ಣಾಯು- ಜೀವನದಲ್ಲಿ ಹಿಡಿದ ಗುರಿ ಮುಟ್ಟದ ಮನೇಲಿ ಭೂಮಿಕೆ. ಜಯಾಪಜಯಗಳೆರಡು ಸಾಧ್ಯ.

ಭಾಗ್ಯಭಾವ-ಮಿತ್ರ ಗ್ರಹದಲ್ಲಿ ಆತ್ಮಕಾರಕ ಶನಿ. ಭಾಗ್ಯದಲ್ಲಿ ಶುಭಾಂಕಗ ಳೊಂದಿಗಿರುವುದರಿಂದ ಆತ್ಮದ ಪರಿಪೂರ್ಣ ಬೆಳವಣಿಗೆ. ವಿದ್ಯೆಯ ತಪಸ್ಸು ಈ ಭಾವದ ಮೇಲೆ ಅಮಾತ್ಯಕಾರಕ ಶುಕ್ರನ ಪೂರ್ಣದೃಷ್ಟಿ ಹೀಗಾಗಿ ಭಾಗ್ಯವಂತನೆನಿಸಿ

ಕೊಳ್ಳುವನು.ಈ ಜಾತಕನ ಬಗ್ಗೆ ಜನರಲ್ಲಿ ಒಂದು ರೀತಿ ಭಯ, ಭಕ್ತಿ-ಪೂರ್ವ ಜನ್ಮ ಕರ್ಮ ವಿಶೇಷವಾದರೂ ಭಾಗ್ಯಾಧಿಪ ಗುರು ಸಪ್ತಮದಲ್ಲಿರುವುದರಿಂದ ನೀತಿ ವಂತನಾದರೂ ಬಹಳ ಕಷ್ಟದಿಂದ ಯಶಸ್ಸು.

ಕರ್ಮಭಾವ ಗ್ರಹ ಶೂನ್ಯವಾದರೂ ರವಿ, ಬುಧ, ಚಂದ್ರ, ಗುರು, ಮಂಗಳರ ದೃಷ್ಟಿ ಪ್ರಭಾವದಿಂದ ಪೂರ್ಣ ಬಲಿ ಯಾವುದೇ ಕೆಲಸದಲ್ಲಿ ನಿಷ್ಠತೆ, ಸನ್ಮಾನಾದಿಗಳು ನೌಕರಿಯಲ್ಲಿ ಸಾವಕಾಶ ಬಡ್ತಿ ಆದಿಗಳು ಪಿತೃ, ಮಾತೃ ಸೌಖ್ಯ, ಪಿತೃವಿನಲ್ಲಿ ಭಕ್ತಿ.

ಲಾಭಭಾವದಲ್ಲಿ ಕೇತು ಪೂರ್ಣ ಶುಭ ಯುಕ್ತನಾದ ರಾಹುವಿನ ದೃಷ್ಟಿಯಿಂದ ಲಾಭದ ಸಮಯದಲ್ಲಿ ಅಡಚಣೆ. ಆದರೆ ಬರುವ ಲಾಭ ಬರುತ್ತದೆ. ಇಲ್ಲಿ ಯಾವುದೇ ಆಯವಿದ್ದರೂ ಸದ್ ವೃತ್ತಿಯಿಂದಲೇ ವಿನಃ ಅಸದ್ ವೃತ್ತಿಯಿಂದ 1 ಪೈಸೆ ಲಾಭವಿಲ್ಲ.

ವ್ಯಯದಲ್ಲಿ ಅಮಾತ್ಯಕಾರಕ ಶುಕ್ರ 4 ಶುಭಾಂಕದೊಂದಿಗೆ ಭಾವವೂ ಪೂರ್ಣ ಬಲಿಷ್ಠವಾದ್ದರಿಂದ ವ್ಯಯ ಸತ್ಕಾರ್ಯದಲ್ಲಿಯೇ ಆಗುತ್ತದೆ. ಮೃತ್ಯುವಿನ ನಂತರ ವಿಶೇಷ ಪ್ರಸಿದ್ಧಿ.

## ಮೈತ್ರೇಯ ಉವಾಚ:

ಚಕ್ರಾತ್ ಸುದರ್ಶನಾದೇವ ಫಲಂ ಚೆಜ್ಜನ್ಮಿನಾಂ ಭವೇತ್ ।
ಪ್ರಾಚೀನೈಋಷಿಭಿರ್ಲಗ್ನವಶಾತ್ ತದುದಿತಂ ಕಥಮ್ ॥೧೭॥

ಸಂಶಯೋ ಮಮ ಚ ಮಹಾನಿತಿ ನಾನ್ಯೋಪನೇಷ್ಯತಿ ।
ತ್ವಮೇವ ಮುನಿಶಾರ್ದೂಲ । ಕೃಪಾಯಭೇತ್ತು ಮಹರ್ಷೆ ॥೧೮॥

## ಮೈತ್ರೇಯರು ಕೇಳಿದರು—

ಹೇ ಮುನಿ ಶ್ರೇಷ್ಠನೆ,

ಒಂದು ವೇಳೆ ಸುದರ್ಶನ ಚಕ್ರ ದ್ವಾರದಿಂದ ಸಮಸ್ತ ಜಾತಕದ ಫಲಾ ದೇಶ ಮಾಡುವಂತಿದ್ದರೆ ಪ್ರಾಚೀನ ಮುನಿಗಳು ಲಗ್ನವನ್ನೇಕೆ ಹೇಳಿದರು. ಲಗ್ನ ದ್ವಾರ ಫಲಾದೇಶವನ್ನೇಕೆ ಮಾಡಿದರು? ಈ ಮಹಾಸಂಶಯದಿಂದ ನನಗೆ ಮುಕ್ತಿಯಿಲ್ಲ. ಅದಕ್ಕಾಗಿ ನನ್ನ ಸಂಶಯ ನಿವಾರಿಸಿರಿ.

**ಪರಾಶರ ಉವಾಚ:**

ಲಗ್ನೇತರಸ್ಥಾನಗತೌ ಚಂದ್ರಾರ್ಕೌ ಸ್ತಸ್ತು ಚೇತ್ ಪೃಥಕ್ ।
ಚಕ್ರಾತ್ ಸುದರ್ಶನಾ ತರ್ಹಿ ಫಲಾದೇಶಃ ಸುಸಮ್ಮತಃ ॥೧೯॥

ದ್ವಾವೇಕತ್ರ ತ್ರಯೋವಾಪಿ ಯದಿ ತರ್ಹಿ ತನೋರ್ವಶಾತ್।
ಗ್ರಹಭಾವ ಸುವಿನ್ಯಾಸ ಪೂರ್ವಕಂ ಫಲಮಾದಿಶೇತ್ ॥೨೦॥

ಲಗ್ನಾತರಿಕ್ತ ಸ್ಥಾನದಲ್ಲಿ ಸೂರ್ಯ, ಚಂದ್ರ ಬೇರೆ ಬೇರೆಯಾಗಿದ್ದರೆ ಈ ಸುದರ್ಶನ ಚಕ್ರದಿಂದ ಫಲಾದೇಶ ಸಮ್ಮತವಿದೆ. ಈ ಮೂರು (ರವಿ-ಆತ್ಮ, ಚಂದ್ರ-ಮನಸ್ಸು, ಲಗ್ನ-ದೇಹ)ರಲ್ಲಿ ಎರಡು ಅಥವಾ ಮೂರು ಏಕತ್ರವಾಗಿದ್ದರೆ ಲಗ್ನ ವಶ ಗ್ರಹ ಹಾಗೂ ಭಾವ ವಿನ್ಯಾಸದಿಂದ ಫಲ ಹೇಳುವುದು.

ಇಲ್ಲಿ (ಆತ್ಮ, ಶರೀರ, ಮನಸ್ಸುಗಳು) ಲಗ್ನ, ಸೂರ್ಯ, ಚಂದ್ರರು ಅತೀ ಅವಶ್ಯ. ಕೇವಲ ಆತ್ಮದಿಂದ (ರವಿ ಪಾಶ್ಚಾತ್ಯರಂತೆ) ಅಥವಾ ಮನಸ್ಸಿನಿಂದ (ಚಂದ್ರ ರಾಶಿ ಪದ್ಧತಿಯಂತೆ) ಅಥವಾ ಶರೀರ (ಲಗ್ನ)ದಂತೆ ಫಲ ಹೇಳಿದಾಗ ಫಲ ಅಪೂರ್ಣವಾಗುತ್ತದೆ. ಕನಿಷ್ಠ ಆತ್ಮ (ರವಿ), ಶರೀರ (ಲಗ್ನ) ಅಥವಾ ಮನಸ್ಸು (ಚಂದ್ರ) ಎರಡಾದರೂ ಸಂಯೋಜನೆಯಲ್ಲಿದ್ದರೆ ಫಲ ಸತ್ಯ ರೂಪವಾಗುತ್ತದೆ.

ಅಥಾಹಂ ವಚ್ಮಿ ಭಾವಾನಾಂ ದಶಾಂತರ ದಶಾದಿತಃ ।
ಚಕ್ರಾತ್ ಸುದರ್ಶನಾದೇವಾಬ್ದಮಾಸಾದಿ ಭವಂ ಫಲಮ್ ॥೨೧॥

ಭಾವಾನಾಂ ತು ದಶಾ ಭುಕ್ತಿ ಪ್ರತ್ಯಂತರ ಮಿತಿಃ ಕ್ರಮಾತ್ ।
ವರ್ಷೈಕ ಮಾಸಾರ್ಧ – ದ್ವಿದಿನಾನಿ ಪರಿಕಲ್ಪಯೇತ್ ॥೨೨॥

ಭಾವಾಧೀಶಾದ ವತ್ಸರೇಷು ಭಾವಾನಾಂ ಕಲ್ಪಯೇತ್ ದಶಾಃ ।
ಭಾವಂ ತಂ ತಂ ವರ್ಷಲಗ್ನಂ ಪ್ರಕಲ್ಪ್ಯ ಪ್ರತಿಭಾವಜಮ್ ॥೨೩॥

ಫಲಂ ತದ್ ವರ್ಷಮದ್ಯೆ ಜಾನಿಯಾದ ಗಣಕೋತ್ತಮಃ ।
ಪ್ರತಿಭಾವಂ ಮಾಸಮೇಕಂ ಮಂತರ ಪ್ರಯಿತಿರ್ಯತಃ ॥೨೪॥

ಮಾಸಲಗ್ನಂ ತುತಂ ಭಾವಮನ್ಯಾನಪಿ ತತಃ ಕ್ರಮಾತ್ ।
ಪ್ರಕಲ್ಪ್ಯ ಭಾವಜನಿತಂ ಫಲಂ ಮಾಸೋದ್ಭವಂ ದಿಶೇತ್ ॥೨೫॥

ಏವಂ ಸಾರ್ಧದ್ವಿಘಸ್ರೈಸ್ತು ಜ್ಞೇಯಂ ಪ್ರತ್ಯಂತರೋದ್‌ಭವಮ್ ।

ಈಗ ನಾನು ಭಾಗಗಳ ದಶಾ ಅಂತರ ದಶಾ ಆದಿಗಳನ್ನು ಈ ಸುದರ್ಶನ

ಚಕ್ರದಿಂದ ವರ್ಷ, ಮಾಸ, ದಿನಗಳ ಫಲ ಹೇಳುತ್ತೇನೆ. ಭಾವಗಳ ಮಹಾದಶಾದಲ್ಲಿ ದಶಾ ಅಂತರ ದಶಾ ಪ್ರತ್ಯಂತರ ದಶಾಗಳ ಮಾನ 1 ವರ್ಷ, 1 ಮಾಸ, $2^1/_2$ ದಿನ (2 ದಿವಸ, 30 ಘಟಿ)ವೆಂದು ಪರಿಗಣಿಸುವುದು. ಭಾವೇಶನಿಂದ ಆರಂಭಿಸಿ ಪ್ರತಿಭಾವ ಗಳಿಗೆ 1 ವರ್ಷವೆಂದು ಪರಿಗಣಿಸಿ – ದಶಾ ಹಾಕಿಕೊಳ್ಳುವುದು. ಆ ಭಾವಕ್ಕೆ ವರ್ಷ, ಲಗ್ನವೆಂದು ಪರಿಗಣಿಸಿ ಮುಂದಿನ ಭಾವಗಳನ್ನು ಧನಾದಿ ಭಾವವೆಂದು ಪರಿಕಲ್ಪಿಸಿ ವರ್ಣಿತ ಫಲ ಕಥನ ವಿಧಿಯಿಂದ ಎಲ್ಲ ಭಾವಗಳ ಫಲ ಆ ವರ್ಷದಲ್ಲಿ ತಿಳಿಯುವುದು. ಪ್ರತಿ ವರ್ಷ ಪ್ರತಿ ಭಾವದಲ್ಲಿ ಒಂದೊಂದು ಸಲ ಅಂತರ ದಶಾದ ಮಾನವಾಗಿರುತ್ತದೆ. ನಂತರ ಅಂತರದಶಾದ ತನುಭಾವದಿಂದ ಆರಂಭ ಮಾಡಿ 12 ರಾಶಿಗಳ ಕ್ರಮಶಃ ಸ್ಥಾಪಿಸುವುದು 1 ಇದರಂತೆ ಲಗ್ನಾದಿ ದ್ವಾದಶ ಭಾವಗಳ ಫಲ ಆ ಮಾಸದ ಫಲವಾಗುತ್ತದೆ. ಇದೇ ಪ್ರಕಾರ ಪ್ರತ್ಯೇಕ ಭಾವದ ಪ್ರತ್ಯಂತರ ದಶಾ 2 ದಿವಸ, 30 ಘಟಿಯಾಗಿರುತ್ತದೆ. ಅಂತರದಶಾ ರಾಶಿ ಲಗ್ನವೆಂದು ಪ್ರತ್ಯಂತರ ದಶಾದಲ್ಲಿ ಅನ್ಯಭಾವಗಳು ಧನಾದಿ ರಾಶಿಗಳೆಂದು ತಿಳಿದು ಆ ಭಾವಗಳ ಫಲ 2 ದಿವಸ, 30 ಘಟಿ ಎಂದು ಪರಿಗಣಿಸುವುದು. ಇದೇ ರೀತಿ 12 $^1/_2$ ದಂಡ ಪ್ರಮಿತ ವಿದಶಾವೆಂದು ತಿಳಿದು ಅದರ ಫಲವನ್ನು ಹೇಳಲು ಬರುವುದು.

## ಫಲ ಕಥನ ಪದ್ಧತಿ

ಕೇಂದ್ರ ಕೋಣಾಷ್ಟಮೇ ಸೌಮ್ಯಾ ಲಗ್ನ ತಸ್ತು ಶುಭಪ್ರದಾಃ ॥೨೬॥

ಯತ್ರ ಭಾವೇಸ್ಯೈಹಿಕೆಯೋವಶ್ಯಂ ತದ್ಭಾವ ಹಾನಿದಃ ।
ಪಾಪಾವಾ ಯತ್ರ ಬಹವಸ್ತ ತದ್ಭಾವ ವಿನಾಶನಮ್ ॥೨೭॥

ತ್ರಿಷಡ್ ಲಾಭಗತೈಃ ಪಾಪೈರ್ವಿರಿಷ್ಫಾರಿಗತೈಃ ಶುಭೈಃ ।
ಶುಭಮೇವಂ ವರ್ಷ ಮಾಸ ಪ್ರಾರಂಭೆ ಭಾವಜಂ ಫಲಮ್ ॥೨೮॥

ಆಯುರ್ದಾಯೋ ದಶಾವೃತ್ಯಾ ಭಾವಾನಾಂ ಕಲ್ಪಯೇದ್ ದಶಾಃ ।

ದಶಾರಂಭ ಕಾಲದಲ್ಲಿ ಲಗ್ನದಿಂದ ಕೇಂದ್ರ (1, 4, 7, 10) ತ್ರಿಕೋನ (5, 9) ಹಾಗೂ ಅಷ್ಟಮದಲ್ಲಿದ್ದ ಗ್ರಹ ಶುಭಪ್ರದವಾಗುತ್ತದೆ., ರಾಹು ಯಾವ ಭಾವದಲ್ಲಿರುವನೋ ಅಥವಾ ಕೇತು ಯಾವ ಭಾವದಲ್ಲಿರುವನೋ ಆ ಭಾವದ ಹಾನಿಯಾಗುತ್ತದೆ. ಅಧಿಕ ಪಾಪ ಗ್ರಹ ಎಲ್ಲಿವೆಯೋ ಆ ಭಾವದ ವಿನಾಶವೂ ಆಗುತ್ತದೆ. 3, 6, 11ರಲ್ಲಿ ಪಾಪಗ್ರಹ, 6, 12 ಅತಿರಿಕ್ತ ಶುಭಗ್ರಹ – ಶುಭಪ್ರದರು ಇದೇ ಪ್ರಕಾರ ವಷಾರಂಭ ಅಥವಾ ಮಾಸಾರಂಭದಲ್ಲಿ ಭಾವಗಳಿಂದ ಆ ವರ್ಷ ಅಥವಾ ಆ ಮಾಸ ಫಲ ತಿಳಿಯುವುದು. ಆಯುರ್ದಾಯಕೆ ವಿಚಾರದಲ್ಲಿ 10

ಆವೃತ್ತಿಯಿಂದ ಲಗ್ನಾದಿ ದ್ವಾದಶ ಭಾವಗಳ ದಶಾ ಅಥವಾ ಅಂತರ ದಶಾ ವಿಚಾರ ಮಾಡುವುದು. 10 ಆವೃತ್ತಿ 10 × 12 = 120 ವರ್ಷ ದಶಾದ ಪರಮಾಯು ಎಂದೇ ದಶಾ ಗಣಿಸಲ್ಪಡುತ್ತದೆ.

ಉದಾಹರಣೆ – ಪ್ರಥಮ ವರ್ಷದಲ್ಲಿ ಜನ್ಮ ಲಗ್ನವೇ ವರ್ಷ ಲಗ್ನವಾಗುತ್ತದೆ. ಜನ್ಮ ಲಗ್ನವಿದೆ – ಪ್ರಥಮ ದಶಾ ಕರ್ಕಾದ್ದೇ ಆಗುತ್ತದೆ. ಪ್ರಥಮ ವರ್ಷವಿದ್ದಂತೆ ಇರುತ್ತದೆ. ಫಲ ಕಥನ ವಿಧಿಯಂತೆ 3, 6, 11ರಲ್ಲಿ ಅಶುಭ ಗ್ರಹ – 3ರಲ್ಲಿ ಶುಕ್ರ, 6ರಲ್ಲಿ ಶನಿ, 11ರಲ್ಲಿ ಕೇತು ಇದ್ದು ಶುಕ್ರನನ್ನು ಹೊರತುಪಡಿಸಿ ಎಲ್ಲ ಶುಭ ಗ್ರಹಗಳು 6, 12ನ್ನು ಬಿಟ್ಟಿರುವುದರಿಂದ ಲಗ್ನದಲ್ಲಿ ಚಂದ್ರ, ರವಿ, ಬುಧರಿರುವುದರಿಂದ ಶಾರೀರಿಕ ಸೌಖ್ಯ. ಶುಕ್ರ ತ್ರಿಯದಲ್ಲಿರುವುದರಿಂದ ಚಿಕ್ಕ-ಮಧ್ಯ ವಯದಲ್ಲಿ ಸಾಮಾನ್ಯ ಧನ ಭಾವದಲ್ಲಿ ರಾಹು – ಪಂಚಮದಲ್ಲಿಯೂ ರಾಹು – ಧನ ಸ್ಥಿತಿ ಅತಿ ಸಾಮಾನ್ಯ – ಧನಾಧಿಪ ಲಗ್ನದಲ್ಲಿ – ಸಾಮಾನ್ಯ ತಾಪತ್ರಯ ವಿಲ್ಲ. ಪಾಪ ಗ್ರಹವ್ಯದಲ್ಲಿ – ವ್ಯಯ ಮಧ್ಯಮ ರೂಪದಲ್ಲಿ ಮಂಗಳ, ಗುರು, ಬುಧ, ಚಂದ್ರ. ಚತುರ್ಥದಲ್ಲಿ – ಮಾತೃ ಸೌಖ್ಯ, ಕೌಟುಂಬಿಕ ಸೌಖ್ಯ, ಮನೆಮಾರು ಸಂಭವ. ಏಕಾದಶದಲ್ಲಿ ಕೇತು ಶುಭಪ್ರದವೆ. ಈ ರೀತಿ ಫಲಾದೇಶ ಹೇಳುವುದು.

ಎರಡನೇ ವರ್ಷದಲ್ಲಿ ಸಿಂಹವನ್ನು ಲಗ್ನವೆಂದು ಪರಿಗಣಿಸಿ - ಅದರಿಂದ ಗ್ರಹಾದಿ ನೋಡಿ ಹೇಳುವುದು. 12 ವರ್ಷದವರೆಗೆ ಇದೇ ರೀತಿ ನಂತರ ಪ್ರತ್ಯಾವರ್ತನೆ.

ಅಂತರದಶಾದಲ್ಲಿ ಪ್ರಥಮ ವರ್ಷ ಪ್ರಥಮ ತಿಂಗಳ ಕರ್ಕ ದಶಾ ಕರ್ಕ ಅಂತರದಶಾವೇ ಆಗುವುದರಿಂದ ಎರಡನೇ ಮಾಸದಲ್ಲಿ ವೃಶ್ಚಿಕ ದಶಾ, 3ನೇ ಮಾಸ ಕನ್ಯಾ ಅಂತರದಶಾ, ಎರಡನೇ ಮಾಸ – ಸಿಂಹವನ್ನೇ ಲಗ್ನವೆಂದು ಪರಿಗಣಿಸಿ ಫಲ ನೋಡುವುದು. ಎರಡನೇ ಮಾಸದಲ್ಲಿ ಸಿಂಹದಲ್ಲಿ ರಾಹು ಅತಿ ಸಾಮಾನ್ಯ – ದ್ವಿತೀಯದಲ್ಲಿ (ಮಾಸ) ಅಷ್ಟಮದಲ್ಲಿ ಶನಿ. ಶುಭ ಅಂಕಯುಕ್ತ ಗುರುವಿನ ಮನೆ ಯಲ್ಲಿರುವುದರಿಂದ ಸಾಮಾನ್ಯ ಶುಭ – ಕೇಂದ್ರಕೋನದಲ್ಲಿಯ ಶುಭ ಗ್ರಹಗಳು ಶುಭದರೇ.

ಇನ್ನು ಪ್ರತ್ಯಂತರ ದಶಾ ಪ್ರಥಮ ಮಾಸದಲ್ಲಿ ಮೊದಲು 2 ದಿವಸ, 30 ಘಟಿ ಕರ್ಕವೇ ಶುಭಪ್ರದ. 2 ದಿವಸ, 30 ಘಟಿಯಿಂದ 5 ದಿವಸದವರೆಗೆ ಸಿಂಹ ಈ ರೀತಿ ಪ್ರತ್ಯಂತರ ದಶಾ ವಿವೇಚನೆ ಮಾಡುವುದು.

ಇಲ್ಲಿ ಮಾಸವನ್ನು ಸೌರಮಾಸವೆಂದೇ ಗಣಿಸುವುದು. ಚಾಂದ್ರಮಾನದಲ್ಲಿ ಅಂದರೆ ಜನ್ಮಕಾಲೀನ ಸೂರ್ಯ ಸ್ವಷ್ಟದಿಂದ ಅದೇ ಮುಂದಿನ ಸ್ವಷ್ಟದವರೆಗೆ ಅಂದರೆ

ಜನ್ಮಕಾಲದಲ್ಲಿ ಸೂರ್ಯಸ್ಪಷ್ಟ 6-17-35 ಇದು 7-17-35ಕ್ಕೆ ಬಿಂದು ವರ್ಷವೆನ್ನುವುದು.

## ಜನ್ಮವರ್ಷ 1937 (ಒಂದು ವೃತ್ತ ಮಾತ್ರ)

| ಕರ್ಕ | ಸಿಂ | ತು | ಕ | ವೃ | ಧನು | ಮ | ಕುಂ | ಮೀ | ಮೇ | ವೃಷಭ | ಮಿ | ರಾಶಿದಶಾ |
|---|---|---|---|---|---|---|---|---|---|---|---|---|
| 1 | 1 | 1 | 1 | 1 | 1 | 1 | 1 | 1 | 1 | 1 | 1 | ವರ್ಷ |
| 0 | 0 | 0 | 0 | 0 | 0 | 0 | 0 | 0 | 0 | 0 | 0 | ತಿಂಗಳು |
| 0 | 0 | 0 | 0 | 0 | 0 | 0 | 0 | 0 | 0 | 0 | 0 | ದಿನಾಂಕ |
| 38 | 39 | 40 | 41 | 42 | 43 | 44 | 45 | 46 | 47 | 48 | 49 | ವರ್ಷ |
| 6 | 6 | 6 | 6 | 6 | 6 | 6 | 6 | 6 | 6 | 6 | 6 | ರವಿ |
| 17 | 17 | 17 | 17 | 17 | 17 | 17 | 17 | 17 | 17 | 17 | 17 | ಅಂಶ |
| 35 | 35 | 35 | 35 | 35 | 35 | 35 | 35 | 35 | 35 | 35 | 35 | ಕಲಾ |

ಮುಂದಿನ ವೃತ್ತ ತಿರುಗಿ ಬರುವುದು

## ಪ್ರಥಮ ವರ್ಷದ ಅಂತರ್ದಶಾ

## ಕರ್ಕಲಗ್ನದಲ್ಲಿ

| ರಾಶಿ | ಕರ್ಕ | ಸಿಂಹ | ಕ | ತು | ವೃ | ಧನು | ಮ | ಕುಂ | ಮೀ | ಮೇ | ವೃಷಭ | ಮಿ |
|---|---|---|---|---|---|---|---|---|---|---|---|---|
| ವರ್ಷ | 0 | 0 | 0 | 0 | 0 | 0 | 0 | 0 | 0 | 0 | 0 | 0 |
| ಮಾಸ | 1 | 1 | 1 | 1 | 1 | 1 | 1 | 1 | 1 | 1 | 1 | 1 |
| ದಿನಾಂಕ | 0 | 0 | 0 | 0 | 0 | 0 | 0 | 0 | 0 | 0 | 0 | 0 |

* 1937

| ಸೂರ್ಯ | 4 | 5 | 6 | 7 | 8 | 9 | 10 | 11 | 12 | 1 | 2 | 3 |
|---|---|---|---|---|---|---|---|---|---|---|---|---|
| ಅಂಶ | 17 | 17 | 17 | 17 | 17 | 17 | 17 | 17 | 17 | 17 | 17 | 17 |
| ಕಲಾ | 35 | 35 | 35 | 35 | 35 | 35 | 35 | 35 | 35 | 35 | 35 | 35 |

*ಇಂಗ್ಲಿಷ್ ವರ್ಷದಲ್ಲಿ ಕೊಡಲಾಗಿದೆ.

ಇಲ್ಲಿ ಪ್ರತ್ಯೇಕ ಮಾಸದ ಫಲ ನೋಡುವುದು. ಇದೇ ವರ್ಷ ಬದಲಾವಣೆ ಯೊಂದಿಗೆ (ಸಂವತ್ಸರ) ಮುಂದಿನ ವೃತ್ತ ಆರಂಭ (120) ಪರಮಾವಧಿ ಆಯುಷ್ಯದವರೆಗೆ.

## ಫಲ ನಿರ್ಣಯ

ಸುದರ್ಶನೋದ್ಭವಂ ಜ್ಞಾತ್ವಾ ಫಲಂ ವರ್ಷಾದಿ ಸಂಭವಮ್ ॥೨೯॥

**ಅಷ್ಟವರ್ಗೋದ ಭವಂ ಚಾಪಿ ತಾಭ್ಯಾಂ ಫಲವಿವೇಚನಮ್ ।**
**ಸಮತ್ವೆತೂಭಯತ್ರಾಪಿ ಫಲಂ ತದ್ಭಲಂ ದಿಶೇತ್ ॥೩೦॥**

**ಅಸಮತ್ವೇಧಿಕಂ ಯತ್ಸ್ಯಾತ್ ತತ್ಫಲಂ ಬಲತೋವಧೇತ್ ।**

ಈ ರೀತಿ ಸುದರ್ಶನ ಚಕ್ರೋದ್ಭವ ವರ್ಷ, ಮಾಸ ಆದಿಫಲ ನಿರ್ಣಯಿಸುವುದು. ಎರಡು ಶುಭವಾದರೆ - ಶುಭ 2 ಅಶುಭ ಫಲ – ಅಶುಭ ಒಂದು ಶುಭ – ಒಂದು ಅಶುಭ ಬಲಾನುಸಾರ ಸಮತ್ವದಲ್ಲಿ ಸುಖ, ದುಃಖ ಸಮಾನ.

## ಪ್ರತ್ಯಂತರ ದಶಾ 1ನೇ ಆವೃತ್ತಿಯಲ್ಲಿ

| ರಾಶಿ | ಕರ್ಕ | ಸಿಂ | ಕ | ತು | ವೃಶ್ಚಿಕ | ಧ | ಮ | ಕುಂ | ಮೀ | ಮೇ | ವೃ | ಮಿ |
|---|---|---|---|---|---|---|---|---|---|---|---|---|
| ವರ್ಷ | 0 | 0 | 0 | 0 | 0 | 0 | 0 | 0 | 0 | 0 | 0 | 0 |
| ಮಾಸ | 0 | 0 | 0 | 0 | 0 | 0 | 0 | 0 | 0 | 0 | 0 | 0 |
| ದಿನ | 2 | 2 | 2 | 2 | 2 | 2 | 2 | 2 | 2 | 2 | 2 | 2 |
| ಘಟಿ | 30 | 30 | 30 | 30 | 30 | 30 | 30 | 30 | 30 | 30 | 30 | 30 |

ವರ್ಷ 1937

| ಸೂರ್ಯ | 6 | 6 | 6 | 6 | 7 | 7 | 7 | 7 | 7 | 7 | 7 | 7 |
|---|---|---|---|---|---|---|---|---|---|---|---|---|
| ಅಂಶ | 20 | 22 | 25 | 27 | 0 | 2 | 5 | 7 | 10 | 12 | 15 | 17 |
| ಕಲಾ | 05 | 35 | 05 | 35 | 05 | 35 | 05 | 35 | 05 | 35 | 05 | 35 |

ಈ ರೀತಿ ಪ್ರತ್ಯಂತರ ದಶಾ ನೋಡುವುದು. ಇಲ್ಲಿ ಸೂರ್ಯ ಚಲನೆ ಮೇಲೆ – ಸಿದ್ಧಾಂತದಂತೆ ಮಾಸಾದಿ ಗಣನೆ.

### ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಸುದರ್ಶನ ಚಕ್ರ ಫಲಾಧ್ಯಾಯಃ ಸಮಾಪ್ತಃ

# ಅಥ ಪಂಚಮಹಾ ಪುರುಷ ಲಕ್ಷಣಾಧ್ಯಾಯಃ

**ಪರಾಶರ ಉವಾಚ:**

ಅಥ ವಚ್ಮಿ ಲಕ್ಷ್ಮ ಪಂಚ ಮಹಾಪುರುಷಜಂ ಚತೆ ।
ಸಬಲೈಃ ಸ್ವರ್ಕ್ಷತುಂಗಸ್ಥೈಃ ಕೇಂದ್ರಗೈರ್ಭೂಮಿಜಾದಿಭಿಃ ॥೧॥

ರುಚಕೋ ಭದ್ರಹಂಸೋ ಚ ಮಾಲವ್ಯಶಶಕೌವಪಿ ।
ಕ್ರಮಾದೇತೆ ನಿಗದಿತಾ ಮಹಾಪುರುಷ ಸಂಜ್ಞಕಾಃ ॥೨॥

**ಪರಾಶರರು ಹೇಳಿದರು—**

ಹೇ, ಮೈತ್ರೇಯ,

ಈಗ ನಾನು ಪಂಚ ಮಹಾಪುರುಷ ಕುಂಡಲಿಯ ಬಗ್ಗೆ ವಿವರಿಸುತ್ತೇನೆ. ಪ್ರಬಲ ಸ್ವಭವನ ಅಥವಾ ಸ್ವೋಚ್ಚಸ್ಥಭೌ ಮಾಡಿ ಗ್ರಹ ಕೇಂದ್ರಗತವಾಗಿದ್ದರೆ ಕ್ರಮಶಃ ರುಚಕ, ಭದ್ರ, ಹಂಸ, ಮಾಲವ್ಯ ಹಾಗೂ ಶಶಕ ಯೋಗದಲ್ಲಿ ಉತ್ಪನ್ನರು ಪಂಚ ಮಹಾಪುರುಷರಲ್ಲಿ ಒಬ್ಬರಾಗುತ್ತಾರೆ.

ಇದನ್ನೇ ವಿವರಿಸುವುದಾದರೆ ಮಂಗಳ, ಮೇಷ, ವೃಶ್ಚಿಕ, ಮಕರ ರಾಶಿಗಳಲ್ಲಿ ಕೇಂದ್ರದಲ್ಲಿದ್ದರೆ ರುಚಕ ನಾಮಯೋಗ. ಮಿಥುನ, ಕನ್ಯಾರಾಶಿಯಲ್ಲಿ ಬುಧ ಕೇಂದ್ರದಲ್ಲಿದ್ದರೆ ಭದ್ರನಾಮಯೋಗ. ಅದೇ ಕರ್ಕ ಧನು ಅಥವಾ ಮೀನದಲ್ಲಿ ಗುರು ಕೇಂದ್ರದಲ್ಲಿದ್ದರೆ ಹಂಸ ನಾಮಯೋಗ. ವೃಷಭ, ತುಲಾ, ಮೀನದಲ್ಲಿ ಶುಕ್ರ ಕೇಂದ್ರದಲ್ಲಿದ್ದರೆ ಮಾಲವ್ಯ ನಾಮಯೋಗ. ತುಲಾ, ಮಕರ, ಕುಂಭದಲ್ಲಿದ್ದು ಶನಿ ಕೇಂದ್ರದಲ್ಲಿದ್ದರೆ ಶಶಕ ನಾಮಯೋಗವಾಗುತ್ತದೆ.

ವಿಶೇಷ: ಇಲ್ಲಿ ಪ್ರಬಲ ಗ್ರಹವೆಂಬುವನು ಎಲ್ಲ ಆಚಾರ್ಯರು ಹೇಳಿರುವುದರಿಂದ ರುಚಕ ನಾಮಯೋಗ. ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಮಕರ, ಕುಂಭ ಲಗ್ನಗಳಿಗಾದರು. ಮೇಷ, ಸಿಂಹ, ಕರ್ಕ, ವೃಶ್ಚಿಕ ಲಗ್ನಗಳಿಗೆ – ಮಂಗಳ ಪ್ರಬಲ ಗ್ರಹವಾಗಿ – ರುಚಕ ನಾಮಯೋಗ ಬಲಿಷ್ಠ – ಭದ್ರನಾಮಯೋಗ – ಮಿಥುನ, ಕನ್ಯಾ, ಮೀನ ಲಗ್ನಗಳಲ್ಲಿ ಆಗಿ ಮೀನ ಲಗ್ನಕ್ಕೆ ಬಲಿಷ್ಠವಲ್ಲದ ಕಾರಣ (ಲಗ್ನೇಶನ ಶತ್ರು) ಹಾಗೂ ಶುಭಗ್ರಹ ಕೇಂದ್ರಾಧಿಪನಾದರೆ ಮಾರಕನಾಗುವನು (ಲಗ್ನೇಶನನ್ನು ಹೊರತುಪಡಿಸಿ) ಬುಧ, ಮಿಥುನ, ಕನ್ಯಾ ಲಗ್ನಕ್ಕೆ

ವಿಶೇಷ ಪ್ರಬಲನಾಗಿ ಭದ್ರ ನಾಮಯೋಗ ಮಾಡುವನು. ಆದರಂತೆ ಧನು ಲಗ್ನಕ್ಕೂ ಸಾಮಾನ್ಯನೆ. ಆದರೂ ಯೋಗ ದೃಷ್ಟಿಯಿಂದ ಶುಭಕರನೆಂದು ಗಣಿಸಿ ಇನ್ನೂ ಗುರುವಿನ ಹಂಸ ನಾಮಯೋಗದಲ್ಲಿ ಮೇಷ ಲಗ್ನ ಮಿಥುನ, ಕರ್ಕ, ಕನ್ಯಾ, ತುಲಾ, ಧನು, ಮಕರ, ಮೀನಗಳಲ್ಲಿ – ಮೇಷ, ಕರ್ಕ, ಧನು, ಮೀನಗಳಲ್ಲಿ ಅತಿಬಲಿಷ್ಠನಾಗಿ ಅತಿ ಶುಭನು. ಮಿಥುನ, ಕನ್ಯಾಕ್ಕೆ ಈ ಲಗ್ನಗಳಿಗೆ ಸಾದಾರಣ ಶುಭನು. ಉಳಿದಂತೆ ಸಾಮಾನ್ಯ ಯೋಗವೇ ಸರಿ. ಮಾಲವ್ಯ ಯೋಗ ವೃಷಭ, ಕರ್ಕ, ಸಿಂಹ, ತುಲಾ, ಮಕರ, ಕುಂಭಗಳಿಗಾದರೂ ಕರ್ಕ, ಸಿಂಹಕ್ಕೆ ಸಾಮಾನ್ಯ ಯೋಗವಾಗಿ ಉಳಿದ ಮೇಲೆ ವಿವರಿಸಿದ ಲಗ್ನಕ್ಕೆ ಶುಭಯೋಗವೆ. ಶಶಯೋಗ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಮಕರ, ಕುಂಭ ಲಗ್ನಗಳನ್ನಾಗಿ – ಮೇಷ, ಕರ್ಕ, ಸಿಂಹ, ವೃಶ್ಚಿಕ ಲಗ್ನಗಳಿಗೆ ಸಾಮಾನ್ಯಯೋಗ. ಉಳಿದಂತೆ ಶುಭಯೋಗವೆಂದು ಪರಿಗಣಿಸುವುದು.

## ರುಚಕ ಲಕ್ಷಣ

ಅತ್ಯುತ್ಸಾಹಃ ಶುಭ್ರಕಾಂತಿರ್ಲಂಬಾಸ್ಯೋತಿಬಲಸ್ತಥಾ ।
ಸುಭ್ರೂಃ ಕೃಷ್ಣಲಕೋ ಯುದ್ಧಪ್ರೇಮಿ ಸುರುಚಿಮಾಂಸ್ತಥಾ ॥೩॥

ಲೋಹಿತಶ್ಯಾಮಲಃ ಶತ್ರು ಹಂತಾ ಕ್ರೂರಃ ಪತಿರ್ನೃಣಾಮ್ ।
ವಿವೇಕ ಶೀಲೊ ಮಂತ್ರಜ್ಞಃ ಕೃಪಾಂಗಘ್ರಃ ಸ್ತೇನಸತ್ತಮಃ ॥೪॥

ವಜ್ರೇಷ್ವಾಸಪಾಶ ವಿಣಾಚಕ್ರೋಕ್ಷಾಂಕ ಯುತಃ ಶಯೋ ।
ಮಂತ್ರಾಭಿಚಾರ ಯೋರ್ಧಜ್ಞೋ ವಿಪ್ರಭಕ್ತಃ ಶತಾಂಗುಲಃ ॥೫॥

ಸಮಾಸ್ಯಾಮಧ್ಯೆ ರಂಚಕಸ್ತಥೈವ ದ್ವಿಜ ಸತ್ತಮಃ ।
ತುಲಾಸಹಸ್ರಪ್ರಮಿತ ದೈವಜ್ಞೈಃ ಪರಿಕೀರ್ತಿತಃ ॥೬॥

ಪಾತ್ಯಬ್ದಸಪ್ತತಿಂ ಯಾವದ್ ಬಂಧ್ಯಸಹ್ಯಾದ್ರಿನೀ ವೃತ್ತಮ್ ।
ಆಯುದೇನಾಗ್ನಿನಾ ಯಾತೊ ದೇವಲೋಕಂ ಸ ಪುರುಷಃ ॥೭॥

ರುಚಕ ಯೋಗದಲ್ಲಿ ಜನಿಸಿದ ಜಾತಕ – ಅತಿ ಉತ್ಸಾಹಿ ನಿರ್ಮಲ ಮನದವ ದೀರ್ಘಾನನ ಪ್ರಬಲ ಸುಂದರ – ಹುಬ್ಬುಗಳುಳ್ಳವ ಕೃಶಕೇಶ, ಯುದ್ಧಪ್ರೇಮಿ, ಸುಂದರ ವಸ್ತು ಅಭಿರುಚಿಯುಳ್ಳವ, ರಕ್ತಶ್ಯಾಮಲ ವರ್ಣ, ಶತ್ರುನಾಶಕ, ಕ್ರೂರ ಸ್ವಭಾವದವ (ಕ್ಷತ್ರಿಯ ಕ್ರೂರ ಸ್ವಭಾವ)ತಾಮಸ ಕ್ರೂರವಲ್ಲ. ರಾಜಾ ವಿವೇಕಿ, ದುರ್ಬಲ ಕಾಲುಗಳುಳ್ಳವ – ಚೋರ ನಾಯಕ (ಸಾಮಾನ್ಯನಿದ್ದಾಗ) ಕೈಯಲ್ಲಿ ವಜ್ರ ಚಾಪ ಪಾಶ ವೀಣಾ ಚಕ್ರ ವೃಷಭದ ಚಿಹ್ನೆಯುಳ್ಳವ, ಮಂತ್ರ (ಗುಪ್ತ ಮಂತ್ರಣ)

ಹಾಗೂ ಅಭಿಚಾರ (ಮಾರಣ ಮೋಹಣ ಆದಿ) ಮಂತ್ರ ನಿಪುಣ – ಶತಾಂಗಲು ಎತ್ತರದವ ಮುಖ ಹಾಗೂ ಮಧ್ಯ(ಕಟಿ ಪ್ರದೇಶ)ದ ತುಲ್ಯ – ಭಾರವುಳ್ಳವ ತುಲಾ ಸಹಸ್ರ ತುಲ್ಯ (4 ಕರ್ಷ= 1 ಫಲ ಹಾಗೂ 100ಫಲ = 1 ತುಲಾ) ವಿದ್ಯಾ ಹಾಗೂ ಸಹ್ಯಸಂಜ್ಞಕ ಪರ್ವತೀಯ ಪ್ರದೇಶದಲ್ಲಿ 70 ವರ್ಷ ಪಾಲನೆ ಮಾಡುವವ. ಅಂತ್ಯದಲ್ಲಿ ಅಸ್ತ್ರ ಅಥವಾ ಅಗ್ನಿದ್ವಾರಾ ದೇವಲೋಕ (ಸ್ವರ್ಗ) ಪ್ರಾಪ್ತಿ ಮಾಡಿಕೊಳ್ಳುವುದು.

## ಭದ್ರ ಲಕ್ಷಣ

ಪೀವರೋರಃ ಸ್ಥಲಃ ಸಿಂಹ ನಿಭೋ ದ್ವಿಪಗತಿರ್ನರಃ ।
ಆಜಾನುದೀರ್ಘಬಾಹುಶ್ಚ ಯೋಗಜ್ಞಃ ಸರ್ವತಃ ಸುಧೀಃ ॥೮॥

ಶೋಭನಶ್ಮಶ್ರುಪಾದಶ್ಚ ಕಾಮುಕಃ ಸಾತ್ವಿಕ ಸ್ತಥಾ ।
ಶಂಖ – ಚಕ್ರ ಗದಾಬಾಣ ದ್ವಿಪ ಚಿನ್ಹ ಸಮಾನ್ವಿತಃ ॥೯॥

ಹಲಧ್ವಜಸರೋಜಾಂಕೈ ರಾಂಶಿತಾಂಗಘ್ರಿಕರಃ ಪುಮಾನ್ ।
ಶಾಸ್ತ್ರಜ್ಞ ಶ್ಚಾರುನಾಸಶ್ಚಾಸಿತಾಲಕಯುತಃ ಸುಧೀಃ ॥೧೦॥

ಸ್ವಾಧೀನಃ ಸರ್ವಕೃತ್ಯೇಷು ಸ್ವಕೀಯಜನಪಾಲಕಃ ।
ಸುಹೃದ್ಭಿಕ್ತವಿಭವಃ ಕಲತ್ರಾತ್ಮಜ ಸಂಯುತಾಃ ॥೧೧॥

ಕುಶಲೋ ನೃಪತಿರ್ಮಧ್ಯ ಪ್ರದೇಶಪರಿಪಾಲಕಃ ।
ಯಾವದಬ್ದ ಶತಂ ಭಾತಿ ಭದ್ರಸಂಜ್ಞಸ್ತು ಪುರುಷಃ ॥೧೨॥

ಭದ್ರಸಂಜ್ಞಕ ಮಹಾಪುರುಷ ಹಳದಿ ವಸ್ತ್ರಧಾರಕ ಸಿಂಹ ಸದೃಶ್ಯ ಸಾಹಸಿ, ಆನೆಯಂತೆ ಗತಿಯುಳ್ಳವ (ಮಂದಗತಿ) ಜಾನುಪರ್ಯಂತ ದೀರ್ಘ ಕೈಗಳ್ಳುಳ್ಳವ (ಮೋಟುಗಾಲ ತೊಡೆಯವರಿಗೆ) ಯೋಗ ಕ್ರಿಯಾ ಕುಶಲ, ಎಲ್ಲ ತರಹ ವಿದ್ವಾನ್, ಮೊಣಕಾಲವರೆಗೆ ಕೈಗಳು ಸುಂದರ – ಗಡ್ಡ ಮೀಸೆಗಳುಳ್ಳವ, ಕಾಮಿ ಆದರೆ ಸಾತ್ವಿಕ ಶಂಖ, ಚಕ್ರ, ಗದಾ, ಬಾಣ – ಆನೆಯ ಚಿಹ್ನೆಗಳುಳ್ಳವ ಕೈಕಾಲುಗಳಲ್ಲಿ – ನೇಗಿಲು, ಧ್ವಜ, ಕಮಲಗಳ ಚಿಹ್ನೆಯುಳ್ಳವ ಶಾಸ್ತ್ರಜ್ಞ. ಸುಂದರ ಮೂಗು, ಕಪ್ಪನೆ ಕೂದಲು ಉಳ್ಳವನಾದ ಪಂಡಿತ. ಎಲ್ಲ ಕಾರ್ಯ ಕುಶಲ ಹಾಗೂ ಸ್ವತಂತ್ರ. ತನ್ನ ಐಶ್ವರ್ಯ ಭೋಕ್ತಾ ಸ್ತ್ರೀ ಪುತ್ರಯುತ ರಾಜರ ಮಧ್ಯ ಸಂರಕ್ಷಕ, ನೂರು ವರ್ಷಗಳವರೆಗೆ ಜೀವಿತನಾಗಿರುವವ.

## ಹಂಸ ಲಕ್ಷಣ

ಗೌರೋ ಹಂಸಸ್ವನಃ ಪ್ರಾಂಶು - ನಾಸಿಕಃ ಸುಮುಖಸ್ತಥಾ ।
ಪಿಂಗಲಾಕ್ಷಃ ಶ್ಲೆಷ್ಮಲಶ್ಚ ಜಾತೋ ರಕ್ತನಖೋ ಬುಧಃ ॥೧೩॥

ವೃತ್ತಮೂರ್ದ್ವಾ ನೃಪಃ ಪೀನಕಪೋಲಶ್ಚಾರುಸಾದಪಿ ।
ಪದ್ಮಮೀನಾಂಕಶೀಷ್ವಾಸ ಕಂಬುಖಟ್ವಾಂಗಲಕ್ಷ್ಮಭಿಃ ॥೧೪॥

ಅಂಕಿತಾಂಗಫ್ರಿಶಯಃ ಕಾಮಿ ನ ತುಷ್ಟಃ ಸ್ತ್ರೀಷು ಜಾತುಚಿತ್ ।
ಷಣ್ಣವತ್ಯುಂಗುಲಿಮಿತಃ ವಾರಿಕೇಲಿ ಸುಖಾನ್ವಿತಃ ॥೧೫॥

ಜಾಹ್ನವೀಯಮುನಾಮಧ್ಯದೇಶಪೋ ಹಂಸಪುರುಷಃ ।
ಮೃತಮೇತಿ ಶತಾಬ್ದಾಂತೆನುಭೂಯ ನಿಖಿಲಂ ಸುಖಮ್ ॥೧೬॥

ಹಂಸಸಂಜ್ಞಕ ಮಹಾಪುರುಷ ಗೌರವರ್ಣದವನಾಗಿ ಹಂಸಧ್ವನಿಯಂತೆ ಧ್ವನಿಯುಳ್ಳವನಾಗಿ ಉದ್ದಮೂಗಿನವನಾಗಿ ಸುಂದರ ಮುಖದವನಾಗಿ ಪಿಂಗಾಕ್ಷ ಕಫ ಪ್ರಕೃತಿಯವನಾಗಿರುವನು. ರಕ್ತವರ್ಣ ನಖ (ಉಗುರು)ವುಳ್ಳವನಾಗಿ ಪಂಡಿತನಾಗಿರುವನು. ಮಸ್ತಕ(ಹಣೆ)ದ ಮೇಲೆ ವೃತ್ತ ಪುಷ್ಟಕ ಪೋಲ ಸೂಮದರ ಕಾಲುಗಳುಳ್ಳವನಾಗುವನು. ಕೈಕಾಲುಗಳಲ್ಲಿ ಕಮಲ ಮತ್ಸ್ಯ ಅಂಕುಶ ಚಾಪ ಶಂಖ ಹಾಗೂ ಖಟ್ವಾಂಗ ಚಿಹ್ನೆಯವನು. ಅತಿ ಕಾಮುಕ ಅನೇಕ ಸ್ತ್ರೀಯರು ಈತನ ಕಾಮುಕತೆ ತೃಪ್ತಿಪಡಿಸಲು ಸಾಧ್ಯವಿಲ್ಲ. ಅವನು ಧೈರ್ಯದಲ್ಲಿ 96 ಅಂಗುಲ ಪ್ರಮೀತನಾಗಿ ಜಲಕ್ರೀಡಾಪ್ರೇಮಿಯಾಗಿ ಗಂಗಾ-ಯಮುನಾ ಮಧ್ಯವರ್ತಿ ರಾಜನಾಗಿ ಅನೇಕ ವಿಧ ಸೌಖ್ಯದ ಅನುಭವದ ನಂತರ ನೂರು ವರ್ಷಗಳ ನಂತರ ದಿವಂಗತನಾಗುವನು.

## ಮಾಲವ್ಯ ಲಕ್ಷಣ

ಇಂದು ಕಾಂತಿಪ್ರಭೋ ಮಧ್ಯೆ ಕೃಶಃ ಸಮರದಚ್ಛದಃ ।
ಮಧ್ಯೋನ್ನತಃ ಸುಗಂಧಶ್ಚ ಸ್ವಲ್ಪರಕ್ತಾಂಗ ಸಂಯುತಃ ॥೧೭॥

ಆಜಾನುಬಾಹುರ್ನಾಗೇಂದ್ರ ನಿನದಃ ಸಮಶುಭ್ರದತ್ ।
ದೈರ್ಘ್ಯವಿಸ್ತಾರಯೋರ್ವಿಂಶ್ವದಶಾಂಗುಲ ಮಿತಾನನಃ ॥೧೮॥

ಸಸಿಂಧು ಮಾಲಾವಪತಿರ್ಮಾಲವ್ಯ ಪುರುಷಃ ಸ್ಮೃತಃ ।
ಸಪ್ತತ್ಯಬ್ದಂ ಸೌಖ್ಯಮನು ಭೂಯ್ಯೆತಿ ತ್ರಿದಶಾಲಯಮ್ ॥೧೯॥

ಮಾಲವ್ಯ ಲಕ್ಷಣೋಪೇತ ಪುರುಷನಿಗೆ ಚಂದ್ರನಂತೆ ಕಾಂತಿಯುತ ವಿಸ್ತಾರ ಕಟಿಪ್ರದೇಶ, ಸಮಾನ ತುಟಿಗಳು ಮಧ್ಯದವರೆಗೆ (ಅತಿ ಸಣ್ಣವೂ ಅಲ್ಲದ ಅತಿ ದೊಡ್ಡವೂ ಅಲ್ಲದ) ಆನೆಯಂತೆ ಗಂಭೀರ ಸ್ವರವುಳ್ಳವನು. ಸ್ವಚ್ಛ ಹಲ್ಲುಗಳು, ಮುಖದ ಅಗಲ 12 ಅಂಗುಲ, ಉದ್ದ 10 ಅಂಗುಲವಾಗಿರುತ್ತದೆ. ಅವನು ಸಿಂಧು ಹಾಗೂ ಮಾಲವದ ರಾಜನಾಗಿ 70 ವರ್ಷ ಸುಖಾನುಭವ ಪಡೆಯುತ್ತಾನೆ.

## ಶಶ ಲಕ್ಷಣ

ಹೃಸ್ವಾಸ್ಯದಶನೋ ವೀರಃ ಕೃಷಕುಕ್ಷಿಃ ಸಮೋನ್ನತಃ ।
ಚಾರುಜಂಘಃ ಕೃಶೋಮಧ್ಯೆ ಪರಿಚ್ಛೆದ್ರೈಕವಿತ್ ಸುಧಿಃ ॥೨೦॥

ಸೇನಾಪತಿಃ ಕ್ಷಮೋರಣ್ಯ ದುರ್ಗಮೇಷು ಚ ದಂತುರಃ ।
ರಸಾಯನ ಜ್ಞಃಶ್ಚ ಪಲೋಂಗಾನಾಸಕ್ತೋನ್ಯವಿತ್ತಯುಕ್ ।
ಮುರಜಾಯಧವೀಣಾಸ್ತ್ರಗ್ ರೇಖಾಚಿನ್ಹೆ ತಪಚ್ಛಯುಃ ॥೨೧॥

ನೃಪೋಸೌಸಸುಖಂ ಜೀವನ್ ಪಾತಿಕ್ಷ್ಮಾಂ ಸಪ್ತತಿಂ ಸಮಾಃ ।

ಶಶಭಿಧಶ್ಚೈವಮೇತೆ ಪಂಚಧಾ ರಾಜಪುರುಷಾಃ ।

ಶಶಲಕ್ಷಣೋ ಪೇತ ಪುರುಷ ಕೃಶವಾದ ಹೊಟ್ಟೆ, ಸಮೋನ್ನತ ಎತ್ತರ, ಸುಂದರ ಸೊಂಟ, ಕಟಿಪ್ರದೇಶ ಪರಚ್ಛಿದ್ರಾನ್ವೇಶಕ ಹಾಗೂ ವಿದ್ವಾನ್ – ಸೇನಾಪತಿ ಅಡವಿ ಆದಿ ದುರ್ಗಮ ಸ್ಥಾನದಲ್ಲಿ ಚಲಿಸುವವ – ಉದ್ದ ಹಲ್ಲುಗಳು ರಸಾಯನ ತಜ್ಞ, ಚಂಚಲ ಸ್ತ್ರೀಯಾಸಕ್ತ ಪರಧನ ತೆಗೆದುಕೊಳ್ಳುವವ. ಮೃದಂಗ ಶಸ್ತ್ರ ವೀಣ ಮತ್ಸ್ಯ ರೇಖೆಗಳುಳ್ಳವ (ಕಾಲು, ಕೈಗಳಲ್ಲಿ) ಈ ಪುರುಷ 70 ವರ್ಷದವರೆಗೆ ಸುಖಪೂರ್ವಕ ಜೀವಿಸುವವನು ಹಾಗೂ ಪೃಥ್ವಿಪಾಲಕನು ಆಗುತ್ತಾನೆ. ಈ ಪ್ರಕಾರ ರುಚಕ, ಹಂಸ, ಮಾಲವ್ಯ ಹಾಗೂ ಶಶಕ ಯೋಗಗಳಿವೆ. ಇವು ಮಹಾಪುರುಷ ಕುಂಡಲಿ ಲಕ್ಷಣಗಳು.

## ಪ್ರಭು ಶ್ರೀರಾಮ ಚಂದ್ರರ ಕುಂಡಲಿ

5 4 ಗು.ಚಂ 6 2
7 1
ಶ ರ ಬು
8 10 12
ಮು
9 11 ಶು

| ಶು | ರ ಬು | | |
|---|---|---|---|
| | | | ಗು ಚಂ |
| ಮ | | | |
| | | ಶ | |

ಈ ರೀತಿ ಅಂದರೆ ಕರ್ಕಲಗ್ನ ದಶಾಮಧಿಪ ಮಂಗಳ ತನ್ನುಚ್ಚ ಮಕರದಲ್ಲಿ

(ಕೇಂದ್ರ) ರುಚಕ (ಬಲಿಷ್ಠ) ಯೋಗವನ್ನು ಹಾಗೂ ಭಾಗ್ಯಾದಿಪ ಬಲಿಷ್ಠ ಗ್ರಹ ಗುರು ಲಗ್ನ ಕೇಂದ್ರ ಕರ್ಕದಲ್ಲಿ ಹಂಸಯೋಗ ಅಂತೆ ಶನಿ ಚತುರ್ಥ ಕೇಂದ್ರ ತುಲಾದಲ್ಲಿ ಶಕಯೋಗ ರುಚಕ-ಹಂಸ-ಶಕ ಯೋಗದಲ್ಲಿ ಜನಿಸಿ ಆಚಂದ್ರಾರ್ಕ ಕೀರ್ತಿವುಳ್ಳವರಾಗಿದ್ದಾರೆ. ರಘುಕುಲ ಶ್ರೇಷ್ಠರು ಸುಂದರರು, ಕರುಣಾ ಹೃದಯ ದವರು ಆಗಿದ್ದಾರೆ.

ಇನ್ನು ಉದಾಹರಿತ ಕುಂಡಲಿಯೂ ಕರ್ಕ ಲಗ್ನವಾಗಿ ಮಂಗಳ - ಸಪ್ತಮ ಕೇಂದ್ರ ಮಕರದಲ್ಲಿ ಭಾಗ್ಯಾದಿಪನೊಂದಿಗಿರುವುದರಿಂದ ರಾಜಯೋಗದೊಂದಿಗೆ ರುಚಕಯೋಗವನ್ನು ಮಾಡಿದೆ.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಪಂಚಮಹಾಪುರುಷ ಲಕ್ಷಣಾಧ್ಯಾಯಃ ಸಮಾಪ್ತಿಃ

# ಅಥ ಪಂಚಭೂತಫಲಾಧ್ಯಾಯಃ

**ಪರಾಶರ ಉವಾಚ:**

ಅಥ ಬ್ರವೀಮಿತೆ ಪಂಚಮಹಾಭೂಪ್ರಭಾಂ ದ್ವಿಜ ।
ಯ ಜ್ಞಾನತೋ ಗ್ರಹಾಣಾಂ ವಿದ್ಯಮಾನಾ ಜ್ಞಾಯತೆ ದಶಾ ॥೧॥

**ಪರಾಶರರು ಹೇಳಿದರು–**

ಹೇ ಮೈತ್ರೇಯ,

ಈಗ ನಾನು ಪಂಚಮಹಾಭೂತದ ಪ್ರಭಾ(ಕಾಂತಿ)ವನ್ನು ವಿವರಿಸುತ್ತೇನೆ. ಯಾವುದರ ಜ್ಞಾನದಿಂದ ಗ್ರಹಗಳ ವಿದ್ಯಮಾನ ದಶಾದ ಜ್ಞಾನ ತಿಳಿಯಲ್ಪಡುತ್ತದೆ.

ಭೌಮಾದಿಯೋಗ್ನಿಭೂಮ್ಯಾಕಾ - ಶಾಂಬುಬಾತಾಧಿಪಾಃ ಸ್ಮೃತಾಃ ।
ಬಲಾನುಸಾರಂ ಖೇಟಾನಾಂ ಭೂತಾನಾಂ ಫಲಮೀರಿತಮ್ ॥೨॥

ಭೌಮಾದಿ ಐದು ಗ್ರಹಗಳು ಅಗ್ನಿ, ಭೂಮಿ, ಆಕಾಶ, ಜಲ ಹಾಗೂ ವಾಯು ತತ್ವಗಳ ಅಧಿಪರಾಗಿದ್ದಾರೆ. ಗ್ರಹಗಳ ಬಲಾನುಸಾರ ಮನುಷ್ಯರಲ್ಲಿ ತತ್‌ಮಹಾ ಭೂತಗಳ ಫಲ ದೊರೆಯುತ್ತದೆ.

ಭೌಮೆ ಬಲಿಷ್ಠೇತು ಶಿಖಿ - ಪ್ರಕೃತಿರ್ಮಾನವೋ ಭವೇತ್ ।
ಜ್ಞೇಧರಾಪ್ರಕೃತಿ ರ್ಜ್ಞೇಯಾ ದೈವೇಜ್ಯೆ ಖಸ್ವಭಾವವಾನ್ ॥೩॥

ಸಿತೆ ವಾರಿಪ್ರಕೃತಿಕೋ ಮಂದೆ ವಾತಸ್ವಭಾವವಾನ್ ।
ಮಿಶ್ರಪ್ರಕೃತಿಕೋ ಜ್ಞೇಯೋ ಮಿಶ್ರಖೇಟೈರ್ದ್ವಿಜೋತ್ತಮ ॥೪॥

ಹೇ ಮೈತ್ರೇಯನೆ, ಜನ್ಮಸಮಯದಲ್ಲಿ ಮಂಗಳ ಪ್ರಬಲನಾಗಿದ್ದರೆ ಅವನು ಲಗ್ನ ತತ್ವ ಪ್ರಧಾನ ಪ್ರಕೃತಿ (ಉಷ್ಣ ಪ್ರಕೃತಿ)ಯವನು; ಅದೇ ಬುಧ ಪ್ರಾಬಲ್ಯದಲ್ಲಿ – ಭೂತತ್ವ ಪ್ರಧಾನ. ಗುರು ಪ್ರಾಬಲ್ಯದಲ್ಲಿ ಆಕಾಶತತ್ವ ಪ್ರಧಾನವಾಗಿರುತ್ತದೆ. ಶುಕ್ರ ಪ್ರಾಬಲ್ಯದಲ್ಲಿ ಜಲತತ್ವ ಪ್ರಕೃತಿಯವನು ಹಾಗೂ ಶನಿ ಪ್ರಾಬಲ್ಯದಲ್ಲಿ ವಾಯುತತ್ವ ಪ್ರಾಬಲ್ಯ. ಅನೇಕ ಗ್ರಹ ಪ್ರಾಬಲ್ಯದಲ್ಲಿ ಮಿಶ್ರಪ್ರಕೃತಿ ಕಂಡು ಬರುತ್ತದೆ.

## ಪಂಚತತ್ವ ಪುರುಷ ಲಕ್ಷಣ

ರವಾವಗ್ನಿಪ್ರಕೃತಿಕಶ್ಚಂದ್ರೇಂಬುಪ್ರಕೃತಿರ್ಭವೇತ್ ।
ಖೇಟಃ ಸ್ವಭುಕ್ತೌ ಭೂತೋತ್ಥಾ ಭೇದಯಂತಿನಿಜಾಂಪ್ರಭಾವಮ್ ॥೫॥

ಸೂರ್ಯ ಪ್ರಾಬಲ್ಯದಲ್ಲಿ ಅಗ್ನಿ ಪ್ರಾಬಲ್ಯ. ಪ್ರಕೃತಿ, ಚಂದ್ರ ಪ್ರಾಬಲ್ಯದಲ್ಲಿ ಜಲ-ಪ್ರಕೃತಿ (ಜಲ ಪ್ರಧಾನ). ಎಲ್ಲ ಗ್ರಹಗಳು ತಮ್ಮ ತಮ್ಮ ದಶಾದಲ್ಲಿ ಮಹಾಭೂತ ಸಂಬಂಧಿ ತಮ್ಮ ಛಾಯೋಭೇದ ಮಾಡುತ್ತದೆ.

ಅಗ್ನಿಸ್ವಭಾವೋ ಮನುಜೋ ಬುಭುಕ್ಷುರ್ಬಹುಭುಕ್ ಚಲಃ ।
ಶೂರಃ ಕೃಶಾಂಗೋ ಗೌರಾಂಗೋ ಮನೀಷಿ ಮಾನವಾನ್ ಖರಃ ॥೬॥

ಭೂಮಿಸ್ವಭಾವೋ ಮನುಜೋ ಭೋಗಾಢ್ಯೋತಿಬಲಿಃ ಸುಖೀ ।
ಪದ್ಮರ್ಕರ್ಪೂರ ಸುರಭಿಃ ಕ್ಷಾಂತಃ ಪಂಚನನಸ್ವನಃ ॥೭॥

ನಭಃಸ್ವಭಾವೋ ಮನುಜೋ ನಯವಜ್ಞನವಾನಪಿ ।
ಅಸಂವೃತ ಮುಖೋ ಲಂಬಃ ಶಬ್ದಾರ್ಥಜ್ಞೋತಿತೀವ್ರಧಿಃ ॥೮॥

ಅಂಬುಸ್ವಭಾವೋ ಮನುಜಃ ಪ್ರಭಾವಾನ್ ಮೃದುಲಃಸುಧಿಃ ।
ಭೂಪೋನೇಕಸುಹೃದ್ ಭಾರವಾಹಕಃ ಪ್ರಿಯಭಾಷಣ ॥೯॥

ವಾತಪ್ರಕೃತಿಕಶ್ಚಂಹೋ ದಾನಿ ಗೌರತನು ರ್ನೃಪಃ ।
ಕ್ಷೀಣೋಟಿನ ಪ್ರಿಯಶ್ಚಾರಿ – ಮದನನೇ ಮನುಜೋಭವೇತ್ ॥೧೦॥

ಅಗ್ನಿ ಪ್ರಕೃತಿ ಮನುಷ್ಯ ಹಸಿವೆಯಿಂದ ಬಳಲುವವ, ಬಹಳ ತಿನ್ನುವವ, ಚಂಚಲ, ಶೂರ, ದುರ್ಬಲ, ಗೌರವರ್ಣ, ವಿದ್ವಾನ್, ಸಮ್ಮಾನಪ್ರಿಯ ಹಾಗೂ ತೀಕ್ಷ್ಣನಾಗುತ್ತಾನೆ. ಭೂಮಿ ಪ್ರಕೃತಿಯ ಮನುಷ್ಯ ಭೋಗಯುಕ್ತ ಅತಿ ಬಲಿ, ಸುಖಿ ಹಾಗೂ ಕಮಲ ಕರ್ಪೂರ ರೀತಿ ಸುಗಂಧವುಳ್ಳವ, ಕ್ಷಮಾಶೀಲ ಹಾಗೂ ಸಿಂಹದಂತೆ ಗಂಭೀರ ಸ್ವರದವನು ಆಗುತ್ತಾನೆ. ಆಕಾಶ ಪ್ರಕೃತಿಯವನು ನೀತಿಜ್ಞ, ಜ್ಞಾನಿ, ಸೊಟ್ಟಬಾಯಿ, ಶಬ್ದಾರ್ಥವೇತ್ತಾ, ತೀವ್ರಬುದ್ಧಿಯವನಾಗುತ್ತಾನೆ. ಜಲಪ್ರಕೃತಿಯವನು ಕಾಂತಿವಂತ, ಮೃದು, ವಿದ್ವಾನ್ ರಾಜಾ, ಅನೇಕ ಮಿತ್ರರ ಭಾರ ಹೊರುವವನು, ಸಿಹಿ ಮಾತುಗಾರ. ಅದೇ ವಾತ ಪ್ರಕೃತಿ ಮನುಷ್ಯ ಕ್ರೋಧಿ, ದಾನಿ, ಗೌರವರ್ಣ, ರಾಜ – ದುಂಡಾರ ಶರೀರ ಪ್ರವಾಸ ಪ್ರಿಯ ಶತ್ರುಗಳನ್ನು ನಾಶಮಾಡುವವ.

## ಪಂಚತತ್ತ್ವ ಛಾಯೋ

ಅಗ್ನಿಪ್ರಭಾಯಾಮ ಮನುಜಃ ಸ್ವರ್ಣಾಭಃ ಶುಭದೃಷ್ಟಿಮಾನ್ ।
ಸರ್ವಾರ್ಥಸಿದ್ಧಿ ಮಾಂಜ್ಯೇತಾ ವಿತ್ತಲಾಭಾನ್ವಿತೋ ಭವೇತ್ ॥೧೧॥

ಮಹಿಪ್ರಭಾಯಾಂ ಮನುಜಸ್ತನೌ ಚಾರುಸುಗಂಧವಾನ್ ।
ಸುಸ್ನಿಗ್ಧ ದಂತನಖ ಧನಧರ್ಮಸುಖಾನ್ವಿತಃ ॥೧೨॥

ಪ್ರಭಾನೊಭವಾ ಶುಭ್ರಾವಾಚಃ ಪ್ರಾಗರ್ಲ್ಭಿದಾ ಸ್ಮೃತಾ ।
ಸಪ್ತನಶ್ರುತಿ ಸಂಭೂತಂ ಸೌಮ್ಯಂ ತಸ್ಯಾಂ ಭವೇದ್ ಧ್ರುವಮ್ ॥೧೩॥

ಅಂಬುಪ್ರಭಾಯಾಂ ತು ಭವೇತ್ ತನೌ ಸ್ವಾಸ್ಥ್ಯಂ ಚಮಾರ್ದವಮ್ ।
ನರಸ್ಯೈಪ್ಸರಸಾಸ್ವಾದಸೌಖ್ಯಂ ಸಂಜಾಯತೆ ಧ್ರುವಮ್ ॥೧೪॥

ವಾತಪ್ರಭಾಯಾಂ ಮನುಜೆ ಮೌಢ್ಯಂ ಮಲಿನತ್ ಗದಾಃ ।
ದೀನತಾಪಿ ಚ ತಾಪಶ್ಚ ದೃಶ್ಯಂತೆ ಸರ್ವದಾ ಬುಧೈಃ ॥೧೫॥

ಅಗ್ನಿತತ್ತ್ವ ಛಾಯೋ(ಪ್ರಭಾ)ಯಲ್ಲಿ ಜನಿಸಿದವ ಬಂಗಾರದಂತೆ ಕಾಂತಿಶೀಲ, ಶುಭದೃಷ್ಟಿಯುಕ್ತ ಸರ್ವ ಕಾರ್ಯ ಸಫಲ, ವಿಜಯಿ ಹಾಗೂ ಧನಲಾಭವುಳ್ಳವ ನಾಗುತ್ತಾನೆ. (ಈ ಲಕ್ಷಣದವರು ಅಗ್ನಿತತ್ತ್ವದಲ್ಲಿ ಜನಿಸಿದವರು) ಭೂಮಿತತ್ತ್ವ ಉದಯದಲ್ಲಿ ಜನಿಸಿದವರು ಶರೀರ ಉತ್ತಮ ಸುಗಂಧದಿಂದ ಕೂಡಿದ್ದು ಶುಭ್ರ ನಖ (ಉಗುರು) ಹಲ್ಲುಗಳಿಂದ ಕೂಡಿದವನಾಗುತ್ತಾನೆ ಹಾಗೂ ಧನ, ಧರ್ಮಗಳಿಂದ ಸುಖಯುಕ್ತ. ಆಕಾಶತತ್ತ್ವ ಛಾಯೆಯಲ್ಲಿ ಜನಿಸಿದವ ಶುದ್ಧ ಸ್ವಚ್ಛ ಪಾಂಡಿತ್ಯ, ಪೂರ್ಣವಾಣಿಯವನು – ಅದರಲ್ಲಿ ಉತ್ತಮ ಮಧುರ ಶಬ್ದಗಳಿಂದ ಕೇಳುವಂತಹ ವಾಣಿ – ಕೇಳುಗರಿಗೆ ಶ್ರವಣ ಜನ್ಯ ಸೌಖ್ಯ. ಜಲಪ್ರಭಾ ಜನ್ಯದಲ್ಲಿ ಸುಖಪ್ರಾಪ್ತಿ. ವಾಯುಪ್ರಭಾದಲ್ಲಿ ಮನುಷ್ಯ ಮೂಢತಾ, ಮಾಲಿನ್ಯ ರೋಗದಿಂದ ಬಳಲುವವ, ದೈನ್ಯತೆ, ಶೋಕ, ಸಂತಾಪದಿಂದ ಕೂಡಿದವನಾಗುತ್ತಾನೆ.

ಭೌಮಾದಿಷು ಬಲಾಢ್ಯೇಷು ಫಲಮಿತ್ಥಂ ಪ್ರಜಾಯತೆ ।
ಬಲಹೀನೇಷು ತೆಷ್ವೆವಂ ವೈಪರೀತ್ಯೇನ ತದ್ ವದೇತ್ ॥೧೬॥

ಗ್ರಹೈರ್ನೀಚಾರಿರಾಶಿಸ್ಥೈರ್ಭವೇತ್ ಫಲವಿಪರ್ಯಯಮ್ ।
ನಿರ್ಬಲೈಸ್ತೈಸ್ತು ಪೂರ್ವೋಕ್ತ ಫಲಂ ಸಪ್ನೆ ಸಮಾದಿಶೇತ್ ॥೧೭॥

ಈ ಮೇಲೆ ಹೇಳಿದ ಫಲಗಳು ಮಂಗಳಾದಿ ಗ್ರಹ ಪ್ರಾಬಲ್ಯದಲ್ಲಿ ಕಂಡು

ಬರುತ್ತವೆ. ಗ್ರಹಗಳ ನಿರ್ಬಲತೆಯಲ್ಲಿ ವಿಪರೀತ ಪಲ ತಿಳಿಯುವುದು. ಗ್ರಹ ನೀಚರಾಶಿ ಶತ್ರು ಕ್ಷೇತ್ರದಲ್ಲಿ ಸ್ಥಿತರಾದಾಗ ಫಲ ವಿಪರ್ಯಯದಲ್ಲಿ ಹೇಳುವುದು. ನಿರ್ಬಲ ಗ್ರಹದ ಪೂರ್ವೋಕ್ತ ಫಲ. ಸಪ್ತ ಮುಖಾಂತರ ಕಂಡುಬರುತ್ತವೆ.

**ಅಜ್ಞಾತಜನುಷಾಂ ನೃಣಾಂ ಫಲಪಾಕೈರ್ವಿಯತ್ನದಾವಮ್ ।**
**ವಿದ್ಯಮಾನಾ ದಶಾ ಬೋಧ್ಯಾ ತದ್ರುಷ್ಟಫಲ ಶಾಂತಯೋ ॥೧೮॥**

ಯಾರ ಜನ್ಮಕಾಲಾದಿ ತಿಳಿದಿಲ್ಲವೋ ಅವರ ವರ್ತಮಾನ ದಶಾಗ್ರಹದ ಫಲ ಪಾಕದಿಂದ ತಿಳಿಯುವುದು. ದುಷ್ಟ ಫಲ ಗ್ರಹದ ದಾನ ಜಪಾದಿಗಳಿಂದ ಶಾಂತಿಯಾಗುತ್ತದೆ.

ವಿಮರ್ಶೆಯಲ್ಲಿ ಗ್ರಹ ಸಂಬಂಧ ತತ್ವಗಳ ಆಧಾರದ ಫಲಾದೇಶದಿಂದ ವರ್ತಮಾನ ಸಮಯದ ಗ್ರಹದಶಾದ ಜ್ಞಾನವಾಗುತ್ತದೆ. ಗ್ರಹದಶಾದ ಅನುಕೂಲವೇ ಕಾರ್ಯ ಕೈಗೊಳ್ಳುವ ಸಾಫಲ್ಯ ತೋರುತ್ತದೆ. ಇಲ್ಲವಾದಲ್ಲಿ ಕಾರ್ಯ ವೈಫಲ್ಯ ನಿಶ್ಚಿತ. ಅದಕ್ಕಾಗಿ ಮಹರ್ಷಿಗಳು ಗ್ರಹಗಳನ್ನು ತತ್ವಾಧಾರಿತ ಫಲಾದೇಶ ಹೇಳಿರುವುದು. ತತ್ವದ ಉದಯ ಜ್ಞಾನವಾದಾಗ ಗ್ರಹದಶಾ ತಿಳಿದು ಬರುತ್ತದೆ. ಅಗ್ನಿತತ್ವ ಉದಯ 'ಸ್ವರ್ಣದ' ಅಂದರೆ ಬಂಗಾರದಂತೆ ಕಾಂತಿ ಎಂಬುದು ಅದರ ಮೇಲಿಂದ ಮಂಗಳ ದಶಾ ಎಂದು ಈಗಿನ ದಶಾ ತಿಳಿಯಲು ಸಾಧ್ಯ. ಅದರಂತೆ ಜಾತಕದಲ್ಲಿಯ ನಿರ್ಬಲ ಗ್ರಹವಸ್ಥೆಯನ್ನು ಸ್ವಪ್ನದ ಮುಖಾಂತರ ತಿಳಿಯಲು ಸಾಧ್ಯ. ಒಬ್ಬನಿಗೆ ಯಾವಾಗಲೂ ತಿನ್ನುವ ಹಸಿವೆ, ಕನಸುಗಳು ಬೀಳುತ್ತಿದ್ದರೆ, ಅಗ್ನಿತತ್ವ ಗ್ರಹ ನಿರ್ಬಲವೆಂದು ತಿಳಿದು ಶಾಂತಿ ಮಾಡಿಸಲು ಸಾಧ್ಯ. ಈ ಅಂಶ ಮಹರ್ಷಿಗಳು ಹೇಳಿದ್ದರೆ ಇದನ್ನೊಂದು ಆಹ್ವಾನವೆಂದು ಸ್ವೀಕರಿಸಿದರೆ ಅನೇಕ ಜ್ಯೋತಿಷ್ಯದ ಜಟಿಲ ಸಮಸ್ಯೆ ಬಗೆಹರಿಸಲು ಸಾಧ್ಯ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಪಂಚಭೂತ ಫಲಾಧ್ಯಾಯಃ ಸಮಾಪ್ತಿಃ**

   

२२ನೇ ಅಧ್ಯಾಯ

# ಅಥ ತ್ರಿಗುಣ ಫಲಾಧ್ಯಾಯಃ

**ಪರಾಶರ ಉವಾಚ:**

ಗುಣಾನುಸಾರಮಥ ತೇ ಫಲಂ ವಿಚ್ಮ್ಯಧುನಾಮುನೆ ।
ಪ್ರಾಧಾದನ್ಯೆ ಸತ್ವಖೇಟಸ್ಯ ಜಾತೋ ವಿಜ್ಞಾಶ್ಚ ಸಾತ್ವಿಕಃ ॥೧॥

ರಾಜಸಗ್ರಹಪ್ರಾಧಾನ್ಯೆ ಜಾತಃಸ್ಯಾದ ರಾಜಸೋ ಬುಧಃ ।
ತಮೋಗ್ರಹಸ್ಯ ಪ್ರಾಧಾನ್ಯೆ ಮಂದದೀಸ್ತಮಸೋ ನರಃ ॥೨॥

ಗುಣತ್ರಯಸ್ಯ ತುಲ್ಯತ್ವೆ ಜಾತೋ ಮಿಶ್ರಗುಣಿ ಸ್ಮೃತಃ ।
ಚತುರ್ಧಾ ಮಾನವಾಶ್ಚೈವ ಮುದಾಸೀನಾಃ ಕ್ರಮೇಣ ತೆ ॥೩॥

ಶ್ರೇಷ್ಠ ಮಧ್ಯಾಧಮಾಶ್ಚೈವ-ಮುದಾಸೀನಾಃ ಕ್ರಮೇಣ ತೆ ।
ಪ್ರಾಚೀನ ಮುನಿಭಿಃ ಪ್ರೋಕ್ತಾಂಸ್ತದ್‌ಗುಣಾನ್ ಕಥಿಯಾಮಿತೆ ॥೪॥

**ಪರಾಶರರು ಹೇಳಿದರು—**

ಹೇ ಮೈತ್ರೇಯ,

ಈಗ ನಾನು ತ್ರಿಗುಣಾನುಸಾರ ನಿನಗೆ ಫಲ ಹೇಳುತ್ತೇನೆ. ಜನ್ಮಸಮಯ ಸತ್ವಗುಣ ಪ್ರಧಾನ ಗ್ರಹದ ಪ್ರಧಾನತೆಯಿದ್ದರೆ ಜಾತಕ ಸಾತ್ವಿಕ ಹಾಗೂ ವಿದ್ವಾನ್ ನಾಗುವವನು. ರಾಜಸ ಗುಣ ಗ್ರಹ ಪ್ರಧಾನವಾಗಿದ್ದರೆ ರಾಜಸ ಗುಣದವನು ವಿದ್ವಾನನು ಆಗುವನು. ಅದೇ ತಾಮಸ ಗುಣ ಪ್ರಾಧಾನ್ಯ ಗ್ರಹದ ಪ್ರಾಧಾನ್ಯತೆ ಯಲ್ಲಿ ಜನಿಸಿದ್ದರೆ ಮಂದಬುದ್ಧಿ ಹಾಗೂ ತಾಮಸ ಪ್ರಕೃತಿಯವನು ಆಗುವನು. ಮೂರು ಗುಣದ ಸಮತೆಯಲ್ಲಿ ಅಥವಾ ಯಾವುದೇ ಗ್ರಹಗಳ ಪ್ರಾಬಲ್ಯತೆಯಲ್ಲಿ ಮಿಶ್ರಗುಣದವನಾಗುವನು. ಈ ಪ್ರಕಾರ ಸಾತ್ವಿಕ, ರಾಜಸ, ತಾಮಸಿಕ ಮಿಶ್ರ ನಾಲ್ಕು ಗುಣದವರಿರುತ್ತಾರೆ. ಅವರನ್ನು ಉತ್ತಮ, ಮಧ್ಯಮ, ಅದಮ ಹಾಗೂ ಉದಾಸೀನ ರೆಂದು ಕರೆಯುವರು. ಪ್ರಾಚೀನ ಮುನಿಗಳಿಂದ ಉಕ್ತ ಈ ನಾಲ್ಕು ವಿಧ ಜನರ ಗುಣಗಳನ್ನು ವಿವರಿಸುತ್ತೇನೆ.

ಶಾಂತೋದಾಂತಃ ಶುಚಿಃ ಶಾಂತಃ ಸಕಲಃಸತ್ಯವಾಗಾಪಿ ।
ಅಲುಬ್ಧಸ್ತಾಪಸಃ ಸತ್ವಪ್ರಾಧಾನ್ಯೆ ಜಾಯತೆ ನರಃ ॥೫॥

ತೇಜಸ್ವಿ ಧೃತಿಮಾನ್ ದಕ್ಷಃ ಸಮರೆ ತ್ವಪರಾಂಗಮುಖಃ ।
ಸತಾಂ ಶರಣ್ಯಸ್ತು ಜನಃ ಪ್ರಾಧಾನ್ಯೆ ರಾಜಸೋ ಭವೇತ ॥೬॥

ಲಬ್ಧೋ ಮಿಥ್ಯಾಭಿಭಾಷಿ ಚಾಲಸೊ ಮುರ್ಖೋಽಧರ್ಮಸ್ತಥಾ ।
ಸೇನಾಸು ನಿಪುಣೋ ಜಾತಃ ಪ್ರಾಧಾನ್ಯೆ ತಮಸೋ ಭವೇತ್ ॥೭॥

ಸತ್ವಗುಣಗ್ರಹ ಪ್ರಾಧಾನ್ಯತೆಯಲ್ಲಿ ಜಾತಕ ಶಾಂತಕುಸಂಗತಿಗಳಿಂದ ದೂರ ಹಾಗೂ ಇಂದ್ರಿಯಾದಿ ನಿಗ್ರಹವುಳ್ಳವ, ಪವಿತ್ರ, ಕ್ಷಮಾಶೀಲ, ಸತ್ಯವಕ್ತಾ, ಲೋಭರಹಿತ ತಪಸ್ವಿಯಾಗಿರುತ್ತಾನೆ. ಅದೇ ರಜೋಗುಣ ಪ್ರಾಧಾನ್ಯತೆಯಲ್ಲಿ ಜಾತಕ ತೇಜಸ್ವಿ, ಧೈರ್ಯಶಾಲಿ, ಕುಶಲ, ಯುದ್ಧದಲ್ಲಿ ಪರಾಂಗ ಮುಖನಾಗದವ – ಸಜ್ಜನರಿಗೆ ಶರಣಾಗುವವನಾಗುತ್ತಾನೆ. ತಮೋಗುಣ ಪ್ರಾಧಾನ್ಯತೆಯಲ್ಲಿ ಜಾತಕ ಲೋಭಿ, ಮಿಥ್ಯಾವಾದಿ, ಆಲಸಿ, ಮೂರ್ಖ, ನೀಚ ಆದರೆ ಸೇನೆಯಲ್ಲಿ ನಿಪುಣ ನಾಗಿರುತ್ತಾನೆ.

## ಉದಾಸೀನ ಪುರುಷ ಲಕ್ಷಣ

ಕೃಷೀವಲೋ ವಣಿಕ್ಕರ್ಮ ಕುಶಲಃ ಪಶುಪಾಲಕಃ ।
ಸತ್ಯಾನೃತ ಪ್ರವಕ್ತಾ ಚ ಗುಣಸಾಮ್ಯೆ ಜನೋಽಭವೇತ್ ॥೮॥

ಗುಣಸಾಮ್ಯದಲ್ಲಿ (ಜನ್ಮ ಸಮಯದಲ್ಲಿ ಯಾವುದೇ ಗ್ರಹ ಪ್ರಾಧಾನ್ಯತೆಯಲ್ಲಿ ದಾನ) ಜಾತಕ ಒಕ್ಕಲುತನದಲ್ಲಿ ತೊಡಗಿದವ, ವಾಣಿಜ್ಯ ಕರ್ಮ, ಪಶುಪಾಲನ ದಕ್ಷ, ಸತ್ಯ-ಸುಳ್ಳುಗಳೊಡನೆ ಮಾತನಾಡುವವನಾಗುತ್ತಾನೆ.

ಏವಂ ಚತುರ್ವಿಧಾನುಕ್ತಾನುತತಮಾಧಮ ಮಧ್ಯಮಾನ್ ।
ಉದಾಸೀನಾಂಶ್ಚ ವಿಬುಧಸ್ತತ್ತತ್ಕರ್ಮಾಣಿ ಯೋಜಯೇತ್ ॥೯॥

ಗುಣೇಷು ಯಸ್ಯ ಪ್ರಾಬಲ್ಯ ಮಾದಿಕ್ಯಂ ತಸ್ಯ ಜಾಯತೆ ।
ಗುಣಾನಾಂ ತುಲ್ಯತಾ ವೇದ್ಯಾ ವೈಪರೀತ್ಯೆ ದ್ವಿಜರ್ಷಭ ॥೧೦॥

ಹೇ ದ್ವಿಜ ಶ್ರೇಷ್ಠ (ಜ್ಯೋತಿಷಿಯಾದ್ದರಿಂದ) ಈ ಪ್ರಕಾರ ಪ್ರಾಗಯುಕ್ತ ಉತ್ತಮ, ಮಧ್ಯಮ, ಅಧಮ ಹಾಗೂ ಉದಾಸೀನ ಪುರುಷರನ್ನು ಅವರವರ ಕರ್ಮಾನುಸಾರ ಗಣಿಸಲ್ಪಟ್ಟಿದೆ ಹಾಗೂ ಅವರವರ ಗುಣಾನುಸಾರ ಕರ್ಮದಲ್ಲಿ ವಿದ್ವಾನರು ನಿಯೋಜಿಸಬೇಕು. ಮೇಲಿನ ಗುಣತ್ರಯಗಳಲ್ಲಿ ಪ್ರಾಬಲ್ಯ ಗುಣವಿರುತ್ತದೆಯೋ ಆ ಕರ್ಮ ಪ್ರಾಬಲ್ಯವಿರುತ್ತದೆ. ಅನ್ಯಥಾ ಗುಣ ಸಾಮ್ಯವೆಂದು ತಿಳಿಯುವುದು.

## ಗುಣ ಪ್ರಯೋಜನ

ಗುಣಾನಾಮೇವ ಸಾದೃಶ್ಯೆ ಸಾಮಿಸೇವಕಯೇಸ್ತಥಾ ।
ಕುಮಾರಿವರಯೇಶ್ಚಾಪಿ ಸೌಹಾರ್ದಮತಿಸುಸ್ಥಿರಮ್ ॥೧೧॥

ನೀಚಯ್ಯ ನಿರಪೇಕ್ಷೇಣ ಮಧ್ಯಮಸ್ಯಾಪಿ ತೇನಚೇತ್ ।
ಮಧ್ಯೆಮೇನೋತ್ತಮಸ್ಯಾಪಿ ಸಂಬಂಧೋ ಮೊದದಃ ಸ್ಮೃತಿಃ ॥೧೨॥

ಯಜಮಾನ ಹಾಗೂ ಸೇವಕರಲ್ಲಿ ಕನ್ಯಾವರದಲ್ಲಿ ಗುಣದಂತೆ ಸಾಮ್ಯವಿದ್ದರೆ ಪರಸ್ಪರ ಸೌಹಾರ್ದ ಅತ್ಯಧಿಕ ಸುಸ್ಥಿರವಾಗುತ್ತದೆ. ಅಧಮ ಹಾಗೂ ಉದಾಸೀನನ ಜೊತೆಗೆ ಮಧ್ಯಮನ ಜೊತೆಗೆ ಸಂಬಂಧವಾದರೆ ಮೋದಪ್ರದವಾಗುತ್ತದೆ.

## ವಿಶೇಷ

ವರವಧ್ವೋರ್ವರಃ ಶ್ರೇಷ್ಠಃ ಸಾಮಿ ಚಾಪಿಸ್ವನೇವಕಾತ್ ।
ಗುಣತಸ್ತರ್ಹಿ ಸೌಖ್ಯಂ ಸ್ಯಾದ್ ವೈಪರೀತ್ಯೆ ವಿಪರ್ಯಯಃ ॥೧೩॥

ಮಾತಾ ಪಿತಾ ಜನುಃ ಕಾಲಃ ಸಂಸರ್ಗಶ್ಚೋರೋತ್ತರಮ್ ।
ಗುಣೇಷು ಪ್ರಬಲೋ ಹೇತು ರುತ್ತಮಾದಿಷು ಜಾಯತೆ ॥೧೪॥

ಜನ್ಮಕಾಲಿಸಮಸ್ತಸ್ಮಾದ್ ಗುಣಃ ಸಂಚಯತೆ ಜನೆ ।
ವಿವಿಚ್ಯೈವಂ ಸದಾ ವಿಜ್ಞೈವಿಜ್ಞೇಯಂಸದಸತ್ಫಲಮ್ ॥೧೫॥

ವರ-ವಧುಗಳ ಮೇಲಾಪ ವಿಚಾರದಲ್ಲಿ ಸತತ ವರನ ವಿಚಾರ ಮುಖ್ಯದಂತೆ ಸ್ವಾಮಿ ಸೇವಕನ ವಿಚಾರದಲ್ಲಿ ಸ್ವಾಮಿಗುಣ ಅಧಿಕವಾಗಿರಬೇಕು. ಅಧಿಕವಾಗಿದ್ದರೆ ಸುಖ ಸೌಹಾರ್ದ ಸಂಭವ. ಅನ್ಯಥಾ ಸೌಹಾರ್ದದಲ್ಲಿ ಕಡಿಮೆಯಾಗುತ್ತದೆ. ಮಾತಾ-ಪಿತಾ ಜನ್ಮ ಸಮಯ ಹಾಗೂ ಸಂಗತಿ ವಿತ್ತಮಾದಿ ನಾಲ್ಕು ಗುಣಾವಗುಣ ಬರುತ್ತವೆ. ಆದ್ದರಿಂದ ಜನ್ಮಸಮಯ ಪ್ರಕಾರ ಜಾತಕದಲ್ಲಿ ಗುಣವಿರುತ್ತವೆ. ಇದನ್ನು ನೋಡಿಯೇ ಫಲಾದೇಶ ಮಾಡುತ್ತಾರೆ.

ಭೂತಾನಾಮಂತಕೃತ್ ಕಾಲಃ ಪಾಲಕಃ ಸೃಷ್ಟಿಕಾರಕಃ ।
ಈಶಃ ಸಮಸ್ತಲೋಕಾನಾ-ಮಕ್ಷಯೋ ವ್ಯಾಪಕಃ ಪ್ರಭುಃ ॥೧೬॥

ಕಾಲದ ಸಂಸಾರದಲ್ಲಿ – ಸಮಸ್ತ ಪ್ರಾಣಿ ಚರಾಚರ ವಸ್ತುಗಳ ಆಶ್ರಯ ಹಾಗೂ ಎಲ್ಲರ ಪಾಲಕ ವಿನಾಶಕಾರಕ – ಕಾಲನೇ ಆಗುತ್ತಾನೆ. ಕಾಲನೇ ಪ್ರಬ್ರಹ್ಮ. ಅವನು ಅವಿನಾಶಿ ಹಾಗೂ ಸಮಸ್ತ ಚರಾಚರಕ್ಕೂ ಈಶ(ಒಡೆಯ).

ಶಕ್ತಿಸ್ತದೀಯಾ ಪ್ರಕೃತಿಃ ಗುಣತ್ರಯಯುತಾ ಮಾತಾ ।
ವಿಭಜಿತಸ್ತಯಾವ್ಯಕ್ತೋ ವ್ಯಕ್ತಿ ಭವತಿ ಜಂತುಷು ॥೧೭॥

ಗುಣಾನುಸಾರ ತಸ್ತಸ್ಯ ಸ್ಯುರಂಗಾನಿ ತತೋಜನಃ ।
ಉತ್ತಮೋ ಮಧ್ಯಮಶ್ಚೈವ ಮನಿಪೇಕ್ಷೋಧಮಸ್ತಥಾ ॥೧೮॥

ಆ ವ್ಯಾಪಕ ಈಶನ ತ್ರಿಗುಣಾತ್ಮಿಕ ಶಕ್ತಿಯೇ ಪ್ರಕೃತಿ ಎಂದು ಕರೆಯಲ್ಪಡುತ್ತವೆ. ಆ ಶಕ್ತಿಯ ವಿಭಜನೆಯಿಂದ ಜಂತುಗಳ ನಿರ್ಮಿತ (ಜಂತುಗಳು ವ್ಯಕ್ತವಾಗುತ್ತವೆ) ಆ ಪ್ರಕೃತಿಯ ಅಧ್ಯಕ್ಷ ಪ್ರಭುವಿನ ಅಂಶ ಗುಣಾನುಸಾರವಾಗುತ್ತವೆ. ಅಥಃ ಉತ್ತಮ, ಮಧ್ಯಮ, ಅದಮ, ಉದಾಸೀನವೆಂದು ನಾಲ್ಕು ವಿಧರಾಗಿರುತ್ತಾರೆ.

ಕ್ರಮಾದುತ್ತಮಮಧ್ಯೋದಾ - ಸೀನಾಧಮಜನಾ ಮುನೇ ।
ಅಂಗಾನಾಮುತ್ತಮಾದಿಭ್ಯೋ - ಜಾಯಂತೇ ತು ಚತುರ್ವಿಧಾಃ ॥೧೯॥

(ಪುರುಷ ಸೂಕ್ತದ ಸ್ಪಷ್ಟವಿಚಾರ) ಆ ಈಶನ ಉತ್ತಮಾಂಗದಿಂದ ಉತ್ತಮ, ಮಧ್ಯಮಾಂಗದಿಂದ ಮಧ್ಯಮ, ಉದಾಸೀನಾಂಗದಿಂದ ಉದಾಸೀನ, ಅಧಮಾಂಗ ದಿಂದ ಅಧಮರು ವ್ಯಕ್ತರಾಗುತ್ತಾರೆ. ಈ ಸೃಷ್ಟಿಯಿಂದ ಚತುರ್ವಿಧ ಮನುಷ್ಯರು ಉತ್ಪನ್ನರಾಗುತ್ತಾರೆ.

ಉತ್ತಮಾವಯವೋ ಮೂಲಾರ್ಧಾ ಮಧ್ಯಮಾವಯವೋಷ್ಕುರಃ
ನಿರಪೇಕ್ಷೆ ತಥೈವೋರು ಜ್ಞೇಯ ಪಾದೋವರೋ ಬುಧ್ಯೈಃ ॥೨೦॥

ಈಶನ ಉತ್ತಮಾಂಗ ಶಿರ, ಮಧ್ಯಮಾಂಗ ವಕ್ಷಸ್ಥಲ, ಉದಾಸೀನ ಸೊಂಟದ ಕೆಳಭಾಗ ಹಾಗೂ ಅಧಮಾಂಗ ಚರಣ.

ಇದೇ ಅಂಶ

ಪುರುಷಸೂಕ್ತ ಯತ್ಪುರುಷಂ ವ್ಯದದುಃ ಕತಿಧಾವ್ಯಕಲ್ಪಯನ್ ।
ಮುಖಂ ಕಿಮಸ್ಯ ಕೌಬಾಹೂಕಾವೂರೂಪದಾ ಉಚ್ಯತೆ ॥

ಬ್ರಾಹ್ಮಣೋಸ್ಯ ಮುಖಾಸೇದ್ಬಾಹೂ ರಾಜನ್ಯಃ ಕೃತಃ ।
ಊರು ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥

ಎಂದಿದ್ದಾರೆ.

ಗುಣಾನುಸಾರತಃ ಕಾಲ ವಿಭೇದಸ್ತುತ್ ವಶಾತ್ ಪುನಃ ।
ಜಾತೋ ಭೇದಸ್ತು ವಿಪ್ರೇಂದ್ರ । ಚರಾಚರಗತೋ ಭವೇತ್ ॥೨೧॥

**ಗುಣಾನುಸಾರತಃ ಕಾಲೋ ವ್ಯಾಪಕೋ ಭಗವಾನ್ ಪ್ರಭುಃ ।**
**ಚತುರ್ವಿಧೋ ಜಗದಿದಂ ಸಸರ್ಜಾತು ಚತುರ್ವಿಧಮ್ ॥೨೨॥**

ಈ ಪ್ರಕಾರ ಗುಣಗಳ ಅನುಸಾರ ಕಾಲಭೇದ ನಂತರ ಚರಾಚರದಲ್ಲಿ ಜಾತಿ ಭೇದವಾಗುತ್ತದೆ. ಗುಣಾನುಸಾರವೇ ವ್ಯಾಪಕ ಚತುರ್ವಿಧ. ಸೃಷ್ಟಿ ನಿರ್ಮಾಣ

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ತ್ರಿಗುಣ ಫಲಾಧ್ಯಾಯಃ ಸಮಾಪ್ತಿಃ**

## ೭೮ನೇ ಅಧ್ಯಾಯ

# ಅಥ ನಷ್ಟಜಾತಕಾಧ್ಯಾಯಃ

### ಮೈತ್ರೇಯ ಉವಾಚ:

ಮಹರ್ಷೆ। ಜನ್ಮಸಮಯಾದ್ ಭವತ್ ಫಲಮಿರಿತವಮ್ ।
ಅಜ್ಞಾತಜನ್ಮಕಾಲಾನಾಂ ಕಥಂ ತಜ್ಞಾಯತೆ ಬುಧೈಃ ॥೧॥

ಪೂರ್ವಜನ್ಮಕೃತಂ ಕರ್ಮ ಸದಸನ್ಮಾನವಸ್ಯ ಯತ್ ।
ತಜ್ಞಾತುಂ ಪ್ರಭವೇದ್ ಯೇನ ತಮುಪಾಯಮುದೀರಯ ॥೨॥

### ಮೈತ್ರೇಯರು ಕೇಳಿದರು–

ಜನ್ಮ ಸಮಯದ ಮೇಲೆ ಆಧಾರಿತ ಫಲವನ್ನು (ಕುಂಡಲಿಯಂತೆ) ತಾವು ಹೇಳಿದ್ದೀರಿ. ಆದರೆ ಯಾರ ಜನ್ಮಕಾಲವು ತಿಳಿದಿಲ್ಲವೋ ಅವರ ಫಲಾದೇಶ ಯಾವ ರೀತಿ ಹೇಳುವುದು? ಪೂರ್ವಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮ ಯಾವುದ ರಿಂದ ತಿಳಿದುಕೊಳ್ಳುವುದು? ಅದರ ಉಪಾಯ ಹೇಳಿರಿ.

### ಪರಾಶರ ಉವಾಚ :

ಪ್ರಶ್ನೋಽಯಂ ಭವತಃ ಸಾಧುರ್ಲೋಕೋಪಕೃತಿರಾರಕಃ ।
ಬ್ರುವೀಮಿ ತಸ್ಮಾದ್ ಜ್ಞಾತ ಜನುಷಾಂ ಫಲಮಾದರಾತ್ ॥೩॥

ಪ್ರಶ್ನತೋಽಬ್ದಾಯರ್ತು ಋತು ಪಕ್ಷತಿಥ್ಯಾಕ್ಷ ರಾಶಿಷು ।
ಅಜ್ಞಾತೇಷ್ವಪಿ ತಜ್ಞಾತುಂ ಶಕ್ಯತೆ ನಾತ್ರ ಸಂಶಯಃ ॥೪॥

### ಪರಾಶರರು ಹೇಳಿದರು–

ಹೇ ಮೈತ್ರೇಯ,

ಈ ನಿನ್ನ ಪ್ರಶ್ನೆ ಲೋಕೋಕಾರಕವಾಗಿದೆ. ಆದ್ದರಿಂದ ಅಜ್ಞಾತ ಜನ್ಮಕಾಲದ ವ್ಯಕ್ತಿಯ ಜಾತಕ ಫಲ ಸಾದರ ಹೇಳುತ್ತೇನೆ. ವರ್ಷ, ಆಯನ, ಋತು, ಪಕ್ಷ, ತಿಥಿ, ನಕ್ಷತ್ರ ಆದಿ ಅಜ್ಞಾತವಾಗಿದ್ದರೂ ಅವನ ಜ್ಞಾನಪ್ರಶ್ನೆ – ನಿಸ್ಸಂದೇಹ ತಿಳಿಯಲು ಬರುತ್ತದೆ ಕೇಳು.

## ವರ್ಷ ಜ್ಞಾನ ಪದ್ಧತಿ

ಪ್ರಶ್ನೆ ಲಗ್ನ ಭಾಸ್ಕರಾಂಶ ರಾಶೌ ಜೀವೆ ಜನುರ್ಭವೇತ್ ।
ಸೌಮ್ಯಯಾಮ್ಯಯನ ಸ್ಯಾತಾಂ ಹೋರಾಪೂರ್ವಪರಾರ್ಧಯೋ ॥೩॥

ಮಂದ ಶುಕ್ರಾರ ಚಂದ್ರಜ್ಞ ಜೀವೈಹೋರಾದ್ರೇಕಾಣಪೈಃ ।
ಋತುವಃ ಶಶಿರಾದ್ಯಾಸ್ತು ಗ್ರೀಷ್ಮ ಏವಾರ್ಕತೋ ಮತಃ ॥೬॥

ಪ್ರಶ್ನೆ ಲಗ್ನ ಯಾವ ದ್ವಾದಲ್ಲಿದೆಯೋ ಅದೇ ರಾಶಿಯ ಸಂವತ್ಸರ (ಅದೇ ರಾಶಿಗತ ಗುರುಜನ್ಮಸಮಯ – ಯಾವ ರಾಶಿಯಲ್ಲಿದ್ದನೋ) ಎಂದು ತಿಳಿಯುವುದು. ಲಗ್ನದ ಪೂರ್ವಾರ್ಧ ಉತ್ತರಾಯಣ, ಉತ್ತರಾರ್ಧ ದಕ್ಷಿಣಾಯಣ ವೆಂದು ತಿಳಿ. ಲಗ್ನದ ದ್ರೇಷ್ಕಾಣೇಶ ಶನಿಯಾಗಿದ್ದರೆ ಶಿಶಿರ ಶುಕ್ರನಾಗಿದ್ರೆ ವಸಂತ ಮಂಗಳನಾಗಿದ್ದರೆ ಗ್ರೀಷ್ಮ ಚಂದ್ರನಾಗಿದ್ದರೆ ವರ್ಷಾ; ಬುಧನಾಗಿದ್ದರೆ ಶರತ್ ಹಾಗೂ ಗುರುವಾಗಿದ್ದರೆ ಹೇಮಂತ, ಅದೇ ಸೂರ್ಯನಾಗಿದ್ದರೆ ಗ್ರೀಷ್ಮ ಋತುವೆಂದು ತಿಳಿಯುವುದು.

ಅಯನರ್ತುವಿಸಂವಾದೆ ವಿದಿಂದು ಗುರವಃ ಕ್ರಮಾತ್ ।
ಭೌಮಭಾರ್ಗವಮಂದೈಸ್ತು ವಿನಿಮೇಯಾ ಮಿಥೊ ಬುಧೈಃ ॥೭॥

ಒಂದು ವೇಳೆ ಅನಯ ಋತುವಿನಲ್ಲಿ ಭಿನ್ನತ್ವ ಬಂದರೆ ಬುಧನ ಸ್ಥಾನ – ಭೌಮ, ಚಂದ್ರನ ಸ್ಥಾನ – ಶುಕ್ರ, ಗುರುಸ್ಥಾನ – ಶನಿ ಎಂದು ತಿಳಿದು ಲೆಕ್ಕ ಹಾಕುವುದು.

ದೃಕಾಣಾರ್ಧೆ ಪೂರ್ವಮಾಸೋ ಪರಃ ಸ್ಯಾದಪರೇರ್ಧಕೆ ।
ದೃಕಾಣಾಂಶಾನುಪಾತೇನ ಸೂರ್ಯಾಂಶಸದೃಶಾ ತಿಥಿಃ ॥೮॥

ತತಃ ಸಿದ್ಧೆಷ್ಟಕಾಲೋಯೋ ಜನುಃ ಕಾಲಃ ಸತಾಂಮತಿಃ ।
ತತೋಗ್ರೇಹೇಭ್ಯೋ ಭಾವೇಭ್ಯಃ ಪೂರ್ವವಿತ್ ಫಲಮಾದಿಶೇತ್ ॥೯॥

ಋತು ಜ್ಞಾನಾನಂತರ ದ್ರೇಷ್ಕಾಣದ ಪೂರ್ವಾರ್ಧದಲ್ಲಿ ಋತುವಿನ ಪೂರ್ವಾರ್ಧ ಉತ್ತರಾರ್ಧದಲ್ಲಿ ದ್ವಿತೀಯ ಮಾಸ ದ್ರೇಷ್ಕಾಣಾಂಶಾನುಪಾದದಿಂದ ತಿಥಿಜ್ಞಾನ ತಿಳಿಯುವುದು (ಸೂರ್ಯಾಂಶ) ಸೂರ್ಯಾಂಶದಿಂದ ಇಷ್ಟಕಾಲ ಪ್ರಶ್ನೆ ಕರ್ತನ ಜನ್ಮಸಮಯವೆಂದು ತಿಳಿಯುವುದು. ಆ ಸಮಯದಲ್ಲಿ ಬಂದ ಗ್ರಹಭಾವ ಗಳಿಂದ ಫಲಾದೇಶ ಮಾಡುವುದು.

## ಮೈತ್ರೇಯ ಉವಾಚ:

ದ್ವಾದಶಾಬ್ದೈಃ ಪುನರಪಿ ಜೀವಸ್ತದ್ ಭಗತೋ ಯತಃ ।
ಪರ್ಯಾಯೋ ಕತಮ ಬೋಧ್ಯಾಸ್ತದಿಯೋ ಜನ್ಮವತ್ಸರಃ ॥೧೦॥

## ಮೈತ್ರೇಯ ಪ್ರಶ್ನಿಸಿದುದು–

ಹೇ ಮಹರ್ಷಿ, ಗುರು 12 ವರ್ಷಗಳ ನಂತರ ಅದೇ ರಾಶಿಗೆ ಬರುವುದರಿಂದ ಪರ್ಯಾಯದಿಂದ ಅದೇ ಜನ್ಮಾಬ್ದವಾಗುವುದರಿಂದ ಹಿಂದೆ ಅಥವಾ ಮೊದಲು ಆಗಿದ್ದರೆ ಹೇಗೆ ಗುರು ತಿಳಿಸುವುದು?

## ಪರಾಶರ ಉವಾಚ:

ಸಂದಿಗ್ಧೆ ವತ್ಸರೆ ತತ್ರಾನುಮಿತ್ಯಾ ವಯಸಃ ಕ್ಷಿಪೇತ್ ।
ವರ್ಷಾಣಿ ದ್ವಾದಶ ಮುಹು ಸ್ತದಾಬ್ದಾವಗಮೊ ಭವೇತ್ ॥೧೧॥

ಅಥಾಪಿ ತತ್ರ ಸಂದಿಗ್ಧೆ ಜೀವೋಂಗಾತ್ ಕೋಣಗೊ ಮುನೆ ।
ಕಲ್ಪನೀಯೋನುಮಿತ್ಯಾ ತು ವಯಸೋ ವತ್ಸರಸ್ತತಃ ॥೧೨॥

## ಪರಾಶರರು ಉತ್ತರಿಸಿದುದು–

ಸಂವತ್ಸರದ ಸಂದಿಗ್ಧಾವಸ್ಥೆಯಲ್ಲಿ ಪ್ರಶ್ನಕರ್ತನ ಅವಸ್ಥಾದಿಂದ ಅನುಮಾನದಿಂದ ನಿರ್ಧರಿಸಿ ಜನ್ಮಾಂಕದ ಚಕ್ರಕ್ಕೆ ಗುರುವಿನ ರಾಶ್ಯಾಂತದಲ್ಲಿ 12, 12 ವರ್ಷ ಜೋಡಿಸಿ ಸಂಭವ ಸಂಖ್ಯೆ ತುಲ್ಯ ವರ್ಷ ತಿಳಿದು ವರ್ಷ ಜ್ಞಾನ ತಿಳಿಯುವುದು. 12 ಕೂಡಿಸುವುದರಿಂದಲೂ ಅಂತರವೆಂದು ಕಂಡುಬಂದರೆ – ಪ್ರಶ್ನ ಲಗ್ನದ ತ್ರಿಕೋನದಲ್ಲಿ ಗುರುವೆಂದು ತಿಳಿದು ಪ್ರಶ್ನೆಕರ್ತನ ಅವಸ್ಥೆ ಅನುಸಾರ (ಪಂಚಮ ನವಮಕ್ಕೆ ಸಮೀಪವಿದ್ದರೆ ನವಮ ಸಂವತ್ಸರ ತಿಳಿದು ಪೂರ್ವೋಕ್ತ ವಿಧಿಯಿಂದ ಲಗ್ನ ತೆಗೆಯುವುದು.)

## ಮೈತ್ರೇಯ ಉವಾಚ:

ಜ್ಞಾತೇಪಿ ಮಾಸೆ ಸಾರ್ಕತೆ ಮಹರ್ಷೆ । ಜಾಯತೆ ಕಥಮ್ ।
ಜನುಷಃ ಸಮಯಜ್ಞಾನಮಿತಿಮೇ ವದ ತತ್ವತಃ ॥೧೩॥

## ಮೈತ್ರೇಯರು ಕೇಳಿದರು–

## ಹೇ ಮಹರ್ಷಿಯೇ,

ಮೇಲಿನ ವಿಧಿ ವಿಧಾನದಿಂದ ಮಾಸ ಸೂರ್ಯಾಂಶ (ತಿಥಿ) ತಿಳಿದರೂ ಜನ್ಮಕಾಲ ಹೇಗೆ ತಿಳಿಯಲ್ಪಡುತ್ತವೆ. ಇದನ್ನು ಕೃಪೆ ಮಾಡಿ ತಿಳಿಸು.

## ಪರಾಶರ ಉವಾಚ:

ರವೇಸ್ತು ಸಂಕ್ರಮಾದಂಶ ಸಮೇಹನಿ ತು ಸಾಧಯೇತ್ ।
ಸೂರ್ಯಮೌದಯಿಕಂ ತಸ್ಮಾ ತರಮಿಷ್ಟರ್ಕತೋಹಿಯತ್ ॥೧೪॥

ಕಲಾತ್ಮಕಂ ಷಷ್ಟಿನಿಘ್ನಂ ಸ್ವಷ್ಟಾರ್ಕಗತಿಬಿರ್ಹೃತಮ್ ।
ಲಬ್ಧ ಘಟ್ಯಾದಿ ಮಾನೇನ ಸಮಃ ಸೂರ್ಯೋದಯಾತ ಪುರಃ ॥೧೫॥

ಪರಸ್ತಾದ್ ವಾ ಪ್ರಶ್ನಕರ್ತು ಜನಃ ಕಾಲ ವಿದೀರಿತಃ ।
ಉದಯಾರ್ಕದಭಿಷ್ಟಾರ್ಕೆ ಕ್ರಮಾದ್ದಿ ನೆಧಿಕೇಪಿ ಚ ॥೧೬॥

## ಪರಾಶರರು ಉತ್ತರಿಸಿದುದು–

## ಹೇ ಮೈತ್ರೇಯ,

ಸೂರ್ಯನ ರಾಶ್ಯಾಂಶಾದಿ ತಿಳಿದ ನಂತರ ಸಂಕ್ರಾಂತಿಯ ಅನಂತರ ಸೂರ್ಯನು ಗತಾಂಶದಷ್ಟೆ ದಿನ ಸಂಕ್ರಾಂತಿಯ ನಂತರದ ಉದಯಿಕ ಸೂರ್ಯ ಸ್ಪಷ್ಟಸಾಧಿಸಿ ಆ ಸಾಧಿತ ಸೂರ್ಯ ಹಾಗೂ ಇಷ್ಟ (ಪೂರ್ವಗತ ಜನ್ಮಕಾಲಿಕ) ಸೂರ್ಯನ ಕಲಾತ್ಮಕ ಅಂತರವನ್ನು 60ರಿಂದ ಗುಣಿಸಿ ಸ್ವಷ್ಟ ಸೂಯನ ಗತಕಾಲದಿಂದ ಭಾಗಿಸಿ ಉಳಿದ ಲಬ್ಧ ಘಟ್ಯಾದಿ ತುಲ್ಯ ಸೂರ್ಯೋದಯ ಪೂರ್ವ ಅಥವಾ ಸೂರ್ಯೋದಯ ನಂತರ ಎಂದು ಅದನ್ನೇ ಪ್ರಶ್ನಕರ್ತನ ಜನ್ಮವೇಷ್ಟ ಕಾಲವೆನ್ನುವುದು. ಇಷ್ಟು ಕಡಿಮೆಯಾದರೆ ಪೂರ್ವ (ಸೂರ್ಯೇಯ ಪೂರ್ವ) ಹೆಚ್ಚಾದರೆ ಸೂರ್ಯೋದಯದ ನಂತರ ವೆನ್ನುವುದು.

ಈ ವಿಧಾನ ಕೇವಲ ಮನಸ್ಸಂತೋಷಕ್ಕೆ ಎಂಬುದು ನಿರ್ವಿವಾದ. ಅದೇ ಪ್ರಶ್ನೆ ಕರ್ತ ಬೇರೆ ಸಮಯದಲ್ಲಿ ಬೇರೆ ಜ್ಯೋತಿಷಿಯನ್ನು ಕೇಳಿದಾಗ ಆ ಲಗ್ನಾದಿಗಳು ಅಂಶಾದಿಗಳೇ ಬೇರೆ ಯಾವುದೇ ಲಗ್ನವಾಗಬಹುದು. ಅದಕ್ಕಾಗಿ ಈ ವಿಧಾನ ಶ್ರದ್ಧಾಳುಗಳ ಮನಸಂತೋಷಕ್ಕಾಗಿ ಇದೆ.

ವಸ್ತುತಃ ಶುದ್ಧ ಜನ್ಮಲಗ್ನಕಾಲವೇ – ಪೂರ್ಣ ಶ್ರೇಯಸ್ಕರ. ಈ ಮೇಲೆ ಹೇಳಿದ ಭ್ರಮದಲ್ಲಿ ಅಲ್ಲ, ಕುಂಡಲಿ ತಯಾರಾದರೂ ಮಹರ್ಷಿಗಳು ಹೇಳಿದರು ಎಲ್ಲ ಮಹರ್ಷಿಗಳು ಜನ್ಮಕಾಲಕ್ಕೆ ಹೆಚ್ಚು ಒತ್ತುಕೊಟ್ಟು ಹೇಳಿದ್ದಾರೆ. ಕೇವಲ ಪ್ರಶ್ನೆ ಲಗ್ನದ ಮೇಲಿಂದ ವಿಶೇಷ ಪ್ರಶ್ನೆ ನೋಡುವುದು ಸರಿಯಾದ ವಿಧಾನ.

ಹೀಗಾಗಿ ಇಲ್ಲಿ ಉದಾಹರಣೆ ವಿವರಿಸಿಲ್ಲ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ನಷ್ಟಜಾತಕಾಧ್ಯಾಯಃ ಸಮಾಪ್ತಿಃ**

## ೭೯ನೇ ಅಧ್ಯಾಯ

# ಅಥ ಪ್ರವಜ್ಯಾಯೋಗಾಧ್ಯಾಯಃ

**ಪರಾಶರ ಉವಾಚ:**

**ಅಥ ಸಂಪ್ರತಿ ತೆ ವಚ್ಮಿ ಪ್ರವಜ್ಯಾಯೋಗಮುತ್ತಮಮ್ ।**
**ಯೇನಾಪಹಾಯ ಸರ್ವಸ್ವ ವಿರಕ್ತಾ ಗೇಹಿನೋ ಜನಾಃ ॥೧॥**

**ಪರಾಶರರು ಹೇಳಿದರು–**

ಹೇ ಮೈತ್ರೇಯ,

ಈಗ ನಾನು ಪರಿವ್ರಾಜಕ (ತ್ಯಾಗ ಮಾಡಿದ) ಯೋಗ ಹೇಳುತ್ತೇನೆ. ಯಾವ ಯೋಗದಿಂದ ಗೃಹಸ್ಥ ಸರ್ವಸ್ವ ತ್ಯಾಗ ಮಾಡಿ ವಿರಕ್ತನಾಗುವನೋ ಅದನ್ನು ಕೇಳು.

**ಸಬಲೈರೇಕ ಭಗತ್ಯೆ ಶ್ಚತುಷ್ಪ್ರ ಭೃತಿಭಗ್ರ್ಗಹೈಃ ।**
**ಸೂರ್ಯಾದಿಭಿಸ್ತಾಪಸಶ್ವ ಕಪಾಲಿ ಲೋಹಿತಾಂಬರಃ ॥೨॥**

**ದಂಡಿಯತಿಶ್ಚ ಕ್ರಧಾರಿ ವೀತವಾಸಾಃ ಕ್ರಮಾದಿತಿ ।**
**ಬಲಿಷು ಪ್ರಲಪ್ತೈವ ಬೋಧ್ಯಾ ಬಹುಶುವಿದ್ಧರೈಃ ॥೩॥**

ಒಂದು ರಾಶಿಯಲ್ಲಿ ಸಬಲ ಸೂರ್ಯಾದಿ ನಾಲ್ಕು ಅಥವಾ ಅಧಿಕ ಗ್ರಹಗಳಿದ್ದರೆ ಪರಿವ್ರಾಜಕ ಸಂನ್ಯಾಸಿ ಯೋಗವಾಗುತ್ತದೆ. ಸೂರ್ಯ ಪ್ರಬಲನಾಗಿದ್ದರೆ ಜಾತಕ ತಪಸ್ವಿಯಾಗುವನು. ಚಂದ್ರ ಪ್ರಬಲನಾಗಿದ್ದರೆ ಕಾಪಾಲಿಕ, ಮಂಗಳ ಪ್ರಬಲ ನಾಗಿದ್ದರೆ ಪರಿವ್ರಾಜಕನಾಗಿ ರಕ್ತ ವಸ್ತ್ರಧಾರಿಯಾಗಿರುವನು. ಬುಧ ಪ್ರಬಲನಾಗಿದ್ದ ದಂಡಧಾರಿಣಿ ಸಂನ್ಯಾಸಿಯಾಗುವನು (ಮಠದ ಸಂನ್ಯಾಸಿಗಳು ದಂಡಧಾರಕರು) ಗುರು ಪ್ರಬಲನಾಗಿದ್ದರೆ ಸಂಯಮ ನಿಯಮಾದಿ ಪಾಲಕ ಸಂನ್ಯಾಸಿಯಾಗುವನು. ಶುಕ್ರ ಬಲಿಷ್ಠನಾಗಿದ್ದರೆ ಚಕ್ರಧಾರಿ, ಶನಿ ಪ್ರಬಲನಾಗಿದ್ದರೆ ಮನುಷ್ಯ ದಿಗಂಬರ ಸಂನ್ಯಾಸಿಯಾಗುವನು. ಈ ಎಲ್ಲರೂ ವಿರಕ್ತರಾಗಿರುತ್ತಾರೆ.

ಇಲ್ಲಿ ಪ್ರಮುಖ ವಿಮರ್ಶೆ ಅಂಶ – ಒಂದೇ ರಾಶಿ 4 – ಹೆಚ್ಚು ಗ್ರಹಗಳಿದ್ದಾಗ ಸಂನ್ಯಾಸಿ ಎಂದೆನು. ಮುಖ್ಯ ವಿಮರ್ಶೆ ಅಂಶಾತ್ಮಕ ಗ್ರಹಗಳು 1-2 ಅಂಶದಲ್ಲಿರ ಬೇಕು. ಒಂದು ಗ್ರಹ 29 ಅಂಶದಲ್ಲಿ ಮತ್ತೊಂದು 1 ಅಂಶದಲ್ಲಿ ಇನ್ನೆರಡು 10-15ಗಳಲ್ಲಿ ಹೇಗೆ ಅಂತರ ಹೆಚ್ಚಾಗಿದ್ದರೆ ಸಂನ್ಯಾಸಿಯಾಗಲಾರ. ಅದೇ ಎರಡು ರಾಶಿಗಳಲ್ಲಿದ್ದು ಅಂತರ ತೀರಾ ಕಡಿಮೆಯಿದ್ದರೆ ಅಂದರೆ ಒಂದು ರಾಶಿಯಲ್ಲಿ 3 ಗ್ರಹಗಳ 28-29-30 ಅಂಶದ ಹತ್ತಿರವಿದ್ದು ಇನ್ನೊಂದು ಗ್ರಹ ಮುಂದಿನ ರಾಶಿಯ

1, 2 ಅಂಶದಲ್ಲಿದ್ದರೆ ಸಂನ್ಯಾಸಿ ಯೋಗ ಹೇಳುವುದು.

## ನಿರ್ಬಲ ಪ್ರವ್ರಜ್ಯಾಯೋಗ

ಅಸ್ತಂಗತಾ ವೀರ್ಯವಂತಃ ಪ್ರವ್ರಜ್ಯಾಕಾರಕಾಯದಿ ।
ತದಾ ದೀಕ್ಷಾವಿರಹಿತಾಃ ವೇದ್ಯಾ ಪ್ರವ್ರಜಿತಾ ನರಾಃ ॥೪॥
ವಿಬಲಾ ರವಿಸಾನ್ನಿಧ್ಯಾ ದಸ್ತಾತ್ಶ್ಚೆದಪರೆ ಗ್ರಹಾಃ ।
ರವಿಶ್ಚ ಪ್ರಬಲಸ್ತರ್ಹಿ ಪ್ರವ್ರಜ್ಯಾ ರವಿಜಾ ಮಲಾ ॥೫॥

ಪ್ರಬಲವಾದ ಪರಿವ್ರಾಜಕ ಸಂನ್ಯಾಸ ಬಲದ ಗ್ರಹ ಅಸ್ತಂಗತನಾಗಿದ್ದರೆ ಆ ಯೋಗ ನಿರ್ಬಲವಾಗಿ ದೀಕ್ಷೆಯಿಲ್ಲದ ಪರಿವ್ರಾಜಕನಾಗಿ ಯಾವುದೇ ಸಂಪ್ರದಾಯ ದೀಕ್ಷಿತನಲ್ಲಿದ್ದ ಸಂನ್ಯಾಸಿಯಾಗುವನು. ಆದರೆ ಅಲ್ಲಿ ಸೂರ್ಯ ಪ್ರಬಲನಾಗಿದ್ದರೆ ತಪಸ್ವಿಯಾಗುವನು.

## ಅನ್ಯಯೋಗ

ಗ್ರಹೈರನ್ಯೈರ್ಯದಿ ಜನುರ್ಭೀಶೋದೃಷ್ಟಃ ಶನಿಕ್ಷಕಃ ।
ತಯೋರ್ಬಲವಿತೋಽಸ್ತತ್ರ ಪ್ರವ್ರಜ್ಯಾಂ ಲಭತೆ ಜನಃ ॥೬॥
ವಿಬಲೋ ಜನ್ಮರಾಶಿಶೋ ದೃಷ್ಟಶ್ಚೆತ್ ಸೌರಿಮಾತ್ರತಃ ।
ತದಾರ್ಕಿಜನಿತೈವ ಸ್ಯಾತ್ ಪ್ರವ್ರಜ್ಯಾ ನಾತ್ರ ಸಂಶಯಃ ॥೭॥

ಶನಿಯ ಮೇಲೆ ದೃಷ್ಟಿಯಿದ್ದ ಜನ್ಮರಾಶೀಶ ಉಳಿದ ಗ್ರಹ ದೃಷ್ಟಿ ವಂಚಿತನಾದರೆ ಅದರಲ್ಲಿ ಪ್ರಬಲ ಗ್ರಹದ ಅನುಸಾರ ಪರಿವ್ರಾಜಕ ಸಂನ್ಯಾಸಿಯಾಗುವನು. ನಿರ್ಬಲ ಜನ್ಮರಾಶೀಶ ಶನಿ ಮಾತ್ರದಿಂದ ನೋಡಲ್ಪಡುತ್ತಿದ್ದರೆ ಶನಿ ಪ್ರಾಬಲ್ಯದಿಂದ ನಗ್ನನಾಗಿ ಪರಿವ್ರಾಜಕನಾಗುತ್ತಾನೆ.

ಉದಾಹರಿತ ಕುಂಡಲಿಯಲ್ಲಿ ತೃತೀಯದಲ್ಲಿ ರಾಶೀಶ ಶುಕ್ರ, ನವಮದಲ್ಲಿ ಶನಿ ಸಮ್ಮುಖ ದೃಷ್ಟಿಯಿದ್ದು ಉಳಿದ ಯಾವುದೇ ಗ್ರಹ ದೃಷ್ಟಿಯಲ್ಲಿ – ರಾಶಿ ದೃಷ್ಟಿಯೂ (ಗ್ರಹವಲ್ಲದ ಮೂಲಕ) ಇರದಿದ್ದರೆ ಸಂನ್ಯಾಸಿಯಾಗಿಲ್ಲ (ನಗ್ನ ಸಂನ್ಯಾಸಿ) ಯೋಗ ಕಂಡು ಬಂದರು. ಶನಿ, ಗುರು ರಾಶ್ಯಾಂತರ ಯೋಗವಿರುವುದ ರಿಂದ ಸ್ವಲ್ಪ ನಿರ್ಬಲ ಹಂಬಲವಿದ್ದರೂ ಆಗಲಿಲ್ಲ.

## ಇತರ ಯೋಗ

ಇಂದೌ ಮಂದದೃಕಾಣಸ್ಥೆ ಕುಜಾರ್ಕಿನವಬಾಗಕೆ ।
ಸೌರೀಕ್ಷಿತೆ ತು ಪ್ರವ್ರಜ್ಯಾ ಮಂದಜೈವ ಪ್ರಜಾಯತೆ ॥೮॥

ಶನಿಯ ದ್ರೇಷ್ಕಾಣದಲ್ಲಿ ಸ್ಥಿತ ಚಂದ್ರ ಭೌಮ ಅಥವಾ ಶನಿಯ ನವಾಂಶ ಗತವಾಗಿ ಶನಿಯ ದೃಷ್ಟಿ ಚಂದ್ರನ ಮೇಲಿದ್ದರೆ ಶನಿ ಪ್ರಾಬಲ್ಯ ಸಂನ್ಯಾಸಿ ಯಾಗುವನು.

ವಿಜಯಿ ಭಾರ್ಗವೋ ಯಾಭ್ಯೆ ಸೌಮ್ಯೆ ವಾ ಸಂಸ್ಥಿತೋ ಯದಿ ।
ಭೌಮಾಧಿಷು ಪರೆಷ್ವೆವಂ ಸೌಮ್ಯಗೋ ಯುಧಿ ಜಾಯತೆ ॥೯॥

ಭೌಮಾದಿ ಗ್ರಹಗಳ ಏಕಾಂಶ (ಒಂದೇ ಅಂಶದಲ್ಲಿ) ಸಂಯೋಗ ಯುದ್ಧವೆಂದು ಕರೆಸಿಕೊಳ್ಳುತ್ತದೆ. ಈ ಯುದ್ಧದಲ್ಲಿ ಶುಕ್ರ ಉತ್ತರವರ್ತಿ ಅಥವಾ ದಕ್ಷಿಣಾವರ್ತಿ (ಹಿಂದೆ ಅಥವಾ ಮುಂದೆ) ಇಲ್ಲದಿದ್ದರೂ 'ಜಯಿ' (ಯುದ್ಧದಲ್ಲಿ ಗೆದ್ದ) ಎಂದು ಕರೆಸಿಕೊಳ್ಳುತ್ತದೆ. ಅನ್ಯಗ್ರಹ ಮುಂದಿದ್ದರೆ ಮಾತ್ರ 'ಜಯಿ'ಗ್ರಹವಾಗುತ್ತದೆ (ವಿಜಯಿ).

## ಪ್ರವ್ರಜ್ಯಾಚ್ಯುತಿ

ಗ್ರಹಪರೇಣ ವಿಜಿತಃ ಪ್ರವ್ರಜ್ಯಾಯಾ ವಿಧಾಯಕಃ ।
ತದಾವಾಪ್ಯಾ ಪರಿವ್ರಾಜ್ಯಾಂ ಪುನರ್ಜಹ್ಯಾತಾಂ ನರಃ ॥೧೦॥

ಬೇರೆ ಗ್ರಹದಿಂದ ವಿಜೇತ ಗ್ರಹದಿಂದ ಸಂನ್ಯಾಸ ಯೋಗವಿದ್ದರೆ ಸಂನ್ಯಾಸಿಯಾಗಿಯೂ, ಮನುಷ್ಯ – ಪರಿವ್ರಾಜಕತೆಯಿಂದ ವಿಮುಖನಾಗುವನು (ಸಂನ್ಯಾಸಿ ಮತ್ತೆ ಸಂಸಾರಕ್ಕೆ ಬರುವನು).

### ಮೈತ್ರೇಯ ಉವಾಚ:

ಸಮಾನ ಬಲವಂತಶ್ಚೆ ದನೆಕೆ ಜನ್ಮನಿ ಗ್ರಹಾಃ ।
ಪ್ರವ್ರಜ್ಯಾದಾಯಕಾಸ್ತರ್ಹಿ ಪ್ರವ್ರಜ್ಯಾ ಕಸ್ಯ ಜಾಯತೆ ॥೧೧॥

### ಮೈತ್ರೇಯ ಕೇಳಿದರು–

ಜನ್ಮಸಮಯದಲ್ಲಿ ಸಮಾನ ಬಲವುಳ್ಳ ಅನೇಕ ಗ್ರಹಗಳು ಸಂನ್ಯಾಸ ಯೋಗಕಾರಕವಿದ್ದರೆ ಯಾವ ಗ್ರಹದಂತೆ ಆ ವ್ಯಕ್ತಿ ಸಂನ್ಯಾಸಿಯಾಗುವನೆಂದು ಹೇಳುವುದು.

### ಪರಾಶರ ಉವಾಚ:

ಖಗಾ ಅನೇಕೆ ಸಬಲಾಃ ಪ್ರವ್ರಜ್ಯಾಕಾರಿಣೋ ಯದಿ ।
ತದಾ ಸಮೇಷಾಂ ಪ್ರವ್ರಜ್ಯಾಂ ಲಭತೆ ನಾತ್ರಸಂಶಯಃ ॥೧೨॥

**ದಶಾಕ್ರಮಾನಾ ಸಾರೇಣ ಸ್ವಸ್ವಭುಕ್ತಿಷು ಖೇಚರಾಃ ।**
**ಪ್ರವ್ರಜ್ಯಾಂ ಸ್ವಸ್ವಜನಿತಾಂ ಪ್ರಯಚ್ಛಂತಿ ನ ಸಂಶಯಃ**

॥೧೩॥

## ಪರಾಶರರು ಹೇಳಿದರು–

ಅನೇಕ ಗ್ರಹಗಳು ಪರಿವ್ರಾಜಕ ಯೋಗಕಾರಕವಿದ್ದು ಎಲ್ಲ ಗ್ರಹಗಳು ಪ್ರಬಲವಾಗಿದ್ದರೆ (ಅಥವಾ ಅನೇಕ) ಎಲ್ಲ ಗ್ರಹಗಳಂತೆ ನಿಃಸಂದಿಗ್ಧ ಪಡೆಯುತ್ತಾನೆ. ಯಾವ ಗ್ರಹದ ದಶಾ ಅಂತರದಶಾ ಪ್ರಥಮದಲ್ಲಿ ಬರುವನೋ ಆ ಗ್ರಹದಂತೆ ಪರಿವ್ರಾಜಕತ್ವ ಸ್ವೀಕರಿಸಿ ಮುಂದಿನ ದಶಾದಲ್ಲಿ ಮುಂದಿನ ಗ್ರಹದ ಪರಿವ್ರಾಜಕತ್ವ ಪಡೆಯುವನು. ದಶಾನುಸಾರ ಪಡೆಯುತ್ತ ಹೋಗುವನು ಎಂದು ತಿಳಿಯುವುದು.

### ಪ್ರವ್ರಜ್ಯಾ ಯೋಗಾಂತರ

**ಪಶ್ಯೇದ್ ಯದಿ ಶನಿರ್ಜೀವ ಲಗ್ನೇಂದೂನಪಿ ಭಾಗ್ಯಭೇ ।**
**ಗುರುಸ್ತದಾ ರಾಜಯೋಗಸ್ತದ್ ಭವಸ್ತೀರ್ಥಕೃನ್ನರಃ** ॥೧೪॥

**ಸೌರೌ ಭಾಗ್ಯಗತೆ ಖೇಟೈರದೃಷ್ಟೆ ತು ಪ್ರಜಾಯತೆ ।**
**ರಾಜಯೋಗಸ್ತತ್ರ ಜಾತಃ ಪ್ರವ್ರಜ್ಯಾಯುಗ್ ನೃಪೊ ಭವೇತ್** ॥೧೫॥

ಶನಿ ಅಥವಾ ಗುರು, ಲಗ್ನ ಅಥವಾ ಚಂದ್ರನನ್ನು ನೋಡುತ್ತಿದ್ದರೆ ಹಾಗೂ ಗುರು ನವಮಸ್ಥನಾಗಿದ್ದರೆ – ರಾಜಯೋಗವಾಗುವುದು. ಈ ಯೋಗೋತ್ಪನ್ನ ಜಾತಕ ರಾಜನಾಗಿಯೂ ಸಂನ್ಯಾಸಿಯಾಗುವನು (ಬುದ್ಧ, ಮಹಾವೀರ, ಕರ್ನಾಟಕದ ಶ್ರೀ ವ್ಯಾಸರಾಜರು – ಸಂನ್ಯಾಸಿಯಾಗಿಯೂ, ಕರ್ನಾಟಕ ಸಿಂಹಾಸನವನ್ನೇರಿದವರು ಕೃಷ್ಣದೇವರಾಯನ ಕಾಲ) ನವಸ್ಥ ಶನಿ ಅನ್ಯಗ್ರಹದಿಂದ ದೃಷ್ಟಿತವಾಗದೆ ಇದ್ದರೂ ಕೂಡ ರಾಜಯೋಗವಾಗುತ್ತದೆ. ಈ ಯೋಗದಲ್ಲಿ ಜಾತಕ ಸಂನ್ಯಾಸ ಯುಕ್ತ ರಾಜ (ಶ್ರೀವ್ಯಾಸರಾಜ).

ವರಾಹ ಮಿಹಿರರು ಬೃಹದ್ ಜಾತಕ – ಈ ಅಂಶ ಅತೀ ಸ್ವಲ್ಪದರಲ್ಲಿ ಹೇಳಿದ್ದಾರೆ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ**
**ಪ್ರವ್ರಜ್ಯಾಯೋಗಾಧ್ಯಾಯಃ ಸಮಾಪ್ತಿಃ**

# ಅಥ ಸ್ತ್ರೀ ಜಾತಕಾಧ್ಯಾಯಃ

## ಮೈತ್ರೇಯ ಉವಾಚ:

ಶ್ರುತಂ ಭಗವತಾ ಪ್ರೋಕ್ತಂ ಪುಂಸಾಂ ಜಾತಕಜಂ ಫಲಮ್ ।
ನಾರಿಣಾಮಥಕಥಂ ವೇದ್ಯಮೇತದ್ ಬ್ರವೀಹಿಮೆ ॥೧॥

## ಮೈತ್ರೇಯರು ಕೇಳಿದುದು–

ಪುರುಷರ ಜಾತಕ ಫಲ ನಾನು ಕೇಳಿದ್ದೇನೆ. ಸ್ತ್ರೀಯರಿಗೂ ಹೇಳುವುದೋ ಅಥವಾ ಅವರದನ್ನು ಹೇಗೆ ತಿಳಿಯುವುದು ಕೃಪೆ ಮಾಡಿ ತಿಳಿಸಿ.

## ಪರಾಶರ ಉವಾಚ:

ಪ್ರಶ್ನೋಽಯಂ ವತ್ಸ । ತೆ ಸಾಧುರ್ಬ್ರವೀಮಿ ಶ್ರುಣು ತನ್ಮನಾಃ ।
ಪುಂವತ್ ಸ್ತ್ರೀಣಾಮಪಿ ಫಲಂ ವೇದ್ಯ ಮುಕ್ತಂ ಮಹರ್ಷಿಭಿಃ ॥೨॥

ವಿಶೇಷಃ ಸಂಭವೇದ್ ಯಸ್ತು ಶ್ರುಣುಷ್ವ ತಮಪಿ ದ್ವಿಜ ।
ಲಗ್ನಾತ್ತನೋಃ ಪಂಚಮಾತ್ ಪ್ರಸೂತೇಃ ಸ್ಯಾದ್ ವಿಚಾರಣಾ ॥೩॥

ಪತ್ಯುಃ ಕಲತ್ರ ರಂದ್ರಾದ್ ವೈಧವ್ಯಸ್ಯ ದ್ವಿಜೊತ್ತಮ
ಅಸಂಗತಂ ಕಲತ್ರೇಷು ಪತ್ಯೌ ತತ್ಫಲ ಮೀರಯೇತ್ ॥೪॥

## ಪರಾಶರರು ಉತ್ತರಿಸಿದುದು–

ಹೇ ವತ್ಸ! ನಿನ್ನ ಈ ಪ್ರಶ್ನೆ ಉತ್ತಮವಾಗಿದೆ ಆದ್ದರಿಂದ ಹೇಳುತ್ತೇನೆ ಕೇಳು. ಮಹರ್ಷಿಗಳು ಪುರುಷರಂತೆ ಸ್ತ್ರೀಯರ ಪೂರ್ವೋಕ್ತಿ ಜಾತಕ ಫಲ ಹೇಳಿದ್ದಾರೆ. ಅವು ಸ್ತ್ರೀಯರಿಗೆ ಅನ್ವಯವಾಗುತ್ತವೆ. ಆದಾಗ್ಯೂ ಅದರಲ್ಲಿ ವಿಶೇಷವನ್ನು, ವಿಶೇಷ ಸಂಭವವನ್ನು ಹೇಳುತ್ತೇನೆ ಕೇಳು.

ಸ್ತ್ರೀಯರ ಶಾರೀರಿಕ ಫಲ ಲಗ್ನದಿಂದ ಸಂತತಿ ವಿಚಾರ, ಪಂಚಮದಿಂದ ಪತಿಸೌಖ್ಯ, ಸಪ್ತಮದಿಂದ ವೈಧವ್ಯ, ಅಷ್ಟಮ ಭಾವದಿಂದ ಹೇಳುವುದು. ಯಾವ ಫಲ ಸ್ತ್ರೀಯರಿಗೆ ಸಂಭವವಿಲ್ಲವೋ ಅದು ಅವಳ ಪತಿಗೆ ಸಂಬಂಧಿಸಿದ್ದೆಂದು ತಿಳಿ.

ಸಮರಾಶೌ ಲಗ್ನಚಂದ್ರೌ ಯದಿ ನೌ ಪ್ರಕೃತಿಂ ಗತಾ ।
ಶೀಲಸಲ್ಲಿಕ್ಷಣೋಪೇತಾ ಸ್ವಾನುರೂಪಗುಣಾನ್ವಿತಾ ॥೫॥

ಸದ್‌ದೃಷ್ಟೌ ಸುಭಗಾ ನಾರಿ ಸ್ವಾಸ್ಥ್ಯಾಸೌಖ್ಯಸಮನ್ವಿತಾ ।
ಓಜೇ ಪುಮಾಕೃತಿಃ ಶೀಲ - ಹೀನ ಸಂವೀಕ್ಷಿತೌ ಖಲೈಃ ॥೬॥

ಸಪಾಪೌ ಚೇದ ದುರ್ಗುಣಾ ಸಾ ಸದಸದ್‌ಭ್ಯಾಂ ಶುಭಾಶುಭಂ ।
ಚಂದ್ರಾಂಗೆಯೋಸ್ತು ಬಲಿನಃ ಫಲಂ ಸರ್ವಾಂಶತೋ ಭವೇತ್ ॥೭॥

ಸ್ತ್ರೀ ಜನ್ಮಕುಂಡಲಿಯಲ್ಲಿ ಲಗ್ನ ಹಾಗೂ ಚಂದ್ರ ಸಮರಾಶಿಯಲ್ಲಿದ್ದರೆ – ಆ ನಾರಿ ಸುಶೀಲಳು ಸಲ್ಲಕ್ಷಣ ಸ್ತ್ರೀಯೋಚಿತ ಸ್ವಭಾವನು ರೂಪ, ಗುಣಯುಕ್ತಳು ಆಗಿರುತ್ತಾಳೆ. ಅದರ ಮೇಲೆ ಶುಭಗ್ರಹ ದೃಷ್ಟಿಯಿದ್ದರೆ ಶೀಲಗುಣದಿಂದ ಸದಸ್ಯತ್ವ ವಾಗಿರುತ್ತಾಳೆ. ಲಗ್ನ ಚಂದ್ರರಲ್ಲಿ ಒಂದು ಸಮರಾಶಿ, ಒಂದು ವಿಷಮ ರಾಶಿಯಾಗಿದ್ದರೆ ಶುಭಾಶುಭ ಎರಡರ ದೃಷ್ಟಿಯಿದ್ದರೆ ಸ್ತ್ರೀ ಪುರುಷ ಗುಣಗಳೆರಡನ್ನೂ ಹೊಂದಿರು ತ್ತಾಳೆ. ಲಗ್ನ ಚಂದ್ರರಲ್ಲಿ ಬಲವಂತವಾದ ಗುಣ ಹೊಂದಿರುತ್ತಾಳೆ. ಗುಣ ರೂಪದಲ್ಲಿ ನೋಡುವುದು.

ಪ್ರಬಲೋ ಯೋಂಗರಶಿನೋ ಸ್ತದಾಧಿಷ್ಠಿತರಾಶಿತಃ ।
ತ್ರಿಶಾಂಶತೋ ವಾ ವಿಬುಧೈರ್ನಾರಿಣಾಂ ಫಲಮೀರಿತವ್ ॥೮॥

ಲಗ್ನ ಚಂದ್ರರಲ್ಲಿ ಪ್ರಬಲರಾದವರ ರಾಶಿ ಅಥವಾ ತದವಿಷ್ಠಿತ ರಾಶಿ ತ್ರಿಶಾಂಶ ದಿಂದ ಸ್ತ್ರೀಯರ ಫಲ (ವಿಶೇಷ ರೂಪದಿಂದ) ತಿಳಿಯುವುದು.

ಬಲಿತಯೋ ಕುಜಗ್ರಹೆ ತ್ರಿಶಾಂಶೆ ಚ ದುರಾಂಗನಾ ।
ಭಾರ್ಗವೆ ದುಶ್ಚರಿತ್ರಾ ಸಾಬೌಧೆ ಮಾಯಾವಿನಿಮತಾ ॥೯॥

ಮಾಂದೆ ಚೇಟಿ ಸತಿ ಜೈವೆ ವಿದ್ಬೆಕೌಜೆ ಚ ಸಚ್ಛಲಾ।
ಭಾರ್ಗವೆ ಕಾಮುಕಿ ಪ್ರೋಕ್ತಾ ವಿದೋಲಿ ಸುಗುಣಾ ಸ್ಮೃತಾ ॥೧೦॥

ಶಾನ್ಯಂಶೆ ಕ್ಲೀಬತಾಯುಕ್ತಾಸಾಧ್ವಿ ಜೈವೇ ಪಿ ಕಾವ್ಯ ಭೆ ।

ಲಗ್ನ ಚಂದ್ರರಲ್ಲಿ ಬಲಿಷ್ಠವಾದುದು ಕುಜಗ್ರಹ(ಮೇಷ, ವೃಶ್ಚಿಕ)ದಲ್ಲಿದ್ದು ಮಂಗಳನೆ ತ್ರಿಶಾಂಶದಲ್ಲಿದ್ದರೆ ಆ ಕನ್ಯೆ ದುರಾಂಗನೆಯಾಗುತ್ತಾಳೆ (ಕನ್ಯಾವಸ್ಥೆಯಲ್ಲಿ ಪರಪುರುಷ ಸಂಪರ್ಕ) ಶುಕ್ರ, ತ್ರಿಶಾಂಶದಲ್ಲಿ ಇದ್ದರೆ ವಿವಾಹ ನಂತರ ದುಶ್ಚರಿತ್ರಳಾಗುತ್ತಾಳೆ. ಬುಧ, ತ್ರಿಶಾಂಶದಲ್ಲಿದ್ದರೆ ಮಾಯಾವಿನಿಯಾದರೆ, ಶನಿ ತ್ರಿಶಾಂಶ ದಲ್ಲಿದ್ದರೆ ದಾಸಿ ಹಾಗೂ ಗುರು ತ್ರಿಶಾಂಶದಲ್ಲಿದ್ದರೆ ಸತಿಸಾಧ್ವಿಯಾಗುವಳು. ಬುಧ ರಾಶಿಯ ಕನ್ಯಾ ಮಿಥುನದಲ್ಲಿ (ಲಗ್ನ-ಚಂದ್ರ) ಕುಜ ತ್ರಿಶಾಂಶಧಲ್ಲಿದ್ದರೆ ಕಪಟಿಯುಕ್ತಳು, ಶುಕ್ರ ತ್ರಿಶಾಂಶದಲ್ಲಿ ಕಾಮುಕಿ, ಆದರೆ ಬುಧ ತ್ರಿಶಾಂಶದಲ್ಲಿ

ಗುಣಯುಕ್ತಳಾಗುವಳು. ಶನಿ ತ್ರಿಶಾಂಶದಲ್ಲಿ ಬಲಿಷ್ಠ ವಾತಯುಕ್ತಳು, ಗುರು ತ್ರಿಶಾಂಶದಲ್ಲಿ ಸಾಧ್ವಿಯಾಗುವಳು.

**ಕುಜಾಂಶೆ ದುಶ್ಚರಿತ್ರಾ ಸಾ ಭಾರ್ಗವೆ ಗುಣವಿಶ್ರುತಾ ॥೧೧॥**

**ವಿದೋಶೆ ಸಕ್ತಲೋಪೇತಾ ಸುಗುಣಾ ಗೌರವೆ ಮತಾ।**
**ಮಂದಾಂಶೆ ದೀಧಿಪೂರ್ಶ್ವಾಂದ್ರೆ-ಭೆ ಸ್ವತಂತ್ರಾ ಕುಜಾಂಶಕೆ ॥೧೨॥**

**ಕಾವ್ಯೆ ತು ಕುಲಟಾ ಶಿಲ್ಪಾ ಕಲಾದಪಾ ವಿದೊಶಕೆ ।**
**ಗೌರವೆತಿಗುಣಾ ಮಾಂದೆ ತ್ರಿಶಾಂಶೆ ಪತಿಘಾತಿನೀ ॥೧೩॥**

ಶುಕ್ರ ರಾಶಿ (ವೃಶಭ, ತುಲಾ) ತುಲಾ ಆಗಿದ್ದು ಲಗ್ನ ಚಂದ್ರವಲ್ಲಿ ಬಲಿ ಕುಜ ತ್ರಿಶಾಂಶದಲ್ಲಿದ್ದರೆ ಚರಿತ್ರಹೀನಳು, ಶುಕ್ರನಿದ್ದರೆ (ಶುಕ್ರ ತ್ರಿಶಾಂಶದಲ್ಲಿಯೇ) ವಿಖ್ಯಾತಗುಣವುಳ್ಳವಳು, ಬುಧ ತ್ರಿಶಾಂಶದಲ್ಲಿ ಸತ್ಕಲಾದಿಂದ ಕೂಡಿದವಳು ಪರಿಪೂರ್ಣಳು ಆಗುತ್ತಾಳೆ. ಗುರು ತ್ರಿಶಾಂಶದಲ್ಲಿದ್ದರೆ ಗುಣವತಿ, ಅದೇ ಶನಿ ತ್ರಿಶಾಂಶದಲ್ಲಿದ್ದರೆ ಲಗ್ನ ಪೂರ್ವ ಸಂಪರ್ಕ ಮಾಡುವವಳು (ಪತಿಯೊಡನೆ) ಚಂದ್ರರಾಶಿ ಕರ್ಕದಲ್ಲಿ ಚಂದ್ರ ಲಗ್ನದಲ್ಲಿ ಬಲಿಷ್ಠವಾದುದು ಮಂಗಳನ ತ್ರಿಶಾಂಶ ದಲ್ಲಿದ್ದರೆ ಸ್ವತಂತ್ರಳು, ಶುಕ್ರನು ತ್ರಿಶಾಂಶದಲ್ಲಿದ್ದರೆ ಕುಲಟಾ ಬುಧ ತ್ರಿಶಾಂಶ ದಲ್ಲಿದ್ದರೆ ಶಿಲ್ಪಕಲಾ ಪ್ರವೀಣೆ, ಗುರು ತ್ರಿಶಾಂಶದಲ್ಲಿದ್ದರೆ ಬಹುಗುಣಯುಕ್ತಳು, ಶನಿ ತ್ರಿಶಾಂಶದಲ್ಲಿದ್ದರೆ ಪತಿಘಾತಿನಿಯಾಗುವಳು.

**ಸೂರ್ಯರ್ಕ್ಷೇಪಿ ಕುಜಾಂಶೆ ತು ವಾಚಾಟಾಂಶೆ ಭೃಗೋ ಸತಿ।**
**ಜ್ಞಾಂಶೆ ಪುಮಾಕೃತಿ ರಾಜ್ಞಿಜ್ಯೈವೆ, ಭೃಪ್ಯಾರ್ಕೆ ಜಾಂಶಕೆ ॥೧೪॥**

**ಕುಜಾಂಶೆ ಜೀವ ಭೆ ಭೂರಿ ಗುಣಾಶೌರ್ರೆ ತು ಪುಂಶ್ಚಲಿ।**
**ವಿಜ್ಞಾನಾಜ್ಞಾ ವಿದೇಂಶೆ ತು ಗೌರವೆ ತಿ ಗುಣಾನ್ವಿತಾ ॥೧೫॥**

**ಶನ್ಯಾಂಶೆ ಸ್ತೋಕಸುರತಾ ಚೇಟಿ ಭೌಮೇ ಪಿ ಮಂದಭೆ।**
**ವಿದುಷಿ ತು ಸಿತಸ್ಯಾಂಶೆ ಜ್ಞಾಂಶೆ ಪಾಪಾಪಿ ನೀಚಗಾ ॥೧೬॥**

**ಗೌರವೆ ತು ಸತಿ ಮಂದ ತ್ರಿಶಾಂಶೆ ನೀಚಗಾಮಿನಿ।**

ಸೂರ್ಯರಾಶಿ ಸಿಂಹದಲ್ಲಿ (ಇದ್ದು ಲಗ್ನ ಚಂದ್ರ) ಯಾವುದು ಬಲಿಷ್ಠವೋ ಅದರ (ಭೌಮ) ತ್ರಿಶಾಂಶದಲ್ಲಿದ್ದರೆ ವಾದಿಸುವವಳು, ಶುಕ್ರ ತ್ರಿಶಾಂಶದಲ್ಲಿದ್ದರೆ ಸತಿ, ಬುಧ ತ್ರಿಶಾಂಶದಲ್ಲಿದ್ದರೆ ಪುರುಷಾಕಾರದವಳು ಆಗುವಳು, ಗುರು ತ್ರಿಶಾಂಶದಲ್ಲಿದ್ದರೆ ರಾಣಿಯಂತೆ ಇರುವವಳು, ಶನಿ ತ್ರಿಶಾಂಶದಲ್ಲಿದ್ದರೆ

ಭ್ರಷ್ಟಳಾಗುವಳು.

ಗುರು ರಾಶಿ (ಧನು, ಮೀನ) ದಲ್ಲಿ ಲಗ್ನ ಚಂದ್ರರಿದ್ದು ಅವರಲ್ಲಿ ಬಲಿಷ್ಠ ವಾದುದರ ತ್ರಿಶಾಂಶದಲ್ಲಿ ಭೌಮನಿದ್ದರೆ, ಅನೇಕ ಗುಣಗಳಿಂದ ಪೂರ್ಣಳು, ಶುಕ್ರ ತ್ರಿಶಾಂಶದಲ್ಲಿದ್ದರೆ ವಿದುಷಿ ಬುಧ ತ್ರಿಶಾಂಶದಲ್ಲಿದ್ದರೆ ವಿಜ್ಞಾನ ವೇತ್ರ ಗುರು ತ್ರಿಶಾಂಶದಲ್ಲಿದ್ದರೆ, ಅಧಿಕ ಗುಣವತಿಯೂ ಆಗುವಳು. ಶನಿ ತ್ರಿಶಾಂಶದಲ್ಲಿರಲು ಅಲ್ಪರತಿಯುಳ್ಳವಳಾಗುವಳು.

ಶನಿ ರಾಶಿ (ಮಕರ ಕುಂಭ) ಲಗ್ನಗಳಾಗಿ ಲಗ್ನ ಚಂದ್ರರಲ್ಲಿ ಬಲಿಷ್ಠರ ತ್ರಿಶಾಂಶ ದಲ್ಲಿ ಮಂಗಳನಿದ್ದರೆ ದಾಸಿಯಾಗುವವಳು. ಶುಕ್ರ ತ್ರಿಶಾಂಶದಲ್ಲಿರಲು ವಿದುಷಿ-ಬುಧ ತ್ರಿಶಾಂಶದಲ್ಲಿದ್ದರೆ ಪಾಪಯುಕ್ತ ಹಾಗೂ ನೀಚ ಪುರುಷನೊಡನೆ ಸಂಬಂಧ ವಿರಿಸಿಕೊಳ್ಳುವಳು. ಗುರು ತ್ರಿಶಾಂಶದಲ್ಲಿದ್ದರೆ ಸತಿ ಸಾಧ್ವಿಯಾಗುವಳು, ಶನಿಯಿದ್ದರೆ ನೀಚ ಪುರುಷಗಾಮಿನಿಯಾಗುವಳು.

ನಿರ್ಗ್ರಹೆ ಸಪ್ತಮೆ ಸೌಮ್ಯಾ ದೃಷ್ಟಿ ಕುಪುರುಷಃ ಪತಿಃ ॥೧೭॥

ವಿದೇಶವಾಸಿ ಚರಭೆ ಷಂಡಸ್ತತ್ರಾರ್ಕಿಸೌಮ್ಯಯೊಃ।
ಪತ್ಯಾತ್ಯಕ್ತಾ ಮದೇರ್ಕೆ ತು ವಿಧವಾ ರೆ ತು ಶೈಶವೆ ॥೧೮॥

ಪಾಪೆಕ್ಷೇತೆ ರ್ಕ ಜೆ ಕನ್ಯಾ ನೂಡಾ ವೃದ್ಧತ್ವಾವಮಾಪ್ನುಯಾತ್।
ಸಿದ್ಧಿರ್ಮಂದಗತೈಃ ಸಾಧ್ವಿ ವಿಧವಾ ಸ್ಯಾದಸದ್ ಗ್ರಹೈಃ ॥೧೯॥

ಮಿಶ್ರಗ್ರಹೈರ್ದ್ವಿ ರೂಢಾ ಸಾ ಶುಭಾಶಭ ಫಲೈರ್ಯುತಾ।
ಅನ್ಯೋನ್ಯಾಂಶಗತೌ ಶುಕ್ರಕುಜೌ ಚೌತ್ ಪರಗಾಮಿನಿ ॥೨೦॥

ಚಂದ್ರೆ ಮದಗತೆ ತತ್ರ ಪರಗಾ ಪತ್ಯುರಾಜ್ಞಯಾ।
ಸಿತರ್ಶೆ ಮಂದ ಭೆ ವಾಪಿ ಸಸಿ ತೆಂದೌ ತಸೌಗತೆ ॥೨೧॥

ತದಾಂಗನಾ ಪಾಂಶುಲಾ ಸ್ಯಾಜ್ಜನನ್ಯಾಸಹ ನಿಶ್ಚತಮ್।

ಸಪ್ತಮ ಭಾಗ ನಿರ್ಗ್ರಹ ಹಾಗೂ ಶುಭಗ್ರಹದ ದೃಷ್ಟಿಯಲ್ಲಿರದಿದ್ದರೆ ಅವಳ ಪತಿಕಾಪುರುಷನಾಗುತ್ತಾನೆ. ಸಪ್ತಮ ಭಾವ ಚಂದ್ರರಾಶಿಯದಾಗಿದ್ದರೆ ಅವಳ ಪತಿ ಪರದೇಶಿಯಾಗಿರುತ್ತಾನೆ. ಶನಿ ಬುಧರಿಬ್ಬರು ಅಲ್ಲಿದ್ದರೆ ಅವಳ ಪತಿ ನಪುಂಸಕ ನಾಗಿರುತ್ತಾನೆ.

ಸಪ್ತಮದಲ್ಲಿ ಸೂರ್ಯನಿದ್ದರೆ ಸ್ತ್ರೀ ಪತಿಯಿಂದ ಬಿಡಲ್ಪಡುವಳಾಗುತ್ತಾಳೆ.

ಮಂಗಳನಿದ್ದರೆ ಬಾಲ ವಿಧವಾ ಆಗುತ್ತಾಳೆ, ಪಾಪದೃಷ್ಟಿ ಶನಿ ಸಪ್ತಮದಲ್ಲಿದ್ದರೆ ಅವಿವಾಹಿತಳಾಗಿಯೇ ಇರಬೇಕಾಗುತ್ತದೆ. ಶುಭ ಗ್ರಹ ಸಪ್ತಮದಲ್ಲಿದ್ದರೆ ಕನ್ಯಾ ವಿಧವಾ, ಸಾಧ್ವಿಯಾಗುತ್ತಾಳೆ. ಅಸದ್ ಗ್ರಹ ಅಲ್ಲಿದ್ದರೆ (ಜೊತೆಯಾಗಿದ್ದರೆ) ವೈಧವ್ಯಯುಕ್ತಳಾಗಬಹುದು. ಶುಭ ಅಶುಭಗಳೆರಡು ಇದ್ದರೆ ಮಿಶ್ರಫಲ, ಮದುವೆ ಮಾಡುವವಳಾಗುತ್ತಾಳೆ. ಶುಕ್ರ, ಮಂಗಳ ಪರಸ್ಪರ ನವಾಂಶ ರಾಶ್ಯಾಂತರ ಯೋಗದಲ್ಲಿದ್ದರೆ ಕನ್ಯಾ ಪರಪುರುಷಗಾಮಿನಿಯಾಗುವಳು ಈ ಯೋಗದಲ್ಲಿ, ಚಂದ್ರ ಸಪ್ತಮದಲ್ಲಿದ್ದರೆ ಪತಿಯ ಆಜ್ಞೆಯಿಂದ ಪುರುಷಗಾಮಿನಿಯಾಗುವಳು. ಲಗ್ನ ಗತ ಸ ಚಂದ್ರ ಶುಕ್ರ ಅಥವಾ ಶನಿಯ ರಾಶಿಯಲ್ಲಿದ್ದರೆ (ವೃಷಭ, ತುಲಾ, ಮಕರ, ಕುಂಭ)ದಲ್ಲಿದ್ದರೆ ಅವನ ಸ್ತ್ರೀಯ ತಾಯಿಯ ಜತೆಗೆ ಸಂಪರ್ಕವುಳ್ಳವನಾಗುತ್ತಾನೆ.

ಮದೇ ಕುಜಾಂಶೇ ವಾ ತದ್ಭೇ ಭರ್ತಾ ಕ್ರೋಧಿ ಚ ಲಂಪಟಃ ॥೨೨॥

ವಿದೋ ಭೆ ವಾ ತದಂಶೆ ತು ಸತ್ಕಲಾವಿತ್ ಸುಪಂಡಿತಃ।
ಗೌರವೇನೇಕ ಗುಣ ವಾನ್ ಮದೆ ಸ್ಯಾತ್ ಸಂಯತೇಂದ್ರಿಯಃ ॥೨೩॥

ಭಾರ್ಗವೆ ಭಾಗ್ಯವಾನ್ ಭರ್ತಾಸುರೂಪಃ ಕಾಮಿನಿಪ್ರಿಯಃ
ಮಂದಸ್ಯ ಬೆ ತದಂಶೆ ವಾ ಮದೆ ಮೂಢೋ ಜರಾತುರಃ ॥೨೪॥

ಸಿಂಹಾಂಶೀತಿಕಠೋರಃ ಸ್ಯಾತ್ ತದ್ಭೆ ವಾ ಬಹುಕಾರ್ಯಕೃತ್।
ಚಾಂದ್ರೆ ಭೆಶೆ ಮದೆ ಭರ್ತಾ ಸೂರುಪಃ ಕಾಮುಕೋಮ್ಮದುಃ
ಮಿಶ್ರೈಃ ಫಲಂ ಮಿಶ್ರಿತಂ ತದ್ ಬಲತೋ ಭನವಾಂಶಯೋಃ ॥೨೫॥

ಸಪ್ತಮದಲ್ಲಿ ಭೌಮ ರಾಶಿ ಭೌಮ ನವಾಂಶವಿದ್ದರೆ ಆ ಸ್ತ್ರೀಯ ಪತಿ ಕ್ರೋಧಿ ಹಾಗೂ ಲಪಟನಿರುತ್ತಾನೆ. ಅದೇ ಬುಧ ರಾಶಿ (ಮಿಥುನ, ಕನ್ಯಾ) ಅಥವಾ ಬುಧ ನವಾಂಶವಾದರೆ ಸ್ತ್ರೀಯ ಪತಿ ಸತ್ಕಲಾ ಭಜ್ಞ ಸುಪಂಡಿತನಾಗುತ್ತಾನೆ. ಗುರುವಿನ ರಾಶಿ (ಧನು, ಮೀನ) ಅಥವಾ ನವಾಂಶವಾದರೆ ಸ್ತ್ರೀ ಪತಿ ಅನೇಕವಿಧ ಸದ್ಗುಣ ಯುಕ್ತನಾಗುವನು. ಶಮಯುತೇಂದ್ರಿಯನಾಗುವನು. ಶುಕ್ರರಾಶಿ (ತುಲಾ, ವೃಷಭ) ಅಥವಾ ನವಾಂಶವಾದರೆ ಅವಳ ಪತಿ ಸೌಭಾಗ್ಯಶೀಲ ಸುಂದರ ಅಂತೇ ಸ್ತ್ರೀಪ್ರೇಮಿಯಾಗಿರುವನು. ಶನಿ ರಾಶಿ (ಮಕರ, ಕುಂಭ) ಹಾಗೂ ನವಾಂಶವಾಗಿದ್ದರೆ ಮೂರ್ಖ ಜರಾವಸ್ಥೆ (ಮುಪ್ಪಾದ)ಯವನಾಗಿರುವನು. ಸಿಂಹ ರಾಶಿ ಅಥವಾ ನವಾಂಶ ಸಪ್ತಮದಲ್ಲಿದ್ದರೆ ಕಠೋರನು, ಅನೇಕ ಕಾರ್ಯ ಮಾಡುವವನು ಆಗುತ್ತಾನೆ. ಕರ್ಕ ರಾಶಿ ಅಥವಾ ಕರ್ಕ ನವಾಂಶ ಸಪ್ತಮದಲ್ಲಿ ಇದ್ದರೆ ಸೂರೂಪನು, ಕಾಯಿಯೂ ಹಾಗೂ

ಮೃದು ಸ್ವಭಾವದವನು ಆಗುವನು. ಮಿಶ್ರಿತ ರಾಶಿ ನವಾಂಶವಾಗಿದ್ದರೆ ಮಿಶ್ರಿತ ಫಲದವರಾಗುವರು, ಇಲ್ಲಿ ನವಾಂಶ ಬಲಾನುಸಾರ ಫಲ ಹೇಳುವುದು.

ರವೌ ರಂಧ್ರಸ್ಥಿತೆ ಬಾಲಾ ದರಿದ್ರಾ ದುಃಖಿತಾ ತಥಾ ॥೨೬॥

ಸಖೇದಾ ವಿಷತಾಂಗಿ ಚ ಧರ್ಮತೋ ವಿಮುಖಿ ಸದಾ।
ಅಷ್ಟಮಸ್ಥೆ ತು ಶಶಿನಿಕುದ್ದಕ್ಕುಚಭಗಾನ್ವಿತಾ ॥೨೭॥

ವಾಮೋ ಭೂಷಣಧರಹಿತಾ ರುಗ್ಣಾ ಚಾತೀವ ನಿಂದಿತಾ।
ಭೌಮೇ ರಂಧ್ರಗತೆ ಜಾತಾ ಸರೋಗಾ ದುರ್ಬಲಾ ತಥಾ ॥೨೮॥

ನಿಷ್ಪ ಭಾ ದುಃಖಿಸಂತಾಪ, ಶೋಕಿತಾ ವಿಧವಾ ಮತಾ।
ಅಷ್ಟಮಸ್ಥೆ ವಿಧಿ ತು ಸಾ ಭಯಸ್ತ್ರತ್ರಾ ಕಲಿಪ್ರಿಯಾ ॥೨೯॥

ಧನಧರ್ಮಾಭಿಮಾನ್ಯೈಶ್ಚ ರಹಿತಾ ಗುಣವರ್ಜಿತಾ।
ಜೀವೇಷ್ಟಮಗತೆ ನಾರಿ ಶೀಲಹೀನಾಲ್ಪಿ ಸಂತತಿಃ ॥೩೦॥

ಪತಿತ್ಯಕ್ತಾ ಸ್ಥೂಲ ಪಾದ ಶಯಾ ಪ್ರಚುರ ಭೋಜನಾ।
ಅಷ್ಟಮಸ್ಥೆ ಸಿತೆ ಮತ್ತಾ ನಿರ್ಧನಾ ಮಲಿನಾ ತಥಾ ॥೩೧॥

ಛಲಿನಿ ನಿಷ್ಠುರಾ ಧರ್ಮ ರಹಿತಾ ಸಾಸ್ಮೃತಾ ಬುಧೈಃ
ಮಂದೇಷ್ಟಮಗತೆ ಬಾಲಾ ಮಲಿನಾ ವಂಚನಾಪರಾ ॥೩೨॥

ದುಃಸ್ವಭಾವವತಿ ಸ್ವಾಮಿ ಸೌಖ್ಯ ಹೀನಾ ಪ್ರಜಾಯತೆ।
ಅಗಾವಷ್ಟಮ ಗೆ ನಾರಿ ಕ್ರೂರಹೃದ್ರೋಗಿಣೀ ತಥಾ ॥೩೩॥

ಪತಿತ್ಯಕ್ತಾಪಿ ಕುಲಟಾ ವಿರೂಪಾ ಪಿ ಚ ಜಾಯತೆ।

ಸ್ತ್ರೀಯ ಕುಂಡಲಿಯ ಅಷ್ಟಮ ಭಾವದಲ್ಲಿ ರವಿಯಿರಲು ಅವಳು ದರಿದ್ರಳು, ದುಃಖಿತಳು, ಖಿನ್ನಮನಸ್ಕಳು, ವಿಷೇತಾಂಗಿಯಾಗಿ ಧರ್ಮದಿಂದ ವಿಮುಖಳು ಆಗಿರುವಳು. ಅಷ್ಟಮದಲ್ಲಿ ಚಂದ್ರನಿದ್ದರೆ ಅವಳ ದೃಷ್ಟಿ ಸ್ತನ ಹಾಗೂ ಭಗ ಕುತ್ಸಿತ ವಾಗಿರುತ್ತದೆ ಹಾಗೂ ವಸ್ತ್ರಾಲಂಕಾರ ರಹಿತ ರುಗ್ಣ ರೋಗಿ ನಿಂದಿತಳು ಆಗುತ್ತಾಳೆ. ಅಷ್ಟಮ ಗತ ಭೌಮ ಸ್ತ್ರೀಯನ್ನು ರೋಗಮುಕ್ತಳನ್ನಾಗಿ ಮಾಡುತ್ತಾನೆ. ಕಾಂತಿಹೀನಳು ಆಗಿರುತ್ತಾಳೆ. ದುಃಖ ಸಂತಾಪದಿಂದ ಶೋಷಿತ ವಿಧವೆಯಾಗಿರು ತ್ತಾಳೆ. ಬುಧ ಅಷ್ಟಮದಲ್ಲಿದ್ದರೆ ಅವಳು ಭೀತಳಾಗಿ ಕಲಹಕಾರಿಣಿಯಾಗಿ, ಧನಧರ್ಮ ಅಭಿಮಾನರಹಿತಳಾಗಿರುತ್ತಾಳೆ. ಗುಣಹೀನಳು ಆಗಿರುತ್ತಾಳೆ. ಗುರು

ಅಷ್ಟಮ ಗತನಾಗಿದ್ದರೆ ಶೋಕರಹಿತಳು ಅಲ್ಪಸಂತತಿವುಳ್ಳವಳು ಪತಿಯಿಂದ ತ್ಯಕ್ತಳಾದವಳು ಆಗಿರುತ್ತಾಳೆ. ದೊಡ್ಡ ಹೊಟ್ಟೆ, ಪಾದಗಳುಳ್ಳವಳು, ಬಹಳ ತಿನ್ನಬುರುಕಳು ಆಗಿರುತ್ತಾಳೆ.

ಶುಕ್ರ ಅಷ್ಟಮಸ್ತನಾಗಿದ್ದರೆ ಆ ಸ್ತ್ರೀ ಪ್ರಮತ್ತಳು, ದರಿದ್ರಳು, ಹೊಲಸು, ಕಪಟಗಳಿಂದ, ಕೂಡಿದವಳು ಧರ್ಮರಹಿತಳೂ ಆಗುವಳು. ಶನಿ ಅಷ್ಟಮಸ್ತನಾಗಿದ್ದರೆ ದುರ್ವಾಸನೆಯುಳ್ಳವಳು, ದುಷ್ಟಸ್ವಭಾವದವಳು, ಮೋಸಗಾರಳು, ಪತಿಸೌಖ್ಯವಿಹೀನಗಳು ಆಗುವಳು, ರಾಹು ಅಷ್ಟಮದಲ್ಲಿರಲು, ಕ್ರೂರಳು, ಹೃದಯ ಹೀನಳು, ರುಗ್ಣರೋಗ ಪೀಡಿತಳು, ಪತಿಯನ್ನ ಬಿಟ್ಟವಳು, ಕುಲಟೆ ಕುರೂಪಳು ಆಗಿರುವಳು.

## ವಂಧ್ಯಾ ಯೋಗ

ಸಿತೇಂದೂ ಲಗ್ನಗೌ ಸೌರಿ ಭೌಮಾಭ್ಯಾಂ ಸಂಯುತೌ ತಥಾ ॥೩೪॥

ಪಾಪೇಕ್ಷಿತ ಯುತಂ ಪಂಚಮಂ ವಂಧ್ಯಾತೀರ್ಹಿ ಸಾ ಮತಾ।
ಶಿವಸ್ನಪನತೋ ವಿಷ್ಣುಕೀರ್ತನಾದ್ವಾ ಸಸಂತತಿಃ ॥೩೫॥

ಲಗ್ನದಲ್ಲಿ ಶುಕ್ರ ಅಥವಾ ಚಂದ್ರರಿದ್ದು, ಶನಿ ಅಥವಾ ಭೌಮದಿಂದ ದೃಷ್ಟಿತರಾಗಿದ್ದು, ಪಂಚಮದಲ್ಲಿ ಪಾಪಗ್ರಹ ಮುಕ್ತ ಅಥವಾ ಪಾಪದೃಷ್ಟನಾಗಿದ್ದರೆ ಆ ಸ್ತ್ರೀ ವಂಧ್ಯಾ ಆಗಿರುವಳು, ಅವಳು ರುದ್ರಾಭಿಷೇಕ ಅಥವಾ ವಿಷ್ಣು ಕೀರ್ತನಾದಿಗಳಿಂದ ಸಂತಾನ ಪಡೆಯುವಳು.

## ದುರ್ಭಗಾ ಸುಭಗಾ ಯೋಗ

ಪಾಪಾಂಶೆ ಸಪ್ತಮಗತೆ ದುರ್ಭಗಾ ಮಂದವೀಕ್ಷಿತೆ।
ಸಂದೇಶೆ ತತ್ರ ಸಾಸ್ವಾಮಿ ಪ್ರಿಯಾಪಿ ಸುಭಗಾಮತಾ ॥೩೬॥

ಸಪ್ತಮದಲ್ಲಿ ಪಾಪಗ್ರಹದ ನವಾಂಶವಿದ್ದು ಹಾಗೂ ಶನಿಯ ದೃಷ್ಟಿಯೂ ಅದರ ಮೇಲಿದ್ದರೆ ಸ್ತ್ರೀ ದುರ್ಭಗಾ ಆಗುವಳು, ಸಪ್ತಮಗತ ಶುಭ ಗ್ರಹದ ನವಾಂಶದಲ್ಲಿದ್ದರೆ ಪತಿ ವಲ್ಲಭೆಯಾಗುವಳು. ಸಭಗಾಯೋಗವಿದು.

## ಪಿತೃಗೃಹ ಸುಖ ಯೋಗಃ

ವಿದ್ ತನೌ ಜನ್ಮಕಾಲೆ ಸಿತೇಂದುಸಹಿತೆ ತದಾ।
ಗೇಹೆ ಪಿತುಃ ಸರ್ವಸೌಖ್ಯೆ ಪರಿಪೂರ್ಣಾ ತು ಸಾ ಭವೇತ್ ॥೩೭॥

ಬುಧರಾಶಿ (ಮಿಥುನ, ಕನ್ಯಾ) ಲಗ್ನವಾಗಿ ಚಂದ್ರ, ಶುಕ್ರಯುತವಾಗಿದ್ದರೆ ಆ ಸ್ತ್ರೀ ಪಿತೃಗೃಹದಲ್ಲಿ ಸರ್ವ ವಿಧ ಸೌಖ್ಯ ಪೂರ್ಣಳಾಗುತ್ತಾಳೆ.

## ಸೌಖ್ಯಕೃದ್ ಯೋಗ

**ಸಿತೇಂದು ಜ್ಞಾಸ್ತನುಗತಾ ಭೂರಿಸೌಖ್ಯ ಗುಣ ಪ್ರದಾಃ।**
**ಗುರು ಸ್ತತ್ರ ಗತಃ ಪುತ್ರ-ಧನ ಸೌಖ್ಯಸಮೃದ್ಧಿ ಕೃತ್ ॥೩೮॥**

ಲಗ್ನದಲ್ಲಿ ಶುಕ್ರ ಚಂದ್ರ ಬುಧರಿದ್ದರೆ ಆ ಕನ್ಯೆ ಅನೇಕ ವಿಧ ಸೌಖ್ಯ ಪೂರ್ಣ ಹಾಗೂ ಸುಗುಣಿಯಾಗುವಳು, ಗುರು ಲಗ್ನಗತನಾಗಿದ್ದರೆ ಪುತ್ರಧನ, ಸುಖ, ಸಮೃದ್ಧಿಯಿಂದ ಯುಕ್ತಳಾಗುವಳು.

## ವಂಧ್ಯಾಕಾಕ ವಂಧ್ಯಾ ಯೋಗ

**ತನೋ ರಂಧ್ರಗತೌ ಸೂರ್ಯ ಚಂದ್ರೌ ನಿಜ ಗೃಹಸ್ಥಿತೌ।**
**ವಂಧ್ಯಾ ಬಾಲಾಥ ಸಾ ಕಾಕ ವಂಧ್ಯಾ ಜ್ಞೇಂದೂ ತಥಾಯಿದಿ ॥೩೯॥**

ಲಗ್ನದಿಂದ ಅಷ್ಟಮದಲ್ಲಿ ತನ್ನ ಮನೆಯಲ್ಲಿ ಸೂರ್ಯ, ಚಂದ್ರರಿದ್ದರೆ (ಅಷ್ಟಮ ಭಾವದಲ್ಲಿ ಕರ್ಕ ಅಥವಾ ಸಿಂಹ ಲಗ್ನ ವಿದ್ದಾಗ) ಆ ಕನ್ಯೆ ವಂಧ್ಯಾಯೋಗ ವುಳ್ಳವಳಾಗುವಳು. ಬುಧ ಕ್ಷೇತ್ರ (ಮಿಥುನ, ಕನ್ಯಾ) ಅಥವಾ ಕರ್ಕ ಅಷ್ಟಮ ದಲ್ಲಿದ್ದು, ಬುಧ ಹಾಗೂ ಚಂದ್ರರು ಅಲ್ಲಿದ್ದರೆ ಆ ಕನ್ಯೆ ಕಾಕ ವಂಧ್ಯಾ ಆಗುವಳು.

**ಮಂದಾರಭೆ ತನುಗತೆ ಸಿತೆಂದು ಸಹಿತೆ ತಥಾ।**
**ಪಾಪಕ್ಷಿತೆ ತದಾ ಬಾಲಾ ಧ್ರುವಂ ವಂಧ್ಯಾ ಪ್ರಜಾಯತೆ ॥೪೦॥**

ಶನಿ ಮಂಗಳರ ರಾಶಿ (ಮಕರ, ಕುಂಭ, ಮೇಷ ಹಾಗೂ ವೃಶ್ಚಿಕ) ಲಗ್ನದ ಲ್ಲಿದ್ದು, ಶುಕ್ರ, ಚಂದ್ರರ ಯುತ ಹಾಗೂ ಅವರ ಮೇಲೆ ಪಾಪಗ್ರಹ ದೃಷ್ಟಿಯಿದ್ದರೆ ಆ ಕನ್ಯೆ ನಿಶ್ಚಿತ ವಂಧ್ಯಾ(ಬಂಜೆ)ಯಾಗುವಳು.

**ಮೃತೌಸಿತೆಜ್ಯಫಣೆ ನೊ ಮೃತವತ್ಸಾತದಾಹಿಸಾ ॥೪೧॥**

ಸಪ್ತಮದಲ್ಲಿ ಸೂರ್ಯ, ರಾಹುಯುಕ್ತ ಅಥವಾ ಅಷ್ಟಮ ಗುರು, ಶುಕ್ರ, ರಾಹುಯುಕ್ತವಾದರೆ ಮೃತ ಸಂತತಿ

**ಸಾಗೌ ರವೌ ಸಪ್ತಮಗೆ ಪಂಚಮೇ ತಥಾ।**
**ಸಿತಜೀವ ಕುಜಾರಂಧ್ರೆ ಜಾಯಾಭಾವೇಥವಾ ಕುಜಃ ಶನಿಕ್ಷೇತಯುತಸ್ತಹಿ**
**ಗರ್ಭಸ್ರಾವಯುತಾಂಗಸಾ ॥೪೨॥**

ಅಷ್ಟಮದಲ್ಲಿ ಶುಕ್ರ, ಗುರು ಭೌಮರಿದ್ದು, ಅಥವಾ ಸಪ್ತಮಸ್ತ ಮಂಗಲ ಶನಿಯಿಂದ ಯುಕ್ತ ಅಥವಾ ದೃಷ್ಟಿ ಹೋ ತೋ ಕನ್ಯಾ ಗರ್ಭಸ್ರಾವವಾಗುತ್ತದೆ.

## ಕುಲ ಹಂತ್ರ ಯೋಗ

ಲಗ್ನ ಚಂದ್ರಗತಾ ಪಾಪಕರ್ತರಿ ಯದಿಜನ್ಮನಿ
ತದಾ ಬಾಲಾ ಕುಲಂ ಪತ್ಯಾ ನಾಹಶಯೇಚ್ಛ ವೆತು ಸ್ಥ ತಾ ॥೪೩॥

ಜನ್ಮಲಗ್ನ ಸಮಂತರ ಹಾಗೂ ಚಂದ್ರ ಪಾಪಗ್ರಹ ಕರ್ತರಿಯಲ್ಲಿ ವಕ್ರಿ ಪಾಪಗ್ರಹವಿದ್ದರೆ ವಿಶೇಷ) ಆಸೀಪತಿ ಹಾಗೂ ತಂದೆಯ ವಂಶ ನಷ್ಟಕಳಾಗುತ್ತಾಳೆ.

## ವಿಷಕನ್ಯಾ ಯೋಗ

ಭದ್ರಾತಿಥೌ ಕುಜಾರ್ಕರ್ಕಿ ದಿನೆ ಹಿವರುಣಾಗ್ನಿಭೆ।
ಜಾತಾಂಗನಾ ವಿಷಾಖ್ಯಾ ಸ್ಯಾದ್ ಧ್ರುವಂ ದುಷ್ಫಲಭಾಗಿನಿ ॥೪೪॥

ಭದ್ರಾತಿಥಿ (1, 7, 12) ರವಿ, ಮಂಗಳ ಹಾಗೂ ಶನಿವಾರ ದಿನ ಹಾಗೂ ಆಶ್ಲೇಷಾ ಶತತಾರಾ ಕೃತ್ತಿಕಾ ನಕ್ಷತ್ರ ಈ ಮೂರರ ಸಂಯೋಗದಲ್ಲಿ ಜನ್ಮ ತಳೆದವಳು ವಿಷ ಕನ್ಯೆ ಹಾಗೂ ಕೆಟ್ಟ ಫಲ ಭೋಗಿನಿಯಾಗುವಳು.

## ದ್ವಿತೀಯ ವಿಷ ಕನ್ಯಾ

ಶುಭೋಶುಭಶ್ಚ ತನುಗೋ ಶುಭಾವರಿ ಗೃಹಸ್ಥಿತೌ।
ಯದೀಯ ಜನ್ಮಸಮಯೇ ಕುಮಾರಿ ಸಾ ವಿಷಾಭಿಧಾ ॥೪೫॥

ಜನ್ಮಕಾಲದಲ್ಲಿ ಲಗ್ನದಲ್ಲಿ ಒಂದು ಶುಭ ಗ್ರಹ ಹಾಗೂ ಒಂದು ಪಾಪಗ್ರಹ ಹಾಗೂ ಷಷ್ಠದಲ್ಲಿ 2 ಪಾಪ ಗ್ರಹಗಳಿದ್ದರೆ ಆ ಕನ್ಯೆ ವಿಷ ಸಂಜ್ಞಿತಳಾಗುವಳು.

## ವಿಷಕನ್ಯಾ ಫಲ

ವಿಷಯೋಗೋದ್ಭವಾ ಬಾಲಾ ಮೃತಾಪತ್ಯಾ ಪ್ರಜಾಯತೆ।
ವಾಸೋಭೂಷಾವಿಹೀನಾ ಚ ಸಸಂತಾಪ ಶುಚಾನ್ವಿತಾ ॥೪೬॥

ವಿಷ ಯೋಗದಲ್ಲಿ ಉತ್ಪನ್ನ ಕನ್ಯೆ ವಕ್ರಿತ ಮಕ್ಕಳನ್ನು ಪಡೆದು ವಸ್ತ್ರಭೂಷಣ ಹೀನಳಾಗಿ ಹಾಗೂ ಶೋಕ ಸಂತಾಪಯುಕ್ತಳಾಗುವಳು.

ತನೋರ್ವೆಂದೋರಪಿ ಶುಭೋ ಜಾಯೇಶೋ ವಾಪಿ ಸಪ್ತಮೆ।
ಸ್ಥಿತಸ್ತರ್ಹಿ ವಿಷಾಭ್ಯೋ ಸೌ ಯೋಗೋ ನಶ್ಯತ್ಯಾಸಂಶಯಪು ॥೪೭॥

ಲಗ್ನ ಅಥವಾ ಸಪ್ತಮ (ಚಂದ್ರನಿಂದ) ಶುಭಗ್ರಹ ಅಥವಾ ಸಪ್ತಮೇಶ ಇದ್ದರೆ ಅದು ವಿಷಯೋಗ ನಿಃ ಸಂದಿಗ್ಧ ನಷ್ಟವಾಗುತ್ತದೆ.

## ಪತಿಪಾತಕ ಯೋಗ

ಪಾತಾಲೋಪಿ ತನೌ ರಂಧ್ರೆ ಜಾಮಿತ್ರೆ ವಾಪಿ ಚ ವ್ಯಯೋ।
ಸ್ಥಿತಃ ಕುಜಃ ಪತಿಂ ಹಂತಿನ ಚೇಚ್ಛುಭಯುತೆ ಕ್ಷಿತಃ ॥೪೮॥

ಇಮದೋರಪ್ಯಕ್ತಗೆ ಹೆಷು ಸ್ಥಿತೋ ಭೌಮೋಥವಾ ಶನಿಃ।
ಪತಿಹಂತಾ ಸ್ತ್ರೀಯಾಶ್ಚೈವಂ ವರಸ್ಯಯದಿ ಸ್ತ್ರೀಮೃತಿಃ ॥೪೯॥

ಲಗ್ನದಿಂದ 1, 4, 7, 8, 12ದಲ್ಲಿದ್ದ ಮಂಗಳ ಶುಭ ಯೋಗ ಅಥವಾ ಶುಭ ದೃಷ್ಟಿರಹಿತನಾಗಿದ್ದರೆ ಕನ್ಯೆ ವಿಧವಾ ಆಗುವಳು. ಮೇಲೆ ಹೇಳಿದ ಸ್ಥಾನಗಳಲ್ಲಿ ಚಂದ್ರನಿಂದಲೂ ಮಂಗಳ ಅಥವಾ ಶನಿಯಿದ್ದರೆ ಸ್ತ್ರಿ ಪತಿಯ ನಿಧನ ಹೇಳುವುದು ವರನ ಕುಂಡಲಿಯಲ್ಲಿ ಈ ಯೋಗವಿದ್ದರೆ ಹೆಂಡತಿಯ ಮರಣ ಎರಡೂ ಕುಂಡಲಿಯಲ್ಲಿ ಈ ಯೋಗವಿದ್ದರೆ ಕಲ್ಯಾಣಕರವಾಗುತ್ತದೆ.

ಸ್ತ್ರೀಣಾಂ ವೈಧವ್ಯದೋ ಯೋಗಃ ಪುಂಸಾ ಜನ್ಮ ನಿ ಚೇದ್ ಭವೇತ್
ತದಾ ಪತ್ನೀ ವಿನಾಶಃ ಸ್ಯಾಮಭಯೋಶ್ಚೇ ಚ್ಛುಭಂ ಸ್ಮೃತಮ್ ॥೫೦॥

ಸ್ತ್ರೀಯರಿಗೆ ವೈಧವ್ಯಕಾರಕ- ಮೇಲೇ ಹೇಳಿದ ಯೋಗ ಪುರುಷನ ಕುಂಡಲಿ ಯಲ್ಲಿದ್ದರೆ (1, 4, 7, 8, 12ರಲ್ಲಿ ಮಂಗಳ) ಸ್ತ್ರೀಯ ಮರಣ ಹೇಳುವುದು. ಇಬ್ಬರ ಕುಂಡಲಿಯಲ್ಲಿ ಅದೇ ಸ್ಥಿತಿಯಿದ್ದರೆ ಕಲ್ಯಾಣಕಾರಕವೆ.

ಪರಸ್ಪರ ನವಾಂಶ ಸ್ಥಾವಾರ್ಕಿಶುಕ್ರೌ ವಿಲೋಕಿತೌ।
ಮಿಥೋಥವಾ ಸಿತಕ್ಷೇ ತು ತನೌ ಕುಂಭಾಂಶಕೆ ಸತಿ ॥೫೦॥

ಜಾತಾಕನ್ಯಾ ಯೌವನೆ ತು ಕಾಮಾರ್ತಾ ಪುರುಷಾಕೃತಿ।
ಮತ್ಯಾಸಖ್ಯಾ ಶ ಮ ಯತಿ ಸ್ವಕೀಯ ಮದನಾನಲವ್ ॥೫೨॥

ಜನ್ಮ ಕಾಲದಲ್ಲಿ ಶನಿ, ಶುಕ್ರ ಪರಸ್ಪರ ನವಾಂಶಗತರಾಗಿ (ಶನಿ, ಶುಕ್ರ ನವಾಂಶ, ಶುಕ್ರ, ಶನಿ ನವಾಂಶ) ಇಬ್ಬರಲ್ಲಿ ದೃಷ್ಟಿಯೋಗವಿದ್ದರೆ ಅಥವಾ ಶುಕ್ರ ರಾಶಿ (ವೃಷಭ ತುಲಾ) ಲಗ್ನದಲ್ಲಿ ಅದರಲ್ಲಿ ಕುಂಭ ನವಾಂಶವಾಗಿದ್ದರೆ ಅಂದರೆ ಸ್ಪಷ್ಟಲಗ್ನ ವೃಷಭದಲ್ಲಿ $3^{0}20'$ದಿಂದ $6^{0}.40'$ದಲ್ಲಿದ್ದರೆ ಅದರಂತೆ ತುಲಾದಲ್ಲಿ $13^{0}.20'$ದಿಂದ $16^{0}.40'$ದವರೆಗಿದ್ದರೆ ಇಲ್ಲಿ ಉತ್ಪನ್ನ ಕನ್ಯೆ ಯುವ ಅವಸ್ಥೆ ಬಂದಾಗ ಪುರುಷ ಅಥವಾ

ತನ್ನ ಸಖಿಯಿಂದ ಮದನಾಗ್ನಿ ಶಾಂತ ಮಾಡಿಕೊಳ್ಳುವಳು (ಸ್ವಲಿಂಗ ರತಿ)

## ವೇದಾಂತಾದಿ ಶಾಸ್ತ್ರಜ್ಞತಾಯೋಗ

**ಸಬಲೈರ್ಭೌಮಸಿತವಿ- ಜ್ಜೀವೈರ್ವಿಗ್ನೆ ಸಮಕ್ಷೇಕೆ ।**
**ವೇದಾಂತಜ್ಞಾನೆ ಕಶಾಸ್ತ್ರದಕ್ಷಾ ಬಾಲಾ ಪ್ರಜಾಯತೆ ॥೫೩॥**

ಜನ್ಮ ಸಮಯದಲ್ಲಿ ಮಂಗಳ, ಶುಕ್ರ, ಬುಧ, ಗುರು ಪ್ರಬಲರಾಗಿ ಲಗ್ನ ಸಮ ರಾಶಿಯಾಗಿದ್ದರೆ ವೇದಾಂತ ಹಾಗೂ ಅನೇಕ ಶಾಸ್ತ್ರ ನಿಪುಣಳಾಗುವಳು.

## ಸನ್ಯಾಸ ಯೋಗ

**ಸಪಾಪಃ ಸಪ್ತಮಶ್ಚೈವ ನವಮೋಪಿ ಚ ಸಗ್ರಹಃ ।**
**ತದಾ ಪ್ರವ್ರಜಿತಾ ನಾರಿ ಪಾಪ ಭುಕ್ತೌ ವಿಶೇಷತಃ ॥೫೪॥**

ಸಪ್ತಮದಲ್ಲಿ ಪಾಪಗ್ರಹ, ನವಮದಲ್ಲಿ ಯಾವುದೇ ಗ್ರಹವಿದ್ದರೆ ಆ ಸ್ತ್ರೀ ಸನ್ಯಾಸ ಸ್ವೀಕಾರ ಮಾಡುವಳು, ಅದು ಪಾಪ ಗ್ರಹಂತರರ್ದಶಾದಲ್ಲಿ ಆಗುತ್ತದೆ.

## ಮೃತ್ಯುಯೋಗ

**ಶುಭಾಶುಭವಷ್ಟಮಸ್ಥಾ ವಪಿ ತೌ ತುಲ್ಯಾ ವಿಕ್ರಮೌ ।**
**ಪತ್ಯಾ ಸಮಂ ಮೃತಿ ಪ್ರಾಪ್ಯ ನಾರಿ ಯಾತಿ ಸುರಾಲಯಮ್ ॥೫೫॥**

**ಶುಭೆ ಲಗ್ನಾದಷ್ಟಮಸ್ಥೆ ಕ್ರೂರ ದೃಗ್ಯುತಿವಂಚಿತೆ ।**
**ಪ್ರಯಾತಿ ನಿಧನಂ ನಾರಿ ಪ ತ್ಯುಃ ಪೂರ್ವ ಮಿತಿಧ್ರುಂವವಮ್ ॥೫೬॥**

ಅಷ್ಟಮ ಭಾವದಲ್ಲಿ ಶುಭ ಹಾಗೂ ಪಾಪಗ್ರಹ ಶುಭ ಪಾಪತುಲ್ಯಪರಾಕ್ರಮಶಾಲಿಯಾಗಿದ್ದರೆ ಪತಿಯ ಜತೆಗೆ ನಿಧನ ಹೊಂದುವಳು. ಅಷ್ಟಮದಲ್ಲಿ ಶುಭಗ್ರಹ ಪಾಪಗ್ರಹದ ದೃಷ್ಟಿಯಲ್ಲಿದ್ದರೆ ಯುತ ಮಾಡಿದ್ದರೆ ಪತಿಯ ಪೂರ್ವ ಮೃತ್ಯು ಹೇಳುವುದು.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಸ್ತ್ರೀಜಾತಕ ಫಲಾಧ್ಯಾಯಃ ಸಮಾಪ್ತಃ**

# ಅಥ ಅಂಗ ಲಕ್ಷಣಾಫಲಾಧ್ಯಾಯಃ

## ಮೈತ್ರೇಯ ಉವಾಚ:

ಜನ್ಮೇಂದು ಲಗ್ನವಶತಃ ಪ್ರೋಕ್ತಂ ತುಸದಸತ್‌ಫಲವಮ್।
ಅಥಾಂಗಲಕ್ಷ್ಮಭಿಃ ಸ್ತ್ರೀಣಾಂ ವಕ್ತುಮರ್ಹಸಿತನ್ಮುನೆ ॥೧॥

## ಮೈತ್ರೇಯರು ಕೇಳಿದುದು–

ಹೇ ಮಹರ್ಷಿಯೇ,

ಜನ್ಮ ಲಗ್ನ ಹಾಗೂ ಚಂದ್ರರಿಂದ ಜಾತಕದ ಶುಭಾ ಶುಭ ಫಲ ತಾವು ತಿಳಿಸಿದ್ದರಿ ಕೃಪೆ ಮಾಡಿ ಅಂಗ ಚಿನ್ಹೆದ ಅನುಸಾರ ಫಲವನ್ನು ತಿಳಿಸಿರಿ.

## ಪರಾಶರ ಉವಾಚ:

ಮೈತ್ರೇಯ ಯದಿ ಜಿಜ್ಞಾಸಾ ತೊಸ್ತಿ ವಚ್ಮಿನಿಶಾಮಯ
ಅಂಗಾಗಾಂ ಲಕ್ಷ್ಮಣಾ ಸ್ತ್ರೀಣಾಂ ಫಲಂ ಚಾಪಿ ಶಿವೋ ದಿತವಮ್ ॥೨॥

## ಪರಾಶರರು ಹೇಳಿದುದು–

ಹೇ ಮೈತ್ರೇಯ,

ಒಂದು ವೇಳೆ ಅಂಗಲಕ್ಷಣದ ವಶ ಫಲದ ಜಿಜ್ಞಾಸೆಯಿದ್ದರೆ (ಕೇಳದ್ದಿ) ಶಿವನ ಮುಖಾಂತರ ಪ್ರತಿಪಾದಿತ ಅಂಗ ಲಕ್ಷಣ ಫಲ ಹೇಳುತ್ತೇನೆ ಕೇಳು.

### ಪಾದತಲ ಲಕ್ಷ್ಮಣಾ

ಮಸೃಣಾ ಕೋಮಲಂ ನಾರ್ಯಾಃ ಪತ್ತಲಂ ಮಾಂಸಲಂ ತಥಾ।
ಸಮಂ ಲೋಹಿತಮಸ್ವೇದಂ ಕೋಷ್ಣಂ ಭೋಗ ಪ್ರದಂ ಸ್ಮೃತಮ್ ॥೩॥

ಕಠೋರಂ ಸ್ಫುಟಿತಂ ರೂಕ್ಷಮಸಮಂ ರಕ್ತಮೇಜ್ಝಿತಮ್।
ಅಮಾಂಸಲಂ ರೂರ್ಪಸಮಂ ದುಃಖದ್ರಾರಿದ್ರ್ಯ ಸೂಚಕಮ್ ॥೪॥

ಸ್ತ್ರೀಯರ ಪದತಲ ಕೋಮಲವಾಗಿ ಮೇಲ್ಭಾಗ ಸಮನಾಗಿ (ಉಬ್ಬುಳ್ಳದ್ದಾಗಿ) ರಕ್ತ ಬಿಳಿರಹಿತವಾಗಿ(ಬೆವರುರಹಿತ) ಭೋಗಪ್ರದವೆಂದು ಹೇಳಲ್ಪಟ್ಟಿದೆ. ಕಠೋರ

ರೂಕ್ಷ ಬಿರುಕು ಸಹಿತ ವಿಷಮ ಕೆಂಬಣ್ಣದ್ದಾಗಿರದಿದ್ದರೆ ಉಬ್ಬಾಗಿರದಿದ್ದರೆ ಶೂರ್ಪಾಕಾರವಾಗಿದ್ದರೆ ದುಃಖ ಭಾಗಿಸಿ ದರಿದ್ರಳು ಆಗುವ ಸರಾಚಕವಾಗಿರುತ್ತದೆ.

## ಪಾದರೇಖಾ ಲಕ್ಷಣ

ಪದ್ಮಕಂಬುಧ್ವಜ ಚ್ಛತ್ರ ಮತ್ಸ್ಯ ಸ್ವಸ್ತಿಕಚಕ್ರಯುಕ್।
ತಲಂ ಪಾದಸ್ಯಾಂಗ ನಾಯಾಃ ನೂನಂ ರಾಜ್ಞತ್ವಸೂಪಕಮ್ ॥೫॥

ದೀರ್ಘೋರ್ಧ್ವರೇಖಾ ತತ್ರಸ್ಥಾ ಬಲ ಭೋಗಪ್ರದಾ ಮತಾ।
ವಾಯಸಾ ಖಭಂಜಂಗಾಭಾ ಯಾಸ್ತಾ ದೌರ್ಭಾಗ್ಯದಾಯಿಕಃ ॥೬॥

ಸ್ತ್ರೀಯ ಪಾದತಲದಲ್ಲಿ ಕಮಲ ಶಂಖ, ಧ್ವಜ, ಛತ್ರ, ಮೀನ, ಸ್ವಸ್ತಿಕ ಹಾಗೂ ಚಕ್ರ ಚಿಹ್ನೆಗಳಿದ್ದರೆ ಆ ಸ್ತ್ರೀ ರಾಣಿಯಂತೆ ಉಪ ಜೀವಿಸುವಳು (ಸಕಲೈಶ್ವರ್ಯ) ಪಾದತಲದಲ್ಲಿ ಸ್ವಪ್ಪ ಉರ್ಧ್ವರೇಖೆಗಳಿದ್ದರೆ ಸಮಸ್ತ ಭೋಗಪ್ರದ ಅದೇ ಕಾಕಾ ರೇಖೆ ಸರ್ಪ ಸದೃಶವಾಗಿದ್ದರೆ ದೌರ್ಭಾಗ್ಯದಾಯಕಳು, ದರಿದ್ರಳಾಗುವಳು.

ಲೋಹಿತಾ ವರ್ತುಲಾ ಪ್ರಾಂಶು ಮಸೃಣಾಃ ಪನ್ನಖಾಃ ಶುಭಾಃ।
ಅಸಿತಃ ಖಂಡಿತಾಸ್ತೆ ತು ಸದಾ ಶೂಭಕರಾಃ ಸ್ಮೃತಾಃ ॥೭॥

ಕೆಂಪು ವರ್ತುಳಾಕಾರ ಹಾಗೂ ಸ್ನಿಗ್ಧ ಪದತಲ ಉಗುರು ಶುಭಪ್ರದ ಕೃಷ್ಣ (ಕಪಲ) ಮೊಂಡವಾದ (ಕತ್ತರಿಸಿದ) ಉಗುರು ಅಶುಭಕರವಾಗುತ್ತದೆ.

## ಅಂಗುಷ್ಠಾದ್ಯಂಗುಲಿ ಲಕ್ಷಣ

ಪುಷ್ಟೋಂಗುಷ್ಟೋಪಿ ವೃತ್ತಶ್ಚ ಪ್ರಾಂಶುಃ ಸೌಭಾಗ್ಯ ಸೂಚಕಃ।
ಚಿಪಿಟೋ ತಿ ಲಘುರ್ವಕ್ರೋ ದೌರ್ಭಾಗ್ಯದ್ಯೋತಕೋಮತಃ।

ಪೃಷ್ಟ (ದಪ್ಪ) ವೃತ್ತಾಕಾರ ಎತ್ತರ ಅಂಗುಷ್ಟಸೌಭಾಗ್ಯ ಸೂಚಕವಾದರೆ ಚೌಕಾಕಾರ (ಚಪ್ಪಟೆ) ಅತೀ ಚಕ್ರ, ಹಾಗೂ ಡೊಂಕಾದ ಅಂಗುಷ್ಟ (ಹೆಬ್ಬೆರಳು) ದಾರಿದ್ರ್ಯ ಅಶುಭ ಸೂಚಕವಾಗಿರುತ್ತದೆ.

## ಪಾದದ ಶುಭಾಶುಭ ಬೆರಳು

ತನವೋಂಗು ಲಯಃ ಪುಷ್ಟಾ ಪಾದ ಜಾ ವರ್ತುಲಾ ಧನಾಃ
ಪ್ರಶಸ್ತಾ ಹೃಸ್ವದೀರ್ಘಾಶ್ಚ ಕೃಶಾ ಅಪಿ ವಿಗರ್ಹಿತಾಃ ॥೯॥

ಕೋಮಲ ಪುಷ್ಪ ವೃತ್ತಾಕಾರ ಪಾದದ ಬೆರಳುಗಳು ಪ್ರಶಸ್ತವಾದವುಗಳು. ಅತೀ ಉದ್ದ ಚಿಕ್ಕ ಹಾಗೂ ತೆಳು ಬೆರಳು ನಿಂದಿತವಾಗಿವೆ.

## ಪಾದಾಂಗುಲಿ ಫಲ

ದೀರ್ಘಾಗುಲ್ಯಸ್ತು ಕುಲಟಾಃ ಕೃಷಾಂಗುಲ್ಯೋಧನಾ ಮತಾಃ।
ಹ್ರಸ್ವಾಂಗುಲ್ಯೋ ಮಿತಾಯುಷ್ಯಾ ವಿಬುಧ್ಯೈ ಪರಿಕೀರ್ತಿ ತಾಃ ॥೧೦॥

ಚಿಪಿಟಾಂಗುಲಿಕಾ ದಾಸ್ಯಾಃ ಸಮಾರೂಢಾಂಗುಲಿಯುತಾಃ।
ವಿಧವಾ ದುಃಖಿತಾ ನಾರ್ಯೋ ಭವಂತಿ ಚ ಪರಾಶ್ರೀತಾಃ ॥೧೧॥

ಕಾಲಲ್ಲಿ ಉದ್ದ ಬೆರಳುಗಳುಳ್ಳವಳು ಕುಂಟೆಯಾಗುವಳು, ತೀರ ತೆಳುವಾದ ಬೆರಳುಗಳು ನಿರ್ಧನ ಸಲಾಚಿಸಿದರೆ, ಚಿಕ್ಕ ಬೆರಳುಗಳು ಉಳ್ಳವಳು ಅಲ್ಪಾಯು ಚಪ್ಪಟೆ ಬೆರಳುಗಳ್ಳವಳು ದಾಸಿ, ಒಂದರ ಮೇಲೊಂದು ಬೆರಳುಗಳು ವಿಧವೆಯ ಸೂಚಕ ಹಾಗೂ ದುಃಖಿತಳು ಪರಾಶ್ರೀತಳು ಆಗುವಳು.

ಮಾರ್ಗೆ ಚಲಿಂತ್ಯಾಂ ಯಸ್ಯಾಂ ತೂ ತ್ರಿತಂತ್ರಿ ಚ ರಜಾಂಸಿ ವೈ ।
ಪಾಂಶುಲಾ ಸಾತು ವಿಜ್ಞೇಯಾ ವಂಶ ತ್ರಿಶತ್ರಿಯನಾಶಿನೀ ॥೧೨॥

ಯಸ್ಯಾಶ್ಚಲಂತ್ಯಾಃ ಪಾದಸ್ಯಭೂಮಿಸ್ಪ್ರಂಗ ನ ಕನಿಷ್ಠಿಕಾ।
ಮಧ್ಯಮಾ ನಾಮಿ ವಾಪಿ ಸಾ ವೃಧವ್ಯ ಮವಾಪ್ನುಯಾತ್ ॥೧೩॥

ಅಂಗುಷ್ಟತೋ ಪದಿ ಭವೇತ್ ತರ್ಜನಿ ಮಹತಿ ಸ್ತ್ರೀಯಾಃ।
ಕೌಮಾರೆ ಸಾ ಪುಮಾಸಕ್ತಾ ತತೋಗ್ರೆ ಸ್ವೆರಿಣೆ ಭವೇತ್ ॥೧೪॥

ದಾರಿಯಲ್ಲಿ ನಡೆಯುವ ಸಮಯದಲ್ಲಿ ಕಾಲಿನ ಧೂಳು ಮೇಲೇರಿ ಪಾದದ ಮೇಲೆ ಬಿದ್ದರೆ ಕುಲತ್ರಯ್ಯ ತಂದೆ, ತಾಯಿ, ಪತಿಯನ್ನು ನಾಶ ಮಾಡುವಳು ಅಥವಾ ಕಲಂಕಿತವಾಗಿ ಮಾಡುವಳು. ಅವಳು ನಡೆಯುವಾಗ ಕಿರು ಬೆರಳು ಮಧ್ಯಮ ಹಾಗೂ ಕಿರುಬೆರಳು ಮಧ್ಯಮದ ಮಧ್ಯ ಬೆರಳು (ಅನಾಮಿಕಾ) ಭೂಮಿ ಸ್ಪರ್ಶ ಮಾಡದಿದ್ದರೆ ವಿಧವೆಯಾಗುತ್ತಾಳೆ. ಪಾದಾಂಗುಷ್ಟಕಿಂಕ ತರ್ಜನಿ ದೊಡ್ಡದಿದ್ದರೆ ಕುಮಾರಿ ಅವಸ್ಥೆಯಲ್ಲಿಯೇ ಪುರುಷಾಸಕ್ತಳಾಗಿ ನಂತರ ಸ್ವೈರಿಣಿಯಾಗುವಳು.

## ಪಾದಪೃಷ್ಟ

ಸ್ನಿಗ್ಧಂ ಮೃದು ಮಾಂಸಲಂ ಚಾ ಶಿರಾಲಂ ಸ್ವೆದವರ್ಜಿತಮ್।
ಅಭ್ಯುನ್ನತಂ ಪಾದಪುಷ್ಟಂ ಸ್ತ್ರೀಯಾ ರಾಜ್ಞಿತ್ವಸೂಚಕಮ್ ॥೧೫॥

ಅಧೋನತಂ ಶಿರಾಲಂ ಚ ರೋಮಾಢ್ಯಾಂ ಮಾಂಸವರ್ಜಿತಮ್।

ಸ್ತ್ರೀ ಪಾದಗಳು (ಮೇಲ್ಭಾಗ) ಮೃದು ಸ್ನಿಗ್ಧ ಗೋಲಾಕಾರ ಹೃಷ್ಟಪುಷ್ಟ

(ಮಾಂಸಲ) ಬೆವರುರಹಿತ ಉನ್ನತವಾಗಿದ್ದರೆ, ರಾಣಿ ಸೂಚಕ ಕೆಳಗೆ ಮುಖ ಮಾಡಿದಂತಿದ್ದರೆ ಬೆವರು ಸಹಿತ ರೋಮವುಳ್ಳವಳಾಗಿ ಕೆಳಮುಖವಾಗಿದ್ದರೆ ದರಿದ್ರಳು, ಬೆವರಿನಿಂದ ಕೂಡಿದ್ದರೆ ಬಹಳ ಅಡ್ಡಾಡುವವಳು, ರೋಮಯುಕ್ತ ವಾಗಿದ್ದರೆ ದಾಸಿ ನಿರ್ಮಾಂಸವಾಗಿದ್ದರೆ ದುರ್ಭಾಗಿಣಿಯಾಗುವಳು.

### ಹಿಂಬಿಡ

ಪಾರ್ಷ್ಣೋ ಸಮಾಯಾಂ ಸುಭಗಾ ಸ್ಥೂಲಾಯಾಂ ದುರ್ಭಗಾಮತಾ।
ಅಭ್ಯುನ್ನತಾಯಾಂ ಕುಲಟಾ ದೀರ್ಘಾಯಾಮತಿದುಃಖಿತಾ ॥೧೭॥

ಹಿಂಬಿಡ ಸಮಾನ ರೂಪಕವಾಗಿದ್ದರೆ ಸ್ತ್ರೀ ಸುಭಗಾ ಆಗುತ್ತಾಳೆ. ಸ್ಥೂಲ (ದಪ್ಪ) ಸ್ತ್ರೀ ದುರ್ಭಗಾ ಎತ್ತರವಾಗಿದ್ದರೆ ಕುಲಟೆ ಉದ್ದವಾಗಿದ್ದರೆ ಅತಿ ದುಃಖಿತಳಾಗುವಳು.

### ಜಂಘಾ

ಸುವೃತ್ತೆ ರೋಮ ರಹಿತೋ ಮಸ್ಯೃಣೆ ವಿಶಿರೆ ತಥಾ।
ಚಾರು ಜಂಘೆ ಯಹೀಯೇ ಸ್ತಃ ಸಾಂಗನಾ ರಾಜವಲ್ಲಿಭಾ ॥೧೮॥

ಸ್ತ್ರೀಯ ತೊಡೆಗಳು ಗೋಲಾಕಾರವಾಗಿ ರೋಮರಹಿತವಾಗಿ ಬೆವರುರಹಿತ ನಯವಾಗಿದ್ದರೆ ಆ ಸ್ತ್ರೀ ರಾಜವಲ್ಲಭಳಾಗುವಳು.

### ಜಾನು (ಮೊಳಕಾಲು)

ಜಾನುದ್ವಯಂ ಸುವೃತ್ತಂ ಚ ಮಸ್ಯೃಣು ಮಾಂಸಲಂ ಶುಭಂ
ಸ್ವೈರಿಣ್ಯಾ, ಮಾಂಸರಹಿತಂ ದರಿದ್ರಾಯಾಂ ಶ್ಲಥಂ ಮತಮ್ ॥೧೯॥

ಸವರ್ತುಲ – ನಯ ಪುಷ್ಟವಾಗಿದ್ದರೆ ಶುಭಕಾರಕವಾಗುತ್ತದೆ. ಸ್ವೈರಿಣಿಯ – ಮೊಳಕಾಲುಗಳು ನಿರ್ಮಾಂಸ ದರಿದ್ರವಾಗಿ ಸಡಿಲವಾಗಿದ್ದರೆ ದರಿದ್ರಳಾಗುವಳು.

### ಊರು

ವೃತ್ತೌ ಮೃದ್ ಹಸ್ತಶುಂಡಾಕೃತಿ ನವಮ್ಯೌ ಘನೌ ತಥಾ।
ಅಶಿರಾಲೌ ಯದ್‌ರೂ ಸ್ತಃ ಸಾ ರಾಜಮಹಿಷಿ ಭವೇತ್ ॥೨೦॥

ಸರೋಮೌ ಚಪಟೌ ತೌ ತು ದುರ್ಬಗಾವಿಧವಾಕರೌ।

ಯಾವ ಸ್ತ್ರೀಯ ಊರುದ್ವಯಗಳು ಗೋಲಾಕಾರ ಕೋಮಲ ಆನೆ

ಸೊಂಡಿಲಿನಾಕಾರವಾಗಿದ್ದರೆ ಮನಸ್ಸಿಗೆ ಆಹ್ಲಾದಕರವಾಗಿದ್ದರೆ ಘನ ಊರುಗಳುಳ್ಳವಳಾಗಿದ್ದರೆ ಬೆವರುರಹಿತವಾಗಿದ್ದರೆ ಆ ಸ್ತ್ರೀ ರಾಜಮಹಿಷಿಯಾಗುವಳು. ಅದೇ ರೋಮಯುಕ್ತವಾಗಿದ್ದರೆ ಆ ಸ್ತ್ರೀ ದುರ್ಭಾಗ್ಯಳಾಗುವಳು. ಚಪ್ಪಟೆಯಾಗಿದ್ದರೆ ವಿಧವೆಯಾಗುವಳು.

## ಕಟಿ (ಟೊಂಕ)

ಕಟಿಃ ಸಮಾ ಚತುರ್ವಿಂಶ ತ್ಯಂಗುಲಪ್ರಮಿತಾ ಶುಭಾ ॥೨೧॥

ಅತೀಪ್ರಶಸ್ತಾ ಸುಖದಾ ಸಮುಚ್ಛ್ರಿತನಿತಂಬಿನಿ ।
ಲಂಬಾನತಾ ಸಂಕುಚಿತಾ ಚಿಪಿಟಾ ಮಾಂಸವರ್ಜಿತಾ ॥೨೨॥

ಲಘುಃ ಸರೋಮಾ ವಿಬುಧೈರುಕ್ತಾ ವೈಧವ್ಯದಾಯಿಕಾ ।

24 ಅಂಗುಲಕ್ಕೆ ಸಮಾನ ಕಟಿಪ್ರದೇಶವುಳ್ಳವಳು – ಶುಭಳು, ಉನ್ನತ ನಿತಂಬ (ಸ್ತನ) ಯುಕ್ತ ಕಟಿ ಪ್ರದೇಶ ಮತ್ತು ಉತ್ತಮ ಅದೇ ದೀರ್ಘ ಹಿಸುಕಿದಂತದ್ದು ಸಂಕುಚಿತ, ಚಪ್ಪಟೆ ನಿರ್ಮಾಂಸ ಅತಿ ಚಿಕ್ಕ ರೋಮಲಯುಕ್ತವಾಗಿದ್ದರೆ ವೈಧವ್ಯಪ್ರದವೆಂದು ವಿದ್ವಾಂಸರು ಹೇಳುತ್ತಾರೆ.

## ನಿತಂಬ (ಪುಷ್ಟ)

ಮಾಂಸಲತ್ತ್ವೋನ್ನತಃ ಸ್ಥೂಲೋ ನಿತುಂಭಃ ಶೋಭನಸ್ತಥಾ ।
ಸೌಭಾಗ್ಯಸೂಚಕೋ ವೇದ್ಯೋ ದೌರ್ಭಾಗ್ಯ ದ್ಯೋತಕೋನ್ಯಥಾ ॥೨೩॥

ಪುಷ್ಟ ಉನ್ನತ ಸ್ಥೂಲ – ನಿತಂಬಗಳಿದ್ದರೆ ಸೌಭಾಗ್ಯ ಸೂಚಕ ಅಪುಷ್ಟ ಚಿಕ್ಕ ಅತಿ ಸ್ಥೂಲವಿದ್ದರೆ ದೌರ್ಭಾಗ್ಯಶಾಲಿ.

## ಭಗ

ಕೂರ್ಮಪೃಷ್ಠನಿಭೋ ರಕ್ತಸ್ತುಂಗೋ ಮೃದುಲ ರೋಮಯುಕ್ ।
ಭಗೋ ಮೃಗ[illegible]ಣಾಂ ಸೌಮ್ಯೋ ನಿಗೂಢಮಣಿಮಾನಪಿ ॥೨೪॥

ಭಗೋ ಮೃ[illegible] ಸ್ತುಲ್ಲೀಕುಕ್ಷಿ ಸಮೋಪಿ ವಾ ।
ಸರೋ[illegible]ೋ ಲಕ್ಷ್ಮನಾಸೋ ನ ಶೋಭನಃ ॥೨೫॥

ಸವ್ಯೋನ್ನತಃ ಕುಮಾರಿಜಃ ಪುತ್ರಜಸ್ತು ತದನ್ಯಥಾ ।
ವಾಮವಿತ್ತೋ ಭಗೋ ಜಾತುಚಿನ್ನ ಗರ್ಭಧರೋ ಮತಿಃ ॥೨೬॥

ಭಗವು ಆಮೆ ಪೃಷ್ಠ ಸದೃಶ್ಯ ಕೆಂಪಾಗಿ ಉಬ್ಬಾಗಿದ್ದರೆ ಕೋಮಲ ರೋಮಯುಕ್ತ ಮಣಿಯಂತೆ ನಿಗೂಢ ಮುಚ್ಚಲ್ಪಟ್ಟಿದ್ದು ಶೋಭ ತರುತ್ತದೆ. ಹರಿಣಿಯ ಭಾರ ಪುಟದಂತೆ ಇಲಿಯ ಹೊಟ್ಟೆಯಂತೆ ರೋಮಯುಕ್ತ ಅಗಲ ಮುಖವಾಗಿ ದೃಶ್ಯಮಣಿ ಭಗ – ಶುಭಕಾರಕವಲ್ಲ. ಎಡಗಡೆ ಭಾಗ ಉಬ್ಬಾಗಿದ್ದರೆ ಪುತ್ರ ಜನ್ಮಪ್ರದ ಬಲಗಡೆ ಉಬ್ಬು ಪುತ್ರಪ್ರದ ಹಾಗು ವಾಮವರ್ತ ಭಗ ಗರ್ಭಕ್ಕೆ ಶುಭದಾಯಕವಲ್ಲ.

## ವಸ್ತಿ (ಹೊಕ್ಕಳ ಕೆಳಭಾಗ)

ಮಹತಿ ಮೃದುಲಾ ವಸ್ತಿಃ ಶುಭದಾಭ್ಯುನ್ನತಾ ಮನಾಕ್ ।
ಶಿರಾಲಾ ರೋಮರೇಖಾಂಕಾ ಶುಭದಾನೈವ ಸಮ್ಮತಾ ॥೨೭॥

ವಸ್ತಿಯು (ಕಿಬ್ಬೊಟ್ಟೆ – ನಾಭಿಯ ಕೆಳಭಾಗ) ದೊಡ್ಡದಾಗಿ ಕೋಮಲವಾಗಿ ಸ್ವಲ್ಪ ಎತ್ತರವಾಗಿದ್ದರೆ ಶುಭಪ್ರದ. ಬೆವರು ರೋಮಯುಕ್ತ ರೇಖೆಗಳಿಂದ ಕೂಡಿದ್ದರೆ ಅಶುಭಪ್ರದ.

ನಾಭಿರ್ಗಭಿರಾ ಚಾವರ್ತಾದಕ್ಷಿಣೆ ತ್ವತಿಸೌಖ್ಯದಾ
ವಾಮಾವರ್ತಾ ಸ್ಫುಟಗ್ರಂಥಿರುಚತಾ ಸಾ ತ್ವಶೋಧನಾ ॥೨೮॥

ದಕ್ಷಿಣಾ ವರ್ತ ಗಂಭೀರ ನಾಭಿಸೌಖ್ಯಪ್ರದ ವಾಮಪುತ್ರ ಮೇಲೆ ಭಾಗ ಸ್ಫುಟಗ್ರಂಥಿಯಿದ್ದರೆ ಅಶುಭ

## ಕುಕ್ಷಿ (ಹೊಟ್ಟೆ)

ತತಾಕುಕ್ಷಿಃ ಶುಭಾ ಪ್ರೋಕ್ತಾನೇಕ ಪುತ್ರಜನುಃ ಪ್ರದಾ ।
ಮಂಡೂಕಾಭಾ ತು ಸಾ ರಾಜಜನ್ಮದಾ ಚಾತಿ ಶೋಭನಾ ॥೨೯॥

ಕುಕ್ಷಿರಭ್ಯುನ್ನತಾ ಯಸ್ಯಾವಂಧ್ಯಾ ಸಾ ತ್ರಿವಲೀಯುತಾ ।
ಸಂನ್ಯಾಸ್ತಾಥಾಪಿ ಚಾವರ್ತಾ ಯುಕ್ತಾ ಚೇದ್ ದಾಸ್ಯವೃತ್ತಕೃತ್ ॥೩೦॥

ದೊಡ್ಡದಾದ (ವಿಸ್ತೃತ) ಹೊಟ್ಟೆಯುಳ್ಳವಳು ಅನೇಕ ಪುತ್ರರಿಗೆ ಜನ್ಮವೀಯು ವಳು ಶುಭಪ್ರದಳು. ಕಪ್ಪೆ ಹೊಟ್ಟೆಯಂತೆ ಹೊಟ್ಟೆಯಿದ್ದರೆ ರಾಜನಿಗೆ ಜನ್ಮ ನೀಡುವ ವಳಾಗುವಳು. ಅತ್ಯಧಿಕ ಶುಭಪ್ರದ ಯಾವ ಸ್ತ್ರೀಯ ಕುಚಗಳು ಉನ್ನತವಾಗಿವೆಯೋ ಅವಳು ವಿಂಧ್ಯಾ (ಬಂಜೆ) ಆಗುವಳು. ತ್ರಿಬಲಯುಕ್ತವಾದರೆ ಸಂನ್ಯಾಸಿ ಧಾರಣ ಮಾಡುವಳು. ಹೊಟ್ಟೆ ಆವೃತ್ತಾಕಾರವಾಗಿದ್ದರೆ ದಾಸಿಯಾಗುವಳು.

## ಪಾರ್ಶ್ವ

ಪುಷ್ಪೆಸಮೇ ಮೃದ ಪಾರ್ಶ್ವೆ ನಾರಿಣಾಂ ಕ್ಷೇಮದೆ ಸ್ಮೃತೆ ।
ಶರಾಲೆ ಚಾಪಿ ಲೋಮಾಢ್ಯೆ ಪ್ರಾಂಶೂ ಚಾಶೋಭನೆ ಮತೆ ॥೩೧॥

ಸ್ತ್ರೀಯ ಪಕ್ಕಡಗಳು ಪುಷ್ಪವಾಗಿ ಕೋಮಲವಾಗಿದ್ದರೆ ಶುಭವಾಗಿ ಬೆವರು ರೋಮಯುಕ್ತ ಪಾರ್ಶ್ವ ಅಶುಭ.

## ಹೃದಯ (ಎದೆ)

ನಾರೀನಾಂ ರೋಮ ರಹಿತಂ ಸಮಂ ಚ ಹೃದಯಂ ಶುಭಮ್ ।
ಅಪಿ ತಾಸಾಂ ವಿಸ್ತೃತಂ ತ ಲ್ಲೊಮಾಢ್ಯಂ ನಹಿ ಶೋಭನಂ ॥೩೨॥

ಸ್ತ್ರೀಯರಿಗೆ ನಿರ್ರೋಮ ಸಮಾನ ಹೃದಯ (ಎದೆ) ಶುಭಕಾರಿ. ವಿಸ್ತೃತವಾದ ಹಾಗೂ ರೋಮಯುಕ್ತ ಹೃದಯ ಅಶುಭ.

## ಸ್ತನ

ಕುಚೌಸಮೌ ಪೀವರೌ ಚ ವರ್ತುಲೌ ಸದೃಢೌ ಶುಭೌ ।
ಅಗ್ರೆ ಸ್ಥೂಲೌ ಮಾಂಸಹಿನೌ ಪ್ರಥಕ್ಕ್ಯ್ನ ನ ಶೋಭೌಮತಾ ॥೩೩॥

ಸಮಾನ ಪೀವರ ಗೋಲಾಕಾರ ಸದೃಢ ಶುಭಪ್ರದ. ಕೇವಲ ಅಗ್ರಭಾಗ ಸ್ಥೂಲವಾಗಿ ನಿರ್ಮಾಂಸ ಹಾಗೂ ಜೋತುಬಿದ್ದ ಸ್ಥಿತಿಯಲ್ಲಿದ್ದಲ್ಲಿ ಶುಭವಲ್ಲ.

ಸುತದಾ ದಕ್ಷಿಣ ಕುಚೋನ್ನತೌ ವಾಮಾ ತು ವಿಶ್ರುತಾ ।
ವಾಮಸ್ತನೋನ್ನತೌ ಸಾತು ಕುಮಾರೀ ಜನ್ಮದಾ ಮಾತಾ ॥೩೪॥

ದಕ್ಷಿಣಸ್ತನ ಉನ್ನತವಾಗಿದ್ದರೆ (ಬಲ) ಪುತ್ರಜನ್ಮ. ಎಡಸ್ತನ ಉನ್ನತವಾಗಿದ್ದರೆ ಸ್ತ್ರೀ ಜನ್ಮ ಕೊಡುವವಳಾಗುತ್ತಾಳೆ.

## ಕುಚಾಗ್ರ

ಕುಚಾಗ್ರೆ ಶೋಭನೆ ಸ್ತ್ರೀಣಾಂ ಸುವೃತ್ತೇಪಿ ಚ ಶ್ಯಾಮಲೆ ।
ಲಂಬೆ ಕೃಶೆ ನಿತೆಭ್ಯಂತರ್ಗದಿತೆ ನ ಶುಭಪ್ರದೆ ॥೩೫॥

ಸ್ತ್ರೀಯರ ಕುಚಾಗ್ರಗಳು ಶ್ಯಾಮಲ ವರ್ಣ ವೃತ್ತಾಕಾರವಾಗಿದ್ದರೆ ಶುಭಪ್ರದ. ಆದರೆ ಮೊಡ್ಡ, ದಪ್ಪ ಹಾಗೂ ಹಿಚುಕಲ್ಪಟ್ಟಂತಿದ್ದರೆ ಅಶುಭಪ್ರದ.

## ಸ್ಕಂದ (ಹೆಗಲು)

ಸಮಾವಂಸೌ ಗುಪ್ತಸಂಧಿ ಮಾಂಸಲೌ ಶೋಭನೌ ಸ್ಮೃತೌ ।
ಭುಗ್ನೌ ಸರೋಮೌ ನಿರ್ಮಾಂಸೋ ಉನ್ನತೌ ನೈವಶೋ ಭನೌ ॥೩೬॥

ಸ್ತ್ರೀಯ ಸ್ಕಂದಗಳು (ಹೆಗಲು-ಭುಜ) ಸಮಾನವಾಗಿದ್ದು ಸಂಧಿಗಳು ಗೂಢವಾಗಿ ಬೇರೆಯವರಿಗೆ ತಿಳಿಯದಂತಿರಬೇಕು ಹಾಗೂ ಮಾಂಸಸಹಿತವಾಗಿರ ಬೇಕು. ಆಗ ಶುಭಕರ. ಇದರ ವಿಪರೀತ ಅಸಮಾನ ರೋಮಯುಕ್ತ ಮಾಂಸರಹಿತ ಹಾಗೂ ಪುರುಷರಂತೆ ಎತ್ತರ ಸ್ಕಂದಗಳಿದ್ದರೆ ಶುಭಕಾರಕವಲ್ಲ.

## ಕಾಖ(ಕಂಕಳು)

ಕಕ್ಷೆ ಸೂಕ್ಷ್ಮರೋಮೋಪಿ ಮಸೃಣೆ ಮಾಂಸಲೆ ಶುಭೆ ।
ಶಿರಾಲೇಪಿ ಚ ಸಸ್ವೆದೆ ಗಭಾರೆ ಚಾರುಭೆ ಮತೆ ॥೩೭॥

ಸ್ತ್ರೀಯರ ಕಂಕಳು – ಸೂಕ್ಷ್ಮರೋಮಯುಕ್ತವಾಗಿದ್ದು ಪುಷ್ಪವಾದದ್ದು ಶುಭಪ್ರದ. ರಕ್ತನಾಳಗಳು ಕಾಣದಂತಿರುವುದು ಶುಭ. ರಕ್ತನಾಳಗಳಿಂದ ನರಪೇಶಿ ಗಳಿಂದ ಕೂಡಿ ಸದಾ ಬೆವರುವ ಆಳವಾದ ಕಂಕುಳು ಅಶುಭಪ್ರದ.

## ಬಾಹು (ಕೈಗಳು)

ನಿರ್ಮರ್ಲೋಮಾವಶಿರಾಲೌ ಚಾ ಲಕ್ಷ್ಯಾ ಸ್ತ್ರಿ ಸರಲಾವಪಿ ।
ವೃತ್ತೌ ಬಾಹು ಸುಪ್ರಶಸ್ತೌ ಮೃದುಗ್ರಂಥಿಯುತೌ ಸ್ತ್ರೀಯಾಃ ॥೩೮॥

ಶಿರಾಲಾವಪಿ ಭುಗ್ನೌ ತು ಮಾಂಸಹೀನೌ ಲಘೂ ಚ ತೌ ।
ಸಸ್ಥೂಲಲೋಮೌ ವಾಮಾನಾಂ ದುಃಖಕ್ಲೇಶ ಪ್ರದಾಯಕೌ ॥೩೯॥

ಸ್ತ್ರೀಯರ ಭುಜ ನಿರ್ಮಲವಾಗಿ ನರಪೇಶಗಳ ರಹಿತ – ಪುಷ್ಪ ಸೀದಾ ಶುಭಪ್ರದ. ನರಪೇಶ ಕಾಣುತ್ತ ವಕ್ರ ನಿರ್ಮಾಂಸ ಚಿಕ್ಕ ಅಥವಾ ದೊಡ್ಡ ಅಶುಭಪ್ರದಗಳು.

## ಕರಾಂಗುಷ್ಠ (ಕೈಯ ಹೆಬ್ಬೆರಳು)

ಹಸ್ತಾಂಗುಷ್ಠೌ ವಾಮಾನಾಂ ಪದ್ಮಕೋರಕಸನ್ನಿಭೌ ।
ಶುಭಪ್ರದೌ ತಥಾ ಭುಗ್ನೌ ದುರ್ಬಲೌ ಕ್ಲೇಶದೌ ಸ್ಮೃತೌ ॥೪೦॥

ಸ್ತ್ರೀಯರ ಉಂಗುಷ್ಠ ಕಮಲಿ ಪುತ್ರದಂತಿದ್ದುದಾದರೆ ಶುಭಪ್ರದವಾಗುತ್ತದೆ. ದಪ್ಪ, ಕೃಶವಾಗಿದ್ದರೆ ಕ್ಲೇಶಕಾರಕ.

## ಕರತಲ (ಅಂಗೈ)

ಮಧ್ಯೋಚ್ಛ್ರಿತಂ ಲೋಹಿತಂ ಚಾ ಚ್ಛಿದ್ರಂ ಕರತಲಂಮೃದು ।
ಸ್ತೋಕರೇಖಾನ್ವಿತಂ ವೇದ್ಯಂ ಸ್ತ್ರೀಣಾಮತಿಸುಖಪ್ರದಮ್ ॥೪೧॥

ಸ್ತ್ರೀಯರ ಕರತಲ ಮಧ್ಯ ಉನ್ನತವಾಗಿಯೂ, ಗುಲಾಬಿ ವರ್ಣವಾಗಿ ಛಿದ್ರ ರಹಿತ ರೇಖೆಗಳಿಂದ ಕೂಡಿ ಕೋಮಲವಾಗಿದ್ದರೆ ಶುಭಪ್ರದವಾಗುತ್ತದೆ.

## ಕರಪೃಷ್ಠ (ಮುಂಗೈ)

ನಿರ್ಲೋಮಂ ಮಾಂಸಲಂ ಪಸ್ತಪುಷ್ಟಂ ಕೋಮಲಮುತ್ತಮಮ್ ।
ಶಿರಾವೃತ್ತಂ ಸರೋಮಂ ಚ ನತಂ ದುರ್ಭಾಗ್ಯ ಲಕ್ಷಣಮ್ ॥೪೩॥

ರೋಮರಹಿತವಾಗಿ ಮಾಂಸಯುಕ್ತ ಪುಷ್ಟ ಕೋಮಲ ವೃತ್ತ ಮುಂಗೈ ಶುಭಕರ. ರೋಮಪೂರ್ಣ – ನೀಲೋನ್ಮುಖ ದೌರ್ಭಾಗ್ಯ ಸೂಚಕ.

## ಕರತಲ ರೇಖೆ

ವೃತ್ತಾಪಿ ಲೋಹಿತಾ ಸ್ವಷ್ಟಾ ಗಭೀರಾ ಮಸೃಣಾ ತಥಾ ।
ಪೂರ್ಣಾ ಸೌಭಾಗ್ಯದಾ ಪ್ರೋಕ್ತಾ ರೇಖಾ ವಾಮಕರೆ ಸ್ತ್ರೀಯಾಃ ॥೪೪॥

ಮೀನಾಂಕತಸ್ತು ಸುಭಗಾ ಸಾಧನಾ ಸ್ವಸ್ತಿಕಾಂಕತಃ ।
ಪದ್ಮಚಿಹ್ನೇನ ರಾಜ್ಞಿ ಸ್ಯಾದದಪಿ ಮಾತ ಚ ಭೂಪತೆಃ ॥೪೫॥

ದಕ್ಷಿಣಾವರ್ತ ಚಿಹ್ನೇನ ವಲ್ಲಬಾ ಚಕ್ರವರ್ತಿನಾಃ ।
ಕಂಬುಕೂರ್ಮಾಚ್ಛತ್ರಚಿಹ್ನೆ ರಾಜ ಮಾತಾಂಗನಾ ಮತಾ ॥೪೬॥

ವಾಮಹಸ್ತೇ ಸ್ತ್ರೀಯಾ ರೇಖಾ ದ್ವಿಪಾಶ್ವವೃಷಭಾಕೃತಿಃ ।
ತುಲಾಕಾರಾಥವಾ ಚೇತ್ಸ್ಯಾದ್ ವಣಿಗ್ ಭಾರ್ಯಾ ತದಾಹಿಸಾ ॥೪೭॥

ಸ್ತ್ರೀಯರ ಎಡಗೈಯಲ್ಲಿ ಸುವೃತ್ತ ರಕ್ತ ಸ್ವಷ್ಟ ಪರಿಪೂರ್ಣ (ಭಿನ್ನ - ಭಿನ್ನವಿಲ್ಲದ) ರೇಖೆಗಳು ಸೌಭಾಗ್ಯಪ್ರದವಾಗಿರುತ್ತವೆ. ಸ್ತ್ರೀಯ ಕೈಯಲ್ಲಿ ಮತ್ಸ್ಯದ ಚಿಹ್ನೆಯಿದ್ದರೆ ಅವಳು ಸೌಭಾಗ್ಯಶಾಲಿನಿ. ಸ್ವಸ್ತಿಕ ಚಿಹ್ನೆಯಿದ್ದರೆ ಧನಪೂರ್ಣಳು, ಕಮಲ ಚಿಹ್ನೆಯಿದ್ದರೆ ರಾಜಮಹರ್ಷಿ ಹಾಗೂ ರಾಜಮಾತಾ ಆಗುವಳು – ಎರಡು ಆಗುತ್ತಾಳೆ. ಪತಿ, ಪುತ್ರ ಇಬ್ಬರೂ ರಾಜರಾಗುವುದರಿಂದ ಅವಳ ಕರತಲದಲ್ಲಿ ಬಲ - ಹೊರಳಿದ ಚಿಹ್ನೆಗಳಿದ್ದರೆ ಚಕ್ರವರ್ತಿ ರಾಜನ ಪ್ರಿಯಳಾಗುತ್ತಾಳೆ. ಶಂಖ, ಕೂರ್ಮ, ಛತ್ರದ ಚಿಹ್ನೆಗಳಿದ್ದರೆ ಅವಳು ರಾಜಮಾತೆಯಾಗುವಳು. ಸ್ತ್ರೀಯರ ಎಡಗೈಯಲ್ಲಿ

ಆನೆ, ಕುದುರೆವಿತ್ತ, ತಕ್ಕಡಿ ಆಕಾರ ಚಿಹ್ನೆಗಳಿದ್ದರೆ ಅವಳು ವ್ಯಾಪಾರಿಯ ಹೆಂಡತಿ ಆಗುವಳು.

ಪವಿಪ್ರಸಾದಾಂಕತಃ ಸಾಸ್ಯಾ ಚ್ಚಾಸ್ತ್ರಕೃತ್ಸುತ್ರ ಜನ್ಮದಾ ।
ಶಕಟಸ್ಯ ಯುಗಸ್ಯಾಪಿ ಚಿಹ್ನತಃ ಕೃಷಿಕಾಂಗನಾ ॥೪೮॥

ಧನುಶ್ಚಾಮರ ಖಡ್ಗ ಶಕ್ತಿ ತ್ರಿಶೂಲಾಂ ಕುಶಸದ್‌ಗದಾ ।
ದುಂದುಭ್ಯಾಕಾರ ರೇಖಾತೋ ನಾರಿ ರಾಜ್ಞಿಮಾತಾ ಬುಧೈಃ ॥೪೯॥

ವಜ್ರ ದುರ್ಗ(ಕೋಟೆ)ಯ ಚಿಹ್ನೆಯಿದ್ದರೆ ಶಾಸ್ತ್ರಕಾರನನ್ನು ಮಗನನ್ನಾಗಿ ಪಡೆಯುವಳು. ಗಾಡಿ, ನೊಗಗಳ ಚಿಹ್ನೆಯಿದ್ದರೆ ರೈತನ ಹೆಂಡತಿ ಧನಸ್ಸು, ಚಾಮರ, ಖಡ್ಗ, ಶಕ್ತಿ, ತ್ರಿಶೂಲ, ಅಂಕುಶ, ಗದಾ, ದುಂದುಭಿ ಆಕಾರದ ಚಿಹ್ನೆಗಳಿದ್ದರೆ ರಾಣಿಯಾಗುವಳು.

## ವಿವರ್ಜ್ಯಾ ಕನ್ಯಾ

ರೇಖಾ ವಿನಿರ್ಗತಾಂಗುಷ್ಠ ಮೂಲತಶ್ಚೇತ ಕನಿಯಸೀಮ್ ।
ಅಂಗಲಿಂ ಯಾತಿ ಯಸ್ಯಾಸ್ತಾಂ ಪತಿಘ್ನಿ ಪರಿವರ್ಜಯೇತ್ ॥೫೦॥

ಖರ ವಾಯಸ ಭೇಕಾಲಿ ವೃಕ-ಮಾರ್ಜಾರ-ಭೋಗಿನಾಮ್ ।
ಉಷ್ಟ್ರವಂಚಕಯೋಶ್ಚಾಪಿ ರೇಖಾಃ ಕ್ಲೇಶಕರಾಃ ಸ್ಮೃತಾಃ ॥೫೧॥

ಹೆಬ್ಬೆರಳು ಮೂಲದಿಂದ ಕಿರುಬೆರಳಿನವರೆಗೆ ಹೋಗುವ ರೇಖೆ ಯಾರ ಕೈಯಲ್ಲಿದೆಯೋ ಅವಳು ಪತಿಘಾತನಿಯಾಗುವಳು. ಆ ಸ್ತ್ರೀ ವಿವಾಹದ ಸಮಯ ದಲ್ಲಿ ಸರ್ವದಾ ತ್ಯಾಜ್ಯಳು. ಕತ್ತೆ, ಕಾಗೆ, ಕಪ್ಪೆ, ಚೇಳು, ಬೆಕ್ಕು, ನರ, ಸರ್ಪ, ಜಿಂಕೆ ಹಾಗು ಹದ್ದು ಆದಿ ಆಕಾರದ ಚಿಹ್ನೆಗಳಿದ್ದರೆ ಕ್ಲೇಶಕರವೆಂದು ತಿಳಿಯುವುದು.

## ಕರಾಂಗುಲಿ (ಕೈ ಬೆರಳು)

ಸ್ತ್ರೀಣಾಮಂಗುಲಿಯೋ ವ್ಯಕ್ತಪರ್ವಣೋ ವರ್ತುಲಾಃ ಕೃಶಾಃ ।
ಲಂಬಾ ವಿರೋಮಾ ಮೃದವಃ ಸುಖಸೌಭಾಗ್ಯದಾ ಮತಾಃ ॥೫೩॥

ಕುಟಿಲಾ ಬಹುಪಾರ್ವಾಣೋ ವಾ ಕೃಶಾಸ್ತಥಾ ।
ರೋಮಾನ್ವಿತಾ ಹ್ರಸ್ವತರಾ ದುಃಖದಾರಿದ್ರ್ಯದಾಃ ಸ್ಮೃತಿಃ ॥೫೪॥

ಸ್ವಷ್ಟ ಪರ್ವಯುಕ್ತ ಗೋಲಾಕಾರ ತೆಳುವಾದ, ಉದ್ದವಾದ ರೋಮರಹಿತ ಕೋಮಲ ಬೆರಳುಗಳು ಸ್ತ್ರೀಯರಿಗೆ ಸೌಭಾಗ್ಯಪ್ರದವಾಗಿವೆ. ವಕ್ರ ಅನೇಕ ಪರ್ವ

ಅಥವಾ ಅವಶ್ಯಕವಿಲ್ಲದ ಪರ್ವ ಕೃಶ, ಸರೋಮ ಬಹಳ ಚಿಕ್ಕ ಇವು ಅಶುಭ ಸೂಚಕವಾಗಿವೆ ಹಾಗೂ ದುಃಖ, ದಾರಿದ್ರ್ಯದ ಚಿಹ್ನೆಗಳಾಗಿವೆ.

## ನಖ (ಉಗುರು)

ಸ್ತ್ರೀಣಾಂ ಕರರುಹಾ ರಕ್ತಾ ಉನ್ನತಾಃ ಶಾಖಿನೇಃ ಶುಭಾಃ ।
ಮಲಿನಾಃಪೀತವರ್ಣಾಭಾಃ ಶ್ವೇತಾ ಅಶುಭದಾಯಿನಿ ॥೫೫॥

ಸ್ತ್ರೀಯರ ಉಗುರುಗಳು ಕೆಂಪಾಗಿ ಉನ್ನತವಾಗಿ ಶಾಖಾಯುಕ್ತವಾಗಿದ್ದರೆ ಶುಭಪ್ರದ. ನೋಡಲು ಮಲಿನವಾಗಿದ್ದು ಹಳದಿ ಅಥವಾ ಬಿಳಿ ವರ್ಣವಾಗಿದ್ದರೆ ಅಶುಭಪ್ರದವಾಗಿರುತ್ತವೆ.

## ಪೃಷ್ಠ

ಸ್ತ್ರೀಣಾಂ ಪೃಷ್ಠಂ ಶುಭಂ ಜ್ಞೇಯಂ ನಿಗೂಢಾಸ್ಥಿ ಚ ಮಾಂಸಲಂ ।
ಶಿರೋಪೇತಂ ಸರೋಮಂ ಚ ಭುಗ್ನಂ ತನ್ನ ಶುಭಪ್ರದಂ ॥೫೬॥

ಸ್ತ್ರೀಯರ ಪೃಷ್ಠಗಳಲ್ಲಿ ಎಲುಬು ಕಾಣದಿದ್ದರೆ ಮಾಂಸವಾಗಿದ್ದರೆ ಶುಭಪ್ರದ. ಆದರೆ ರೋಮ ಶಿರಾದಿಂದ ಯುಕ್ತ ಹಾಗೂ ಭಿನ್ನವಾಗಿ ಕಾಣುತ್ತಿದ್ದರೆ ಅಶುಭಪ್ರದ.

## ಕಂಠ

ರೇಖಾತ್ರಯಾಂಕಿತಃ ಕಂಠೋ ವೃತ್ತೋಲಕ್ಷ್ಯಾಸ್ಥಿರಸ್ತಥಾ ।
ಪುಷ್ಠಃ ಸುಕೋಮುಲಶ್ಚೈವ ಸ್ತ್ರೀಣಾಂ ಸೌಭಾಗ್ಯದೋ ಮತಃ ॥೫೭॥

ಕಂಠೋ ವೈದವ್ಯದಃ ಸ್ಥೂಲೋ ಭುಗ್ನೋ ದಾಸಿತ್ವಸೂಚಕಃ ।
ವಂಧ್ಯಾಕರಸ್ತು ಚಿಪಿಟೋ ಲಘುಃ ಸಂತಾಗ ಹೀನಕೃತ್ ॥೫೮॥

ಗೋಲಾಕಾರವಾಗಿ ಮೂರು ರೇಖೆಗಳಿಂದ ಕೂಡಿ ಎಲುಬುಗಳು ಕಾಣದೆ ಇದ್ದು ಪುಷ್ಟ ಕೋಮಲವಾಗಿದ್ದರೆ ಆ ಕಂಠ ಸ್ತ್ರೀಯರಿಗೆ ಶುಭದಾಯಕವಾಗಿರುತ್ತದೆ. ಸ್ಥೂಲ ಕಂಠ ವೈಧವ್ಯಕಾರಕ – ಡೊಂಕಾದ ಕಂಠ ದಾಸಿ ಸೂಚಕ, ಚೌಕಾಕಾರದ ಕಂಠ ವಂದ್ಯಾಸೂಚಕ, ಚಿಕ್ಕಕಂಠ ಸಂತಾನಹೀನತನವಾಗಿರುತ್ತಾಳೆ.

## ಕೃಕಾಟಿಕಾ

ಕೃಕಾಟಿಕಾ ತು ವಾಮಾನಾಂ ಮಾಂಸಲಾ ಸರಲೋನ್ನತಾ ।
ಶುಭಾ ಶಿರಾಲಾ ವಿಪುಲಾ ವಕ್ರಾ ರೋಮಾನ್ವಿತಾ ಶುಭ ॥೫೯॥

ಸ್ತ್ರೀಯರ ಕೃಕಾಟಿಕವು ಪುಷ್ಟ ಸರಳ, ಎತ್ತರವಾಗಿದ್ದರೆ ಶುಭಪ್ರದ. ಅಂಕುಡೊಂಕು ಯುಕ್ತ ದೊಡ್ಡದು, ಅತಿ ಚಿಕ್ಕದು ರೋಮಯುಕ್ತವಾದುದು ಅಶುಭಪ್ರದ.

### ಚಿಬುಕ

ಕೋಮಲಂ ಮಾಸಲಂ ರಕ್ತಂ ವಾಮಾಯಾಶ್ಚಿಬುಕಂ ಶುಭಮ್ ।
ಪೀನಂ ರೇಖಾವೃತ್ತಮ್ ಭಿನ್ನಂ ದ್ವಿದಾ ನಿಂದಿತ ಮಾಯತಮ್ ॥೬೦॥

ಸ್ತ್ರೀಯರ ಚಿಬುಕ ಕೋಮಲ ಪುಷ್ಟ ಹಾಗೂ ಕೆಂಪಾಗಿದ್ದರೆ ಶುಭಪ್ರದ ವಾಗುತ್ತದೆ. ಅತಿ ದೊಡ್ಡ ರೇಖಾಯುಕ್ತ ಎರಡು ಭಾಗವಾದಂತಹ ವಿಭಕ್ತ ಆಯತಾಕಾರವಾಗಿದ್ದರೆ ಅಶುಭಪ್ರದ.

### ಕಪೋಲ

ವರ್ತುಲೌ ಪೃಥುಲೌ ಪ್ರಾಂಶ್ ಕಪೋಲೌ ಶುಭದೌ ಸ್ತ್ರಿಯಾಃ ।
ಕೃಶೌ ಸರೋಮೌ ಕಠಿನೌ ನಿಮ್ನಾವಶುಭದೌ ಮತೌ ॥೬೧॥

ಸ್ತ್ರೀಯರ ಕಪೋಲ ವೃತ್ತಾಕಾರ ಪುಷ್ಟ ಉನ್ನತವಾಗಿದ್ದರೆ ಶುಭಪ್ರದ. ಚಿಕ್ಕ ಕಪೋಲಗಳು ರೋಮಯುಕ್ತವಾದವುಗಳು, ಬಿರುಸಾದ ಕೆಳಮುಖವಾಗಿರುವವು ಅಶುಭಕಾರಕವಾಗಿರುವುವು.

### ಮುಖ

ವದನಂ ತು ಮೃಗಾಕ್ಷೀಣಾಂ ವೃತ್ತಂ ಪುಷ್ಟಂ ಸುಗಂಧಯುಕ್ ।
ಮಸೃಣ ಚ ಸಮಂ ಚಾರು ಸೌಭಾಗ್ಯದ್ಯೋತಕಂ ಸ್ಮೃತಮ್ ॥೬೨॥

ಸ್ತ್ರೀಯರ ಮುಖ ವೃತ್ತಾಕಾರ ಪುಷ್ಟ ಸುಗಂಧ ಪೂರ್ಣ ಸ್ನಿಗ್ಧ ಸಮ ಹಾಗೂ ಮನೋಹರವಾಗಿದ್ದರೆ ಸೌಭಾಗ್ಯ ಸೂಚಕ.

### ಅಧರ–ತಥಾ ಉತ್ತರೋಷ್ಠ

ಪಾಟಲೋ ಮಸೃಣೋ ವೃತ್ತೋ ಮಧ್ಯೇ ರೇಖಾ ವಿಭಜಿತಃ ।
ಯಸ್ಯಾ ಮನೋಜ್ಞಸ್ತ್ವಧರೋ ಭವೇತ್ ಸಾ ನೃಪತಿಪ್ರಿಯಾ ॥೬೩॥

ಕೃಶೋ ವಿರುಕ್ಷೋ ದೀರ್ಘಸ್ತ್ವ ಸ್ಫುಟಿತಃ ಶ್ಯಾಮಲಸ್ತಥಾ ।
ಅಧರಃ ಪಿವರೋ ನಾರ್ಯಾ ವೈಧವ್ಯಾರ್ತಿಪ್ರದೋ ಮತಃ ॥೬೪॥

ರಕ್ತಪದ್ಮಸಮಃ ಸ್ತ್ರೀಣಾಂ ಸ್ನಿಗ್ಧ ಊರ್ಧ್ವರದಚ್ಛದಃ ।
ಮಧ್ಯೋನ್ನತೋ ಲೋಮ ಹೀನಃ ಸೌಭಾಗ್ಯ ಸುಖದಾಯಕಃ ॥೬೫॥

ಪೃಷ್ಠ ಕೆಂಪು ವರ್ಣ ವರ್ತುಲಾಕಾರ ಮಧ್ಯ ರೇಖೆಯಿಂದ ವಿಭಕ್ತವಾಗಿರುವ ಹಾಗೂ ಸುಂದರ ಅಧರ ಸ್ತ್ರೀಯರಿಗೆ ರಾಣಿಯಾಗುವ ಸೂಚಕವಾಗಿರುತ್ತದೆ. ಅದೇ ಕೃಶ – ಅಡ್ಡ-ಉದ್ದ ಕತ್ತರಿಸಿದ (ಸೀಳು) ಕಪ್ಪು ಹಾಗೂ ಸ್ಥೂಲ ಅಧರ ವೈಧವ್ಯ ಹಾಗೂ ಪೀಡಾಪ್ರದವಾಗಿರುತ್ತವೆ. ಸ್ತ್ರೀಯರ ಮೇಲ್ತುಟಿ ಕೆಂಪು ಕಮಲ ಸದೃಶ್ಯ ವಾಗಿ ಹೊಳೆಯುತ್ತಿದ್ದು ಮಧ್ಯ ಎತ್ತರವಾಗಿ ಲೋಮರಹಿತವಾಗಿದ್ದರೆ ಆ ಸ್ತ್ರೀ ಸೌಭಾಗ್ಯವತಿ, ಸುಖವಂತಳು ಆಗುವಳು.

## ದಂತ (ಹಲ್ಲು)

ಶುಭಃ ಪಯೋನಿಭಾಃ ಸ್ನಿಗ್ಧಾ ದ್ವಾತ್ರಿಂಶದ್ರದನಾಃ ಸ್ತ್ರೀಯಾಃ ।
ಉಪರ್ಯಧಃ ಸಮಾನಸ್ಚ ಕಂಚಿದಭ್ಯನ್ನತಾ ಸ್ತಥಾ ॥೬೬॥

ವಿಕಟಃ ಶ್ಯಾಮಲಾ ಲಂಬಾಃ ಪೀತಾ ಯುಗಲಪಂಕ್ತಿಯಃ ।
ಅಧೋಧಿಕಾಶ್ಚ ವಿರಲಾ ರದನಾ ಸ್ತ್ವಶುಭಾ ಮತಾಃ ॥೬೭॥

ಹಾಲಿನಂತೆ ಸ್ವಚ್ಛ ಹೊಳೆಯುವ, ಮೇಲೆ ಕೆಳಗೆ ಸಮಾನ, ಸ್ವಲ್ಪ ಎತ್ತರ, 32 ಹಲ್ಲುಗಳು ಶುಭವಾದರೆ, ವಿಕಟ ಶ್ಯಾಮಲ ವರ್ಣ ಹಳದಿ – ಉದ್ದ, ಕೆಳ ಸಾಲಿನಲ್ಲಿ ಹೆಚ್ಚು ಹಲ್ಲುಗಳು ಹಾಗೂ ಬಿಡಿಬಿಡಿಯಾಗಿದ್ದ ಹಲ್ಲುಗಳು ಅಶುಭಪ್ರದ.

## ಜಿಹ್ವಾ (ನಾಲಿಗೆ)

ಮೃದು ರಕ್ತಾ ಚ ರಸನಾ ಶುಭದಾಯಿತಭೋಗದಾ ।
ಕ್ಲೇಶದಾ ವಿಸ್ತರಾಗ್ರೇ ತು ಮಧ್ಯೆ ಸಂಕುಚಿತಾ ಸ್ತ್ರೀಯಾಃ ॥೬೮॥

ಸಿತಾಸಾ ಮೃತಿದಾ ನೀರೆ ಶ್ಯಾಮಾ ವಿಗ್ರಹವಲ್ಲಭಾ ।
ದಾರಿದ್ರ್ಯದಾ ತು ಪೃಥುಲಾ ಲಂಬಾ ಭಕ್ಷ್ಯಾ ಪ್ರಿಯಾಮತಾ ॥೬೯॥

ಪ್ರಾಕ್‌ತನ್ಯೆರ್ಮುಣಿಭಿಃ ಪ್ರೋಕ್ತಾ ವಿಶಾಲಾ ತು ಪ್ರಮಾದದಾ ।

ಸ್ತ್ರೀಯರ ನಾಲಿಗೆ ಮುಂಭಾಗ ಕೇಂದ್ರ ವರ್ಣ ಹಾಗೂ ಕೋಮಲವಾಗಿದ್ದರೆ ಅಮಿತ ಭೋಗವುಳ್ಳವಳಾಗುವಳು. ಹಾಗೂ ಭೋಗ ಕೊಡುವವಳು ಆಗುವಳು. ಅದೇ ನಾಲಿಗೆ ಮುಂದೆ ಅಗಲವಾಗಿ ಮಧ್ಯ ಸಂಕುಚಿತವಾಗಿದ್ದರೆ ಕಷ್ಟಕರ, ಅದು ಬಿಳಿಯ ವರ್ಣದ್ದಾಗಿದ್ದರೆ ನೀರಿನಿಂದ ಮರಣ, ಕಪ್ಪು ವರ್ಣವಿದ್ದರೆ ಜಗಳಗಂಟಿ,

ದೊಡ್ಡ ನಾಲಿಗೆಯಿದ್ದರೆ ದರಿದ್ರತೆ, ಉದ್ದ ನಾಲಿಗೆಯಿದ್ದರೆ ಅಭಕ್ಷಣ ವಸ್ತು ಭಕ್ಷಿಸುವವಳು, ವಿಶಾಲವಾಗಿದ್ದರೆ ಪ್ರಮಾದಿನಿಯಾಗುವಳು.

ಸ್ತ್ರೀಯಾಸ್ತು ಮಸ್ಯಣು ತಾಯಿ ಮೃದು ಪಾಟಲ ಮುತ್ತಮಮ್ ॥೭೦॥

ಸಿತಂ ವೈಧವ್ಯ ಜನಕಂ ಪೀತಂ ಸನ್ಯಾಸದಂ ಮತಮ್ ।
ನಿಃಸಂತತಿಕರಂ ಕೃಷ್ಣಂ ರೂಕ್ಷಂ ಬಹುಕುಟುಂಬಕೃತ್ ॥೭೧॥

ಸ್ತ್ರೀಯರ ಅಂಗೈ ಕೋಮಲ ಹಾಗೂ ಕೆಂಪುವರ್ಣವಿದ್ದರೆ ಸೌಭಾಗ್ಯ ಸೂಚಕ ವಾಗಿರುತ್ತದೆ. ಬಿಳಿ ವರ್ಣವಾಗಿದ್ದರೆ ವೈಧವ್ಯ ಸೂಚಕ. ಹಳದಿ ವರ್ಣ ಸಂನ್ಯಾಸ ಧಾರಣ ಸೂಚಕ. ಕರಿ ವರ್ಣ ನಿಃಸಂತಾನ ಸೂಚಕವಾಗಿರುತ್ತದೆ. ಶುಷ್ಕವಾದ ಕರ – ಬಹುಕುಟುಂಬಕಾರಿ ಸೂಚಕವಾಗಿದೆ.

## ಹಾಸ್ಯ

ಅದೃಷ್ಟರದನಂ ಹಾಸ್ಯಮೀಷದ್ ವಿಕಚಗಂಡಕವ್ ।
ಮುನಿಭಿಃ ಶುಭದಂ ಪ್ರೋಕ್ತಂ ತದನ್ಯದಶುಭಂ ಸ್ಮೃತಮ್ ॥೭೨॥

ಸ್ತ್ರೀಯರ ನಗು(ಹಾಸ್ಯ)ವಿನ ಸಮಯದಲ್ಲಿ ಹಲ್ಲು ಕಾಣದಂತಿರಬೇಕು. ಕಪೋಲವೂ ಹಿಗ್ಗು ವಿಕೆಯಿಂದ ವಿಕಸಿತಗೊಳ್ಳುತ್ತಿರುವುದು ಶುಭಪ್ರದವಾದರೆ, ಅನ್ಯ ಇತರ ನಗು (ಭಿನ್ನ ನಗು) ಅಶುಭಪ್ರದವಾಗಿರುತ್ತದೆ.

## ನಾಸಿಕ (ಮೂಗು)

ಸಮಾನ ವರ್ತುಲಪಟಾ ಕ್ಷುದ್ರ ರಂಧ್ರಾತು ಶೋಭನಾ ।
ಅಗ್ರೇ ತು ಪೃತುಲಾ ಮಧ್ಯೆ ನಿಮ್ನಾನಾಸಾ ಅಶುಭಾ ಸ್ತ್ರೀಯಾಃ ॥೭೩॥

ಅಗ್ರೇರುಣಾ ಕುಂಚ್ಯೇತಾ ವಾ ಸಾ ವೈಧವ್ಯ ವಿಧಾಯಿನಿ ।
ದಾಸ್ಯದಾ ಚಿಪಿಟಾ ಲಘ್ವಿ ಲಂಬಾ ವಾ ಕಲಹಪ್ರಿಯಾ ॥೭೪॥

ಸ್ತ್ರೀಯರ ಮೂಗು ಸಮಾನವಾಗಿದ್ದು ಗೋಲವಾಗಿ ಪೃಷ್ಟವಾಗಿರುವುದು, ಚಿಕ್ಕದಾಗಿದ್ದು ಛೇದರೂಪಕವಾಗಿದ್ದರೂ ಶೋಭನಕಾರಕ. ಮುಂದೆ ದಪ್ಪ ಮಧ್ಯ ಚಪ್ಪಟೆ ಶುಭಕಾರಕವಲ್ಲ. ತುದಿ ಕೆಂಪಾಗಿ ಚೂಪಾಗಿದ್ದರೆ ವೈಧವ್ಯಕಾರ. ಚಪ್ಪಟೆ ಹಾಗೂ ಚಿಕ್ಕನಾಸಿಕ ದಾಸ್ಯ ವೃತ್ತಿ ತೋರಿಸುತ್ತದೆ. ಉದ್ದ ಮೂಗು ಕಲಹ ಪ್ರಿಯತೆಯನ್ನು ತೋರಿಸುತ್ತದೆ.

## ನಯನ (ಕಣ್ಣು)

ಲೋಹಿತಾಂತೆ ತು ನಯನೆ ಸ್ತ್ರೀಯಾಃ ಶ್ಯಾಮಲತಾರಕೆ ।
ಗೋದುಗ್ಧವತ್ ಸಿತೆ ಸ್ನಿಗ್ಧೆ ಶುಭೆ ಚಾಸಿತಪಕ್ಷ್ಮಿಣಿ ॥೭೫॥

ಕರಿ ಕೇಂದ್ರ - ಪ್ರಾರಂಭದಲ್ಲಿದ್ದು ಆಕಾಶ ಹಾಲಿನಂತೆ ಸ್ವಚ್ಛ ಹಾಗೂ ಸ್ನಿಗ್ಧ ಕಣ್ಣುಗಳು ಶುಭಪ್ರದಗಳು.

## ನೇತ್ರ ಫಲ

ಉನ್ನತೇಕ್ಷಣೆ ಸ್ವಲ್ಪಾಯುಃ ಸ್ವೈರಿಣೀ ವರ್ತುಲೆ ಮತಾ ।
ಮಧುವತ್ ಪಿಂಗಲೆ ತಸ್ಮಿನ್ ಸರ್ವಸೌಭಾಗ್ಯ ಸಂಯುತಾ ॥೭೬॥

ವಾಮೇನಸ್ವೈರಿಣಿ ಕಾಣಾ ವಂಧ್ಯಾ ಸ್ಯಾದ್ ದಕ್ಷಿಣೇನ ಸಾ ।
ಕಪೋತಾಕ್ಷಿ ಶೀಲಹೀನಾ ದ್ವಿಪಾಕ್ಷಿ ದುಃಖ ಭಾಗಿನಿ ॥೭೭॥

ಉನ್ನತ ಕಣ್ಣುಗಳುಳ್ಳವಳು (ಉರುಗಣ್ಣು-ಗುಳ್ಳ) ಸ್ವಲ್ಪಾಯುವುಳ್ಳವಳು. ಗುಂಡಾದ ಕಣ್ಣುಳ್ಳವಳು ಕುಲಟೆ. ಆದರೆ ಮಧು (ಜೇನು ತುಪ್ಪದ ಬಣ್ಣ) ಪಿಂಗಾಕ್ಷಿ ಯಾದರೆ ಸರ್ವವಿಧ ಸೌಭಾಗ್ಯಯುಕ್ತಳಾಗುವಳು. ಎಡಗಡೆ ಮೆಳ್ಳಗಣ್ಣಾಗಿದ್ದರೆ ಗಂಡುಬೀರಿ, ಬಲಗಡೆ ಕಣ್ಣು ಮೆಳ್ಳಾದರೆ ವಂಧ್ಯಾ ಆಗುವಳು. ಪಾರಿವಾಳದ ತರಹ ಕಣ್ಣುಳ್ಳವಳಾದರೆ ದುಃಖಿ, ಆನೆ ಕಣ್ಣಿನಂತೆ ಚಿಕ್ಕ ಕಣ್ಣಿನವಳು ದುಃಖಭಾಗಿ ಯಾಗುವಳು.

## ಪಕ್ಷ್ಮ (ರೆಪ್ಪೆ)

ಸೂಕ್ಷ್ಮಾಸಿತ ಮೃದುಧನ್ಯೈಃ ಪಕ್ಷ್ಮಭಿಃ ಸುಖಭಾಗ್ಯಭೃತ್ ।
ತನುಸ್ಥೂಲಾ ಪಿಶಲಗೈಸ್ತು ಸಾ ಭವೇದ್ ದುಃಖಿತಾನಿಶಮ್ ॥೭೮॥

ಸೂಕ್ಷ್ಮ, ಕಪ್ಪಾದ, ಕೋಮಲ ರೆಪ್ಪೆಗಳಿದ್ದರೆ ಸುಖ ಸೌಭಾಗ್ಯಯುಕ್ತ ಳಾಗುವಳು. ವಿರಳ, ದೊಡ್ಡ ಹಾಗೂ ಪಿಂಗಳ ವರ್ಣದ ರೆಪ್ಪೆಗಳಿದ್ದರೆ ಸದಾ ದುಃಖದಾಯಕ.

## ಭ್ರೂ (ಹುಬ್ಬು)

ವೃತ್ತೆ ಚಾಪಾಕೃತಿ ಸ್ನಿಗ್ಧೆ ಶ್ಯಾಮೆ ಚಾಪ್ಯಧನೆ ಭ್ರುವೌ ।
ಮೃದು ರೋಮಯುತೆ ಸ್ತ್ರೀಣಾಂ ಸುಖಕೀರ್ತಿಪ್ರದೆ ಮತೆ ॥೭೯॥

ಹುಬ್ಬು ಗೋಲಾಕಾರ ಇಲ್ಲವೆ ಬಾಣಾಕಾರ (ಬಿಲ್ಲು) ಕಪ್ಪಾದ ಕೋಮಲ

ರೋಮಯುಕ್ತವಾಗಿದ್ದರೆ ಸುಖದಾಯಕ, ಕೀರ್ತಿಪ್ರದವಾಗಿರುತ್ತದೆ. ಅಂದರೆ ಹೆಣ್ಣು ಮಕ್ಕಳ ಹುಬ್ಬು ಮೇಲಿನ ತರಹವೇ ಇದ್ದರೆ ಸೌಭಾಗ್ಯವತಿ, ಯಶಸ್ವಿಯಾಗುವಳು.

### ಕರ್ಣ

**ಶೃತಿ ಲಂಬೆ ಸದಾವರ್ತೆ ಸೌಭಾಗ್ಯ ಸುತದಾಯಿಕೆ ।**
**ಅಶಷ್ಕುಲೀಕೆ ಸಶಿರೆ ಗರ್ಹಿತೆ ಕುಟಿಲೆ ತನೂ ॥೮೦॥**

ಸ್ತ್ರೀಯರ ಕಿವಿ ದೊಡ್ಡವಾಗಿ ಸುಂದರ ರೀತಿಯಿಂದ ತಿರುಗಿದ್ದರೆ ಆ ಸ್ತ್ರೀ ಸೌಭಾಗ್ಯವತಿ ಪುತ್ರವತಿಯಾಗುವಳು. ಅದೇ ಕಿವಿ ವಿಶಾಲವಾಗಿ ಅಥವಾ ಚಿಕ್ಕಕಿವಿಗಳಾಗಿದ್ದರೆ ಕುಟಿಲೆ, ಅತಿ ಚಿಕ್ಕ ಕಿವಿ ಅಶುಭ ಸೂಚಕ.

### ಕಪಾಲ

**ವಿಶಿರೋ ರೋಮರಹಿತಃ ಕಪಾಲೋರ್ಧೆಂದು ಸನ್ನಿಭಃ ।**
**ಸ್ತ್ಯಂಗುಲತ್ರಮತೋನ್ಯೂನಃ ಸ್ತ್ರೀಣಾ ಸೌಖ್ಯಸುತಪ್ರದಃ ॥೮೧॥**

**ಲಕ್ಷಿತ ಸ್ವಸ್ತಿಕಾಂಗೋಪಿಕ ರಾಜ್ಯದಃ ಪರಿಕೀರ್ತಿತಃ ।**
**ರೋಮಾಢ್ಯಃ ಪರೋನ್ನತೋ ದೀರ್ಘೋ ಭಾಲೋ**
**ದುಃಖಪ್ರದಾಯಕಃ ॥೮೨॥**

ನಿರ್ಲೋಮ ಅರ್ಧಚಂದ್ರಾಕಾರ ಅವರವರ ಕೈಯಿಂದ ಮೂರು ಅಂಗುಲಕ್ಕಿಂತ ಅಧಿಕ ಸ್ತ್ರೀಯರ ಕಪಾಲವಿದ್ದರೆ ಸೌಭಾಗ್ಯದಾಯಕ ಹಾಗೂ ಪುತ್ರದಾಯಕ ವಾಗುತ್ತದೆ. ಸ್ವಸ್ತಿಕ ರೇಖೆ ಚಿಹ್ನೆಯುಕ್ತ ಕಪಾಲ ರಾಜ್ಯಪ್ರದ, ಉದ್ದವಾದ ಕಪಾಲ ದೌರ್ಭಾಗ್ಯಕಾರಕ.

### ಮಸ್ತಕ

**ಪ್ರಾಂಶುರ್ಗಜೌಂದ್ರಕಲುಂಭಾಬೋ ವರ್ತುಲೋಲೋ ಮಸ್ತಕಃ ಶುಭಃ।**
**ವಿಶಾಲಹ ಕುಟಿಲೋ ಲಂಬೋ ದುರ್ಭಾಗ್ಯ ಕ್ಲೇಶದಃ ಸ್ತ್ರೀಯಾಃ ॥೮೩॥**

ಗಜ ಕುಂಭ ಸದೃಶ್ಯ ಉನ್ನತವಾದ ಹಾಗೂ ಗೋಲಾಕಾರ ಸ್ತ್ರೀಯರ ಮಸ್ತಕ ಶುಭಪ್ರದ. ವಿಶಾಲ, ಕುಟಿಲ ಹಾಗೂ ಉದ್ದ ಹಣೆ ದೌರ್ಭಾಗ್ಯದಾಯಕ ವಾಗಿರುತ್ತದೆ.

## ಕೇಶ

ಕೇಶಃ ಕೃಷ್ಣಾಶ್ಚ ಮಸೃಣಾ ಲಂಬಾಃ ಸೂಕ್ಷ್ಮಾಸ್ತುಸತ್ತಮಾಃ ।
ಪಿಂಗಾಃ ಕಠೋರಾ ರೂಕ್ಷಾಶ್ಚಾಧನಾ ಹ್ರಸ್ವಾ ನ ಶೋಭನಾಃ ॥೮೪॥

ಗೌರಾಂಗಡ್ಯಾಃ ಪಿಂಗಲಾಃ ಶ್ಯಾಮಾ ವಾಮಾಯಾಃ ಶುಭದಾಃ ಸ್ಮೃತಾಃ।
ಏವಮೇವ ಪುರುಷಾಣಾ ಮಂಗಲ ಕ್ಷಣ ಮಿರಯೇತ್ ॥೮೫॥

ಸ್ತ್ರೀಯರ ಕೂದಲು ಕಪ್ಪಾಗಿ ಚಮಕಿಸುತ್ತ ಉದ್ದ (ನೀಳ) ಹಾಗೂ ನಾಜೂಕಾದರೆ ಶುಭಪ್ರದ. ಹಳದಿ, ಗಿಡ್ಡ ಕತ್ತರಿಸಿದಂತಿದ್ದ ಅಲ್ಲಲ್ಲಿ ಹರಡಿದ ಹಾಗೂ ಗಿಡ್ಡ ಕೂದಲುಗಳು ಶುಭಪ್ರದವಲ್ಲ. ಗೌರವರ್ಣ ಸ್ತ್ರೀಯರಿಗೆ ಪಿಂಗಳ ವರ್ಣ (ಕಪ್ಪು ಕೆಂಪು ಮಿಶ್ರಿತ) ಅಥವಾ ಕಪ್ಪು ಕೂದಲು ಶುಭಪ್ರದ. ಇದೇ ರೀತಿ ಪುರುಷರ ಅಂಗ ಲಕ್ಷಣ ತಿಳಿಯುವುದು.

ಪುರುಷರ ಅಂಗ ಲಕ್ಷಣದಲ್ಲಿ ಕೋಮಲವಿದ್ದಲ್ಲಿ ಗಡಸು ಇದೆ. ವಿಶಾಲ ಇತ್ಯಾದಿ ಬದಲಾವಣೆಗೊಳಪಟ್ಟಿದೆ. ಪುರುಷ ಲಕ್ಷಣ ಪರಾಶರರು ಕೊಟ್ಟಿರು ವುದಿಲ್ಲ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಅಂಗ ಲಕ್ಷಣಾಧ್ಯಾಯಃ
ಸಮಾಪ್ತಿಃ

## ೮೨ನೇ ಅಧ್ಯಾಯ

# ಅಥ ತಿಲಾದಿ ಲಕ್ಷಣಫಲಾಧ್ಯಾಯಃ

### ಪರಾಶರ ಉವಾಚ:

ಅಥವಚ್ಮಿ ಫಲಂ ದೇಹ ಜ್ಞಾನಂ ತೇ ವಿಪ್ರ । ಲಕ್ಷ್ಮಣಾವಮ್ ।
ವಿಶೇಷಾದ್ ಮಶಕಾವರ್ತಾ ತಿಲಾನಾಂ ಶೃಣು ಸಂಯುತಃ ॥೧॥

### ಪರಾಶರರು ಹೇಳಿದುದು:

ಹೇ ಮೈತ್ರೇಯ,

ಈಗ ನಾನು ದೇಹದಲ್ಲಿದ್ದ ಚಿಹ್ನೆ ವಿಶೇಷತಃ ಮಚ್ಚೆ ಕಲೆ ಎಳ್ಳುಕಾಳಿನಷ್ಟು ಚುಕ್ಕೆಗಳು (ಗೆಳೆಯರು ಉತ್ತರ ಕರ್ನಾಟಕದಲ್ಲಿ) ಅವುಗಳ ಫಲ ಹೇಳುತ್ತೇನೆ ಕೇಳು.

### ಸ್ತ್ರೀ ಪುರುಷರ ಶರೀರಸ್ಥ ಎಳ್ಳುಕಾಳಿನ ಚಿಹ್ನೆಗಳು

ಸವ್ಯಾಂಗೆ ದಕ್ಷಿಣಾಂಗೆ ಚ ಸ್ತ್ರೀಣಾಂ ಪುಂಸಾಂ ಕ್ರಮಾಚ್ಛುಭವಮ್ ।
ರಕ್ತಂ ತಿಲನಾಭಂ ಚಾಪಿ ರೋಮಾವರ್ತ ಬುಧೈಃ ಸ್ಮೃತಮ್ ॥೨॥

ಹೃದಿ ಸ್ತ್ರೀಣಾಂ ತಿಲಾದ್ಯಾಂಕಃ ಸುಖಸೌಭಾಗ್ಯದಾಯಕಃ ।
ದಕ್ಷೆ ಕುಚೆ ಭವೇದ್ ಯಸ್ಯಾ ಲೋಹಿತೆ ತಿಲಲಾಂಛನೆ ॥೩॥

ಸಾ ಭವೇತ್ ಸುಖಸೌಭಾಗ್ಯಾನೇಕ ಸಂತಾನ ಸಂಯುತಾ ।
ಸವ್ಯೆ ಕುಚೆ ರಕ್ತತಿಲೆ ಭವೇದೇಕಸುತಾನ್ವಿತಾ ॥೪॥

ದಕ್ಷಿಣಾತುತಿಲೆ ತತ್ರ ಸುತಾಸುತಯುತಾ ಹಿ ಸಾ ।
ಭಾಲೇಥವಾ ಭ್ರುವೋರ್ಮಧ್ಯೆಲಕ್ಷ್ಮ ರಾಜ್ಯಪ್ರದಂ ಸ್ಮೃತಮ್ ॥೫॥

ಮಶಕೋ ಲೋಹಿತೋ ಗಂಡುಜಸ್ರಂ ಮಿಷ್ಟಾನ್ನದಾಯಕಃ ।

ಸ್ತ್ರೀಯರ ಎಡಗಡೆ ಅಂಗ ಪುರುಷರ ಬಲಗಡೆ ಅಂಗದಲ್ಲಿ ರಕ್ತವರ್ಣ ಅಥವಾ ಎಳ್ಳಿನ ಸದೃಶ್ಯ ಚಿಹ್ನೆ ರೋಮಾವರ್ತವನ್ನು ವಿದ್ವಾಂಸರು ಶುಭಕರವೆಂದು ಹೇಳಿದ್ದಾರೆ. ಸ್ತ್ರೀಯರ ಹೃದಯದ ಮೇಲೆ ತಿಲ ಚಿಹ್ನೆ ಸುಖ, ಸೌಭಾಗ್ಯ ವರ್ಧಕವಾಗಿರುತ್ತದೆ. ಸ್ತ್ರೀಯ ಬಲಸ್ತನದ ಮೇಲೆ ರಕ್ತತಿಲ ಚಿಹ್ನೆ ಸುಖ ಸೌಭಾಗ್ಯ ಹಾಗೂ ಅನೇಕ ಸಂತತಿಪ್ರದವಾಗಿರುತ್ತದೆ. ಎಡಸ್ತನದ ರಕ್ತತಿಲ ಚಿಹ್ನೆ ಒಬ್ಬನೇ

ಮಗನ ಸೂಚಕ. ಬಲಸ್ತನದ ತಿಲ ಚಿಹ್ನೆ ಪುತ್ರಿ-ಪುತ್ರ ಇಬ್ಬರ ಉತ್ಪಾದಕ ಸೂಚಕ ವಾಗಿದೆ. ಬಗಲಿನಲ್ಲಿ ಎರಡೂ ಬಾಹುಗಳ ಮಧ್ಯ ರಕ್ತತಿಲ ಚಿಹ್ನೆ ರಾಜಪ್ರದವಾಗಿದೆ. ಗಂಡಸ್ಥಲದಲ್ಲಿ ಗಲ್ಲಗಳ ಮಧ್ಯ ಕೆಲವು ಮಚ್ಚೆಯ ಚಿಹ್ನೆಯಿದ್ದರೆ ಸತತ ಮೃಷ್ಟಾನ್ನ ಪ್ರಾಪ್ತಿಯಾಗುತ್ತದೆ.

ಭಗದಕ್ಷಿಣ ಭಾಗಸ್ಥ ಲಕ್ಷ್ಮಯುಕ್ತಾಂಗನಾ ಹಿ ಯಾ ॥೬॥

ಮಹಿಷಿ ನೃಪತೇಃ ಸಾ ಸ್ಯಾದಪಿ ಮಾತಾ ಚ ಭೂಪತೇಃ ।
ಲೋಹಿತಂ ಲಕ್ಷ್ಮ ನಾಸಾಗ್ರೇ ನೃಪಪತ್ನೀತ್ವ ಸೂಚಕಮ್ ॥೭॥

ಮೇಚಕಂ ತತ್ತು ವಿಧವಾ ಸ್ವೈರಿಣಿ ಸೂಚಕಂ ಮತಮ್ ।
ಸ್ತ್ರೀಣಾಂ ಪುಂಸಾಂ ಲಕ್ಷ್ಮ ನಾಭೇರಧಃ ಶೋಭನ ಮೀರಿತಮ್ ॥೮॥

ಯಾವ ಸ್ತ್ರೀಯ ಭಗ(ಯೋನಿ) ದಕ್ಷಿಣ ಭಾಗದಲ್ಲಿ ಚಿಹ್ನೆಯಿದ್ದರೆ ರಾಜನ ಧರ್ಮಪತ್ನಿಯಾಗುವಳು. ರಾಜಮಾತೆಯು ಆಗುವಳು. ನಾಸಿಕದ (ಮೂಗು) ತುದಿ ಭಾಗದಲ್ಲಿ ರಕ್ತತಿಲ ಚಿಹ್ನೆಯಿದ್ದರೆ ರಾಜಮಹಿಷಿಯಾಗುವಳು. ಅದೇ ನಾಸಾಗ್ರದ ಚಿಹ್ನೆ ಕಪ್ಪಾಗಿದ್ದರೆ ಸ್ತ್ರೀ ವಿಧವೆಯಾಗುತ್ತಾಳೆ. ಪುರಾಣಕಾರವಾಗುತ್ತಾರೆ. ನಾಭಿ ಸ್ಥಾನದ (ಹೊಕ್ಕಳು) ಅಧೋ ಭಾಗದಲ್ಲಿ ವಿದ್ಯಮಾನ ಚಿಹ್ನೆ – ಸ್ತ್ರೀ ಪುರುಷರಿಬ್ಬರಿಗೂ ಶುಭಪ್ರದವಿದೆ.

ಶ್ರುತೌ ಕಪೋಲೇ ಹಸ್ತೇವಾ ಗಲೇ ವಾಪಿ ತು ಲಾಂಛನಮ್ ।
ಸುತದಂಪ್ರಥಮೇ ಗರ್ಭೇ ಸತ್ಸೌಭಾಗ್ಯ ಸುಖಪ್ರದಮ್ ॥೯॥

ಗುಲ್ಛೇ ಕ್ಲೇಶಪ್ರದಂ ಲಕ್ಷ್ಮ ತಿಲಾದಿ ಕಮುದೀರಿತಮ್ ।

ಯಾವ ಸ್ತ್ರೀಯ ಕಿವಿಗಳಲ್ಲಿ ಕೈ ಅಥವಾ ಕಂಠದಲ್ಲಿ ಚಿಹ್ನೆಗಳಿದ್ದರೆ ಅವಳಿಗೆ ಪ್ರಥಮ ಸಂತಾನ ಸೌಭಾಗ್ಯ ಸುಖಪ್ರದವಾಗುತ್ತದೆ. ಗುಲ್ಫ (ತೊಡೆ)ಯಲ್ಲಿ ತಿಲಾದಿಕ ಚಿಹ್ನೆ ಕ್ಲೇಶಪ್ರದವಾಗುತ್ತದೆ.

ತ್ರಿಶೂಲಸನ್ನಿಭಂ ಲಕ್ಷ್ಮ ಕಪಾಲೇ ಯದಿ ಲಕ್ಷ್ಯತೇ ॥೧೦॥

ಪುರುಷೊ ನೃಪತಿರ್ನಾರೀ ಮಹಿಷಿ ನೃಪತೇರ್ಭವೇತ್ ।
ರೋಮಾವರ್ತೇ ದಕ್ಷಿಣೇನ ಹೃನ್ನಾಭ್ಯೋಃ ಕರಕರ್ಣಯೋಃ ॥೧೧॥

ಪೃಷ್ಠೇ ಚ ದಕ್ಷಿಣೇ ಶಸ್ತೋ ವಸ್ತೌ ವಾಮೇನ ಚಾ ಶುಭಃ ।

ಸ್ತ್ರೀಯರ ಮಸಕ್ತದಲ್ಲಿ ತ್ರಿಶೂಲಾಕಾರ ಚಿಹ್ನೆ ಕಂಡರೆ ಅವಳು ರಾಜ ಮಹಿಷಿ

ಯಾಗುವಳು. ಪುರುಷನಾಗಿದ್ದರೆ ರಾಜನಾಗುವನು. ಹೃದಯ, ನಾಭಿ, ಕೈ, ಕಿವಿ ಹಾಗೂ ಬಲ ಪೃಷ್ಠದ ಸ್ಥಿತ ದಕ್ಷಿಣದ ಕಡೆಗೆ (ಬಲ) ಆವರ್ತವಾದ ರೋಮಚಕ್ರ (ಸುಳಿ)ಶುಭಪ್ರದವಾಗುತ್ತದೆ. ಹೊಕ್ಕಲು-ಲಿಂಗದ ಮಧ್ಯದಲ್ಲಿ ಎಡಗಡೆ ಸುಳಿಯುಳ್ಳ ರೋಮದ ಸುಳಿ ಅಶುಭಪ್ರದವಾಗಿರುತ್ತದೆ.

ದುಃಖಪ್ರದೋಮತಃ ಸ್ತ್ರೀಣಾ ಮಾವರ್ತಃ ಕಟಿಗುಹಾಯೋಃ ॥೧೨॥

ಉದರೆ ಭ್ರಾತೃಹಾ ಪೃಷ್ಠೆ ಮಧ್ಯೇಃ ಸಸ್ತ್ರೈರಿಣೀಕರಃ ।
ಸೀಮಂತೆ ಬಾಲಶಿರಸೋರ್ಮಧ್ಯೆವಾವರ್ತಕೋ ಗಲೆ ॥೧೩॥

ಶುಭದೋ ನೈವ ನಾರೀಣಾಂ ಪುಂಸಾಂ ವಾಪಿ ಸ್ಮೃತೋ ಬುಧೈಃ ।
ಸಲ್ಲಕ್ಷಣಾಃ ಸಚ್ಚರಿತ್ರಾಃ ಸ್ತ್ರೀಯಃ ಸ್ವಲ್ಪಾಯು ಷಂ ಪತಿವ್ ॥೪॥

ದೀರ್ಘಾಯು ಷಂ ವಿದಘತೆ ಪ್ರಸನ್ನಮಪಿ ಸರ್ವಥಾ ।
ಇತಿತೋಭಿಹಿತಂ ವಿಪ್ರ । ಫಲಂ ಲಾಂಛನ ಸಂಭವಮ್ ॥೧೫॥

ಸ್ತ್ರೀಯರ ಕಟಿ ಪ್ರದೇಶ ಹಾಗೂ ಗೌಪ್ಯಸ್ಥಾನ ಸ್ಥಿತ ಆವರ್ತ ದುಃಖಪ್ರದ ವಾಗಿರುತ್ತದೆ. ಹೊಟ್ಟೆಯ ಮೇಲೆ ಆವರ್ತವಿದ್ದರೆ ಅಣ್ಣನ ನಾಶ. ಯಾವುದೇ ಪೃಷ್ಟದ ನಡುವೆ ಆವರ್ತವಿದ್ದರೆ ಆ ಸ್ತ್ರೀ ನಪುಂಸಕ.

ಸೀಮಂತ ಪ್ರದೇಶ ಕಪಾಲ ಮಸ್ತಕದ ಮಧ್ಯ ಪ್ರದೇಶ ಕಂಠದಲ್ಲಿ ಆವರ್ತ ಸುಳಿ ಸ್ತ್ರೀ-ಪುರುಷರಿಬ್ಬರಿಗೂ ಅಶುಭಪ್ರದ. ಸಚ್ಚರಿತ ಹಾಗೂ ಸಲಕ್ಷಣವಿತಿ ಸ್ತ್ರೀ ಸ್ವಲ್ಪಾಯುಷ್ಯವುಳ್ಳವಳು ಹಾಗೂ ಪತಿಗೆ ದೀರ್ಘಾಯುಷ್ಯ ಹಾಗೂ ಪ್ರಸನ್ನತೆ ಪ್ರಧಾನ ಮಾಡುವಳು.

ಹೇ ಮೈತ್ರೇಯನೆ, ಇದು ಸ್ತ್ರೀಯರ ಅಂಗ ಲಕ್ಷಣ. ಇದು ಜನ್ಮಫಲವಿದ್ದಂತೆ. ವಿಶೇಷ ಪುರುಷ- ಸ್ತ್ರೀ ಚಿಹ್ನೆ ಲಕ್ಷಣ ನೋಡುವುದು. ಇಲ್ಲಿ ಕೇವಲ ಸ್ತ್ರೀಯರ ಸ್ಥೂಲ ತಿಲಾದಿ ಲಕ್ಷಣಗಳಿವೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ತಿಲಾದಿಲಕ್ಷಣ
ಫಲಾಧ್ಯಾಯಃ ಸಮಾಪ್ತಿಃ

( ೮೩ನೇ ಅಧ್ಯಾಯ )

# ಅಥ ಪೂರ್ವಜನ್ಮಶಾಪ ವರ್ಣನಾಧ್ಯಾಯಃ

## ಮೈತ್ರೇಯ ಉವಾಚ:

ಮುನೆ ! ಪುಂಸಾಮಪಿ ಸ್ತ್ರೀಣಾಂ ಫಲಂ ತು ಭವತೋದಿತಮ್ ।
ಇದಾನಿಮಭಿಲಷ್ಯಾಮಿ ಶ್ರೋತುಮನ್ಯದ್ ಬ್ರುವೀಹಿ ತತ್ ॥೧॥

ಮನಿಷಿಣೋ ಹಿ ಧರ್ಮಿಷ್ಠಾಃ ಪುತ್ರಹೀನಾ ಭವಂತಿ ಹಿ ।
ಪುತ್ರಹೀನಸ್ಯ ಗದಿತಾ ಶಾಸ್ತ್ರೀಷು ನ ಶುಭಾ ಗತಿಃ ॥೨॥

ಹೇತುನಾ ಕೇನತೇಷಾಂ ವೈ ಜಾಯತೆ ಪುತ್ರಹೀನತಾ ।
ಪುತ್ರಾಭಾವೆ ಸುತಪ್ರಾಪ್ತಿಃ ಕಥಂ ಭವಿತುಮರ್ಹತಿ ॥೩॥

ಲಗ್ನಾತ್ ಪುತ್ರಾಭಾವಹೇತು ಜ್ಞಾನಂ ಜ್ಯೋತಿರ್ವಿದಾಂ ಕಥಮ್ ।
ಕೃಪಾಯ ಸರ್ವಮೇತತ್ತು ಸ್ಫುಟಂ ಕಥಯಮೇ ಪ್ರಭೋ ॥೧೪॥

## ಮೈತ್ರೇಯರು ಕೇಳಿದರು—

ಹೇ ಮಹರ್ಷಿ,

ತಾವು ಪುರುಷ ಹಾಗೂ ಸ್ತ್ರೀಯ ಫಲಾದೇಶ ಹೇಳಿದ್ದಿರಿ. ಈಗ ನಾನು ಎರಡನೇ ವಿಷಯ ಕೇಳಬಯಸುತ್ತೇನೆ: ಅದನ್ನು ಕೂಡ ಕೃಪೆ ಮಾಡಿ ಹೇಳಿರಿ ವಿದ್ವಾನ್. ಧರ್ಮಿಷ್ಠರೂ ಕೂಡ ಸಂತಾನಹೀನ(ಪುತ್ರ)ರಾಗಿರುತ್ತಾರೆ. ಪುತ್ರಹೀನರಿಗೆ ಶುಭಗತಿ ಶಾಸ್ತ್ರದಲ್ಲಿ ಹೇಳಲಾಗಿಲ್ಲ. ಆ ಧರ್ಮಿಷ್ಠ ವಿದ್ವಾಂಸರಿಗೆ ಯಾವ ಕಾರಣದಿಂದ ಪುತ್ರಹೀನತೆ ಉಂಟಾಗುತ್ತದೆ. ಲಗ್ನದಿಂದ ಪುತ್ರಭಾವ ಕಾರಣಗಳ ಜ್ಞಾನ ಜ್ಯೋತಿಷಿಗಳಿಗೆ ಹೇಗೆ ತಿಳಿಯುತ್ತದೆ ಎಂಬುದನ್ನು ಸವಿಸ್ತಾರ ವಿವರಿಸಿರಿ.

ಇಲ್ಲಿ ಸಂತಾನವಿಲ್ಲ. ಪುತ್ರ(ಗಂಡು ಸಂತಾನವೆ)ವೆಂಬುದೇ. ಮೈತ್ರೇಯರ ಆಶಯ ಹಿಂದೆ 'ಪುತ್ರಹೀನೋ ಗತಿರ್ನಾಸ್ತಿ' ಎಂಬ ವಾಕ್ಯ ಪ್ರಚಾರದಲ್ಲಿದ್ದುದರಿಂದ ಹೆಣ್ಣು ಸಂತತಿಯಿದ್ದರೂ 'ಗತಿ' (ಸದ್ಗತಿ) ಇಲ್ಲದ್ದರಿಂದ ಶ್ರಾದ್ಧಾದಿ ಕಾರ್ಯಗಳಿಗೆ ಹೆಣ್ಣು ಸಂತತಿಗೆ ಅಧಿಕಾರಾದಿಗಳಿಲ್ಲದ್ದರಿಂದ – ಈ ಪ್ರಶ್ನೆ ಮಹತ್ವದಾಗಿತ್ತು. ಈಗ ಕೇವಲ ಸಂತಾನವೆಂದೇ (ಹೆಣ್ಣೋ, ಗಂಡೋ) ಪ್ರಶ್ನಿಸುತ್ತಾರೆ.

ಈಗೀಗ ಈ ಪ್ರಶ್ನೆ ಅಂದರೆ ಸಂತಾನ ಪ್ರಶ್ನೆ ವಿಶೇಷ ಮಹತ್ವದ್ದಾದರಿಂದ

ಕೇವಲ ಪಂಚಮ ಭಾವ ನೋಡದೆ ಯಾವ ಯಾವ ಭಾವದಿಂದ ವಿವೇಚಿಸುವುದು ಎಂಬುದನ್ನು ವಿಶೇಷವಾಗಿ ವಿವರಿಸಿದೆ.

ಕೆಳಗಿನ ಅಂಶಗಳಿಂದ ಕುಂಡಲಿ ವಿಚಾರಿಸುವುದು.

## ಸಂತಾನ ಸಂಬಂಧಿಸಿದ ಭಾಗ ಗ್ರಹಗಳು

ಕುಟುಂಬ ವಶ ವೃದ್ಧಿ ಕ್ಷಯ

ಸಂತತಿ ಮೃತ್ಯು ಸ್ಥಾನ

ಲಗ್ನ ಎಲ್ಲಾ ಪ್ರಕಾರ ಶಕ್ತಿ ಪೂರ್ವಜನ್ಮಾದಿಗಳ ಆರಂಭ

ಪತ್ನಿ ಪಂಚಮ ಸಪ್ತಮ

ಪಂಚಮದಿಂದ 12ನೇ ಸ್ಥಾನ ಗೃಹಸೌಖ್ಯ ಮಾತೃಶಾಪಾದಿ

ಪಂಚಮದಿಂದ 6ನೇ ಸ್ಥಾನ ರೋಗ ಆದಿ ಪಿತೃಶಾಪ

ಗರ್ಭಸ್ಥಾನ ರವಿಕಿರಣ ಸ್ಥಾನ

ಪುತ್ರಸ್ಥಾನ ಕಾಮಸೌಖ್ಯ ಜನನೇಂದ್ರಿಯ ಗರ್ಭೋತ್ಪಾದಕ ಶಕ್ತಿ

ಪಂಚಮದಿಂದ ಪಂಚಮ ಪುಣ್ಯಾದಿ

ಯೋನಿ ಬೀಜೋತ್ಪಾದ ಪಂಚಮದಿಂದ ಸುಖ

| 12 | 1 | 2 | 3 |
|---|---|---|---|
| 11 | ಲಗ್ನದಿಂದ ಸ್ಥಾನದಂತೆ | | 4 |
| 10 | | | 5 |
| 9 | 8 | 7 | 6 |

| ಸಂತತಿ ಮೃತ್ಯು ಸ್ಥಾನ | ಲಗ್ನ ಎಲ್ಲಾ ಪ್ರಕಾರ ಶಕ್ತಿ ಪೂರ್ವಜನ್ಮಾದಿಗಳ ಆರಂಭ | ಕುಟುಂಬ ವಶ ವೃದ್ಧಿ ಕ್ಷಯ ಆದಿ | |
|---|---|---|---|
| ಪತ್ನಿ ಪಂಚಮ ಸಪ್ತಮ | | | ಪಂಚಮದಿಂದ 12ನೇ ಸ್ಥಾನ ಗೃಹಸೌಖ್ಯ ಮಾತೃಶಾಪಾದಿ |
| ಪಂಚಮದಿಂದ 6ನೇ ಸ್ಥಾನ ಕೋಶ ಪಿತೃಶಾಪಾದಿ | | | ಗರ್ಭಸ್ಥಾನ ರವಿಕಿರಣ ಸ್ಥಾನ |
| ಪಂಚಮದಿಂದ ಪಂಚಮ ಪುಣ್ಯಾದಿ | ಯೋನಿ ಬೀಜೋತ್ಪಾದ ಪಂಚಮದಿಂದ ಸುಖ | ಪುತ್ರ ಸ್ಥಾನ ಕಾಮೋತ್ಪತ್ತಿ ಗರ್ಭೋತ್ಪಾದಕ ಶಕ್ತಿ | |

ಗ್ರಹಗಳು – ಗುರು-ಪಂಚಮೇಶ-ಸುತಕಾರಕ ಗ್ರಹ – ಮೇಲೆ ವಿವರಿಸಿದ ಎಲ್ಲ ಸ್ಥಾನಾಧಿ ಪರಸಂಬಂಧ

ಈ ಅಂಶಗಳ ಮೇಲಿಂದ ಸಂತಾನ ಭಾಗ್ಯ ಹೇಳುವುದು. ಈ ಮೇಲಿನ ಎಲ್ಲ ಸ್ಥಾನಗಳು ಸಂತಾನಕಾರಕಗಳೇ. ಇದು ಅಭ್ಯಾಸಿಗಳಿಗೆ ಊರುಗೋಲೇ ಹೊರತು ಒಂದೊಂದು ಸ್ಥಾನದ ಮೇಲೆ ಒಂದೊಂದು ಪಿ.ಹೆಚ್.ಡಿ ಮಾಡಬಹುದಾದಷ್ಟು ವಿಷಯ ಗಳಿವೆ. ಜ್ಯೋತಿಷಿಗಳು ಸಾವಧಾನಪೂರ್ವಕ ವಿಚಾರ ಮಾಡಿಯೇ ಶಾಪಾದಿಗಳ ಬಗ್ಗೆ ತಿಳಿಸುವುದು.

ಈ ಎಲ್ಲ ಗಮನಿಸಿಯೇ ಪರಾಶರರು ಶಾಪಾದಿ ಬಗ್ಗೆ ಹೇಳಿದ್ದು.

**ಪರಾಶರ ಉವಾಚ:**

**ಪ್ರಶ್ನೋಽಯಂ ತೆ ಮುನೆ । ಸಾಧುಃ ಪಾರ್ವತ್ಯಾಪಿ ಕೃತಃ ಪುರಾ ।**
**ಅಧುನಾ ವಚ್ಮಿ ತೆ ಸರ್ವ ಶಂಭುನಾ ಭಾಷಿತಂ ಯಥಾ ॥೩॥**

ಹೇ ಮೈತ್ರೇಯ,

ಈ ಪ್ರಶ್ನೆ ನಿಜವಾದುದಾಗಿದೆ. ಪಾರ್ವತಿ ದೇವಿಯವರು ಶಂಕರ ಭಗವಾನರನ್ನು ಈ ಪ್ರಶ್ನೆ ಮೊದಲೇ ಪ್ರಶ್ನಿಶಿದ್ದಾರೆ. ಆದ್ದರಿಂದ ಶಿವನ ಮುಖಾಂತರ ಹೇಳಲ್ಪಟ್ಟ ಎಲ್ಲ ವಿಷಯ ಸ್ಪಷ್ಟ ರೂಪದಲ್ಲಿ ಹೇಳುತ್ತೇನೆ.

**ಪಾರ್ವತ್ಯುವಾಚ:**

**ದುರಿತೇನ ಕೇನ ಸ್ಯಾನ್ನೃಣಾಂ ವೈ ಸಂತತಿಕ್ಷಯಃ ।**
**ತ ಜ್ಞಾನಂ ರಕ್ಷೇಣೋಪಾಯಂ ಚಾಪಿ ಮೇಕಥಯ ಪ್ರಭೋ? ॥೬॥**

**ಪಾರ್ವತಿದೇವಿ ಕೇಳಿದುದು–**

ಹೇ ಪ್ರಭು(ಶಂಕರ),

ಯಾವ ಪಾಪದಿಂದ ಮನುಷ್ಯನ ಸಂತಾನ ನಾಶವಾಗುತ್ತವೆ. ಅದನ್ನು ಅವರು ಹೇಗೆ ತಿಳಿಯುವುದು ಸಂತಾನ ರಕ್ಷೆಗಾಗಿ. ಉಪಾಯ ಯಾವುದು ಹೇಳಿರಿ.

**ಶಂಕರ ಉವಾಚ:**

**ಪ್ರಶ್ನೋಽಯಂ ದೇವಿ ।ತೆ ಸಾಧುರ್ವಚ್ಮಿ ಸಂತತಿ ನಾಶಕಾನ್ ।**
**ಯೋಗಾನಪಿ ಚ ತದ್ರಕ್ಷೋ ಪಾಯಚ ಶೃಣು ಸಮಾಹಿತಾ ॥೭॥**

ಶಂಕರ ಹೇಳಿದರು—

ದೇವಿ

ನಿಮ್ಮ ಈ ಪ್ರಶ್ನೆ ಉತ್ತಮವಾದುದಾಗಿದೆ. ಅದಕ್ಕಾಗಿ ನಾನು ಸಂತತಿ ಕ್ಷಯಕಾರಕ ಯೋಗ ಹಾಗೂ ಅದರ ರಕ್ಷೆಗೆ ಉಪಾಯ ಹೇಳುತ್ತೇನೆ. ಸಾವಧಾನವಾಗಿ ಕೇಳು.

## ಅನಪತ್ಯ ಯೋಗ

ಗುರುಲಗ್ನೇಶ ದಾರೇಶ – ಪುತ್ರಸ್ಥಾನಾಧಿಪೇಷು ಚ ।
ಸರ್ವೇಷು ಬಲಹೀನೇಷು ಉಕ್ತವ್ಯಾ ತ್ವನಪತ್ಯಾತಾ ॥೮॥

ರವ್ಯಾರ ರಾಹು ಶನಯೋ ಬಲಹೀನಃ ಪಂಚಮೇ ಸ್ಥಿತಾಃ ।
ಜಾತಸ್ತುದಾನುಪತ್ಯಃ ಸ್ಯಾನ್ನಿರ್ಬಲಾ ಯದಿ ಕಾರಕಃ ॥೯॥

ಗುರು ಲಗ್ನೇಶ ದಾರೇಶ (ಸಪ್ತವೇಶ) ಹಾಗೂ ಪಂಚಮೇಷ ಈ ನಾಲ್ಕು ಗ್ರಹಗಳು ನಿರ್ಬಲರಾಗಿದ್ದರೆ ನಿಃಸಂತಾನವಾಗುತ್ತದೆ. ಪುತ್ರ ಸ್ಥಾನ ಸ್ಥಿತ ರವಿ ಭೌಮ, ರಾಹು ಹಾಗೂ ಶನಿ ಬಲಿಷ್ಠರಾಗಿ ಹಾಗೂ ಪುತ್ರಕಾರಕ ಗ್ರಹ ನಿರ್ಬಲವಾಗಿದ್ದರೆ ಮನುಷ್ಯ ನಿಃಸಂತಾನನಾಗುತ್ತಾನೆ.

ಇಲ್ಲಿ ಗುರು ನೈಸರ್ಗಿಕ ಸುತಕಾರಕ ಲಗ್ನ ಕುಂಡಲಿಯಲ್ಲಿ ತಿಳಿಸಿದಂತೆ ಸರ್ವಶಕ್ತಕಾರಕ ಸಪ್ತಮೇಶ ಗರ್ಭ ಹಾಗೂ ಸಂತಾನೋತ್ಪತ್ತಿಕಾರಕ – ಪಂಚಮೇಶ ಪುತ್ರಕಾರಕನೇ ಈ ರೀತಿ ನಾಲ್ಕು ಗ್ರಹ ಬಲಹೀನವಾದರೆ – ಸಂತಾನಕ್ಕೆ ಮಾರಕವೆ. ರವಿ, ಶನಿ, ರಾಹು, ಮಂಗಳರು ಕ್ರೂರ ಗ್ರಹಗಳಾಗಿದ್ದು ತಾವಿದ್ದ ಸ್ಥಾನ ನಾಶ ಮಾಡುವುದರಿಂದ ಸಂತತಿಕಾರಕ. (ಪಂಚಮೇಶ ಗುರು ಸುತಕಾರಕ) ಗ್ರಹ ಬಲಹೀನರಾದರೆ ಸಂತತಿ ಅಭಾವ. ಅಲ್ಲಿ ಎಲ್ಲ ಅಂಶ ಪರಿಗಣಿಸಿ ಸಂತತಿ ಬಗ್ಗೆ ಹೇಳುವುದು.

## ಸರ್ಪಶಾಪ

ಪುತ್ರಸ್ಥಾನಗತೆ ರಾಹೌ ಕುಜೇನ ಚ ನಿರೀಕ್ಷಿತೆ ।
ಕುಜಕ್ಷೇತ್ರಗತೆ ವಾಪಿ ಸರ್ಪಶಾಪಾತ್ ಸುತಕ್ಷಯಃ ॥೧೦॥

ಪುತ್ರೇಶೆ ರಾಹುಸಂಯುಕ್ತೆ ಪುತ್ರಸ್ಥೆ ಭಾನು ನಂದನೆ ।
ಚಂದ್ರೆ ಕ್ಷಿತಯುತೆ ವಾಪಿ ಸರ್ಪಶಾಪಾತ್ ಸಂತಕ್ಷಯಃ ॥೧೧॥

**ಕಾರಕೇ ರಾಹುಸಂಯುಕ್ತೇ ಪುತ್ರೇಶೇ ಬಲವರ್ಜಿತೇ ।**
**ಲಗ್ನಾಧಿಪೇ ಸಭೌಮೇಪಿ ಸರ್ಪಶಾಪಾತ್ ಸುತಕ್ಷಯಃ ॥೧೨॥**

ಪಂಚಮಸ್ಥ ರಾಹು ಭೌಮದೃಷ್ಟ ಅಥವಾ ಕುಜಕ್ಷೇತ್ರ (ಮೇಷ, ವೃಶ್ಚಿಕ) ಗತರಾಗಿದ್ದರೆ ಸರ್ಪಶಾಪದಿಂದ ಪುತ್ರಕ್ಷಯ ತಿಳಿಯುವುದು. ಪಂಚಮೇಶ ಸರಾಹು ಇದ್ದು ಪಂಚಮದಲ್ಲಿ ಶನಿಯ ಮೇಲೆ ಚಂದ್ರನ ದೃಷ್ಟಿ ಅಥ ಚಂದ್ರನೊಡನೆ ಯುತಯಿದ್ದರೆ ಸುತಕ್ಷಯ ಕಾರಕ ಪುತ್ರಕಾರಕ ಗ್ರಹ ಸರಾಹು ಇದ್ದರೆ ಪಂಚಮೇಶ ನಿರ್ಬಲನಾಗಿದ್ದರೆ ಲಗ್ನೇಶ ಹಾಗೂ ಮಂಗಳ ಸಂಯೋಗವಿದ್ದರೆ ಸರ್ಪ ಶಾಪದಿಂದ ಪುತ್ರಕ್ಷಯ ಹೇಳುವುದು.

ಇಲ್ಲಿ ಸಾಮಾನ್ಯ ರಾಹು ಪಂಚಮದಲ್ಲಿದ್ದರೆ ಸರ್ಪಶಾಪವೆನ್ನುವ ರೂಢಿಯಿದ್ದು ಅದು ಮಂಗಳ ಕ್ಷೇತ್ರದಲ್ಲಿದ್ದರೆ ಸುತಕ್ಷಯ ರಾಹುವಿನಿಂದ ಸರ್ಪ ಶಾಪವೆನ್ನುವುದು ವಿಚಾರಣೀಯವೆ. ರಾಹು, ಮಂಗಳ ಕ್ಷೇತ್ರದಲ್ಲಿದ್ದರೆ ಮಂಗಳ ಸುತಕಾರಕ ಗ್ರಹವಾಗಿಯೂ ಪಂಚಮದಿಂದ ಪಂಚಮ - ಸುತಸ್ಥಾನವಾಗಿ (ಯಾವ ಸ್ಥಾನದ ವಿಚಾರ ಮಾಡುವುದಿದೆಯೋ ಆ ಸ್ಥಾನವನ್ನು ಲಗ್ನವೆಂದು ಪರಿಗಣಿಸಿ) ಅವರೆಲ್ಲರ ಹಾಗೂ ಆ ಲಗ್ನಕ್ಕೆ ಯಾವ ಗ್ರಹ ಸುತಕಾರಕವೋ ಅದು ಬಲಿಷ್ಠವಿದ್ದರೆ ಸರ್ಪಶಾಪವಿರಲಾರದು ಸರ್ಪ(ಶೇಷ)ದೈವವಾಗಬಹುದು.

ಉದಾಹರಿತ ಕುಂಡಲಿ ಇದ್ದು ಸಪ್ತಗ್ರಹಗಳಿಗೆ ಸ್ಥಾನವಿತ್ತರೆ ಮಂಗಳ – ಪುತ್ರಕಾರಕ (ಅಧಿಕಾರಯುತ ಪಂಚಮಾಧಿಪ – ಪುತ್ರಕಾರಕ ಹಾಗೂ ಪುತ್ರಿಕಾರಕ ಗ್ರಹದೊಡನೆ ಯತಿ)




ಸಪ್ತಗ್ರಹಗಳಿಗೆ ಸ್ಥಾನವಿತ್ತರೆ ಮಂಗಳ - ಪುತ್ರಕಾರಕ (ಅಧಿಕಾರಯುತ ಪಂಚಮಾಧಿಪ ಪುತ್ರಕಾರಕ ಹಾಗೂ ಪುತ್ರಕಾರಕ ಗ್ರಹದೊಡನೆ ಯುತ)




ಮಂಗಳ ಬಲಿಷ್ಠನಾಗಿ ಪುತ್ರಕಾರಕನಾಗಿ ಪಂಚಮಾಧಿಪನಾಗಿ ಭಾಗ್ಯಾದಿಪ (ಲಗ್ನದಿಂದ) ಪಂಚಮಾಧಿಪ (ಪಂಚಮದಿಂದ) ಗುರುವಿನೊಡನೆ ಯುತಿ ಮಾಡಿ

ಬಲಿಷ್ಠ ಮಂಗಳ ನೋಡನಿರುವುದರಿಂದ ಗುರುವು ರಾಜಯೋಗಕಾರಕನೆ (ಕೇಂದ್ರಾಧಿಪ+ತ್ರಿಕೋಣಾಧಿಪ) ಹೀಗೆ ಯೋಗವಿದ್ದು ರಾಹು ಪಂಚಮ ದಲ್ಲಿದ್ದರೂ ಸರ್ಪದೋಷಕಾರಕನಾಗಲಾರ. ಸರ್ಪ ಅಧಿದೈವವಾಗಬಹುದು.

ಈ ರೀತಿ ಸಮಗ್ರ ವಿಚಾರ ಮಾಡಿಯೇ ನಿರ್ಣಯಿಸುವುದು ಜಾತಕನಿಗೆ ಇಬ್ಬರು ಸುಪುತ್ರರು.

ಕಾರಕೆ ಭೌಮಸಂಯುಕ್ತೆ ಲಗ್ನೆ ಚಾಪ್ಯಹಿ ಸಂಯುತೆ ।
ಪುತ್ರಸ್ಥಾನೇಶ್ವರೆ ದುಃಖಿಸ್ತೇ ಸರ್ಪಶಾಪಾತ ಸುತಕ್ಷಯಃ ॥೧೩॥

ಭೌಮಾಂಶೆ ಭೌಮ ಸಂಯುಕ್ತೆ ಪುತ್ರೇಶೆ ಸೋಮನಂದನೆ ।
ರಾಹುಮಾಂದಿಯುತೆ ಲಗ್ನೆ ಸರ್ಪಶಾಪಾತ್ ಸುತಕ್ಷಯಃ ॥೧೪॥

ಪುತ್ರಸ್ಥಾನೆ ಕುಜಕ್ಷೇತ್ರೆ ಪುತ್ರೇಶೆ ರಾಹುಣಾನ್ವಿತೆ ।
ಸೌಮ್ಯ ದೃಷ್ಟಯುತೆ ವಾಪಿ ಸರ್ಪಶಾಪಾತ್ ಸುತಕ್ಷಯಃ ॥೧೫॥

ಪುತ್ರಸ್ಥ ಭಾನುಮಂದಾರಾಃ ಸ್ವರ್ಭಾನುಃ ಶಶಿಜೋಂಗಿರಾಃ ।
ನಿರ್ಬಲೌ ಪುತ್ರ ಲಗ್ನೆಶೌ ಸರ್ಪಶಾಪಾತ್ ಸುತಕ್ಷಯಃ ॥೧೬॥

ಲಗ್ನೇಶೆ ರಾಹುಸಂಯುಕ್ತೆ ಪುತ್ರೇಶೆ ಭೌಮಸಂಯುತೆ
ಕಾರಕೆ ರಾಹುಸಹಿತೆ ಸರ್ಪಶಾಪಾತ್ ಸುತಕ್ಷಯಃ ॥೧೭॥

(1) ಪುತ್ರಕಾರಕ ಗ್ರಹ ಸಭೌಮನಾಗಿ ಲಗ್ನೇಶ ಸರಾಹು ಇದ್ದು ಪಂಚಮೇಶ ತ್ರಿಕ್‌ದಲ್ಲಿದ್ದರೆ

(2) ಪಂಚಮೇಶ ಬುಧ, ಮಂಗಳರ ನವಾಂಶದಲ್ಲಿ ಸಭೌಮರಾಗಿದ್ದರೆ ಅಥವಾ ಲಗ್ನ ರಾಹು ಗುಳಿಕ ಸಹಿತವಾಗಿದ್ದರೆ (ಮಾಂದಿ)

(3) ಪಂಚಮದಲ್ಲಿ ಮೇಷ (ಧನುಲಗ್ನ, ಕರ್ಕಲಗ್ನ) ವೃಶ್ಚಿಕ ರಾಶಿಗಳು ಸರಾಹು ಮಂಗಳ, ಬುಧ ಯುಕ್ತನಾದರೆ (ರಾಹು+ಮಂಗಳ+ಬುಧ) ಬುಧ ದೃಷ್ಟನಾದರೆ

(4) ಪಂಚಮದಲ್ಲಿ ಸೂರ್ಯ, ಮಂಗಳ, ಶನಿ, ರಾಹು, ಬುಧ ಹಾಗೂ ಗುರುವಿದ್ದರೆ ಪಂಚಮೇಶ ಲಗ್ನೇಶ ನಿರ್ಬಲರಿದ್ದರೆ

(5) ಲಗ್ನೇಶ ಸರಾಹು ಪುತ್ರೇಶ ಸಭೌಮ ಹಾಗೂ ಕಾರಕಗ್ರಹವು ರಾಹುಯುತಿ (ಲಗ್ನೇಶ+ರಾಹು+ಕಾರಕಗ್ರಹ) ಈ ಎಲ್ಲ ಯೋಗಗಳು ಪೂರ್ವ ಜನ್ಮ

ಸರ್ಪಶಾಪದಿಂದ ನಿಃಸಂತಾನಕಾರಕವಾಗಿರುತ್ತದೆ.

## ದೋಷಶಾಂತಿ ಉಪಾಯ

ನಭೋಗಯೋಗತಃ ಪುಂಸಾಂ ಜ್ಞಾತ್ವೈವಮನಪತ್ಯತಾಮ್ ।
ತದ್ದೋಷ ಪರಿಹಾರಾರ್ಥಂ ನಾಗಪೂಜಾಂ ಸಮಾಚರೇತ್ ॥೧೮॥

ಸ್ವಗ್ರಹೋಕ್ತ ವಿಧಾನೇನ ಪ್ರತಿಷ್ಠಾ ಕಾರಯೇತ್ ಸುಧಿಃ ।
ನಾಗಮೂರ್ತಿ ಸುವರ್ಣೇನ ಕೃತ್ವಾ ಪೂಜಾಂ ಸಮಾಚರೇತ್ ॥೧೯॥

ಗೋಭೂತಿಲಹಿರಣ್ಯಾದಿ ದದ್ಯಾದ್ ವಿತ್ತಾನುಸಾರತಃ ।
ಏವಂ ಕೃತೆ ತು ನಾಗೇಂದ್ರೋ ಪ್ರಸಾದಾದ್ ವರ್ಧತೆ ಕುಲಮ್ ॥೨೦॥

ಈ ಮೇಲಿನ ತರಹ ಗ್ರಹ ವಶ ನಿಃಸಂತಾನದಾಯಕವಾದರೆ ಸರ್ಪದೋಷ ವೆಂದು ಗ್ರಹಿಸಿ - ನಾಗಪೂಜೆ ಮಾಡುವುದು. ಬಂಗಾರದ ನಾಗಮೂರ್ತಿ ಮಾಡಿ ಗ್ರಹಪದ್ಧತಿಯಂತೆ ವಿಧಿಪೂರ್ವಕ ಪೂಜಿಸಿ ಪ್ರತಿಷ್ಠಾಪನಾದಿ ಮಾಡಿ ಹಾಗೂ ತಮ್ಮ ಯೋಗ್ಯತೆಗೆ ತಕ್ಕಂತೆ ಆಕಳು, ಭೂಮಿ, ತಿಲ, ಬಂಗಾರ ಆದಿ ದಾನ ಮಾಡುವುದು. ಈ ರೀತಿ ನಾಗರಾಜನ ಕೃಪೆಯಿಂದ ವಂಶಾಭಿವೃದ್ಧಿ ಸಂಭವ.

## ಪಿತೃಶಾಪದಿಂದ ಸುತಕ್ಷಯ ಯೋಗ

ಪುತ್ರಸ್ಥಾನಂ ಗತೆ ಭಾನೌ ನೀಚೆ ಮಂದಾಂಶಕೆ ಸ್ಥಿತೆ ।
ಪಾರ್ಶ್ವಯೋಃ ಕ್ರೂರ ಸಂಬಂಧೆ ಪಿತೃಶಾಪಾತ್ ಸುತಕ್ಷಯಃ ॥೨೧॥

ಪುತ್ರಸ್ಥಾನಾಧಿಪೆ ಭಾನೌ ತ್ರಿಕೋನಗೆ ಪಾಪ ಸಂಯುತೆ ।
ಕ್ರೂರಾಂತರೆ ಪಾಪದೃಷ್ಟೆ ಪಿತೃಶಾಪಾತ್ ಸುಖಕ್ಷಯಃ ॥೨೨॥

ಭಾನುರಾಶಿಸ್ಥಿತೆ ಜೀವೆ ಪುತ್ರೇಶೆ ಭಾನು ಸಂಹಿತೆ ।
ಪುತ್ರೆ ಲಗ್ನೆ ಪಾಪಯುಕ್ತೆ ಪಿತೃಶಾಪಾತ್ ಸುತಕ್ಷಯಃ ॥೨೩॥

ಲಗ್ನೇಶೆ ದುರ್ಬಲೆ ಪುತ್ರೆ ಪುತ್ರೇಶೆ ಭಾನು ಸಂಹಿತೆ ।
ಪುತ್ರೆ ಲಗ್ನೆ ಪಾಪಯುಕ್ತೆ ಪ್ರಿಶಾಪಾತ್ ಸುತಕ್ಷಯಃ ॥೨೪॥

ಪಿತೃಸ್ಥಾನಾಧಿಪೆ ಪುತ್ರೆ ಪುತ್ರೇಶೆ ವಾ ಪಿತೃಗೃಹೆ ।
ಪುತ್ರೆ ಲಗ್ನೆ ಪಾಪಯುಕ್ತೆ ಪಿತೃಶಾಪಾತ್ ಸುತಕ್ಷಯಃ ॥೨೫॥

ಪಿತೃಸ್ಥಾನಾಧಿಪೋ ಭೌಮಃ ಪುತ್ರೇಶೇನ ಸಮಾನ್ವಿತಃ ।

ಲಗ್ನೆ ಪುತ್ರೆ ಪಿತೃಸ್ಥಾನೆ ಪಾಪೆ ಸಂತತಿ ನಾಶನಮ್ ॥೨೬॥

ಪಿತೃಸ್ಥಾನಾಧಿಪೆ ದುಃಸ್ಥೆ ಕಾರಕೆ ಪಾಪ ರಾಶಿಗೆ ।
ಪಾಪಾಢ್ಯೌ ಲಗ್ನಸುತಪೌ ಪಿತೃಶಾಪಾತ್ ಸುತಕ್ಷಯಃ ॥೨೭॥

ಲಗ್ನ ಪಂಚಮ ಭಾವಸ್ಥಾ ಭಾನುಭೌಮ ಶನ್ಯೈಶ್ವರಾಃ ।
ರಂಧ್ರೆ ರಿಪ್ಪೆ ರಾಹು ಜೀವೌ ಪಿತೃಶಾಪಾತ್ ಸುತಕ್ಷಯಃ ॥೨೮॥

ಲಗ್ನಾದಷ್ಟಮಗೆ ಭಾನೌ ಪುತ್ರಸ್ಥೆ ಭಾನು ನಂದನೆ ।
ಪುತ್ರೇಶೆ ರಾಹು ಸಂಯುಕ್ತೆ ಲಗ್ನೇ ಪಾಪೆ ಸುತಕ್ಷಯಃ ॥೨೯॥

ವ್ಯಯೇಶೆ ಲಗ್ನಭಾವಸ್ಥೆ ರಂಧ್ರೇಶೆ ಪುತ್ರ ರಾಶಿಗೆ ।
ಪಿತೃಸ್ಥಾನಾಧಿಪೆ ರಂಧ್ರೆ ಪುತ್ರಶಾಪಾತ್ ಸುತಕ್ಷಯಃ ॥೩೦॥

ರೋಗೇಶೆ ಪುತ್ರಭಾವಸ್ಥೆ ಪಿತೃಸ್ಥಾನಾಧಿಪೆಷ್ಯಕೌ ।
ಕಾರಕೆ ರಾಹು ಸಂಯುಕ್ತೆ ಪಿತೃಶಾಪಾತ್ ಸುತಕ್ಷಯಃ ॥೩೦॥

(1) ಪಂಚಮಸ್ಥಾನದಲ್ಲಿ ನೀಚಸೂರ್ಯ, ಶನಿಯ ನವಾಂಶ ಗತ (ತುಲಾ ರಾಶಿಯಲ್ಲಿ 6-10-0ರಿಂದ 16-40ದವರೆಗೆ ಮಕರ ಕುಂಭ ನವಾಂಶ) ಗತ ಹಾಗೂ ಎರಡು ಪಾರ್ಶ್ವದಲ್ಲಿ ಪಾಪಗ್ರಹಗಳು (ಪಾಪಗ್ರಹ ಕರ್ತರಿ) ಪಿತೃಶಾಪದಿಂದ ಪುತ್ರಕ್ಷಯ ಅಥವಾ ಅಪುತ್ರತ್ವ.

(2) ಪಂಚಮೇಶ ಸೂರ್ಯ ಪಾಪಯುಕ್ತನಾಗಿ ತ್ರಿಕೋನದಲ್ಲಿ ಪಾಪದ್ವಯ ಮಧ್ಯ.

(3) ಸಿಂಹದಲ್ಲಿ ಗುರು ಪಂಚಮೇಶ ಸೂರ್ಯಯುಕ್ತ ಪಂಚಮ ಅಥವಾ ಲಗ್ನ ಸಪಾಪ.

(4) ದುರ್ಬಲ ಲಗ್ನೇಶ ಪಂಚಮ ಭಾವದಲ್ಲಿ ಪುತ್ರೇಶ ರವಿಯುಕ್ತ ಹಾಗೂ ಪುತ್ರಭಾವ – ಲಗ್ನ ಸಪಾಪ.

(5) ದಶಮೇಶ ಪಂಚಮದಲ್ಲಿ ಪಂಚಮೇಶ ದಶಮದಲ್ಲಿ ಪಂಚಮ ಲಗ್ನ ಸಪಾಪವಾಗಿದ್ದರೆ.

(6) ದಶಮೇಶ ಭೌಮ ಪಂಚಮೇಶನ ಜೊತೆ ಹಾಗೂ ಲಗ್ನ ಪಂಚಮ ದಶಮ ಸಪಾಪ.

(7) ದಶಮೇಶ ತ್ರಿಕ್(6-8-12)ದಲ್ಲಿ ಪುತ್ರಕಾರಕ ಗ್ರಹ ಪಾಪರಾಶಿಯಲ್ಲಿ

ಹಾಗೂ ಲಗ್ನೇಶ ಪಂಚಮೇಶ ಪಾಪಯುಕ್ತ.

(8) ಲಗ್ನ ಪಂಚಮದಲ್ಲಿ ಸೂರ್ಯ, ಮಂಗಳ ಹಾಗೂ ಶನಿ ಅಷ್ಟಮದಲ್ಲಿ ಹಾಗೂ ದ್ವಾದಶದಲ್ಲಿ ರಾಹು ಹಾಗೂ ಗುರು.

(9) ಅಷ್ಟಮದಲ್ಲಿ ಸೂರ್ಯ, ಪಂಚಮದಲ್ಲಿ ಶನಿ, ಪಂಚಮೇಶ ರಾಹುಯುಕ್ತ ಲಗ್ನ ಸಪಾಪ.

(10) ಷಷ್ಠೇಶ ಪಂಚಮದಲ್ಲಿ ದಶಮೇಶ ಷಷ್ಠದಲ್ಲಿ ಹಾಗೂ ಪುತ್ರಕಾರಕ ಗ್ರಹ ಸರಾಹು ಇದ್ದರೆ...; ಮೇಲಿನ ಎಲ್ಲ ಹನ್ನೊಂದು ಯೋಗದಲ್ಲಿ ಪಿತೃಶಾಪ, ಸಂತತಿ ಕ್ಷಯ ಹಾಗೂ ಮಕ್ಕಳೇ ಆಗದಿರುವಿಕೆ.

### ಶಾಂತ್ಯುಪಾಯ

ತದ್ದೋಷ ಪರಿಹಾರಾರ್ಥ ಗಯಾಶ್ರಾದ್ ಚ ಕಾರಯೇತ್ ।
ಬ್ರಾಹ್ಮಣಾನ್ ಭೋಜಯೇದ್‌ತ್ರಾ ಯುತಂ ವಾಪಿ ಸಹಸ್ರತವ್ ॥೩೨॥

ವಿಧಾಯ ಕನ್ಯಾದಾನಂ ಗಾಂ ಚ ದದ್ಯಾತ್ ಸವತ್ಸಕಾವ್ ।
ಏವಂ ಕೃತೆ ಪಿತುಃ ಶಾಪನ್ಮುಚ್ಯತೆ ನಾತ್ರಸಂಶಯಃ ॥೩೩॥

ವರ್ಧತೆ ಚ ಕುಲಂ ತಸ್ಯ ಪುತ್ರಿ ಪೌತ್ರಾದಿರ್ಭಿರ್ಮುನೆ ।
ನಭೋಗಯೋಗವಶತಃ ಫಲಮೇವಂ ಸಮಾಧಿಶೇತ್ ॥೩೪॥

ಪಿತೃಶಾಪ ವಿಮೋಚನೆಗೆ ಗಯಾಶ್ರಾದ್ಧ ಸಾವಿರ ಅಥವಾ ಹತ್ತು ಸಾವಿರ ಬ್ರಾಹ್ಮಣ ಭೋಜನ ಅಥವಾ ಕನ್ಯಾದಾನ ಮಾಡಿ ಕರುಸಹಿತ ಆಕಳ ದಾನದಿಂದ ನಿಃಸಂದೇಹ ಪಿತೃಶಾಪದಿಂದ ಮುಕ್ತಿಯಾಗಿ ಪುತ್ರಪೌತ್ರಾದಿ ಸುಖ ಕಾಣುವನು. ಗ್ರಹಯೋಗ ಸರಿಯಾಗಿ ಅವಲೋಕಿಸಿ ಫಲ ಹೇಳುವುದು.

ವೇದದಲ್ಲಿ ಕೃತ್ತಿಕಾ ಶ್ರಾದ್ಧ (ಕೃತ್ತಿಕಾ ನಕ್ಷತ್ರದಲ್ಲಿ) ಹೇಳಿದೆ ಹಾಗೂ ಮಧ್ಯ ಪಿಂಡಕ್ಕೆ ತಿಳಿದೋ ತಿಳಿಯದೆಯೋ ಮಾಡಿದ ಪಾಪ ಕ್ಷಮಿಸಲು ಪ್ರಾರ್ಥಿಸುವುದನ್ನು ಹೇಳಿದ್ದು ವೇದೋಕ್ತ ಕಾರ್ಯ ಪೂರ್ಣ ಸ್ತುತ್ಯ 10,000 ಬ್ರಾಹ್ಮಣರಿಗೆ ಅಥವಾ 1000 ಬ್ರಾಹ್ಮಣರಿಗೆ ಊಟಕ್ಕೆ ಹಾಕುವುದು ಈಗಿನ ದಿನಗಳಲ್ಲಿ ಅಸಾಧ್ಯ.

### ಮಾತೃಶಾಪ ವಂಶ ಸಂತತಿಕ್ಷಯ

ಪುತ್ರ ಸ್ಥಾನಾಧಿಪೆ ಚಂದ್ರೆ ನೀಚೆ ವಾ ಪಾಪಮಧ್ಯಗೆ ।
ಹಿಬುಕೆ ಪಂಚಮೆ ಪಾಪೆ ಮಾತೃಶಾಪಾತ ಸುತಕ್ಷಯಃ ॥೩೫॥

ಲಾಭೆ ಮಂದಾನ್ವಿತೆ ಚೈವಂ ಮಾತೃಸ್ಥಾನೆ ಶುಭತರೆ ।
ನೀಚೆ ಮಂಚಮಗೆ ಚಂದ್ರೆ ಮಾತೃಶಾಪಾತ್ ಸುತಕ್ಷಯಃ ॥೩೬॥

ಪುತ್ರ ಸ್ಥಾನಾಧಿಪೆ ದುಃಸ್ಥೆ ಲಗ್ನೇಶೆ ನೀಚರಾಶಿಗೆ ।
ಚಂದ್ರೆ ಪಾಪ ಸಮಾಯುಕ್ತೆ ಮಾತೃಶಾಪಾತ್ ಸುತಕ್ಷಯಃ ॥೩೭॥

ಪುತ್ರಸ್ಥಾನಾಧಿಪೆ ದುಃಸ್ಥೆ ಚಂದ್ರೆ ಪಾಪಾಂಶ ಸಂಗತೆ ।
ಲಗ್ನೆ ಪುತ್ರೆ ಪಾಪಯುಕ್ತೆ ಮಾತೃಶಾಪಾತ್ ಸುತಕ್ಷಯಃ ॥೩೮॥

ಪುತ್ರ ಸ್ಥಾನಾಧಿಪೆ ಚಂದ್ರೆ ಮಂದರಾಹ್ವಾರಸಂಯುತೆ ।
ಭಾಗ್ಯೆ ವಾ ಪುತ್ರಭಾವೆ ವಾ ಶಾಪಾನ್ಮಾತುಃ ಸುತಕ್ಷಯಃ ॥೩೯॥

ಮಾತೃಸ್ಥಾನಾಧಿಪೆ ಭೌಮೆ ಶನಿರಾಹುಸಮನ್ವಿತೆ ।
ರವಿಂದು ಸಂಯುತೆ ಪುತ್ರೆ ಲಗ್ನೆ ವಾ ಸಂತತೇಃ ಕ್ಷಯಃ ॥೪೦॥

ಲಗ್ನಾತ್ಮಜೆಶೌ ಶತ್ರುಸ್ಥೌ ರಂಧ್ರೆ ಮಾತ್ರಾಧಿಪಃ ಸ್ಥಿತಃ ।
ಪಿತೃನಾಶಾಧಿಪೌ ಲಗ್ನೆ ಮಾತೃಶಾಪಾತ್ ಸುತಕ್ಷಯಃ ॥೪೧॥

ಷಷ್ಠಾಮೇಶೌ ಲಗ್ನಸ್ಥೌ ವ್ಯಯೇ ಮಾತ್ರಾಧಿಪೆ ಸುತೆ ।
ಚಂದ್ರೆ ಜೀವೇ ಚ ಪಾಪಾಢ್ಯೆ ಮಾತೃಶಾಪಾತ್ ಸುತಕ್ಷಯಃ ॥೪೨॥

ಪಾಪಮಧ್ಯಗತೆ ಲಗ್ನೆ ಕ್ಷೀಣೆ ಚಂದ್ರೆ ಚ ಸಪ್ತಮೆ ।
ಮಾತೃಪುತ್ರೆ ರಾಹುಮಂದೌ ಮಾತೃಶಾಪಾತ್ ಸುತಕ್ಷಯಃ ॥೪೩॥

(1) ಪಂಚಮೇಶ ಚಂದ್ರ (ಮೀನ ಲಗ್ನ) ನೀಚಸ್ಥಾನ ಅಥವಾ ಪಾಪಗ್ರಹ ಕರ್ತರಿಯಲ್ಲಿ ಚತುರ್ಥ, ಪಂಚಮಭಾವ ಸಪಾಪ.

(2) ಏಕಾದಶದಲ್ಲಿ ಶನಿ, ಚತುರ್ಥ ಸಪಾಪ ಹಾಗೂ ನೀಚ ಚಂದ್ರ ಪಂಚಮದಲ್ಲಿ.

(3) ಪಂಚಮೇಶ ತ್ರಿಕಸ್ಥ (6, 8, 12) ಲಗ್ನೇಶ ನೀಚ ರಾಶಿಯಲ್ಲಿ ಚಂದ್ರ ಸಪಾಪ.

(4) ಪಂಚಮೇಶ ತ್ರಿಕ್ ಚಂದ್ರ ಪಾಪಗ್ರಹದ ನವಾಂಶದಲ್ಲಿ ಲಗ್ನ ಹಾಗೂ ಪಂಚಮ ಸಪಾಪ.

(5) ಪಂಚಮೇಶ ಚಂದ್ರ, ಶನಿ, ರಾಹು, ಮಂಗಳರ ಜೊತೆ ನವಮದಲ್ಲಿ

ಅಥವಾ ಪಂಚಮದಲ್ಲಿ.

(6) ಸುಖೇಶ (4ರ ಅಧಿಪ) ಭೌಮ (ಮಕರ, ವೃಶ್ಚಿಕ ಲಗ್ನ) ಶನಿ ರಾಹುಯುಕ್ತ ನಾಗಿದ್ದರೆ ಲಗ್ನ ಹಾಗೂ ಪಂಚಮದಲ್ಲಿ ರವಿ, ಚಂದ್ರರಿದ್ದರೆ.

(7) ಲಗ್ನೇಶ ಹಾಗೂ ಪಂಚಮೇಶ ಷಷ್ಠಸ್ಥ ಚತುರ್ಥೇಶ ಅಷ್ಟಮದಲ್ಲಿ ಅಷ್ಟಮೇಶ ಹಾಗೂ ದಶಮೇಶ ಲಗ್ನದಲ್ಲಿ.

(8) ಷಷ್ಠಾಷ್ಟಮೇಶ ಲಗ್ನಗತ ಚತುರ್ಥೇಶ ವ್ಯಯಸ್ಥಾನಗತ, ಸಪಾಪ ಗುರು, ಚಂದ್ರ ಪಂಚಮದಲ್ಲಿ.

(9) ಲಗ್ನ ಎರಡು ಪಾಪಗ್ರಹಗಳ ಗ್ರಹ ಕರ್ತರಿಯಲ್ಲಿ ಕ್ಷೀಣ ಚಂದ್ರ ಸಪ್ತಮದಲ್ಲಿ ಹಾಗೂ ರಾಹು, ಶನಿ ಕ್ರಮಶಃ ಚತುರ್ಥ, ಪಂಚಮಗತರಾದರೆ ಈ ಎಲ್ಲ ಯೋಗಗಳಲ್ಲಿ ಮಾತೃಶಾಪದಿಂದ ಪುತ್ರ ವಿಹೀನತ್ವ.

ಹಾಗೂ

ನಾಶಸ್ಥಾನಾಧಿಪೆ ಪುತ್ರೆ ಪುತ್ರೇಶೆ ನಾಶರಾಶಿಗೆ ।
ಚಂದ್ರ ಮಾತೃಪತೌ ದುಃಸ್ಥೆ ಮಾತೃಶಾಪಾತ್ ಸುತಕ್ಷಯಃ ॥೪೪॥

ಚಂದ್ರಕ್ಷೇತ್ರೆ ಯದಾಲಗ್ನೆ ಕುಜರಾಹುಸಮನ್ವಿತೆ ।
ಚಂದ್ರಮಂದೌ ಪುತ್ರಸಂಸ್ಥೌ ಮಾತೃಶಾಪಾತ್ ಸುತಕ್ಷಯಃ ॥೪೫॥

ಲಗ್ನೆ ಪುತ್ರೆ ಮೃತೌ ರಿಷ್ಫೆ ಭೌಮೋ ರಾಹು ರವಿಃ ಶನಿಃ ।
ಮಾತೃಲಗ್ನಾಧಿಪೌ ದುಃಸ್ಥೌ ಮಾತೃಶಾಪಾತ್ ಸುತಕ್ಷಯಃ ॥೪೬॥

ನಾಶಸ್ಥಾನಂ ಗತೆ ಜೀವೆ ಕುಜರಾಹುಸಮಾನ್ವಿತೆ ।
ಪುತ್ರಸ್ಥಾನೆ ಮಂದ ಚಂದ್ರೌ ಮಾತೃಶಾಪಾತ್ ಸುತಕ್ಷಯಃ ॥೪೭॥

ಯೋಗೈರೆಭಿರ್ಜನೋ ಜ್ಞೇಯಃ ಸಂತಾನರಹಿತೋ ದ್ವಿಜ ।
ತಸ್ಮಾತ್ ತದ್ರಕ್ಷಣೋಪಾಯಂ ಶಾಂತ್ಯಾದಿಕಮಿಹಾಚರೇತ್ ॥೪೮॥

ಸೇತುಸ್ನಾನಂ ಪ್ರಕುರ್ವೀತ ಗಾಯತ್ರಿ ಲಕ್ಷಸಂಖ್ಯಕಾ ।
ಗ್ರಹದಾನಂ ಚ ಕರ್ತವ್ಯಂ ರೌಪ್ಯಮಾತ್ರಂ ಪಯಃ ಪಿಬೇತ್ ॥೪೯॥

ಬ್ರಾಹ್ಮಣಾನ್ ಭೋಜಯೇತದ್ದ ದಶ್ವತ್ಥಸ್ಯ ಪ್ರದಕ್ಷಿಣಾ ।
ಕರ್ತವ್ಯಂ ಭಕ್ತಿಯುಕ್ತೇಗ ಚಾಪಾಧಿಕ ಸಹಸ್ರಕಮ್ ॥೫೦॥

ಏವಂ ಕೃತೇತು ಹೇ ದೇವಿ । ಶಾಪನ್ಮೋಕ್ಷೋ ಭವಿಷ್ಯತೆ ।
ಪುತ್ರಂ ಹಿ ಲಭತೆ ಪಶ್ಚಾದ್ ಬುದ್ಧಿಃ ಸ್ಯಾತ ತಸ್ಯವಂಶಜಾ ॥೫೦॥

(1) ಅಷ್ಟಮೇಶ ಪಂಚಮದಲ್ಲಿ ಪಂಚಮೇಶ ಅಷ್ಟಮದಲ್ಲಿ ಹಾಗೂ ಚಂದ್ರ ಸುಖೇಶ ದುಃಸ್ಥಾನಗಳು (6, 8, 12 ತ್ರಿಕ್).

(2) ಕರ್ಕಲಗ್ನದಲ್ಲಿ ಮಂಗಳ, ರಾಹು ಹಾಗೂ ಚಂದ್ರ, ಶನಿ, ಪಂಚಮದಲ್ಲಿ.

(3) ಲಗ್ನ, ಪಂಚಮ, ಅಷ್ಟಮ ಹಾಗೂ ದ್ವಾದಶದಲ್ಲಿ ಮಂಗಳ, ರಾಹು, ಸೂರ್ಯ ಹಾಗೂ ಶನಿ ಚತುರ್ಥೇಶ ಹಾಗೂ ಲಗ್ನೇಶ ತ್ರಿಕ (6, 8, 12)ರಲ್ಲಿ.

(4) ಗುರು, ಅಷ್ಟಮ, ಮಂಗಳ, ರಾಹುಯುತರಾಗಿದ್ದು ಪಂಚಮದಲ್ಲಿ ಶನಿ, ಚಂದ್ರರಿದ್ದರೆ ಮಾತೃಶಾಪ.

ಈ ಯೋಗಗಳಿಂದ ಮಾನವ ನಿಃಸಂತಾನನಾಗುತ್ತಾನೆ. ಆದಕ್ಕಾಗಿ ಸಂತತಿ ರಕ್ಷಣೆಗಾಗಿ (ಜಪ ಪೂಜೆ ಆದಿ) ಆಚರಿಸುವುದು. ಶಾಂತಿಗಾಗಿ ಸಮುದ್ರ ಸ್ನಾನ, ಲಕ್ಷ ಗಾಯತ್ರಿ ಮಂತ್ರ, ಮನೆ ದಾನ, ಬ್ರಾಹ್ಮಣ ಭೋಜನ, ಅರಳಿ ಮರ 1008 ಭಕ್ತಿಪೂರ್ವಕ ಪ್ರದಕ್ಷಿಣೆ. ಈ ಪ್ರಕಾರ ಶಾಂತಿಯಾಗಿ ಪುತ್ರಸಂತಾನ ವಂಶಾಭಿವೃದ್ಧಿ ಯಾಗುತ್ತದೆ.

ಇದಕ್ಕೂ ಮಾತೃಗಯಾ ಶ್ರಾದ್ಧಾದಿಯೂ ಶಾಂತಿಕಾರಕವೆ.

## ಭ್ರಾತೃಶಾಪ ಸಂತತಿಕ್ಷಯ ಯೋಗ

ಬ್ರುವೀಮಿ ಭ್ರಾತೃಶಾಪೋತ್ಥಯೋಗಾಂಸ್ತೇಥ ದ್ವಿಜೋತ್ತಮ ।
ಯಜ್ಞಾನತೋ ಜನಾಯತ್ನಂ ಕುರ್ಯುಃ ಶಾಪವಿಮುಕ್ತಯೋ ॥೫೨॥

ಭ್ರಾತೃಸ್ಥಾನಾಧಿಪೆ ಪುತ್ರೆ ಕುಜ ರಾಹು ಸಮಾನ್ವಿತೆ ।
ಪುತ್ರ ಲಗ್ನೇಶ್ವರೋ ರಂಧ್ರೆ ಭ್ರಾತೃಶಾಪಾತ್ ಸುತಕ್ಷಯಃ ॥೫೩॥

ಲಗ್ನೆ ಸುತೆ ಕುಜೆ ಮಂದೆ ಭ್ರಾತೃಪೆ ಭಾಗ್ಯರಾಶಿಗೆ ।
ಕಾರಕೆ ನಾಶ ಗೇಹಸ್ಥೆ ಭ್ರಾತೃಶಾಪಾತ್ ಸುತಕ್ಷಯಃ ॥೫೪॥

ಭ್ರಾತೃಸ್ಥಾನೆ ಗುರುರ್ನೀಚೆ ಮಂದಃ ಪಂಚಮಗೆ ಯದಿ ।
ನಾಶಸ್ಥೌ ವಿಧುಭೌಮೌ ಚೇದ್ ಭ್ರಾತೃಶಾಪಾತ್ ಸುತಕ್ಷಯಃ ॥೫೫॥

ಲಗ್ನಸ್ಥಾನಾಧಿಪೆ ರಿಷ್ಫೆ ಭೌಮಃ ಪಂಚಮಗೆ ಯದಿ ।
ಸಪಾಪಸುತಪೆ ರಂಧ್ರೆ ಭ್ರಾತೃಶಾಪಾತ್ ಸುತಕ್ಷಯಃ ॥೫೬॥

ಪಾಪಮಧ್ಯಗತೆ ಲಗ್ನೇ ಸುತಭೆ ಪಾಪಮಧ್ಯಗೆ ।
ಸುತಲಗ್ನಪತಿ ದುಃಸ್ಥೌ ಭ್ರಾತೃಶಾಪಾತ್ ಸುತಕ್ಷಯಃ ॥೫೭॥

ಕರ್ಮೇಶೆ ಭ್ರಾತೃಭಾವಸ್ಥೆ ಪಾಪಯುಕ್ತೆ ತಥಾ ಶುಭೆ ।
ಪುತ್ರಗೆ ಕುಜಸಂಯುಕ್ತೆ ಭ್ರಾತೃಶಾಪಾತ್ ಸುತಕ್ಷಯಃ ॥೫೮॥

ಪುತ್ರಸ್ಥಾನೆ ಬುಧಕ್ಷೇತ್ರೆ ಶನಿ ರಾಹು ಸಮನ್ವಿತೆ ।
ರಿಪ್ಫೆ ವಿದಾರೌ ಚೇತರ್ಹಿ ಭ್ರಾತೃಶಾಪಾತ್ ಸುತಕ್ಷಯಃ ॥೫೯॥

ಲಗ್ನೇಶೆ ಭ್ರಾತೃಭಾವಸ್ಥೆ ಭ್ರಾತೃಸ್ಥಾನಾಧಿಪೆ ಸುತೆ ।
ಲಗ್ನ ಭ್ರಾತೃಸುತೆ ಪಾಪೆ ಭ್ರಾತೃಶಾಪಾತ್ ಸುತಕ್ಷಯಃ ॥೬೦॥

ಭ್ರಾತೃಶೋ ಭ್ರಾತೃಭಾವಸ್ಥೆ ಪುತ್ರಸ್ಥೆ ಕಾರಕೆ ತಥಾ ।
ರಾಹು ಮಂದಯುತೆ ದೃಷ್ಟೆ ಭ್ರಾತೃಶಾಪಾತ್ ಸುತಕ್ಷಯಃ ॥೬೧॥

ನಾಶಸ್ಥಾನಾಧಿಪೆ ಪುತ್ರೆ ಭ್ರಾತೃನಾಥೇನ ಸಂಯುತೆ ।
ರಂಧ್ರೇ ಆರಾಕಿಸಂಯುತೆ ಭ್ರಾತೃಶಾಪಾತ್ ಸುತಕ್ಷಯಃ ॥೬೨॥

**ಪರಾಶರರು ಹೇಳಿದರು:**

ಈಗ ನಾನು ಅಣ್ಣ-ತಮ್ಮರ ಶಾಪೋದ್ಭವ ಯೋಗಗಳನ್ನು ವಿವರಿಸುತ್ತೇನೆ. ಪಾಪ ವಿಮೋಚನೆಗೆ ಯತ್ನ ಮಾಡುವುದು.

(1) ಸಹಜೇಶ (3ನೇ ಅಧಿಪ) ಪಂಚಮ ಭಾವದಲ್ಲಿ ಹಾಗೂ ರಾಹುವಿನ ಜೊತೆಗೆ ಇದ್ದರೆ ಹಾಗೂ ಲಗ್ನೇಶ ಹಾಗೂ ಪಂಚಮೇಶ ಅಷ್ಟಮ ಭಾವದಲ್ಲಿ ಇದ್ದರೆ (ಪಂಚಮೇಶ ರಾಹು, ಮಂಗಳ ಜೊತೆಗೆ ಇದ್ದರೆ ವಿಶೇಷ).

(2) ಲಗ್ನ ಹಾಗೂ ಪಂಚಮದಲ್ಲಿ ಮಂಗಳ, ಶನಿಯಿದ್ದರೆ; ಸಹಜೇಶ ನವಮದಲ್ಲಿ ಭ್ರಾತೃಕಾರಕ ಗ್ರಹ ಅಷ್ಟಮದಲ್ಲಿರಲು.

(3) ನೀಚಸ್ಥ ಗುರು ಸಹಜ ಭಾವದಲ್ಲಿ (ವೃಶ್ಚಿಕ ಲಗ್ನ) ಶನಿ ಪಂಚಮದಲ್ಲಿ ಚಂದ್ರ, ಮಂಗಳ ಅಷ್ಟಮದಲ್ಲಿ.

(4) ಲಗ್ನೇಶ ವ್ಯಯ ಭಾವದಲ್ಲಿ ಮಂಗಳ ಪಂಚಮ ಭಾವದಲ್ಲಿ ಸಪಾಪ ಪಂಚಮೇಶ ಅಷ್ಟಮದಲ್ಲಿದ್ದರೆ.

(5) ಲಗ್ನ ಹಾಗೂ ಪಂಚಮ ಎರಡೂ ಪಾಪ ಮಧ್ಯದಲ್ಲಿ ತ್ರಿಕ್ (6, 8,

12)ರಲ್ಲಿದ್ದರೆ.

(6) ಸಪಾಪ ದಶಮೇಶ ಸಹಜದಲ್ಲಿ ಸಭೌಮ ಶುಭಗ್ರಹ ಪಂಚಮದಲ್ಲಿ.

(7) ಕನ್ಯಾ, ಮಿಥುನ ಪಂಚಮದಲ್ಲಿ ಒಂದು ಶನಿ, ರಾಹು ದ್ವಾದಶದಲ್ಲಿ ಬುಧ, ಮಂಗಳರಿದ್ದರೆ.

(8) ಲಗ್ನೇಶ ಸಹಜದಲ್ಲಿ ಸಹಜೇಶ ಪಂಚಮದಲ್ಲಿ ಲಗ್ನ ಸಹಜ ಪಂಚಮ ಸಪಾಪವಾಗಿದ್ದರೆ.

(9) ಸಹಜೇಶ ಅಷ್ಟಮದಲ್ಲಿ ಪುತ್ರಕಾರಕ ಗ್ರಹ ಪಂಚಮದಲ್ಲಿ ಶನಿ, ರಾಹುಯುಕ್ತ ಅಥವಾ ದೃಷ್ಟನಾಗಿದ್ದರೆ.

(10) ಅಷ್ಟಮೇಶ ಪಂಚಮದಲ್ಲಿ ಸಹಜೇಶನ ಜೊತೆಗೆ ಅಷ್ಟಮ ಭಾವದಲ್ಲಿ ಶನಿ, ಮಂಗಳರು ಇದ್ದರೆ.

ಮೇಲಿನ ಈ ಯೋಗದಲ್ಲಿ ಅಣ್ಣ ಅಥವಾ ತಮ್ಮರ ಶಾಪದಿಂದ ಸುತಕ್ಷಯ ಅಥವಾ ಸುತರಾಹಿತ್ಯ ಉಂಟಾಗುತ್ತದೆ.

## ಶಾಪ ವಿಮೋಚನೆ

ಭ್ರಾತೃಶಾಪ ವಿಮೋಚಾರ್ಥ ವಿಷ್ಣು ಕೀರ್ತನಮಾದಿಶೇತ್ ।
ಚಾಂದ್ರಾಯಣಂ ಚರೇತ್ ಪಶ್ಚಾತ್ ಕಾವೇರ್ಯಾ ವಿಷ್ಣು ಸನ್ನಧೌ ॥೬೩॥

ಅಶ್ವತ್ಥಸ್ಥಾಪನಂ ಕಾರ್ಯಂ ದಶಧೇನುಃ ಪ್ರದಾಪಯೇತ್ ।
ಪ್ರಾಜಾಪತ್ಯಂ ಚರೇದ್ ವಾಪಿ ಭೂಮಿಂ ದದ್ಯಾತ್ ಫಲಾನ್ವಿತಾಮ್ ॥೬೪॥

ಏವಂ ಯಃ ಕುರುತೆ ಭಕ್ತ್ಯಾ ಪುತ್ರವೃದ್ಧಿಃ ಪ್ರಜಾಯತೆ ।

ಅಣ್ಣ-ತಮ್ಮರ ಶಾಪ ಮುಕ್ತಿಗಾಗಿ ವಿಷ್ಣುಕೀರ್ತನ (ವಿಷ್ಣು ಸಹಸ್ರನಾಮ ಪದ್ಧತಿಯಂತೆ) ಕಾವೇರಿ ನದಿ ದಡದಲ್ಲಿ ವಿಷ್ಣುಕ್ಷೇತ್ರ ನಿಕಟ ಚಾಂದ್ರಾಯಣ ವ್ರತ ಅಶ್ವತ್ಥ ವೃಕ್ಷಾರೋಹಣ ಸ್ಥಾಪನ (ಉಪನಯನ, ಮದುವೆ) 10 ಆಕಳ ದಾನ ಅವಶ್ಯಕ. ಪ್ರಜಾಪತ್ಯ ವ್ರತ – ಫಲಯುಕ್ತ ಭೂಮಿ ದಾನ (ಬಂಜರು ಭೂಮಿಯಲ್ಲ) ಈ ಪ್ರಕಾರ ಭಕ್ತಿಪೂರ್ವಕ ಆಚರಣೆಯಿಂದ ಪುತ್ರ ವೃದ್ಧಿಯಾಗುತ್ತದೆ. ಇದರಲ್ಲಿ ಯಾವುದೇ ಒಂದು ವ್ರತ ಮಾಡಿದರೂ ಸಾಕು.

### ಮಾತುಲ ಶಾಪ–ಸಂತತಿಕ್ಷಯಃ

ಪುತ್ರಸ್ಥಾನೆ ಬುಧೆ ಜೀವೆ ಕುಜರಾಹುಸಮನ್ವಿತೆ ।
ಲಗ್ನೆ ಮಂದೆ ಮಾತುಲಸ್ಯ ಶಾಪಾತ್ ಸ್ಯಾತ್ ಸಂತತಿಕ್ಷಯಃ ॥೬೫॥

ಲಗ್ನ ಪುತ್ರೇಶ್ವರೌ ಪುತ್ರೆ ಮಂದಜ್ಞ ಕುಜ ಸಂಯುತೆ ।
ವೇದ್ಯೋ ಮಾತುಲ ಶಾಪತ್ವಾನ್ನರಾಣಾಂ ಸಂತತೇಃ ಕ್ಷಯಃ ॥೬೬॥

ಲುಪ್ತೆ ಪುತ್ರಾಧಿಪೆ ಲಗ್ನೆ ಸಪ್ತಮೇ ಭಾನುನಂದನೆ ।
ಲಗ್ನೇಶೆ ಬುಧ ಸಂಯುಕ್ತೆ ಸ್ಯಾತ್ತದಾಪಿ ಸುತಕ್ಷಯಃ ॥೬೭॥

ಜ್ಞಾತಸ್ಥಾನಾಧಿಪೆ ಲಗ್ನೆ ವ್ಯಯೇಶೇನ ಸಮನ್ವಿತೆ ।
ಶಶಿಸೌಮ್ಯಕುಜೆ ಪುತ್ರೆ ತತ್ರಾಪಿ ಸ್ಯಾತ್ ಸುತಕ್ಷಯಃ ॥೬೮॥

ಮಾಮನ ಶಾಪ (ತಾಯಿಯ ಅಣ್ಣ, ತಮ್ಮ).

(1) ಮಂಗಳ ರಾಹುವಿನ ಜೊತೆ ಪಂಚಮದಲ್ಲಿ ಬುಧ ಅಥವಾ ಗುರು ಲಗ್ನದಲ್ಲಿ ಶನಿಯಿದ್ದರೆ.

(2) ಲಗ್ನೇಶ ಹಾಗೂ ಪಂಚಮೇಶ ಶನಿ, ಬು, ಮಂಗಳರ ಜೊತೆ ಪಂಚಮದಲ್ಲಿ.

(3) ಪಂಚಮೇಶ ಅಸ್ತಂಗತನಾಗಿ ಲಗ್ನದಲ್ಲಿ ಸಪ್ತಮದಲ್ಲಿ ಶನಿ ಹಾಗೂ ಲಗ್ನೇಶ ಹಾಗೂ ಬುಧರ ಸಂಯೋಗ.

(4) ನಾಲ್ಕನೇ ಸ್ಥಾನದ ಅಧಿಪ ಲಗ್ನದಲ್ಲಿ ವ್ಯಯೇಶನ ಜೊತೆಗೆ ಚಂದ್ರ, ಬುಧ ಹಾಗೂ ಭೌಮ ಪಂಚಮದಲ್ಲಿ ಮೇಲಿನ ಎಲ್ಲ ಯೋಗಗಳಲ್ಲಿ ಮಾವನ ಶಾಪದಿಂದ ಸುತಕ್ಷಯ.

## ತದ್ದೋಶ ಶಾಂತಿ

ತದ್ದೋಷ ಪರಿಹಾರಾರ್ಥ ವಿಷ್ಣುಸ್ಥಾಪನ ಮಾದಿಶೇತ್ ।
ವಾಪಿ ಕೂಪ ತಡಾಗಾದಿ ನಿರ್ಮಾಣಾಂ ಸೇತು ಬಂಧನಮ್ ॥೬೯॥

ಪುತ್ರ ವೃದ್ಧಿರ್ಭವೇತ್ತಸ್ಯ ಸಂಪದ್‌ವೃದ್ಧಿಶ್ಚ ಜಾಯತೆ ।
ಏವಂ ಯೋಗಾನುಸಾರೇಣ ಫಲಂ ಭ್ರೂಯಾವ್ ವಿಚಕ್ಷಣಃ ॥೭೦॥

ಮಾಮನ ದೋಷ (ಶಾಪ) ಪರಿಹಾರವಾಗಿ ವಿಷ್ಣು ಪ್ರತಿಮಾ ಸ್ಥಾಪನ, ಕೆರೆ, ಬಾವಿ, ಸರೋವರಾದಿ ನಿರ್ಮಾಣ – ಒಡ್ಡು ಹಾಕಿಸುವುದು ಇತ್ಯಾದಿ ಧರ್ಮ ಕೃತ್ಯ

ಮಾಡುವುದರಿಂದ ಪುತ್ರ ವೃದ್ಧಿ, ಸಂಪತ್ತು ವೃದ್ಧಿಯೂ ಆಗುತ್ತದೆ. ಮೇಲೆ ಹೇಳಿದ ಯೋಗಗಳಿದ್ದು ಸಂತತಿ ಇಲ್ಲದಾಗ ಈ ಕಾರ್ಯ ಕೈಗೊಳ್ಳುವುದು.

## ಬ್ರಹ್ಮಶಾಪ—ಯೋಗ

ಬಲಸಂಪತ್ತಿಗರ್ವೇಣಯೋ ವಿಪ್ರಾನವಮನ್ಯತೆ ।
ತದ್ದೋಷಾದ್ ಬ್ರಹ್ಮಶಾಪಾಶ್ಚ ಸಂತತೆ ಸ್ತಸ್ಯ ಸುತಕ್ಷಯಃ ॥೭೧॥

ಗುರುಕ್ಷೇತ್ರೆ ಯದಾರಾಹುಃ ಪುತ್ರೆ ಜೀವಾರಭಾನುಜಃ ।
ಧರ್ಮಸ್ಥಾನಾಧಿಪೆ ನಾಶೆ ಬ್ರಹ್ಮಶಾಪಾತ್ ಸುತಕ್ಷಯಃ ॥೭೨॥

ಧರ್ಮೇಶೆ ಪುತ್ರ ಭಾವಸ್ಥೆ ಪುತ್ರೇಶೆ ನಾಶರಾಶಿಗೆ ।
ಜೀವಾರರಾಹುಸಹಿತೆ ಬ್ರಹ್ಮಶಾಪಾತ್ ಸುತಕ್ಷಯಃ ॥೭೩॥

ಧರ್ಮಾಧಿಪೆ ನೀಚಗತೆ ವ್ಯಯೇಶೆ ಪುತ್ರಗೇಹಗೆ ।
ರಾಹುಯುಕ್ತೇಕ್ಷಿತೆ ವಾಪಿ ಬ್ರಹ್ಮಶಾಪಾತ್ ಸುತಕ್ಷಯಃ ॥೭೪॥

ಜೀವೆ ನೀಚಗತೆ ರಾಹೌ ಲಗ್ನೆ ವಾ ಪುತ್ರರಾಶಿಗೆ ।
ಪುತ್ರ ಸ್ಥಾನಾಧಿಪೆ ದುಃಸ್ಥೆ ಬ್ರಹ್ಮಶಾಪಾತ್ ಸುತಕ್ಷಯಃ ॥೭೫॥

ಪುತ್ರಸ್ಥಾನಾಧಿಪೆ ಜೀವೆ ರಂಧ್ರೆ ಪಾಪಸಮನ್ವಿತೆ ।
ಸೇಂದುರ್ಕೆ ಪಂಚಮೇಶೆ ವಾ ಬ್ರಹ್ಮಶಾಪಾತ್ ಸುತಕ್ಷಯಃ ॥೭೬॥

ಮಂದಾಂಶೆ ಮಂದಸಂಯುಕ್ತೆ ಜೀವೆ ಭೌಮಸಮನ್ವಿತೆ ।
ಪುತ್ರೇಶೆ ವ್ಯಯರಾಶಿಸ್ಥೆ ಬ್ರಹ್ಮಶಾಪಾತ್ ಸುತಕ್ಷಯಃ ॥೭೭॥

ಲಗ್ನೇ ಗುರೌ ಮಂದಿಯುತೆ ಭಾಗ್ಯೆ ರಾಹೌ ಸ್ಥಿತೆ ಸತಿ ।
ಜೀವಾನ್ವಿತೆ ವ್ಯಯೋ ವಾಪಿ ಬ್ರಹ್ಮಶಾಪಾತ್ ಸುತಕ್ಷಯಃ ॥೭೮॥

ಯಾವ ವ್ಯಕ್ತಿಯೇ ಆಗಲಿ ಬಲ ಸಂಪತ್ತಿನ ಗರ್ವದಿಂದ ಬ್ರಾಹ್ಮಣರ ಅವಮಾನ ಮಾಡುವರೋ ಆ ದೋಷಾರ್ಥ ಬ್ರಹ್ಮ ಶಾಪದಿಂದ ಸಂತತಿ ವಿನಾಶವಾಗುತ್ತವೆ.

(1) ಗುರು ಕ್ಷೇತ್ರ (ಧನು, ಮೀನದಲ್ಲಿ) ರಾಹುಯಿದ್ದು ಪಂಚಮದಲ್ಲಿ ಗುರು, ಮಂಗಳ, ಶನಿಗಳು ಧರ್ಮೇಶ (9) ಅಷ್ಟಮದಲ್ಲಿದ್ದರೆ.

(2) ಧರ್ಮೇಶ ಪಂಚಮದಲ್ಲಿ ಪಂಚಮೇಶ ಅಷ್ಟಮದಲ್ಲಿ ಗುರು ಭೌಮ ರಾಹುಯುಕ್ತರಾಗಿದ್ದರೆ.

(3) ಧರ್ಮೇಶ ತನ್ನ ನೀಚದಲ್ಲಿ ಹಾಗೂ ವ್ಯಯೇಶ ಪಂಚಮದಲ್ಲಿ ರಾಹುಯುಕ್ತ ಅಥವಾ ದೃಷ್ಟನಾಗಿದ್ದರೆ.

(4) ಗುರು ನೀಚ ರಾಶಿಗತ, ರಾಹು ಲಗ್ನ ಅಥವಾ ಪಂಚಮದಲ್ಲಿ ಪಂಚಮೇಶ ತ್ರಿಕ್(6, 8, 12)ದಲ್ಲಿ

(5) ಪಂಚಮೇಶ ಗುರು ಅಷ್ಟಮದಲ್ಲಿ ಪಾಪಯುಕ್ತ ಹಾಗೂ ಪಂಚಮೇಶ ಅಷ್ಟಮದಲ್ಲಿ ಸೂರ್ಯ, ಚಂದ್ರ ಸಹಿತನಾಗಿದ್ದರೆ

(6) ಶನಿ ನವಾಂಶಗತ ಗುರು, ಶನಿ, ಮಂಗಳರ ಜೊತೆ ಹಾಗೂ ಪಂಚಮೇಶ ವ್ಯಯ ರಾಶಿಯಲ್ಲಿ

(7) ಲಗ್ನಸ್ಥ ಗುರು, ಶನಿಯುಕ್ತ ನವಮದಲ್ಲಿ ರಾಹು ಅಥವಾ ಸರಾಹು ಗುರು ವ್ಯಯ ಭಾವದಲ್ಲಿ.

ಈ ಮೇಲಿನ ಎಲ್ಲ ಯೋಗಗಳಲ್ಲಿ ಬ್ರಹ್ಮ ಶಾಪದಿಂದ ಸಂತತಿ ಕ್ಷಯ ಹಾಗೂ ನಿಃಸಂತಾನಯೋಗ.

## ಶಾಂತಿ

ತಸ್ಯದೋಷಸ್ಯ ಶಾಂತ್ಯರ್ಥ ಕೃಯಾಚ್ಚಾಂದ್ರಯಣಾ ನರಃ ।
ಬ್ರಹ್ಮಕೃಚ್ಛ್ರತ್ರಯಂ ಕೃತ್ವಾ ಧೇನುಂ ದದ್ಯಾತ್ ಸದಕ್ಷಿಣಾಮ್ ॥೭೯॥

ಪಂಚರತ್ನಾನಿ ದೇಯಾನಿ ಸುವರ್ಣಾನ್ವಿತಾನಿ ವೈ ।
ಅನ್ನದಾನಂ ಬ್ರಾಹ್ಮಣಾನಾಂ ಭೋಜನಂ ಚಾಪಿ ಕಾರಯೇತ್ ॥೮೦॥

ಏವಂ ಕೃತೆ ತು ಸತ್ಪುತ್ರವಮ್ ಲಭತೆ ನಾತ್ರ ಸಂಶಯಃ ।
ಮುಕ್ತಶಾಪೋ ವಿಶುದ್ಧಾತ್ಮಾಸ ಪುಮಾನ್ ಸುಖಮೇಧತೆ ॥೮೧॥

ಬ್ರಹ್ಮಶಾಪ ವಿಮೋಚನಕ್ಕೆ ಶಾಂತಿಗಾಗಿ ಚಾಂದ್ರಾಯಣ ವ್ರತ 3 ಬ್ರಹ್ಮಕೃಚ್ಛ್ರ (ಪ್ರಾಯಶ್ಚಿತ್ತಕ್ಕಾಗಿ) ಮಾಡಿ ಸುವರ್ಣಸಹಿತ ಪಂಚರತ್ನ ದಾನ ಮಾಡಬೇಕು. ಅನಂತರ ಅನ್ನದಾನ ಬ್ರಾಹ್ಮಣ ಭೋಜನಾದಿ ಮಾಡಿಸುವುದು. ಈ ಪ್ರಕಾರ ಮುಕ್ತಿ ಶಾಪಾನುಶುದ್ಧಾತ್ಮ ಆಗಿ ನಿಃಸಂದೇಹ ಸುಪುತ್ರ ಪ್ರಾಪ್ತಿ ಹಾಗೂ ಸುಖ ಸಮೃದ್ಧಿಯಾಗುತ್ತದೆ.

## ಪತ್ನಿಶಾಪ (ಪೂರ್ವಜನ್ಮ)

ದಾರೇಶೆ ಪುತ್ರಭಾವಸ್ಥೆ ದಾರೇಶಸ್ಯಾಂಶಪೆ ಶನೌ ।
ಪುತ್ರೇಶೆ ನಾಶರಾಶಿಸ್ಥೆ ಪತ್ನಿ ಶಾಪಾತ್ ಸುತಕ್ಷಯಃ ॥೮೨॥

ನಾಶಸಂಸ್ಥೆ ಕಲತ್ರೇಶೆ ನಾಶೇಶೆ ಪುತ್ರಭಾವಗೆ ।
ಕಾರಕೆ ಪಾಪಸಂಯುಕ್ತೆ ಪತ್ನಿ ಶಾಪಾತ್ ಸುತಕ್ಷಯಃ ॥೮೩॥

ಪುತ್ರಸ್ಥಾನಗತೆ ಶುಕ್ರೆ ಕಾಮಪೆ ರಂಧ್ರ ಮಾಶ್ರೀತೆ ।
ಕಾರಕೆ ಪಾಪಸಂಯುಕ್ತೆ ಪತ್ನಿ ಶಾಪಾತ್ ಸುತಕ್ಷಯಃ ॥೮೪॥

ಕುಟುಂಬೆ ಪಾಪಸಹಿತೆ ಕಾಮೇಶೆ ನಾಶರಾಶಿಗೆ ।
ಪುತ್ರೆ ಪಾಪಗ್ರಹೈರ್ಯುಕ್ತೆ ಪತ್ನಿಶಾಪಾತ್ ಸುತಕ್ಷಯಃ ॥೮೫॥

ಭಾಗ್ಯಸ್ಥಾನಗತೆ ಶುಕ್ರೆ ದಾರೇಶೆ ನಾಶರಾಶಿಗೆ ।
ಲಗ್ನೆ ಸಪಾಪೆ ಪುತ್ರೆ ಚ ಪತ್ನಶಾಪಾತ್ ಸುತಕ್ಷಯಃ ॥೮೬॥

ಭಾಗ್ಯಸ್ಥಾನಾಧಿಪೆ ಶುಕ್ರೆ ಪುತ್ರೇಶೆ ಶತ್ರುರಾಶಿಗೆ ।
ಗುರು ಲಗ್ನೇಶ ದಾರೇಶಾ ದುಃಸ್ಥಾಯದಿ ಸುತಕ್ಷಯಃ ॥೮೭॥

ಪತ್ನಿ ಶಾಪದಿಂದ ಸುತಕ್ಷಯ ಯೋಗಗಳು–

(1) ಸಪ್ತಮೇಶನು ಪಂಚಮದಲ್ಲಿ, ಶನಿ ಸಪ್ತಮೇಶನ ನವಾಂಶದಲ್ಲಿ, ಪಂಚಮೇಶ ಅಷ್ಟಮದಲ್ಲಿ

(2) ಸಪ್ತಮೇಶ ಅಷ್ಟಮದಲ್ಲಿ, ಪಂಚಮದಲ್ಲಿ ಪುತ್ರಕಾರಕ ಗ್ರಹ ಸಪಾಪಯುತ.

(3) ಶುಕ್ರ ಪಂಚಮದಲ್ಲಿ ಸಪ್ತಮೇಶ ಅಷ್ಟಮದಲ್ಲಿ ಅಷ್ಟಮೇಶ ಸಪ್ತಮದಲ್ಲಿ ಪುತ್ರಕಾರಕ ಗ್ರಹ ಸಪಾಪ.

(4) ಕುಟುಂಬ ಸ್ಥಾನ (2) ಸಪಾಪ ಸಪ್ತಮೇಶ ಅಷ್ಟಮದಲ್ಲಿ ಪಂಚಮಭಾವ ಪಾಪಗ್ರಹಯುಕ್ತ.

(5) ಶುಕ್ರ ಭಾಗ್ಯ ಸ್ಥಾನಗತ ಪಂಚಮೇಶ ಶತ್ರು ರಾಶಿಗತ ಹಾಗೂ ಗುರು ಲಗ್ನೇಶ ಹಾಗೂ ಸಪ್ತಮೇಶ ದುಃಸ್ಥಾನ (6, 8, 12)ರಲ್ಲಿ ಈ ರೀತಿ ಯೋಗಗಳಲ್ಲಿ ಪತ್ನಿ ಶಾಪದಿಂದ ಪುತ್ರಾಭಾವ ಹೇಳುವುದು.

### ಅದರಂತೆ

ಪುತ್ರಸ್ಥಾನೆ ಭೃಗುಕ್ಷೇತ್ರೆ ರಾಹುಚಂದ್ರಸಮನ್ವಿತೆ ।
ವ್ಯಯೋ ಲಗ್ನೆ ಧನೆ ಪಾಪೆ ಸ್ತ್ರೀಶಾಪಾತ್ ಸಂತತಿಕ್ಷಯಃ ॥೮೮॥

ಸಪ್ತಮೆ ಮಂದಶುಕ್ರೌ ಚ ರಂಧ್ರೇಶೆ ಪುತ್ರಭೆ ರವೌ ।
ಲಗ್ನೆ ಚ ರಾಹುಣಾ ಯುಕ್ತೆ ಪತ್ನಿಶಾಪಾತ್ ಸುತಕ್ಷಯಃ ॥೮೯॥

ಧನೆ ಕುಜೆ ವ್ಯೋ ಜೀವೆ ಪುತ್ರಸ್ಥೆ ಭೃಗು ನಂದನೆ ।
ರಾಹುಮಂದೇಕ್ಷಿತಯುತೆ ಪತ್ನಿ ಶಾಪಾತ್ ಸುತಕ್ಷಯಃ ॥೯೦॥

ನಾಶಸ್ಥೌ ವಿತ್ತದಾರೇಶೌ ಪುತ್ರೆ ಲಗ್ನೆ ಕುಜೆ ಶನೌ ।
ಕಾಮುಕೆ ಪಾಪ ಸಂಯುಕ್ತೆ ಪತ್ನಿಶಾಪಾತ್ ಸುತಕ್ಷಯಃ ॥೯೧॥

ಲಗ್ನಪಂಚಮ ಭಾಗ್ಯಸ್ಥಾ ರಾಹುಮಂದ ಕುಜಾಃ ಕ್ರಮಾತ್ ।
ರಂಧ್ರಸ್ಥೌ ಪುತ್ರದಾರೇಶಾ ಪತ್ನಿಶಾಪಾತ್ ಸುತಕ್ಷಯಃ ॥೯೨॥

(1)ರಾಹು, ಚಂದ್ರಯುಕ್ತನಾಗಿ ಶುಕ್ರಕ್ಷೇತ್ರ (ವೃಷಭ, ತುಲಾ) ಪಂಚಮದಲ್ಲಿದ್ದರೆ ಅದರಂತೆ ಲಗ್ನ ಹಾಗೂ ಧನಭಾವ ಪಾಪಗ್ರಹಯುಕ್ತವಾಗಿದ್ದರೆ

(2) ಸಪ್ತಮದಲ್ಲಿ ಶನಿ, ಶುಕ್ರ, ಅಷ್ಟಮೇಶ ಪಂಚಮದಲ್ಲಿ ಸೂರ್ಯ, ಲಗ್ನದಲ್ಲಿ ಸರಾಹುಯಿದ್ದರೆ

(3) ಧನ ಭಾವದಲ್ಲಿ ಮಂಗಳ ವ್ಯಯದಲ್ಲಿ ಗುರು ಹಾಗೂ ಪಂಚಮದಲ್ಲಿ ಶುಕ್ರ, ಶನಿ, ರಾಹುಯುತ ಅಥವಾ ದೃಷ್ಟರಾಗಿದ್ದರೆ

(4) ಧನೇಶ, ಸಪ್ತಮೇಶ ಅಷ್ಟಮಸ್ತರಾಗಿ ಪಂಚಮೇಶ ಲಗ್ನದಲ್ಲಿ, ಪಂಚಮದಲ್ಲಿ ಶನಿ, ಮಂಗಳ ಪುತ್ರಕಾರಕ ಗ್ರಹ ಪಾಪಯುಕ್ತವಾಗಿದ್ದರೆ, ಲಗ್ನ ಪಂಚಮ ಹಾಗೂ ಭಾಗ್ಯ ಭಾವದಲ್ಲಿ ಕ್ರಮಶಃ ರಾಹು, ಶನಿ ಭೌಮರಿದ್ದರೆ ಹಾಗೂ ಪಂಚಮೇಶ ಅಷ್ಟಮಸ್ತನಾಗಿದ್ದರೆ ಹಾಗೂ ಸಪ್ತಮೇಶನು ಅಷ್ಟಮಸ್ತನಾಗಿದ್ದರೆ.

ಈ ಎಲ್ಲ ಯೋಗಗಳಲ್ಲಿ ಪತ್ನಿ ಶಾಪದಿಂದ ಪೂರ್ವಜನ್ಮದ ಶಾಪಾನುಗುಣವಾಗಿ ಸಂತಾನ ಹೀನತೆ (ಇದನ್ನು ಪುರುಷ ಕುಂಡಲಿಯಿಂದ ನೋಡಿ ದೃಢೀಕರಿಸುವುದು).

## ಶಾಪ ವಿಮೋಚನೆಗಾಗಿ

ಕನ್ಯಾದಾನಂ ಪ್ರಕುರ್ವಿತ ಶಾಪಮೋಚನಹೇತವೆ ।
ದದ್ಯಾತ್ ಸ್ವರ್ಣಮಯಿ ಮೂರ್ತಿ ಲಕ್ಷ್ಮಿ ನಾರಾಯಣಸ್ಯವಾ ॥೯೩॥

ದಶಧೇನು ಭೂಷಣಾ ಚ ಶಯ್ಯಾಂ ವಾಸೋದ್ವಿಜನ್ಮನಾವ್ ।
ದಂಪತ್ಯೆ ದಾಪಯೇದ್ ವಿಜ್ಞಃ ಸೌಭಾಗ್ಯಸತಲಬ್ಧಯೇ ॥೯೪॥

ಶಾಪವಿಮೋಚನೆಗೆ ಕನ್ಯಾದಾನ (ಕೇವಲ ಪುತ್ರನಾಗಿರದಿದ್ದರೆ) ಅಥವಾ ಲಕ್ಷ್ಮಿ ನಾರಾಯಣ ಸುವರ್ಣ ಪ್ರತಿಮೆ ದಾನ ಜೊತೆಗೆ ದ್ವಿಜ ದಂಪತಿಗಳಿಗೆ 10 ಆಕಳು ಭೂಷಣ, ಹಾಸಿಗೆ ಹಾಗೂ ವಸ್ತ್ರ ದಾನ ಮಾಡುವುದು. ಆದರಿಂದ ಸೌಭಾಗ್ಯ ಹಾಗೂ ಪುತ್ರೋತ್ಸವ ಸಂತಸ ಉಂಟಾಗುವುದು.

## ಪ್ರೇತಶಾಪ

ಪುತ್ರಸ್ಥಿತೌ ಮಂದಸೂರ್ಯೌ ಕ್ಷೀಣ ಚಂದ್ರಸ್ಯ ಸಪ್ತಮೆ ।
ಲಗ್ನೆ ವ್ಯಯೋ ರಾಹು ಜೀವೌ ಪ್ರೇತ ಶಾಪಾತ್ ಸುತಕ್ಷಯಃ ॥೯೫॥

ಪುತ್ರಸ್ಥಾನಾಧಿಪೆ ಮಂದೆ ನಾಶಸ್ಥೆ ಲಗ್ನಗೆ ಕುಜೆ ।
ಕಾರಕೆ ನಾಶಗ್ರಹಗೆ ಪ್ರೇತಶಾಪಾತ್ ಸುತಕ್ಷಯಃ ॥೯೬॥

ಲಗ್ನೆಪಾಪೆ ವ್ಯಯೋ ಭಾನೌ ಸುತೆ ಚಾರಾರ್ಕಿಸೋಮಜಃ ।
ಪುತ್ರೇಶೆ ರಂಧ್ರಭಾವಸ್ಥೆ ಪ್ರೇತಶಾಪಾತ ಸುತಕ್ಷಯಃ ॥೯೭॥

ಲಗ್ನೆ ರಾಹು ಸಮಾಯುಕ್ತೆ ಪುತ್ರಸ್ಥೆ ಭಾನುನಂದನೆ ।
ಜೀವೋಪ್ಯಷ್ಟಮ ಭಾವಸ್ಥೆ ಪ್ರೇತಶಾಪಾತ್ ಸುತಕ್ಷಯಃ ॥೯೮॥

ಲಗ್ನೆ ರಾಹೌ ಸಶುಕ್ರೆಜ್ಯೆ ಚಂದ್ರೆ ಮಂದಯುತೆ ತಥಾ ।
ಲಗ್ನೇಶೆ ಮೃತ್ಯು ರಾಶಿಸ್ಥೆ ಪ್ರೇತಶಾಪಾತ ಸುತಕ್ಷಯಃ ॥೯೯॥

ಕಾರಕೆ ನೀಚರಾಶಿಸ್ಥೆ ಸುತಾಧೀಶೇಪಿ ನೀಚಗೆ
ಖೇಟೈರ್ನೀಚಗತೆರ್ದೃಷ್ಟೆ ಪ್ರೇತಶಾಪಾತ್ ಸುತಕ್ಷಯಃ ॥೧೦೦॥

ಲಗ್ನೆ ಮಂದ ಸುತೆ ರಾಹೌ ರಂಧ್ರೆ ಭಾನು ಸಮನ್ವಿತೆ ।
ವ್ಯಯೋ ಭೌಮಸಮಾಯುಕ್ತೆ ಪ್ರೇತಶಾಪಾತ್ ಸುತಕ್ಷಯಃ ॥೧೦೦॥

ಕಾಮಸ್ಥಾನಾಧಿಪೆ ದುಃಸ್ಥೆ ಪುತ್ರೆ ಚಂದ್ರ ಸಮನ್ವಿತೆ।
ಮಂದಮಾಂದಿಯುತೆ ಲಗ್ನೆ ಪ್ರೇತಶಾಪಾತ್ ಸುತಕ್ಷಯಃ ॥೧೦೨॥

ವಧಸ್ಥಾನಾಧಿಪೆ ಪುತ್ರೆ ಶನಿ ಶುಕ್ರ ಸಮನ್ವಿತೆ।
ಕಾರಕೆ ನಾಶರಾಶಿಸ್ಥೆ ಪ್ರೇತಶಾಪಾತ್ ಸುತಕ್ಷಯಃ ॥೧೦೩॥

(1) ಪಂಚಮದಲ್ಲಿ ಶನಿ, ಸೂರ್ಯ, ಸಪ್ತಮದಲ್ಲಿ ಕ್ಷೀಣ ಚಂದ್ರ ಲಗ್ನ ದ್ವಾದಶದಲ್ಲಿ ಕ್ರಮವಾಗಿ ರಾಹು, ಗುರು ಇದ್ದರೆ (2) ಪಂಚವೇಶ ಶನಿಯಾಗಿ (ಕನ್ಯಾ ತುಲಾ ಲಗ್ನ) ಅಷ್ಟಮದಲ್ಲಿ ಮಂಗಳ ಲಗ್ನದಲ್ಲಿ, ಪುತ್ರ ಕಾರಕ ಗ್ರಹ ಅಷ್ಟಮದಲ್ಲಿ (3) ಲಗ್ನ ಸಪಾಪ, ದ್ವಾದಶದಲ್ಲಿ ಸೂರ್ಯ ಪಂಚಮದಲ್ಲಿ ಮಂಗಳ ಶನಿ ಹಾಗೂ ಬುಧ-ಹಾಗೂ ಪಂಚವೇಶ ಅಷ್ಟಮದಲ್ಲಿ (4) ಲಗ್ನ ರಾಹುಯುಕ್ತ ಪಂಚಮದಲ್ಲಿ ಶನಿ ಗುರು ಅಷ್ಟಮದಲ್ಲಿ (5) ಶುಕ್ರ ಅಥವಾ ಗುರು ಸಹಿತ ರಾಹು ಲಗ್ನದಲ್ಲಿ ಶನಿ ಚಂದ್ರಯೋಗ ಲಗ್ನೇಶ ಅಷ್ಟಮದಲ್ಲಿ (6) ಪುತ್ರಕಾರಕ ಗ್ರಹ ಹಾಗೂ ಪಂಚವೇಶ ನೀಚದಲ್ಲಿದ್ದು ನೀಚ ಗ್ರಹಗಳ ದೃಷ್ಟಿಯಿದ್ದರೆ (7) ಲಗ್ನದಲ್ಲಿ ಶನಿ ಪಂಚಮದಲ್ಲಿ ರಾಹು ಅಷ್ಟಮದಲ್ಲಿ ಸೂರ್ಯ ದ್ವಾದಶದಲ್ಲಿ ಮಂಗಳರಿದ್ದರೆ (8) ಸಪ್ತಮೇಶ ತ್ರಿಕಸ್ತ (6, 8, 12) ಸಪ್ತಮಭಾವ ಸಚಂದ್ರವಾಗಿ ಲಗ್ನ ಶನಿ ಹಾಗೂ ಗುಳಿಕಯುಕ್ತ ವಾಗಿದ್ದರೆ (9) ಶನಿ, ಶುಕ್ರಯುಕ್ತ ಅಷ್ಟಮೇಶ ಪಂಚಮದಲ್ಲಿ ಪುತ್ರಕಾರಕ ಗ್ರಹ ಅಷ್ಟಮಗತವಾಗಿದ್ದರೆ.

ಈ ಮೇಲಿನ ಯೋಗಗಳಲ್ಲಿ ಪ್ರೇತಶಾಪದಿಂದ ನಿಃಸಂತಾನ (ಪ್ರೇತ-ದುರ್ ಮರಣಾದಿಗಳಿಂದ ನಿಧನರಾದವರು).

## ಪ್ರೇತ ಶಾಪ ವಿಮೋಚನೆ

ಶಾಂತ್ಯೈತಸ್ಯತು ದೋಷಸ್ಯ ಗಯಾಯಾಂಶ್ರಾದ್ಧಮಾದಿಶೇತ್ ।
ರುದ್ರಾಭಿಷೇಕವಮ್ಥವಾ ಬ್ರಹ್ಮ ಮೂರ್ತಿ ಪ್ರದಾಪಯೇತ್ ॥೧೦೪॥

ಧೇನುಂ ರಜತಪಾತ್ರಂ ಚ ಮಣಿ ನೀಲಮಥಾಪಿವೈ ।
ಬ್ರಾಹ್ಮಣಾನಾಂ ಭೋಜನಂ ಚ ದಕ್ಷಿಣಾದಾನ ಪೂರ್ವಕವಮ್ ॥೧೦೫॥

ಕಾರಯೇ ದೇವಭಿತಃ ಶಾಪಮೋಕ್ಷಃ ಪ್ರಜಾಯತೆ ।
ಪುತ್ರಾವಾಪ್ತಿರ್ಭವೇತ್ತಸ್ಯ ವಂಶವೃದ್ಧಿಶ್ಚ ನಿಶ್ಚಲ ॥೧೦೬॥

ಮೇಲಿನ ಪ್ರೇತ ಶಾಂತಿಗಾಗಿ ಗಯಾಶ್ರಾದ್ಧ ಸರ್ವಶ್ರೇಷ್ಠ ರುದ್ರಾಭಿಷೇಕ

ಅಥವಾ ಬ್ರಹ್ಮನ ಮೂರ್ತಿ ದಾನ, ಆಕಳು ಬೆಳ್ಳಿಯ ಪಾತ್ರೆ ನೀಲಮಣಿಯ ದಾನವನ್ನು ಮಾಡುವುದು. ದಕ್ಷಿಣ ದಾನಪೂರ್ವಕ ಬ್ರಾಹ್ಮಣ ಭೋಜನದಿಂದ ಸರ್ವಥಾ ಪ್ರೇತ ಶಾಪ ವಿಮೋಚನೆಯಿದೆ. ಮಕ್ಕಳಾಗಿ ನಿಶ್ಚರ್ಯಪೂರ್ವಕ ವಂಶ ವೃದ್ಧಿಯಾಗುತ್ತದೆ.

## ಗ್ರಹದೋಷ ವಶ ನಿಃಸಂತಾನ ಯೋಗದಲ್ಲಿ ಶಾಂತಿ

ಶಿವಪೂಜನತಃ ಪುತ್ರ ಪ್ರಾಪ್ತಿರ್ದೋಷಜ್ಞ ಶುಕ್ರಯೋಃ ।
ಯಂತ್ರ ಮಂತ್ರೌಷಧ್ಯೈರೇವ ದೋಷೇ ಜೀವೇಂದು ಸಂಭವೆ ॥೧೦೭॥

ಸ್ವರ್ಭಾನುಜೇಂಗನಾದಾನೆ - ನಾರ್ಕಜೆ ವಿಷ್ಣು ಪೂಜನಾತ್ ।
ಗೋದಾನತೋ ಧ್ವಜೋದ್ಭೂತೆ ರುದ್ರೀಯ ನಾರಮಂದಜೆ ॥೧೦೮॥

ಸರ್ಪದೋಷೂಪ ಶಾಂತ್ಯೈತು ಹರಿವಂಶಸ್ಯ ಕೀರ್ತಿನಮ್ ।
ಶೃಣೋತಿ ಭಕ್ತಿ ಪೂರ್ವಾಯಃ ಸಂತತಿಸ್ತಸ್ಯ ನಿಶ್ಚಲಾ ॥೧೦೯॥

ಶಾಂತಿಗಳನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ. ಬುಧ, ಶುಕ್ರ ಜನಿತ ದೋಷ – ಶಿವಾರ್ಚನೆ ರುದ್ರ ಆದಿ.

ಗುರು, ಚಂದ್ರ ಜನಿತ ದೋಷ – ಮಂತ್ರ ಯಂತ್ರ ಔಷಧ

ರಾಹುದೋಷ – ಕನ್ಯಾದಾನ

ಸೂರ್ಯಜನಿತ – ವಿಷ್ಣುಪೂಜೆ - ವಿಷ್ಣು ಸಹಸ್ರನಾಮ

ಕೇತು – ಗೋದಾನ

ಮಂಗಳ, ಶನಿ – ರುದ್ರಜಪ

ಸರ್ವವಿಧ ದೋಷ ನಿವಾರಣೆ – ಹರಿವಂಶ ಶ್ರವಣ

ಭಾಗವತ ಸಪ್ತಾಹಾದಿ

ಹರಿವಂಶದಿಂದ ಹಾಗೂ ಭಾಗವತ ಸಪ್ತಾಹದಿಂದ ಸರ್ವ ದೋಷ ನಿವಾರಣೆ.

ಅದರಂತೆ ಗುರುಚರಿತ್ರೆ ಪಾರಾಯಣ ಪೂಜಾವಿಶೇಷ

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಪೂರ್ವ ಜನ್ಮ ಶಾಪ ವರ್ಣನಾಧ್ಯಾಯಃ

# ಅಥ ಪ್ರಶ್ನಾಧ್ಯಾಯಃ

## ಮೈತ್ರೇಯ ಉವಾಚ:

ಶೃತಂ ಮಹರ್ಷೇ । ನಿಖಿಲಂ ಯದುಕ್ತಂ ಕೃಪಾಯ ತ್ವಯಾ ।
ಇದಾನೀಂ ವಕ್ತು ಮುಚಿತಂ ಪ್ರಶ್ನೈರೇವ ತು ಜನ್ಮಿನಾಮ್ ॥೧॥

ಭಾವಂ ಮನೋಗತಂ ವಾಪಿ ಪಥಿಕಾಗಮನಾದಿಕಮ್ ।
ಸ್ತ್ರೀ ಪುತ್ರಯೋರ್ಲಾಭಹಾನಿ ಮರಣು ಜೀವನಂ ತಥಾ ॥೨॥

ರೋಗಿಣಾಮೇತದಖಿಲಂ ಕೃಪಾಯ ವದಮೇ ಪ್ರಭೋ ।
ತ್ವಾಮಂತರಾ ನಿಚಾನ್ಯೋಽಸ್ತಿ ಕಶ್ಚಿತ್ತತ್ವ ವಿಶಾರದಃ ॥೩॥

## ಮೈತ್ರೇಯರು ಕೇಳಿದುದು-

ಹೇ ಮಹರ್ಷಿ,

ತಾವು ಏನನ್ನು ಹೇಳಿದ್ದೀರೋ ಅದನ್ನೆಲ್ಲ ಕೇಳಿದ್ದೇನೆ. ಈಗ ಪ್ರಶ್ನೆಗಳಿಂದಲೇ ಮನುಷ್ಯನ ಮನೋಗತ ಭಾವ, ಪಥಿಕರ ಗಮಗಾಗಮನ ಸ್ತ್ರೀಪುತ್ರರ ಪ್ರಾಪ್ತಿ, ಹಾನಿ, ರೋಗಿಗಳ ಜೀವನ ಮರಣಾದಿ ವಿಷಯಗಳನ್ನು ಹೇಗೆ ತಿಳಿಯುವುದು ಕೃಪೆ ಮಾಡಿ ಹೇಳಿರಿ.

## ಪರಾಶರ ಉವಾಚ:

ಅಥಬ್ರುಮೀ ತೇ ವಿಪ್ರ । ಅಥಾಭಿಲಷಿತಂ ತವ ।
ಪ್ರಶ್ನಾಂಗತೋ ಭವೇತ್ ಸರ್ವಜ್ಞೇಯತಚ್ಛೃಣು ಯತ್ನತಃ ॥೪॥

ಭಾವೈರ್ವಿಚಾರ್ಯ ವಿಷಯಾನ್ ಜಾನಿಯಾತ್ ಪಾಗ್ ಬುಧಸ್ತತಃ ।
ಬಲಾಬಲ ವಿವೇಕೇನ ಶುಭಾಶುಭಫಲಂ ದಿಶೇತ್ ॥೫॥

## ಪರಾಶರರು ಹೇಳಿದುದು–

## ಹೇ ವಿಪ್ರನೆ,

ನಿನ್ನ ಬಯಕೆಯಂತೆ ಎಲ್ಲ ವಸ್ತು ಪ್ರಶ್ನೆಯನ್ನು ಹೇಗೆ ತಿಳಿಯುವುದು

ಹೇಳುತ್ತೇನೆ ಕೇಳು. ಸರ್ವಪ್ರಥಮ ಭಾವಗಳಿಂದ ವಿಚಾರಣೀಯ ವಿಷಯಗಳನ್ನು ತಿಳಿದು ಆನಂತರ ಭಾವಗಳ ಬಲಾಬಲ ವಿವೇಕದಿಂದ ಕಾರ್ಯಸಿದ್ಧಿ ಅಥವಾ ಅರ್ಥಸಿದ್ಧಿ ಹೇಳುವುದು.

## ಭಾವ ವಿಚಾರಣೀಯ ವಿಷಯ

ಸ್ವರೂಪಲಕ್ಷಣಾ ಪ್ರಶ್ನೆಕರ್ತುರ್ದುಃಖಸುಖೆ ತನೋಃ ।
ರತ್ನಾನಾಂ ಲಾಭಹಾನಿ ತು ಧನಸ್ಥಾನಾದ್ ವಿಚಿಂತಯೇತ್ ॥೬॥

ಪರಾಕ್ರಮಂ ಭ್ರಾತೃ ಭೃತ್ಯ ಸುಖಂ ಸಹಜಭಾವತಃ ।
ಮಿತ್ರಾಲಯ ಗ್ರಾಮ ಮಾತೃ ವಾಹನಾನಾಂ ಸುಖಂ ಸುಖಾತ್ ॥೭॥

ಅಪತ್ಯಮತಿಶಾಸ್ತ್ರಾಣಿ ಚಿಂತಯೇತ್ ಪಂಚಮಾಲಯಾತ್ ।
ಶತ್ರುಮಾತುಲರೋಗಾಂಸ್ತು ವ್ರಣಾನಪಿ ರಿಪೋಸ್ತಥಾ ॥೮॥

ವಿವಾದ ಸ್ತ್ರೀ ವಣಿಗ್ ವೃತ್ತಿ ಗಮನಾಗಮನಾನಿ ವೈ ।
ಸಪ್ತಮಾನ್ ಮೃತ್ಯುಭಾವಚ್ಚ ಮೃತ್ಯುಂ ಯುದ್ಧಂ ಚ ರುಗ್ ಭಯಮ್ ॥೯॥

ವಾಪಿದೇವಾಲಯಾದಿ ನಾಂ ನಿರ್ಮಾಣಮ ನವಮಾಲಯಾತ್ ।
ರಾಜ್ಯ ಪಿತೃಸುಖಂ ರಾಜಕರ್ಮ ಚಿಂತ್ಯ ಪಿತೃಗ್ರಹಾತ್ ॥೧೦॥

ಕನ್ಯಾಕಾಂಚನ ಸಸ್ಯಾನಿ ವಾಹನಾನಿ ಚ ಲಾಭತಃ ।
ವ್ಯಯತೋ ರಿಪು ರೋಧಶ್ಚ ವ್ಯಯಂ ಭೋಗಾದಿ ಕರ್ಮಸು ॥೧೧॥

ಪ್ರಶ್ನೆಕರ್ತನ ಸುಃಖ, ದುಃಖದ ವಿಚಾರ ಪ್ರಶ್ನೆ ಲಗ್ನದಿಂದ ಬಂಗಾರ, ಬೆಳ್ಳಿ, ರತ್ನದ ಲಾಭ, ಹಾನಿಗಳನ್ನು ದ್ವಿತೀಯ ಭಾವದಿಂದ ವಿಚಾರ ಮಾಡುವುದು. ಪರಾಕ್ರಮ ಸಹೋದರ, ನೌಕರರ ಸುಖದ ವಿಚಾರ ತೃತೀಯ ಭಾವದಿಂದ ಮಿತ್ರ ಮನೆ, ಗ್ರಾಮ, ತಾಯಿ ಹಾಗೂ ವಾಹನದ ಸುಖಾದಿಗಳ ವಿಚಾರ ನಾಲ್ಕನೇ ಭಾವದಿಂದ ಮಾಡಿದರೆ ಸಂತಾನ, ವಿದ್ಯೆ, ಬುದ್ಧಿ, ಶಾಸ್ತ್ರಗಳ ವಿಚಾರ. ಪಂಚಮ ಭಾವದಿಂದ ನೋಡುವುದು ಶತ್ರು ಮಾಮನ ರೋಗ ಹಾಗೂ ವ್ರಣರೋಗ. ಷಷ್ಠದಿಂದ ವಿವಾದ ಸ್ತ್ರೀ ವಿಚಾರ ಗಮನಾಗಮನ ವಿಚಾರ ಸಪ್ತಮದಿಂದ ಮೃತ್ಯುಯುದ್ಧ, ರೋಗ ಭಯಾದಿಗಳನ್ನು (ಮಾಟ ಮಂತ್ರಾದಿಗಳನ್ನು) ಅಷ್ಟಮ ಭಾವದಿಂದ ನೋಡುವುದು. ಹೊಳೆಭಾವಿ, ದೇವಾಲಯಗಳ ನಿರ್ಮಾಣದ ವಾರ ನವಮಭಾವದಿಂದ. ರಾಜ್ಯ ಪಿತೃ ಸುಖ, ರಾಜಕಾರ್ಯದ ವಿಚಾರ ದಶಮ

ಭಾವದಿಂದ. ಕನ್ಯಾ ಕಾಂಚನ ಧಾನ್ಯ ಹಾಗೂ ವಾಹನಗಳಿಂದ ಲಾಭಾದಿಗಳನ್ನು ಏಕಾದಶ ಭಾವದಿಂದ. ಶತ್ರುಕೃತಿ ಅವರೋಧ ಭೋಗದಾನ ಆದಿಗಳನ್ನು ಅವುಗಳಿಂದ ವ್ಯಯವನ್ನು ವಯ್ಯಭಾವದಿಂದ ನೋಡುವುದು.

(ಆಯಾ ಭಾವಗಳಿಗೆ ಹೇಳಿದ ಎಲ್ಲ ವಿಚಾರ ಆಯಾ ಭಾವಗಳಿಂದ ನೋಡುವುದು)

## ಭಾವಗಳ ಬಲಾಬಲ

ಭಾವಃ ಸ್ವಸ್ವಾಮಿ ಸತ್ವೇಟೈರ್ಯುಕ್ತಾ ದೃಷ್ಟೋಽಪಿವರ್ಧತೆ ।
ಅಶುಭೈರೀಕ್ಷತಯುತೋ ನಷ್ಟೋ ಮಿಶ್ರೈಸ್ತುಮಧ್ಯಮಃ ॥೧೨॥

ಭಾವ ತನ್ನ ಸ್ವಾಮಿ ಅಥವಾ ಶುಭಗ್ರಹಗಳಿಂದ (ಬುಧ, ಗುರು, ಶುಕ್ರ, ಪೂರ್ಣಚಂದ್ರ)ಯುತ ಅಥವಾ ದೃಷ್ಟರಾಗಿದ್ದರೆ ಭಾವ ಬಲಿಷ್ಠವಾಗುತ್ತದೆ. ಒಂದು ವೇಳೆ ಪಾಪಗ್ರಹಗಳಿಂದ (ಕ್ಷೀಣ ಚಂದ್ರ, ರವಿ, ಮಂಗಳ, ಶನಿ, ರಾಹು, ಕೇತು)ಯುತ ದೃಷ್ಟವಾಗಿದ್ದರೆ ದುರ್ಬಲವಾಗುತ್ತದೆ. ಶುಭ, ಅಶುಭ ಎರಡೂ ಗ್ರಹಗಳಿಂದ ಯುತ ದೃಷ್ಟವಾಗಿದ್ದರೆ ಸಮ್ಮಿಶ್ರಫಲ ಹೇಳುವುದು.

## ಕಪಟ ಪ್ರಶ್ನೆ

ಪ್ರಶ್ನಾಂಗೌ ಚಂದ್ರ ಮಂದೌ ವಿರಶ್ಮಿರ್ಜ್ಞೋ ಘಟೆ ರವಿಃ ।
ಪೃಚ್ಛಕೋ ದುಷ್ಟಭಾವೇನಾ ಯಾತಶ್ಚೋಽತಿ ವಿನಿರ್ಣಯೇತ್ ॥೧೩॥

ಪ್ರಶ್ನೆ ಲಗ್ನ ಕುಂಡಲಿಯಲ್ಲಿ ಚಂದ್ರ, ಶನಿ, ಮಂಗಳರಿದ್ದರೆ (ಲಗ್ನದಲ್ಲಿ) ದೃಷ್ಟಿಸಿದ್ದರೂ ಬುಧ ರಶ್ಮಿ ಹೀನನಾಗಿದ್ದರೆ ಹಾಗೂ ಸೂರ್ಯ ಕುಂಭ ರಾಶಿಸ್ಥನಾಗಿದ್ದರೆ ಪ್ರಶ್ನೆಕರ್ತಾ ದುಷ್ಟಭಾವದಿಂದ (ಪರೀಕ್ಷಾ ದೃಷ್ಟಿಯಿಂದ) ಬಂದಿದ್ದಾನೆ ಎಂದು ತಿಳಿಯುವುದು.

ಪ್ರಶ್ನಾಂಗಸ್ತನುಂ ಕಾರ್ಯಗೇಹಂ ಕಾರ್ಯಾಧಿಪೋ ಯದಿ ।
ಕಾರ್ಯಮಂಗಾಧಿಪಃ ಕಾರ್ಯಾಧೀಶೋಂಗ ವಾಪಿ ಪಶ್ಯತಿ ॥೧೪॥

ಸ್ವಸ್ವಭಾವಸ್ಥಯೋರ್ಲಗ್ನ ಕಾರ್ಯದೀಶನ ಭೋಗಯೋಃ ।
ಮಿಥೋದೃಷ್ಟಿಸ್ತದಾಪಿ ಸ್ಯಾತ್ ಕಾರ್ಯಸಿದ್ಧಿಃ ಪ್ರಯಾಸತಃ ।
ಪೂರ್ಣೇಂದುನೇ ಕ್ಷೇತೌನೋ ಚೇದನಾಯಾಸಂ ತು ಸಾಭವೇತ್ ॥೧೫॥

(1) ಪ್ರಶ್ನೆ ಲಗ್ನೇಶ ಲಗ್ನವನ್ನು ಕಾರ್ಯಾಧೀಶ ಕಾರ್ಯಗ್ರಹವನ್ನು (2)

ಲಗ್ನೇಶ ಕಾರ್ಯಭಾವವನ್ನು ಕಾರ್ಯ ಭಾವಾಧಿಪ ಲಗ್ನವನ್ನು (3) ಅಥವಾ ತಮ್ಮ ತಮ್ಮ ಭಾವಸ್ಥಿತ ಲಗ್ನೇಶ ಕಾರ್ಯೇಶ ಪರಸ್ಪರ ದೃಷ್ಟಿಯುಕ್ತರಾಗಿದ್ದರೆ ಕಾರ್ಯಸಿದ್ಧಿಯಾಗುತ್ತದೆ.

## ಯೋಗಾಂತರದಲ್ಲಿ

ಸಸದ್ಗ್ರಹೇತನೌಸೌಮ್ಯ ವರ್ಗಗೆ ಶೀರ್ಷಕೋದಯ್ ।
ತ್ವರಿತಂ ವ್ಯತ್ಯಯೇ ನೈವ ಮಿಶ್ರೋ ಸಿದ್ಧಿರ್ಬಲಂಬಿತಃ ॥೧೬॥

ಪ್ರಶ್ನ ಲಗ್ನೇಶ - ಶುಭಗ್ರಹಯುತ ಲಗ್ನ ಶುಭಗ್ರಹಯುತ ಷಟ್‌ವರ್ಗದಲ್ಲಿ ಶುಭ ಶೀರ್ಷೊದಯ ರಾಶಿ ಲಗ್ನಗತವಾಗಿದ್ದರೆ ಶೀಘ್ನ ಕಾರ್ಯಸಿದ್ಧಿ ವೈಪರೀತ್ಯವೋ (ಪಾಪ ದೃಷ್ಟಿ ಪಾಪಯಶ - ಷಡ್‌ವರ್ಗದಲ್ಲಿ ಪಾಪ) ಕಾರ್ಯ ಸಿದ್ಧಿಯಾಗಲಾರದು. ಗ್ರಹಗಳು ಶುಭಾಶುಭ ಮಿಶ್ರಿತವಾಗಿದ್ದರೆ ವಿಳಂಬದಿಂದ ಕಾರ್ಯ ಸಿದ್ಧಿ ಹೇಳುವುದು.

## ಮೌಷ್ಟಿಕ ಪ್ರಶ್ನೆ

ಪ್ರಶ್ನಾಂಗೆ ಸ್ಥಿತ್ರಿಕೋಣೆ ವಾ ಸ್ವಾಂಶಂ ಗ್ವಾಂಶಗತೋಗ್ರಹಃ ।
ಪಶ್ಯೇತ್ತದಾ ಧಾತು ಚಿಂತಾ ಜೀವ ಚಿಂತಾನ್ಯಭಾಗಃ ॥೧೭॥

ಪರಾಂಶಂ ಪರಭಾಗಸ್ಥೆ ಮೂಲಚಿಂತಾಂ ವಿನಿರ್ದೀಶೇತ್ ।
ಯುಗ್ಮಭೇಶ ಕ್ರಮಾಜ್ ಜ್ಞೇಯೋ ಜೀವಂ ಮೂಲಂ ಚ ಧಾತಕಮ್ ॥೧೮॥

ಓಜೋಶಕ್ರಮಾತೋ ಧಾತು ಮೂಲಜೀವಾನಿ ಮೌಷ್ಟಿಕೆ ॥

ರತ್ನಾದಿಗಳು ಮೃತ್ತಕಾಂತ ಧಾತು ಎಂದು ಕರೆಯಲ್ಪಡುತ್ತವೆ. ಮನುಷ್ಯಾದಿ ಷುಧ್ರಜೀವಾಂತ ಜೀವ ಹಾಗೂ ವೃಕ್ಷಾದಿ ತೃಣಾಂತ ಮೂಲವೆನ್ನುತ್ತೇವೆ.

### ಮೂರು ಜೀವ

(1) ಮೃತಕಾಂತ

(2) ಜೀವಾಂತ

(3) ತೃಣಾಂತ

ಗುಪ್ತ ಅಥವಾ ಮಾನಸಿಕ ಪ್ರಶ್ನೆಗಳಿಗೆ ಸ್ವನವಾಂಶಸ್ಥ ಗ್ರಹ ಪ್ರಶ್ನೆ ಅಥವಾ

ನಮವ ಪಂಚಮದಲ್ಲಿ (ನವಾಂಶದಲ್ಲಿ) ನೋಡಿದರೆ ಧಾತು ಸಂಬಂಧ ಪ್ರಶ್ನೆಯೆಂದು - ಎರಡನೇ ಗ್ರಹದ ನವಾಂಶದಲ್ಲಿದ್ದ ಗ್ರಹ ಪ್ರಶ್ನೆ ಲಗ್ನ ನವಮ, ಪಂಚಮ ಅಥವಾ ನವಾಂಶವನ್ನು ನೋಡಿದರೆ ಜೀವ ಸಂಬಂಧ ಪ್ರಶ್ನೆಯೆಂದು ತಿಳಿಯುವುದು. ಇದೇ ತರಹ ಪರನವಾಂಶಸ್ಥ ಗ್ರಹ ಲಗ್ನ ಅಥವಾ ತ್ರಿಕೋಣದಲ್ಲಿ ಎರಡನೇ ನವಾಂಶವನ್ನು ನೋಡಿದರೆ ಹಾಗೂ ಎರಡನೆಯವರ ನವಾಂಶಸ್ಥಿತ ಲಗ್ನ ತ್ರಿಕೋಣದ ಮೇಲೆ ಪರನವಾಂಶ ಗತ ದೃಷ್ಟಿಯಿದ್ದರೆ ಜೀವನವಾಂಧಿತ ಚಿಂತೆಯಿಂದ ದ್ವಿತೀಯ ನವಾಂಶಸ್ಥವಾಗಿದ್ದರೆ ಮೂಲ ಚಿಂತೆ ಹಾಗೂ ತೃತೀಯ ನವಾಂಶಗತ ಲಗ್ನವಾಗಿದ್ದರೆ ಧಾತುಚಿಂತಾ ಚತುರ್ಥದಲ್ಲಿ ಜೀವ ಪಂಚಮದಲ್ಲಿ ಮೂಲ ಇತ್ಯಾದಿ ತಿಳಿಯುವುದು. ವಿಷಮ ರಾಶಿಗತ ಪ್ರಶ್ನ ಲಗ್ನದಲ್ಲಿ ದ್ವಿತಿಯ ನವಾಂಶವಾಗಿದ್ದರೆ ಮೂಲಸಂಬಂಧ ತೃತೀಯ ನವಾಂಶಜೀವ ಸಂಬಂಧ. ಇದೇ ತರಹ ಮುಂದೆ ನವಾಂಶ ನೋಡುವುದು.

## ಯಾತ್ರಿಕನ ಗಮನಾಗಮನ

ಪ್ರಶ್ನಾಂಗತಃಸುಖೆ ಸೌಮ್ಯಖೇಟೋ ದಶಮೇಸ್ಥಿತಿಃ ॥೧೯॥

ಗಮನಂ ನ ಭವೇದ್ ಗಂತುಃ ಪಾಪಖೇಟೇ ನ ಚಾಗಮಃ ।
ಲಗ್ನಾಚ್ಚತುರ್ಥಾದ್ ದಶಮಾದ್ ಯಾವದ್ದಿರ್ದಿವಸ್ಯೈ ಗ್ರ್ಹಃ।
ದ್ವಿತೀಯ ರಾಶಿಮಭ್ಯೇತಿ ತಾವದ್ಭಿಃ ಪಥಿಕಾಮಃ ॥೨೦॥

ಪ್ರಶ್ನೆ ಕುಂಡಲಿಯಿಂದ ಚತುರ್ಥ ಅಥವಾ ದಶಮದಲ್ಲಿ ಶುಭಗ್ರಹವಿದ್ದರೆ ವ್ಯಕ್ತಿಯ ಗಮನ ಹಾಗೂ ಉಕ್ತಸ್ಥಾನದಲ್ಲಿ ಪಾಪಗ್ರಹವಿದ್ದರೆ ಆಗುಂತಕನ ಆಗಮನ ಆಗುವುದಿಲ್ಲ. ಲಗ್ನ ಚತುರ್ಥ ಅಥವಾ ದಶಮದಿಂದ ಎಷ್ಟು ದಿನದಲ್ಲಿ ದ್ವಿತೀಯರು (ಪಂಚಮ, ಏಕಾದಶ) ಗ್ರಹ ಬರುತ್ತವೆಯೋ ಅಷ್ಟು ದಿನದಲ್ಲಿ ಆಗಂತಕ ಬರುತ್ತಾನೆಂದು ಹೇಳುವುದು.

## ಶೀಘ್ರ ಆಗಮನ ಯೋಗ

ಸಪ್ತಮಸ್ಥಾನಗಶ್ಚಂದ್ರೋ ಭಾಗ್ಯೇತೋ ಭಾಪರಾರ್ಧಗಃ ।
ಪಥಿಕಂ ತು ದತಾಯಾಂತಂ ಪಥಿವಿದ್ಯಾದ್ ದ್ವಿಜೋತ್ತಮ ॥೨೧॥

ಸುಖೆ ಜೀವೋಥವಾ ಶುಕ್ರ ಚಂದ್ರೋ ವಾ ಯದಿ ಸಂಸ್ಥಿತಃ ।
ಪಥಿಕಂ ಗೇಹಮಾಯಾಂತಂವಿದ್ಯಾದ್ ಗಣಕಸತ್ತಮಃ ॥೨೨॥

ಪಶ್ನ ಲಗ್ನಾದ್ ದ್ವಿತೀಯೇ ವಾ ತ್ರಿತೀಯೇ ಜೀವಭಾರ್ಗವೌ ।
ಪಥಿಕಂ ಗೇಹಮಾಯಾತಂ ಜಾನೀಯಾತ್ ಪಶ್ನವಿತ್ತದಾ ॥೨೩॥

ಸಿತವಿತ್ಸೂರ್ಯ ಮಂದಾನಾ ಮೇಕೋಪಿ ಚರಲಗ್ನಗಃ ।
ಪ್ರವಾಸಿ ಶೀಘ್ರಮಾಯಾತಿ ವಕ್ರನ್ನೈವ ಯದಾ ಗ್ರಹಃ ॥೨೪॥

ಪಶ್ನ ಲಗ್ನದಿಂದ ಸಪ್ತಮಸ್ಥ ಚಂದ್ರ ಹಾಗೂ ನವಮೇಶ ರಾಶಿಯು ಉತ್ತರಾರ್ಧದಲ್ಲಿ ಸ್ಥಿತರಾಗಿದ್ದರೆ ಪಥಿಕ ಮಾರ್ಗದಲ್ಲಿ ಇದ್ದಾನೆ ಎಂದು ತಿಳಿಯುವುದು. ಪ್ರಶ್ನೆ ಲಗ್ನದಿಂದ ಚತುರ್ಥದಲ್ಲಿ ಗುರು, ಶುಕ್ರ ಅಥವಾ ಚಂದ್ರರು ಸ್ಥಿತರಾಗಿದ್ದರೆ ಮನೆಗೆ ಬಂದಿದ್ದಾರೆಂದೇ ತಿಳಿಯುವುದು. (ಅತೀ ಶೀಘ್ರದಲ್ಲಿ ಆಗಮನವೆನ್ನುವುದು) ಶುಕ್ರ, ಬುಧ ಹಾಗೂ ಶನಿ ಇವರಲ್ಲಿ ಒಬ್ಬನಾದರೂ ಚರಲಗ್ನದಲ್ಲಿದ್ದರೆ ಪರದೇಶಕ್ಕೆ ಹೋದವ ಮತ್ತೆ ಬರವನು. ಈ ಗ್ರಹಗಳೂ ವಕ್ರವಾಗಿದ್ದರೆ ತೀರ ಅಸಂಭವ.

## ಪಥಿಕ ಕ್ಲೇಶ ಯೋಗ

ಪೃಷ್ಠೋದಯಗತೆ ಲಗ್ನೆ ಸದದೃಷ್ಟೇ ಶುಭೈಕ್ಷಿತೆ ।
ಅಶುಭೈಃ ಕೇಂದ್ರಗೌರ್ವಾಪಿ ಪಥಿಕಃ ಕ್ಲೇಶಸಂಯುತಃ ॥೨೫॥

ಪ್ರಶ್ನೆಲಗ್ನ - ಮೇಷ, ವೃಷಭ, ಕಟಕ, ಧನು ಹಾಗೂ ಮಕರ (ಪೃಷ್ಠೋದಯ ರಾಶಿಗಳು) ಇವುಗಳಲ್ಲಿ ಯಾವುದೊಂದಾಗಿದ್ದು ಶುಭಗ್ರಹ ದೃಷ್ಟಿಯಿರದಿದ್ದರೆ, ಪಾಪಗ್ರಹ ದೃಷ್ಟಿಯಿದ್ದರೆ ಪಾಪಗ್ರಹಗಳು ಕೇಂದ್ರಗತವಾಗಿದ್ದರೆ ಪಥಿಕಕ್ಲೇಶ ಪೀಡಿತನಾಗಿರುವನು.

## ಪಥಿಕಾರಿಷ್ಟ

ಪ್ರಶ್ನಾಂಗತೋಷ್ಟಮೇ ಸೂರ್ಯೇ ಭೌಮೇ ವಾಪಿ ತು ಚೌ ರಭೀಃ ।
ಸಿಂಹೇರವೌ, ವಿಧೌ ವಾಪಿ ಕುಜೆ ನಿಧನಗೆ ಸತಿ ॥೨೬॥

ಶನಿಕ್ಷಿತೆ ಶಸ್ತ್ರಭೀತಿರ್ಲಗ್ನೆ ಚೇನ್ನ ಶುಭೊ ಭವೇತ್ ।
ಸಶುಭೆ ದಶಮೇ ವಾಪಿ ನವಮೇ ಸಾಧನೇಹಿಸಃ ॥೨೭॥

ಪ್ರಶ್ನೆ ಲಗ್ನದಿಂದ ಅಷ್ಟಮದಲ್ಲಿ ಸೂರ್ಯ ಅಥವಾ ಮಂಗಳರಿದ್ದರೆ ಕಳ್ಳರ ಭಯ ಸಿಂಹದ ಸೂರ್ಯ ಹಾಗೂ ಲಗ್ನದಿಂದ ಅಷ್ಟಮದಲ್ಲಿದ್ದ ಚಂದ್ರ ಅಥವಾ ಚಂದ್ರ ಮೇಲೆ ಮಂಗಳ ಶನಿ ದೃಷ್ಟಿ ಲಗ್ನದಲ್ಲಿ ಶುಭಗ್ರಹವಿರದಿದ್ದರೆ ಪಥಿಕನಿಗೆ ಶತ್ರುಭಯ ಹೇಳುವುದು. ಲಗ್ನದಿಂದ ದಶಮ ಅಥವಾ ನವಮ ಶುಭಗ್ರಹ ಯುಕ್ತವಾಗಿದ್ದರೆ ಪ್ರವಾಸಿ ಧನ ಸಹಿತ ತಿರುಗಿಬರುವನು ಎಂದು ನಿರ್ದೇಶಿಸುವುದು.

## ವಿವಾಹ ಪ್ರಶ್ನೆ

ಪ್ರಶ್ನಾಂಗತ ಸ್ತ್ರೀಷಡ್‌ಲಾಭ ಜಾಯಾಪಂಚಮಭಾವಗಃ ।
ಶಶಿ - ಸೂರ್ಯಜ್ಞ ಗುರುಭಿ - ವೀಕ್ಷಿತೋ ವಾಪಿ ಲಗ್ನತಃ ॥೨೮॥

ಕೇಂದ್ರಕೋಣಗತಾ ಜೀವ ವಿಚ್ಛುಕ್ರಸಿ ತರತ್ಮಯಃ ।
ಜಾಯಾಂಗಪೌ ಲಗ್ನ ಜಾಯಾ - ಗತೌ ಪಾಣಿಗ್ರಹೋಚಿರಾತ್ ॥೨೯॥

ಪ್ರಶ್ನೆ ಲಗ್ನದಿಂದ 3, 6, 11, 7, 5ರಲ್ಲಿ ಯಾವುದೇ ಸ್ಥಳದಲ್ಲಿ ಚಂದ್ರ, ಸೂರ್ಯ, ಬುಧ, ಗುರುವಿನಿಂದ ದೃಷ್ಟನಾಗಿದ್ದರೆ ಅಥವಾ ಲಗ್ನದಿಂದ ಕೇಂದ್ರ ಅಥವಾ ತ್ರಿಕೋಣದಲ್ಲಿ ಗುರು, ಬುಧ ಹಾಗೂ ಶುಕ್ರ, ಚಂದ್ರ ಇದ್ದರೆ ಲಗ್ನೇಶ ಸಪ್ತಮೇಶ ಕ್ರಮಶಃ ಲಗ್ನ ಸಪ್ತಮದಲ್ಲಿದ್ದರೆ ಅತೀ ಶೀಘ್ರ ವಿವಾಹವೆಂದು ನಿರ್ದೇಶಿಸುವುದು.

## ಸ್ತ್ರೀ ಮೃತ್ಯುಯೋಗ

## ಪ್ರಶ್ನ ಲಗ್ನದ ಮೇಲಿಂದ

ಪಾಪಾಃ ಸುಖೆ ಮದೆ ವಾಪಿ ವಿಬಲೋ ಭಾರ್ಗವೋ ಯದಿ ।
ಸ್ವರ್ಭಾನುಃ ಸಪ್ತಮೇ ವಾ ಸ್ಯಾ ನ್ಮಿ ಯತೆತು ತದಂಗನಾ ॥೩೦॥

ಪ್ರಶ್ನೆ ಲಗ್ನದಿಂದ 4, 7ರಲ್ಲಿ ಪಾಪಗ್ರಹ ಶುಕ್ರ ನಿರ್ಬಲ ಸಪ್ತಮದಲ್ಲಿ ರಾಹು ಈ ಸ್ಥಿತಿಯಲ್ಲಿ ಸ್ತ್ರೀಯ ಮೃತ್ಯುವನ್ನು ನಿರ್ದೇಶಿಸುವುದು.

## ಯೋಗಾಂತರ

ಪಾಪನ್ವಿತೆ ಸಪ್ತಮೇ ತುಸುಖೆ ಶುಭಖಗಾನ್ವಿತೆ ।
ಪ್ರಥಮಾ ಮ್ರಿಯತೆ ಪತ್ನಿ ಧೃತಾ ಜೀವತಿ ನಿಶ್ಚಿತಮ್ ॥೩೧॥

ಸಪ್ತಮಭಾವ ಸಪಾಪವಾಗಿ ನಾಲ್ಕರಲ್ಲಿ ಶುಭಯುಕ್ತವಾಗಿದ್ದರೆ ಧರ್ಮ ಪತ್ನಿಯ ಮೃತ್ಯು ಹಾಗೂ ಬಲಗ್ರಹವು ಸ್ಥಿರತೆ ಹೇಳುತ್ತದೆ. ಎರಡು ಸ್ಥಾನಗಳು ಒಂದು ವೇಳೆ ಸಪಾಪವಾಗಿದ್ದರೆ ಇಬ್ಬರ ಮೃತ್ಯುವನ್ನು ಹೇಳುವುದು.

## ಗರ್ಭಪ್ರಶ್ನೆ

ಸಶುಭಃ ಪಂಚಮಃ ಸ್ವಾಮಿ - ಯುಕ್ತೋವಾ ತದವೇಕ್ಷಿತಃ ।
ಸಬಲೋ ಮಾಸಪತಿರ್ಹಿ ಗರ್ಭ ಸಕುಶಲಂ ವದೇತ್ ॥೩೨॥

ಪ್ರಶ್ನೆ ಲಗ್ನದಿಂದ ಪಂಚಮ ಶುಭಗ್ರಹಯುತ ಅಥ ಸ್ವಸ್ವಾಮಿಯುತವಾಗಿರಲಿ ಅಥವಾ ಅವನಿಂದ ದೃಷ್ಟವಾಗಿರಿ ಮಾಸೇಶನು ಸಬಲನಾಗಿದ್ದರೆ ಗರ್ಭ ಸಕುಶಲವಾಗಿದೆ ಎಂದು ಅದರ ವಿಪರೀತದಲ್ಲಿ ಪಂಚಮ ಸಪಾಪ - ತನ್ನ ಸ್ವಾಮಿಯ ಯೋಗದೃಷ್ಟಿರಹಿತವಾಗಿದ್ದರೆ ಮಾಸೇಶನು ದುರ್ಬಲನಾಗಿದ್ದರೆ (ರವಿ ಯಾವ ರಾಶಿಯಲ್ಲಿರುವನೋ ಅವನೇ ಮಾಸೇಶ) ಗರ್ಭದ ಬೆಳವಣಿಗೆ ಸರಿಯಾಗಿ ಆಗಿಲ್ಲವೆಂದು ಅಥ.

ವಿ.ಸೂ.: ಇಲ್ಲಿ ಮಾಸಾದಿ ಪತಿಗಳನ್ನು ಈ ರೀತಿಯೂ ನೋಡಬಹುದು. ಮಾಸಕ್ಕೊಬ್ಬ ಅಧಿಪನಂತೆ.

### ಗರ್ಭಸ್ಥಿ - ಅಧಿಪ

| ಮಾಸ | 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|---|
| ಸ್ಥಿತಿ | ಕಲ | ಘನ | ಅಂಕುರ | ಅಸ್ಥಿ | ಚಕ್ಮ | ಕೇಶ್ | - | - | - | |
| ಅಧಿಪ | ಶು | ಮಂ | ಗು | ರ | ಚಂ | ಶ | ಬು | ಲಗ್ನ ಸ್ವಾಮಿ | ಚ | ರ |

ಈ ರೀತಿ ಇಲ್ಲವೆ ರವಿ ಕರ್ಕದಲ್ಲಿದ್ದರೆ ಚಂದ್ರ ಈ ರೀತಿಯಾಗಿಯೂ ಮಾಸಾಧಿಪರನ್ನ ನೋಡುವುದು ಅಥವಾ ಶುಕ್ರಪ್ರತಿಪದೆ ಬರುವ ದಿನ (ಶುಕ್ರವಾರವಾದರೆ ಶುಕ್ರ) ವಾರಾಧಿಪನೆ ಮಾಸಾಧಿಪನಾಗುವನು)

### ಸಂತಾನ ಪ್ರಶ್ನೆ

ಸುತಪ್ರಶ್ನಜನುರ್ಲಗ್ನಾಧೀಶೌ ಪುಂರಾಶಿಗೌ ಯದಿ।
ಪುತ್ರಂ ತದಾ ವಿಜಾನೀಯಾತ್ ಕನ್ಯಾ ಸ್ತ್ರೀ ರಾಶಿಗತೌ ತುತೌ ॥೩೩॥

ಶನಿರೋಜರ್ಕ್ಷಗೋ ವಾಪಿ ವಿಷವಾಂಶಗತೊ ಭವೇತ್ ।
ಪುತ್ರದಃ ಪುತ್ರಕಾಜನ್ಮ ಪ್ರಸ್ತು ಸಮಭಾಂಶಗೆ ॥೩೪॥

ಓಜೋ ಸೂರ್ಯೆಂದು ಗುರವಃ ಪುತ್ರಜನ್ಮಪ್ರದಾಃ ಸ್ಮೃತಾಃ ।
ದೃಷ್ಟಾವಪಿ ಸುತೆ ಶುಕ್ರೆ ಭೌಮೇಂದೂನಾಂ ಯುತೌ ಭವೇತ್ ॥೩೫॥

ಪಂಚಮೇಶ ಪ್ರಶ್ನೆ ಲಗ್ನೇಶ ಪುರುಷ ರಾಶಿಯಲ್ಲಿದ್ದರೆ ಪುತ್ರ ಸ್ತ್ರೀ ರಾಶಿಗತ ರಾದರೆ ಕನ್ಯಾವೆಂದು ಹೇಳುವುದು. ವಿಷಮ ರಾಶಿ ವಿಷಮ ನವಾಂಶಗತ ಶನಿಯೂ ಕೂಡ ಪುತ್ರ ಸಂತತಿಕಾರಕ. ಅದೇ ಶನಿ ಸಮರಾಶಿ ಸಮ ನವಾಂಶಗತನಾಗಿದ್ದರೆ ಕನ್ಯಾದ ಜನ್ಮ ವಿಷಮ ರಾಶಿಗತ ವಿಷಮ ನವಾಂಶಗತ ಸೂರ್ಯ, ಚಂದ್ರ ಹಾಗೂ

ಗುರು ಪುತ್ರ ಜನ್ಮನಿರ್ದೇಶಕರಾದರೆ ಪಂಚಮದಲ್ಲಿ ಶುಕ್ರ, ಮಂಗಳ, ಚಂದ್ರರ ದೃಷ್ಟಿಯಿದ್ದರೆ ಕೂಡ ಪುತ್ರ ಜನನವೆಂದು ಹೇಳುವುದು.

### ಯೋಗಾಂತರ

ಸಿತೇಂದು ಬಲಿನೋ ಪುತ್ರಸ್ಥಾನಂ ಪ್ರಶ್ನಾಂಗತೋ ಯದಿ ।
ಪಶ್ಯತಃ ಸುತದೋ ಕನ್ಯಾಪ್ರದೌ ಪಂಚಮಗೌ ಯದಿ ॥೩೬॥

ನೀಚಾಸ್ತಾರಿತ್ರಕಸ್ಥಾನ - ಗತೌ ಸಂತತಿ ಬಾಧಕೌ ।
ಲಾಭಗೌ ಪ್ರಬಲಾವೇತವ ಸುತದೌ ವಿಬುಧೈಃ ಸ್ಮೃತೌ ॥೩೭॥

ಪ್ರಬಲ ಶುಕ್ರ ಹಾಗೂ ಚಂದ್ರ ಪ್ರಶ್ನೆ ಲಗ್ನದಿಂದ ಪಂಚಮ ಸ್ಥಾನವನ್ನು ನೋಡುತ್ತಿದ್ದರೆ ಪುತ್ರನ ಹಾಗೂ ಅವೆರಡು ಪಂಚಮಸ್ಥಾನದಲ್ಲಿಯೇ ಇದ್ದರೆ ಕನ್ಯಾದ ಜನನವೆಂದು ಹೇಳುವುದು. ನೀಚ ರಾಶಿಯಲ್ಲಿ ಅಥವಾ ಅಸ್ತಂಗತವಾಗಿದ್ದರೆ ಅಥವಾ ಶತ್ರುರಾಶಿಯಲ್ಲಿದ್ದರೆ ಇಲ್ಲವೆ ತ್ರಿಕ್(6, 8, 12)ದಲ್ಲಿದ್ದರೆ ಸಂತಾನಕ್ಕೆ ಭಾದೆ ಉಂಟಾಗುತ್ತದೆ. ಬಲಿಷ್ಠವಾಗಿ ಅವು ಲಗ್ನ ಸ್ಥಾನಗತರಾಗಿದ್ದರೆ ಪುತ್ರ ಸಂತಾನವೆಂದು ಹೇಳುವುದು.

### ಪುತ್ರಯೋಗ

ಪಂಚಮಾಧಿಪತಿರ್ಲಗ್ನೆ ಲಗ್ನೇಶಃ ಪಂಚಮೆ ಯದಿ ।
ಪ್ರಬಲೇಂದು ಯುತಸ್ತಹಿಂ ಪುತ್ರೊತ್ಪತ್ತಿರ ಸಂಶಯವಮ್ ॥೩೮॥

ಪ್ರಶ್ನಾಂಗ ಪಂಚಮೇಶೌ ಚೇದುಚ್ಛಗೌ ಭವತೋಪಿ ಚ ।
ಮಿಥೊದೃಷ್ಟೌ ತದಾ ಪುತ್ರಜನ್ಮ ವಾಚ್ಯಂ ಬುಧೈಃ ಸದಾ ॥೩೯॥

ಪಂಚಮೇಶ ಲಗ್ನದಲ್ಲಿ ಲಗ್ನೇಶ ಪಂಚಮದಲ್ಲಿ ಬಲಿಷ್ಠ ಚಂದ್ರನ ಜೊತೆಗೆ ಇದ್ದರೆ (ಯಾರಾದರೊಬ್ಬರು) ಪ್ರಶ್ನೆ ಲಗ್ನೇಶ ಹಾಗೂ ಪಂಚಮೇಶ ಉಚ್ಚಗತ ರಾಗಿದ್ದರೆ ಹಾಗೂ ಪಂಚಮೇಶ - ಪ್ರಶ್ನ ಲಗ್ನೇಶರಲ್ಲಿ ಪರಸ್ಪರ ದೃಷ್ಟಿಯಿದ್ದರೆ (ಈ ಎರಡೂ ಯೋಗಗಳಲ್ಲಿ) ನಿಃಸಂದೇಹ ಪುತ್ರಸಂತಾನ.

### ಯೋಗಾಂತರ

ಅಸ್ತಂಗತೋ ಪಂಚಮೇಶೆ ನೀಚೋ ವಾಪೀಡಿತೆ ಖಲೈಃ ।
ಅಪುತ್ರಹ ಪ್ರಶ್ನಕರ್ತಾಸ್ಯಾ ಜಾತೋಪಿ ಪ್ರಜಾಯತೆ ಕ್ಷಣಾತ್ ॥೪೦॥

ಸ್ವರ್ಭಾನುನಾ ಕುಜೇನಾಪಿ ಯುಕ್ತಶ್ಚೇತ ಪಂಚಮಾಧಿಪಃ ।
ತದಾನಪತ್ಯತಾ ಜ್ಞೇಯಾ ಪೂರ್ವೈರೇತದುದೀರಿತಮ್ ॥೪೦॥

ಪಂಚಮೇಶ ಅಸ್ತಂಗತನಾಗಿ ನಿಚರಾಶಿಗತನಾಗಿ ಅಥವಾ ಪಾಪಗ್ರಹದಿಂದ ಪೀಡಿತನಾಗಿದ್ದರೆ ಪ್ರಶ್ನ ಕರ್ತಾನಿಗೆ ಸಂತತಿ (ಪುತ್ರ) ಭಾಗ್ಯವಿಲ್ಲವಿಂದು ಪುತ್ರಸಂತಾನ ವಾದರೂ ಶೀಘ್ರುವೇ ಮೃತ್ಯುವೆಂದು ಹೇಳುವುದು. ಪಂಚಮೇಶ ರಾಹು ಅಥವಾ ಮಂಗಳರ ಜೊತೆಗಿದ್ದರೆ ಮಕ್ಕಳ ಅಭಾವ ತೋರಿಸುತ್ತದೆ ಎಂದು ಪೂರ್ವಾಚಾರ್ಯರು ಹೇಳಿದ್ದಾರೆ.

## ರೋಗಿಯ ಮರಣ ಪ್ರಶ್ನ

ಪಾಪೇರ್ಕ್ಷೆ ಪ್ರಶ್ನಲಗ್ನಂ ಚೆ ದಷ್ಟಮಂ ಪಾಪಖೇಟಯುಕ್ ।
ಪಾಪೇಕ್ಷಿತಂ ವಾಂತರಾಲೆ ಪಾಪಯೋರಷ್ಟಮೇ ಶಶಿ ॥೪೨॥

ಸಪಾಪೋ ವಾ ಬಲಾ ರಂಧ್ರೆ ವ್ಯಯೋ ಚಂದ್ರೋನಗೋಷ್ಟಮೆ ।
ಲಗ್ನೇರಿಭೆ ತದಾ ಮೃತ್ಯುಃ ಸಂವತ್ಸರಂ ರೋಗಿಣೋ ಭವತ್ ॥೪೩॥

ಚಂದ್ರೆ ತನೌ ಸಪ್ತಮೇರ್ಕೆ ಕುಜೋಜೆಲಿನವಾಂಶಗೆ ।
ಚಂದ್ರೇಣ ಸಹಿತೆ ಮೃತ್ಯು ಮಾದಿಶೆ ದ್ರೋಗಿಣಸ್ತದಾ ॥೪೪॥

(1) ಪ್ರಶ್ನ ಲಗ್ನ ಪಾಪಗ್ರಹದ ರಾಶಿಯಲ್ಲಿದ್ದರೆ (2) ಅಷ್ಟಮ ಸ್ಥಾನ ಪಾಪಗ್ರಹಯುತ ಅಥವಾ ಪಾಪದೃಷ್ಟವಾಗಿದ್ದರೆ (3) ಪಾಪಗ್ರಹಗಳ ಮಧ್ಯದಲ್ಲಿ ಚಂದ್ರ ಸಪಾಪನಾಗಿ ಅಷ್ಟಮದಲ್ಲಿ ಚಂದ್ರ (4) ಪಾಪಗ್ರಹ ಅಷ್ಟಮ ಅಥವಾ ದ್ವಾದಶಸ್ಥಾನ (5) ಅಥವಾ ಚಂದ್ರ ಪ್ರಶ್ನ ಲಗ್ನದಿಂದ (6) ಚಂದ್ರ ಲಗ್ನದಲ್ಲಿ ಸೂರ್ಯ ಸಪ್ತಮದಲ್ಲಿ (7) ಮೇಷಸ್ಥ ಭೌಮ ವೃಶ್ಚಿಕದ ನವಾಂಶಗತ ಚಂದ್ರನ ಜೊತೆಗಿದ್ದರೆ ಈ ಎಲ್ಲ ಯೋಗಗಳಲ್ಲಿ ರೋಗಿಯ ಮೃತ್ಯು ಹೇಳುವುದು.

## ರೋಗಿಗೆ ಕಲ್ಯಾಣಕರ ಯೋಗ

ಪ್ರಶ್ನೆ ಲಗ್ನಾತ್ ಸಪ್ತಮರ್ಷೆ ಸುಶುಭೆ ವಾಥ ಲಗ್ನಪೆ ।
ಉದಿತೆ ಮೃತ್ಯುಪೆ ಹೀನಬಲೆ ಲಾಭಾಧಿಪೆ ತಥಾ ॥೪೫॥

ಪ್ರಬಲೇ ರೋಗಿಣಃ ಕ್ಷೇಮಮಾದಿಶೇದ್ ಗಣಕೋತ್ತಮಃ ।
ಲಗ್ನಾತ್ ಸಪ್ತಮಗೆ ಮಿಶ್ರ ಗೃಹೆ ಮಿತ್ರಂ ಫಲಂ ವದೇತ್ ॥೪೬॥

ಪ್ರಶ್ನೆ ಲಗ್ನದಿಂದ - ಸಪ್ತಮ ಶುಭಗ್ರಹ ಯುಕ್ತವಾಗಿದ್ದರೆ ಅಥವಾ ಲಗ್ನೇಶ

ಉದಿತನಾಗಿದ್ದರೆ, ಅಷ್ಟಮೇಶ ನಿರ್ಬಲನಾಗಿದ್ದರೆ, ಲಗ್ನೇಶ ಪ್ರಬಲನಾಗಿದ್ದರೆ ರೋಗಿಗೆ ಗುಣವಾಗುತ್ತದೆ ಎಂದು ಹೇಳುವುದು. ಪ್ರಶ್ನ ಲಗ್ನದಿಂದ ಸಪ್ತಮದಲ್ಲಿ ಶುಭಪಾಪ ಎರಡು ತರಹದ ಗ್ರಹಗಳಿದ್ದರೆ ಮಿಶ್ರ ಫಲ ಹೇಳುವುದು.

**ಇತಿತೆ ಕಥಿಥಂ ವಿಪ್ರ । ವೇದ್ಯಂ ಪ್ರಶ್ನಾಂಗತೋ ಬುಧೈ ।**
**ತದ್ ವದೇವಾ ಖಿಲಂ ವಸ್ತು ಜ್ಞಾತುಂ ಶಕ್ಯಮಸಂಶಯಃ ॥೪೭॥**

ಹೇ ಮುನಿಯೇ,

ಪ್ರಶ್ನಾಂಗದಿಂದ ಮೇಲೆ ಹೇಳಿದ ವಸ್ತು ಜ್ಞಾನದಿಂದ ನಾನು ಹೇಳಿದ ಪ್ರಕಾರ ಎಲ್ಲ ವಸ್ತುಗಳ ಜ್ಞಾನ ಮಾಡಿಕೊಂಡು ಪ್ರಶ್ನಾಂಗದಿಂದಲೇ ಉತ್ತರ ಹೇಳುವುದು. (ಪ್ರಶ್ನೆಯೇ ಜನನವೆಂದು ತಿಳಿಯುವುದು).

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಪ್ರಶ್ನಾಧ್ಯಾಯಃ ಸಮಾಪ್ತಿಃ**

# ಅಥ ಗ್ರಹ ಶಾಂತ್ಯಾಧ್ಯಾಯಃ

## ಮೈತ್ರೇಯ ಉವಾಚ:

ದೋಷ ಶಾಂತ್ಯೈ ನಭೋಗಾನಾ - ಮರ್ಚನಾವಿಧಿಪೂರ್ವಕಮ್ ।
ಜಪಹೋಮಾದಿಕಂ ಬ್ರಹ್ಮನ್ । ಕೃಪಾಯ ವಕ್ತುಮರ್ಹಸಿ ॥೧॥

## ಮೈತ್ರೇಯರು ಕೇಳಿದರು–

ಹೇ ಬ್ರಹ್ಮ ಸದೃಶ್ಯನೆ,

ದೋಷ ಶಾಂತಿಗಾಗಿ ಪೂಜೆ, ಜಪ, ಹೋಮ ಆದಿಗಳ ವಿಧಾನ ಕೃಪೆ ಮಾಡಿ ಹೇಳಿರಿ.

## ಪರಾಶರ ಉವಾಚ:

ಭಾಸ್ಕರಾದ್ಯಾಃ ಖಗಾಃ ಪೂರ್ವಯೋ ಮಯಾನವ ವರ್ಣಿತಾಃ ।
ಪ್ರಭಾವಿತಂ ಜಗದಿದಂ ಸಮಸ್ತಮಪಿ ತ್ಯೆಃ ಸದಾ ॥೨॥

ತದಧೀನಂ ಪ್ರಾಣಿನಾಂ ತು ಸುಖದುಃಖ ಮತೋಜನಃ ।
ತಚ್ಛಾಂತಿ ಧನವೃಷ್ಟಿದ್ಯಾಯುಃ ಕಾಮಸ್ತದ್ಯಜ್ಞಮಾ ಚರೇತ್ ॥೩॥

## ಪರಾಶರರು ಹೇಳಿದರು–

ಈ ಮೊದಲೇ ಸೂರ್ಯಾದಿ ನವಗ್ರಹಗಳ ಬಗ್ಗೆ ಮೊದಲೇ ಹೇಳಿದ್ದೇನೆ. ಆ ಗ್ರಹಗಳಿಂದಲೇ ಎಲ್ಲ ಸಂಸಾರ (ಜಗತ್ತು) ಪ್ರಭಾವಿತವಾಗಿದೆ. ಅವುಗಳ ಅದಿನರಾಗಿ ಪ್ರಾಣಿಗಳಿಗೆ ಸುಖ, ದುಃಖಾದಿಗಳ ಫಲ ದೊರೆಯುತ್ತದೆ. ಅದಕ್ಕಾಗಿ ಗ್ರಹಶಾಂತಿ, ಧನ ಹಾಗೂ ಆಯುಷ್ಯ ಕಾಮನೆಯಾದರೆ ಯಜ್ಞ (ಜಪ, ಪೂಜೆ, ಹೋಮಾದಿ) ಮಾಡುವುದು ಶ್ರೇಯಸ್ಕರ.

### ಪೂಜಾರ್ಥ ಗ್ರಹ ಪ್ರತಿಮಾ

ನವಗ್ರಹಾಕೃತೀಸ್ತಾಮ್ರ - ಸ್ಫುಟಿಕಾರುಣ ಚಂದನ್ಯೆಃ ।
ಸ್ವರ್ಣ ಸ್ವರ್ಣರತಾಯಃ ಶೀಶಕಾಂಭ್ಯೆಃ ಕ್ರಮಾದ್ ಬುಧಃ ॥೪॥

ರಚಯೇದ್ ಗ್ರಹವರ್ಣೈರ್ವಾ ಪಟ್ಟವಸ್ತ್ರೇಥ ವಿನ್ಯಸೇತ ।
ತತ್ತದ್‌ಗ್ರಹೋಕ್ತಾಸು ದಿಷು ಮಂತ್ರೋಚ್ಚಾರಣ ಪೂರ್ವಕವಮ್ ॥೫॥

ಸೂರ್ಯಾದಿ ನವಗ್ರಹಗಳ ಆಕೃತಿ ತಾಮ್ರಾದಿ ಧಾತು ನವಧಾತುವಿನಲ್ಲಿ ಮಾಡಿ ಮಂತ್ರೋಚ್ಚಾರಣಪೂರ್ವಕ ಆಯಾ ಗ್ರಹಗಳಿಗೆ ಆಯಾ ದಿಕ್ಕುಗಳಲ್ಲಿ ಸ್ಥಾಪಿಸಿ ಗ್ರಹಗಳ ವರ್ಣದಿಂದ ಪಟ್ಟಿ ವಸ್ತ್ರ(ರೇಶ್ಮೆ ವಸ್ತ್ರ)ದ ಮೇಲೆ ಮೂರ್ತಿ ಬರೆದು ಇಡುವರು.

ಸೂರ್ಯ ಮೂರ್ತಿ ತಾಮ್ರದಿಂದ ಚಂದ್ರ - ಸ್ಪಟಿಕ ಮಂಗಳ, ರಕ್ತ ಚಂದನ, ಬುಧನ ಮೂರ್ತಿ, ಗುರುವಿನ ಮೂರ್ತಿ, ಬಂಗಾರದಿಂದ ಶುಕ್ರನ ಪ್ರತಿಮೆ, ಬೆಳ್ಳಿಯಿಂದ ಶನಿಯ ಪ್ರತಿಮೆ, ಲೋಹದಿಂದ ರಾಹು ಕಂಚು, ಹಿತ್ತಾಳೆ ಮಿಶ್ರಧಾತು ಕೇತುನ ಪ್ರತಿಮೆ ಕಂಚಿನದಾಗಿರಬೇಕು.

### ಪೂಜೆ - ಧ್ಯಾನಕ್ಕೆ ಮೂರ್ತಿಸ್ವರೂಪ

ಪದ್ಮಾಸನಃ ಪದ್ಮಕರಃ ಪದ್ಮವರ್ಣಾಸಮಪ್ರಭಃ ।
ಸಪ್ತಾಶ್ವರಥಸಂಯುಕ್ತೋ ದ್ವಿಭುಜಃ ಸ್ಯಾತ್ ಸದಾರವಿಃ ॥೬॥

ದಶಾಶ್ವರದವಾನ್ ಶುಭ್ರಃ ಶುಭ್ರವಾಸಾ ಗದಾಧರಃ ।
ಶುಭ್ರಭೂಷಾವೃತಶ್ಚಂದ್ರೋ ದ್ವಿಭುಶ್ಚ ಪ್ರಕೀರ್ತತಃ ॥೭॥

ಲೋಹಿತಾಪ್ರ ಗ್ರಕ್ತವಾಸಾಃ ಶೂಲಶಕ್ತಿಕರಃ ಕುಜಃ ।
ಚತುರ್ಭುಜೋಪಿ ಸಗದೋ ವರದೋಜ ಸುವಾಹನಃ ॥೮॥

ಪೀತವಸ್ತ್ರ ಗಂಬರಶ್ಚಂದ್ರ - ಸ್ತಾಲಪತ್ರಸಮಪ್ರಭುಃ ।
ಸಿಂಹಾರೂಢೋ ಗದಾವರ್ಮಾ ಸಿಹಸ್ತೋ ವರದೋ ಮತಃ ॥೯॥

ಸಿತಾರ್ಯೋ ಸಿತಪೀತಾಭೌ ಸಾಕ್ಷಸೂತ್ರೌ ಸದಂಡಕೌ ।
ಕಮಂಡಲು ಶಾಯೌ ಚಾಪಿ ವರದೌ ವಿಬುಧೈಃ ಸ್ಮೃತಃ ॥೧೦॥

ನೀಲಕಾಂತರ್ಗೃಘಯಾನಃ ಶರಚಾಪಧಿರೋರ್ಕಜಃ ।
ವರಪ್ರದಶ್ಚತುರ್ಬ್ರಾಹುಃ ಶೂಲಭೃದ್ ಗದಿತೋ ಬುಧೈಃ ॥೧೧॥

ಭಯಾವಹಮುಖೋ ವರ್ಮ ತ್ರಿಶೂಲಾಸಿಧರೋ ಶುಭಃ ।
ಸಿಂಹಾರೂಢಃ ಸುನಿಲಾಭಃ ಸ್ವರ್ಭಾನು ರ್ವರದೋ ಮತಃ ॥೧೨॥

ಸಗದಾ ವಿವ್ಯತಾಸ್ಯಾಶ್ಚ ದ್ವಿಭುಜಾ ಧೂಮ್ರ ವರ್ಣನಃ ।
ಕೇತವೋ ವರದಾ ಗೃಧ್ರು - ವಾಹನಾಃ ಸ್ಯುರ್ವಿದಾಂ ಮತಾಃ ॥೧೩॥

ಕಮಲದ ಮೇಲೆ ಕುಳಿತ ಕೈಯಲ್ಲಿ ಕಮಲದಾರಕ ಕಮಲ ಪತ್ರದಂತೆ ಕಾಂತಿಯುತನಾದ ಏಳು ಕುದುರೆಗಳ ರಥಾರೂಢ, ಎರಡು ಕೈಗಳ ಭಗವಾನ್ ಸೂರ್ಯನಿದ್ದಾನೆ. ಹತ್ತು ಕುದುರೆಯು ರಥಾರೂಢ ಸ್ವಚ್ಛಕಾಂತಿ, ಶುಭ್ರ ವಸ್ತ್ರ ಹಾಗೂ ಶುಭ್ರಾಲಂಕಾರದಿಂದ ಆಭೂಸಿತ ಗದಾಧಾರಿ ದ್ವಿಭುಜಾ ಕೃತಿಯ ಚಂದ್ರನನ್ನು ಧ್ಯಾನಿಸುವುದು. ರಕ್ತಮಾಲ್ಯರಕ್ತ ವಸ್ತ್ರಧಾರಿಯಾಗಿ ತ್ರಿಶೂಲ ಶಕ್ತ ಹಾಗೂ ಗದಾಧಾರಣವನ್ನು ಮಾಡಿ ಚತುರ್ಭುಜದ ವರಪ್ರದಾತನು ಟಗರಿನ ಮೇಲೆ ಆರೂಢನು ಆದ ಮೂರ್ತಿ ಮಂಗಳರ ಹಳದಿವಸ್ತ್ರ ಮಾಲ್ಯಾದಿಗಳನ್ನು ಧಾರಣ ಮಾಡಿದ ತಾಲಪತ್ರದಂತೆ ಹಳದಿ ವರ್ಣದ ಕಾಂತಿಯುಳ್ಳ ಸಿಂಹಾರೂಢನಾದ ಗದಾ ಕವಚ ಖಡ್ಗ ಧರಿಸಿ ವರಪ್ರದಾತನು ಬುಧನು - ಶುಭ್ರ ಹಳದಿ ಕಾಂತಿಯುತ ಅಕ್ಷಸೂತ್ರ ದಂಡಧಾರಣ ಮಾಡಿದ ಕೈಯಲ್ಲಿ ಕಮಂಡಲ ಹಾಗೂ ವರಪ್ರದ ಕೈಗಳಿಂದ ಗುರು ಆಕೃತಿ ಹಾಗೂ ಶುಕ್ರಾಕೃತಿಗಳಾಗುತ್ತಿವೆ. ಶನಿ ನೀಲಕಾಂತಿ ರಣಹದ್ದಿನ ಮೇಲೆ ಸವಾರಿ ಮಾಡಿದ ಶರಚಾಪ ಧಾರಣ ಮಾಡಿದ ವರಪ್ರದಾತ ನಾಲ್ಕು ಕೈಗಳುಳ್ಳವ ಹಾಗೂ ಶೂಲಧಾರಿ ಮೂರ್ತಿ ಶನಿಯದಾಗಿರುತ್ತದೆ. ಭಯಂಕರ ಮುಖದವನು ಕವಚ ತ್ರಿಶೂಲ ಖಡ್ಗಧಾರಣ ಮಾಡಿ ಸಿಂಹಾಸನಾದ (ಸಿಂಹದ ಮೇಲೆ ಕುಳಿತ) ಅಶುಭಕಾರಕ ನೀಲಕಾಂತಿಯ ವರಪ್ರದಾತ ರಾಹು ಗದಾಧ ಏರಿ ಮುಖ ಕಾಣದ ದ್ವಿಭುಜ ಧೂಮ ವರ್ಣ (ಹೊಗೆ ಬಣ್ಣ) ಗಿಡಗದ ಮೇಲೆ ಕುಳಿತ ಪರಪ್ರದ ಕೇತುವಿನ ಮೂರ್ತಿ.

ಈ ರೀತಿಯೇ ಪೂಜಾದಿಗಳಲ್ಲಿ ಧ್ಯಾನಿಸುವರು.

## ಗ್ರಹಮೂರ್ತಿ

ಗ್ರಹಾಮೂರ್ತಿಃ ಸ್ಫಟಾವಿಜ್ಞೈರಷ್ಟೋತ್ತರ ಶತಾಂಗಲೈಃ ।
ಉನ್ನತಾ ಸಕಿರೀಟಾಪಿ ಕಾರ್ಯ ವಾಸೋಭಿ ರಾವೃತಾ ॥೧೪॥

ಅವರವರ ಕೈಗಳ ಬೆರಳ 108 ಪ್ರಮಾಣ ಪ್ರತಿಮಾ ಉನ್ನತ ಕಿರೀಟ ವಸ್ತ್ರದಿಂದ ಆವೃತ್ತವಾದ ಸ್ಪಷ್ಟ ಗ್ರಹ ಮೂರ್ತಿಯಾಗತಕ್ಕದ್ದು.

## ಪೂಜಾ ವಿಧಿ

ವರ್ಣಾನುಸಾರಂ ಖೇಟಾನಾಂ ವಾಸಾಂಸಿ ಕುಸುಮಾನಿ ಚ ।
ಧೂಪ ದೀಪ ಸುಗಂಧಾದಿ ದ್ರವ್ಯಾಣಿ ಚ ದದಾತಿ ವೈ ॥೧೫॥

ತತ್ತ್ರದ್ ಗ್ರಹೋದಿತಂ ದ್ರವ್ಯ - ಮನ್ನಪಾನಾದಿಕಂ ತಥಾ ।
ಬಲಂ ಚ ವಿಧಿವದ ಭಕ್ತಿ ಪೂರ್ವಕಂ ವಿನಿವೇದಯೇತ್ ॥೧೬॥

ಗ್ರಹಗಳ ವರ್ಣಾನುಸಾರ (ಮಂಗಳ - ಕೆಲವು ಚಂದ್ರ ಬಿಳಿ) ವಸ್ತ್ರ ಪುಷ್ಪ ಧೂಪದೀಪ ಸುಗಂಧ ದ್ರವ್ಯಗಳಿಂದ ಅನ್ನಪಾನಾ ಹಾಗೂ ಬಲಿಯನ್ನು ಭಕ್ತಿಪೂರ್ವಕ ನಿವೇದಿಸುವುದು.

## ಜಪಸಂಖ್ಯಾ

ಸೂರ್ಯಾದೀನಾಂ ನಭೋಗಾನಾಂ ಮಂತ್ರೈ ವಿಪ್ರೇಂದ್ರ ವೈದಿಕೈಃ ।
ಪೌರಾಣಿಕೈರ್ವಾ ವಿದಿವದ್ ಮೌನಂ ತು ಜಪಮಾಚರೇತ್ ॥೧೭॥

ರವೇರ್ನಗಾಸ್ತ್ರದ್ ವದಿಂದೋ ರುದ್ರಾ ದಶ ಕುಜಸ್ಯವೈ ।
ಬುಧಸ್ಯ ನಂದಾ ವಚಸಾಮ ಪತೇರೇಕೋನ ವಂಶಿತಃ ॥೧೮॥

ಭೃಗೋಸ್ತು ಷೋಡಶತಥಾ ಅಧಿಕಾ ವಿಂಶತಿಃ ಶನೇಃ ।
ರಾಹೋರಷ್ಟೆಂದಃ ಕೇತರ್ನಗೇಂದವ ಇಮಾಃ ಪುನಾಃ ॥೧೯॥

ಸಹಸ್ರಗುಣಿತಾ ಲಬ್ಧ ಸಂಖ್ಯಕಂ ಜಪಮಾಚರೇತ್ ।
ಜಪಾನುಷ್ಠಾನತಃ ಖೇಟಾಃ ಪ್ರೀತಾಃ ಶುಭಫಲಪ್ರದಾಃ ॥೨೦॥

ಸೂರ್ಯಾದಿ ನವಗ್ರಹಗಳ ವೈದಿಕ ಅಥವಾ ಪೌರಾಣಿಕ ಮಂತ್ರಗಳನ್ನು ಕೆಳಿ ಕಾಣಿಸಿದ ಸಂಖ್ಯಿಕ ಜಪ ಮೌನವಾಗಿ ಮಾಡುವುದು ಶುಭಕರ. ಅದರಿಂದ ಪ್ರಸನ್ನವಾದ ಗ್ರಹಗಣಶುಭಪ್ರದವಾಗುತ್ತದೆ. ಸೂರ್ಯಾದಿ ನವಗ್ರಹಗಳಿಗೆ ಸೂರ್ಯ-7, ಚಂದ್ರ-11, ಮಂಗಳ-10, ಬುಧ-9, ಗುರು-19, ಶುಕ್ರ-16, ಶನಿ-23, ರಾಹು-18 ಹಾಗೂ ಕೇತು-17. ಈ ಅಂಕಗಳಿಗೆ 1000ದಿಂದ ಗುಣಿಸಿ ಬಂದ ಸಂಖ್ಯೆ ಜಪಸಂಖ್ಯೆ ಎಂದು ಪರಿಗ್ರಹಿಸುವುದು.

ಸೂರ್ಯ-7000, ಚಂದ್ರ-11,000, ಮಂಗಳ-10,000, ಬುಧ-7,000, ಗುರು-19,000, ಶುಕ್ರ-16,000, ಶನಿ-23,000, ರಾಹು-18,000 ಹಾಗೂ ಕೇತು-17,000. ಈ ರೀತಿ ಜಪಸಂಖ್ಯೆ ಪರಿಗಣಿಸುವುದು.

ವಿಮರ್ಶೆಯಲ್ಲಿ ವಿಶೇಷ ಬರೆಯಲಾಗಿದೆ.

## ಗ್ರಹಗಳ ಹವನಾರ್ಥ ಕಟ್ಟಿಗೆ

ಸೂರ್ಯಸ್ಯಾರ್ಕ ಪಲಾಶಶ್ಚ ವಿಧೋ ರ್ಭೂನಂದಸ್ಯತು ।
ಖದಿರೋಥ ಬುಧಸ್ಯೈವ - ಮಪಾಮಾರ್ಗ ಉದೀರಿತಃ ॥೨೧॥

ಪಿಪ್ಪಲೋಹಿ ಗುರೋರ್ಜಂತು ಫಲಃ ಶುಕ್ರಸ್ಯ ಸಮ್ಮತಃ ।
ಶನೇಃ ಶಮಿ ತ್ವಹೇರ್ವಾರ್ವಾ ಕುಶಾ ಕೇತೋಃ ಸಮಿತ್ ಸ್ಮೃತಾ ॥೨೨॥

ಸಸರ್ಪಿರ್ಮಧುನಾ ದಧ್ನಾ ಜುಹುಯಾತ ಪಾಯಸಾಪಿವಾ ।
ಅಷ್ಟೋತ್ತರಶತಂ ವಾಪಿ ಮನುಯುಕ್ ಪ್ರಮಿತಂ ಬುಧಃ ॥೨೩॥

ಗ್ರಹಗಳಿಗೆ ಹವನಾರ್ಥ ಸಮಿತ್ತುಗಳು ಈ ರೀತಿಯಿವೆ. ಸೂರ್ಯನಿಗೆ ಎಕ್ಕೆ (ಅರ್ಕ) ಅಥವಾ ಯೋಗಾಂತರದಲ್ಲಿ ಅರಳಿಯನ್ನು ಹೇಳುವರು.

| | | |
|---|---|---|
| ಚಂದ್ರ | - | ಪಲಾಶ (ಮುತ್ತುಗ) |
| ಅಂಗಾರಕ | - | ಬಿದರ (ಕಗ್ಗಲಿ) |
| ಬುಧ ಅಪಾಮಾರ್ಗ | - | ಉತ್ತರಾಣಿ |
| ಗುರು | | ಅರಳಿ |
| ಶುಕ್ರ | - | ಅತ್ತಿ |
| ಶನಿ | - | ಬನ್ನಿ |
| ರಾಹು | - | ಗರಿಕೆಹುಲ್ಲು |
| ಕೇತು | - | ದರ್ಭೆ |

ಈ ಸಮಿತ್ತುಗಳೊಡನೆ ತುಪ್ಪ, ಜೇನುತುಪ್ಪ, ಮೊಸರು ಅಥವಾ ಹಾಲಿನಿಂದ 108 ಸಲ ಅಥವಾ 28 ಸಲವಾದರೂ ಹವನ ಮಾಡುವುದು.

ಪ್ರೀತಯೇ ತು ನಭೋಗಾನಾ ಮೊದನಂ ಗುಡಮಿಶ್ರಿತವ್ ।
ಪಾಯಸಂ ಚ ಹವಿಷ್ಯಾನಂ ಕ್ಷೀರಷಾಷ್ಟಿಕಮೇವ ವಾ ॥೨೪॥

ಭಕ್ತ ಸದಧಿ ಸಾಜ್ಯಂ ಚ ಸುಚೂರ್ಣ ಸಾಮಿಷಂ ತಥಾ ।
ಚಿತ್ರಾನ್ನಮಿತಿ ವಿಪ್ರೇಭ್ಯೋಶನಂ ದೇಯಂ ಸಸತ್ಕೃತ್ ॥೨೫॥

ಗ್ರಹಗಳ ಪ್ರೀತ್ಯರ್ಥ - ಬೆಲ್ಲ ಸೇರಿಸಿ ಅನ್ನ ಪಾಯಸ ಹವಿಷ್ಯಾನ ಹಾಲಿನಿಂದ ಬೇಯಿಸಿದ ಅನ್ನ, ಮೊಸರನ್ನ, ತುಪ್ಪಾನ್ನ ತಿಲಸಹಿತ ಬೇಯಿಸಿದ ಅನ್ನ - ಚಿತ್ರಾನ್ನವನ್ನು ಆದರದಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

## ದಕ್ಷಿಣಾ

ಧೇನುಕಂಭವೃಷಸ್ವರ್ಣ ವಸ್ತ್ರಾಶ್ವಾಸಿತಧೇನವಃ ।
ಲೌಹಚ್ಛಾಗೌ ಚ ಗಹಿತಾ ಗ್ರಹಾಣಾಂ ದಕ್ಷಿಣಾಃ ಕ್ರಮಾತ್ ॥೨೬॥

ಸೂರ್ಯಾದಿ ಗ್ರಹ ಪ್ರೀತ್ಯರ್ಥ ಕರುಸಹಿತ ಆಕಳ ದಾನ, ಶಂಖದಾನ, ಎತ್ತು, ಬಂಗಾರ, ವಸ್ತ್ರ, ಕುದುರೆ, ಕರಿಆಕಳು, ಆಡು - ಕ್ರಮಶಃ ಸೂರ್ಯಾದಿ ಗ್ರಹದಿಂದ ಪ್ರತಿ ಗ್ರಹಕ್ಕೆ ದಾನದಿಂದ ಗ್ರಹ ತೃಪ್ತಿಯಾಗುತ್ತದೆ.

ದುಷ್ಪಸ್ಥಾನ ಸ್ಥಿತಂ ಖೇಟಂ ಜಪಹೋಮಾದಿ ಪೂಜನೈಃ
ವಿಪ್ರಾಣಾಮ ಭೋಜನೈದಾನ್ಯೈ-ರ್ಯತನ್ತಃ ಶಾಂತಯೇದ್ ಬುಧಃ
॥೨೭॥

ಗ್ರಹೇನಕೂಲೆ ಮನುಜಾಃ ಸುಖಿನೋಭ್ಯನ್ನಂತಾಃ ಸದಾ ।
ಪ್ರತಿಕೂಲೆ ದುಃಖಿಭಾಜ ಸ್ತಸ್ಮಾತ್ತಾನ್ ಪರಿಪೂಜಯೇತ್ ॥೨೮॥

ದುಃಸ್ಥಾನದಲ್ಲಿದ್ದ ಗ್ರಹಗಳು ಜಪಹೋಮಾದಿ ಪೂಜನ ಬ್ರಾಹ್ಮಣ ಭೋಜನದಿಂದ ಸಂತೃಪ್ತವಾಗುತ್ತವೆ – (ದಾನಾದಿ ಮಾಡುವುದು) ಗ್ರಹಾನುಕೂಲ ದಲ್ಲಿ ಮನುಷ್ಯ ಸುಖಿ ಪ್ರತಿಕೂಲ ಸಮಯದಲ್ಲಿ – ಪ್ರತಿಕೂಲ ಪರಿಸ್ಥಿತಿಯಲ್ಲಿ ರುವನು. ಪೂಜನಾದಿಗಳಿಂದ ಗ್ರಹ ಶಾಂತಿಯಾಗಿ ನಮಗೂ ಶಾಂತಿ.

ಗ್ರಹ ಶಾಂತಿಯಲ್ಲಿ – ಪುರಾಣೋಕ್ತಕ್ಕಿಂತ ವೇದೋಕ್ತ ಸರ್ವಶ್ರೇಷ್ಠ – ಪುರಾಣಗಳು ಪೂರಕ ಗ್ರಂಥಗಳಾಗಿರುವುದರಿಂದ ವೇದಗಳು ದೇವಾಂಗವೇ ಆಗಿರುವುದರಿಂದ ಪುರೋಣೋಕ್ತಕ್ಕಿಂತ ವೇದೋಕ್ತ ಸರ್ವಶ್ರೇಷ್ಠ. ಪುರಾಣೋಕ್ತವು ಸರಿಯೇ.

ವೇದೋಕ್ತ ಮಾಡುವಾಗ ಈ ಕೆಳಗಿನಂತೆ ದೇವ ಪ್ರತಿಷ್ಠಾಪನೆ (ಗ್ರಹ) ಸರಿಯಾದ ಕ್ರಮ.

## ಋಗ್ವೇದ ಯಜುರ್ವೇದಿಗಳಿಗೆ

| ಬುಧ | ಶುಕ್ರ | ಚಂದ್ರ |
|---|---|---|
| ಗುರು | ರವಿ | ಕುಜ |
| ಕೇತು | ಶನಿ | ರಾಹು |

## ಸಾಮವೇದಿ ಹಾಗೂ ಅಥರ್ವಣಿಗಳಿಗೆ

| ಕೇತು | ಚಂದ್ರ | ಕುಜ |
|---|---|---|
| ಗುರು | ರವಿ | ಬುಧ |
| ರಾಹು | ಶುಕ್ರ | ಶನಿ |

ಗ್ರಹ ಆಕಾರ – ರವಿ – ವರ್ತುಲ, ಚಂದ್ರ – ಚತುರಸ್ರ, ಕುಜ – ತ್ರಿಕೋನ, ಬುಧ – ಬಾಣ, ಗುರು – ದೀರ್ಘ ಚತುರಸ್ರ, ಶುಕ್ರ – ಪಂಚಕೋಣ, ಶನಿ – ಧನಸ್ಸು, ರಾಹು – ಮೇರ ಹಾಗೂ ಕೇತು ಧ್ವಜಾಕಾರವಾಗಿರುವುದು.

ವೇದ ಮಂತ್ರಗಳಲ್ಲಿ 'ಅಧಿ ದೇವತಾ ಪ್ರತ್ಯಧಿ ದೇವತಾಯ ಸಹಿತಃ' ಎಂದು ಹೇಳಬೇಕಾಗುವುದರಿಂದ ಈ ರೀತಿ ದೇವತೆಗಳನ್ನು ಕಲ್ಪಿಸಬೇಕಾಗುವುದು. ರವಿ --- ದೇವತೆ – ಅಗ್ನಿ – ಪ್ರತ್ಯಧಿದೇವತೆ. ಈಶ್ವರ (ರಾಮ)

ಚಂದ್ರ – ಆಪಃ – ಪಾರ್ವತಿ

ಬುಧ – ವಿಷ್ಣು – ನಾರಾಯಣ

ಶುಕ್ರ – ಇಂದ್ರ – ಇಂದ್ರಾಣಿ

ಶನಿ – ಪ್ರಜಾಪತಿ – ಯಮ

ರಾಹು – ಸರ್ಪ – ಕಾಲ

ಕೇತು – ಬ್ರಹ್ಮ – ಚಿತ್ರಗುಪ್ತರು

ಈ ರೀತಿ ಸ್ಮರಿಸಿಯೇ ನವಗ್ರಹ ಪೂಜೆ ಕೈಗೊಳ್ಳುವುದು.

ಒಂದೊಂದೇ ಗ್ರಹ ಅನಿಷ್ಟ ಫಲದಾಯಕವಾದಾಗ ಆಯಾಗ್ರಹಗಳ ಚಕ್ರ ಬೀಜಾಕ್ಷರ ಮಂತ್ರಗಳಿಂದ ಪೂಜಿಸುವುದು.

## ರವಿ ಅನಿಷ್ಟದಾಯಕನಿದ್ದಾಗ

(ರವಿ ಚಕ್ರದ ಜೊತೆ ಗೋಧಿ, ಕುಸುವ ಬಣ್ಣದ ವಸ್ತ್ರ, ಕಮಲ ಪುಷ್ಪ, ಬೆಲ್ಲ ಮಿಶ್ರಿತ ರವೆ ಪಾಯಸ. 7,000 ಜಪ, ಆದಿತ್ಯಸ್ತೋತ್ರ ಉತ್ತಮ ಮಂತ್ರ ಓಂ ಸೂರ್ಯಾಯ ನಮಃ (ರವಿವಾರ ಹಸ್ತ ನಕ್ಷತ್ರ ಉತ್ತಮ) 7 ದಿನ ಪೂಜೆ).




(ರವಿ ಯಂತ್ರ)

## ಚಂದ್ರ ಅರಿಷ್ಟದಾಯಕನಾದಾಗ

ಚಕ್ರದ ಜೊತೆ ಅಕ್ಕಿಶ್ವೇತ ವಸ್ತ್ರ, ಶ್ವೇತ ಪುಷ್ಪ, ತುಪ್ಪಾನ್ನ ನೈವೇದ್ಯ, 11,000 ಜಪ 'ಓಂ ಚಂದ್ರಾಯನಮಃ' ಸೋಮವಾರ ಚಿತ್ತಾನಕ್ಷತ್ರ ಶುಭಕರ – ಚಂದ್ರಾಷ್ಟ ವಿಂಶತಿ ಪಠಣ ಉತ್ತಮ.




(ಚಂದ್ರ ಚಕ್ರ)

## ಮಂಗಳ ಅನಿಷ್ಟನಿದ್ದಾಗ

ತೊಗರಿಯನ್ನಿಟ್ಟು ಕೆಂಪು ವಸ್ತ್ರ, ಕೆಂಪು ಪುಷ್ಪ, ಬೆಲ್ಲ ಮಿಶ್ರಿತ ರವಿ ಪಾಯಸ. 10,000 ಜಪ 'ಓಂ ಮಂಗಳಾಯ ನಮಃ' ಮಂಗಳ ವಾರ, ಸ್ವಾತಿ, ಅಂಗಾರಕ ಸ್ತೋತ್ರ ಪಠಣ ಉತ್ತಮ.




(ಮಂಗಳ ಚಕ್ರ)

## ಬುಧ ಅನಿಷ್ಟಕಾರಕನಾಗಿದ್ದಾಗ

ಚಕ್ರದ ಜೊತೆ ಹೆಸರು ನೀಲಿ ಬಣ್ಣದ ವಸ್ತ್ರದಿಂದ ಅಲಂಕರಿಸಿ ಎಲ್ಲ ಪುಷ್ಪದಿಂದ ಪೂಜಿಸಿ ತುಪ್ಪದಿಂದ ಮಾಡಿದ ಪದಾರ್ಥ ನೇವೇದ್ಯ. 4,000 ಜಪ 'ಓಂ ಬುಧಾಯ ನಮಃ' ಜೊತೆಗೆ ಬುಧ ಪಂಚವಿಂಶತಿ ಪಠಣ ಶುಭಕಾರಕವೆ. ಎಲ್ಲ ಕಾರ್ಯ ಜಯವೂ ಉಂಟು. ಪೂಜೆ ಪ್ರಾರಂಭ ಬುಧವಾರ ವಿಶಾಖ ನಕ್ಷತ್ರ ಶುಭಕರ.




(ಬುಧ ಚಕ್ರ)

## ಗುರು ಅರಿಷ್ಟನಿದ್ದಾಗ

ಚಕ್ರದ ಜೊತೆ ಕಡಲೆ, ಹಳದಿ ಬಣ್ಣದ ವಸ್ತ್ರ, ಹಳದಿ ಹೂವು, ಸಕ್ಕರೆ-ರವೆ ಪಾಯಸ. 19,000 ಜಪ ಹಾಗೂ ಬೃಹಸ್ಪತಿ ಸ್ತೋತ್ರ (ಸೂಕ್ತ).




(ಗುರು ಚಕ್ರ)

### ಶುಕ್ರ ಅನಿಷ್ಟದಾಯಕನಿದ್ದಾಗ

ಚಕ್ರದ ಜೊತೆ ಅಕ್ಕಿ ಚಿತ್ರ ವಿಚಿತ್ರ ವಸ್ತ್ರ, ಶ್ವೇತ ಪುಷ್ಪದಿಂದ, ತುಪ್ಪ ಮಿಶ್ರಿತ ವಸ್ತುವಿನ ನೈವೇದ್ಯ. 16,000 ಜಪ, ಶುಕ್ರ ಸ್ತೋತ್ರ ಉತ್ತಮ ಫಲ.




(ಶುಕ್ರ ಚಕ್ರ)

### ಶನಿ ಅರಿಷ್ಟನಾಗಿದ್ದಾಗ

ಶನಿ ಚಕ್ರ - ಉದು ಕರಿವಸ್ತ್ರದಿಂದ ಅಲಂಕಾರ. ಕೃಷ್ಣಪುಷ್ಪ, ಎಣ್ಣೆ ಮಿಶ್ರಿತ ಪದಾರ್ಥ ನೇವೇದ್ಯ. 23,000 ಜಪ 'ಓಂ ಶನೇಶ್ವರಾಯ ನಮಃ' ಜೊತೆಗೆ ಶನಿ ಸ್ತೋತ್ರ.




(ಶನಿ ಚಕ್ರ)

ಅನಿಷ್ಟದಾಯಕ ರಾಹು – ಚಕ್ರದ ಜೊತೆವುಳ್ಳ ನೀಲಿವರ್ಣದ ವಸ್ತ್ರ, ನೀಲಿ ಪುಷ್ಪ, ಎಣ್ಣೆ ಮಿಶ್ರಿತ ಪದಾರ್ಥ ನೈವೇದ್ಯ. 18,000 ಜಪ 'ರಾಹುವೇ ನಮಃ'

## ರಾಹುಚಕ್ರ ಶನಿಯಂತೆ

ಕೇತು ಅನಿಷ್ಟದಾಯನಾದಾಗ ಚಕ್ರದ ಜೊತೆ ಹುರುಳಿ, ಕೃಷ್ಣಬಣ್ಣದ ಅರಿವೆ ಧೂಮ, ಪುಷ್ಪದಿಂದ ಪೂಜೆ. 15,000 ಜಪ. ಎಣ್ಣೆ ಮಿಶ್ರಿತ ಪದಾರ್ಥ ನೈವೇದ್ಯ. ಕೇತು ಪಂಚವಿಂಶತಿ ಸ್ತೋತ್ರ 'ಕೇತುವೆ ನಮಃ' ಮಂತ್ರ.

## ಕೇತು ಚಕ್ರ ಮಂಗಳನಂತೆ

ಇಲ್ಲಿ ಇನ್ನು ಅನೇಕ ವಿಧದ ಪೂಜಾದಿಗಳಿವೆ. ಅವುಗಳನ್ನು ಆಚರಿಸುವುದು – ಅವರವರ ಭಕ್ತಿಗೆ ಭಿನ್ನ ವಿಷಯ ಅಥವಾ ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಇಲ್ಲ. ಈ ಗ್ರಂಥಾರಂಭದಲ್ಲಿ ಹೇಳಿದ - ದೇವತೆ ರಾಮ, ಕೃಷ್ಣ, ನರಸಿಂಹಾದಿ ದೇವತಾ ಆರಾಧನೆಯಿಂದ ಗ್ರಹಗಳು ತೃಪ್ತಿಗೊಂಡು ಮುದ ನೀಡುತ್ತವೆ.

## ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಗ್ರಹಶ್ಯಾಂತಾಧ್ಯಾಯಃ ಸಮಾಪ್ತಿಃ



ೞಽನೇ ಅಧ್ಯಾಯ

## ಅಥ ಅಶುಭ ಜನುವರ್ಣನಾಧ್ಯಾಯಃ

**ಪರಾಶರ ಉವಾಚ:**

ಅಥ ಬ್ರವೀಮಿ ಮೈತ್ರೇಯ ಕಾರಣಾಂತರಮತ್ರಿತೆ ।
ಯೇನಾಶುಭಂ ಜನುರ್ನೃಣಾಂ ಶುಭಾಂಗೇಪಿ ಸಸದ್‌ಗ್ರಹೆ ॥೧॥

ಭದ್ರಾಮಾಸಿತ ಪಕ್ಷೀಯ ಚತುರ್ದಶ್ಯಾಂ ಚ ಸಂಕ್ರಮೇ ।
ರವೇಃ ಸೋದರಪಿತ್ರರ್ಕ್ಷೆ ಗಂಡಾಂತ ತ್ರಿತಯೋಥವಾ ॥೨॥

ಸೂರ್ಯೇಂದು ಗ್ರಹೇಣ ದಗ್ಧಯುತೌ ಪಾತೇವಮೇಪಿಚ ।
ಯಮಘಂಟವ್ಯತೀ ಪಾತ - ದಿಯೋಗೆ ಜನ್ಮ ಚೆನ್ನೃಣಾಮ್ ॥೩॥

ಕನ್ಯಾತ್ರಯಾಂತರಂ ಪುತ್ರಃ ಪುತ್ರಿ ಪುತ್ರ ತ್ರಯಾಂತರೆ ।
ಜಾಯತೆ ಯದಿ ವಾಸೂತೆ ವಿಕಾರೋಪ್ಯಶುಭಂ ಜನುಃ ॥೪॥

ಶುಭಾಪ್ತಯೋ ಬುಧಃಕುರ್ಯಾಚ್ಛಂತಿ ಶಾಸ್ತ್ರೋಕ್ತಾಸಮ್ಮತಾಮ್ ।
ಶಿವಂ ಶಾಂತ್ಯಾ ಪ್ರಜಾಯೇತ್ ವಕ್ಷ್ಯತಸ್ತಾಮನುಕ್ರಮಾತ್ ॥೫॥

**ಪರಾಶರರು ಹೇಳಿದರು–**

ಹೇ ಮೈತ್ರೇಯ,

ಶುಭ ಲಗ್ನ ಶುಭಗ್ರಹ ಸಂಯೋಗವಿದ್ದಾಗಲೂ ಮನುಷ್ಯರಿಗೆ ಅಶುಭಪ್ರದ ಜನ್ಮವಾಗುತ್ತದೆ. ಅದರ ಕಾರಣ ಬೇರೆಯೇ ಇದೆ. ಅದನ್ನು ಹೇಳುತ್ತೇನೆ ಕೇಳು. ಭದ್ರಾಕರಣ ಅಮಾವಾಸ್ಯ ತಿಥಿಕೃಷ್ಣ ಚತುರ್ದಶಿ ಸೂರ್ಯ ಸಂಕ್ರಾಂತಿಸಹೋದರ ಅಥವಾ ತಂದೆಯನಕ್ಷತ್ರ ತ್ರಿವಿಧ ಗಂಡಾಂತ ಸೂರ್ಯ, ಚಂದ್ರ ಗ್ರಹಣ ದಗ್ಧ ಯೋಗ ಪಾತ ಅಥವಾ ಕ್ಷಯತಿಥಿ ಯಮಘಂಟವ್ಯತಿಪಾತಾದಿ ದುಷ್ಟಯೋಗದಲ್ಲಿ ಮನುಷ್ಯನ ಜನ್ಮವಾಗಿದ್ದರೆ, 3 ಕನ್ಯೆಯರ ಮೇಲೆ ಪುತ್ರ ಜನ್ಮ, 3 ಪುತ್ರರ ಮೇಲೆ ಕನ್ಯೆಯು ಜನ್ಮ ಅಥವಾ ಪ್ರಸವ ವಿಕಾರವಾಗಿದ್ದರೆ ಈ ಎಲ್ಲ ತಿಥಿಗಳಲ್ಲಿ ಜಾತಕನ ಜನ್ಮ ಅಶುಭಕರ. ಶಾಂತಿಗಾಗಿ ಶಾಸ್ತ್ರಸಮ್ಮತ ಶಾಂತಿ ಮಾಡಿಸುವುದು. ಶಾಂತಿಯಿಂದ ಶುಭಪ್ರಾಪ್ತಿ – ಶಾಂತಿ ಕ್ರಮವನ್ನು ಮುಂದೆ ಹೇಳುತ್ತೇನೆ.

ಇದು ಸಾಮಾನ್ಯ ಅನೇಕ ಜನರ ಸಮಸ್ಯೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅಶುಭನು
ವರ್ಣನಾಧ್ಯಾಯಃ ಸಮಾಪ್ತಃ

೮೭ನೇ ಅಧ್ಯಾಯ

# ಅಥ ಅಮಾಜನ್ಮಶಾಂತ್ಯಾಧ್ಯಾಯಃ

## ಪರಾಶರ ಉವಾಚ:

ಅಮಾವಾಸ್ಯೋದ್‌ಭವೋ ಜಾತಃ ಪಿತ್ರೋ ದಾರಿದ್ರ್ಯದೋಮತಿಃ ।
ದೋಷ ಪ್ರಶಮನಾಯೈವ ಶಾಂತಿ ಕುರ್ವಿತ ಯತ್ನತಃ ॥೧॥

ವಿಧಾಯ ವಾರಿಣಾ ಪೂರ್ಣ ಘಟಂ ತಂ ಸ್ಥಾಪಯೇತ್ ಬುಧಃ ।
ಕೋವಿದಾರವಟಾವ್ರಾಣಾಂ ನಿಂಬಪಿಪ್ಪಲ ಯೋರೋಪಿ ॥೨॥

ತ್ವಗ್‌ಮೂಲಪಲ್ಲವಾಂಸ್ತಾಪಿ ಪಂಚರತ್ನಾನಿ ತತ್ರವೈ ।
ನಿಕ್ಷಿಪ್ಯಾರಕ್ತ ವಸ್ತ್ರಾಭ್ಯಾ - ಭಾವೇಷ್ಟಧ್ಯ ತ್ವಭಿಮಂತ್ರಯೇತ್ ॥೩॥

ಆಪೋಹಿಷ್ಟೆತ್ಯಾದಿ ಸರ್ವೇ ಸಮುದ್ರ ಇತಿ ಚ ತ್ರಿಭಿಃ ।
ಮಂತ್ರೈರಥ ಸ್ವರ್ಣಮಯಿಂ ಮೂರ್ತಿವಾ ಸೂರ್ಯ ಚಂದ್ರಯೋಃ ॥೪॥

ತಾಮ್ರೋದ್ ಭವಾಂ ರಾಜಿತಂ ಚ ದರ್ಶದೇವತಯೋಃ ಕ್ರಮಾತ್ ।
ವಿರಚ್ಯ ಚ ಸಂಸ್ಥಾಪ್ಯ ವಿಧಿವತ್ ತಾಮಿಹಾರ್ಚಯೇತ್ ॥೫॥

ಸವಿತೆತ್ಯಾದಿನಾಪ್ಯಾಯು - ಸ್ವೆತಿ ಮಂತ್ರೇಣ ಚ ಕ್ರಮಾತ್ ।
ಪಂಚೋಪ ಚಾರೈರ್ವಾ ಷಡ್‌ಭರಧಿಕೈರ್ದಶಭಿ ರ್ಬುಧಃ ॥೬॥

ಅರ್ಚಯೇಚ್ಚ ತತೋಹೋಮಂ ಕುರ್ಯಾತ್ ಸವಿತ್ರಮಂತ್ರತಃ ।
ಸೋಮೊಧೇನು ರಿತ್ಯಾತಶ್ವಾಷ್ಟಾಧಿಕಂ ಶತಶಸಂಖ್ಯಕಮ್ ॥೭॥

ಅಷ್ಟವಿಂಶತಿ ಸಂಖ್ಯಾಕ ಮಪಿ ವಾಥಾಭಿಷಿಚ್ಯಯೇತ್ ।
ಸಪುತ್ರ ದಂಪತಿ ತತ್ರ ಬ್ರಾಹ್ಮಣಾನ್ ಭೋಜಯೋತ್ತತಃ ॥೮॥

ರಜಿತ ಸ್ವರ್ಣದೇನುಶ್ಚ ದಕ್ಷಿಣಾತ್ವೇನ ದಾಪಯೇತ್ ।
ಏವಂ ಕೃತಮೇದ್ ಭವಸ್ತು ನಿಯತಮ ಕ್ಷೇಮಮಾಪ್ನುಯಾತ್ ॥೯॥

## ಪರಾಶರರು ಹೇಳಿದುದು–

ಅಮಾವಾಸ್ಯ ಉತ್ಪನ್ನ ಬಾಲಕ ತಾಯಿ, ತಂದೆಗೆ ದಾರಿದ್ರ್ಯ ಕೊಡುತ್ತಾನೆ. ಆ ದೋಷ ಪರಿಹಾರಕ್ಕಾಗಿ ಯತ್ನಪೂರ್ವಕ ಶಾಂತಿ ಮಾಡಿಸುವುದು ವಿಹಿತ.

ಸರ್ವಪ್ರಥಮ ಜಲಪೂರ್ಣ ಕೊಡ. ಅತ್ತಿ, ಚಕ್ಕೊಲಿತ (ಅಮ್ರ, ನಿಂಬೆ, ಅಶ್ವತ್ಥದ ಟೊಂಗೆ, ವೀಳ್ಯದೆಲೆ ಪಂಚರತ್ನಗಳನ್ನು ಹಾಕಿ ರಕ್ತವಸ್ತ್ರದಿಂದ ಆಚ್ಛಾಧಿಸಿ ಘಟಿಸ್ಥಾಪನೆ ಮಾಡಿ 'ಆಪೊಹಿಷ್ಟೈತ್ಯಾದ ಸರ್ವೇಸಮುದ್ರ' ಈ ಮಂತ್ರಗಳಿಂದ ಅಭಿಮಂತ್ರಣೆ ಅಮಾವಾಸ್ಯೆಯ ದೇವ ಚಂದ್ರ, ಸೂರ್ಯ ಪ್ರತಿಮಾ ಸುವರ್ಣವ ಅಥವಾ ಸೂರ್ಯನ ತಾಮ್ರ, ಚಂದ್ರನ ಬೆಳ್ಳಿ ಪ್ರತಿಮೆ - ಮಾಪನೆ ವಿಧಿವತ್ ಸ್ಥಾಪನೆ ಪಂಚೋಪಚಾರ, ಷೋಡಶೋಪಚಾರಗಳಿಂದ ಪೂಜಿಸಿ 'ಆಪ್ಯಾಸ್ವೆತ್ಯಾದಿ' ಮಂತ್ರದಿಂದ ಪಂಚಷೋಡಶ ಉಪಚಾರ ಹಾಗೂ ಸವಿತ್ರ ಮಂತ್ರ ಅಥವಾ ಸೋಮೇಧೀನ ಇತ್ಯಾದಿ ಮಂತ್ರದಿಂದ ಅಷ್ಟೋತ್ತರ (108) ಸಂಖ್ಯಕ ಅಥವಾ ಅಷ್ಟವಿಂಶತಿ ಪ್ರಮಿತಿ ಹವನ ಮಾಡಿ ಹವನಾನಂತರ ಪುತ್ರಸಹಿತ ದಂಪತಿಗಳು ಕಲಶ ಜಲದಿಂದ ಸ್ನಾನ ಮಾಡಿ ಬ್ರಾಹ್ಮಣ ಭೋಜನ ಮಾಡಿಸಿ ದಕ್ಷಿಣೆ ರೂಪದಲ್ಲಿ ಬೆಳ್ಳಿ, ಬಂಗಾರ, ಆಕಳು ಕೊಡುವುದು. ಈ ಪ್ರಕಾರ ಮಾಡಿದಾಗ ನಿಶ್ಚಿತ ಕಲ್ಯಾಣ ವಾಗುತ್ತದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಅಮಾಜನ್ಮ
ಶಾಂತ್ಯಾಧ್ಯಾಯಃ ಸಮಾಪ್ತಿಃ

# ಅಥ ಕೃಷ್ಣ ಚತುರ್ದಶಿ ಜನನ ಶಾಂತ್ಯಾಧ್ಯಾಯಃ

**ಪರಾಶರ ಉವಾಚ:**

ಪಕ್ಷೆ ಸಿತೆ ಚತುರ್ದಶ್ಯಾಂ ಜನ್ಮ ಭೇದಶುಭಂ ಸ್ಮೃತಮ್ ।
ಷಡ್‌ಭರ್ಭಕ್ತೆ ಚತುರ್ದಶ್ಯಾ ಮಾನೇತು ಪ್ರಥಮೆ ಯದಿ ॥೧॥

ಜನುರ್ಭವೆಚ್ಛುಭಂ ತರ್ಹಿ ದ್ವಿತೀಯೇ ಜೇನ್ಮೃತಿಃ ಪಿತುಃ ।
ತೃತೀಯೇ ಮಾತೃಮರಣಾ ಚತುರ್ಥೆಮಾತುಲಕ್ಷತಿಃ ॥೨॥

ಪಂಚಮೇ ವಂಶನಾಶಃ ಸ್ಯಾತ್ ಷಷ್ಟೆ ಸಂಪತ್ತಿ ಸಂಕ್ಷಯಃ ।
ಅಪಿ ವಾತ್ಮ ವಿನಾಶಃ ಸ್ಯಾತ್ ವತಃ ಶಾಂತಿ ಸಮಾಚರೇತ್ ॥೩॥

ಕೃಷ್ಣಪಕ್ಷ ಚತುರ್ದಶಿ ಜನ್ಮ ಅಶುಭ ಪ್ರದವಾಗಿದೆ. ಚತುರ್ದಶಿಯನ್ನು (ಘಟಿ ಫಲ) 6ರಿಂದ ಭಾಗಿಸಿ – 1ನೇ ಭಾಗದಲ್ಲಿ ಜನ್ಮ ಶುಭ; ದ್ವಿತೀಯ ಭಾಗದಲ್ಲಿ ಜನ್ಮವಾದರೆ ತಂದೆಯ ಮರಣ; ತೃತೀಯ ಭಾಗದಲ್ಲಿ ಜನನ, ಮಾತೃಮರಣ; ನಾಲ್ಕನೇ ಭಾಗದಲ್ಲಿ ಜನನ, ಮಾಮನ (ತಾಯಿಯ ಸಹೋದರ) ವಿನಾಶ; ಪಂಚಮ ಭಾಗದಲ್ಲಿ ಜನನ ಸಂಪತ್ತಿನ ಕ್ಷಯ ಅಥವಾ ಆತ್ಮ ವಿನಾಶ – ಅದಕ್ಕಾಗಿ ಆಯುಷ್ಯ ಶಾಂತಿ ಮಾಡಿಸಬೇಕು.

ಶಿವಸ್ವರ್ಣಮಯಿಂ ಮೂರ್ತಿ ಯಥಾಶಕ್ತಿ ವಿನಿರ್ಮಿತಾಮ್ ।
ಶುಭ್ರಸ್ರಗ್ವಸನೋಪೇತಾಂ ವೃಷಾರೂಢಾಂ ಮನೋರಮಾಮ್ ॥೪॥

ಭಾಲೆ ಬೆಲೆಂದುಲ ಸಿತಾಂ ನೇತ್ರತ್ರಯದಿ ಭೂಷಿತಾಮ್ ।
ವರಪ್ರದಾಯ ಭಯದಾಂ ದ್ವಿಭುಜಾಂ ಪೂಜಯೇದ್ ಬುಧಃ ॥೫॥

ಬಂಗಾರ ಶಿವನ ಮೂರ್ತಿಯನ್ನು ಯಥಾಶಕ್ತಿ ಮಾಡಿಸಿ ಪೂಜೆ ಮಾಡಿ ಆ ಮೂರ್ತಿಗೆ ಶುಭ್ರಮಾಲ್ಯ; ಶುಭ್ರ ವಸ್ತ್ರಯುಕ್ತ ವೃಷಭಾರೇನ ಹಾಗೂ ಸುಂದರ ಹಣೆಯಲ್ಲಿ ಕಣ್ಣು ನೆತ್ತಿಯಲ್ಲಿ ಚಂದ್ರ - ವರಪ್ರದ ಅಭಯದ ದ್ವಿಭುಜ ಮೂರ್ತಿಯಾಗಿರುವುದು.

ಮಂತ್ರೈಸ್ತು ವಾರುಣ್ಯೆರಾವಾ - ಹನಂ ತ್ರಯಂಬುಕ ಮಿತ್ಯತಃ ।
ಅಭ್ಯರ್ಚನಂ ತತಸ್ತದ್‌ವ-ನ್ಮಂತ್ರೈರಾಗ್ನೇಯ ಕುಂಭತಃ ॥೬॥

ಸಮಾರಭ್ಯಾರ್ಚಯೇದ್ ಭಕ್ತ್ಯೋಜಪೇತ್ ಸೂಕ್ತದ್ವಯಂಪುನಃ ।
ಕದ್ರುದ್ರೇ ತಿಜಪಂ ಕುರ್ಯಾದಭಿಷೇಕಂಖ ಶಿವಸ್ಯ ಚ ॥೭॥

ಗ್ರಹಾಭಿಪೂಜನಂ ಭಕ್ತಿ ಪೂರ್ವಕಂ ಕಾರಯೋತ್ತಥಾ ।
ಸಮಿದ್ ಘೃತಚರುನ್ ತದ್‌ವಿತ್ ತಿಲಾನ್ ಮಾಷಾನ್ ಸಸರ್ಷಪಾನ್ ॥೮॥

ಜುಹುಯಾತ್ರಜ್ವಲಿತೆ ಜಾತ - ವೇದಸ್ಯಷ್ಟೋತ್ತರಂ ಶತಪಂ ।
ಅಷ್ಟವಿಂಶತಿ ಸಂಖ್ಯಂ ವಾ ತಿಲಾನ್ 'ತ್ರಂಬ್ಯಕ' ತಃಕ್ಷಿಪೇತ್ ॥೯॥

ಗ್ರಹಾಣಾಂ ಹವನಂ ತದ್‌ತ್ ಕುರ್ಯಾದ ವ್ಯಾಹೃತಿ ಭಿಸ್ತತಃ ।
ಅಭಿಸಿಂಚ್ಚೆತ ಸುತಂ ಚಾಪಿ ಪಿತರೌ ಸ್ಯಾಚ್ಚುಭಂ ತದಾ ॥೧೦॥

ಬ್ರಾಹ್ಮಣಾನ್ ಭೋಜಯೇದ್ ಭಕ್ತ್ಯಾ ದಕ್ಷಿಣಾಮಪಿ ಕರ್ಮಣಃ ।
ಕರ್ಮಾಂತೆ ಶಕ್ತಿತೋದದ್ಯಾತಿ ತತಃ ಕ್ಷೇಮಮವಾಪ್ನುಯಾತ್ ॥೧೧॥

ಶಿವನ ಮೂರ್ತಿಗೆ ಮರಣ ಮಂತ್ರದಿ ಆಹ್ವಾನ ತ್ರಯಂಬುಕ ಯಜಾಮಹಿ ಆದಿ ಮಂತ್ರಗಳಿಂದ ಪೂಜಿಸಿ ಪುನಃ ಅದೇ ಮಂತ್ರಗಳಿಂದ ಆಗ್ನೇಯ ಕೋನ ಸ್ಥಿತ ಘಟಿಯಿಂದ ಆರಂಭಿಸಿ ಪೂಜಿಸಿ ಹಾಗೂ ಸೂಕ್ತ ದ್ವಯದ ಪಾಠ ಮಾಡುವುದು ಹಾಗೂ 'ಕದ್ರುದ್ರೆ' ತ್ಯಾದಿ ಪುರುಷಸೂಕ್ತ ಜಪಾಂತ್ಯದಲ್ಲಿ ರುದ್ರಾಭಿಷೇಕ ನವಗ್ರಹ ಪೂಜಿಸಿ ( ಆ ಕೃಷ್ಣನ ರಜಸಾ.... ದಿಂದ) ಸಮಿತ್ತ (ಅರಳಿ ಕಟ್ಟಿಗೆ) ತುಪ್ಪಚರು ತಿಲಉದ್ದುಗಳನ್ನು ಪ್ರಜ್ವಲಿತಾಗ್ನಿಯಲ್ಲಿ 108 ಸಲ ಅಥವಾ 28 ಸಲ ಹವನ ಮಾಡಿ ತ್ರಯಂಬುಕೇತ್ಯಾದಿ ಮಂತ್ರದಿಂದ ಅಗ್ನಿಯಲ್ಲಿ ತಿಲವನ್ನು ಪ್ರಕ್ಷೇಪಿಸುವುದು. ವ್ಯಾಹುತಿ ಮಂತ್ರಗಳಿಂದ (ಓಂ ಭೂ ಸ್ವಾಹ... ಇತ್ಯಾದಿ) ಹವನ ಮಾಡಿ ಅನಂತರ ಪುತ್ರ ಸಹಿತ ದಂಪತಿಗಳು ಕಲಶದ ಜಲದಿಂದ ಆಚಾರ್ಯರಿಂದ ಸಿಂಚನ ಮಾಡಿಸಿ ಕೊಳ್ಳುವುದು. ಬ್ರಾಹ್ಮಣ ಭೋಜನ ಯಥಾಶಕ್ತಿ ದಕ್ಷಿಣೆ ಕೊಡುವುದು. ನಿಶ್ಚಯ ಪೂರ್ವಕ ಕಲ್ಯಾಣ ಉಂಟಾಗುತ್ತದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಕೃಷ್ಣ ಚತುರ್ದಶಿ ಜನನ ಶಾಂತ್ಯಾಧ್ಯಾಯಃ ಸಮಾಪ್ತಃ

## ೮೯ನೇ ಅಧ್ಯಾಯ

# ಅಥ ಭದ್ರಾವಮಾದಿದುಷ್ಪಯೋಗ ಶಮನಾಧ್ಯಾಯಃ

**ಪರಾಶರ ಉವಾಚ:**

ಭದ್ರಾವಮ ವ್ಯತಿಪಾತ - ಯಮ ಗಂಟಾದಿದುರ್ಯುತೌ ।
ಜನುರ್ಯದಶುಭಂ ಪೂರ್ವ ಮುದಿತಂ ತತ್ರ ಸಂಶೃಣು ॥೧॥

ಶಾಂತೋರ್ವಿಧಿಖಂ ಯಥವಿಧಾನಾ ಚ್ಛವ ಮಾಪ್ನೋತಿ ಮಾನವಃ ।
ಶಾಂತಿಸ್ತದೂದುರ್ಯುತಾವೇದ್ ಕಾರ್ಯಾ ಯಸ್ಯಾಂ ಜನುರ್ಭವೇತ್ ॥೨॥

**ಪರಾಶರರು ಹೇಳಿದರು—**

ಭದ್ರಾ ವ್ಯತಿಪಾತ ಯಮಘಂಟ ಆದಿ ದುರ್ಯೋಗದಲ್ಲಿ ಜನ್ಮ ಅಶುಭಪ್ರದವೆಂದು ಹೇಳಲ್ಪಟ್ಟಿದುದ ಅದರ ಶಾಂತಿ ವಿಧಿವಿಧಾನ ಕೇಳು. ಶಾಂತಿ ಮಾಡಿಸುವುದರಿಂದ ಮನುಷ್ಯನಿಗೆ ಕಲ್ಯಾಣ ಉಂಟಾಗುತ್ತದೆ. ಯಾವ ದುರ್ಯೋಗದಲ್ಲಿ ಜನ್ಮ ಆಗಿದೆಯೋ ಅದುರ್ಯೋಗದ - ಪುನಃ ಪ್ರಾಪ್ತಿ ಸಮಯದಲ್ಲಿಯೇ ಶಾಂತಿ ಮಾಡಿಸುವರು. ಭದ್ರಾದಲ್ಲಿ ಹುಟ್ಟಿದ್ದರೆ ಶಾಂತಿಗಾಗಿ ಭದ್ರಾವನ್ನೇ ತೆಗೆದುಕೊಳ್ಳುವುದು.

ಶುಭೆ ಮುಹೂರ್ತೆ ಸಲ್ಲಗ್ನೆ ದೈವ ಜ್ಞಾನೋದಿತೆ ನರಃ ।
ದೇವಾನಾಮಾರ್ಚನಂ ತದ್ವ ಯಜನಂ ಖಚಾರಿಣಾಮ್ ॥೩॥

ರುದ್ರಾಭಿಷೇಕಮಪಿ ಚ ಧೂಪದೀಪೌ ಶಿವಾಂತಿಕೇ ।
ಅಶ್ವತ್ಥಸ್ಥ ನಮಸ್ಕಾರ ಮಾಯುಷೊ ವೃದ್ಧಿದಂ ತಥಾ ॥೪॥

ಹವನಂ ಹರಿಮಂತ್ರೇಣ ಕುರ್ಯಾದಷ್ಟೋತ್ತರ ಶತಮ್ ।
ಭೋಜನಂ ಬ್ರಾಹ್ಮಣಾನಾಂ ಚ ಯಥಾಶಕ್ತಿ ಹಿ ಕಾರಯೇತ್ ॥೫॥

ಕರ್ಮಾಂತೆ ದಕ್ಷಿಣಾಚ್ಚಾಪಿ ದದ್ಯಾದಾಚಾರ್ಯಹೇತವೆ ।
ಏವಂ ಕೃತೆ ಧ್ರುವಂ ಜಾತೋ ಭವೇತ್ ಕಲ್ಯಾಣಭಾಜನಃ ॥೬॥

ಜ್ಯೋತಿಷಿಯಿಂದ ನಿರ್ದಿಷ್ಟ ಶುಭಮುಹೂರ್ತ ತಿಳಿದು (ಶುಭಲಗ್ನ) ಆ ಮುಹೂರ್ತದಲ್ಲಿ ದೇವತೆಗಳ ಹಾಗೂ ನವಗ್ರಹ ಪೂಜೆ ಮಾಡಿ – ರುದ್ರಾಭಿಷೇಕ

ಮಾಡುವುದು ಹಾಗೂ ದೇವರ ಸಮೀಪವೆ ಧೂಪದೀಪಾದಿ ದರ್ಶನ ಮಾಡುವುದು – ಆನಂತರ ಆಯುರ್ವೃದ್ಧಿ ಸಲುವಾಗಿ ಅಶ್ವತ್ಥ (ಅರಳಿ) ಮರಕ್ಕೆ ಪ್ರದಕ್ಷಿಣೆ, ನಮಸ್ಕಾರಾದಿಗಳಿಂದ ಪೂಜಿಸಿ, ವಿಷ್ಣು ಅಷ್ಟೋತ್ತರ ಅಥವಾ ಸಹಸ್ರನಾಮದಿಂದ ನೂರು ಸಲ ಹವನ ಮಾಡಿ ಕರ್ಮಾಂತದಲ್ಲಿ ಬ್ರಾಹ್ಮಣ ಭೋಜನ ಮಾಡಿಸಿ ಯಥಾಶಕ್ತಿ ದಕ್ಷಿಣೆ ಕೊಡುವುದು. ಇದರಿಂದ ಭದ್ರಾದಿ ಕುವಯಾಹೂರ್ತ ಜನನ ಶಾಂತಾಗಿ ಉತ್ತರೋತ್ತರ ಅಭಿವೃದ್ಧಿಯಾಗುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಭದ್ರಾವಮಾದಿಮಷ್ಟ
ಯೋಗ ಶಾಂತ್ಯಾಧ್ಯಾಯಃ ಸಮಾಪ್ತಿಃ

೯೦ನೇ ಅಧ್ಯಾಯ

# ಅಥ ಏಕನಕ್ಷತ್ರೋತ್ಥ ಜಾತಕ ಶಾಂತ್ಯಾಧ್ಯಾಯಃ

**ಪರಾಶರ ಉವಾಚ:**

ಯದಿ ಜನ್ಮಭವೇತ್ ಪಿತ್ರೋ ಜನ್ಮರ್ಕ್ಷೇ ವಾಪಿ ಸೋದರೆ ।
ಮೃತಸ್ತಯೋರಥೈಕಸ್ಯ ವಾ ಭವೇದಿತಿ ನಿಶ್ಚಿತಮ್ ॥೧॥

ಪ್ರಾಚೀನೈರ್ಋಷಿಭಿಃ ಪ್ರೋಕ್ತಂ ವಚ್ಮಿ ಶಾಂತಿವಿಧಿಂ ಶೃಣು ।
ಶುಭರ್ಕ್ಷೆ ಸದ್ಧನೆ ರಿಕ್ತಾಮಾವಮಾದಿ ವಿವರ್ಜಿತೆ ॥೨॥

ಚಂದ್ರತಾರ ಬಲೋಪೇತೆ ಶಾಂತಿ ಕುರ್ಯಾದ್ ವಿಚಕ್ಷಣಃ ।
ನಕ್ಷತ್ರ ಪ್ರತಿಮಾಂ ಸಾಧ್ವಿಮೀಶಾನ ವಿದಿಶಿ ಸ್ಥಿತಾಮ್ ॥೩॥

ಅಗ್ನೇರ್ನಕ್ಷತ್ರ ಮಂತ್ರೇಣಭ್ಯರ್ಚಯೇತ್ ಕಲಶೋಪರಿ ।
ರಕ್ತೇನ ವಾಸಸಾಚ್ಛಾದ್ಯ ಸವಸ್ತ್ರಾಮಥ ಮಂತ್ರವಿತ್ ॥೪॥

ಮೇಪ್ಪಯೇತ್ ಸ್ವಸ್ವಶಾಖೋಕ್ತ ವಿಧಿ ನಾಗ್ನಿಮುಖಂ ಚರೇತ್ ।
ಪೂರ್ವೋಕ್ತೈನೈವ ಮಂತ್ರೇಣ ಜುಹುಯಾಚ್ಚ ತ ಮುಪ್ಪಯುಕ್ ॥೫॥

ಸಮಿಶ್ಚಾರ ಲ್ಯಘ್ನತತಃ ಪ್ರಾಯಶ್ಚಿತ್ತಾ ವಸನಾಕವಮ್ ।
ತತೋಭಿಷಿಚ್ಚೇದಾಚಾರ್ಯ ಪಿತರೌ ವಾ ಸಹೋದರೌ ॥೬॥

ಪಿಪ್ರಾಂಸ್ತು ಭೋಜಯೇತ್ ಪಶ್ಚಾದ್ ದಕ್ಷಿಣಾದಾನಪೂರ್ವಕಮ್ ।
ಏವಂ ಕೃತೆ ತು ನಕ್ಷತ್ರಜಾತೋಃ ದೋಷೊ ವಿನಶ್ಯತಿ ॥೭॥

**ಪರಾಶರರು ಹೇಳಿದರು–**

ತಂದೆ, ತಾಯಿ ಅಥವಾ ಸಹೋದರರ ಜನ್ಮನಕ್ಷತ್ರದಲ್ಲಿ ಒಂದು ವೇಳೆ ಜನ್ಮವಾದರೆ ಇಬ್ಬರಿಗೂ (ಜಾತಕ –ಅವನ ಜನ್ಮನಕ್ಷತ್ರದ ತಂದೆ, ತಾಯಿ, ಸಹೋದರ) ಅಥವಾ ಒಬ್ಬರ ಮರಣವೆಂದಿದ್ದಾರೆ. ಅದಕ್ಕಾಗಿ ಪ್ರಾಚೀನ ಋಷಿಗಳು ಶಾಂತಿ ವಿಧಾನ ಹೇಳಿದ್ದಾರೆ – ಹೇಳುತ್ತೇನೆ ಕೇಳು. ಶುಭನಕ್ಷತ್ರ ತಿಥಿರಿಕ್ತಾ ಅಮಾವಾಸ್ಯೆ ಬಿಟ್ಟು ಹಾಗೂ ಕ್ಷಯದಿನ ವರ್ಜ್ಯ ಚಂದ್ರ ತಾರಾಬಲರಾಗಿದ್ದಾಗ ಶಾಂತಿ ಮಾಡಿಸುವುದು. ನಕ್ಷತ್ರ ಶಾಂತಿಗಾಗಿ ನಕ್ಷತ್ರ ದೇವತೆ ಅಥವಾ ನಕ್ಷತ್ರ ಪ್ರತಿಮಾ ಮಾಡಿಸಿ ಸ್ಥಾಪಿತ ಅಗ್ನಿಯ ಈಶಾನ್ಯ ಕೋಣೆಯಲ್ಲಿ ಕಲಶದ ಮೇಲೆ

ನಕ್ಷತ್ರ ಮಂತ್ರದಿಂದ ಅಭ್ಯರ್ಚನ ಮಾಡಿ – ಆ ನಕ್ಷತ್ರ ಮೂರ್ತಿಗೆ ರಕ್ತವಸ್ತ್ರ ಆಚ್ಛಾದಿಸಿ ಪುನಃ ವಸ್ತ್ರದ್ವಯಗಳಿಂದ ಆವೇಷ್ಟಿತ ಮಾಡಿ ತಮ್ಮತಮ್ಮ ಶಾಖಾ ವಿಧಿಯಂತೆ (ಅಶ್ವಲಾಯನವೋ, ಆಪಸ್ತಂಭಿಯವೋ - ಬೌದಾಯನವೋ ಹೀಗೆ) ಅಗ್ನಿಯ ಮುಖದಿಂದ ಪೂರ್ವೋಕ್ತ ನಕ್ಷತ್ರ ಮಂತ್ರದಿಂದ 108 ಸಲ – ಕಟ್ಟಿಗೆ (ತುಪ್ಪ, ಎಳ್ಳು, ಧೂಪ ಸಮ್ಮಿಶ್ರಣ) ಘೃತದಲ್ಲಿ ಅದ್ದಿ ಹವನ ಮಾಡುವುದು. ಆನಂತರ ಆಚಾರ್ಯರು ಕಲಶಸ್ಥಿತ ಜಲದಿಂದ ಜಾತಕ ಮನೆಯವರಿಗೆ ಸಿಂಚನೆ ಮಾಡುವುದು – ಬ್ರಾಹ್ಮಣ ಭೋಜನ ದಕ್ಷಿಣೆಯನ್ನು ಕೊಡುವುದು. ಇದರಿಂದ ನಕ್ಷತ್ರ ದೋಷ ಪರಿಹಾರವಾಗುತ್ತದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಏಕನಕ್ಷತ್ರೋತ್ಥ ಜಾತಕ ಶಾಂತ್ಯಾಧ್ಯಾಯಃ ಸಮಾಪ್ತಿಃ

# ಅಥ ಸಂಕ್ರಾಂತಿ ಜನನ ದೋಷ ಶಾಂತ್ಯಾಧ್ಯಾಯಃ

## ಪರಾಶರ ಉವಾಚ:

ಸೂರ್ಯಾದೌ ಸೂರ್ಯ ಸಂಕ್ರಾಂತಿ ಘೋರಾಧ್ವಾಂಕ್ಷೀ ಮಹೋದಂ ।
ಮಂದಾ ಮಂದಾಕಿನಿ ಮಿಶ್ರಾ ರಾಕ್ಷಸ್ಯಶ್ಯೇತಿ ಸಪ್ತದಾ ॥೧॥

ತತ್ರಜಾತೋ ಭವೇನ್ನೂನಂ ದುಃಖ ದಾರಿದ್ರಡ್ಯ ಸಂಯುತಃ ।
ಶಾಂತಿತಃ ಶುಭಾಮಾಪ್ನೋತಿ ತಸ್ಮಾಚ್ಛಾಂತಿ ಬ್ರವೀಮ್ಯಹಮ್ ॥೨॥

## ಪರಾಶರರು ಹೇಳಿದುದು–

ಸೂರ್ಯಾದಿ ವಾರಗಳಲ್ಲಿ ಅಂದರೆ ರವಿವಾರ – ಸಂಕ್ರಾಂತಿಯಾದರೆ (ರವಿ ರಾಶಿ ಪ್ರವೇಶ) ಆ ಸಂಕ್ರಾಂತಿ ಘೋರ ಎನ್ನಿಸಿಕೊಳ್ಳುತ್ತದೆ.

ರವಿವಾರ - ಘೋರಾ, ಸೋಮವಾರ – ಧ್ವಾಂಕ್ಷಾ, ಮಂಗಳವಾರ – ಮಹೋದರ, ಬುಧವಾರ – ಮಂದಾ, ಗುರುವಾರ – ಮಂದಾ, ಕಿನಿ – ಶುಕ್ರವಾರ – ಮಿಶ್ರಾ; ಶನಿವಾರ – ರಾಕ್ಷಸಿ ಎಂದು ಹೆಸರುಗಳಿಂದ ಕರೆಯಲ್ಪಡುತ್ತಿದ್ದು ಯಾವುದೇ ಸಂಕ್ರಾಂತಿ ಕಾಲದಲ್ಲಿ ಜನಿಸಿದ ಮಗು ದುಃಖ, ದಾರಿದ್ರ ಯುಕ್ತನಾಗಿರುತ್ತಾನೆ. ಶಾಂತಿಯಿಂದ ಶುಭ ಸಂಭವವಿದೆ. ಅದಕ್ಕಾಗಿ ಶಾಂತಿ ಮಾಡಿಸುವುದು ವಿಹಿತ. ಶಾಂತಿಯ ಯಜ್ಞ ದೋಷ ಉಪಶಮನಕ್ಕೆ ಗ್ರಹ ಯಜ್ಞ ಮಾಡಿಸುವುದು.

### ಶಾಂತಿ ವಿಧಾನ

ಸ್ವಗ್ರುಹಾತ್ ಪೂರ್ವತೋ ಭಾಗೇ ಶುಚೌ ದೇಶೇವಲಿಪ್ಯವೈ ॥೩॥

ಗೋಮಯೇನ ತತ್ರ ಧಾನ್ಯರಾಶಿಮೇಕತ್ರ ಕಾರಯೇತ್
ಪಂಚದ್ರೋಣಾತ್ಮಿಕಾಂ ವ್ರಿಹ್ನಿ ತದರ್ಧ ತಾಂಡೂಲಸ್ತಥಾ ॥೪॥

ತದರ್ಧ ಸತ್ತಿಲಾನ್ ಸರ್ವಾನ್ ಪ್ರಥಗ್ರಾಶೌ ಪ್ರಕಲ್ಪಯೇತ್ ।
ಸರ್ವೇಷು ವಿಲಿಖೇದಷ್ಟ ಪತ್ರಪದ್ಮಕ ಶುಭಾಕೃತೀಃ ॥೫॥

ಪುಣ್ಯಾಹವಾಚನಂ ತದ್ವ ದಾಚಾರ್ಯವರಣಾ ಪುನಃ ।
ಧಾನ್ಯರಾಶಿಷು ಘಟಾಮ ಸ್ತೀರ್ಥೋದಕ ಸಮನ್ವಿತಾನ್ ॥೬॥

ಸ್ಥಾಪಯೇದ್ ವಿಧಿವತ್ ತೇಷು ಸಪ್ತಮೃತ್ಪಂಚ ಪಲ್ಲವಾನ್ ।
ಶತೌಷಧಿಯುತಾ ಪಂಚ ಗವ್ಯಂಖಿ ಚ ಪ್ರಕ್ಷಿಪೇದ್ ಬುಧಃ ॥೭॥

ಘಟಾನಾವೇಷ್ಟಡ್ಯ ವಸ್ತ್ರಾಭ್ಯಾಂ ತೇಷು ಪಾತ್ರಾಣಿ ವಿನ್ಯಸೇತ್ ।
ಸೂರ್ಯ ಚಂದ್ರಮಸೋಃ ಸಾಧಿ ಪ್ರತ್ಯಧಿತ್ವೇನ ಕಲ್ಪಿತಾನ್ ॥೮॥

ಪ್ರತಿಮಾಂ ಪಾರ್ಶ್ವಯೋರ್ಮಧ್ಯೆ ಸಂಕ್ರಾಂತೆಸ್ತೈಷು ಸಂನ್ಯಸೇತ್ ।
ತತ್‌ಸ್ತ್ರಾ ಪ್ರತಿಮಾ ಮಂತ್ರೈಸ್ಸೈಸ್ಸೈರಭ್ಯರ್ಚ ಯೇತ್ ಸುಧಿಃ ॥೯॥

ಸಂಕ್ರಾಂತಿ ಪ್ರತಿಮಾಂ ಪೂರ್ವ ವಸ್ತ್ರದ್ವಿತ ಯಮರ್ಪಯೇತ್ ।
ತ್ರ್ಯಂಬ್ಯಕೇಣ ತು ಮಂತ್ರೇಣ ಸಹ ವ್ಯಾಹೃತಿಕೇನ ಚ ॥೧೦॥

ಪೂಜಯೇತ್ತಾಂ ವಿಶೇಷೇಣ ಧೂಪದೀಪ ಪ್ರದರ್ಶನ್ಯೈಃ ।
ಸೂರ್ಯ 'ಮುತ್ಸ್ಯ್ವ' ಮಂತ್ರೇಣಾ - ಪ್ಯಾಯಾಸ್ವೆ ತಿವಿಧುಂ ತಥಾ ॥೧೧॥

ಉಪಚಾರೈಹ ಷಡಧಿಕೈಃ ದಶಭಿರ್ವಾಪಿ ಪಂಚಭಿಃ ।
ಅರ್ಚಯೇದ್ ಭಕ್ತಿಪೂರ್ವ ತನ್ಮೂರ್ತಿತ್ರಿತಯಮಾದರಾತ್ ॥೧೨॥

ಮೃತ್ಯುಂಜಯ ಮಹಾಮಂತ್ರ ಜಪಮಷ್ಟೋತ್ತರಂ ಶತವಮ್ ।
ಸಹಸ್ರಮಷ್ಟಾಭ್ಯಧಿಕಂ ಕುರ್ಯಾದ್ ವಿಘ್ನೋಪಶಾಮತಯೇ ॥೧೩॥

ಅಷ್ಟವಿಂಶತಿಮಿತಂ ಜಪೆನ್ಮಂತ್ರಮಥಾಪಿ ವಾ ।

ತಮ್ಮ ತಮ್ಮ ಮನೆಗಳಲ್ಲಿ, ಪೂರ್ವ ಭಾಗದಲ್ಲಿ ಪವಿತ್ರ ಸ್ಥಾನದಲ್ಲಿ – ಸಾರಿಸಿ – ಅಲಂಕರಿಸಿ ತ್ರಿವಿಧ ಧಾನ್ಯರಾಶಿಯನ್ನು ಮಾಡಿ 5 ದ್ರೋಣ ಪ್ರಮಾಣ ಬ್ರೀಹಿ ಅದರರ್ಧ ಅಕ್ಕಿ ಅದರರ್ಧ ಎಳ್ಳು – ಬೇಳೆ ಬೇರೆ ರಾಶಿ ಮಾಡಿ ಇಡುವುದು. ಎಲ್ಲ ರಾಶಿಗಳ ಮೇಲೆ ಅಷ್ಟದಳ ಕಮಲ ಆಕೃತಿಸುವುದು. ನಂತರ ಪುಣ್ಯಾಹವಾಚನ ಆದ ನಂತರ ಆಚಾರ್ಯ ವರಣಾ ಸ್ಮರಣಪೂರ್ವಕ – ತೀರ್ಥೋದಕದ ಪೂರ್ಣ (ಕಲಶ) ಕೊಡ ವಸ್ತ್ರದಿಂದ ಅಲಂಕರಿಸಿ ಸ್ಥಾಪಿಸುವುದು – ಆ ಕೊಡಗಳಲ್ಲಿ ಸಪ್ತತೀರ್ಥ ಮೃತ್ತಿಕೆಯನ್ನು ಹಾಕಿ – ನೂರು ಔಷಧ ಬಳ್ಳಿಗಳನ್ನು ಪಂಚಗವ್ಯ (ಅಮೃತ ಬಳ್ಳಿ ಶತ ಔಷಧ)ವನ್ನು (ಪಂಚಗವ್ಯ – ಆಕಾಶ – ಸಗಣಿ, ಮೂತ್ರ, ಮೊಸರು, ತುಪ್ಪ) ಸಿಂಪಡಿಸಿ ಪಂಚಪಲ್ಲವ (ಐದರಂತೆ ವೀಳ್ಯವನ್ನು ಕೊಡದ ಮೇಲಿಟ್ಟು ಅದರ ಮೇಲೆ ಆಸನಗಳಾಗಿ 3 ಬಟ್ಟಲು ಇಡುವುದು. ಅವುಗಳಲ್ಲೇ ನ್ಯಾಸಪೂರ್ವಕ ಸ್ಥಾಪಿಸುವುದು. (ಪಂಚಮುದ್ರೆಗಳಿಂದ ನ್ಯಾಸ ಅಥವಾ ಅಭಿ

ಮಂತ್ರಿಸಿ) ಕಲಶದ ಮೇಲಿಟ್ಟು ಪಾತ್ರೆಗಳಲ್ಲಿ ಚಂದ್ರ, ಸೂರ್ಯರ ಅಧಿದೇವತೆ ಪ್ರತ್ಯಧಿದೇವತೆ (ಈ ಮೊದಲೇ ಹೇಳಿದೆ) ಹಾಗೂ ಸಂಕ್ರಾಂತಿ ದೇವಿಯ ಮೂರ್ತಿಗಳನ್ನು ಮಧ್ಯದಲ್ಲಿ ಸಂಕ್ರಾಂತಿ ದೇವಿ ಎರಡು ಬದಿಗಳಲ್ಲಿ ಸೂರ್ಯ, ಚಂದ್ರರ ಪ್ರತಿಮೆಗಳನ್ನು ಸ್ಥಾಪಿಸುವುದು ಹಾಗೂ ಆ ಮೂರು ದೇವತೆಗಳಿಗೆ ವಿಧಿಪೂರ್ವಕ (ಆಹ್ವಾನ ಪಾದ್ಯ ಆಚಮನ ಆಸನ ಆದಿ) ಪೂಜೆ ಮಾಡುವ ಪೂರ್ವದಲ್ಲಿ ವಸ್ತ್ರಗಳ (ಜೋಡಿ) ಸಮರ್ಪಿಸುವುದು. ವ್ಯಾಹುತಿ ಪೂರ್ವ 'ತ್ರ್ಯಂಬಕ' ಮಂತ್ರದಿಂದ ಅಭ್ಯರ್ಚನ ಧೂಪದೀಪಾದಿಗಳ ಪ್ರದರ್ಶನ ಆರಾಧನೆಗಳನ್ನು 'ಸ್ವತಃ' ಯಜಮಾನನೇ ಮಾಡುವುದು. 'ಆಪ್ಯಾಸ್ವ'ಯೇದಿಂದ ಚಂದ್ರನ್ನು ಷೋಡಶೋಪ ಚಾರದಿಂದ ಪೂಜಿಸಿ (ಹಾಗೂ ಪಂಚೋಪಚಾರ) ಭಕ್ತಿಯಿಂದ ಪೂಜೆ ಮಾಡಿ – ಸರ್ವ ವಿಘ್ನೋಪಶಾಂತಿಗಾಗಿ ಮೃತ್ಯುಂಜಯ ಮಂತ್ರದ ಅಷ್ಟೋತ್ತರ ಶತಸಹಸ್ರ, ಅಷ್ಟಾಧಿಕ ಶತ (1008, 108, 28) ಇಪ್ಪತ್ತೆಂಟು ಸಲವಾದರೂ ಶಕ್ತ್ಯಾನು ಜಪ ಮಾಡುವುದು.

ಘಟೇಭ್ಯಃ ಪಶ್ಚಿಮ ದಿಶೆ ಸ್ಥಂಡಿಲೆ ವಹ್ನಿ ಪರಾಹ್ವಯೇತ್ ।
ಗ್ರಹೋಕ್ತವಿಧಿನಾ ತಸಯ ಸಂಸ್ಕಾರಮಪಿ ಕಾರಯೇತ್ ॥೧೪॥

ಸಮಿದ್ ಘೃತ ಚರೂಂಸ್ತತ್ರ ಜುಹುಯಾತ್ ತ್ರ್ಯಂಬ್ಯಕಾದಿನಾ ।
ಮಂತ್ರೇಣಾಷ್ಟೋತ್ತರ ಶತಂ ಸಹಸ್ರಂ ವಾಪ್ಯಸಂಯುತಮ್ ॥೧೫॥

ಅಷ್ಟವಿಂಶತಿ ಸಂಖ್ಯಾಕ-ಮಥವಾ ಹವನಂ ಚರೇತ್ ।
ತಿಲಹೋಮಂ ತತಃ ಸ್ವಿಷ್ಟಕೃತಂ ಹುತ್ವಾ ಘಟೋದಕೈಃ
॥೧೬॥

ಅಭಿಷೇಕಂ ಜಾತಕಸ್ಯ ಪಿತ್ರೋರಪಿ ಚ ಕಾರಯೇತ್ ।
ವಿಪ್ರಾಣಾಂ ಭೋಜನಮಿತಿ ಶಾಂತಿಂ ಸಂಕ್ರಾಂತಿಜಾಂ ಚರೇತ್ ।
ಏವಂ ಕೃತೆ ಜಾತಕಸ್ಯ ಕಲ್ಯಾಣಾಂ ನಿಶ್ಚಿತಂ ಭವೇತ್ ॥೧೭॥

ಕಲಶಗಳ ಪಶ್ಚಿಮದಲ್ಲಿ ಯಜ್ಞಕ್ಕಾಗಿ ನಿರ್ಮಿಸಿದ ಕುಂಡದಲ್ಲಿ ಅಗ್ನಿಯನ್ನು ಆಹ್ವಾನ ಮಾಡಿಕೊಂಡು – ಆ ಅಗ್ನಿಗೆ ತಮ್ಮ ತಮ್ಮ ಶಾಖೆಗಳಂತೆ (ತೈತ್ತರೀಯ, ಅಶ್ವಲಾಯನ, ಬೌಧ್ದಾಯನ, ಹಿರಣ್ಯಕೋ ಇತ್ಯಾದಿ) ಅಗ್ನಿ ಸಂಸ್ಕಾರ ಮಾಡಿ ತ್ರ್ಯಂಬುಕ ಮಂತ್ರದಿಂದ ಅರಳಿ ಸಮಿತ್ತು, ಚರು ಘೃತಗಳಿಂದ ಹವನ ಮಾಡುವುದು. ಹವನ 1008, 108 ಅಶಕ್ತತೆಯಲ್ಲಿ ಹವನ ಮಾಡಿ ಅನಂತರ ಮೃತ್ಯುಂಜಯದಿಂದ ತಿಲಹೋಮ ನಂತರ ಪುನಃ ಸ್ವಿಷ್ಟಕೃತ ಹೋಮ ಮಾಡಿ ಘಟತ್ರಯದ (ಮೂರು

ಕೊಡದ ನೀರು) ಜಲದಿಂದ ಜಾತಕ ಅವನ ತಂದೆ-ತಾಯಿಗಳಿಗೆ ಅಭಿಷೇಕ ಆಚಾರ್ಯರೇ ಮಾಡಿಸಿ ಅಂತ್ಯದಲ್ಲಿ ಬ್ರಾಹ್ಮಣ ಭೋಜನ – ದಕ್ಷಿಣಾದಿಗಳಿಂದ ಸಂಕ್ರಾಂತಿ ಜನ್ಮಜನ್ಯ ದೋಷಪರಿಹಾರವಾಗುತ್ತದೆ. ಈ ಪ್ರಕಾರ ದೋಷ ಶಾಂತಿಯಿಂದ ಕಲ್ಯಾಣವಾಗುತ್ತದೆ. ಇದು ನಿಶ್ಚಿತ.

**ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಸಂಕ್ರಾಂತಿ ಜನನದೋಷ ಶಾಂತ್ಯಾಧ್ಯಾಯಃ**

# ಅಥ ಗ್ರಹಣಜಾತದೋಷ ಶಾಂತ್ಯಾಧ್ಯಾಯಃ

## ಪರಾಶರ ಉವಾಚ:

ರವೀಂದು ಗ್ರಹಣೆ ಜಾತೋ ದಾರಿದ್ರ್ಯಕ್ಲೇಶ ರೋಗವಾನ್ ।
ಮ್ರಿಯತೇಪಿ ತತಃ ಶಾಂತಿ-ಮಾಚರೇತ್ತಿದ್ವಿತ ಕಾಮುಕಃ ॥೧॥

ರವೀಂದ್ವೋರ್ಗ್ರಹಣಾ ಯತ್ರ ನಕ್ಷತ್ರೆ ತದಧೀಶಜಾವರ್ ।
ಮೂರ್ತಿ ಸವರ್ಣಾಮಯಂ ಸೂರ್ಯರೂಪಂ ಚಾಪಿ ರವಿಗ್ರಹೆ ॥೨॥

ಸುವರ್ಣೇನ ತಥೈವೇಂದೋ ಗ್ರಹಣೆ ರಜತೇನ ವೈ ।
ಚಂದ್ರಸ್ವರೂಪಂ ರಚಯೇದ್‌ರಾಹೋಃ ಶೀಶಕತಸ್ತಥಾ ॥೩॥

## ಪರಾಶರರು ಹೇಳಿದರು–

ಸೂರ್ಯ, ಚಂದ್ರರ ಗ್ರಹಣ ಸಮಯದಲ್ಲಿ ಉತ್ಪನ್ ಬಾಲಕ, ದುಃಖಿ, ದಾರಿದ್ರ್ಯದಿಂದ ಪೀಡಿತನಾಗುವನು ಹಾಗೂ ರೋಗಯುಕ್ತ ಬೌದ್ಧಿಕ ಮಾಂದ್ಯತೆಯಿಂದ ಕೂಡಿರುವನು. ಅದಕ್ಕಾಗಿ ಆ ಜಾತಕನ ಹಿತ ಕಾಮುಕ ವ್ಯಕ್ತಿ (ತಂದೆ, ತಾಯಿ ಆದಿ) ಆ ಬಗ್ಗೆ ಶಾಂತಿ ಮಾಡಿಸುವುದು ಉತ್ತಮ. ಗ್ರಹಣ ಯಾವ ನಕ್ಷತ್ರದಲ್ಲಿ ಸಂಭವಿಸಿದೆಯೋ ಆ ನಕ್ಷತ್ರಾದೀಶನ ಪ್ರತಿಮೆ ( ದೇವ ಅಥವಾ ಗ್ರಹ) ಬಂಗಾರದಲ್ಲಿ ಮಾಡಿಸಿ ಸೂರ್ಯ ಗ್ರಹಣದಲ್ಲಿ ಸೂರ್ಯನ, ಚಂದ್ರ ಗ್ರಹಣದಲ್ಲಿ ಚಂದ್ರನ ರಜತ ಪ್ರತಿಮೆ (ರಜತ ಪ್ರತಿಮೆ ಶ್ರೇಷ್ಠ) ರಾಹುವಿನ ಶೀಶಕ ಪ್ರತಿಮೆ ಮಾಡಿಸುವುದು.

### ಶಾಂತಿ ವಿಧಾನ

ಸಮಭೂಮೌ ಶುಚೌ ದೇಶೆ ಗೋಮಯನೋಪಲಿಪ್ಯ ಚ ।
ಸೂರ್ಯೇಂದೋಸ್ತಮಸಶ್ಚಾಪಿ ಪ್ರತಿಮಾಂ ತತ್ರ ವಿನ್ಯಸೇತ್ ॥೪॥

ಸೂರ್ಯಗ್ರಹೆ ರವಿಪ್ರೀತಿಕರಂ ರಕ್ತಾಕ್ಷತಂ ತಥಾ ।
ರಕ್ತಚಂದನರಕ್ತಸ್ರಗ್ - ವಸ್ತ್ರಾಣಿ ಚ ಸಮರ್ಪಯೇತ್ ॥೫॥

ಚಾಂದ್ರೇಗ್ರಹೆ ಶಶಿ ಪ್ರೀತಿ ಕರಾಣಿ ಸಿತಗಂಧಯುಕ್ ।
ಸಿತಪುಷ್ಪ ಸಿತಸ್ರಗ್ವಾ - ಸಾಂಸಿ ದದ್ಯಾದ್ ವಿಚಕ್ಷಣಃ ॥೬॥

ಕೃಷ್ಣಾನಿ ಗಂಧ ಪುಷ್ಪಸ್ರಗ್ - ವಸ್ತ್ರಾನಿ ತಮಸೇರ್ಪಯೇತ್ ।
ನಕ್ಷತ್ರೇಶಾಯ ಚ ಪುನಃ ಶ್ವೇತಂ ಸರ್ವ ನಿವೇದಯೇತ್ ॥೭॥

ಆ ಕೃಷ್ಣೇನೇತಿ ಮಂತ್ರೇಣ ಸೂರ್ಯಮಾರಾಧಯೇತ್ ಸುಧೀಃ ।
'ಇಮಂ ದೇವಾ' ಇತಿ ಋಚಾ ಚಂದ್ರಮಭ್ಯರ್ಚಯೇತ್ತಥಾ ॥೮॥

ಕಯಾ 'ನ' ಇತಿ ಮಂತ್ರೇನ ರಾಹು ದೂರ್ವಾಭಿರರ್ಚಯೇತ್ ।
ರಾಹು ಸೂರ್ಯೇಂದು ಸಮಿಧೊ ದೂರ್ವಾರ್ಕಶ್ಚ ಪಲಾಶಕಃ ॥೯॥

ತತ್ತ್ವದೂಗ್ರಹಣಾಂ ಪ್ರೀತ್ಯರ್ಥ ಸಮಿದ್ಧಿರ್ಜುಹುಯಾದ್ ಬುಧಃ ।
ನಕ್ಷತ್ರೇಶ ಪ್ರಸಾದಯಾಶ್ವಿತ್ಥಸ್ಥಸ್ಯ ಸಮೀಧಃ ಶುಭಾಃ ॥೧೦॥

ಸಮತಲ ಭೂಮಿಯಲ್ಲಿ ಹಾಗೂ ಪವಿತ್ರ ಸ್ಥಾನದಲ್ಲಿ ಗೋಮಯ ಮಾಡಿ (ರಂಗವಲ್ಯಾದಿ ಶೃಂಗಾರ ಮಾಡಿ) ಸೂರ್ಯ, ಚಂದ್ರ, ರಾಹು ಪ್ರತಿಮೆಯನ್ನಿಟ್ಟು - ಸೂರ್ಯ ಪ್ರತ್ಯರ್ಥ ರಕ್ತ ಚಂದನ, ರಕ್ತ ವಸ್ತ್ರ, ರಕ್ತಾಕ್ಷತ, ರಕ್ತಮಾಲ್ಯ ಹಾಗೂ ರಕ್ತ (ಕೆಂಪು) ವಸ್ತ್ರದಿಂದ ಪೂಜಿಸಿ – ಚಂದ್ರ ಪ್ರತಿಮೆಗೆ ಬಿಳಿ ಚಂದನ, ಬಿಳಿ ಹೂ, ಬಿಳಿ ವಸ್ತ್ರ ಪ್ರದಾನ ಮಾಡಿ – ರಾಹುವಿನ ಪ್ರತ್ಯರ್ಥ ಕಪ್ಪು ಚಂದನ, ಕಪ್ಪು ವಸ್ತ್ರ, ಕಪ್ಪು ಹೂ ಅರ್ಪಿಸಿ ನಕ್ಷತ್ರಾಧೀಶನ ಸಲುವಾಗಿ ಎಲ್ಲ ಶ್ವೇತ ವಸ್ತುಗಳಿಂದ ಪೂಜಿಸುವುದು. 'ಆ ಕೃಷ್ಣೇನ ರಜಸಾ' ಮಂತ್ರದಿಂದ ಸೂರ್ಯ 'ಇಮಂ ದೇವಾ' ಮಂತ್ರದಿಂದ ಚಂದ್ರನನ್ನು 'ಕಯಾನಃ' ಮಂತ್ರದಿಂದ ರಾಹುವನ್ನು ಪೂಜೆ ಮಾಡಿ ರಾಹುವಿಗೆ ಸಮಿತ್ತಾಗಿ ದೂರ್ವಾ(ಗರಿಕೆ ಹುಲ್ಲು) ಸೂರ್ಯನಿಗೆ, ಚಂದ್ರನಿಗೆ ಆರಳೆ – ಈ ದ್ರವ್ಯಗಳಿಂದ ಗ್ರಹ ಪ್ರೀತ್ಯರ್ಥ ಹವನ ಮಾಡುವುದು ಹಾಗೂ ನಕ್ಷತ್ರ ದೇವತೆಗೆ ಅಶ್ವತ್ಥದಿಂದ ಹೋಮ ವಿಹಿತ.

ಕಲಶೋದಕತೋ ಜಾತಂ ದಂಪತಿ ಚಾಭಿಷಿಂಚಯೇತ್ ।
ಆಚಾರ್ಯಮಭಿವಾದ್ಯಾಥ ಬ್ರಾಹ್ಮಣಾನ್‌ಭೋಜಯೇತ್ ಸುಧೀಃ ॥೧೧॥

ಕರ್ಮಾಣ್ಯೋಂತೆ ಯಥಾಶಕ್ತಿ ದದ್ಯಾದ್ ವಿಪ್ರಯಾದಕ್ಷಿಣವಮ್ ।
ಏವಂ ಗ್ರಹಣ ಜಾತಾನಾಂ ಶುಭದಾ ಶಾಂತಿರೇರಿತವಮ್ ॥೧೨॥

ಹವನಾನಂತರ ಕಲಶೋದಕದಿಂದ ಸಿಂಚನ ಮಾಡಿಸಿಕೊಂಡು (ಆಚಾರ್ಯರಿಂದ) ಸ್ನಾನವನ್ನಾದರೂ ಮಾಡುವುದು (ಪುಣ್ಯಾವ ವಾಚನ ನಂತರ ಸ್ನಾನಾದಿ ವರ್ಜ್ಯ(ದಕ್ಷಿಣದವರಲ್ಲಿ)ದಿರುವುದರಿಂದ ಸಿಂಚನ) ಪುನಃ ಆಚಾರ್ಯರಿಗೆ ನಮಸ್ಕರಿಸಿ ಬ್ರಾಹ್ಮಣ ಭೋಜನ. ಕರ್ಮಾಂತರ ನಂತರ ಬ್ರಾಹ್ಮಣರಿಗೆ

ಶಕ್ಯಾನುಸಾರ ದಕ್ಷಿಣೆ ಕೊಡುವುದು. ಈ ಪ್ರಕಾರ ಗ್ರಹಣೋತ್ಪನ್ ಗ್ರಹ ಶಾಂತಿ ನಂತರ ಜಾತಕನಿಗೆ ಶುಭಪ್ರದವೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಗ್ರಹಣಜಾತ ದೋಷ ಶಾಂತ್ಯಾಧ್ಯಾಯಃ ಸಮಾಪ್ತಿಃ

# ಅಥ ಗಂಡಾಂತೋದ್ಭವ ಶಾಂತ್ಯಾಧ್ಯಾಯಃ

**ಪರಾಶರ ಉವಾಚ:**

**ಗಂಡಾಂತಂ ತ್ರಿವಿಧ ಪ್ರೋಕ್ತಂ ತಿಥ್ಯಂಗರ್ಕ್ಷವಶಾದ್ ಬುಧೈಃ ।**
**ಪಾಣಿಗ್ರಹಾದೌ ಜನುಷಿ ಪ್ರಯಾಣೆ ಚ ವಿಚಿಂತಯೇತ್ ॥೧॥**

**ಪರಾಶರರು ಹೇಳಿದರು–**

ಗಂಡಾಂತದಲ್ಲಿ ತ್ರಿವಿಧಗಳಿವೆ.

1) ತಿಥಿ ಗಂಡಾಂತ

2) ಲಗ್ನ ಗಂಡಾಂತ

3) ನಕ್ಷತ್ರ ಗಂಡಾಂತವೆಂದು ಹೇಳಿದ್ದಾರೆ. ಇದರ ವಿಚಾರ ಮದುವೆಯಾದಿ ಶುಭಕಾರ್ಯದಲ್ಲಿ ವಿಶೇಷ ವಿಚಾರಿಸುವುದು.

ಗಂಡಾಂತ ತ್ರಯಃ

ಪೂರ್ಣಾನಂದಾಭಿಧಾನಾಂ ತು ತಿಥಿನಾಂ ಸಂಧಿಷು ದ್ವಿಜ ।
ಘಟಿ ಚತುಷ್ಟಯಂ ವಿಜ್ಞೌಸ್ತಿಥಿಗಂಡಾಂತ ಮೀರಿತಮ್ ॥೨॥

ಏವಂನಕ್ಷತ್ರ ಗಂಡಾಂತಂ ಘಟಿಯುಗ್ಮಿತಂ ಬುಧೈಃ ।
ರೇವತಿ ಸಾರ್ಪಶಾಕ್ರೆ ಭ್ಯೋಗ್ರಮಭ್ಯೈಃ ಸಂಧೀಷು ಸ್ಮೃತವಾ ॥೩॥

ಮೀನ ಮೇಷಾಂಗಯೋಃ ಕರ್ಕ ಸಿಂಹಯೋರಲಿಧ್ವನಿನೋಃ ।
ಸಂಧಾವೇಕ ಘಟಿತುಲ್ಯಂ ಲಗ್ನ ಗಂಡಾಂತ ಮುಚ್ಯತೆ ॥೪॥

ಪೂರ್ಣಾ (5, 10, 15) ನಂದಾ (1, 6, 11) ತಿಥಿಗಳಲ್ಲಿ ಅವುಗಳ ಸಂಧಿ ಕಾಲದಲ್ಲಿ ನಾಲ್ಕು ಘಟಿ - ಕಾಲ ತಿಥಿ ಗಂಡಾಂತರವಾಗುತ್ತದೆ. (ಅಂದರೆ ಶುಕ್ಲ ಪೂರ್ಣಾಮಾಂತ್ಯ 2 ಘಟಿ - ಕೃಷ್ಣ ಪ್ರತಿಪದಾ 2 ಘಟಿ ಈ ರೀತಿ) ಹೀಗೆ ಕೋಟ್ಟತಿಥಿಗೆ ಆದರಂತೆ ದಶಮಿ ಅಂತ್ಯ, ಏಕಾದಶಿ ಆರಂಭ, ಪಂಚಮಿ ಅಂತ್ಯ, ಷಷ್ಠಿ ಆರಂಭ, ನಂದಾದತಿ ಪ್ರತಿಪದ ಅಂತ್ಯ, ದ್ವಿತೀಯಾ ಆರಂಭ, ಷಷ್ಠಿ ಅಂತ್ಯ, ಸಪ್ತಮಿ ಆರಂಭ, ಏಕಾದಶಿ ಅಂತ್ಯ, ದ್ವಾದಶಿ ಆರಂಭ, 2 ಘಟಿಯಂತೆ ಬಿಟ್ಟು ನಾಲ್ಕು ಘಟಿ ಗಂಡಾಂತ

ಕಾಲವಾಗಿರುತ್ತದೆ.

ನಕ್ಷತ್ರ ಗಂಡದಲ್ಲಿ ರೇವತಿ, ಆಶ್ಲೇಷಾ, ಜೇಷ್ಠಾ ನಕ್ಷತ್ರಗಳ ಮುಂದಿನ ನಕ್ಷತ್ರದೊಂದಿಗೆ 2 ಘಟಿ ಅಂದರೆ ರೇವತಿ+ಅಶ್ವಿನಿ, ಆಶ್ಲೇಷಾ+ಮಖಾ, ಜೇಷ್ಠಾ+ಮೂಲ ಈ ಸಂಧಿಗಳಲ್ಲಿ 2+2 ಘಟಿ ಗಂಡಾಂತವಾಗಿವೆ.

ಅದರಂತೆ ಮೀನ-ಮೇಷ, ಕರ್ಕ-ಸಿಂಹ, ವೃಶ್ಚಿಕ-ಧನುಗಳ ಸಂಧಿಯಲ್ಲಿ ಒಂದೊಂದು ಘಟಿ ಗಂಡಾಂತರ ಕಾಲವಾಗಿದೆ.

ಗಂಡಾಂತ ತ್ರಿತಯಂ ಜನ್ಮ ಯಾತ್ರಾದೌ ಮೃತಿದಂ ತಥಾ ।
ಶಾಕ್ರಮೂಳಭಯೋಃ ಸಂದೌ ಶರಾ ನಾಗಾಷ್ಟ ನಾಡಿಕಾ ॥೫॥

ಕ್ರಮಾದ್ ಭುಕ್ತ ಮೂಲಾಖ್ಯಾ ಮಹಾ ವಿಘ್ನ ಪ್ರದಾಯಕಾಃ ।
ತಸ್ಮಾತ್ ತತ್ಕಾಲ ಜಾತಾನಾಂ ಶಾಂತಿಕುರ್ಯಾದ ವಿಚಕ್ಷಣ ॥೬॥

ಈ ಮೂರು ಗಂಡಾಂತ ಸಮಯದಲ್ಲಿ ಜನನ ಯಾತ್ರಾದಿಗಳಿಂದ ಮೃತ್ಯು (ಅಥವಾ ಮೃತ್ಯು ಸಮ ವ್ಯಥೆ) ಇಲ್ಲಿ ಜೇಷ್ಠಾ, ಮೂಲ ಸಂಧಿಯಲ್ಲಿ 5, 6 ಘಟಿಗಳ (ಜೇಷ್ಠಾ ಮತ 5 ಘಟಿ, ಮೂಲಾರಂಭ 8 ಘಟಿ. ಒಟಡ್ಡು 14 ಘಟಿ. ಅಭುಕ್ತ ಮೂಲ ಆಗಿದೆ) ಇದು ಮಹಾ ವಿಘ್ನ ಕಾರಕವಾಗಿದೆ. ಅಭುಕ್ತ ಮೂಲಾಸಂಜ್ಞಕವಾಗಿದೆ. ಈ ಗಂಡತ್ರಯಗಳಲ್ಲಿ ಅಭುಕ್ತ. ಮೂಲಾದಲ್ಲಿ ಶಾಂತಿ ಅತೀ ಅವಶ್ಯಕ.

## ಶಾಂತಿ ವಿಧಾನ

ಗಂಡಾಂತೋತ್ಥ ಶಿಶೋಃ ಸತ ಕಾಂತೆ ವಾಪಿ ಶುಭಹಾನಿ ।
ಶಾಂತಿ ಕುರ್ವಿತನೋ ತಾವದ್ ಬಾಲಮಾಲೋಕಯೇತ್ ಪಿತಾ ॥೭॥

ತಿಥಿ ನಕ್ಷತ್ರ ಲಗ್ನೋತ್ಥ ಗಂಡಾಂತೇಷು ಕ್ರಮಾನ್ನರಃ ।
ವೃಷದೇನು ಸುವರ್ಣಾನಿ ದೋಷಶಾಂತ್ಯೈ ದದಿತ ವೈ ॥೮॥

ಗಂಡಾಂತ ಪ್ರಥಮೆ ಭಾಗೆ ಜಾತ ಜಾತಾಭಿಷೇಚನಮ್ ।
ಪಿತ್ರಾ ಸಹ ಪರೆಭಾಗೆ ಮಾತ್ರಾಸಮುದೀರಿತಮ್ ॥೯॥

ಸೌವರ್ಣ ತಿಥಿ ನಕ್ಷತ್ರ ಲಗ್ನ ಸ್ವಾಮಿ ಸ್ವರೂಪಕಮ್ ।
ವಿರಚಯ್ಯ ಘಟಾಗ್ರಸ್ಥ ಪಾತ್ರೆ ಪೂರ್ವವದಿರ್ಚಯೇತ್ ॥೧೦॥

ಉಪಚಾರೈಃ ಷಡಧಿಕೈ ರ್ದಶಭಿರ್ವಾಪಿ ಪಂಚಭಿಃ ।
ತತಶ್ಚ ಸಭಿಧಾಜ್ಯಾದ್ಯೈರ್ಹುತ್ವಾಗ್ನಿಂ ಚ ಯಥಾವಿಧಿಃ ॥೧೧॥

ವಿಪ್ರಾಂಶ್ಚ ಭೋಜಯೋದೇವಂ ದೋಷಶಾಂತಿಃ ಪ್ರಜಾಯತೆ ।
ಸಮೃದ್ಧಿಶ್ಚ ಪ್ರತಿದಿನಂ ನೈರುಜ್ಯ ವಿಭವಾಯುಷಾಮ್ ॥೧೨॥

ತ್ರಿವಿಧ ಗಂಡಾಂತೋತ್ಪನ್ ಜಾತಕನ ದೋಷ ಶಾಂತಿ ಪ್ರಸೂತಿ ಸೂತಕ ಅಂತ್ಯ (10 ದಿನದ ನಂತರ) ಅಥವಾ ಶುಭ ದಿನದಲ್ಲಿ ತಂದೆ ಮಾಡಿಸಬೇಕು. ಶಾಂತಿ ಮಾಡಿಸುವವರೆಗೆ ತಂದೆ ಜಾತಕನ ಮುಖಾವ ಲೋಕನ ವರ್ಜ್ಯವೆಂದು ತಿಳಿಸುವುದು. ತಿಥಿ ಗಂಡಾಂತರದಲ್ಲಿ ಜನ್ಮವಾದರೆ ಎತ್ತು, ನಕ್ಷತ್ರ ಗಂಡಾಂತರದಲ್ಲಿ - ಆಕಳು, ಲಗ್ನ ಗಂಡಾಂತರದಲ್ಲಿ ಬಂಗಾರದ ದಾನ ದೋಷ ಶಾಂತಿಗಾಗಿ ಮಾಡಿಸುವುದು. ಗಂಡಾಂತರದ ಪ್ರಥಮಾರ್ಧದಲ್ಲಿ ಜನನವಾದರೆ (4 ಘಟಿ ಇದ್ದಾಗ, 2ರವರೆಗೆ) ತಂದೆಯ ಜೊತೆಗೆ ಜಾತಕನ, ಎರಡನೆ ಅರ್ಧದಲ್ಲಿ 2ರಿಂದ 4 ಘಟಿ ತಾಯಿ ಜೊತೆಗೆ ಸ್ನಾನಾದಿ (ಅಭಿಷೇಕ ಜಲಸಿಂಚನ) ಮಾಡಿಸುವುದು ತಿಥಿ ನಕ್ಷತ್ರ ಲಗ್ನ ಗಂಡಾಂತದಲ್ಲಿ ಆಯಾ ಅಧಿ ದೇವತೆ ಬಂಗಾರದ ಪ್ರತಿಮೇವರಾಚಿಗೆ ಘಟಾನದ (ಕಲಶ) ಮೇಲೆ ಸ್ಥಾಪಿಸಿ (ಪಾತ್ರೆಯಲ್ಲಿಟ್ಟು) ಈ ಮೊದಲು ಹೇಳಿದಂತೆ ಪೂಜಿಸುವುದು ಷೋಡಶೋಪಚಾರ ಪಂಚೋಪಚಾರ ಪೂಜೆ ಸಲ್ಲಿಸಿ ಪೂಜಾನಂತರ ಸಮಿತ್ತು ಘೃತ ಅನ್ನ ಆದಿಯಿಂದ ಹವನ ಮಾಡಿ ಬ್ರಾಹ್ಮಣ ಭೋಜನ ದಕ್ಷಿಣೆ ಸಹಿತ (ಎತ್ತು, ಆಕಳು ಬಂಗಾರ ಮೇಲೆ ಹೇಳಿದಂತೆ) ದಾನ ಮಾಡುವುದು ಇದರಿಂದ ದೋಷ ಶಾಂತಿಯಾಗಿ ಸುಖ ಸಮೃದ್ಧಿ, ಆಯುಸ್ಸು ವರ್ಧಿಸುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಗಂಡಾಂತೋದ್ಭವ
ಶಾಂತ್ಯಾಧ್ಯಾಯಃ ಸಮಾಪ್ತ

೯೪ನೇ ಅಧ್ಯಾಯ

# ಅಥ ಮೂಲಾಗಂಡಾಶಾಂತ್ಯಾಧ್ಯಾಯಃ

**ಪರಾಶರ ಉವಾಚ:**

ಅಭುಕ್ತಮೂಲಘಟಿಕಾಃ ಪೂರ್ವೋಕ್ತಾ ದ್ವಿಜೋತ್ತಮ।
ತದುದ್‌ಭವಾಂ ಸುತಾಂ ವಾಪಿ ಸುತಂ ತಾತಃ ಪರಿತ್ಯಜ್ಯೇತ್ ॥೧॥

ಅಥವಾ ತನ್ಮುಖಂ ನೈವಾಷ್ಟಸಮಾ ಅವಲೋಕಯೇತ್।
ಮಹಾ ವಿಘ್ನದಾಶ್ಚೈತಾ-ಸ್ತಸ್ಮಾಚ್ಛಾಂತಿರಿಹೋಚ್ಯತೆ ॥೨॥

**ಪರಾಶರರು ಹೇಳಿದರು—**

ಹೇ ಮೈತ್ರೇಯ,

ಅಭುಕ್ತ ಘಟಿಕಾಯೋಗದಲ್ಲಿ (ಜೇಷ್ಠಾಂತ್ಯ ಘಟಿ ಮೂಲಾದಿ 8 ಘಟಿ) ಜನಿಸಿದ ಕನ್ಯೆ ಅಥವಾ ಪುತ್ರರನ್ನ ತಂದೆ ಪರಿತ್ಯಜಿಸಲು ಹೇಳಿದೆ ( ಈಗ ಸಾಧ್ಯವಿಲ್ಲ ವಾದುದರಿಂದ) ಅಥವಾ 8 ವರ್ಷ ಪರ್ಯಂತ ಮಗುವಿನ ಮುಖ ನೋಡನೆಯಿರಲು ಹೇಳಿದೆ (ಅದು ಸಾಧ್ಯವಿಲ್ಲದ ಮೂಲಕ ಶಾಂತಿಯವರೆಗೆ) ಈ ದೋಷೋತ್ಪನ್ನ ಬಾಲಕನ (ಬಾಲಕಿಯ) ಶಾಂತಿ ವಿಧಾನ ಹೇಳುತ್ತೇನೆ.

ಶುಭ ದಿನೆ ಮೂಲಾಜಾನಾಂ ದ್ವಾದಶೆ ವಹ್ನಿ ಜನ್ಮನಃ।
ಅಪಿ ವಾಷ್ಟಮ ವರ್ಷಾಶೀತೆ ವಿಧಿವಚ್ಛಾಂತಿ ಮಾಚರೇತ್ ॥೩॥

ಸ್ವಗ್ರುಹಮುತ್ತರೆ ಪೂರ್ವಭಾಗೆ ವಾಪಿ ಶುಭ ಸ್ಥತಿ।
ಗೋಮಯೇನಾವಲಿಪ್ತೆ ತು ಕುರ್ಯಾತ್ ಸನ್ಮಂಡಪಂ ಬುಧಃ ॥೪॥

ದ್ವಾರೈಶ್ಚತುರ್ಭಿರಭಿತ ಸ್ತೋರಣಾದಿ ವಿಭೂಷಿತವಮ್।
ಕುಂಡಂ ಯಜ್ಞ ಉದಾನಾಯ ಬಹಿರ್ದ್ವಾರಿ ಚಕಾರಯೇತ್ ॥೫॥

ನಕ್ಷತ್ರೆಶಾಕೃತಿ ಸ್ವರ್ಣಮಯಂ ವಿತ್ತಾನುರೋಧತಃ।
ವಿರಯ್ಯ ಶ್ಯಾಮವರ್ಣ ಮಸ್ತಕದ್ವಯಸಂ ಯುತಮ್ ॥೬॥

ಬೃಕಾಸ್ಯಂಖಡ್‌ಗಜಾವರ್ಮಾಢ್ಯಂ ಛೇತದಂ ಶವವಾಹನವಮ್।
ನಕ್ಷತ್ರದೇವಂ ವಿಧಿವದ್ ಧ್ಯಾಯೋದವನತಾನನಃ ॥೭॥

ಮನೆಯ ಎತ್ತರ ಅಥವಾ ಪೂರ್ವ ಭಾಗದ ಶುಭ ಸ್ಥಾನವನ್ನು ಗೋಮಯ ಮಾಡಿ ಸುಂದರ ಮಂಟಪ ರಚಿಸಿ ಮಂಟಪದ ನಾಲ್ಕು ಕಡೆ ತೋರಣಾದಿ ಅಲಂಕಾರ ಮಾಡಿ ಯಜ್ಞ ವಿಧಾನದಂತೆ ಹೊರಗಡೆ (ಮುಂಬಪದ/ಕುಂಡವನ್ನ ಮಾಡಿ) ಮಾಡಿ ಸ್ಥಿತಿಗನಗುಣವಾಗಿ ಬಂಗಾರದ ನಕ್ಷತ್ರ ದೇವತೆಯನ್ನು ಮಾಡಿಸಿ ಅದು ವಸ್ತ್ರಕಧಾರಿ ಕರಿವರ್ಣ ತೋಳದಂತಹ ಮುಖದ ಬಡಚರ್ಮ ಯುಕ್ತ ಶವದ ಮೇಲೆ ಆರಳಾಡ ಭಂಕರ ಕರ್ಣಗಳ ನಕ್ಷತ್ರ ದೇವನಿಗೆ ವಿನಮ್ರನಾಗಿ ಧ್ಯಾನ ಮಾಡುವುದು.

ಹಾಗೂ ನಂತರ

ಸಕ್ತಿವಾಚನ ಮಾಚಾರ್ಯತ್ ವರಣಾ ಕಲಶೆ ಪುನಃ।
ತೀರ್ಥೋದಕಂ ಪಂಚಗವ್ಯಂ ಶತೌಷಧ್ಯಾದಿ ಚ ಕ್ಷಿಪೇತ್ ॥೮॥

ಶತಚ್ಛಿದ್ರಮಯಂ ಕುರ್ಯಾದ ಪರಂ ಘಟಿಮುತ್ತಮಮ್।
ತದಗ್ರೇ ವಂಶಾಪಾತ್ರಂ ಚ ಸ್ಥಾಪಯೇದ್ ದ್ವಿಜಗ್ಗತ್ತಮ ॥೯॥

ನಕ್ಷತ್ರಾಧಿಪತಿ ದೇವಂ ನೈಋತಿಂ ತತ್ರ ಸಾದರಮ್।
ಪಶ್ಚಿಮಾಭಿಮುಖಿ ಕೃತ್ವಾ ಭ್ಯರ್ಚಯೇತ್ ಪ್ರಣತೋ ಬುಧಃ ॥೧೦॥

ಸಿತೇನ ವಾಸಸಾ ತದತ್ ಸಿತ ಗಂಧ ಸುಮಾಕ್ಷ ತೈಃ।
ಇಂದ್ರಂ ಚ ವರುಣಾ ದೇವಂ ಸಾಧಪ್ರತ್ಯಧಿರೂಪಕಮ್ ॥೧೧॥

ಪೂಜಯೇತ್ ಸ್ವಸ್ವಶಾಖೋಕ್ತ ಮಂತ್ರೈರ್ದೇವತ್ರಯಂ, ಪನಃ।
ಹವನಂ ತು ಸಹಸ್ರವಾ ಶತಮಷ್ಟಾಧಿಕಂ ಚರೇತ್ ॥೧೨॥

ಮೃತ್ಯುಂಜಯ ಜಪಂ ಕುರ್ಯಾನ್ನೃತಿ ಶಾಂತ್ಯೈ ವಿಶೇಷತಃ ।
ಪೂಜಾಮಾರಾಧನಾಂ ಭಕ್ತ್ಯಾ ವಿದಧ್ಯಾನ್ನಿ ಯತೇಂದ್ರಿಯಃ ॥೧೩॥

ಆನಂತರ ಸ್ವಸ್ತಿವಾಚನ ಪೂರ್ವಕ ಆಚಾರ್ಯ ಮರಣ, ಕಲಶದಲ್ಲಿ ತೀರ್ಥೋದಕ ಪಂಚಗವ್ಯ ಶತಔಷಧಿಗಳನ್ನು ಹಾಕಿ – ಶತಛಿದ್ರವಾದ ಇನ್ನೊಂದು ಮಣ್ಣಿನ ಪಾತ್ರೆಯನ್ನು ಸ್ಥಾಪನೆ ಮಾಡಿ ಅದರ ಮುಂಭಾಗದಲ್ಲಿ ಪಾತ್ರೆಗಳನ್ನಿಟ್ಟು ಆದೇ ಪಾತ್ರೆಯಲ್ಲಿ ನಕ್ಷತ್ರದ ರಾಕ್ಷಸ ಸ್ವರೂಪ ದೇವಿಯ ಸ್ಥಾಪನೆ ಮಾಡಿ (ಪಶ್ಚಿಮಾಭಿಮುಖವಾಗಿ) ವಿನಮ್ರನಾಗಿ ಶುಕ್ಲ ವಸ್ತ್ರ ಗಂಧ ಚಂದನ ಪುಷ್ಪ ಅರ್ಪಿಸಿ ದೇವಿಯ ಪೂಜೆ ಮಾಡಿ ಅದು ತಮ್ಮ ಶಾಖೆಯ ಮಂತ್ರದೇವತೆ (ಅಧಿದೇವತೆ) ವರಣದೇವತೆ ಪೂಜೆ ಮಾಡಿ ಈ ರೀತಿ ದೇವತ್ರಯರನ್ನು ಪೂಜಿಸಿ ಅಷ್ಟೋತ್ತರ ಸಹಸ್ರ (1008, 108) ಅಷ್ಟೋತ್ತರ ಶತಕದಿಂದ ಹವನಾದಿ ಮಾಡಿ ಮೃತ್ಯುಂಜಯ

ಮಂತ್ರ, ಮೃತ್ಯುಂಜಯ ಶಾಂತಿ ಮಂತ್ರ ಪಠಿಸಿ ಪೂಜಾದಿ ಆರಾಧನೆ ಮಾಡಿ ಜಿತೇಂದ್ರಿಯನಾಗಿ,

ತತೋಭಿಷಿಂಚ್ಛೆ-ದಾಚಾರ್ಯ ದಂಪತಿ ಜಾತಕಿಂತಥಾ ।
ಘಟಿದ್ವಯಂಭಮಾಸ್ನಾನಂ ಯಜಮಾನಸ್ತತಸ್ವೆರೆತ ॥೧೪॥

ಸ್ನಾತಃ ಶ್ವೇತ ವಸ್ತ್ರಾಂಬರಧರಃ ಶ್ವೇತಚಂದನ ಚರ್ಚಿತಾಃ ।
ಋತ್ವಿಗ್ಭ್ಯೋ ದಕ್ಷಿಣಾಂ ದದ್ಯಾದಾಚಾರ್ಯಾಯ ವಿಶೇಷತಃ ॥೧೫॥

ದತ್ವಾಪಯಸ್ವಿನೀಂ ನಾಂ ಚ ಬ್ರಾಹ್ಮಣಾನ್ ಭೋಜಯತು ಪುನಃ ।
ಆಜ್ಯೇಮಂತ್ರೇಣ ಚಾನೇನ ಸ್ವಾತ್ಮವಿಂಭ ವಿಲೋಕಯೇತ್ ॥೧೬॥

ದೌರ್ಬಲ್ಯಮಾಖಿಲಂ ಯಚ್ಛಿಪಾಪಂ ಮದ್‌ಗಾತ್ರಸಂಸ್ಥಿತವಮ್ ।
ಘಾತಯಾಜ್ಯ ಸಮಸ್ತಂ ತ ಚ್ಛ್ರಿಯಂ ವೃದ್ಧಿಂ ದೇಹಿಮೇ ॥೧೭॥

ಮೂಲಗಂಡ ಪ್ರಜಾತಾನಾಂ ಶಾಂತ್ಯೈವಂ ಶುಭಮಾಪ್ನುಯಾತ್ ।

ಆನಂತರ ಆಚಾರ್ಯ ದಂಪತಿಗಳು ಜಾತಕನ ಮಾತಾ-ಪಿತಾ ಹಾಗೂ ಜಾತಕ ನಿಗೆ ಅಭಿಷೇಕ ಮಾಡಿಸುವುದು. ನಂತರ ಯಜಮಾನ ಪೂರ್ವಸ್ಥಾಪಿತ ಎರಡೂ ಕಲಶ ಜಲದಿಂದ ಸ್ನಾನ ಮಾಡಿ ಶ್ವೇತ ವಸ್ತ್ರ ಸ್ವೇತ ಚಂದನ ಗಂಧಾದಿ ಧರಿಸಿ ಋತ್ವಿಜರಿಗೆ ಆಚಾರ್ಯರಿಗೆ ದಕ್ಷಿಣೆ ಕೊಟ್ಟು – ಆಚಾರ್ಯರಿಗೆ ವಿಶೇಷ ದಕ್ಷಿಣೆ ಕೊಡುವುದು. ಆನಂತರ ಪಾತ್ರೆಯಲ್ಲಿ ಉಳಿದ ತುಪ್ಪದಲ್ಲಿ ಈ ಮಂತ್ರದಿಂದ ಮುಖ ನೋಡಿ ಕೊಳ್ಳುವುದು.

'ಘಾತಯಾಜ್ಯ ಸಮಸ್ತಂ' ಅನ್ನುವ ಪೂರ್ವದಲ್ಲಿ ದೌರ್ಬಲ್ಯಮಾಬಲಂ ಯಚ್ಚಪಾಪಂ ಮದ್ ಗಾತ್ರ ಸಂಸ್ಥಿತಮ್ ಘಾತಯಾಜ್ಯ । ಸಮಸ್ತಂ ತಚ್ಛ್ರೀಯಂ ವೃದ್ದಿ ಚ ದೇಹಿಮೇ' ಎಂದು ಮುಖ ನೋಡಿಕೊಂಡು ಇದರಿಂದ ಮೂಲ ಗಂಡ ಶಾಂತಿಯಾಗಿ ಶುಭಪ್ರದವಾಗುತ್ತದೆ.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೆ ಮೂಲಗಂಡ
ಶಾಂತ್ಯಾಧ್ಯಾಯಃ

## ೯೫ನೇ ಅಧ್ಯಾಯ

# ಅಥ ಜ್ಯೇಷ್ಠಾದಿ ಗಂಡಾಂತ ಶಾಂತ್ಯಾಧ್ಯಾಯಃ

**ಪರಾಶರ ಉವಾಚ:**

ಜ್ಯೇಷ್ಠಾಗಂಡಾಂತ ಜಾತಾನಾ - ಮಾತೃ ಪಿತ್ರಾದಿ ಘಾತಿನಾವ್ ।
ವಿಘ್ನೋಪಶಮನಂ ಶಾಂತಿಮೂಲ ಶಾಂತಿವದಾಚರೇತ್ ॥೧॥

ಪ್ರಧಾನ ದೇವ್ಯೋಹಿ ಶತಕ್ರತರತ್ರಾಗ್ನಿರಾಕ್ಷಸೌ ।
ಅಧಿಪ್ರತ್ಯಧಿ ದೇವೌ ಸ್ವಸ್ವಸ್ಮಾತ್ ಶ್ರೀನರ್ಚಯೋದ್ ಬುಧಃ ॥೨॥

ವಜ್ರಾಂಕುಶ ಯುತಾಂ ಸ್ವರ್ಣರಚಿತಾಂ ಮೂರ್ತಿಮಿಂದ್ರಜವಮ್ ।
ಗಜಾರೂಢಾಂ ಸುವಿಮಲಾಂ ದಿವ್ಯಾಂಬರ ವಿಭೂಷಿತಾವಮ್ ॥೩॥

ಸಂಸ್ಥಾಪ್ಯ ಕಲಶಾಗ್ರಸ್ಥ ಪಾತ್ರೆ ಗಂಧಾಕ್ಷತೈಃ ಸುಭೈಃ ।
ಗ್ರಹೋತ್ತ ಮಂತ್ರತೋಮ್ಯರ್ಚ್ಯಾಭಿಷೇಕಂ ಹವನಂತಥಾ ॥೪॥

ಸೂಕ್ತಪಾಠಂ ಮಹಾಮೃತ್ಯುಂಜಯಜಪಂ ಚಕಾರಯೇತ್ ।
ಬ್ರಾಹ್ಮಣಾನ್ ಭೋಜಯೇದಂತೆ ಶುಭಮೇವವಾಪ್ನುಯಾತ್ ॥೫॥

ಜ್ಯೇಷ್ಠಾ ನಕ್ಷತ್ರ ಗಂಡದಲ್ಲಿ ಜನಿಸಿದ ಮಗು ತಾಯಿ-ತಂದೆ ಹಾಗೂ ಸ್ವತಃ ಘಾತಕನಾಗಿರುತ್ತಾನೆ. ಅದಕ್ಕಾಗಿಯೂ ಶಾಂತಿ ಮಾಡಿಸುವುದು (ಗಂಡಕಾಲ ಕೊನೆ 5 ಘಟಿ) ಇದು ಮೂಲ ಶಾಂತಿಯಂತೆ ಇರುತ್ತದೆ. ಆದರೆ ಇಲ್ಲಿ ಪ್ರಧಾನ ದೇವ ಇಂದ್ರ ಹಾಗೂ ಅಧಿದೇವ ಅಗ್ನಿ, ಪ್ರತ್ಯಧಿದೇವ ರಾಕ್ಷಸ ಆದ್ದರಿಂದ ಮೂವರಿಗೂ ಅಭಿಯಾರ್ಚನ ಮಾಡಲೇಬೇಕು. ಗಜಾರೂಢ ಇಂದ್ರನ ಭವ್ಯ ಪ್ರತಿಮೆ ಬಂಗಾರ ದಿಂದ ಮಾಡಿಸುವುದು. ಅವನ ಕೈಯಲ್ಲಿ ವಜ್ರಾಂಕುಶವಿರುವುದು ಕಶಲಾಗ್ರಸ್ಥ ಪಾತ್ರೆಯಲ್ಲಿ ದಿವ್ಯಾಂಬರ ಭೂಷಿತ ಆ ಪ್ರತಿಮೆ ಸ್ಥಾಪಿಸಿ ಚಂದನ ಪುಷ್ಪಾದಿಗಳಿಂದ ಉಪಚರಿಸುವುದು. ಅದು ತಮ್ಮ ತಮ್ಮ ಗೃಹ್ಯ ಸೂತ್ರದಂತೆ ಪೂಜಿಸಿ ಅಭಿಷೇಕ ಹವನ ಸೂಕ್ತ ಪಾರಾ ಮಹಾ ಮೃತ್ಯುಂಜಯ ಜಪ ಬ್ರಾಹ್ಮಣ ಭೋಜನ ದಾನಾದಿ ಗಳಿಂದ ಶುಭ ಪ್ರಾಪ್ತಿಯಾಗುತ್ತದೆ.

ಶಕ್ತತ್ಯಭಾವೆ ಗವಾಂ ದಾನ ಮಹಿಮೂಲ ಮಘೇಂದ್ರಜೆ ।
ಗಂಡಾಂತೆ ತು ಗವಾಂ ದಾನಂ ಪೂಪಾಶ್ಚ ಜನಿತೆ ಸತಿ ॥೬॥

ಗಾಮೇಕಾಮನ್ಯ ದುರ್ಯೋಗೇ ದದ್ಯಾದ್ ವಿಪ್ರಯಪಾಸಾದರಮ್ ।
ತನ್ಮೂಲ್ಯಮಥವಾ ದೇಯಂ ಗೋರಭಾವೇ ವಿಶೇಷತಃ ॥೭॥

ಶಾಂತಿ ಮಾಡಿಸಲು ಶಕ್ತರಲ್ಲದವರು ಆಶ್ಲೇಷ, ಮೂಲ, ಮಘಾ, ಜೇಷ್ಠಾ ಗಂಡಾಂತರದಲ್ಲಿ ಮೂರು ಅಥವಾ ಅಧಿಕ ಆಕಳದಾನ, ರೇವತಿ, ಅಶ್ವಿನಿ ಜನಿತ ಗಂಡಾಂತರದಲ್ಲಿ ಎರಡು ಆಕಳುಗಳ ದಾನ ಅನ್ಯದುರ್ಯೋಗದಲ್ಲಿ ಒಂದು ಆಕಳ ದಾನ – ಆಕಳು ಸಿಗದಿದ್ದ ಪಕ್ಷದಲ್ಲಿ (ಕರು ಸಹಿತ) ಅದರ ಬೆಲೆಯನ್ನು ಬ್ರಾಹ್ಮಣ ರಿಗೆ ದಕ್ಷಿಣೆ ಸಹಿತ ಕೊಡುವುದು.

ಜ್ಯೇಷ್ಠರ್ಕ್ಷಸಂಭವಾ ಕನ್ಯಾ ಧವಾಗ್ರಜವಿಘಾತಿನಿ ।
ವಿಶಾಖಾಂತಿಮಪಾದೋತ್ಥಾ ಸ್ಮೃತಾ ದೇವರನಾಶಿನಿ ॥೮॥

ವಿವಾಹ ಸಮಯೆತೋಸ್ಯಃ ಶಾಂತಿ ಗೋದಾನಮಾಚರೇತ್ ।
ಅನ್ಯತ್ರಾ ಪಾದಜಾ ಶಾಕ್ರೇ ಮೂಲ ಆದ್ಯಾತ್ರಿತಾಜಾ ॥೯॥

ಕನ್ಯಾಶ್ವೂಶ್ರೂಂ ಸುತಸ್ತತ್ರೋದ್ಭವಂ ಶ್ವಶುರಘಾತಕಃ ।
ಗೋದಾನ ಮಾಚರೇಚ್ಛಂತ್ಯೈ ವಿವಾಹ ಸಮಯೇ ತಯೋಃ ॥೧೦॥

ಜೇಷ್ಠಾ ನಕ್ಷತ್ರಾಂತ್ಯದಲ್ಲಿ ಜನ್ಮ ತಳೆದ ಕನ್ಯೆ – ಗಂಡನ ಅಣ್ಣನಿಗೆ ಮೃತ್ಯುಪ್ರದಳು. ವಿಶಾಖಾ ನಕ್ಷತ್ರ ಅಂತಿಮ ಚರಣಕ್ಕೆ ಉತ್ಪನ್ನ ಕನ್ಯಾ – ಮೈದುನನಿಗೆ ಮೃತ್ಯು ತರುವಳು. ಜೇಷ್ಠಾದಲ್ಲಿ ಕೊನೆ 3 ಚರಣ (1ನೇ ಚರಣವಿಲ್ಲ) ಮೂಲಾ ನಕ್ಷತ್ರಕ್ಕೆ ಮೊದಲಿನ 3 ಚರಣ (4ನೇ ಚರಣವಿಲ್ಲ) ಉತ್ಪನ್ನನಾದ ಕನ್ಯಾ ಮಾವ ಹಾಗೂ ಮಾವನಿಗೆ ಮೃತ್ಯುದಾಯಕಳಾಗುವಳು. ಈ ದೋಷ ಕನ್ಯಾವರರ ವಿವಾಹ ಸಮಯದಲ್ಲಿ ಗೋದಾನ ರೂಪ ಶಾಂತಿ ಮಾಡಿ ಮದುವೆಯಾಗುವುದು.

ಇತಿ ಬೃಹತ್ ಪರಾಶರ ಹೋರಾಶಾಸ್ತ್ರೇ ಜೇಷ್ಠಾದಿ ಗಂಡಾಂತ್ಯ ಶಾಂತ್ಯಾಧ್ಯಾಯಃ ಸಮಾಪ್ತಿಃ

❀ ❀ ❀ ❀

# ಅಥ ತ್ರ್ಯಂಯ ಜನನ ದೋಷ ಶಾಂತ್ಯಾಧ್ಯಾಯಃ

## ಪರಾಶರರ ಉವಾಚ:

ಅಥವಕ್ಷ್ಮಿ ತ್ರ್ಯಂಯಜನ್ಮ ದೋಷ ಶಾಂತಿವಿಧಿ ಮುನೇ ।
ಸುತತ್ರಯಾತ ಪರಂ ಕನ್ಯಾ ಜನ್ಮವಾ ಕನ್ಯಾಕಾತ್ರಯಾತ್ ॥೧॥

ಅನಂತರಂ ಪುತ್ರ ಜನ್ಮ ತದಾರಿಷ್ಟಂಕುಲದ್ವಯೋಃ ।
ಏವಂ ಸತಿ ಗ್ರಹಾನ್ ಬ್ರಹ್ಮ ವಿಷ್ಣು ರುದ್ರಾಂಶ್ಚ ಪೂಜೆಯೇತ್ ॥೨॥

ಯಥೋಕ್ತೇನ ವಿಧಾನೇನ ಶಾಂತಿ ಕುರ್ಯಾದ್ ವಿಚಕ್ಷಣಃ ।

## ಪರಾಶರರು ಹೇಳಿದರು–

ಹೇ ಮೈತ್ರೇಯ,

ಈಗ ಮೂರು ಜನದ ನಂತರದ ಜನನ ವಿಚಾರ ಹಾಗೂ ಶಾಂತಿ ವಿಧಾನ ಹೇಳುತ್ತೇನೆ ಕೇಳು. ಮೂರು ಗಂಡು ಮಕ್ಕಳ ಮೇಲೆ ಕನ್ಯಾ ಜನನ ಅಥವಾ ಮೂರು ಕನ್ಯಾ ಜನನದ ನಂತರ ಪುತ್ರ ಜನನವಾದರೆ ಮಾತೃ-ಪಿತೃ ವಂಶದಲ್ಲಿ ಅನಿಷ್ಟ ಉಂಟಾಗುತ್ತದೆ. ಅನಿಷ್ಟ ಶಾಂತಿಗಾಗಿ ಬ್ರಹ್ಮ, ವಿಷ್ಣು, ಮಹೇಶ್ವರರ ಹಾಗೂ ಎಲ್ಲ ಗ್ರಹಗಳ ಪೂಜೆ ಮುನ್ನ ವಿಧಾನುಸಾರ ಮಾಡಿದೆ ಅರಿಷ್ಟ ಶಾಂತಿಯಾಗುತ್ತದೆ.

ಸೂತಕಾಂತೆ ಶುಭೆ ವಾಹ್ನಿ ಗ್ರಹಾಣಾಂ ಯಜನಂ ತತಃ ॥೩॥

ಋತ್ವಿಜಾಂ ವರಣಃ ತದ್-ದಾಚಾರ್ಯಸ್ಯ ಚ ಕಾರಯೇತ್ ।
ಬ್ರಹ್ಮೇಂದ್ರ ವಿಷ್ಣು ರುದ್ರಣಾ ಮಾಕೃತಿಃ ಸ್ವರ್ಣನಿರ್ಮಿತಾಃ ॥೪॥

ಕಲಶಾಗ್ರಸ್ಥ ಪಾತ್ರೆಷು ಯಥಾ ಪೂರ್ವ ಸಮರ್ಚಯೇತ್ ।
ಗಂಧ ಪುಷ್ಪಾಕ್ಷತೈಃ ಧೂಪ ದೀಪ ನೈವೇದ್ಯ ವಾರಿಧಿಃ ॥೫॥

ಸೂತಕಾಂತ್ಯದಲ್ಲಿ ಶುಭ ದಿವಸದಲ್ಲಿ ಗ್ರಹಗಳನ್ನು ಪೂಜಿಸಿ ಅದಕ್ಕೂ ಮೊದಲು ಋತ್ವಿಜ ಆಚಾರ್ಯರ – ವರಣ ಯಜಮಾನ ಮಾಡುವುದು. ನಂತರ ಬ್ರಹ್ಮ, ಇಂದ್ರ, ವಿಷ್ಣು ಹಾಗೂ ರುದ್ರ ದೇವರ ಸುವರ್ಣ ಪ್ರತಿಮೆ ಮಾಡಿಸಿ ಪ್ರತಿಮೆಗಳನ್ನು ಕಲಶ ಪಾತ್ರೆಯ ಮೇಲಿನ ಪಾತ್ರೆಯಲ್ಲಿಟ್ಟು ಚಂದನಯುಕ್ತ ಅಕ್ಷತ ಧೂಪ ದೀಪ ನೈವೇದ್ಯ ಉದಕದಿಂದ ಪೂಜಿಸುವುದು.

